# ತುಳು ಜನಪದ ಸಾಹಿತ್ಯ

ಡಾ. ಬಿ. ಎ. ವಿವೇಕ ರೈ







ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ, ಬೆಂಗಳೂರು ೧೮

# ತುಳು ಜನಪದ ಸಾಹಿತ್ಯ



ಡಾ. ಬಿ. ಎ. ವಿವೇಕ ರೈ



ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ, ಬೆಂಗಳೂರು–೫೬೦೦೧೮

TULU JANAPADA SAAHITYA— Tulu Folk Literature, Ph·D. hesist by Dr. B. A. Viveka Rai, Department of Kannada for Post Graduate Studies and Research, Mangalore University, Mangalagangotri-574199. Published by Kannada Sahitya Parishath, Chamarajpet, Bangalore-560018.

First Impression 1985





ಬೆಲೆ : ರೂ. 40-00



ರಕ್ಷಾಕವಚ ವಿನ್ಯಾಸ : ಚಂದ್ರನಾಥ್

ಮುದ್ರಣ : ಅಶ್ವಥ್ ಪ್ರಿಂಟರ್ಸ್
ಜಯನಗರ, ಬೆಂಗಳೂರು-೮೨




# ಅನುಕ್ರಮಣಿಕೆ

ಪೀಠಿಕೆ | ಕ್ರಮಸಂಖ್ಯೆ

## ಮುನ್ನುಡಿ

ಸಾಹಿತ್ಯ ಮತ್ತು ಸಂಸ್ಕೃತಿಯ ಕ್ಷೇತ್ರದಲ್ಲಿ ಇಡೀ ಭಾರತದಲ್ಲಿ ಹಿರಿಯ ಸಂಸ್ಥೆಯಾಗಿರುವ ಕನ್ನಡ ಸಾಹಿತ್ಯ ಪರಿಷತ್ತಿಗೆ ಮೇ 5, 1985ಕ್ಕೆ ಎಪ್ಪತ್ತು ವರ್ಷ ತುಂಬಿತು. ಅದರ ಸ್ಮಾರಕವಾಗಿ ಕನ್ನಡ ಸಾಹಿತ್ಯ ಪರಿಷತ್ತು 'ಅಮೃತೋತ್ಸವ ಮಾಲೆ' ಎಂಬ ಹೆಸರಿನಿಂದ ಸಾಂಕೇತಿಕವಾಗಿ 70 ಮೌಲಿಕ ಪುಸ್ತಕಗಳನ್ನು ಕರ್ನಾಟಕ ಸರ್ಕಾರದ ಸಹಾಯದಿಂದ ಪ್ರಕಟಿಸಲು ನಿರ್ಧರಿಸಿದೆ.

ಮೌಖಿಕ ಸಂಪ್ರದಾಯ ಹಾಗೂ ಅನುಕರಣೆಯ ಮುಖಾಂತರ ಮನುಷ್ಯ ಹುಟ್ಟಿದಾಗಿನಿಂದ ಮುಂದುವರಿದುಕೊಂಡು ಬಂದಿರುವ ಸರ್ವರೀತಿಯ ತಿಳಿವಳಿಕೆಯನ್ನು 'ಜಾನಪದ' ಎಂಬುದಾಗಿ ಕರೆಯುತ್ತ ಬಂದಿದ್ದೇವೆ. ಪರಂಪರೆಯಿಂದ ಪರಂಪರೆಗೆ ಸಾಗಿಬಂದ ಸಮಸ್ತ ಸಂಗತಿಗಳೂ ಇದರಲ್ಲಿ ಗರ್ಭೀಕರಣಗೊಂಡಿರುತ್ತವೆ. ಮಾನವನ-ಸಮಾಜದ ಬದುಕಿನ ಅಭಿವ್ಯಕ್ತಿ ಎನಿಸಿರುವ ಜಾನಪದದ ಎಲ್ಲ ಮುಖಗಳನ್ನು ಪಶ್ಚಿಮ ರಾಷ್ಟ್ರಗಳಲ್ಲಿ ವೈಜ್ಞಾನಿಕ ರೀತಿಗಳಲ್ಲಿ ಸಂಗ್ರಹ ಮಾಡಿ ಶಾಸ್ತ್ರೀಯ ಅಧ್ಯಯನಕ್ಕೆ ಒಳಪಡಿಸಿರುವುದುಂಟು. ಪಶ್ಚಿಮದವರ ಪ್ರಭಾವಕ್ಕೆ ಕನ್ನಡ ನಾಡು ಒಳಗಾಗಿದ್ದರೂ ಕನ್ನಡದಲ್ಲಿ ಜಾನಪದದ ಕೆಲವು ಪ್ರಕಾರಗಳನ್ನು ಮಾತ್ರ ಸಂಗ್ರಹಿಸಿ ಅಧ್ಯಯನ ನಡೆಸಲಾಗಿದೆ. 1816ರ ಸಂದರ್ಭದಲ್ಲಿ ಕನ್ನಡ ಜಾನಪದದ ಸಂಗ್ರಹ ಕಾರ್ಯದ ಪ್ರಯತ್ನ ನಡೆಯಿತೆಂದು ಹೇಳುವುದುಂಟು. ಇಂದಿನ ಸಂದರ್ಭದಲ್ಲಿ ಜೀವನದ ಎಲ್ಲಾ ಮಗ್ಗುಲುಗಳನ್ನು ಪ್ರತ್ಯೇಕವಾಗಿ ನೋಡುವ, ಚಿಂತಿಸುವ ಸದಭಿರುಚಿಯ ಪ್ರವೃತ್ತಿಗಳು ಜಾನಪದಾಸಕ್ತರಲ್ಲಿ ಬೆಳೆಯುತ್ತಿವೆ. ಅನೇಕ ವಿದ್ವಾಂಸರು ತನ್ನ ನಾಡಿನ, ತಾನು ವಾಸಿಸುತ್ತಿರುವ ಪ್ರದೇಶದ, ತನ್ನೊಂದಿಗಿರುವ ಜನತೆಯ ತನ್ನತನವನ್ನು ಗುರುತಿಸುವ ಪ್ರಯತ್ನದಲ್ಲೂ ಸಕ್ರಿಯವಾಗಿ ತೊಡಗಿದ್ದಾರೆ. ಇಂಥ ಪ್ರಯತ್ನಗಳು ಎಷ್ಟರ ಮಟ್ಟಿನವೆಂದರೆ, ಭಾಷಾ ವಿಜ್ಞಾನಿಗಳು, ಇತಿಹಾಸಕಾರರು, ಸಮಾಜ ಶಾಸ್ತ್ರಜ್ಞರು, ಮಾನವ ಶಾಸ್ತ್ರಜ್ಞರು, ಮನಃಶಾಸ್ತ್ರಜ್ಞರು—ಮೊದಲಾದ ಬೇರೆ ಬೇರೆ ಕ್ಷೇತ್ರತಜ್ಞರೆಲ್ಲರೂ ಜಾನಪದವನ್ನು ವಿಶೇಷ ಆಕರವನ್ನಾಗಿ ಮಾಡಿಕೊಳ್ಳುತ್ತಿದ್ದಾರೆ. ಇದು ಅದರ ಮಹತ್ವತೆಗೆ ಸಾಕ್ಷಿಯಾಗಿದೆ.

ಒಂದು ಕಾಲದಲ್ಲಿ ಅಲಕ್ಷ್ಯಕ್ಕೆ ಗುರಿಯಾಗಿದ್ದ ಜಾನಪದ ಇಂದು ವಿಶ್ವವಿದ್ಯಾನಿಲಯ—ಅಕಾಡೆಮಿ—ಕನ್ನಡ ಸಾಹಿತ್ಯ ಪರಿಷತ್ತಿನ ವೇದಿಕೆಗಳಲ್ಲಿ ಗಂಭೀರ ಚರ್ಚೆಗೆ ಗುರಿಯಾಗಿದೆ. ಇತ್ತೀಚಿನ ದಿನಗಳಲ್ಲಿ ಮೇಲಿಂದ ಮೇಲೆ ನಡೆಯುತ್ತಿರುವ ಇಂಥ ಚರ್ಚೆಗಳು 'ಲಿಖಿತ ಜಾನಪದ', 'ನಗರ ಜಾನಪದ', 'ಸಸ್ಯ ಜಾನಪದ', 'ಪ್ರಾಣಿ ಜಾನಪದ', 'ಜಾತ್ರೆ ಜಾನಪದ', 'ಆಕಾಶ ಜಾನಪದ', 'ಖನಿಜ ಜಾನಪದ'—ಮೊದಲಾದ ಹೊಸ ಹೊಸ ವಿಷಯಗಳ ಕಡೆಗೆ ವಿಶೇಷವಾಗಿ ಗಮನ ಹರಿಸುವಂತೆಯೂ ಮಾಡಿದವು. ನಾಡಿನುದ್ದಗಲಕ್ಕೂ ಜಾನಪದದ ಬಗೆಗೆ ವಿಚಾರ ಸಂಕಿರಣಗಳು, ಕಲಾಮೇಳಗಳು ನಡೆಯುತ್ತ ಬಂದಿವೆ. ಹೆಚ್ಚಿನ ಸಂಖ್ಯೆಯಲ್ಲಿ ಪುಸ್ತಕಗಳೂ

ಪ್ರಕಟವಾಗುತ್ತಿವೆ. ಇವೆಲ್ಲ ತಮ್ಮಲ್ಲಿರುವ ಮಹತ್ವದ ಸಾಂಸ್ಕೃತಿಕ ಕಾಳಜಿಗಳ ಬಗೆಗೆ ಜನಸಾಮಾನ್ಯರಲ್ಲಿ ಪ್ರೀತಿ ಹುಟ್ಟಿಸಿವೆ.

ಕನ್ನಡದಲ್ಲಿ ನಡೆದಿರುವಂತೆ ದಕ್ಷಿಣ ಭಾರತದ ಇತರೆ ಭಾಷೆಗಳಾದ ತಮಿಳು, ತೆಲುಗು, ತುಳು ಮತ್ತು ಮಲೆಯಾಳ ಭಾಷೆಗಳಲ್ಲೂ ಜಾನಪದ ಸಂಗ್ರಹಣೆ ಮತ್ತು ಶಾಸ್ತ್ರೀಯ ಅಧ್ಯಯನಗಳು ನಡೆಯುತ್ತ ಬಂದಿವೆ. ಇತರೆ ಭಾಷೆಗಳಿಗಿರುವಂತೆ ತುಳು ಭಾಷೆಗೆ ಸ್ವತಂತ್ರ ಲಿಪಿಯಾಗಲೀ ಸಾಹಿತ್ಯ ಪರಂಪರೆಯಾಗಲೀ ಇಲ್ಲ, ಆದರೆ ಈ ಭಾಷೆಗೆ ಸ್ವತಂತ್ರ ಲಿಪಿ ಇರುವುದರ ಬಗೆಗೆ ಇತ್ತೀಚಿನ ದಿನಗಳಲ್ಲಿ ವಿದ್ವಾಂಸರು ಕೆಲವು ಸೂಚನೆಗಳನ್ನು ನೀಡಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಅದೇನೇ ಇರಲಿ ತುಳು ಮಾತನಾಡುವ ಪ್ರದೇಶವೊಂದರ ಜಾನಪದ ಕುತೂಹಲಕಾರಿ ಹಾಗೂ ವೈಶಿಷ್ಟ್ಯಪೂರ್ಣವಾದುದೆಂದೇ ಭಾವಿಸಿರುವೆ. ಕನ್ನಡ ಜಾನಪದದ ಸಂಗ್ರಹ ಕಾರ್ಯ ಹೇಗೆ ನಿಧಾನಗತಿಯಲ್ಲಿ ಆರಂಭವಾಯಿತೋ ಅದೇ ಕ್ರಮದಲ್ಲಿ ತುಳು ಜಾನಪದದ ಸಂಗ್ರಹ ಕಾರ್ಯವೂ ಆರಂಭವಾಯಿತು. ಬಾಸೆಲ್ ಮಿಷನರಿಗಳು ಮತ್ತು ಕೆಲವು ಜಾನಪದ ಆಸಕ್ತರು ತುಂಬ ನಿಷ್ಠೆಯಿಂದ ಈ ಕ್ಷೇತ್ರದಲ್ಲಿ ಕೆಲಸ ಮಾಡಿ ಈ ಬಗೆಗೆ ಜನತೆಯನ್ನು ಎಚ್ಚರಿಸಿದ್ದೂ ಉಂಟು. ಆದರೆ ಕಳೆದ ಇಪ್ಪತ್ತು ವರ್ಷಗಳಲ್ಲಿ ಕನ್ನಡ ಜಾನಪದ ಕ್ಷೇತ್ರದಲ್ಲಿ ನಡೆದುಬಂದಿರುವ ಸಾಧನೆಗಳಿಗೆ ಹೋಲಿಸಿದರೆ ತುಳು ಜಾನಪದ ಚಟುವಟಿಕೆಗಳು ಕಡಿಮೆ ಎಂದೇ ಹೇಳಬೇಕು. ಗಾದೆ, ಒಗಟು, ಪಾಡ್ದನಗಳು—ಈ ಪ್ರಕಾರಗಳಲ್ಲಿನ ಸಂಗ್ರಹಣೆ ಮಾತ್ರ ಸ್ವಲ್ಪ ಮಟ್ಟಿನ ತೃಪ್ತಿಯನ್ನು ತಂದುಕೊಟ್ಟಿದೆ. ಇನ್ನುಳಿದ ಪ್ರಕಾರಗಳ ಬಗೆಗೆ ಅಲ್ಲಲ್ಲಿ ಕೆಲವು ಬಿಡಿ ಬರಹಗಳನ್ನು ಮಾತ್ರ ಕಾಣುತ್ತೇವೆ. ತುಳುವಿನಲ್ಲಿ ಜಾನಪದ ಸಂಗ್ರಹ ಮತ್ತು ಅಧ್ಯಯನ ಶಾಸ್ತ್ರೀಯ ರೂಪ ಪಡೆದುಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಅದರ ಚಿಂತನೆ ಮತ್ತು ಶೋಧನೆಯಲ್ಲಿ ಕೆಲವರು ಸಕ್ರಿಯವಾಗಿ ತೊಡಗುತ್ತಿದ್ದಾರೆ. ಅಂಥ ಹಿರಿಯ ಜಾನಪದ ವಿದ್ವಾಂಸರಲ್ಲಿ ಡಾ. ಬಿ. ಎ. ವಿವೇಕ ರೈ ಒಬ್ಬರು. ಬಂಟ್ವಾಳ ತಾಲ್ಲೂಕಿನ ಪುಣಚಾ ಗ್ರಾಮದವರು, ದಕ್ಷಿಣ ಕನ್ನಡ ಜಿಲ್ಲೆಯ ಜನಪದ ಸಂಗ್ರಹಕಾರರಲ್ಲಿ ವಿವೇಕ ರೈ ಮುಖ್ಯರು. ತುಳು ಜಾನಪದದ ಬಗೆಗೆ ವಿಶೇಷ ಆಸಕ್ತರಾಗಿರುವ ಇವರು 'ತುಳು ಗಾದೆಗಳು', 'ತುಳು ಒಗಟುಗಳು', 'ತೌಳವ ಸಂಸ್ಕೃತಿ', 'ತುಳುವ ಅಧ್ಯಯನ : ಕೆಲವು ವಿಚಾರಗಳು'—ಮೊದಲಾದ ಕೃತಿಗಳನ್ನು ಹೊರತಂದಿರುವುದರ ಮೂಲಕ ಜನಪ್ರಿಯರಾಗಿದ್ದಾರೆ. ಇವೆಲ್ಲ ಅವರ ಶಾಸ್ತ್ರೀಯ ಸಂಗ್ರಹ ಮತ್ತು ಸಂಪಾದನೆಗೆ ಹೆಸರಾಗಿವೆ. ಅಲ್ಲದೆ ತುಳುನಾಡಿನ ಜಾನಪದವನ್ನು ಬೇರೆ ಬೇರೆ ದೃಷ್ಟಿಗಳಲ್ಲೂ ಅಧ್ಯಯನ ನಡೆಸಿದ್ದಾರೆ. ಶುದ್ಧ ಸಂಶೋಧನೆಯ ಹಾಗೂ ಶಾಸ್ತ್ರೀಯ ಅಧ್ಯಯನದ ಫಲವೇ ಅವರ ಈ 'ತುಳು ಜನಪದ ಸಾಹಿತ್ಯ'. ಇದು ಅವರ ಪಿಎಚ್.ಡಿ. ಗ್ರಂಥ.

ತುಳು ಭಾಷೆ, ಅದರ ವೈಶಿಷ್ಟ್ಯಗಳು, ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಸಂದರ್ಭಗಳು—ಇವನ್ನೆಲ್ಲ ಪೀಠಿಕಾ ರೂಪದಲ್ಲಿ ಹೇಳುತ್ತ ಆ ಭಾಷೆಯಲ್ಲಿನ ಈವರೆಗಿನ ಜಾನಪದ ಸಾಧನೆಗಳನ್ನು ವಿವರಿಸಿದ್ದಾರೆ. ಪ್ರಾದೇಶಿಕತೆಯ ಮೂಲಕ ನಾಡಿನ ಸಾಂಸ್ಕೃತಿಕ ಸೂಕ್ಷ್ಮಗಳನ್ನು ತಿಳಿದುಕೊಳ್ಳುವ ಸಂದರ್ಭದಲ್ಲಿ ಇಂಥ ಆತ್ಮೀಯವಾದ ಬರವಣಿಗೆ, ವಸ್ತುನಿಷ್ಠಶೈಲಿ ಇಷ್ಟವೆನಿಸುತ್ತದೆ. ಕರ್ನಾಟಕದ ಸಂದರ್ಭದಲ್ಲಿ ತುಳು ಭಾಷೆ ಮತ್ತು ಜಾನಪದದ ಸ್ಥಾನವನ್ನು ಗುರುತಿಸುವ ಸಂದರ್ಭದಲ್ಲೂ ಮುಖ್ಯವೆನಿಸುತ್ತದೆ. ಭಾಷೆಯ ಜಾಯಮಾನವನ್ನು ಅರಿತುಕೊಂಡು ಅದೇ ಸಂದರ್ಭದಲ್ಲಿ ಮೌಖಿಕ ಸಂಪ್ರದಾಯದ ಎಲ್ಲಾ ವಿಷಯಗಳನ್ನು ಶಾಸ್ತ್ರೀಯವಾದ ಆವರಣದೊಳಕ್ಕೆ ತಂದುಕೊಳ್ಳುವುದು—ಪತ್ತೆ ಹಚ್ಚುವುದು ಒಂದು ರೀತಿಯಲ್ಲಿ ತ್ರಾಸದಾಯಕ ಕೆಲಸವೆ. ಅಂಥ

ಶ್ರಮಂದ ಕಾರ್ಯವನ್ನು ವಿವೇಕ ರೈ ಶ್ರದ್ಧೆಯಿಂದ ನಿರ್ವಹಿಸಿದ್ದಾರೆ. ಪಾಡ್ದನಗಳು, ಅವುಗಳ ಕಾಲ, ಕತೆ, ಪಾಠಾಂತರಗಳು, ಆಶಯ, ಮಹತ್ವ, ತುಳು ನಾಡಿನ ಜನಾಂಗಗಳು, ವೃತ್ತಿಕಾರರು, ಅವರ ಅಭಿರುಚಿಗಳು, ವೇಷ ಭೂಷಣಗಳು, ಆಚಾರ ವಿಚಾರ ಸಂಪ್ರದಾಯಗಳು, ಹಬ್ಬಗಳು, ಶಿಕ್ಷಾವಿಧಾನ, ಜನಪ್ರಿಯ ಕ್ರೀಡೆಗಳು, ವಾಸಸ್ಥಾನ, ಧರ್ಮ, ನಂಬಿಕೆ, ಕಬಿತಗಳು, ಕುಣಿತದ ಹಾಡುಗಳು, ಇವುಗಳ ಹಿನ್ನೆಲೆ, ವಸ್ತು, ಆಶಯ–ಮೊದಲಾದ ಇನ್ನೂ ಹಲವಾರು ವಿಷಯಗಳ ಬಗೆಗೂ ಇಲ್ಲಿ ವಿಸ್ತೃತವಾಗಿ ಅಧ್ಯಯನ ನಡೆದಿದೆ. ಅಧ್ಯಾಯಗಳ ವಿಭಜನೆಯಲ್ಲಿ, ವಿಷಯಗಳ ವರ್ಗೀಕರಣೆಯಲ್ಲಿ, ವಸ್ತುವಿನ ಪ್ರತಿಪಾದನೆಯಲ್ಲಿ ಒಂದು ರೀತಿಯ ಕ್ರಮಬದ್ಧತೆ ಇದೆ. ವಿಷಯದ ಪ್ರತಿಪಾದನೆಯಲ್ಲೂ ಹೊಸ ದೃಷ್ಟಿಕೋನವಿದೆ. ತುಳು ಜಾನಪದದಲ್ಲಿ ಅಷ್ಟಾಗಿ ಜಾನಪದದ ಕಾರ್ಯ ನಡೆದಿಲ್ಲದ ಸಂದರ್ಭದಲ್ಲಿ ಅದರ ಚರಿತ್ರೆಯನ್ನು ಗುರುತಿಸುತ್ತ ಅದಕ್ಕೊಂದು ಅಧಿಕೃತ ರೂಪ ಕೊಡಬೇಕಾದರೆ ಸತತ ಅಭ್ಯಾಸದ ಆವಶ್ಯಕತೆ ಇರುತ್ತದೆ. ಅಂಥ ಶ್ರಮದ ಕಾರ್ಯವನ್ನು ವಿವೇಕ ರೈ ಅತ್ಯಂತ ಯಶಸ್ವಿಯಾಗಿ ನಿಭಾಯಿಸಿದ್ದಾರೆಂದು ಭಾವಿಸಿದ್ದೇನೆ. ತುಳು ಮಾತನಾಡುವ ಜನರ ಬದುಕನ್ನು, ಅವರ ಸಾಂಸ್ಕೃತಿಕ ಸ್ತರಗಳನ್ನು ಈ ಗ್ರಂಥ ಅಖಂಡವಾಗಿ ನಮ್ಮ ಮುಂದಿಡುತ್ತದೆ. ಹಾಗಾಗಿ ಆ ಪ್ರದೇಶದ ಜನಪದ ಸಾಹಿತ್ಯದ ಸಮಸ್ತ ಸಂಗತಿಗಳನ್ನು ಹೇಳುವ ವಿಸ್ತೃತ ಅಧ್ಯಯನವಾಗಿ ಕಂಡುಬರುತ್ತದೆ. ಈ ಎಲ್ಲ ದೃಷ್ಟಿಯಿಂದ 'ತುಳು ಜನಪದ ಸಾಹಿತ್ಯ' ಕನ್ನಡದಲ್ಲಿ ಮೌಲಿಕ ಸ್ಥಾನ ಪಡೆಯುತ್ತದೆಂದು ಭಾವಿಸಿರುವೆ.

ಇಂಥ ಗ್ರಂಥವನ್ನು ಪರಿಷತ್ತಿನ ಮೂಲಕ ಪ್ರಕಟಿಸಲು ಹಸ್ತಪ್ರತಿ ಸಿದ್ಧಪಡಿಸಿಕೊಟ್ಟ ಡಾ. ಬಿ.ಎ. ವಿವೇಕ ರೈ ಅವರಿಗೆ ಪರಿಷತ್ತು ಕೃತಜ್ಞತೆ ಸಲ್ಲಿಸುತ್ತದೆ.

ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು-೫೬೦ ೦೧೮

ಪ್ರೊ॥ ಹಂಪ. ನಾಗರಾಜಯ್ಯ
ಅಧ್ಯಕ್ಷರು

## ಪ್ರಸ್ತಾವನೆ

"ತುಳು ಜನಪದ ಸಾಹಿತ್ಯ"ವನ್ನು ಕುರಿತು ಮೈಸೂರು ವಿಶ್ವವಿದ್ಯಾನಿಲಯದ ಪಿಎಚ್.ಡಿ. ಪದವಿಗಾಗಿ ಡಾ. ಹಾ. ಮಾ. ನಾಯಕ ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ ಈ ಪ್ರೌಢ ಪ್ರಬಂಧವು ಗ್ರಂಥ ರೂಪದಲ್ಲಿ ಹೊರಬರುತ್ತಿರುವುದು ನನಗೆ ಬಹಳ ಸಂತೋಷದ ಸಂಗತಿ. ಈ ಪ್ರೌಢ ಪ್ರಬಂಧದಲ್ಲಿ ತುಳು ಜನಪದ ಸಾಹಿತ್ಯದ ನಾಲ್ಕು ಮುಖ್ಯ ಪ್ರಕಾರಗಳಾದ ಜನಪದ ಕಾವ್ಯ, ಜನಪದ ಕತೆಗಳು, ಗಾದೆಗಳು ಮತ್ತು ಒಗಟುಗಳು – ಇವನ್ನು ಪ್ರತ್ಯೇಕ ಅಧ್ಯಾಯಗಳ ರೂಪದಲ್ಲಿ ಅಧ್ಯಯನ ಮಾಡಿದ್ದೇನೆ. ತುಳು ಜನಪದ ಸಾಹಿತ್ಯದ ಸಾಮಗ್ರಿಗಳ ಸಂಗ್ರಹ ಈವರೆಗೆ ಬಹಳ ಕಡಿಮೆ ಪ್ರಮಾಣದಲ್ಲಿ ಆಗಿದೆ. ತುಳು ಜನಪದ ಕತೆಗಳ ಒಂದೇ ಒಂದು ಸಂಕಲನವೂ ಪ್ರಕಟವಾಗಿಲ್ಲ. ಪ್ರಕಟಿತ ಸಂಕಲನಗಳಲ್ಲಿನ ಪಾಡ್ದನಗಳ ಸಂಖ್ಯೆಯು ಒಟ್ಟು ಪಾಡ್ದನಗಳ ಸಂಖ್ಯಾ ಪ್ರಮಾಣಕ್ಕೆ ಹೋಲಿಸಿದರೆ ಬಹಳ ಸ್ವಲ್ಪ. ತುಳು ಗಾದೆ ಮತ್ತು ತುಳು ಒಗಟುಗಳನ್ನು ನಾನೇ ಸಂಗ್ರಹಿಸಿ, ಸಂಕಲನಗಳ ರೂಪದಲ್ಲಿ ಪ್ರಕಟಿಸಿರುವುದರಿಂದ ಅಷ್ಟೇನೂ ಸಮಸ್ಯೆಯಾಗಲಿಲ್ಲ. ತುಳು ಜನಪದ ಸಾಹಿತ್ಯದ ಸಂಗ್ರಹಗಳು ವೈಜ್ಞಾನಿಕವಾಗಿ ನಡೆದವುಗಳು ಅಲ್ಲ. ಈ ದೃಷ್ಟಿಯಿಂದ ನಾನು ಈ ಪ್ರಬಂಧದ ಅಧ್ಯಯನಕ್ಕೆ ತೊಡಗುವ ಮೊದಲು ತುಳು ಜನಪದ ಸಾಹಿತ್ಯವನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಲು ಕೆಲವು ವರ್ಷಗಳನ್ನು ವಿನಿಯೋಗಿಸಬೇಕಾಯಿತು. ತುಳು ಮಾತಾಡುವ ಪ್ರದೇಶದ ವ್ಯಾಪ್ತಿಯನ್ನು ಗಮನಿಸಿದರೆ, ಸಮಗ್ರ ತುಳು ಜನಪದ ಸಾಹಿತ್ಯದ ಸಂಗ್ರಹವು ಒಬ್ಬ ವ್ಯಕ್ತಿಯಿಂದ ಕೆಲವು ವರ್ಷಗಳಲ್ಲಿ ಆಗುವಂತಹದ್ದು ಖಂಡಿತ ಅಲ್ಲ. ವಿಶ್ವವಿದ್ಯಾನಿಲಯದಂತಹ ಸಂಸ್ಥೆಗಳು ನಿರ್ದಿಷ್ಟ ಯೋಜನೆಗಳ ಮೂಲಕ ಕ್ಷೇತ್ರ ಕಾರ್ಯಕರ್ತರ ನೆರವಿನಿಂದ ಮಾಡುವ ಕೆಲಸ ಅದು. ತುಳು ಜನಪದ ಸಾಹಿತ್ಯದ ಅಗಾಧತೆಯ ಅರಿವಿದ್ದುದರಿಂದಲೇ ನಾನು ಕೆಲವು ನಿರ್ದಿಷ್ಟ ಪ್ರದೇಶಗಳಲ್ಲಿ ಮಾತ್ರ ಕ್ಷೇತ್ರಕಾರ್ಯವನ್ನು ಮಾಡಿ, ಹೆಚ್ಚಾಗಿ ಧ್ವನಿಮುದ್ರಣ ಯಂತ್ರವನ್ನು ಬಳಸಿ, ಸಾಮಗ್ರಿಗಳನ್ನು ಸಂಗ್ರಹಿಸಿದೆ. ಮುಖ್ಯವಾಗಿ ನನಗೆ ಹೆಚ್ಚು ಪರಿಚಿತವಿರುವ ಪುತ್ತೂರು, ಬಂಟ್ವಾಳ ಮತ್ತು ಮಂಗಳೂರು ತಾಲ್ಲೂಕುಗಳ ಕೆಲವು ಗ್ರಾಮಗಳನ್ನು ಅದಕ್ಕಾಗಿ ಉಪಯೋಗಿಸಿಕೊಂಡಿದ್ದೇನೆ. ಆದರೆ ತುಳು ಜನಪದ ಸಾಹಿತ್ಯದ ಎಲ್ಲ ಪ್ರಕಾರಗಳನ್ನೂ ಸಾಧ್ಯವಾದಷ್ಟು ವೈವಿಧ್ಯ ಸಿಗುವಂತೆ ಸಂಗ್ರಹಿಸಿದ್ದೇನೆ.

ಅಧ್ಯಯನದ ದೃಷ್ಟಿಯಿಂದ 'ತುಳು ಜನಪದ ಸಾಹಿತ್ಯ'ವೆಂಬ ವಿಷಯವು ಬಹಳ ವ್ಯಾಪಕವಾದುದು ಎಂಬುದನ್ನು ನಾನು ಬಲ್ಲೆ. ಪಾಡ್ದನಗಳಂತಹ ಯಾವುದಾದರೂ ಒಂದು ಅಂಗವೇ ಪ್ರೌಢ ಪ್ರಬಂಧಕ್ಕೆ ವಸ್ತುವಾಗಬಲ್ಲದು. ಆದರೆ 'ತುಳು ಜನಪದ ಸಾಹಿತ್ಯ'ದಲ್ಲಿ ಈವರೆಗೆ

ವಿಶೇಷವಾಗಿ ಏನೂ ಕೆಲಸ ನಡೆಯದ ಕಾರಣ ಸಮಗ್ರವಾಗಿ ಈ ವಿಷಯವನ್ನು ಕುರಿತು ಅಧ್ಯಯನ ಮಾಡುವುದರಿಂದ ಮುಂದಿನ ಅಧ್ಯಯನಗಳಿಗೆ ಇದು ಸಹಾಯಕವಾಗಬಲ್ಲುದು. ವಿಷಯ ವ್ಯಾಪ್ತಿಯ ಕಾರಣದಿಂದಾಗಿ, ಪ್ರಬಂಧದ ಪುಟಗಳ ಸಂಖ್ಯೆಯು ಸಹಜವಾಗಿಯೇ ಅಧಿಕವಾಗಿದೆ. ತುಳು ಜನಪದ ಸಾಹಿತ್ಯವನ್ನು ಕುರಿತು ಕನ್ನಡದಲ್ಲಿ ಪ್ರಬಂಧವನ್ನು ಬರೆಯುವಾಗ, ತುಳು ವಾಕ್ಯಗಳಿಗೆ ಕನ್ನಡದಲ್ಲಿ ಅನುವಾದವನ್ನು ಕೊಡುವುದು ಅನಿವಾರ್ಯವಾಗುತ್ತದೆ. ತುಳು ಗಾದೆಗಳ ಮೂಲವನ್ನು ಅನುಬಂಧದಲ್ಲಿಯಾದರೂ ಕೊಡಬೇಕೆಂಬ ಇಚ್ಛೆ ಇದ್ದರೂ ಪ್ರಬಂಧದ ಗಾತ್ರವನ್ನು ಗಮನಿಸಿ ಕೈಬಿಡಲಾಗಿದೆ. ತುಳು ಕಬಿತಗಳು ಮತ್ತು ತುಳು ಜನಪದ ಕತೆಗಳ ಸಂದರ್ಭದಲ್ಲೂ ತುಳು ಮೂಲವನ್ನು ಕೊಡುತ್ತಾ ಹೋಗುತ್ತಿದ್ದರೆ ಪ್ರಬಂಧದ ಗಾತ್ರವು ಈಗಿನ ಇಮ್ಮಡಿಯಾಗುತ್ತಿತ್ತು. ಪಾಡ್ದನ ಮತ್ತು ಜನಪದ ಕತೆಗಳ ಅಧ್ಯಯನಗಳನ್ನು ಮಾಡುವಾಗ ಅವುಗಳ ಮೂಲಸಾಮಗ್ರಿಗಳ ಕನ್ನಡ ರೂಪಾಂತರವನ್ನು ಕೊಡಲಾಗಿದೆ. ಸಾಧ್ಯವಾದಷ್ಟು ಮಟ್ಟಿಗೆ ಸಂಕ್ಷಿಪ್ತ ಕನ್ನಡ ರೂಪಾಂತರವನ್ನು ಬಳಸಲಾಗಿದೆ. ಪಠ್ಯದ ಸಾರಾಂಶವಿಲ್ಲದೆ ಅಧ್ಯಯನ ಮಾಡುವುದು ಸಮರ್ಪಕವಾಗುವುದಿಲ್ಲವೆಂಬ ಕಾರಣಕ್ಕಾಗಿ ಹೀಗೆ ಮಾಡಲಾಗಿದೆ. ಈ ಕನ್ನಡ ರೂಪಗಳಿಂದಾಗಿ ಪ್ರಬಂಧದ ಪುಟಗಳ ಸಂಖ್ಯೆ ಸ್ವಲ್ಪ ಜಾಸ್ತಿಯಾಗಿದೆ. ಆದರೆ ಇದು ಅನಿವಾರ್ಯ. ತುಳು ಗಾದೆಗಳನ್ನು ಹೋಲುವ ಕನ್ನಡ ಗಾದೆಗಳನ್ನು ಪ್ರಕಟಿತ ಸಂಕಲನಗಳ ಆಧಾರದಿಂದ ಕಲೆ ಹಾಕಿದ್ದರೂ ಪ್ರಬಂಧದ ಗಾತ್ರ ಹೆಚ್ಚಾಗುತ್ತದೆ ಎನ್ನುವ ಕಾರಣದಿಂದ ಕೈಬಿಡಲಾಗಿದೆ.

'ತುಳು ಜನಪದ ಸಾಹಿತ್ಯ'ವನ್ನು ಜಾನಪದ ಮತ್ತು ಮಾನವ ವಿಜ್ಞಾನಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಸಂಸ್ಕೃತಿಯ ಅಧ್ಯಯನಕ್ಕೆ ವಿಶೇಷ ಮಹತ್ವವನ್ನು ಕೊಡಲಾಗಿದೆ. ಸಾಮಗ್ರಿಗಳನ್ನು ಸಾಹಿತ್ಯದ ದೃಷ್ಟಿಯಿಂದಲೂ ವಿವೇಚಿಸಲಾಗಿದೆ. ಭಾಷಾ ವಿಜ್ಞಾನದ ದೃಷ್ಟಿಯಿಂದ ಪಾಡ್ದನಗಳ ಭಾಷಾ ಸ್ವರೂಪ ಅಥವಾ ತುಳು ಜನಪದ ಸಾಹಿತ್ಯದ ಭಾಷಾ ಸ್ವರೂಪವನ್ನು ಅಧ್ಯಯನ ಮಾಡಲು ಅವಕಾಶವಿದೆ. ವಿಷಯವ್ಯಾಪ್ತಿಯ ದೃಷ್ಟಿಯಿಂದ ಭಾಷೆಯ ಅಧ್ಯಯನವನ್ನು ಇಲ್ಲಿ ಸ್ಪರ್ಶಿಸಿಲ್ಲ.

ತುಳು ಜನಪದ ಕತೆಗಳಿಗೆ 'ಆಶಯಸೂಚಿ' (Motif Index) ಯನ್ನು ಸಿದ್ಧಪಡಿಸಲಾಗಿದೆ. ಇನ್ನೂ ಹೆಚ್ಚು ಜನಪದ ಕತೆಗಳ ಸಂಗ್ರಹವಾದಾಗ 'ಆಶಯಸೂಚಿ' ಹೆಚ್ಚು ವ್ಯಾಪಕವಾಗಿ ಸಿದ್ಧಗೊಂಡು ಜಗತ್ತಿನ ಜನಪದ ಕತೆಗಳ ಸಂಬಂಧದ ಬಗ್ಗೆ ನಿಖರವಾದ ಅಭಿಪ್ರಾಯವನ್ನು ತಾಳಲು ಅವಕಾಶವಿದೆ. ಇಡೀ ಪ್ರಬಂಧದಲ್ಲಿ ನನಗೆ ಹೆಚ್ಚು ತೃಪ್ತಿಕೊಟ್ಟ ಭಾಗ ಪಾಡ್ದನಗಳ ಅಧ್ಯಯನ. ಭೂತಾರಾಧನೆಗೆ ಸಂಬಂಧಿಸಿದ ಪಾಡ್ದನಗಳ ಬಗ್ಗೆ ಅನೇಕ ಹೊಸ ವಿಚಾರಗಳನ್ನು ಹೇಳಿರುವುದು ನನಗೆ ಸಮಾಧಾನ ತಂದಿದೆ. ಆದರೆ ಇನ್ನೂ ಅಧಿಕ ಪಾಡ್ದನಗಳ ಸಂಗ್ರಹದಿಂದ ಇನ್ನೂ ಹೆಚ್ಚಿನ ಸಂಶೋಧನೆ ನಡೆಸಲು ಅವಕಾಶವಿದೆ. ಈ ಪ್ರಬಂಧದ ಮೊದಲನೆಯ ಅಧ್ಯಾಯದಲ್ಲಿ ತುಳು ಜನಪದ ಸಾಹಿತ್ಯವನ್ನು ಅಧ್ಯಯನ ಮಾಡಲು ಹಿನ್ನೆಲೆಯನ್ನು ಮಾತ್ರ ಒದಗಿಸಲಾಗಿದೆ. ತುಳು ಭಾಷೆ, ತುಳುನಾಡಿನ ಇತಿಹಾಸ, ಸಾಂಸ್ಕೃತಿಕ ಹಿನ್ನೆಲೆ, ತುಳು ಜಾನಪದದಲ್ಲಿ ನಡೆದ ಕೆಲಸದ ಸಮೀಕ್ಷೆ ಇವು ಪರಿಚಯವನ್ನು ಕೊಡುವುದಕ್ಕಾಗಿ ಮಾತ್ರ ಬರೆದವುಗಳು, ಸಂಶೋಧನೆಯ ವಿಷಯಕ್ಕೆ ಸೇರಿದವುಗಳಲ್ಲ. 'ತುಳು ಜನಪದ ಸಾಹಿತ್ಯ'ದ ಎಲ್ಲ ಅಂಗಗಳನ್ನು ಬೇರೆ ಬೇರೆಯಾಗಿ, ವ್ಯಾಪಕವಾಗಿ ಭಿನ್ನದೃಷ್ಟಿಕೋನಗಳಿಂದ ಅಧ್ಯಯನ ಮಾಡಲು ಈ ಪ್ರೌಢ ಪ್ರಬಂಧವು ಪ್ರೇರಕವಾದರೆ, ಸಹಾಯಕವಾದರೆ ನನ್ನ ಶ್ರಮ ಸಾರ್ಥಕ.

'ತುಳು ಜನಪದ ಸಾಹಿತ್ಯ'ವನ್ನು ಕುರಿತು ಪಿಎಚ್.ಡಿ. ಪದವಿಗಾಗಿ ಈ ನಿಬಂಧವನ್ನು ನಾನು ಸಿದ್ಧಪಡಿಸಲು ಕಾರಣರಾದವರು ನನ್ನ ಮಾರ್ಗದರ್ಶಕರಾದ, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದ, ಈಗ ಗುಲ್ಬರ್ಗ ವಿಶ್ವವಿದ್ಯಾನಿಲಯದ ಕುಲಪತಿಯಾಗಿರುವ ಡಾ. ಹಾ. ಮಾ. ನಾಯಕ ಅವರು. ಕನ್ನಡ ಜಾನಪದದ ಅಧ್ಯಯನಕ್ಕೆ ವೈಜ್ಞಾನಿಕ ದೃಷ್ಟಿಯನ್ನು ತಂದುಕೊಟ್ಟ ಅವರು ನನ್ನ ಸಂಶೋಧನೆಗೆ ಸಂಬಂಧಿಸಿದಂತೆ ಅನೇಕ ಅಮೂಲ್ಯ ಸಲಹೆಗಳನ್ನಿತ್ತು ಮಾರ್ಗದರ್ಶನ ಮಾಡಿದ್ದಾರೆ. ಜಾನಪದದ ಆಳವಾದ ಅಧ್ಯಯನದ ಜೊತೆಗೆ ವಿಮರ್ಶಕ ಮನೋಧರ್ಮವನ್ನು ಮೈಗೂಡಿಸಿಕೊಂಡಿರುವ ಅವರ ಮಾರ್ಗದರ್ಶನದಲ್ಲಿ ನನ್ನ ವಿಚಾರಗಳು ಸಾಕಷ್ಟು ಪರಿಷ್ಕಾರಗೊಂಡು ಈ ನಿಬಂಧದಲ್ಲಿ ಒಡಮೂಡಿರುವುದು ನನಗೆ ಸಂತೋಷ ತಂದಿದೆ. ಈ ನಿಬಂಧದ ಪ್ರಕಟಣೆಯು ಆದಷ್ಟು ಬೇಗನೆ ಆಗಬೇಕೆಂಬ ಆಸಕ್ತಿಯಿಂದ ಅದಕ್ಕಾಗಿ ಹೆಚ್ಚಿನ ಮುತುವರ್ಜಿಯನ್ನು ಡಾ. ಹಾ.ಮಾ. ನಾಯಕ ಅವರು ವಹಿಸಿದ್ದಾರೆ. ಯಾವ ಅಧಿಕಾರದಲ್ಲಿದ್ದರೂ ಮಾನವೀಯ ಸಂಬಂಧಗಳಿಗೆ ಎಳ್ಳಷ್ಟೂ ಕುಂದಾಗದಂತೆ ನಡೆದುಕೊಳ್ಳುವ ಡಾ. ಹಾ. ಮಾ. ನಾಯಕರ ವಿಶ್ವಾಸದ ಸುಖವನ್ನು ಬಹಳ ಅಮೂಲ್ಯವಾದುದೆಂದು ನಾನು ಎಲ್ಲ ಕಾಲಕ್ಕೂ ತಿಳಿದಿದ್ದೇನೆ. ಬದುಕಿನ ಶಿಸ್ತು, ಅಚ್ಚುಕಟ್ಟು, ಮೌಲ್ಯಗಳ ಬಗೆಗಿನ ಪ್ರಾಮಾಣಿಕ ಕಾಳಜಿ, ಒಳ್ಳೆಯ ಉದ್ದೇಶಕ್ಕಾಗಿ ಎಲ್ಲಾ ಅಡ್ಡಿಗಳನ್ನು ಎದುರಿಸುವ ಎದೆಗಾರಿಕೆ–ಇಂತಹ ಅನೇಕ ಅಂಶಗಳಲ್ಲಿ ಡಾ. ನಾಯಕರನ್ನು ಈ ನಿಬಂಧದ ವ್ಯಾಪ್ತಿಯ ಹೊರಗೂ ನನ್ನ ಮಾರ್ಗದರ್ಶಕರೆಂದು ನಾನು ತಿಳಿದಿದ್ದೇನೆ. ಅವರಿಗೆ ನನ್ನ ಗೌರವಪೂರ್ವಕ ಕೃತಜ್ಞತೆಗಳು.

ಈ ನಿಬಂಧದ ಪ್ರಕಟಣೆಯ ಬಗ್ಗೆ ಆಸಕ್ತಿಯನ್ನು ತಾಳಿ ಅದು ಗ್ರಂಥರೂಪದಲ್ಲಿ ಬರಲು ಕಾರಣರಾದವರು ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಇದರ ಅಧ್ಯಕ್ಷರಾಗಿರುವ ಪ್ರೊ. ಹಂ. ಪ. ನಾಗರಾಜಯ್ಯನವರು. ತಮ್ಮ ಕಾರ್ಯಬಾಹುಳ್ಯಗಳ ನಡುವೆಯೂ ನನ್ನ ನಿಬಂಧದ ಮುದ್ರಣದ ಬಗೆಗೆ ವಿಚಾರಿಸಿಕೊಳ್ಳುತ್ತಾ, ಪ್ರೋತ್ಸಾಹದ ಮಾತುಗಳನ್ನು ಆಡುತ್ತಾ ಅವರು ನನ್ನನ್ನು ಅವರ ವಿಶ್ವಾಸದ ಚಿರಋಣಿಯನ್ನಾಗಿ ಮಾಡಿದ್ದಾರೆ.

ತುಳು ಜನಪದ ಸಾಹಿತ್ಯದ ಸಾಮಗ್ರಿಗಳ ಕೊರತೆಯನ್ನು ತುಂಬಿಕೊಳ್ಳಲು ನಾನು ಕ್ಷೇತ್ರಕಾರ್ಯವನ್ನು ಕೈಗೊಂಡಾಗ ನಿರೂಪಕರಾಗಿ (Informant) ನನಗೆ ಸಹಕರಿಸಿದವರು ನೂರಾರು ಮಂದಿ. ತುಳು ಜಾನಪದದ ಜೀವನಾಡಿಯಾಗಿರುವ ಅವರೆಲ್ಲರಿಗೂ ನನ್ನ ಪ್ರಣಾಮಗಳು. ಸಹೃದಯಿ ಸ್ನೇಹಿತ ಶ್ರೀ ಅಮೃತ ಸೋಮೇಶ್ವರರು ತುಳು ಜನಪದ ಸಾಹಿತ್ಯದ ತಮ್ಮ ಅಪ್ರಕಟಿತ ಸಂಗ್ರಹವನ್ನು ಬಳಸಿಕೊಳ್ಳಲು ಕೊಟ್ಟಿದ್ದಾರೆ ಮತ್ತು ದಿ. ಎಂ. ನಾರಾಯಣರ ಸಂಗ್ರಹದ ತುಳು ಗಾದೆಗಳು ಧಾರವಾಹಿಯಾಗಿ ಪ್ರಕಟವಾಗಿದ್ದ 'ಪ್ರಭಾತ' ವಾರಪತ್ರಿಕೆಯ ಹಳೆಯ ಸಂಚಿಕೆಗಳನ್ನು ಕೊಟ್ಟು ಉಪಕರಿಸಿದ್ದಾರೆ. ಮಂಗಳೂರು ಸರಕಾರಿ ಕಾಲೇಜಿನ ಗ್ರಂಥಪಾಲರು R. C. Burnell ಅವರ ''The Devil worship of Tuluvas'' ಎಂಬ ಅಪೂರ್ವ ಗ್ರಂಥವನ್ನು ಬಳಸಲು ಕೊಟ್ಟಿದ್ದಾರೆ. "ತುಳುಕೂಟ" ಪತ್ರಿಕೆಯ ಹಳೆಯ ಸಂಚಿಕೆಗಳನ್ನು ಒದಗಿಸಿದವರು ತುಳುಕೂಟ ಸಂಸ್ಥೆಯ ಹಿಂದಿನ ಅಧ್ಯಕ್ಷ ಶ್ರೀ ಎಸ್. ಆರ್. ಹೆಗ್ಡೆಯವರು. ಮಿತ್ರ ಶ್ರೀ ಶೇಖರ ಇಡ್ಯರು ಕೆಲವು ಪಾಡ್ದನಗಳ ಮಾಹಿತಿಯನ್ನು ಒದಗಿಸಿದ್ದಾರೆ. ಇವರೆಲ್ಲರನ್ನು ನಾನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಈ ಗ್ರಂಥವನ್ನು ನನ್ನ ಅಮ್ಮ ಮತ್ತು ಅಪ್ಪ ಅವರ ಹೆಸರಿನಲ್ಲಿ ಅರ್ಪಿಸಿದ್ದೇನೆ. ಇದಕ್ಕೆ ಹೆಚ್ಚಿನ ಯಾವ ವಿವರಣೆಯೂ ಬೇಕಾಗಿಲ್ಲ. ಇವರಿಬ್ಬರೂ ತುಳು ಜನಪದ ಸಂಸ್ಕೃತಿಯನ್ನು ಬದುಕುತ್ತಿರುವವರು ಮತ್ತು ನಾನೂ ಅದರ ಭಾಗವಾಗಲು ಕಾರಣರಾದವರು.

ಈ ನಿಬಂಧದ ಮುದ್ರಣ ಕಾರ್ಯವು ನನಗೆ ದೂರವಾದ ಬೆಂಗಳೂರಿನಲ್ಲಿ ನಡೆದುದರಿಂದ ಮತ್ತು ಅನೇಕ ಅನಿವಾರ್ಯ ಕಾರಣಗಳಿಂದಾಗಿ ಈ ನಿಬಂಧವು ನಾನು ರಚಿಸಿದ ನಾಲ್ಕು ವರ್ಷಗಳ ಬಳಿಕ ಗ್ರಂಥರೂಪದಲ್ಲಿ ಹೊರಬರುತ್ತಿರುವುದರಿಂದ, ಕಾಲದ ಅಂತರವಿದ್ದೂ ಇದನ್ನು ಪರಿಷ್ಕರಿಸಲಾಗದ ನೋವು ನನಗಿದೆ. ಇಲ್ಲಿ ನಾನು ಪ್ರತಿಪಾದಿಸಿದ ಎಷ್ಟೋ ವಿಷಯಗಳು ಇಂದು ನನ್ನ ಆಲೋಚನೆ ಮತ್ತು ಅಧ್ಯಯನಗಳ ದೃಷ್ಟಿಯಿಂದ ಪರಿಷ್ಕಾರಗೊಂಡಿವೆ. ಇಲ್ಲಿನ ಕೆಲವಾದರೂ ಭಾಗಗಳನ್ನು ಸಂಪಾದಿಸಬಹುದಾಗಿತ್ತು ಎಂದು ಅನಿಸುತ್ತದೆ. ಆದರೆ, ಹಿಂದೆಯೇ ನಾನು ಸ್ಪಷ್ಟಪಡಿಸಿದಂತೆ ಮೊದಲ ಬಾರಿ ಈ ವಿಷಯವನ್ನು ಕುರಿತು ಗ್ರಂಥ ಹೊರಬರುತ್ತಿರುವುದರಿಂದ ಅದು ವಿವರಣಾತ್ಮಕವಾಗಿಯೂ ವಿಶ್ಲೇಷಣಾತ್ಮಕವಾಗಿಯೂ ಇರುವುದು ಅನಿವಾರ್ಯವಾಗಿದೆ.

ಬೆಂಗಳೂರಿನಲ್ಲಿ ಮುದ್ರಣ ಕಾರ್ಯ ನಡೆದುದರಿಂದ ಈ ಗ್ರಂಥದ ಕರಡು ತಿದ್ದುವ ಕೆಲಸವನ್ನು ನನಗೆ ಮಾಡಲು ಸಾಧ್ಯವಾಗಲಿಲ್ಲ. ಆದರೆ, ಜಾನಪದವನ್ನು ಚೆನ್ನಾಗಿ ಬಲ್ಲ ಸ್ನೇಹಿತ ಜಿ. ಆರ್. ತಿಪ್ಪೇಸ್ವಾಮಿಯವರು ಇದರ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿಕೊಂಡು ನನಗೆ ತುಂಬಾ ಉಪಕಾರ ಮಾಡಿದ್ದಾರೆ. ಈ ಮುದ್ರಣದ ಕಾರ್ಯಕ್ಕೆ ಸಂಬಂಧಿಸಿದಂತೆ ಕನ್ನಡ ಸಾಹಿತ್ಯ ಪರಿಷತ್ತಿನ ಶ್ರೀ ಮನ್ವಾಚಾರ್ ಅವರ ಸಹಾಯವನ್ನು ನಾನು ಸ್ಮರಿಸುತ್ತೇನೆ. ತುಳು ಭಾಷೆಯ ಪಠ್ಯಗಳಲ್ಲಿ ಮುದ್ರಣ ತಪ್ಪುಗಳು ಉಳಿದಿದ್ದರೆ, ಅದಕ್ಕೆ ತುಳು ಗೊತ್ತಿಲ್ಲದ ನನ್ನ ಈ ಸ್ನೇಹಿತರು ಖಂಡಿತಾ ಕಾರಣರಲ್ಲ. ಮುಂದಿನ ಮುದ್ರಣದ ವೇಳೆಗೆ ಅದನ್ನು ಸರಿಪಡಿಸಬಹುದು ಎಂದಷ್ಟೇ ಹೇಳಬಯಸುತ್ತೇನೆ.

ಈ ಗ್ರಂಥದ ಮುಖಪುಟದ ವಿನ್ಯಾಸಕ್ಕೆ ಬೇಕಾದ ಫೋಟೋಗಳನ್ನು ಕೊಟ್ಟು ಸಹಕರಿಸಿದ ಶ್ರೀ ಕೆ. ಚಿನ್ನಪ್ಪಗೌಡ ಉಜಿರೆ ಇವರನ್ನೂ, ಅಂದವಾದ ಮುಖಪುಟದ ಕಲಾವಿನ್ಯಾಸವನ್ನು ರೂಪಿಸಿದ ಶ್ರೀ ಚಂದ್ರನಾಥ್ ಅವರನ್ನೂ ಪ್ರೀತಿಯಿಂದ ನೆನೆಯುತ್ತೇನೆ.

ಈ ಬೃಹತ್‌ಗ್ರಂಥದ ಮುದ್ರಣ ಕಾರ್ಯವನ್ನು ಕೈಗೊಂಡು ಯಶಸ್ವಿಯಾಗಿ ಮತ್ತು ಅಚ್ಚುಕಟ್ಟಾಗಿ ತಮ್ಮ ಹೊಣೆಯನ್ನು ನಿರ್ವಹಿಸಿದ ಅಶ್ವಥ್ ಪ್ರಿಂಟರ್ಸ್, ಬೆಂಗಳೂರು ಇದರ ಮಾಲಿಕರಾದ ಶ್ರೀ ದಿವಾಕರ್ ಮತ್ತು ಅವರ ಸಿಬ್ಬಂದಿಯವರನ್ನು ಸದಾ ನೆನೆಯುತ್ತೇನೆ.

ಮೇ, ೧೯೮೫ ಬಿ. ಎ. ವಿವೇಕ ರೈ

ಕನ್ನಡ ವಿಭಾಗ
ಮಂಗಳೂರು ವಿಶ್ವವಿದ್ಯಾನಿಲಯ

## ಅರ್ಪಣೆ

ನನಗೆ
ತುಳು ಭಾಷೆ ಮತ್ತು ಸಂಸ್ಕೃತಿ ಕಲಿಸಿದ
ತಮ್ಮ ಅಪಾರ ಪ್ರೀತಿ ವಾತ್ಸಲ್ಯಗಳಿಂದ
ನನ್ನ ಬದುಕನ್ನು
ಸದಾ ರೂಪಿಸುತ್ತಿರುವ
ಜಾನಪದ ಜೀವಿಗಳಾದ
ನನ್ನ ಅಮ್ಮ **ಯಮುನಾ**
ಮತ್ತು
ಅಪ್ಪ **ಅಗ್ರಾಳ ಪುರಂದರ ರೈ**
ಇವರಿಗೆ



# ೧ ತುಳು ಭಾಷೆ

ದ್ರಾವಿಡ ಭಾಷಾವರ್ಗದಲ್ಲಿ ಒಂದು ಪ್ರಮುಖವಾದ ಭಾಷೆ ತುಳು. ರಾಬರ್ಟ್ ಕಾಲ್ಡ್‌ವೆಲ್ಲರು (೧೮೫೬) 'ದ್ರಾವಿಡ ಭಾಷಾ ಕುಟುಂಬದಲ್ಲಿ ತುಳುವು ಅತ್ಯಂತ ಬೆಳವಣಿಗೆ ಹೊಂದಿದ ಸ್ವತಂತ್ರವಾದ ಭಾಷೆ' ಎಂದು ಸಾರಿದ ಮೇಲೆ ಭಾಷಾ ವಿಜ್ಞಾನಿಗಳು ತುಳುವಿನ ಅಧ್ಯಯನದ ಕಡೆಗೆ ಗಮನ ಹರಿಸಿದರು. ಸಾಂಪ್ರದಾಯಿಕ ವಾಗಿ 'ತುಳುನಾಡು' ಎಂದು ಕರೆಯಲಾಗುತ್ತಿದ್ದ ಈಗಿನ ದಕ್ಷಿಣ ಕನ್ನಡ ಜಿಲ್ಲೆಯ ದಕ್ಷಿಣದಲ್ಲಿ ಕಾಸರಗೋಡಿನ ಚಂದ್ರಗಿರಿ ಹೊಳೆ, ಉತ್ತರದಲ್ಲಿ ಕಲ್ಯಾಣಪುರ ಹೊಳೆ–ಇವುಗಳ ನಡುವಿನ ಜನರು ಹೆಚ್ಚಾಗಿ ಆಡುವ ಭಾಷೆ ತುಳು. ಇದರ ಜೊತೆಗೆ ಕೊಂಕಣಿ, ಮಲೆಯಾಳಂ, ಮರಾಠಿ ಹಾಗೂ ಕನ್ನಡದ ಉಪಭಾಷೆಗಳಾದ ಹವ್ಯಕ, ಕೋಟ ಇತ್ಯಾದಿ ಭಾಷೆಗಳನ್ನು ಆಡುವವರು ಸಾಕಷ್ಟು ಸಂಖ್ಯೆಯಲ್ಲಿ ಇದ್ದಾರೆ. ತುಳುಭಾಷೆಯನ್ನು ಆಡುವವರ ಸಂಖ್ಯೆ ಸುಮಾರು ೧೪ ಲಕ್ಷ. ತುಳುವಿನ ಸಾಮಾಜಿಕ ಮತ್ತು ಪ್ರಾದೇಶಿಕ ಉಪಭಾಷೆಗಳ ಹೊರತಾಗಿ, ಈ ಪ್ರದೇಶದಲ್ಲಿ ತುಳುವನ್ನು ಎರಡು ರೀತಿಯ ಜನರು ಮಾತನಾಡುತ್ತಾರೆ. (೧) ತುಳುವನ್ನು ಮಾತೃಭಾಷೆ ಯನ್ನಾಗಿ ಉಳ್ಳವರು. (೨) ಕೊಂಕಣಿ, ಮಲೆಯಾಳಂ, ಮರಾಠಿ ಹಾಗೂ ಕನ್ನಡದ ಉಪಭಾಷೆಗಳಾದ ಹವ್ಯಕ, ಕೋಟ ಇತ್ಯಾದಿ ಭಾಷೆಗಳು ಮಾತೃಭಾಷೆಯಾಗಿ ಇದ್ದು, ತುಳುವನ್ನು ಸಂಪರ್ಕ ಭಾಷೆಯನ್ನಾಗಿ ಬಳಸುವವರು. ಈ ರೀತಿ ಈ ಪ್ರದೇಶದ ಬಹುತೇಕ ಮಂದಿಗೆ ಅರ್ಥವಾಗುವ ಭಾಷೆಯಾಗಿ ತುಳು ವ್ಯವಹರಿಸು ತ್ತದೆ. ಆದ್ದರಿಂದ ತುಳುವನ್ನು ಈ ಪ್ರದೇಶದ ವ್ಯಾವಹಾರಿಕ ಭಾಷೆ ಎಂದು ಕರೆಯಬಹುದು. ತುಳು ಭಾಷೆ ಯನ್ನು ತುಳುನಾಡಿನ ಬೇರೆ ಬೇರೆ ಜಾತಿಗಳ ಜನರು ತಮ್ಮ ಮಾತೃಭಾಷೆಯನ್ನಾಗಿ ಅಂಗೀಕರಿಸಿದ್ದಾರೆ. ಶಿವಳ್ಳಿ ಬ್ರಾಹ್ಮಣರು, ಸ್ಥಾನಿಕರು, ಬಂಟರು, ಜೈನರು, ಬಿಲ್ಲವರು, ಗೌಡರು, ಮೂಲ್ಯರು, ಹರಿಜನರು ಮತ್ತು ಕೆಲವೆಡೆ ಪ್ರೊಟೆಸ್ಟೆಂಟ್ ಕ್ರಿಶ್ಚಿಯನರು ತುಳುವನ್ನು ತಮ್ಮ ಮಾತೃಭಾಷೆಯ ರೂಪದಲ್ಲಿ ಆಡುತ್ತಾರೆ. ಇದರಿಂದಾಗಿ ತುಳುವಿನಲ್ಲಿ ಅನೇಕ ಸಾಮಾಜಿಕ ಉಪಭಾಷೆಗಳನ್ನು ಗುರುತಿಸಬಹುದು.

ತುಳುಭಾಷೆಗೆ ದ್ರಾವಿಡ ಭಾಷಾ ವರ್ಗದ ಪ್ರಮುಖ ಭಾಷೆಗಳಾದ ಕನ್ನಡ, ತಮಿಳು, ಮಲಯಾಳಂ, ತೆಲಗು ಭಾಷೆಗಳಂತೆ ಸ್ವತಂತ್ರವಾದ ಲಿಪಿಯಾಗಲೀ ಸಾಹಿತ್ಯ ಪರಂಪರೆಯಾಗಲೀ ಇಲ್ಲ, 'ತುಳು ಲಿಪಿ'ಯೆಂಬ ಹೆಸರಿನಿಂದ ಕರೆಯಲಾಗುವ ಒಂದು ಲಿಪಿ ಈಗಲೂ ಇದೆ. ಅಲ್ಪಸ್ವಲ್ಪ ವ್ಯತ್ಯಾಸವನ್ನು ಬಿಟ್ಟರೆ ಇದು ಮಲೆಯಾಳಂ ಲಿಪಿಯನ್ನೇ ಹೋಲುತ್ತದೆ. ತುಳುನಾಡಿನ ಬ್ರಾಹ್ಮಣರು ಸಂಸ್ಕೃತ ಮಂತ್ರಗಳನ್ನು ಓಲೆಗರಿಗಳಲ್ಲಿ ಬರೆದಿಟ್ಟುಕೊಳ್ಳಲು ಈ ಲಿಪಿಯನ್ನು ಉಪಯೋಗಿಸುತ್ತಿದ್ದರು. ಆದ್ದರಿಂದ ಇದನ್ನು ತುಳು ಭಾಷೆಯ ಲಿಪಿ

ಎಂದು ಕೆಲವರು ಭಾವಿಸಿದ್ದು ಉಂಟು. ಆದರೆ ತುಳುಭಾಷೆಗೆ ಅದರದ್ದೇ ಆದ ಲಿಪಿಯೊಂದು ಇತ್ತು ಎಂದು ಸಾಧಿಸಲು ಈಗ ಸಿಕ್ಕಿರುವ ಸಾಕ್ಷ್ಯಾಧಾರಗಳು ಸಾಲವು.[1]

ದ್ರಾವಿಡ ಭಾಷಾ ವರ್ಗದಲ್ಲಿ ತುಳು ಭಾಷೆ ಯಾವಾಗ ಹುಟ್ಟಿತು ಎಂದು ಇನ್ನೂ ನಿರ್ಧಾರವಾಗಿಲ್ಲ. ಸಾಹಿತ್ಯಿಕವಾಗಿ ಹೆಚ್ಚು ಪ್ರೌಢವಾದ ಕನ್ನಡ, ತಮಿಳು, ಮಲೆಯಾಳಂ, ತೆಲುಗುಗಳಿಗಿಂತ ಪೂರ್ವದಲ್ಲಿಯೇ ತುಳುಭಾಷೆಯು ಮೂಲದ್ರಾವಿಡ ಭಾಷೆಯಿಂದ ಹುಟ್ಟಿಕೊಂಡಿತು ಎಂಬ ಅಭಿಪ್ರಾಯವನ್ನು ಕೆಲವು ಭಾಷಾ ವಿಜ್ಞಾನಿಗಳು ವ್ಯಕ್ತಪಡಿಸಿದ್ದಾರೆ. ತುಳುವನ್ನು ದಕ್ಷಿಣ ದ್ರಾವಿಡ, ಮಧ್ಯ ದ್ರಾವಿಡ ಮತ್ತು ಉತ್ತರ ದ್ರಾವಿಡ ಗುಂಪುಗಳಲ್ಲಿ ಯಾವುದಕ್ಕೆ ಸೇರಿಸಬೇಕು ಎಂಬುದರ ಬಗ್ಗೆ ನಡೆದ ಚರ್ಚೆಗಳು ಪರೋಕ್ಷವಾಗಿ ತುಳುಭಾಷೆಯ ಪ್ರಾಚೀನತೆಗೆ ಸಂಬಂಧಪಡುತ್ತವೆ. ಭ. ಕೃಷ್ಣಮೂರ್ತಿಯವರು (೧೯೬೧) ತುಳುವಿನ ಸ್ವತಂತ್ರ ಸ್ವರೂಪದ ಕಾರಣವಾಗಿ ಅದು ಮೂಲ ಮಧ್ಯದ್ರಾವಿಡ ಭಾಷೆಯಿಂದ ಹುಟ್ಟಿತು ಎನ್ನುವ ಅಭಿಪ್ರಾಯವನ್ನು ತಾಳಿದ್ದಾರೆ.[2] ಎಂ. ಬಿ. ಎಮಿನೋ ಅವರು (೧೯೬೭) ಈ ಅಭಿಪ್ರಾಯನ್ನು ಒಪ್ಪಿ ತುಳುವು ದಕ್ಷಿಣ ದ್ರಾವಿಡ ಭಾಷೆಯಲ್ಲ ಎನ್ನುತ್ತಾರೆ.[3] ಪಿ. ಎಸ್. ಸುಬ್ರಮಣ್ಯಂರವರು (೧೯೬೮) ತುಳುವು ಮೂಲತಃ ದಕ್ಷಿಣ ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ್ದೆಂದೂ ಉಳಿದ ದ್ರಾವಿಡ ಭಾಷೆಗಳಿಗಿಂತ ಮೊದಲೇ ಅದು ಮೂಲ ದಕ್ಷಿಣ ದ್ರಾವಿಡದಿಂದ ಪ್ರತ್ಯೇಕವಾಯಿತೆಂದೂ ಹೇಳುತ್ತಾರೆ.[4] ಈ ಅಭಿಪ್ರಾಯವನ್ನು ಅಂಗೀಕರಿಸುವುದಾದರೆ ತುಳುವು ದಕ್ಷಿಣ ದ್ರಾವಿಡ ಭಾಷೆಗಳಲ್ಲೇ ಅತ್ಯಂತ ಪ್ರಾಚೀನವಾಗುತ್ತದೆ. ಅಂದರೆ ತುಳುವಿನ ಪ್ರಾಚೀನತೆಯನ್ನು ಕ್ರಿಸ್ತ ಪೂರ್ವಕ್ಕೆ ಕೊಂಡುಹೋಗಬಹುದು.

ಆದರೆ ತುಳುಭಾಷೆಯ ಪ್ರಾಚೀನತೆಯನ್ನು ಸಮರ್ಪಕವಾಗಿ ಗುರುತಿಸುವಲ್ಲಿ ನಮಗೆ ಇರುವ ಅಡ್ಡಿ ಎಂದರೆ ತುಳುವಿನಲ್ಲಿ ಶಾಸನಗಳು ಸಿಕ್ಕದೆ ಇರುವುದು. ಇತ್ತೀಚೆಗೆ ಡಾ. ಕೆ. ವಿ. ರಮೇಶರು ಕಾಸರಗೋಡು ತಾಲೂಕಿನ ಅನಂತಪುರದಲ್ಲಿ ಒಂದು ತುಳು ಶಾಸನವನ್ನು ಪತ್ತೆ ಹಚ್ಚಿದ್ದಾರೆ. ಲಿಪಿಶಾಸ್ತ್ರದ ದೃಷ್ಟಿಯಿಂದ ಇದರ ಕಾಲವನ್ನು ಕ್ರಿ.ಶ. ೧೫ನೆಯ ಶತಮಾನ ಎಂದು ಊಹಿಸಿದ್ದಾರೆ.

೧೯ನೆಯ ಶತಮಾನದ ಮಧ್ಯಭಾಗದವರೆಗೂ ತುಳುವಿನಲ್ಲಿ ಗ್ರಂಥಸ್ಥ ಸಾಹಿತ್ಯ ಸಿಗುವುದಿಲ್ಲ. ತುಳುವಿನಲ್ಲಿ ಗ್ರಂಥಸ್ಥ ಸಾಹಿತ್ಯ ಹುಟ್ಟಿಕೊಳ್ಳದೆ ಇರುವುದಕ್ಕೆ ಇರುವ ಕಾರಣಗಳು ಹೀಗಿವೆ :

---

1 ಡಾ. ಕೆ. ವಿ. ರಮೇಶ ಅವರು ಸಂಶೋಧಿಸಿದ 'ಅನಂತಪುರದ ತುಳು ಶಾಸನ'ವು ತುಳು ಭಾಷೆಯಲ್ಲಿದೆ. ಅದರ ಲಿಪಿಯ ಬಗ್ಗೆ ಅವರು ಈ ರೀತಿ ಹೇಳಿದ್ದಾರೆ : "ಅದು ಬಹುಮಟ್ಟಿಗೆ ಮಲೆಯಾಳಂ ಲಿಪಿಯನ್ನೇ ಹೋಲುವುದಾದರೂ ಅದರಲ್ಲಿ ಕಂಡುಬರುವ ಕೆಲವೊಂದು ಮುಖ್ಯ ವ್ಯತ್ಯಾಸಗಳ ಆಧಾರದ ಮೇಲೆ 'ತುಳು ಲಿಪಿ' ಎಂದು ಹೆಸರಿಸುವುದು ತಪ್ಪಾಗದು." ಡಾ. ಕೆ. ವಿ. ರಮೇಶ ; "ಅನಂತಪುರದ ತುಳು ಶಾಸನ" 'ತುಳುವ' ರಾಗೋ ಪೈ ಸಂಶೋಧನ ಕೇಂದ್ರ, ಉಡುಪಿ; ಸಂಪುಟ 1, ಸಂಚಿಕೆ 4; 1980. ಈ ಹೇಳಿಕೆಗೆ ಪೋಷಕವಾಗಿ ಶಾಸನದಿಂದ ಕೆಲವು ನಿದರ್ಶನಗಳನ್ನು ಕೊಡಲಾಗಿದೆ. ಈ ಶಾಸನವು ಕಾಸರಗೋಡಿನಲ್ಲಿ ಸಿಕ್ಕಿರುವುದು ಮತ್ತು ಈ ಲಿಪಿಯು ಮಲೆಯಾಳಂ ಲಿಪಿಯನ್ನು ಬಹುಮಟ್ಟಿಗೆ ಹೋಲುವುದು – ಈ ಕಾರಣಗಳಿಂದ 'ತುಳು ಲಿಪಿ'ಯನ್ನು ನಿರ್ವಿವಾದವಾಗಿ ಸ್ಥಾಪಿಸುವುದು ತೊಡಕಾಗಿದೆ.

2 Bh. Krishnamurty, "Telugu Verbal Bases : A Comparative and Descriptive Study." Berkely & Los Angels : University of California Press, 1961

3 Emeneau, M. B., "The South Dravidian Languagen" JAOS 87:365-413.

4 Subramanyam, P.S., "Position of Tulu in Dravidian." II-Vol. 29. Katre Felicitation Volume Part I, pp. 47-66.

(೧) ಕನ್ನಡ ಭಾಷೆಗೆ ಸಿಕ್ಕಿದಂತೆ ತುಳುವಿಗೆ ಪ್ರಾರಂಭದಿಂದಲೂ ರಾಜಾಶ್ರಯ ಸಿಕ್ಕದೆ ಇರುವುದು.

(೨) ಸಾಹಿತ್ಯಿಕ ಬರವಣಿಗೆಗಳಿಗಾಗಿ ತುಳುಭಾಷೆಗೆ ಲಿಪಿ ಇಲ್ಲದಿರುವುದು. ತುಳುನಾಡನ್ನು ಐತಿಹಾಸಿಕವಾಗಿ ಆಳಿದ ಅರಸರಾದ ಅಳುಪರು, ಹೊಯ್ಸಳರು, ವಿಜಯನಗರದವರು ಕನ್ನಡ ಅರಸರಾಗಿದ್ದ ಕಾರಣ, ಅವರು ಕನ್ನಡವನ್ನೇ ತಮ್ಮ ಆಡಳಿತ ಭಾಷೆಯನ್ನಾಗಿ ಬಳಸಿದರು. ಬಂಗರು, ಚೌಟರು, ಅಜಲರು ಮುಂತಾದ ಕೆಲವು ಸ್ಥಳೀಯ ಜೈನ ಅರಸರು ತುಳುವರಾಗಿದ್ದರೂ ಅವರ ಚಕ್ರವರ್ತಿಗಳು ಕನ್ನಡದವರಾಗಿದ್ದ ಕಾರಣ, ತುಳುನಾಡಿನಲ್ಲಿ ಕನ್ನಡವೇ ಆಡಳಿತ ಭಾಷೆಯಾಗಿತ್ತು; ಶಾಸನಗಳೆಲ್ಲವೂ ಕನ್ನಡದಲ್ಲೇ ರಚನೆಯಾದುವು. ತುಳುವು ಗ್ರಂಥ ಸ್ವರೂಪದಲ್ಲಿ ಕಾಣಿಸಿಕೊಳ್ಳಲು ಅವಕಾಶವಾಗಲಿಲ್ಲ.

ಸಾಮಾಜಿಕವಾಗಿ ತುಳುಭಾಷೆಯಲ್ಲಿ ಕೆಲವು ಪ್ರಮುಖ ಉಪಭಾಷೆಗಳು ಕಾಣಿಸುತ್ತವೆ. ಬ್ರಾಹ್ಮಣ ತುಳು ಮತ್ತು ಬ್ರಾಹ್ಮಣೇತರ ತುಳು ಎಂಬ ಸ್ಥೂಲವಾದ ಎರಡು ಪ್ರಕಾರಗಳು ಸ್ಪಷ್ಟವಾಗಿವೆ. ಬ್ರಾಹ್ಮಣೇತರ ತುಳುವಿನಲ್ಲಿ ಜಾತಿ ಆಧಾರದ ಮೇಲೆ ಭಿನ್ನ ಉಪಭಾಷೆಗಳನ್ನು ಗುರುತಿಸಬಹುದು. ಸ್ವೀಕರಣಕ್ಕೆ ಬಹಳ ಕಡಿಮೆ ಒಳಗಾದ 'ಹೊಲೆಯರ ತುಳು' ಪ್ರತ್ಯೇಕವಾಗಿಯೇ ನಿಲ್ಲುತ್ತದೆ.

ತುಳು ಭಾಷೆಯ ಧ್ವನಿಮಾ ವ್ಯವಸ್ಥೆಯಲ್ಲಿ ಉಚ್ಚಾರಣೆ ಮತ್ತು ಅರ್ಥದ ದೃಷ್ಟಿಯಿಂದ ಸ್ಪಷ್ಟವಾಗಿ ಭಿನ್ನತೆ ಇರುವ ಎರಡು ಸ್ವರಗಳು ಇವೆ. (೧) ಎ್ - lower mid, front, unrounded. ಎ - mid, front, unrounded.

ಉದಾ: ಪೋಯ್ (=ಹೋದೆನು). ಪೋಯೇ (=ಹೋದನು).

(೨) ಉ್ - unrounded. ಉ - rounded.

ಉದಾ: ಪರು್ಂದ್ (=ಹಣ್ಣು). ಪರುಂದು (=ಹಣ್ಣಾದೀತು).

ಈ ವ್ಯತ್ಯಾಸಗಳು ಕನ್ನಡಕ್ಕಿಂತ ತುಳುವಿನಲ್ಲಿ ಸ್ಪಷ್ಟವಾಗಿರುವುದರಿಂದ ತುಳುವನ್ನು ಬರಹದಲ್ಲಿ ಓದಲು ಮತ್ತು ಅರ್ಥಮಾಡಿಕೊಳ್ಳಲು ಸಾಕಷ್ಟು ಅಭ್ಯಾಸ ಬೇಕಾಗುತ್ತದೆ. 'ಉ್'ವಿನ ಬದಲು ಸಾಮಾನ್ಯವಾಗಿ ಬರೆಹದಲ್ಲಿ 'ವ್' ಅನ್ನು ಬಳಸುವ ರೂಢಿ ಇದೆ.

### ತುಳುವಿನ ಕೆಲವು ವೈಶಿಷ್ಟ್ಯಗಳು

೧) ತುಳುವಿನಲ್ಲಿ ಮಾನವೇತರ ಬಹುವಚನ ಪ್ರತ್ಯಯಗಳು ಇವೆ: ಕುಳು, ಳು.

೨) ತುಳುವಿನಲ್ಲಿ ನಿಷೇಧಾರ್ಥಕ ಪ್ರತ್ಯಯ - ಲಯ, ಇದು ಕ್ರಿಯಾಧಾತುವಿಗೆ ಕಾಲವಾಚಕ ಪ್ರತ್ಯಯ ಸೇರಿದ ನಂತರ, ಪುರುಷವಾಚಕ ಪ್ರತ್ಯಯ ಸೇರುವ ಮೊದಲು ಸೇರುತ್ತದೆ.

೩) ಮೂಲದ್ರಾವಿಡ*ನಜ್ 'ಮತ್ತು*ಜ್'ಗಳು ತುಳುವಿನಲ್ಲಿ'-ಂಜ್ 'ಮತ್ತು' 'ಜ್'ಗಳಾಗಿ ಬದಲಾಗುತ್ತವೆ.

೪) ತುಳುವಿನಲ್ಲಿ ನಾಲ್ಕು ವಿಧದ ಕೃದಂತ ವಿಶೇಷಣ ರೂಪಗಳು ಕಂಡುಬರುತ್ತವೆ. ಸಮೀಪವರ್ತಿ ಭೂತ ಕೃದಂತ, ದೂರವರ್ತಿ ಭೂತ ಕೃದಂತ, ವರ್ತಮಾನ ಕೃದಂತ, ನಿಷೇಧಾರ್ಥಕ ಕೃದಂತ.

೫) ತುಳುವಿನಲ್ಲಿ ಮೂಲದ *ಇ ಮತ್ತು *ಎಗಳ ಹಿಂದೆ ಉಭಯೋಷ್ಠ್ಯ ವ್ಯಂಜನವೂ ಮುಂದೆ ಮೂರ್ಧನ್ಯ ವ್ಯಂಜನವೂ ಬಂದಾಗ *ಇ ಮತ್ತು *ಎಗಳು 'ಉ' ಮತ್ತು 'ಒ'ಗಳಾಗಿ ಬದಲಾಗುತ್ತವೆ.

೬) ಮೂಲದ ಪದಾಂತ್ಯದ *ವಕಾರವು ತುಳುವಿನಲ್ಲಿ (ಕನ್ನಡ ಕೊಡವಗಳಲ್ಲಿ ಕೂಡಾ) ಬಕಾರವಾಗಿ ಬದಲಾಗುತ್ತದೆ

೭) ತುಳುವಿನಲ್ಲಿ ಅನುನಾಸಿಕ ಧ್ವನಿಗಳ ಬಳಕೆಯು ಕನ್ನಡಕ್ಕಿಂತ ಭಿನ್ನವಾಗಿದೆ. ಕನ್ನಡದಲ್ಲಿ ಕಾಣಿಸದ ಪದಾದಿಯು ಞ ಕಾರ, ದ್ವಿತ್ವ ಜ, ಞ ಅನುನಾಸಿಕಗಳ ಉಚ್ಚಾರಣೆ ತುಳುವಿನ ವಿಶೇಷವಾಗಿದೆ.

ಉದಾ : ಞಕ್ಕ, ಕಜ್ಜಣ, ತಞ್ಞಣ, ಬಜ್ಜ, ಬೆಞ್ಞಣ, ಕಿಞ್ಞ, ಕುಜ್ಞಣ್ಣೆ ಕಿಞ್ಞಣ್ಣೆ, ಞೋಳಿ, ಮಞ್ಞಣೆ — ಇತ್ಯಾದಿ.

ತುಳುಜನಪದ ಸಾಹಿತ್ಯದ ಆಧಾರದ ಮೇಲೆ ತುಳು ಭಾಷೆಯ ಸ್ವರೂಪವನ್ನು ಭಾಷಾ ವಿಜ್ಞಾನ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲು ಅವಕಾಶವಿದೆ. ತುಳು ಪಾಡ್ದನಗಳ ಭಾಷಾವೈಜ್ಞಾನಿಕ ಅಧ್ಯಯನ ತೀರ ಅವಶ್ಯವಾಗಿ ಆಗಬೇಕಾದ ಕಾರ್ಯ.

# ೨ ತುಳುನಾಡಿನ ಐತಿಹಾಸಿಕ ಹಿನ್ನೆಲೆ

ತುಳುನಾಡಿನಲ್ಲಿ ಮನುಷ್ಯರ ಆರಂಭ ಎಂದಿನಿಂದ ಆಯಿತು ಎನ್ನುವುದಕ್ಕೆ ಸ್ಪಷ್ಟವಾದ ಆಧಾರಗಳು ಇಲ್ಲ. ಪಶ್ಚಿಮ ಘಟ್ಟದ ಕೆಳಗೆ ಕರಾವಳಿ ಪ್ರದೇಶದಲ್ಲಿ ದಟ್ಟವಾದ ಅರಣ್ಯಗಳು ಇದ್ದಿರಬಹುದು. ಅಂತಹ ಕಾಡುಗಳನ್ನು ಕಡಿದು ವಾಸಯೋಗ್ಯವನ್ನಾಗಿ ಮಾಡಬೇಕಾದರೆ ಕಬ್ಬಿಣದ ಕೊಡಲಿಯಂತಹ ಲೋಹದ ಆಯುಧಗಳು ಅಗತ್ಯ. ಆದ್ದರಿಂದ ಪ್ರಸಿದ್ಧ ಪುರಾತತ್ವ ಸಂಶೋಧಕ 'ರಾಬರ್ಟ್ ಬ್ರೂಸ್‌ಫುಟಿ' ಅವರ ಅಭಿಪ್ರಾಯದಂತೆ ತುಳುನಾಡಿನ ಆದಿಮಾನವನು ಲೋಹ ಯುಗ (Iron age)ಕ್ಕೆ ಸೇರಿದವನಾಗಿರಬಹುದು. ತುಳುನಾಡನ್ನು 'ಪರಶುರಾಮ ಕ್ಷೇತ್ರ' ಎಂದು ಐತಿಹ್ಯದ ಮೂಲಕ ಕರೆಯುವಾಗಲೂ ಈ ಅರ್ಥ ಕಾಣಿಸುತ್ತದೆ. ಈ ದೃಷ್ಟಿಯಿಂದ ತುಳುನಾಡಿನಲ್ಲಿ ಮಾನವನ ಇತಿಹಾಸವು ಸುಮಾರು ೩೦೦೦ ವರ್ಷಗಳ ಹಿಂದೆ ಪ್ರಾರಂಭವಾಯಿತು ಎಂದು ತುಳುನಾಡಿನ ಇತಿಹಾಸಕಾರರು ಅಭಿಪ್ರಾಯ ಪಡುತ್ತಾರೆ.

ತುಳುನಾಡಿನ ಇತಿಹಾಸ ರಚನೆಗೆ ಅಗತ್ಯವೆನಿಸುವ ಆಧಾರಗಳು – ೧. ಶಾಸನಗಳು. ೨. ಸಾಹಿತ್ಯ. ೩. ವಿದೇಶ ಪ್ರವಾಸಿಗರ ಬರಹಗಳು. ಪುರಾತನವಸ್ತು ಸಂಶೋಧನೆಯ ದೃಷ್ಟಿಯಿಂದ ತುಳುನಾಡಿನಲ್ಲಿ ಯಾವುದೇ ಕೆಲಸ ಆಗಿಲ್ಲ. ಈಗ ಸಿಗುವ ಆಧಾರಗಳಲ್ಲಿ ಶಾಸನಗಳೇ ಅತ್ಯಂತ ಪ್ರಬಲವಾದ ಮತ್ತು ವಿಶ್ವಸನೀಯವಾದ ಸಾಮಗ್ರಿಗಳು.

**ಶಾಸನಗಳು**

ಕ್ರಿ.ಶ. ೭ನೆಯ ಶತಮಾನದ ಮಧ್ಯಭಾಗದಿಂದ ಕ್ರಿ.ಶ. ೧೮ನೆಯ ಶತಮಾನದ ಕೊನೆಯವರೆಗಿನ ೧೧ ಶತಮಾನಗಳಿಗೂ ಹೆಚ್ಚಿನ ದೀರ್ಘ ಅವಧಿಯ ತುಳುನಾಡಿನ ಇತಿಹಾಸವನ್ನು ಪುನಾರಚಿಸುವಲ್ಲಿ ಶಾಸನಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಆ ಶತಮಾನಗಳ ಅವಧಿಯಲ್ಲಿ ತುಳುನಾಡಿನ ಉದ್ದಕ್ಕೂ ಹುಟ್ಟಿಕೊಂಡ ಹಲವು ನೂರು ಶಿಲಾ ಮತ್ತು ತಾಮ್ರ ಶಾಸನಗಳು ಈಗಾಗಲೇ ಪ್ರಕಟವಾಗಿವೆ. ಈವರೆಗೆ ತುಳುನಾಡಿನಲ್ಲಿ ದೊರೆತಿರುವ ಶಾಸನಗಳ ಪೈಕಿ ಕ್ರಿ.ಶ. ೭ನೇ ಶತಮಾನದ ವಡ್ಡರ್ಸೆಯ ಶಾಸನವು ಅತ್ಯಂತ ಪ್ರಾಚೀನವಾದುದು. ಇದು ಒಂದನೆಯ ಆಳುವರಸನ ಕಾಲಕ್ಕೆ ಸಂಬಂಧಪಟ್ಟ ಒಂದು ದಾನ ಶಾಸನ. ಈ ಶಾಸನಗಳ ಆಧಾರದ ಮೇಲೆ ತುಳುನಾಡಿನ ಇತಿಹಾಸವನ್ನು ಸಾಕಷ್ಟು ಸಮರ್ಪಕವಾಗಿ ರೂಪಿಸಿದ್ದಾರೆ. ತುಳುನಾಡಿನ ಇತಿಹಾಸವನ್ನು ಈಗ ಈ ರೀತಿಯಲ್ಲಿ ಸ್ಥೂಲವಾಗಿ ಗುರುತಿಸುತ್ತಾರೆ. ೧. ಪ್ರಾಚೀನ ತುಳುನಾಡು ೨. ಪ್ರಾಚೀನ ಆಳುಪರು. ೩. ಮಧ್ಯಯುಗೀನ ಆಳುಪರು. ೪. ವಿಜಯನಗರ ಕಾಲದ ತುಳುನಾಡು, ೫. ಕೆಳದಿಯ ನಾಯಕರ ತುಳುನಾಡು. ೬. ಹೈದರಾಲಿ–ಟಿಪ್ಪು ಸುಲ್ತಾನರ ಕಾಲದ ತುಳುನಾಡು,

೬. ಐರೋಪ್ಯರ ಆಳ್ವಿಕೆಯಲ್ಲಿ ತುಳುನಾಡು. ಸ್ಥಳೀಯ ಅರಸುಮನೆತನಗಳ ಆಶ್ರಯದಲ್ಲಿಯೂ ೧೩ನೇ ಶತಮಾನದ ಬಳಿಕ ತುಳುನಾಡು ಕಾಣಿಸುತ್ತದೆ.

**ಪ್ರಾಚೀನ ತುಳುನಾಡು**

ಶಾಸನಗಳು ದೊರೆಯುವುದಕ್ಕಿಂತ ಹಿಂದಿನ ತುಳುನಾಡನ್ನು ಪ್ರಾಚೀನ ತುಳುನಾಡು ಎಂದು ಇತಿಹಾಸಕಾರರು ಕರೆದಿದ್ದಾರೆ. ಕ್ರಿ.ಪೂ. ೩ನೇ ಶತಮಾನದ ಅಶೋಕನ ಶಿಲಾ ಲಿಪಿಗಳಲ್ಲಿ ಕಾಣಿಸುವ 'ಸತಿಯ ಪುತ್ರ' ಎಂಬ ನಾಡಿನ ಹೆಸರನ್ನು ಕುರಿತು ವಿದ್ವಾಂಸರು ಬಗೆ ಬಗೆಯಾಗಿ ಚರ್ಚಿಸಿದ್ದಾರೆ. ಈ 'ಸತಿಯ ಪುತ್ರ' ಎಂಬ ಪದವು ತುಳುನಾಡನ್ನು ಕುರಿತು ಹೇಳಿರಬೇಕು ಎಂಬ ಅಭಿಪ್ರಾಯವು ಅನೇಕರಲ್ಲಿ ದೊರೆಯುತ್ತದೆ. ಕ್ರಿ. ಶ. ಮೊದಲ ಮೂರು ಶತಮಾನಗಳಲ್ಲಿ ರಚಿತವಾಗಿದೆ ಎಂದು ಭಾವಿಸಲಾಗಿರುವ ತಮಿಳಿನ ಸಂಘಂ ಕಾಲದ ಪದ್ಯಗಳಲ್ಲಿ ತುಳುನಾಡಿನ ಉಲ್ಲೇಖವಿದೆ. ಇಲ್ಲಿ ತುಳುನಾಡಿನ 'ಕೋಶರ' ಎಂಬ ಜನಾಂಗವನ್ನು ಪ್ರಸ್ತಾಪಿಸಿದ್ದಾರೆ. ಇವರು ಕ್ರಿ.ಶ. ದ ಆರಂಭದ ಶತಮಾನಗಳಲ್ಲಿ ತುಳುನಾಡಿನಲ್ಲಿ ಪ್ರಬಲರಾಗಿದ್ದ ಜನಾಂಗ ಎಂದು ಇತಿಹಾಸಕಾರ ಡಾ. ಕೆ.ವಿ. ರಮೇಶ್ ಹೇಳುತ್ತಾರೆ. ಗ್ರೀಸ್ ದೇಶದ ಭೂಗೋಳಶಾಸ್ತ್ರಜ್ಞ ಟಾಲೆಮಿಯು (ಕ್ರಿ. ಶ. ೨ನೇ ಶತಮಾನ) ಭಾರತದ 'ಒಲೊ ಖೊಯ್ರ' ಎಂಬುದು ಕಡಲ್ಗಳ್ಳರ ಕೇಂದ್ರವಾಗಿತ್ತು ಎಂದು ಹೇಳುತ್ತಾನೆ. ಈ 'ಒಲೊ ಖೊಯ್ರವು' 'ಆಳುವಖೇಡ' ಅಂದರೆ ತುಳುನಾಡು ಆಗಿರಬೇಕೆಂದು ವಿದ್ವಾಂಸರು ಅಭಿಪ್ರಾಯಿಸುತ್ತಾರೆ.

ಕನ್ನಡದ ಮೊತ್ತಮೊದಲನೆಯ ಉಪಲಬ್ಧ ಶಾಸನವಾದ ಹಲ್ಮಿಡಿ ಶಾಸನದಲ್ಲಿ (ಕ್ರಿ.ಶ. ೫ನೇ ಶತಮಾನ) ಕಾಣಿಸುವ 'ಅಳಪಗಣ ನಾಯಂಕ' ಎಂಬ ಪದವುಆಳುಪ ಎಂಬ ಕುಲನಾಮವಾಗಿರಬೇಕು. ಆದ್ದರಿಂದ ಕ್ರಿ.ಶ. ೫ನೇ ಶತಮಾನದ ಹೊತ್ತಿಗೆ ಆಳುಪರು ತುಳುನಾಡನ್ನು ಆಳುತ್ತಿದ್ದಿರಬೇಕು ಎಂದು ಭಾವಿಸಲಾಗಿದೆ.

ಶಾಸನಗಳ ಪೂರ್ವದ ಪ್ರಾಚೀನ ತುಳುನಾಡಿನ ಇತಿಹಾಸವು ಸ್ಪಷ್ಟ ಆಧಾರಗಳು ಇಲ್ಲದೆ ರೂಪಿತವಾಗಿದ್ದರೂ ಸುಮಾರು ಕ್ರಿ.ಶ.ದ ಆರಂಭದ ಕಾಲದಿಂದ ತುಳುನಾಡು ಅಸ್ತಿತ್ವದಲ್ಲಿ ಇತ್ತು ಎನ್ನುವುದಕ್ಕೆ ಕೆಲವಾದರೂ ಆಧಾರಗಳು ದೊರೆಯುತ್ತವೆ.

**ಆಳುಪರು**

ತುಳುನಾಡನ್ನು ಆಳಿದ ಮೊದಲನೆಯ ಜನಾಂಗ ಆಳುಪರು ಎಂಬುದು ಶಾಸನಗಳ ಆಧಾರದಿಂದ ಸ್ಪಷ್ಟವಾಗುವ ವಿಚಾರ. ಕ್ರಿ.ಶ. ೬೫೦ ರ ಕಾಲದ ಒಂದನೆಯ ಆಳ್ವರಸನಿಂದ ಈ ಆಳ್ವಿಕೆ ಸ್ಪಷ್ಟವಾಗಿ ಕಾಣಿಸುತ್ತದೆ. ಈ ಆಳುಪರ ಆಳ್ವಿಕೆ ತುಳುನಾಡಿನಲ್ಲಿ ಕ್ರಿ.ಶ. ೧೪ನೇ ಶತಮಾನದ ಕೊನೆವರೆಗೆ, ಅಂದರೆ ೧,೨೦೦ ವರ್ಷಗಳ ಕಾಲ ಸುದೀರ್ಘವಾಗಿ ನಡೆಯುತ್ತದೆ.

ಪ್ರಾಚೀನ ಆಳುಪರ ಪೈಕಿ ಮೊದಲ ಎರಡು ರಾಜರ ಕಾಲದಲ್ಲಿ (ಅಂದರೆ ಒಂದನೆಯ ಆಳ್ವರಸ ಮತ್ತು ಒಂದನೆಯ ಚಿತ್ರವಾಹನ) ಈಗಿನ ದಕ್ಷಿಣ ಕನ್ನಡ ಜಿಲ್ಲೆ (ಅದನ್ನು ತುಳುನಾಡು ಎಂದು ಕರೆಯುತ್ತಿದ್ದರು) ಮಾತ್ರವಲ್ಲದೆ ಪೊಂಬುಚ್ಚ ಪ್ರದೇಶ ಮತ್ತು ಕದಂಬ ಮಂಡಲ ಇವು ತುಳುನಾಡಿನ ವ್ಯಾಪ್ತಿಗೆ ಸೇರಿದ್ದುವು. ಇವರ ಆಳ್ವಿಕೆಯಲ್ಲಿ ತುಳುನಾಡಿನ ಮಂಗಳಪುರ (ಈಗಿನ ಮಂಗಳೂರು), ಪೊಂಬುಚ್ಚ ಪ್ರದೇಶದ ಪೊಂಬುಚ್ಚಪುರ ಮತ್ತು ಕದಂಬ ಮಂಡಲದ ಬನವಾಸಿ – ಇವು ಆಳುಪರ ಮೂರು ಪ್ರಧಾನ ರಾಜಧಾನಿಗಳಾಗಿದ್ದುವು. ೨ನೆಯ ಆಳುವರಸನ ಕಾಲದಲ್ಲಿ ಆಳುಪರು ಕದಂಬ ಮಂಡಲವನ್ನು ಕಳೆದುಕೊಂಡರು. ಆ ಬಳಿಕ ಉದಯಪುರವು

(ಈಗಿನ ಉದ್ಯಾವರ) ಆಳುಪರ ಪ್ರಧಾನ ರಾಜಧಾನಿ ಆಗಿತ್ತು. ಮಧ್ಯಯುಗೀನ ಆಳುಪರು ಪೊಂಬುಚ ಪ್ರದೇಶವನ್ನು ಕಳೆದುಕೊಂಡರು. ಇವರ ಕಾಲದಲ್ಲಿ ಮಂಗಳಪುರ (ಮಂಗಳೂರು) ಮತ್ತು ಬಾರಹ ಕನ್ಯಾಪುರ (ಈಗಿನ ಬಾರಕೂರು) ಆಳುಪರ ರಾಜಧಾನಿಗಳಾಗಿದ್ದುವು. ಕ್ರಿ.ಶ, ೧೪ನೇ ಶತಮಾನದ ಪೂರ್ವಾರ್ಧದಲ್ಲಿ ತುಳುನಾಡನ್ನು ವಶಪಡಿಸಿಕೊಂಡ ಹೊಯ್ಸಳರು ಮತ್ತು ವಿಜಯನಗರದವರು ಬಾರಕೂರನ್ನೇ ತುಳುನಾಡಿನ ಕೇಂದ್ರ ಸ್ಥಾನವನ್ನಾಗಿ ಮಾಡಿಕೊಂಡರು, ಆಳುಪರ ಕೊನೆಯ ದಿನಗಳಲ್ಲಿ ಮೂಡಬಿದರೆಯು ಆಳುಪರ ರಾಜಧಾನಿಯಾಗಿತ್ತು.

ಆಳುಪರು ಸೋಮವಂಶದವರು. ಮೀನ ಲಾಂಛನದವರು. ಅವರು ಶೈವಧರ್ಮವನ್ನು ಅನುಸರಿಸುತ್ತಿದ್ದರು, ತುಳುನಾಡಿನ ಪ್ರಾಚೀನ ಇತಿಹಾಸದಲ್ಲಿ ರಾಜ ಮನೆತನದಲ್ಲಿ ಶೈವಧರ್ಮವು ಮಾತ್ರ ಆಚರಣೆಯಲ್ಲಿತ್ತು. ಜೈನಧರ್ಮದ ಪ್ರಸ್ತಾಪವನ್ನು ಕೂಡಾ ಆ ಕಾಲದಲ್ಲಿ ನಾವು ಕಾಣಬಹುದು, ೧೩ನೇ ಶತಮಾನದ ಶಾಸನಗಳಲ್ಲಿ ವೈಷ್ಣವ ಧರ್ಮದ ಉಲ್ಲೇಖವಿದೆ. ಆಳುಪರು ಕನ್ನಡ ರಾಜರಾಗಿದ್ದರು. ಆದ್ದರಿಂದ ಅವರ ಕಾಲದ ಎಲ್ಲಾ ಶಾಸನಗಳು ಕನ್ನಡ ಅಥವಾ ಸಂಸ್ಕೃತ ಭಾಷೆಯಲ್ಲಿವೆ. ಆಳುಪರ ಕಾಲಕ್ಕೆ ಸೇರಿದ ಸುಮಾರು ೫೦ ಶಾಸನಗಳು ಪ್ರಕಟವಾಗಿವೆ. ಈ ಶಾಸನಗಳು ಉಡುಪಿ, ಮಂಗಳೂರು, ಕಾರ್ಕಳ, ಕುಂದಾಪುರ, ಕಾಸರಗೋಡು ತಾಲೂಕುಗಳಲ್ಲಿ ದೊರೆಯುತ್ತವೆ. ತುಳು ಭಾಷೆ ಅಥವಾ ಸಾಹಿತ್ಯದ ಉಲ್ಲೇಖ ಎಲ್ಲಿಯೂ ಸಿಕ್ಕುವುದಿಲ್ಲ,

ಮಧ್ಯಯುಗೀನ ಆಳುಪರ ಕೊನೆಯ ದಿನಗಳಲ್ಲಿ ಅಂದರೆ ೧೩೩೩ ರಿಂದ ೧೩೪ ರವರೆಗಿನ ಅವಧಿಯಲ್ಲಿ ಹೊಯ್ಸಳರು ತುಳುನಾಡನ್ನು ಆಳುತ್ತಾರೆ. ಈ ಕಾಲದಲ್ಲಿ ವೈಷ್ಣವ ಧರ್ಮ ಮತ್ತು ಜೈನಧರ್ಮ ತುಳುನಾಡಿನಲ್ಲಿ ಸ್ಪಷ್ಟವಾಗಿ ಕಾಣಿಸುತ್ತದೆ.

**ವಿಜಯನಗರ ಕಾಲದ ತುಳುನಾಡು**

ಕ್ರಿ.ಶ.೧೩೪೫ರಲ್ಲಿ ತುಳುನಾಡು ಪ್ರಬಲವಾಗುತ್ತಿದ್ದ ವಿಜಯನಗರ ಸಾಮ್ರಾಜ್ಯದೊಂದಿಗೆ ವಿಲೀನವಾಯಿತು. ೧೪ನೇ ಶತಮಾನದ ಕೊನೆಯವೇಳೆಗೆ ಆಳುಪರ ಆಳ್ವಿಕೆ ಮುಕ್ತಾಯವಾದಾಗ ವಿಜಯನಗರ ಸಾಮ್ರಾಟರು ತುಳುನಾಡಿನ ಪರಮಾಧಿಕಾರಿಗಳಾದರು. ವಿಜಯನಗರದ ಅರಸರು ಆಡಳಿತದ ಸೌಕರ್ಯಕ್ಕಾಗಿ ತುಳುನಾಡನ್ನು ಬಾಕೂರು ರಾಜ್ಯ ಮತ್ತು ಮಂಗಳೂರು ರಾಜ್ಯ ಎಂದು ಎರಡು ವಿಭಾಗ ಮಾಡಿಕೊಂಡರು. ಆ ರಾಜ್ಯಗಳ ಆಡಳಿತವನ್ನು ನೋಡಿಕೊಳ್ಳಲು ತಮ್ಮ ಪರವಾಗಿ ರಾಜ್ಯಪಾಲರುಗಳನ್ನು ನೇಮಿಸಿದರು. ಈ ರಾಜ್ಯಪಾಲರುಗಳು ವಿಜಯನಗರದವರ ಪರವಾಗಿ ತುಳುನಾಡನ್ನು ಆಳುತ್ತಿದ್ದರು, ಈ ಆಳ್ವಿಕೆಗೆ ಸಂಬಂಧಪಟ್ಟಂತೆ ಅನೇಕ ಶಿಲಾ ಮತ್ತು ತಾಮ್ರ ಶಾಸನಗಳು ತುಳುನಾಡಿನಲ್ಲಿ ದೊರೆತಿವೆ. ಈ ಶಾಸನಗಳು ಅಧ್ಯಯನದಿಂದ ತುಳುನಾಡಿನ ಜನಜೀವನದಲ್ಲಿ ಎಲ್ಲ ಯುಗಗಳಲ್ಲಿಯೂ ಆದ ಮುಖ್ಯ ಬೆಳವಣಿಗೆಗಳನ್ನು ಮತ್ತು ಬದಲಾವಣೆಗಳನ್ನು ತಿಳಿದುಕೊಳ್ಳಬಹುದು.

ವಿಜಯನಗರ ಅರಸರ ಕಾಲದ ತುಳುನಾಡಿನಲ್ಲಿ ಅನೇಕ ಸಣ್ಣಪುಟ್ಟ ಪ್ರಾಂತ್ಯಗಳು ಹುಟ್ಟಿ ಸಣ್ಣಪುಟ್ಟ ಅರಸು ಮನೆತನಗಳು ತಲೆ ಎತ್ತಿದವು. ಅವುಗಳ ಪೈಕಿ ಕಳಸ–ಕಾರ್ಕಳ, ಹಾಡುವಳ್ಳಿ, ನಗಿರೆ, ಚೌಟ, ಬಂಗ, ಅಜಿಲ, ಹೆಗ್ಗಡೆ, ಸಾಮಂತ ಮೊದಲಾದ ಮನೆತನಗಳು ಸಾಕಷ್ಟು ಪ್ರಾಬಲ್ಯವನ್ನು ಪಡೆದಿದ್ದವು. ಈ ಅರಸು

ಮನೆತನಗಳಲ್ಲಿ ಹೆಚ್ಚಿನವು ಜೈನ ಧರ್ಮಕ್ಕೆ ಸೇರಿದ್ದುವು. ಈ ಅರಸರು ಅಳಿಯ ಸಂತಾನ ಕಟ್ಟಿನ ಪದ್ಧತಿಯನ್ನು ಅನುಸರಿಸುತ್ತಿದ್ದರು. ಅವರೆಲ್ಲರೂ ವಿಜಯನಗರ ಸಾಮ್ರಾಟರ ಸಾಮಂತರಾಗಿದ್ದರೂ ಅವರಿಗೂ ವಿಜಯನಗರ ದವರಿಗೂ ಆಗಾಗ ಘರ್ಷಣೆಗಳು ನಡೆಯುತ್ತಿದ್ದವು. ಈ ಸ್ಥಳೀಯ ಅರಸರ ಪ್ರಭಾವದಿಂದಾಗಿ ತುಳುನಾಡಿನಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದಂತೆ ವಿಶೇಷವಾದ ನಿರ್ಮಾಣ, ಜೀರ್ಣೋದ್ಧಾರ, ದಾನಕಾರ್ಯಗಳು ನಡೆದಿರುವು ದನ್ನು ಶಾಸನಗಳು ಹೇಳುತ್ತವೆ. ಮೂಡಬಿದರೆ, ಕಾರ್ಕಳ, ವೇಣೂರು ಮುಂತಾದ ಜೈನ ಕೇಂದ್ರಗಳಲ್ಲಿ ಈ ಅರಸು ಮನೆತನಗಳ ಶಾಸನಗಳು ಅಧಿಕ ಸಂಖ್ಯೆಯಲ್ಲಿ ಸಿಗುತ್ತವೆ.

ವಿಜಯನಗರದ ಅರಸರ ಕಾಲದಲ್ಲಿ ಜೈನ ಮತ್ತು ವೈಷ್ಣವ ಧರ್ಮಗಳು ಶೈವ ಧರ್ಮದಷ್ಟೆ ಪ್ರಾಧಾನ್ಯ ವನ್ನು ಗಳಿಸಿಕೊಂಡಿದ್ದವು. ಕ್ರಿ.ಶ. ೧೩ನೆಯ ಶತಮಾನದ ಉತ್ತರಾರ್ಧದಲ್ಲಿ ತುಳುನಾಡಿನಲ್ಲಿ ದ್ವೈತ ಮತ ಸ್ಥಾಪನಾಚಾರ್ಯರಾದ ಮಧ್ವಾಚಾರ್ಯರ ಪ್ರಭಾವದಿಂದ ವೈಷ್ಣವ ಧರ್ಮವು ಹೊಸರೂಪ ಪಡೆಯಿತು. ೧೪ನೇ ಶತಮಾನದ ಉತ್ತರಾರ್ಧದಲ್ಲಿ ತುಳುನಾಡಿನ ಶಾಸನಗಳಲ್ಲಿ ಕೃಷ್ಣ ಮಠದ ಉಲ್ಲೇಖ ದೊರೆಯುತ್ತದೆ. ೦

ಕ್ರಿ.ಶ. ೧೫೫೧ರಲ್ಲಿ ಸದಾಶಿವರಾಯನು ವಿಜಯನಗರದ ಸಾಮ್ರಾಟನಾಗಿದ್ದಾಗ ಬಾರಕೂರು ರಾಜ್ಯದ ಆಡಳಿತವನ್ನು ಏಕದಳಖಾನ ಎಂಬ ಮುಸ್ಲಿಂ ರಾಜ್ಯಪಾಲನು ನೋಡಿಕೊಳ್ಳುತ್ತಿದ್ದನು, ವಿಜಯನಗರದ ಕಾಲ ದಲ್ಲಿ ತುಳುನಾಡಿನ ಅಧಿಕಾರಿಗಳು ಪರ್ಶಿಯಾ ಮತ್ತು ಅರಬ್ ದೇಶಗಳಿಂದ ಜಾತಿ ಕುದುರೆಗಳನ್ನು ಆಮದು ಮಾಡಿಕೊಳ್ಳಲು ಮಂಗಳೂರು, ಬಾರಕೂರು ಮೊದಲಾದ ಬಂದರುಗಳನ್ನು ಉಪಯೋಗಿಸುತ್ತಿದ್ದರು. ಆ ಕಾಲ ದಲ್ಲಿ ತುಳುನಾಡಿನಲ್ಲಿ ಬಾರಕೂರು, ಬಸರೂರು, ಮೂಡಬಿದರೆ, ವೇಣೂರು ಮುಂತಾದುವುಗಳು ಪ್ರಧಾನ ವಾಣಿಜ್ಯ ಪಟ್ಟಣಗಳಾಗಿದ್ದವು.

**ಕೆಳದಿಯ ನಾಯಕರ ಆಳ್ವಿಕೆಯಲ್ಲಿ ತುಳುನಾಡು**

ಕ್ರಿ.ಶ. ೧೫೬೫ರಲ್ಲಿ ರಕ್ಕಸತಂಗಡಿಯ ಯುದ್ಧದಲ್ಲಿ ವಿಜಯನಗರ ಸಾಮ್ರಾಜ್ಯವು ನಾಶವಾದ ಮೇಲೆ ತುಳುನಾಡು ಕೆಳದಿಯ ನಾಯಕರ ನೇರ ಆಳ್ವಿಕೆಗೆ ಒಳಗಾಯಿತು.

ಇಕ್ಕೇರಿಯ ಅರಸರ ಕಾಲದಲ್ಲಿ ಅನೇಕ ಕೋಟೆಗಳನ್ನು ಕಟ್ಟಿಸಿದರು. ರಾಮರಾಜ ಕ್ಷತ್ರಿಯ (ಕೋಟೆ ಯವರು) ಎಂಬ ಜನಾಂಗವನ್ನು ತುಳುನಾಡಿಗೆ ತಂದರು. ಆ ಕಾಲದಲ್ಲಿ ಕೆಲಸ ಮಾಡಲು ತಮಿಳರು ಬಂದಿದ್ದರು ಎಂದು ತಿಳಿಯುತ್ತದೆ. ಶಿವಪ್ಪನಾಯಕನ ಕಾಲದಲ್ಲಿ ಕಂದಾಯ ವ್ಯವಸ್ಥೆಯು ಬಹಳ ಕ್ರಮಬದ್ಧವಾಗಿತ್ತು. ಭೂ ಪ್ರದೇಶದ ವಿಂಗಡನೆ ಸರಕಾರದ ವತಿಯಿಂದ ಕೃಷಿಮಾಡಿಸುವಿಕೆ ಮುಂತಾದ ಪದ್ಧತಿ 'ಶಿವಪ್ಪನಾಯಕನ ಶಿಸ್ತು' ಎಂದು ಆ ಬಳಿಕ ಜನಪ್ರಿಯವಾಯಿತು. ಇಕ್ಕೇರಿ ಅರಸರ ಕಾಲದಲ್ಲಿ ಗೋವೆಯಿಂದ ವೈಷ್ಣವ ಸಾರಸ್ವತರು ತುಳುನಾಡಿಗೆ ಬಂದು ವ್ಯಾಪಾರದಲ್ಲಿ ತೊಡಗುತ್ತಾರೆ, ಇವರೊಂದಿಗೆ ಬಂದ ಸ್ಮಾರ್ತ ಸಾರಸ್ವತರು ತುಳುನಾಡಿನ ಉತ್ತರ ಭಾಗದಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದರು. ೧೭೦೮ ರಲ್ಲಿ ಸ್ಮಾರ್ತ ಸಾರಸ್ವತರು ಚಿತ್ರಾಪುರ ಮಠವನ್ನು ಸ್ಥಾಪಿಸಿದರು.

**ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಕಾಲದ ತುಳುನಾಡು**

ಇಕ್ಕೇರಿಯ ಸಂಸ್ಥಾನವನ್ನು ನಾಶಮಾಡಿದ ಹೈದರಾಲಿ ತುಳುನಾಡನ್ನು ತನ್ನ ವಶಕ್ಕೆ ತೆಗೆದುಕೊಳ್ಳು

ತ್ತಾನೆ. ಹೈದರಾಲಿಯ ಬಲದ ಮುಂದೆ ನಿಲ್ಲಲಾರದ ಬಂಗ, ಚೌಟ, ಅಜಿಲ ಮುಂತಾದ ತುಳುನಾಡಿನ ಅರಸರು ಅವರ ಪ್ರಭುತ್ವವನ್ನು ಒಪ್ಪಿಕೊಳ್ಳುತ್ತಾರೆ. ಈ ಕಾಲಕ್ಕಾಗಲೆ, ತುಳುನಾಡಿನಲ್ಲಿ ಇಂಗ್ಲಿಷರ ಪ್ರಭಾವ ಕಾಣಿಸುತ್ತದೆ. ತುಳುನಾಡಿನಲ್ಲಿ ಕೆಲವು ಕೋಟೆಗಳನ್ನು ಹೈದರನು ಕಟ್ಟಿಸಿದನು ಎಂಬ ಉಲ್ಲೇಖಗಳಿವೆ. ಹೈದರಾಲಿಯ ಬಳಿಕ ಅವನ ಮಗ ಟಿಪ್ಪು ಸುಲ್ತಾನನು (೧೭೮೧ರ ಬಳಿಕ) ತುಳುನಾಡಿನ ಪಟ್ಟಣಕ್ಕೆ ಬರುತ್ತಾನೆ. ಇಂಗ್ಲಿಷರು ಮತ್ತು ಟಿಪ್ಪುವಿನ ನಡುವಿನ ಕಲಹಗಳು ತುಳುನಾಡಿನಲ್ಲಿ ರಾಜಕೀಯ ಅವ್ಯವಸ್ಥೆಯನ್ನು ತರುತ್ತವೆ. ೧೭೯೯ರಲ್ಲಿ ಟಿಪ್ಪು ಮಡಿದಾಗ ಇಂಗ್ಲಿಷರು ಕನ್ನಡ ಜಿಲ್ಲೆಯನ್ನು ತಮ್ಮ ಅಧೀನದಲ್ಲಿ ಇಟ್ಟುಕೊಳ್ಳುತ್ತಾರೆ. ಸುಮಾರು ೩೧ ವರ್ಷಗಳ ಕಾಲ ತುಳುನಾಡು ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಅಧೀನದಲ್ಲಿತ್ತು. ಇವರ ಕಾಲದಲ್ಲಿ ತುಳುನಾಡಿನ ಸ್ಥಳೀಯ ರಾಜರು ತಮ್ಮ ಸ್ವಂತಿಕೆಯನ್ನು ಕಳೆದುಕೊಂಡಿದ್ದರು. ಇಂಗ್ಲಿಷರ ಕಾಲಕ್ಕಾಗುವಾಗ ತುಳುನಾಡು ಸ್ಥಳೀಯ ತುಂಡರಸರಿಂದ ಸಂಪೂರ್ಣ ವಿಮೋಚನೆ ಹೊಂದಿ ಒಂದೇ ಆಡಳಿತಕ್ಕೆ ಒಳಪಟ್ಟಿತು. ಈ ರೀತಿ ತುಳುನಾಡು ಒಂದಾಗುವುದಕ್ಕೆ ಹೈದರಾಲಿ ಟಿಪ್ಪುಸುಲ್ತಾನರ ನಾಶವು ಒಂದು ಕಾರಣವಾಯಿತು. ಕ್ರಿ.ಶ. ೧೮೦೦ ರಲ್ಲಿ ತುಳುನಾಡು ಮದ್ರಾಸ್ ಅಧಿಪತ್ಯಕ್ಕೆ ಸೇರಿತ್ತು, ಇಂಗ್ಲಿಷರ ಆಳ್ವಿಕೆಯಲ್ಲಿ ಕಾರವಾರದಿಂದ ಮಲಬಾರಿನ ಗಡಿಯವರೆಗೆ ಇದ್ದ ಪ್ರದೇಶವು ಕನ್ನಡ ಜಿಲ್ಲೆ ಎಂದು ಕರೆಯಲ್ಪಡುತ್ತಿತ್ತು.

### ತುಳುನಾಡಿನ ಕೆಲವು ಸ್ಥಾನೀಯ ಅರಸು ಮನೆತನಗಳು

ಈಗಾಗಲೇ ಪ್ರಸ್ತಾಪಿಸಿರುವಂತೆ ವಿಜಯನಗರ ಅರಸರ ಕಾಲದಿಂದ ಇಂಗ್ಲಿಷ್ ಸಾಮ್ರಾಜ್ಯದ ಸ್ಥಾಪನೆಯಾಗುವವರೆಗೆ ತುಳುನಾಡಿನಲ್ಲಿ ಅನೇಕ ಸಣ್ಣಪುಟ್ಟ ಸ್ಥಾನೀಯ ಅರಸು ಮನೆತನಗಳು ಕಾಣಿಸಿಕೊಳ್ಳುತ್ತವೆ. ಇವುಗಳಲ್ಲಿ ಹೆಚ್ಚಿನವು ಜೈನಧರ್ಮಕ್ಕೆ ಸೇರಿದ, ಅಳಿಯ ಸಂತಾನ ಪದ್ಧತಿಯನ್ನು ಅನುಸರಿಸುತ್ತಿದ್ದ ಮನೆತನಗಳು. ಕೆಲವೊಂದು ಬಾರಿ ಸ್ವತಂತ್ರವಾಗಿ, ಇನ್ನು ಕೆಲವೊಮ್ಮೆ ಆಶ್ರಿತರಾಗಿ ಚಿಕ್ಕ ಚಿಕ್ಕ ಪ್ರದೇಶಗಳನ್ನು ತಮ್ಮ ಅಂಕೆಗಳಲ್ಲಿ ಇಟ್ಟುಕೊಂಡು ಆಳಿದ ಈ ಅರಸರು ರಾಜಕೀಯ ಇತಿಹಾಸದ ದೃಷ್ಟಿಯಿಂದ ಪ್ರಬಲರಾಗಿ ಕಾಣಿಸುವುದಿಲ್ಲ. ಆದರೆ ಇವರಲ್ಲಿ ಅನೇಕ ಅರಸು ಮನೆತನಗಳು ಮಾತೃಭಾಷೆ ತುಳುವಾಗಿದ್ದ ಕಾರಣ ಮತ್ತು ಇಂದು ಜಿಲ್ಲೆಯಲ್ಲಿ ಕಾಣಿಸುವ ಜನಜೀವನದ ಮೇಲೆ ಈ ಅರಸರ ಭಾಷೆ ಮತ್ತು ಸಂಸ್ಕೃತಿಯ ಪ್ರಭಾವ ಗಾಢವಾಗಿ ಇರುವುದನ್ನು ಗಮನಿಸಿದಾಗ ಸಾಂಸ್ಕೃತಿಕ ಇತಿಹಾಸದ ದೃಷ್ಟಿಯಿಂದ ಈ ಅರಸು ಮನೆತನಗಳು ಬಹಳ ಪ್ರಮುಖಪಾತ್ರವನ್ನು ವಹಿಸುತ್ತವೆ. ತುಳು ಜನಪದ ಸಾಹಿತ್ಯದಲ್ಲಿ ಈ ಕೆಲವು ಅರಸು ಮನೆತನಗಳ ಉಲ್ಲೇಖ ಬಂದಿದೆ. ಬಂಗರು (ಬಂಗವಾಡಿ, ನಂದಾವರ, ಮಂಗಳೂರು), ಚೌಟರು (ಸೋಮೇಶ್ವರ, ಪುತ್ತಿಗೆ), ಅಜಿಲರು (ವೇಣೂರು), ಭೈರರಸರು (ಕಳಸ, ಕಾರ್ಕಳ), ಸಾವಂತರು (ಮೂಲ್ಕಿ) ಮುಂತಾದ ಅರಸು ಮನೆತನಗಳು ಮುಖ್ಯವಾಗಿವೆ. ಬಂಗರು ಕೋಟೆಗಳನ್ನು ಬಸದಿಗಳನ್ನು ಕಟ್ಟಿಸಿದರು. ಚೌಟರು ಅನೇಕ ಕೋಟೆಗಳನ್ನು ಬಸದಿಗಳನ್ನು ನಿರ್ಮಿಸಿದರು. ಮೂಡಬಿದರೆಯ ತ್ರಿಭುವನ ಚೂಡಾಮಣಿ ಚೈತ್ಯಾಲಯ (೧೪೨೯), ಭೈರಾದೇವಿ ಮಂಟಪ (೧೪೫೧) ಇವು ಚೌಟರ ವಿಶೇಷ ರಚನೆಗಳು. ಭೈರರಸರನಾದ ವೀರಪಾಂಡ್ಯದೇವನ ಕಾಲದಲ್ಲಿ ಕಾರ್ಕಳದಲ್ಲಿ ಗೊಮ್ಮಟ ಮೂರ್ತಿಯು ಸ್ಥಾಪನೆಗೊಂಡಿತು (೧೪೩೨). ಅಜಿಲ ಮನೆತನದ ತಿಮ್ಮಣ್ಣಾಜಿಲನು ವೇಣೂರಿನಲ್ಲಿ ಒಂದು ಗೊಮ್ಮಟ ಮೂರ್ತಿಯನ್ನು ಸ್ಥಾಪಿಸುತ್ತಾನೆ (೧೬೦೪). ಅಜಿಲರ ಕಾಲದಲ್ಲಿ ಕೆಲವು ಬಸದಿಗಳೂ ನಿರ್ಮಾಣವಾದುವು.

ಪೋರ್ಚುಗೀಸರ ಬಳಿಕ ಬಂದ ಇಂಗ್ಲಿಷರು ಕ್ರಿ.ಶ. ೧೮೦೦ರಲ್ಲಿ ಕನ್ನಡ ಜಿಲ್ಲೆಯನ್ನು ವಶಪಡಿಸಿಕೊಂಡು ಆಳಲು ತೊಡಗಿದರು. ಆಗ ಕನ್ನಡ ಜಿಲ್ಲೆಯು ಕಾರವಾರದಿಂದ ಮಲಬಾರಿನ ತನಕ ಒಂದೇ ಆಗಿತ್ತು. ೧೮೬೨

ರಲ್ಲಿ ಆಡಳಿತದ ಸೌಕರ್ಯಕ್ಕಾಗಿ ಕನ್ನಡ ಜಿಲ್ಲೆಯನ್ನು ವಿಭಜಿಸಲಾಯಿತು. ಉತ್ತರ ಕನ್ನಡ ಜಿಲ್ಲೆಯನ್ನು ಮುಂಬಯಿ ಪ್ರಾಂತ್ಯಕ್ಕೂ ದಕ್ಷಿಣ ಕನ್ನಡಜಿಲ್ಲೆಯನ್ನು ಮದ್ರಾಸು ಪ್ರಾಂತ್ಯಕ್ಕೂ ಸೇರಿಸಲಾಯಿತು. ೧೯೪೭ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬರುವವರೆಗೆ ಅಂದರೆ ೧೪೭ ವರ್ಷಗಳ ಕಾಲ ದಕ್ಷಿಣ ಕನ್ನಡ ಜಿಲ್ಲೆಯು ಬ್ರಿಟಿಷರ ಕೈಕೆಳಗೆ ಸಾಕಷ್ಟು ಆಧುನಿಕ ಜೀವನವನ್ನು ರೂಢಿಸಿಕೊಂಡಿತು.

# ೩ ತುಳುನಾಡಿನ ಸಾಂಸ್ಕೃತಿಕ ಸ್ವರೂಪ

ತುಳುನಾಡಿನಲ್ಲಿ ವಿಭಿನ್ನ ಭಾಷೆಗಳನ್ನು ಆಡುವ ಜನರು ಇರುವಂತೆಯೇ ವಿಭಿನ್ನ ಜಾತಿ, ಧರ್ಮ, ಪಂಗಡಗಳಿಗೆ ಸೇರಿದ ಜನರು ಕಾಣಿಸುತ್ತಾರೆ. ಇಲ್ಲಿನ ಪ್ರಧಾನ ಕಸುಬು ಬೇಸಾಯ. ಭತ್ತ, ತೆಂಗು ಮುಂತಾದ ಆಹಾರ ಬೆಳೆಗಳ ಜೊತೆಗೆ ಅಡಿಕೆಯಂತಹ ವಾಣಿಜ್ಯ ಬೆಳೆಗಳನ್ನು ಬೆಳೆಸುತ್ತಾರೆ. ಸಾಂಪ್ರದಾಯಿಕವಾಗಿ ಜೈನರು ಮತ್ತು ಬಂಟರು ಈ ವೃತ್ತಿಯನ್ನು ಮಾಡುತ್ತಿದ್ದರು. ಇತ್ತೀಚೆಗೆ ಕೊಕ್ಕೊ ಮತ್ತು ರಬ್ಬರ್ ಬೆಳೆಗಳು ಈ ಜಿಲ್ಲೆಯಲ್ಲಿ ಕಾಣಿಸಿಕೊಂಡಿವೆ. ತಾಳೆ ಮರಗಳಿಂದ ಹೆಂಡವನ್ನು ಇಳಿಸುವುದು ಮತ್ತು ಅದರಿಂದ ಬೆಲ್ಲವನ್ನು ತಯಾರಿಸುವುದು – ಇಲ್ಲಿನ ಇನ್ನೊಂದು ಮುಖ್ಯ ಕಸುಬು. ಸಾಂಪ್ರದಾಯಿಕವಾಗಿ ಈ ವೃತ್ತಿಯನ್ನು ಮಾಡುವುದು ಬಿಲ್ಲವ ವರ್ಗಕ್ಕೆ ಸೇರಿದವರು. ಸಮುದ್ರದ ಕರಾವಳಿಯಲ್ಲಿ ಮೀನುಗಾರಿಕೆಯನ್ನೇ ಪ್ರಧಾನ ಕಸುಬನ್ನಾಗಿ ಮಾಡಿಕೊಂಡಿರುವ ಮೊಗವೀರರು ಎಂಬ ವರ್ಗದವರು ಇದ್ದಾರೆ. ವ್ಯಾಪಾರವನ್ನೇ ಪ್ರಧಾನವನ್ನಾಗಿ ಇಟ್ಟುಕೊಂಡಿರುವ ಮುಸಲ್ಮಾನರು (ಇವರು ಸಾಮಾನ್ಯವಾಗಿ ವ್ಯಾಪಾರಿಗಳಾಗಿರುವುದರಿಂದ ಇವರನ್ನು ಬ್ಯಾರಿ ಎಂದು ಕರೆಯುತ್ತಾರೆ) ಮತ್ತು ಕೊಂಕಣಸ್ಥರು ಇದ್ದಾರೆ. ಸಾಂಪ್ರದಾಯಿಕವಾಗಿ ಧಾರ್ಮಿಕ ಕಾರ್ಯವನ್ನು ಮಾಡುವ ಬ್ರಾಹ್ಮಣರು ಇದ್ದಾರೆ. ಹರಿಜನ ವರ್ಗಕ್ಕೆ ಸೇರಿದ ಅನೇಕ ಉಪಪಂಗಡಗಳು ಈ ಜಿಲ್ಲೆಯಲ್ಲಿ ಇವೆ.

ಧಾರ್ಮಿಕವಾಗಿ ಈ ಜಿಲ್ಲೆಯಲ್ಲಿ ಶೈವ, ವೈಷ್ಣವ, ಜೈನ ಧರ್ಮಗಳು ಐತಿಹಾಸಿಕ ದೃಷ್ಟಿಯಿಂದ ಪ್ರಸಿದ್ಧವಾಗಿವೆ, ಆದರೆ ಸ್ಥಳೀಯವಾಗಿ ನಾಗಾರಾಧನೆ ಮತ್ತು ಭೂತಾರಾಧನೆ ಈ ಜಿಲ್ಲೆಯಲ್ಲಿ ಹೆಚ್ಚು ಜನಪ್ರಿಯವಾಗಿವೆ. ನಾಗಾರಾಧನೆಗೆ ಸಂಬಂಧಪಟ್ಟಂತೆ ನಾಗಮಂಡಲ, ಭೂತಾರಾಧನೆಗೆ ಸಂಬಂಧಪಟ್ಟಂತೆ ಬೇರೆ ಬೇರೆ ಭೂತಗಳ ಕೋಲ, ನೇಮ, ಧರ್ಮನೇಮ, ಮಹಿಮೆ ಮುಂತಾದ ಉತ್ಸವಗಳು ಈ ಜಿಲ್ಲೆಯಾದ್ಯಂತ ಕಾಣಿಸುತ್ತವೆ. ಇಲ್ಲಿನ ತುಳು ಜನಪದ ಸಾಹಿತ್ಯದಲ್ಲಿ ಭೂತಾರಾಧನೆಯ ಸಂಬಂಧ ಗಮನಾರ್ಹವಾದುದು. ಪಾಡ್ದನಗಳ ಅಧ್ಯಯನದ ಸಂದರ್ಭದಲ್ಲಿ ಅದನ್ನು ವಿವರವಾಗಿ ಚರ್ಚಿಸಲಾಗುವುದು.

ಈ ಜಿಲ್ಲೆಯಲ್ಲಿ ಜನಪದ ರಂಗಭೂಮಿಯ ದೃಷ್ಟಿಯಿಂದ ಸಾಮಾನ್ಯ ಜನರಿಗೆ ಮನೋರಂಜನೆಯನ್ನು ಒದಗಿಸುತ್ತಿರುವುದು ಯಕ್ಷಗಾನ ಬಯಲಾಟ. ಸಾಹಿತ್ಯ, ಸಂಗೀತ, ನೃತ್ಯ, ಅಭಿನಯ, ವೇಷ ಭೂಷಣಗಳು ಇವುಗಳಿಂದ ಕೂಡಿಕೊಂಡಿರುವ ಸಮಷ್ಟಿ ಕಲೆಯಾದ ಯಕ್ಷಗಾನ ಈ ಜಿಲ್ಲೆಯ ಪಂಡಿತ ಪಾಮರರಿಗೆ ಅಚ್ಚುಮೆಚ್ಚಿನ ಕಲಾಮಾಧ್ಯಮ. ಕಾಸರಗೋಡಿನಿಂದ ಉಡುಪಿಯವರೆಗಿನ ಯಕ್ಷಗಾನದ ರೂಪವನ್ನು ತೆಂಕುತಿಟ್ಟು ಎಂದೂ ಉಡುಪಿಯಿಂದ ಕುಂದಾಪುರದವರೆಗಿನ ಯಕ್ಷಗಾನದ ರೂಪವನ್ನು ಬಡಗುತಿಟ್ಟು ಎಂದೂ ಕರೆಯುತ್ತಾರೆ. ವೇಷ ಭೂಷಣಗಳು ಮತ್ತು ಕುಣಿತದ ದೃಷ್ಟಿಯಿಂದ ಈ ಎರಡು ತಿಟ್ಟುಗಳಲ್ಲಿ ಮುಖ್ಯವಾದ ವ್ಯತ್ಯಾಸಗಳಿವೆ.

ತುಳುನಾಡಿನಲ್ಲಿ ಪ್ರಾಚೀನ ಕಾಲದಿಂದಲೂ ಕೆಲವು ಜನಪದ ಕಲಾತ್ಮಕ ವಿನೋದಗಳು ಜನಜೀವನದಲ್ಲಿ ಹಾಸುಹೊಕ್ಕಾಗಿ ಬಂದಿವೆ. ಕಂಬಳ, ಕೋಳಿಅಂಕ, ಮೊಸರು ಕುಡಿಕೆ, ಚೆಂಡಿನ ಉತ್ಸವ, ತೆಂಗಿನಕಾಯಿ ಆಟ, ಬಾಲೆ ಸಾಂತು, ಪುರುಪರು ಕಟ್ಟುವುದು, ತಪ್ಪಂಗಾಯಿ, ಗೇರುಬೀಜದ ಆಟ ಮುಂತಾದುವು ಪ್ರಮುಖವಾದ ಕೆಲವು ಮನೋರಂಜಕ ಕಲೆಗಳು. ಹರಿಜನರ ಜನಪದ ಕುಣಿತಗಳು ತಮ್ಮ ವೈವಿಧ್ಯಗಳ ಮೂಲಕ ಕಾಣಿಸಿ ಕೊಳ್ಳುತ್ತವೆ. ನಲ್ಕೆಯವರ ನಲಿಯುವಿಕೆ, ಗುಡಿಯರ ಕುಣಿತ, ರಾಣೆಯರ ಕೋಲಾಟ ಮೊದಲಾದುವು ಕೆಲವು ಮಾದರಿಗಳು. ಕನ್ಯಾಪು, ಚೆನ್ನು, ಪುರುಷ ಮೊದಲಾದ ಕೆಲವು ಸಾಮೂಹಿಕ ಮತ್ತು ಸರಳಿ ಕುಣಿತ ಗಳು ಒಳ್ಳೆಯ ಮನೋರಂಜನೆಯನ್ನು ಒದಗಿಸುತ್ತವೆ. ಆಟಿ ಅಥವಾ ಆಷಾಢ ತಿಂಗಳಲ್ಲಿ ನಲ್ಕೆಯವರು ಆಟಿ ಕಳಂಜನ ವೇಷ ಹಾಕಿ, ಮನೆ ಮನೆಗೆ ಹೋಗಿ ಕುಣಿಯುತ್ತಾರೆ. ಸೋಣ ಅಥವಾ ಶ್ರಾವಣ ತಿಂಗಳಲ್ಲಿ ನಲ್ಕೆ ಯರ ಹೆಣ್ಣುಗಳು ಮಾದಿರ ವೇಷಹಾಕಿ ಅಲಂಕರಿಸಿಕೊಂಡು, ತೆಂಬರೆ (ಚಿಕ್ಕ ಡೋಲು) ಯನ್ನು ಬಡಿಯುತ್ತಾ ಮನೆ ಮನೆಗೆ ಹೋಗಿ ಹಾಡಿ ಕುಣಿಯುತ್ತಾರೆ. ಕೆಲವು ಕಡೆಗಳಲ್ಲಿ ಮೂಲದ ಹೊಲೆಯರು ಕರ್ಂಗೋಲ್ಡ ಕುಣಿತ ಕುಣಿಯುತ್ತಾ, ಮನೆ ಮನೆ ತಿರುಗುತ್ತಾರೆ. ನಲ್ಕೆಯವರು ದೀಪಾವಳಿ ಹಬ್ಬದ ಮರುದಿವಸ ಭದ್ರಕಾಳಿ ವೇಷಹಾಕಿ, ಊರಿಡೀ ಸುತ್ತುತ್ತಾರೆ. ಮಲೆಕುಡಿಯರು ತಮ್ಮ ಭೂತದ ಎದುರು ಖಡ್ಗಧಾರಿಗಳಾಗಿ ರೌದ್ರಾ ವೇಷದಿಂದ ನರ್ತಿಸುತ್ತಾರೆ. ರಾಣೆಯರ ಕೋಲಾಟದಲ್ಲಿ ಎರಡು ಗುಂಪುಗಳು ವೃತ್ತಾಕಾರವಾಗಿ ನಿಂತು, ಹೆಚ್ಚಾಗಿ ಗಣಪತಿ, ಶಿವಸ್ತವನಗಳನ್ನು ಹಾಡಿ ಕುಣಿಯುತ್ತವೆ.

ಮೇಲೆ ತಿಳಿಸಿದ ಕಲಾತ್ಮಕ ವಿನೋದಗಳಲ್ಲದೆ ಮಳೆಗಾಲದ ಸಮಯದಲ್ಲಿ ಆಡುವ ಕೆಲವು ಆಟಗಳು ಇವೆ. ಇತರ ಸಂದರ್ಭಗಳಲ್ಲೂ ಇಂತಹ ಆಟಗಳನ್ನು ಆಡುತ್ತಾರೆ. ಗಂಡಸರು ಚದುರಂಗ ಮತ್ತು ಪಗಡೆಯಾಡು ತ್ತಾರೆ. ಹುಡುಗರು ಕುಟ್ಟಿದೊಣ್ಣೆಯಾಟ, ಡೂ-ಡೂ (ಕಬಡಿ), ಡೊಂಕಾಟ, ಹಲ್ಲಿಯಾಟ, ಹುಲಿಯಾಟ, ಕೋಲಾಟ, ಬೊಗರಿಯಾಟ, ಜಿಬುಲಿಯಾಟ ಮೊದಲಾದುವುಗಳನ್ನಾಡುತ್ತಾರೆ. ಚೆನ್ನೆಮಣೆಯಾಟ, ಉಂಗುರ ದಾಟ, ಕಣ್ಣುಮುಚ್ಚಾಲೆಯಾಟ, ನಾಗರಾಟ ಇತ್ಯಾದಿಗಳು ಹುಡುಗಿಯರ ಕೆಲವು ಆಟಗಳು.

**ಅಳಿಯ ಸಂತಾನ ಕಟ್ಟು**

ತುಳುನಾಡಿನ ಅನೇಕ ಜನಾಂಗಗಳು ಕೌಟುಂಬಿಕವಾಗಿ ಇತ್ತೀಚಿನವರೆಗೆ ಅಳಿಯ ಸಂತಾನ ಪದ್ಧತಿಯನ್ನು ಅನುಸರಿಸುತ್ತಿದ್ದುವು. ತುಳು ಜನಪದ ಸಾಹಿತ್ಯದ ಕೆಲವು ಪ್ರಕಾರಗಳಲ್ಲಿ ಇದರ ಉಲ್ಲೇಖವನ್ನು ಗಮನಿಸ ಬಹುದು. ಸೋದರ ಮಾವನ ಆಸ್ತಿಗೆ ಅಳಿಯನು ಹಕ್ಕುದಾರನಾಗಿರುವುದು ಈ ನಿಯಮದ ಪ್ರಮುಖ ಲಕ್ಷಣ. ಮಾತೃ ಪ್ರಧಾನವಾದ ಕುಟುಂಬಗಳು ಭಾರತದ ಮತ್ತು ವಿದೇಶಗಳ ಅನೇಕ ಕಡೆಗಳಲ್ಲಿ ಕಾಣಿಸುತ್ತವೆ. ತುಳುನಾಡಿನಲ್ಲಿ ೧೩ನೇ ಶತಮಾನದ ಮಧ್ಯದವರೆಗೆ ಸೋದರ ಮಾವನಿಂದ ಅಳಿಯನಿಗೆ ಹಕ್ಕು ಬರುವುದರ ಕುರಿತು ಐತಿಹಾಸಿಕ ಉಲ್ಲೇಖವಿಲ್ಲ. ತುಳುನಾಡನ್ನು ಆಳಿದ ಆಳುಪರಲ್ಲಿ ಈ ನಿಯಮವಿರಲಿಲ್ಲ. ಶಾಸನಗಳ ಆಧಾರಗಳ ಪ್ರಕಾರ ಈ ಪದ್ಧತಿ ಮೊತ್ತಮೊದಲಿಗೆ ಸ್ಪಷ್ಟವಾಗಿ ವಿಜಯನಗರ ಆಳ್ವಿಕೆಯ ಕಾಲದಲ್ಲಿ ಕಂಡು ಬರುತ್ತದೆ. ಆ ಕಾಲದ ಕೆಲವು ಜೈನಧರ್ಮದ ಸಾಮಂತ ಅರಸು ಮನೆತನದಲ್ಲಿ ಈ ಪದ್ಧತಿ ಕಂಡು ಬರುತ್ತದೆ. ಇದಕ್ಕೆ ಹಿಂದೆ ಕೆಲವೆಡೆ ಇದರ ಸ್ವರೂಪವನ್ನು ಕಾಣಲು ಪ್ರಯತ್ನಿಸಿದ್ದಾರೆ. ತಳಂಗೆರೆಯ ಆಳುಪ ಒಂದನೆಯ ಜಯಸಿಂಹನ ಆಳ್ವಿಕೆಯ ಕಾಲದಲ್ಲಿ ಇದನ್ನು ಗುರುತಿಸುತ್ತಾರೆ. ಈ ಶಾಸನದಲ್ಲಿ (ಕಾಲ ಸು. ಕ್ರಿ. ಶ. ೧೦ನೇ ಶತಮಾನ) ರಾಜನ ಸಹೋದರಿ ಜೋಗವ್ವೆಯ ಮಕ್ಕಳಿಗೆ ಹಕ್ಕು ಬರುವುದನ್ನು ಹೇಳಲಾಗಿದೆ. ಇಲ್ಲಿ ಸಹೋ ದರಿಯ ಹೆಣ್ಣುಮಕ್ಕಳಿಗೆ ಆಸ್ತಿ ಸಿಗುತ್ತದೆ. ಇಲ್ಲಿ ಅಳಿಯ ಸಂತಾನ ನಿಯಮದ ಸಂಪೂರ್ಣ ಸ್ವರೂಪವಿಲ್ಲ. ಆದರೆ ಈ ನಿಯಮದ ಬೀಜಸ್ವರೂಪ ಈ ಶಾಸನದಲ್ಲಿದೆ ಎಂದು ಊಹಿಸಲಾಗಿದೆ.

ಕೇರಳ ರಾಜ್ಯದಲ್ಲಿ ಅಳಿಯ ಸಂತಾನದ ನಿಯಮ ಕಂಡು ಬರುತ್ತದೆ. 'ಮರು ಮಕ್ಕತ್ತಾಯಂ' ಎಂದು ಇದನ್ನು ಮಲೆಯಾಳಂನಲ್ಲಿ ಕರೆಯಲಾಗಿದೆ. ಈ ಪದ್ಧತಿಯ ಮುಖ್ಯ ಲಕ್ಷಣಗಳು.

(೧) ಬಂಧುತ್ವವನ್ನು ಒಂದು ಕುಟುಂಬದಲ್ಲಿ ಮಾತೃಮೂಲದ ಮೂಲಕ ಗುರುತಿಸುವುದು.

(೨) ಕುಟುಂಬ ಪದ್ಧತಿಯಲ್ಲಿ ಮದುವೆ ಎನ್ನುವ ಸಂಸ್ಥೆಯನ್ನು ಗಣಿಸದೆ ಇರುವುದು.

(೩) ಆಸ್ತಿ ಹಕ್ಕಿನ ಕಡ್ಡಾಯ ವಿಭಜನೆಯನ್ನು ನಿಷೇಧಿಸುವುದು.

ತುಳುನಾಡಿಗೆ ಈ ನಿಯಮವು ಹೊರಗಿನಿಂದ ಬಂತೆಂದು ಊಹಿಸುತ್ತಾರೆ. ಈ ಪದ್ಧತಿಯು ೧೩ನೆಯ ಶತಮಾನದ ಆರಂಭದ ಹೊತ್ತಿಗೆ ಸ್ಪಷ್ಟವಾಗಿ ಕಾಣಿಸುತ್ತದೆ. ಒಂದನೇ ಕುಲಶೇಖರ ಆಳುಪೇಂದ್ರನ (ಕ್ರಿ.ಶ. ೧೨೦೪) ಅಳಿಯನ ಪ್ರಾಬಲ್ಯದ ಬಗೆಗೆ ತಿಳಿದು ಬರುತ್ತದೆ. ಅದರ ಪ್ರಕಾರ ಕುಂಇದೇವ, ಅವನ ಮಗ ನಾರೇನಂಚ್‌ನ ದೇವ ಮತ್ತು ಅವನ ಅಳಿಯ ವಾಸುದೇವ – ಇವರು ಮೂವರು ಮೂಡಬಿದರೆಯ ದುರ್ಗಾ ದೇವಿಗೆ ಭೂದಾನ ಮಾಡಿದ ಉಲ್ಲೇಖವಿದೆ. ಕುಟುಂಬದಲ್ಲಿ ಅಳಿಯನ ಪ್ರಾಧಾನ್ಯವನ್ನು ಇಲ್ಲಿ ಗುರುತಿಸ ಬಹುದು.

ಮೂಡಬಿದರೆಯ ಎರಡು ಶಾಸನಗಳು ಅಳಿಯನಿಗಿರುವ ಅಧಿಕಾರವನ್ನು ಸೂಚಿಸುತ್ತವೆ. ನಗಿರೆಯ ರಾಜ ಭೈರವ ಅರಸನ ಅಧಿಕಾರ ಅವನ ಅಳಿಯನಿಗೆ ಬಂತು ಎಂದು ಉಲ್ಲೇಖವಿದೆ. ಇಲ್ಲಿ ಹೆಣ್ಣುಗಳ ಮೂಲಕ ಅಳಿಯನಿಗೆ ಅಧಿಕಾರ ಬರುತ್ತದೆ. ಈ ಶಾಸನದ ಕಾಲ ೧೩ನೇ ಶತಮಾನ. ಕಳಸ ಕಾರ್ಕಳದ ಬೈರರಸ ಒಡೆಯರು ಅಳಿಯ ಸಂತಾನ ಪದ್ಧತಿಯನ್ನು ಅನುಸರಿಸಿದರು.

ವಿಜಯನಗರ ಅರಸರ ಕಾಲದ, ಸಾಮಂತರಾದ ಚೌಟರು, ಬಂಗರು, ಸಾವಂತರು, ಅಜಿಲರು, ತೊಳಹರ್ನ್ನ ಅಳಿಯ ಸಂತಾನ ಪದ್ಧತಿಯನ್ನು ಅನುಸರಿಸುತ್ತಿದ್ದರು. ಇವರೆಲ್ಲರೂ ಜೈನ ಧರ್ಮದವರು.

ಅಳಿಯ ಸಂತಾನ ಕಟ್ಟಿನ ಮೂಲಕ್ಕೆ ಸಂಬಂಧಿಸಿದಂತೆ ಭೂತಾಳ ಪಾಂಡ್ಯನನ್ನು ಕುರಿತ ಒಂದು ಐತಿಹ್ಯವು ಸಿಗುತ್ತದೆ. ಈ ಭೂತಾಳ ಪಾಂಡ್ಯನ ಬಗೆಗೆ ಶಾಸನಾಧಾರಗಳೇನೂ ಇಲ್ಲ. ಒಂದು ಸಾಮಾಜಿಕ ಪದ್ಧತಿಯನು ಐತಿಹ್ಯದ ಮೂಲಕ ಒಬ್ಬ ಮೂಲಪುರುಷನಿಗೆ ಆರೋಪಿಸುವ ಕ್ರಮವನ್ನು ಇಲ್ಲಿ ಕಾಣಬಹುದು.

'ಭೂತಾಳ ಪಾಂಡ್ಯನ ಕಟ್ಟುಕಟ್ಟಳೆಗಳು' ಎನ್ನುವ ಹೆಸರಿನಲ್ಲಿ ಅಷ್ಟೇನೂ ಪ್ರಾಚೀನವಲ್ಲದ ಹಸ್ತಪ್ರತಿ ಯೊಂದು ಸಿಗುತ್ತದೆ. ಭೂತಾಳ ಪಾಂಡ್ಯನ ಐತಿಹ್ಯವನ್ನು ಯಾರೋ ಈ ರೀತಿ ಬರವಣಿಗೆಯ ರೂಪದಲ್ಲಿ ತಂದಿರಬಹುದೆಂದು ಅಭಿಪ್ರಾಯಿಸಲಾಗಿದೆ, ಮಾವನ ಸೊತ್ತು ಅಳಿಯನಿಗೆ ಬರಲು ಕಾರಣ ಏನು ಎಂಬುದಕ್ಕೆ ಭೂತಾಳ ಪಾಂಡ್ಯನ ಕತೆಯಲ್ಲಿ ಬರುವ ಘಟನೆಯ ಆ ಪಠ್ಯದ ಪ್ರಕಾರ ಈ ರೀತಿ ಇದೆ : "ಪಾಂಡ್ಯದೇಶದಲ್ಲಿ ಒಬ್ಬ ದೇವಪಾಂಡ್ಯನೆಂಬ ಸಾವುಕಾರನು ಹೊಸ ಹಡಗಗಳು ಕಟ್ಟಿಸಿ, ಅದರಲ್ಲಿ ಲಕ್ಷಾಂತ್ರ ವರಹಾನ್ನ ಪೊಡವೆ ವಸ್ತುಗಳನ್ನು ತುಂಬಿಸಿ, ಹಡಗುಗಳು ಇಳಿಸುವ ಸಮಯದಿ, ಆಗ ಹೊಸ ಹಡಗುಗಳೆಂಬ ದೃಷ್ಟಿಯಿಂದ ಕುಂಡೋದರಯೆಂಬ ಶಿವಗಣವು ನರಬಲಿಯು ಬೇಡುತ್ತಿದ್ದಂ. ಆಗ ದೇವಪಾಂಡ್ಯನು ತನ್ನ ಮನೆಗೆ ಬಂದು, ತನ್ನ ಹೆಂಡತಿಯು ಆಲೋಚನೆಯು ಮಾಡಿ, ಯೇಳುಮಂದಿ ಮಕ್ಕಳಿಂದ ಅವನ ಬಲಿಯು ಕೊಡುವಾಯೆಂದು ಆಲೋಚನೆಯು ಮಾಡುತ್ತಿಪ್ಪ ವೇಳ್ಯೆದಲ್ಲಿ, ಆಗ ಆತನ ಹೆಂಡತಿ ಈ ಯೇಳುಮಂದಿ ಮಕ್ಕಳು ಕರಕೊಂಡು, ತನ್ನ ಶೌರು ಊರಿಗೆ ಹೊರಟು ಹೋದಳು. ಆಗ ಈ ದೇವಪಾಂಡ್ಯನೆಂಬ ಸಾವುಕಾರನು ತನ್ನ ಮನೆಯಲ್ಲಿ ಅನ್ನನೀರು ಬಿಟ್ಟು, ಬಹಳ ದುಃಖಿತನಾಗಿ ಮಲಗಿದ, ಆ ವೇಳ್ಯೆಯಲ್ಲಿ ಈ ಸುದ್ದಿಯನ್ನು ಆತನ ತಂಗಿಯಾದ

ಸತ್ಯವತಿಯೆಂಬುವಳು ಕೇಳಿ, ಬಂದು, ಅಣ್ಣನ ಮಾತನಾಡಿಸಿ, ವೃತ್ತಾಂತಗಳಂ ಕೇಳಿ, ಈ ಸ್ವಲ್ಪ ಕೆಲಸಕ್ಕೆ ನೀನು ಭಯಪಡಬೇಡ. ನನ್ನ ಮಗ ಜಯಪಾಂಡ್ಯನೆಂಬ ಬಾಲಕನ ನರಬಲಿಯಂ ಕೊಡುಂ. ಈಗ ಯೆದ್ದು ಊಟ ಉಪಚಾರಗಳಂ ಮಾಡುಂಯೆಂದು ಪೊಡಂಬಡಿಸಿ, ತನ್ನ ಮಗ ಜಯಪಾಂಡ್ಯನನ್ನು ಕೊಟ್ಟು, ಗಂಡನ ಮನೆಗೆ ಹೊರಟು ಹೋದಳು. ಆ ಜಯಪಾಂಡ್ಯನು ಯಾರೆಂದರೆ – ಆ ರಾಜ್ಯದ ವೀರಪಾಂಡ್ಯನೆಂಬ ಅರಸನ ಮಗ. ಆತ ಚಂದ್ರಾಂಗದ ರಾಯನಿಂದ ಪರಾಜಿತನಾದವ. ಆದ್ದರಿಂದ ಬಲಿಯಂ ಕೊಡುವ ವೇಳೆಯಲ್ಲಿ ಈತ ಮಹಾಪುರುಷನೆಂದು ತಿಳಿದು, ಆ ಕುಂಡೋದರನೆಂಬ ಭೂತರಾಜನು ಈ ದೇವಪಾಂಡ್ಯನ ಹಡಗುಗಳಿಗೆ ಬಲಿ ತೆಗೆದುಕೊಳ್ಳದೆ ಬಿಟ್ಟು, ಈ ಜಯಪಾಂಡ್ಯನೆಂಬ ಬಾಲಕನಿಗೆ ಪ್ರಸನ್ನವಾಗಿ ಇಂತೆಂದು – ನಾನು ನಿನಗೆ ಪ್ರಸನ್ನವಾದ ಕಾರಣಯಿಂತೆಂದೂ – ನೀನು ನನ್ನ ಹೆಸರಂಗೊಂಡು, ಭೂತಾಳಾಧಿಪನಾಗಿ, ಭೂತಾಳ ಪಾಂಡ್ಯನೆಂಬ ಹೆಸರಂ ನೀನು ಕೊಂಡಲ್ಲಿ ನಿನ್ನ ಪರಾಜಿತ ಮಾಡಿದ ಚಂದ್ರಾಂಗದನಾಳಿದ ಸಮಸ್ತ ರಾಜ್ಯವನ್ನು ಶಿವನ ಅಪ್ಪಣೆಯಿಂದ ಕೊಟ್ಟೆಯೆಂದು ಆ ಭೂತರಾಜನು ಈ ಕ್ಷಣದಲ್ಲಿ ಉಜ್ಜಯಿನಿಯೆಂಬ ನಗರವಂ ಪೊಕ್ಕು. ಅಲ್ಲಿ ಅಷ್ಟ ಧೈರ್ಯವಾದಿ ದೇವತೆಗಳಂ ಜಯಿಸಿ, ಅಲ್ಲಿ ವಿಕ್ರಮಾರ್ಕಗೆ ದೇವೇಂದ್ರನು ಕೊಟ್ಟ ಪ್ರತಿನಿಧಿ ಸಿಂಹಾಸನವನ್ನು ಈ ಭೂತಾಳ ಪಾಂಡ್ಯಗೆ ಕೊಟ್ಟು, ಆ ಭೂತಾಳ ಪಾಂಡ್ಯರಾಯ ಸಹಿತವಾಗಿ ಜಯಂತಿಕಾ ನಗರಕ್ಕೆ. ಬಂದು, ಪ್ರವೇಶವಾದರು."

ಈ ಅಳಿಯಂ ಸಂತಾನ ಪದ್ಧತಿಯು ಸಾಮಾಜಿಕ ಹಿನ್ನೆಲೆಯಲ್ಲಿ ಮಾತೃ ಪ್ರಧಾನ ಪದ್ಧತಿಯ ಒಂದು ರೂಪವೆನ್ನಬಹುದು. ಈ ಅಳಿಯ ಸಂತಾನ ಪದ್ಧತಿಯು ತುಳುವರು, ಮಲವರು, ನಾಯಮಾರರು, ಮಾಸಾಧಿಕ ಜೈನರು, ಹರಿಶೆಟ್ಟಿ- ಪರಿಯರು, ಕಂಬಾರರು, ದೇವಾಡಿಗ- ಸಾಲಿಯ, ಮಲೆಕುಡಿಯ, ಪಂಚಾಲ, ಕ್ಷೌರಿಕ, ಅಗಸ, ಹಳೆಪೈಕ. ಮುಂಡಾಲ, ಕರಿಂಜಾರ, ಹೊಲೆಯ, ಅಂಡೆಕೊರಗ ಇತ್ಯಾದಿ ಜಾತಿಗಳು ಅನುಸರಿಸುತ್ತವೆ ಎಂದು ಭೂತಾಳ ಪಾಂಡ್ಯನ ಕಟ್ಟುಕಟ್ಟಳೆಗಳಲ್ಲಿ ಇದೆ. ಈ ಕಟ್ಟುಕಟ್ಟಳೆಗಳಲ್ಲಿ ಹದಿನಾಲ್ಕು ಕಟ್ಟುಗಳು ಮತ್ತು ಹದಿನಾರು ಕಟ್ಟಳೆಗಳ ವಿವರಗಳು ದೊರೆಯುತ್ತವೆ.

## ೪ ತುಳು ಜಾನಪದದಲ್ಲಿ ಇದುವರೆಗೆ ನಡೆದಿರುವ ಕೆಲಸದ ಸಮೀಕ್ಷೆ

ಕನ್ನಡಜಾನಪದದಂತೆಯೇ ತುಳು ಜಾನಪದದಲ್ಲೂ ಆರಂಭದ ಕೆಲಸ ನಡೆದಿರುವುದು ಜನಪದ ಸಾಹಿತ್ಯದ ಸಂಗ್ರಹಕಾರ್ಯದಲ್ಲಿ. ತ.ಳು ಜನಪದ ಸಾಹಿತ್ಯದ ಸಂಗ್ರಹಣವು ಕೂಡಾ ಈವರೆಗೆ ವ್ಯವಸ್ಥಿತವಾಗಿ ದೊಡ್ಡ ಪ್ರಮಾಣದಲ್ಲಿ ನಡೆದಿಲ್ಲ. ಬಾಸೆಲ್ ಮಿಷನರಿಗಳು ಹಾಗೂ ಕೆಲವು ಆಸಕ್ತರು ಸ್ವಲ್ಪ ಪ್ರಮಾಣದಲ್ಲಿ ಸಂಗ್ರಹಿಸಿದ ಜನಪದ ಸಾಹಿತ್ಯವು ತುಳುನಾಡಿನ ಜಾನಪದ ಸಂಪತ್ತಿನ ಅಗಾಧತೆಗೆ ಹೋಲಿಸಿದಾಗ ತೀರ ಕಡಿಮೆ. ಕನ್ನಡ ಜಾನಪದದಲ್ಲಿಕಳೆದ ಎರಡು ದಶಕಗಳಲ್ಲಿ ವೈಜ್ಞಾನಿಕ ಅಧ್ಯಯನವು ವಿಶೇಷವಾಗಿ ನಡೆಯುತ್ತಿದ್ದರೂ ತುಳು ಜಾನಪದ ಕ್ಷೇತ್ರದಲ್ಲಿ ಅಂತಹ ಅಧ್ಯಯನ ವಿಶೇಷವಾಗಿ ಆಗಿಲ್ಲ. ವೈಜ್ಞಾನಿಕವಾಗಿ ಜಾನಪದ ಶಾಸ್ತ್ರ (Folkloristcis) ಮತ್ತು ಸಾಂಸ್ಕೃತಿಕ ಮಾನವ ವಿಜ್ಞಾನ (Cultural Anthropology)ಗಳ ಅಧ್ಯಯನ ಹಿನ್ನೆಲೆ ಹೆಚ್ಚಿನವರಿಗೆ ಇಲ್ಲದಿರುವುದು ಇದಕ್ಕೆ ಕಾರಣ, ಆದ್ದರಿಂದಲೇ ಕೆಲವು ತುಳು ಜಾನಪದ ಆಸಕ್ತರು ಈಗಲೂ ತುಳು ಜನಪದ ಸಾಹಿತ್ಯದ ಸ್ವಲ್ಪ ಸಂಗ್ರಹಣ ಹಾಗೂ ಅದರ ವ್ಯಾಖ್ಯಾನ ರೂಪದ ಸರಳ ವಿವರಣೆಗಳನ್ನು ಮಾಡುತ್ತಿದ್ದಾರೆ.

ತುಳು ಜಾನಪದದಲ್ಲಿ ಮೊದಲು ಕೆಲಸ ಮಾಡಿದವರು ಮಂಗಳೂರಿನ ಬಾಸೆಲ್ ಮಿಷನ್ ಸಂಸ್ಥೆಯವರು. ಕ್ರಿ.ಶ. ೧೮೩೪ರ ಹೊತ್ತಿಗೆ ದಕ್ಷಿಣ ಕನ್ನಡ ಜಿಲ್ಲೆಗೆ ಆಗಮಿಸಿದ ಬಾಸೆಲ್ ಮಿಷನರಿಗಳು ತುಳುವಿನಲ್ಲಿ ಗ್ರಂಥಸ್ಥ ಸಾಹಿತ್ಯ ರಚನೆಯನ್ನು ಸುರು ಮಾಡಿದರು. ಅವರ ಆರಂಭದ ರಚನೆಗಳು ಬೈಬಲ್‌ನ ತುಳು ಅನುವಾದಕ್ಕೆ ಸೀಮಿತವಾಗಿದ್ದುವು. Raev J. Brigel ರವರು ೧೮೭೨ರಲ್ಲಿ 'A Grammer of the Tulu Language' ಎಂಬ ಗ್ರಂಥವನ್ನು ಇಂಗ್ಲೀಷಿನಲ್ಲಿ ಬರೆದರು. ಇದು ಮೊತ್ತ ಮೊದಲನೆಯ ತುಳು ವ್ಯಾಕರಣ ಗ್ರಂಥ. ೧೮೫೬ರಲ್ಲಿ Raev J· Makker ರವರು ಆರಂಭಿಸಿ, Rev A. Manner ರವರು ಪೂರ್ತಿಮಾಡಿ, ಬಾಸೆಲ್ ಮಿಷನ್‌ರವರು ೧೮೮೬ರಲ್ಲಿ ಪ್ರಕಟಿಸಿದ 'Tulu-English Dictionery, ಯು ತುಳುವಿನಲ್ಲಿ ಮೊತ್ತ ಮೊದಲನೆಯ ನಿಘಂಟು. ಇದರಲ್ಲಿ ಜಾನಪದ ಶಬ್ದಗಳನ್ನೂ ತುಳು ಗಾದೆಗಳನ್ನೂ ಸೇರಿಸುವುದರ ಮೂಲಕ ತುಳು ಜಾನಪದವನ್ನು ಸ್ಪರ್ಶಿಸಿರುವುದು ಗಮನಕ್ಕೆ ಬರುತ್ತದೆ. ಬಾಸೆಲ್ ಮಿಷನ್‌ರವರು ೧೮೭೭ರಲ್ಲಿ ೫೦೦ ತುಳು ಗಾದೆಗಳ ಸಂಗ್ರಹವನ್ನು ಪ್ರಕಟಿಸಿದ್ದಾರೆ. ಆಮೇಲೆ ೧೦೦೦ ತುಳು ಗಾದೆಗಳ ಸಂಗ್ರಹವೂ ಅವರಿಂದಲೇ ಪ್ರಕಟವಾಗಿದೆ. ತುಳು ಗಾದೆಗಳ ಸಂಗ್ರಹದಲ್ಲಿ ಇವೆರಡೂ ಆರಂಭದ ಕೃತಿಗಳು Rev. A· Manner ರವರು ೨೧ ತುಳು ಪಾಡ್ದನಗಳನ್ನು ಸಂಗ್ರಹಿಸಿ 'ಪಾಡ್ದನೊಳು' ಎಂಬ ಹೆಸರಿನಲ್ಲಿ ೧೮೮೬ರಲ್ಲಿ ಪ್ರಕಟಿಸಿದ್ದಾರೆ. (ಪ್ರಕಾಶನ : ಬಾಸೆಲ್ ಮಿಷನ್, ಮಂಗಳೂರು). ಇದು ತುಳು ಪಾಡ್ದನಗಳ ಸಂಕಲನದಲ್ಲಿ ಮೊತ್ತ ಮೊದಲನೆಯದು. ಅಷ್ಟೇ ಅಲ್ಲ, ಈವರೆಗೆ ಪ್ರಕಟವಾಗಿರುವವುಗಳಲ್ಲಿ ಸಮರ್ಪಕವಾದ ದೊಡ್ಡದಾದ ಒಂದೇ ಒಂದು ಸಂಕಲನವೂ ಹೌದು. ಈ ಗ್ರಂಥವು ಪಾಡ್ದನಗಳ ಬಗ್ಗೆ ಅಧ್ಯಯನ ಮಾಡುವವರಿಗೆ ಸಿದ್ಧವಾಗಿ

ಸಂಕಲನ ರೂಪದಲ್ಲಿ ಸಿಗುವ ಅಮೂಲ್ಯವಾದ ಆಕರವಾಗಿದೆ. ಈ 'ಪಾಡ್ದನೊಳು' ಸಂಕಲನದಲ್ಲಿ ಆರಂಭದ ೨೦ ಪಾಡ್ದನಗಳು ತುಳು ಭಾಷೆಯಲ್ಲಿ, ಕನ್ನಡ ಲಿಪಿಯಲ್ಲಿ ಇವೆ. ಕೊನೆಯ 'Pilicamundi' ಎನ್ನುವುದು ಇಂಗ್ಲಿಷ್ ಭಾಷೆಯಲ್ಲಿದೆ. 'ಪಾಡ್ದನೊಳು' ಸಂಕಲನದಲ್ಲಿ ಇರುವ ಎಲ್ಲ ೨೧ ಪಾಡ್ದನಗಳೂ ಭೂತಗಳಿಗೆ ಸಂಬಂಧಿಸಿದವು. ಅವುಗಳು ಈ ರೀತಿ ಇವೆ : ೧) ಬೊಬ್ಬರ್ಯೆ. ೨) ಪಂಜುರ್ಳಿ (i). ೩) ಪಂಜುರ್ಳಿ (ii). ೪) ಜುಮಾದಿ (i). ೫) ಸಾರಾಳ ಜುಮಾದಿ (ii). ೬) ಜಾರಂತಾಯೆ. ೭) ಕಾಂತು ನೆಕ್ರಿ ಭೂತ. ೮) ಮಗ್ರುಂದಾಯೆ. ೯) ಕಲ್ಕುಡೆ. ೧೦) ಕಲ್ಲುರ್ಟಿ. ೧೧) ಪೊಸ ಭೂತ. ೧೨) ಪೊಸ ಮಹಾರಾಯೆ. ೧೩) ಅತ್ತಾವರ ದೆಯ್ಯೊಂಗುಳು. ೧೪) ಮುಂಡದೇರ ಕಾಳಭೈರವೆ. ೧೫) ತೊಡಕಿನಾರ್. ೧೬) ದೇಯಿ ಬೈದ್ಯೆದಿ. ೧೭) ಕೋಟಿ ಚೆಂಣಯೆ (i). ೧೮) ಕೋಟಿ ಚೆಂಣಯೆ (ii), ೧೯) ಧೂಮಾವತಿ ಭೂತ. ೨೦) ಪಂಜುರ್ಲಿ (iii). ೨೧. Pilicamundi.

Dr. A. C. Burnell ಎಂಬುವನು "The Devil Worship of the Tuluvas" ಎಂಬ ಗ್ರಂಥವನ್ನು ಇಂಗ್ಲೀಷಿನಲ್ಲಿ ರಚಿಸಿದ್ದಾನೆ. ಇವನು ಈ ಕೃತಿಯನ್ನು ಸುಮಾರಾಗಿ ೧೮೮೨ಕ್ಕೆ ಮೊದಲೇ ರಚಿಸಿದಂತೆ. ಗೊತ್ತಾಗುತ್ತದೆ, ಆದರೆ Dr. A. C. Burnell ೧೮೮೨ರಲ್ಲಿ ತೀರಿ ಹೋದ ಕಾರಣ ಅವನ ಸ್ನೇಹಿತ Major R. C. Temple ಎನ್ನುವವನು ಈ ಕೃತಿಯ ಹಸ್ತಪ್ರತಿಯನ್ನು ಸಂಪಾದಿಸಿ ಸುಮಾರಾಗಿ ೧೮೮೮ರ ವೇಳೆಗೆ ಪ್ರಕಟಿಸಿದಂತೆ ಗೊತ್ತಾಗುತ್ತದೆ. ಈಗ ಸಿಕ್ಕುವ ಪ್ರಕಟಿತ ಗ್ರಂಥದಲ್ಲಿ ಮುದ್ರಣದ ವರ್ಷವನ್ನು ನಮೂದಿಸಿಲ್ಲ. Indian Antiquary ಪತ್ರಿಕೆಯ ೨೩, ೨೪, ೨೫ ಮತ್ತು ೨೬ನೆಯ ಸಂಚಿಕೆಗಳಲ್ಲಿ ೧೮೯೪ ರಿಂದ ೧೮೯೭ರ ಅವಧಿಯಲ್ಲಿ Burnell ನ 'Devil Worship of the Tuluvas' ಗ್ರಂಥವು ಭಾಗಭಾಗವಾಗಿ ಪ್ರಕಟವಾಗಿದೆ. ಈ ಗ್ರಂಥದಲ್ಲಿ ೨೬ ಭೂತಗಳ ಪಾಡ್ದನಗಳನ್ನು ಇಂಗ್ಲಿಷಿನಲ್ಲಿ ಕೊಡಲಾಗಿದೆ. ಕೆಲವು ಪಾಡ್ದನಗಳ ತುಳು ಮೂಲವನ್ನು ರೋಮನ್ ಲಿಪಿಯಲ್ಲೂ ಅದರ ಇಂಗ್ಲಿಷ್ ಅನುವಾದವನ್ನೂ ಕೊಟ್ಟಿದ್ದಾರೆ. ಇನ್ನು ಕೆಲವು ಪಾಡ್ದನಗಳ ಇಂಗ್ಲಿಷ್ ಅನುವಾದವನ್ನು ಮಾತ್ರ ಕೊಡಲಾಗಿದೆ. ಗ್ರಂಥದ ಮೊದಲನೆಯ ಅಧ್ಯಾಯ: I. Preface by Major R. C. Temple. ಇಲ್ಲಿ R. C. Temple ನು ತನಗೆ ಸಿಕ್ಕಿದ Burnell ನ ಹಸ್ತಪ್ರತಿಯ ವಿವರಗಳನ್ನು ತಿಳಿಸಿದ್ದಾನೆ. ಈ ಸಂಗ್ರಹದ ಬಗ್ಗೆ Burnellನೇ ಬರೆದ ವಾಕ್ಯಗಳನ್ನು ಉದ್ಧರಿಸಿದ್ದಾನೆ. ಆ ಮಾತುಗಳು ಈ ರೀತಿ ಇವೆ : "This contains a collection of the Tulu incantations, used at the ceremonies of Bhuta Worship as practised in South Canara, and which are chanted by the pombadas or priests. The first 5 are from Dr. Mogling's M. S. (at Mangalore), The next 5 were written down by a Tantri (Tulu Brahman), at the Mangalore tahshildar's request, for me. The remainder were collected by the agents I sent to different places, and several were dictated by a blined pombada, namad Kanta, who also gave me information as to where other such compositions could be heard. They are all oral and contain many words not now in use. Pombadas are very averse to reciting them to strangers. The figures (i.e. illustrations) show the dress of the priest who dances and who is supposed to personate the Bhuta. They are from actual observation by people in my service. – A. Burnell." ಪಾಡ್ದನಗಳನ್ನು ಬರ್ನೆಲ್ ಸಂಗ್ರಹಿಸಿದ ಈ ವಿಧಾನದ ವಿವರಣೆ ಜಾನಪದ ಅಧ್ಯಯನದಲ್ಲಿ ಅಮೂಲ್ಯವಾದುದು. R. C. Templeನು ತುಳು ಭಾಷೆ, ತುಳುವರು, ಭೂತಾರಾಧನೆ ಮುಂತಾದ ವಿಷಯಗಳ ಬಗ್ಗೆ ಮಾಹಿತಿಯನ್ನು ಕೊಟ್ಟಿದ್ದಾನೆ. ಎರಡನೆಯ ಅಧ್ಯಾಯ : *II. On Bhutas. By the late Rev. A. Manner.* R. C. Templeನ ಕೇಳಿಕೆಯ ಮೇರೆಗೆ A. Mannerನು ಬರೆದು ಕಳುಹಿಸಿದ ಭೂತಗಳ ವಿವರಣೆಯು ಇಲ್ಲಿ ಸಿಗುತ್ತದೆ. ಭೂತಾರಾಧನೆಯ ಆಚರಣೆಯ ಸ್ವರೂಪವನ್ನು

ತಿಳಿಸುವ ಈ ಭಾಗ ಜಾನಪದ ಅಧ್ಯಯನದಲ್ಲಿ ಉಪಯುಕ್ತವಾಗಿದೆ. ಮೂರನೆಯ ಅಧ್ಯಾಯ: III. Description of *a Bhuta incentation, as prarctised in South Kanara (Madras Presidency) witnassed by A. C. B. and J. H., on March 23rd 1872, at Manglore.* ಈ ಭಾಗದಲ್ಲಿ A. C. Burnell ಮಾಡಿದ ಕ್ಷೇತ್ರಕಾರ್ಯದ ಪ್ರತ್ಯಕ್ಷ ವಿವರಣೆ ಇದೆ. ಮುಂದೆ IV ಮತ್ತು V ನೆಯ ಅಧ್ಯಾಯಗಳಲ್ಲಿ ಭೂತಾರಾಧನೆಯ ಪ್ರತ್ಯಕ್ಷ ವಿವರಣೆಯು ಇನ್ನು ಕೆಲವು ವಿವರಗಳಿವೆ: ಭೂತಗಳ ಆಕೃತಿಗಳ ವಿವರಣೆ ಸಿಗುತ್ತದೆ. VI ನೆಯ ಅಧ್ಯಾಯದಲ್ಲಿ Rev. A.Manner ಒದಗಿಸಿದ ಪ್ರಮುಖ ಭೂತಗಳ ಹೆಸರಿನ ಪಟ್ಟಿ ಇದೆ. ಇಲ್ಲಿ ಒಟ್ಟು ೧೩೩ ಭೂತಗಳ ಹೆಸರು ಸಿಗುತ್ತದೆ. ಏಳನೆಯ ಅಧ್ಯಾಯ VII. *The Origin of the Demons.* By the late Rev. A. Manner. ಭೂತಗಳ ಉಗಮಕ್ಕೆ ಸಂಬಂಧಿಸಿದ ಪಾಡ್ದನವೊಂದರ ತುಳು ಮೂಲ ಹಾಗೂ ಅದರ ಇಂಗ್ಲಿಷ್ ಅನುವಾದವನ್ನು ಇಲ್ಲಿ ಕೊಡಲಾಗಿದೆ. ಮುಂದಿನ ಅಧ್ಯಾಯಗಳಲ್ಲಿ ಬೇರೆ ಬೇರೆ ಭೂತಗಳ ಪಾಡ್ದನಗಳ ತುಳು ಮೂಲ ಹಾಗೂ ಅವುಗಳ ಇಂಗ್ಲಿಷ್ ಅನುವಾದಗಳನ್ನು ಕೊಡಲಾಗಿದೆ. ಜುಮಾದಿ, ಪುಂಜುರ್ಲಿ, ದೇಯಿಬೈದ್ಯೆದಿ. ಕೋಟಿ ಚೆನ್ನಯ I, ಕೋಟಿ ಚೆನ್ನಯ II, ಜಾರಂತಾಯ, ಕೊಡಮಣತ್ತಾಯ, ಕನಪಾಡಿತ್ತಾಯ, ಮುಂಡಿಪಾಡಿತ್ತಾಯ, ಅಂಬಡಾಡಿ ಪಂಜುರ್ಲಿ, ಪಿಲಿಚಾಮುಂಡಿ, ತೊಡಕಿನಾರ್, ಸಾರಾಲ ಜುಮಾದಿ, ಮುಡದೇರ್ (ಕಾಳಭೈರವ), ಅತ್ತಾವರ ದೈಯ್ಯೊಂಗುಳು, ಕೋಟಿ ಚೆನ್ನಯ (ಇನ್ನೊಂದು ಪಾಠ)ಕಲ್ಕುಡ, ಪೊಸ ಮಹಾರಾಯೆ, ಕಣ್ಣಲ್ಲಾಯೆ, ಜುಮಾದಿಯ ಸಂಚಾರ, ಜಾರಂತಾಯ, ಪೆರಾರ್ ಬೊಳಂದಿ. ಮಿಜಾರ್ ಕೊಡಪುಣತ್ತಾಯ, ಕಾಂತೇನೆಕ್ರಿ ಭೂತ, ಮಗ್ರುಂದಾಯ, ಕುಲುರ್ಟಿ, ಬೊಬ್ಬರ್ಯೆ, ಪಂಜುರ್ಲಿ (ಇನ್ನೊಂದು ಪಾಠ), ವೋಡಿಲ್ತಾಯ–ಈ ಭೂತಗಳ ಪಾಡ್ದನಗಳುಇವೆ. ಕೆಲವು ಪಾಡ್ದನಗಳ ತುಳು ಮೂಲವನ್ನು ಕೊಡದೆ, ಇಂಗ್ಲಿಷ್ ಅನುವಾದವನ್ನು ಮಾತ್ರ ಕೊಡಲಾಗಿದೆ. ಆ ಮೇಲೆ A. Manner ನ ಪಾಡ್ದನಗಳ ಸಂಗ್ರಹದಲ್ಲಿ ಸಿಗುವ ಭಿನ್ನ ಪಾಠಗಳು ಇವೆ: (1) The Origin of the Beiearlu (2) The Orgin of the Bhuta Panjurli, ತುಳುಪಾಡ್ದನಗಳ ಅಧ್ಯಯನದಲ್ಲಿ A. C. Burnellನ "The Devil Worship of the Tuluvas" ಎಂಬ ಈ ಗ್ರಂಥ ಬಹಳ ಉಪಯುಕ್ತವಾಗಿದೆ. ಪಾಡ್ದನಗಳ ಪಠ್ಯದ ಜೊತೆಗೆ ಗ್ರಂಥದ ಆರಂಭದಲ್ಲಿ ಬರುವ ಕ್ಷೇತ್ರಕಾರ್ಯದ ವಿವರಣೆಗಳು ಆಚರಣೆಯ ವಿವರಣೆಗಳು ಅಮೂಲ್ಯವಾಗಿದೆ. ಇದೇ ಗ್ರಂಥದಲ್ಲಿ ಹತ್ತು ಭೂತಗಳ ವೇಷ ಧರಿಸಿದ ಬಣ್ಣದ ಚಿತ್ರಗಳನ್ನು ಕೊಡಲಾಗಿದೆ.

ಎ. ಎನ್. ಶೀನಪ್ಪ ಹೆಗ್ಗಡೆಯವರ "ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳ ಪಾಂಡ್ಯ ರಾಯನ ಕಟ್ಟು (೧೯೧೫) ಗ್ರಂಥವು ತುಳುನಾಡಿನ ಇತಿಹಾಸವನ್ನು ತಿಳಿಸುವ ಗ್ರಂಥವಾದರೂ ಇದರಲ್ಲಿ 'ಅಳಿಯ ಸಂತಾನ ಕಟ್ಟು' ವಿನಂತಹ ಸಾಮಾಜಿಕ ನಿಯಮದ ಸ್ವರೂಪವನ್ನು ವಿವರಿಸಲಾಗಿದೆ. ಬೇರೆ ಬೇರೆ ಜಾತಿಗಳ ಸ್ವರೂಪ, ಬಳಿಗಳು ಮುಂತಾದ ವಿಚಾರವಿದೆ. ಈ ದೃಷ್ಟಿಯಿಂದ ತುಳುನಾಡಿನ ಜಾನಪದದಲ್ಲಿ ಪದ್ಧತಿ ಹಾಗೂ ಕುಟುಂಬ ವ್ಯವಸ್ಥೆಯನ್ನು ಇಲ್ಲಿ ಗಮನಿಸಬಹುದು.

ಎಂ, ಗಣಪತಿರಾವ್ ಐಗಳೆ ಅವರು 'ಅತ್ತಾವರ ದೈವೊಂಗುಳು' ಪಾಡ್ದನವನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ (೧೯೨೫), ಐಗಳೆರವರು "ತುಳು ಪಾಡ್ದನೊಳು" ಎನ್ನುವ ಹೆಸರಿನಲ್ಲಿ ಪಾಡ್ದನಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ (ಸುಮಾರು ೧೯೩೩). ಇದರಲ್ಲಿ ತೊಡಕಿನಾರ್, ಮುಂಡತ್ತಾಯೆ, ಬೊಬ್ಬರ್ಯ, ಕಲ್ಲುರ್ಟಿ, ಕಲ್ಕುಡ ಭೂತಗಳ ಪಾಡ್ದನಗಳಿವೆ. A. Manner ಅವರು ಇದೇ ಭೂತಗಳ ಪಾಡ್ದನಗಳನ್ನು ಇದಕ್ಕಿಂತ ಹಿಂದೆಯೇ ಸಂಗ್ರಹಿಸಿ ಪ್ರಕಟಿಸಿದ್ದರೂ ಐಗಳೆ ಅವರ ಸಂಗ್ರಹದ ಪಾಡ್ದನಗಳು ಭಿನ್ನ ಪಾಠಗಳಾಗಿರುವುದು ಪಾಡ್ದನಗಳ ಅಧ್ಯಯನಕ್ಕೆ ಅನುಕೂಲವಾಗಿದೆ.

ಎ. ಎಸ್. ಶೀನಪ್ಪ ಹೆಗ್ಗಡೆಯವರು "ತುಳುವಾಲ ಬಲಿಯೇಂದ್ರೆ" ಎಂಬ ಹೆಸರಿನಲ್ಲಿ ಬಲೀಂದ್ರನ ಪಾಡ್ದನವನ್ನು ಸಂಗ್ರಹಿಸಿ, ಉಡುಪಿಯ ತುಳುವ ಸಾಹಿತ್ಯಮಾಲೆಯವರು ಪ್ರಕಟಿಸಿದ್ದಾರೆ (೧೯೨೯). ಈ ಪಾಡ್ದನದಲ್ಲಿ ಒಟ್ಟು ಮೂರು ಸಂಧಿಗಳಿವೆ. ಗ್ರಂಥದ ಆರಂಭದಲ್ಲಿ 'ತುಳುವಾಲ ಬಲಿಯೇಂದ್ರ'ಹಬ್ಬವನ್ನು ಮಾಡುವ ರೀತಿಯನ್ನು ನಿರೂಪಿಸಲಾಗಿದೆ. ಜಾನಪದ ಅಧ್ಯಯನದಲ್ಲಿ ಆಚರಣೆಯೆಂಬ ವರ್ಗಕ್ಕೆ ಸೇರುವ ಪುಟಗಳ ವಿವರಣೆಯು ತುಳು ಜಾನಪದ ಸಂಗ್ರಹಣದಲ್ಲಿ ಮುಖ್ಯವಾಗಿದೆ.

ಸತ್ಯಮಿತ್ರ ಬಂಗೇರ ಅವರ 'ಅಳಿಯ ಸಂತಾನ ಕಟ್ಟಿದ ಗುಟ್ಟು' ಎಂಬ ತುಳು ಗ್ರಂಥವು ೧೯೩೦ ರಲ್ಲಿ ಪ್ರಕಟವಾಯಿತು. ಇದರಲ್ಲಿ ಬಂಗೇರರು ಅವರಿಗೆ ದೊರೆತ ಮಾಹಿತಿಗಳಿಂದ ಅಳಿಯ ಸಂತಾನ ಪದ್ಧತಿಯ ವಿವರಣೆಯನ್ನು ತುಳುವಿನಲ್ಲಿ ಕೊಟ್ಟಿದ್ದಾರೆ. ಇತಿಹಾಸ, ಪುರಾಣಗಳಿಂದ ಸಾಮಗ್ರಿಗಳನ್ನು ಕಲೆ ಹಾಕುವುದರ ಜೊತೆಗೆ, 'ಶಾಸ್ತ್ರೀಯ ವಿಚಾರ' ಎಂಬ ಹೆಸರಿನ ಒಂದು ಅಧ್ಯಾಯವನ್ನೂ ಬರೆದಿದ್ದಾರೆ. ಇದರಲ್ಲಿ 'ಪ್ರಕೃತಿ ಶಾಸ್ತ್ರ' (Naturology), 'ಮರ್ಮಶಾಸ್ತ್ರ' (Sexology), 'ಸಂಸಾರ ಶಾಸ್ತ್ರ' (Sociology), 'ಮಾನವ ಶಾಸ್ತ್ರ' (Anthropology), 'ಮನಶ್ಶಾಸ್ತ್ರ' (Psychology), 'ಧರ್ಮಶಾಸ್ತ್ರ' ಮುಂತಾದ ಶಾಸ್ತ್ರಗಳು ತುಳುವ ಸಂಸ್ಕೃತಿಯಲ್ಲಿ ಹೀಗೆ ಇವೆ ಎನ್ನುವುದನ್ನು ಸಂಕ್ಷಿಪ್ತವಾಗಿ ತಿಳಿಸಿದ್ದಾರೆ. 'ಅಳಿಯ ಸಂತಾನ ಕಟ್ಟು ಕಟ್ಟಳೆಗಳು' ಎಂಬ ಹೆಸರಿನಲ್ಲಿ ಸಿಗುವ ಹಳಗನ್ನಡ ಪಠ್ಯವನ್ನು ಸಂಪೂರ್ಣವಾಗಿ ಕೊಟ್ಟಿದ್ದಾರೆ.

ಈ ಭಾಸ್ಕರ ಆನಂದ ಸಾಲೆತ್ತೂರು ಅವರ "Ancient Karnataka Vol I : History cf Tuluva" ಗ್ರಂಥವು ಪ್ರಧಾನವಾಗಿ ತುಳುನಾಡಿನ ಇತಿಹಾಸವನ್ನು ಹೇಳುತ್ತದೆ. ಆದರೆ ಈ ಗ್ರಂಥದ ಕೊನೆಯ ಅಧ್ಯಾಯ ವಾದ "Life in Eerly Tuluva"ವು ಪ್ರಧಾನವಾಗಿ ತುಳು ಜಾನಪದಕ್ಕೆ ಸಂಬಂಧಿಸಿದೆ. ದೀರ್ಘವಾದ ಈ ಇಡೀ ಅಧ್ಯಾಯವನ್ನು ತುಳು ಪಾಡ್ದನಗಳ ಆಧಾರದಿಂದ ತಾನು ಬರೆದಿದ್ದೇನೆ ಎಂದು ಡಾ. ಸಾಲೆತ್ತೂರರು ಹೇಳಿಕೊಂಡಿದ್ದಾರೆ. Rev A· Manner A. C· Burnell ಮತ್ತು ಗಣಪತಿರಾವ್ ಐಗಳ ಅವರು ಸಂಗ್ರಹಿಸಿದ ಪಾಡ್ದನಗಳ ಜೊತೆಗೆ ತಾವು ಸಂಗ್ರಹಿಸಿದ ಪಾಡ್ದನಗಳನ್ನೂ ಡಾ. ಸಾಲೆತ್ತೂರರು ಈ ಅಧ್ಯಯನಕ್ಕೆ ಬಳಸಿಕೊಂಡಿರುವುದಾಗಿ ತಿಳಿಸಿದ್ದಾರೆ. ಪಾಡ್ದನಗಳಲ್ಲಿ ವ್ಯಕ್ತವಾಗುವ ತುಳುನಾಡಿನ ಸಂಸ್ಕೃತಿಯನ್ನು ತಿಳಿಯಲು ಈ ಅಧ್ಯಾಯ ಬಹಳ ಸಹಕಾರಿ. "Life in Early Tuluva" ದಲ್ಲಿ ಒಟ್ಟು ೧೩ ಚಿಕ್ಕ ಅಧ್ಯಾಯಗಳಿವೆ : (1) The Different peoples of Tuluva. (2) Seasons and State of Agriculturel (3) Commerce· (4) Dress and Ormaments· (5) War. (6) Amusements· 7) Means of Communication. (8) Sources of Revenue.(2) Education (10) Reiigion. (11) Customs and Manner: (12) A Picture of a Tuluva Household (13) The Budu or Manorlal House of a Tuluva Chieftain.

ಎನ್. ಎಸ್. ಕಿಲ್ಲೆ ಮತ್ತು ಎಸ್. ಎ. ಶೀನಪ್ಪ ಹೆಗ್ಗಡೆಯವರ 'ಪ್ರಾಚೀನ ತುಳುನಾಡು' (೧೯೫೪) ತುಳುನಾಡಿನ ಇತಿಹಾಸವನ್ನು ಕುರಿತ ಗ್ರಂಥವಾದರೂ ಇದರಲ್ಲಿ ತುಳು ಜಾನಪದಕ್ಕೆ ಸಂಬಂಧಿಸಿದ ಸಂಗತಿಗಳು ಅನೇಕ ಇವೆ. ಈ ಗ್ರಂಥದ ಎರಡನೆಯ ಭಾಗವನ್ನು 'ಪಾಡ್ದನಗಳ ತುಳುನಾಡು' ಎಂದು ಕರೆಯಲಾಗಿದೆ. ಇಲ್ಲಿ ಕೆಲವು ಪಾಡ್ದನಗಳ ಕಥಾಸಾರವನ್ನು ಕನ್ನಡದಲ್ಲಿ ಕೊಡಲಾಗಿದೆ. ಮುಖ್ಯವಾಗಿ ನಾಗಸಿರಿ, ಎದ್ಡೋಡಿ ಕೇತು ಮರಕಾಲ, ಲೆಕ್ಕೆಸಿರಿ, ಬೋಳದ ಕ್ಷತ್ರಿಯ ಅರಸರು, ಗಿಂಡೆ, ದೇಯಿ ಬೈದ್ಯೆದಿ, ಕೋಟಿ ಚೆನ್ನಯ, ಕಾಂತಾಬಾರೆ ಬೂದಾಬಾರೆ. ಕೋಕಟೆದ ಬಬ್ಬು ಮತ್ತು ತನ್ನಿಮಾನಿಗ'—ಈ ಪಾಡ್ದನಗಳ ಕಥಾಸಾರಾಂಶವು ಇಲ್ಲಿ ಸಿಗುತ್ತದೆ. ೩ ನೆಯ ಭಾಗವನ್ನು 'ಕಟ್ಟುಕಟ್ಟಳೆ' ಎಂದು ಕರೆಯಲಾಗಿದೆ. ಇದು ತುಳು ಜಾನಪದದ ಪದ್ಧತಿ, ಆಚರಣೆ, ಸಂಪ್ರದಾಯಗಳನ್ನು ಒಳಗೊಂಡಿದೆ. ಬೇರೆ ಬೇರೆ ಜಾತಿಗಳ ಸ್ವರೂಪ, ಭೂತಾಳ

ಪಾಂಡ್ಯನ ಅಳಿಯ ಕಟ್ಟಿನ ವಿಚಾರ, ಬಿಳಿ ಬಣ್ಣಗಳ ವಿಚಾರ, ಮೂಲ ನಿವಾಸಿಗಳ ಮದುವೆಯ ಕ್ರಮ ಮುಂತಾದ ವಿವರಗಳು ಸಿಗುತ್ತವೆ. ೪ ನೆಯ ಭಾಗದಲ್ಲಿ ಭೂತದ ಕೋಲ, ನೇಮ, ಅಳಿಯಕಟ್ಟು, ಮಕ್ಕಳ ಕಟ್ಟು, ಹಬ್ಬಗಳು, ವಿನೋದಗಳು ಮುಂತಾದುವುಗಳ ಪರಿಚಯವಿದೆ.

ಪಂಜೆ ಮಂಗೇಶರಾಯರು 'ಕೋಟಿ ಚೆನ್ನಯ' ಪಾಡ್ದನದ ಕಥೆಯನ್ನು ಕನ್ನಡದಲ್ಲಿ ನೀಳ್ಗತೆಯ ರೂಪದಲ್ಲಿ ಆಕರ್ಷಕ ಶೈಲಿಯಲ್ಲಿ ಬರೆದಿದ್ದಾರೆ. ತುಳು ಜಾನಪದದಲ್ಲಿ ಐತಿಹ್ಯರೂಪದಲ್ಲಿರುವ 'ಆಗೊಳಿ ಮಂಜಣ'ನ ಕತೆಯನ್ನೂ ಕನ್ನಡದಲ್ಲಿ ಬರೆದಿದ್ದಾರೆ.

ಅಮೃತ ಸೋಮೇಶ್ವರರು 'ತುಳು ಪಾಡ್ದನದ ಕಥೆಗಳು' (೧೯೬೨) ಎಂಬ ಹೆಸರಿನಲ್ಲಿ ಕಲ್ಕುಡ—ಕಲ್ಲುರ್ಟಿ, ಕೊಡಿರೆಂಕೆ ಗುರುಗುಂಚಿ ಬುಣ್ಣಾಳು ಮುಂತಾದ ಒಂಬತ್ತು ಪಾಡ್ದನಗಳ ಕಥೆಗಳನ್ನು ಸಂಕ್ಷಿಪ್ತವಾಗಿ ಕನ್ನಡದಲ್ಲಿ ಕೊಟ್ಟಿದ್ದಾರೆ. ಸೇವ ನಮಿರಾಜ ಮಲ್ಲರ 'ಭೂತಾರಾಧನೆಯ ಕಥೆಗಳು' (೧೯೭೦) ಗ್ರಂಥದಲ್ಲಿ ಪಿಲಿಚಾಮುಂಡಿ, ಕೊಡಮಣಿತಾಯ ಮುಂತಾದ ಹದಿನೈದು ಪಾಡ್ದನಗಳ ಕತೆಗಳು ಕನ್ನಡದಲ್ಲಿ ಇವೆ. ಈ ಎರಡು ಗ್ರಂಥಗಳಲ್ಲಿ ಕಾಣಿಸುವ ಹೆಚ್ಚಿನ ಪಾಡ್ದನಗಳು A Manner, A. C. Bnrnell ಹಾಗೂ ಗಣಪತಿ ರಾವ್ ಐಗಳೆ ಅವರ ಸಂಗ್ರಹಗಳಿಂದ ತೆಗೆದುಕೊಂಡವುಗಳೇ ಆಗಿವೆ. ರಸಿಕ ಪುತ್ತಿಗೆಯವರ "ಕಣಂದೂರು ಧರ್ಮ ಅರಸು ಶ್ರೀ ತೋಡಕುಕ್ಕಿನಾಲ್ ದೈವಸ್ಥಾನ ಪರಿಚಯ" (೧೯೬೭) ಗ್ರಂಥದಲ್ಲಿ ತೋಡಕುಕ್ಕಿನಾರ್ ಪಾಡ್ದನದ ಮೂಲ ಹಾಗೂ ಅನುವಾದ ಮತ್ತು ಆ ಭೂತ ನೆಲೆಸಿದ ಸ್ಥಳದ ವಿವರಣೆ, ಅದರ ಆರಾಧನೆಯ ವಿಧಾನ, ಆರಾಧನೆಯನ್ನು ಮಾಡುವ ಪೊಯ್ಯತ್ತಾಯ ಮನೆತನದ ವಂಶಾವಳಿ ಇವೆ. ತುಳುಪಾಡ್ದನಗಳ ಕನ್ನಡ ರೂಪವನ್ನು ಕೊಡುವ ಇತರ ಗ್ರಂಥಗಳು : ಕೆ. ಜಿ. ಶೆಟ್ಟಿ ಕಡಂದಲೆ ಅವರ "ತುಳುನಾಡ ಸಿರಿ" (೧೯೭೩) ಮತ್ತು "ಅಬ್ಬಗ—ದಾರಗ" (೧೯೭೮).

ಬೇಕಲ ರಾಮನಾಯಕರ "ತೆಂಕನಾಡ ಐತಿಹ್ಯಗಳ" (೧೯೬೯) ಮತ್ತು "ನಾಡ ಕಥೆಗಳ" (೧೯೬೯) – ಇವುಗಳಲ್ಲಿ ತುಳುನಾಡಿನ ಇತಿಹಾಸ ಮತ್ತು ಜಾನಪದದ ಅಂಗವಾದ ಐತಿಹ್ಯ ಒಟ್ಟು ಸೇರಿದೆ.

ಡಾ. ಪಿ. ಗುರುರಾಜ ಭಟ್ ಅವರ 'ತುಳುನಾಡು' (೧೯೬೦) ಇತಿಹಾಸದ ಗ್ರಂಥವಾದರೂ ಇದರಲ್ಲಿ ತುಳುನಾಡಿನ ಸಾಮಾಜಿಕ ಅಧ್ಯಯನಕ್ಕೆ ವಿಶೇಷ ಮಹತ್ವ ಕೊಡಲಾಗಿದೆ. ಬೇರೆ ಬೇರೆ ಜಾತಿಗಳು, ಕಟ್ಟು ಕಟ್ಟಳೆಗಳು, ತುಳುಗಾದೆಗಳು, ಜಾನಪದ ವಿನೋದಗಳು ಮುಂತಾದುವು ಸಂಗ್ರಹದ ದೃಷ್ಟಿಯಿಂದ ಇಲ್ಲಿ ಮುಖ್ಯವಾಗಿವೆ. ಇವರದ್ದೇ ಇನ್ನೊಂದು ಗ್ರಂಥ "Studies in Tuluva History and Culture' (೧೯೭೫) ನಲ್ಲಿ ೧೧ ಮತ್ತು ೧೨ ನೆಯ ಅಧ್ಯಾಯಗಳಲ್ಲಿ ತುಳು ಜಾನಪದವನ್ನು ಕುರಿತು ಕೆಲವು ವಿಚಾರಗಳು ಸಿಗುತ್ತವೆ. ತುಳುನಾಡಿನ ಜಾತಿಗಳು ಅಳಿಯ ಸಂತಾನ ಪದ್ಧತಿ, ಭೂತಾರಾಧನೆ ಮುಂತಾದುವುಗಳ ವಿವರಗಳಿವೆ. ಪ್ರಧಾನ ಭೂತಗಳ ಹೆಸರುಗಳ ಪಟ್ಟಿಯನ್ನು ಕೊಡಲಾಗಿದೆ.

ಜಿ. ಎಸ್. ಕಕ್ಕಿಲ್ಲಾಯರ "Kasaragod : The Land of Gods" ಗ್ರಂಥದಲ್ಲಿ ಕಾಸರಗೋಡು ತಾಲ್ಲೂಕಿನಲ್ಲಿ ಪ್ರಚಲಿತವಿರುವ ಕೆಲವು ಭೂತಗಳ ಪಾಡ್ದನಗಳ ಕಥೆ ಹಾಗೂ ವಿವರಣೆಯು ಇಂಗ್ಲಿಷ್‌ನಲ್ಲಿದೆ.

ಅಮೃತ ಸೋಮೇಶ್ವರರು ಗಣಪತಿಯನ್ನು ಕುರಿತ ತುಳುಪಾಡ್ದನವನ್ನು 'ಬಾಮಕುಮಾರ ಸಂಧಿ', ಎನ್ನುವ ಹೆಸರಿನಲ್ಲಿ ತುಳು ಮೂಲ ಹಾಗೂ ಕನ್ನಡ ಅನುವಾದದೊಡನೆ ಪ್ರಕಟಿಸಿದ್ದಾರೆ.(೧೯೭೮). ಅವರದ್ದೇ ಆದ 'ಅವಿಲು' (೧೯೭೮) ಎಂಬ ಲೇಖನಗಳ ಸಂಕಲನದಲ್ಲಿ ಕೆಲವು ತುಳು ಜನಪದ ಸಾಹಿತ್ಯವನ್ನು ಕುರಿತವು ಇವೆ. ತುಳು ಪಾಡ್ದನಗಳು, ಕಬಿತಗಳು, ತುಳು ಸಂಧಿಯಲ್ಲಿ ಸೀತಾಕಲ್ಯಾಣ, ಸಿರಿಗಳ ಸಂಧಿಯಲ್ಲಿ ಸಮಾಜ,

ತುಳು ಜನಪದ ಸಾಹಿತ್ಯದಲ್ಲಿ ಶಿವ, ತುಳು ಜನಪದ ಗೀತೆಗಳ ಲಯವೈವಿಧ್ಯ, ಕಂಬಳ, ಕೊರಗ ತನಿಯ, ಭೂತಾರಾಧನೆ ಮತ್ತು ಸಮಾಜ, ತುಳುನಾಡಿನ ಭೂತಪೂಜೆ - ಈ ಲೇಖನಗಳಲ್ಲಿ ತುಳು ಜಾನಪದ ಕೆಲವು ಅಂಗಗಳ ವಿವರಣಾತ್ಮಕ ಅಧ್ಯಯನ ಸಿಗುತ್ತದೆ.

ಡಾ. ಕೆ. ಶಿವರಾಮ ಕಾರಂತರ 'ಜಾನಪದ ಗೀತೆಗಳು' (೧೯೬೬)ನೇರವಾಗಿ ತುಳು ಜಾನಪದಕ್ಕೆ ಸಂಬಂಧಿಸಿಲ್ಲವಾದರೂ ನಿದರ್ಶನಗಳನ್ನು ಕೊಡುವಾಗ ಕಾರಂತರು ತುಳು ಜನಪದ ಹಾಡುಗಳನ್ನೂ ಉಲ್ಲೇಖಿಸಿದ್ದಾರೆ. ಪಂಜುರ್ಲಿ ಪಾಡ್ದನದ ಬೇರೆ ಬೇರೆ ಪಾಠಗಳ ಆಧಾರದಿಂದ ಕಾರಂತರು ಮಾಡುವ ಸಾಂಸ್ಕೃತಿಕ ವಿಶ್ಲೇಷಣೆ ಉಲ್ಲೇಖನೀಯವಾದದ್ದು. ತುಳು ಕೆಲಸದ ಹಾಡುಗಳು, ಕಥಾನಕಗಳು ಮುಂತಾದುವುಗಳ ಅಧ್ಯಯನದಲ್ಲಿ ಕಾರಂತರ ಮಾನವ ವಿಜ್ಞಾನದ ಹಿನ್ನೆಲೆಯನ್ನು ಗಮನಿಸಬಹುದು. ಕಾರಂತರ 'ಭೂತಾರಾಧನೆ' (೧೯೭೬) ಪರಿಚಯಾತ್ಮಕ ಚಿಕ್ಕ ಪುಸ್ತಕವಾದರೂ ಪಾಡ್ದನಗಳ ಆಧಾರದಿಂದ ಮಾನವ ದೃಷ್ಟಿಕೋನದಿಂದ ಭೂತಾರಾಧನೆಯನ್ನು ಅಧ್ಯಯನ ಮಾಡಿರುವುದು ಗಮನಾರ್ಹ.

ಎಂ. ನಾರಾಯಣ ಅವರ 'ತುಳು ಒಗಟುಗಳು, (೧೯೬೨) ತುಳು ಒಗಟುಗಳ ಮೊತ್ತ ಮೊದಲ ಪ್ರಕಟಿತ ಸಂಕಲನ. ಇಲ್ಲಿ ಸುಮಾರು ಇನ್ನೂರರಷ್ಟು ತುಳು ಒಗಟುಗಳನ್ನು ಕೊಡಲಾಗಿದೆ ; ಕನ್ನಡ ಅನುವಾದ ಇಲ್ಲ. ಎಂ. ನಾರಾಯಣ ಅವರು ಸಂಗ್ರಹಿಸಿದ ಸುಮಾರು ಸಾವಿರಕ್ಕೂ ಮೇಲ್ಪಟ್ಟು ತುಳುಗಾದೆಗಳು 'ಪ್ರಭಾತ'ಎಂಬ ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿವೆ. ಪುಸ್ತಕರೂಪದಲ್ಲಿ ಬಂದಿಲ್ಲ,

ಪ್ರಕೃತ ಲೇಖಕನ (ಬಿ. ಎ. ವಿವೇಕ ರೈ) 'ತುಳು ಗಾದೆಗಳು' (೧೯೭೧) ಮತ್ತು 'ತುಳು ಒಗಟುಗಳು' (೧೯೭೧) – ಇವು ತುಳು ಜನಪದ ಸಾಹಿತ್ಯದ ಎರಡು ಶಾಸ್ತ್ರೀಯ ಸಂಗ್ರಹಗಳು. 'ತುಳುಗಾದೆಗಳು' ಸಂಕಲನದಲ್ಲಿ ೭೦೪ ತುಳುಗಾದೆಗಳನ್ನು ಕನ್ನಡ ಅನುವಾದ ಸಹಿತ ಕೊಡಲಾಗಿದೆ. ಅಗತ್ಯ ಕಂಡ ಕಡೆಗಳಲ್ಲಿ ತುಳುಗಾದೆಗಳಿಗೆ ಅವುಗಳ ಹಿನ್ನೆಲೆಯನ್ನ ತಿಳಿಸುವ ಘಟನೆ, ವಿವರಣೆಗಳನ್ನು ಕನ್ನಡದಲ್ಲಿ ಕೊಟ್ಟಿದೆ. ಗ್ರಂಥದ ಕೊನೆಯಲ್ಲಿ ತುಳು—ಕನ್ನಡ ಅರ್ಥಕೋಶವಿದೆ. ಗ್ರಂಥದ "ಪ್ರಸ್ತಾವನೆ"ಯಲ್ಲಿ 'ಗಾದೆ' ಶಬ್ದದ ನಿಷ್ಪತ್ತಿ- ಗಾದೆಯ ಲಕ್ಷಣಗಳು, ಉಗಮ, ಸ್ವರೂಪ, ದೊರೆಯುವಿಕೆ, ಮೌಲ್ಯ ಮತ್ತು ಮಹತ್ವ, ಕಾರ್ಯಗಳು, ಪ್ರಭೇದಗಳು, ತುಳುಗಾದೆಗಳಲ್ಲಿ ತುಳುನಾಡಿನ ಸಂಸ್ಕೃತಿ–ಇಂತಹ ವಿಚಾರಗಳನ್ನು ವಿವರವಾಗಿ ನಿರೂಪಿಸಲಾಗಿದೆ. ಪ್ರಕೃತ ಲೇಖಕನ "ತುಳು ಒಗಟುಗಳು" ಸಂಕಲನದಲ್ಲಿ ೫೦೭ ತುಳು ಒಗಟುಗಳು ಮತ್ತು ಅವುಗಳ ಉತ್ತರಗಳನ್ನು ಕನ್ನಡ ಅನುವಾದ ಸಹಿತ ಕೊಡಲಾಗಿದೆ. ತುಳುವಿನ ಒಗಟು ಕಥೆ ಮತ್ತು ಪ್ರಶ್ನೋತ್ತರ ಒಗಟುಗಳ ವಿವರಣಾತ್ಮಕ ನಿದರ್ಶನಗಳು ಪ್ರಸ್ತಾವನೆಯಲ್ಲಿವೆ.

ಈ ಲೇಖಕನ (ವಿವೇಕ ರೈ) "ತೌಳವ ಸಂಸ್ಕೃತಿಯು" (೧೯೭೭) ತುಳುಭಾಷೆ, ಸಾಹಿತ್ಯ ಮತ್ತು ಕಲೆಗಳನ್ನು ಕುರಿತು ಲೇಖನಗಳನ್ನೊಳಗೊಂಡ ಸಂಶೋಧನಾತ್ಮಕ ಕೃತಿ. ಇದರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ಜನಪದ ಕಲಾತ್ಮಕ ವಿನೋದಗಳು, ದಕ್ಷಿಣ ಕನ್ನಡ ಜಿಲ್ಲೆಯ ಜನಪದ ಸಾಹಿತ್ಯದ ಬಗೆಗಳು, ತುಳು ಗಾದೆಗಳು, ತುಳುಒಗಟುಗಳು ಎಂಬ ಲೇಖನಗಳು ತುಳು ಜಾನಪದಕ್ಕೆ ಸಂಬಂಧ ಪಡುತ್ತವೆ.

ಈ ಲೇಖಕನ (ವಿವೇಕ ರೈ) "ತುಳುವ ಅಧ್ಯಯನ : ಕೆಲವು ವಿಚಾರಗಳು" ಎಂಬ ಗ್ರಂಥದಲ್ಲಿ (೧೯೮೦)ನ ಐದು ಲೇಖನಗಳು ತುಳು ಜಾನಪದ ಅಧ್ಯಯನವನ್ನು ಹೆಚ್ಚು ವೈಜ್ಞಾನಿಕವಾಗಿ ನೆಲೆಗೊಳಿಸಿದ ರೀತಿಯವು. ಇಲ್ಲಿನ ಪಾಡ್ದನಗಳು, ಪಂಜುರ್ಲಿ ಪಾಡ್ದನಗಳ ವಿಶ್ಲೇಷಣೆ, ತುಳು ಕಬಿತಗಳು, ಉರಲ್–ಈ ಲೇಖನಗಳು ತುಳು ಜನಪದ ಸಾಹಿತ್ಯದ ಕಾವ್ಯರೂಪಗಳ ಶಾಸ್ತ್ರೀಯ ಅಧ್ಯಯನಕ್ಕೆ ಮೀಸಲಾಗಿದೆ. 'ತುಳುನಾಡಿನ ಮೇರರು' ಎಂಬ ಲೇಖನವು ಒಂದು ಜನಾಂಗದ ಅಧ್ಯಯನದ ಚಿತ್ರವನ್ನು ಕೊಡುತ್ತದೆ.

ಕನರಾಡಿ ವಾದಿರಾಜ ಭಟ್ಟರ "ಪಾಡ್ದನಗಳು (ಅಧ್ಯಯನಾತ್ಮಕ ಸಂಗ್ರಹ)" (೧೯೭೪) ಎಂಬ ಗ್ರಂಥದ ಆರಂಭದಲ್ಲಿ ತುಳು ಪಾಡ್ದನಗಳ ಸ್ವರೂಪ, ಇತಿಹಾಸ, ಶೈಲಿ, ಮಹತ್ವ, ಅವುಗಳಲ್ಲಿ ವ್ಯಕ್ತವಾಗುವ ಸಂಸ್ಕೃತಿ ಸಂಪ್ರದಾಯ, ಆಚರಣೆಗಳನ್ನು ಅಧ್ಯಯನ ಮಾಡಲಾಗಿದೆ. ಬಳಿಕ ಬಲೀಂದ್ರ, ಬಾಲಕೃಷ್ಣ, ಜುಮಾದಿ, ಪಂಜುರ್ಲಿ, ಕಲ್ಕುಡ, ಕಲ್ಲುರ್ಟಿ ಮುಂತಾದ ಭೂತಗಳ ಪಾಡ್ದನಗಳನ್ನು ತುಳುಮೂಲ ಮತ್ತು ಕನ್ನಡ ಅನುವಾದಗಳ ಮೂಲಕ ಕೊಡಲಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಡೆದ ಸಾಹಿತ್ಯ ಸಮ್ಮೇಳನ, ಜಾನಪದ ಸಮ್ಮೇಳನಗಳು, ಸಂಭಾವನಾ ಗ್ರಂಥಗಳು ಮುಂತಾದುವು ತುಳುಜಾನಪದಕ್ಕೆ ಸಂಬಂಧಿಸಿದ ಲೇಖನಗಳನ್ನು ಒಳಗೊಂಡಿವೆ.

"ತೆಂಕನಾಡು" (೩೧ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಕಾಸರಗೋಡು ೧೯೪೭) "ಶ್ರೀ ಪಂಜೆಯವರ, ನೆನಪಿಗಾಗಿ (೧೯೫೨), "ಮಧುಪುರ" (ಕಾಸರಗೋಡು ೧೯೬೨) "ಹೊನ್ನ ಬಿತ್ತೇವು ಹೊಲಕೆಲ್ಲ" (ಅಖಿಲ ಕರ್ನಾಟಕ ಜನಪದ ಸಾಹಿತ್ಯ ಸಮ್ಮೇಳನ, ತರೀಕೆರೆ. ೧೯೬೭), "ದಿಬ್ಬಣ" (ದಕ್ಷಿಣ ಕನ್ನಡ ಜಿಲ್ಲಾ ಸಾಹಿತ್ಯ ಸಮ್ಮೇಳನ, ಕಾರ್ಕಳ. ೧೯೭೨), "ಬಾಸಿಗ" (ಸ್ಮೃತಿ ಸಂಪುಟ, ದ.ಕ, ಜಿಲ್ಲಾ ಸಾಹಿತ್ಯ ಸಮ್ಮೇಳನ, ಕಾರ್ಕಳ, ೧೯೭೨)". ಸುದರ್ಶನ" (ಡಾ. ಟಿ,ಎಂ.ಎ.ಪೈ ಅಭಿನಂದನ ಗ್ರಂಥ. ೧೯೭೭), "ರತ್ನ ಮಂಜೂಷ" (೫೧ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಧರ್ಮಸ್ಥಳ. ೧೯೭೯)-ಈ ಸಂಪುಟಗಳಲ್ಲಿ ತುಳು ನಾಡಿನ ಜಾನಪದಕ್ಕೆ ಸಂಬಂಧಿಸಿದ ಬೇರೆ ಬೇರೆ ವಿಧದ ಲೇಖನಗಳು ಸಿಗುತ್ತವೆ.

ತುಳುಜಾನಪದದ ಎಲ್ಲ ಪ್ರಕಾರಗಳ ಸಮರ್ಪಕವಾದ ಸಂಕಲನ ಕಾರ್ಯವೇ ಆಗಿಲ್ಲ. ತುಳುಗಾದೆ ಮತ್ತು ತುಳು ಒಗಟುಗಳ ಸಂಗ್ರಹಕಾರ್ಯ ತೃಪ್ತಿಕರವಾಗಿ ಆಗಿ, ಸಂಕಲನಗಳು ಪ್ರಕಟವಾಗಿದೆ. ತುಳುಜನಪದ ಕಾವ್ಯಭಾಗದಲ್ಲಿ ಬಹಳ ಮುಖ್ಯ ಅಂಗವಾದ ಪಾಡ್ದನಗಳ ಸಂಗ್ರಹ ಸ್ವಲ್ಪ ಮಟ್ಟಿಗೆ ಆಗಿದ್ದರೂ ಪಾಡ್ದನಗಳ ಒಟ್ಟು ಸಾಮಗ್ರಿಗೆ ಹೋಲಿಸಿದಾಗ ಈವರೆಗೆ ಆಗಿರುವುದು ಬಹಳ ಸ್ವಲ್ಪ. ಅದೂ ಸಮರ್ಪಕವಾಗಿ ಆಗಿಲ್ಲ. ಕುಣಿತದ ಹಾಡುಗಳು, ಕೆಲಸದ ಹಾಡುಗಳು, ಶಿಶುಪ್ರಾಸಗಳು, ಇತರ ಜನಪದ ಹಾಡುಗಳು – ಇವುಗಳ ಸಂಗ್ರಹ ಬಿಡಿ ಬಿಡಿಯಾಗಿ ಸ್ವಲ್ಪ ಆಗಿ, ಪತ್ರಿಕೆಗಳಲ್ಲಿ ಕಾಣಿಸಿಕೊಂಡಿದೆ. ಆದರೆ ಸಮರ್ಪಕವಾದ ಸಂಗ್ರಹವಾಗಲೀ, ಒಂದು ಸಂಕಲನವಾಗಲೀ ಆಗಿಲ್ಲ. ತುಳು ಜನಪದ ಕತೆಗಳ ಒಂದೇ ಒಂದು ಸಂಕಲನ ಈ ವರೆಗೆ ಪ್ರಕಟವಾಗಿಲ್ಲ. 'ತುಳುಕೂಟ'ದಂತಹ ಪತ್ರಿಕೆಗಳಲ್ಲಿ ಕೆಲವು ಬಿಡಿ ಜನಪದಕತೆಗಳು ಪ್ರಕಟವಾಗಿವೆ. ಸಾಹಿತ್ಯೇತರ ಜಾನಪದ ವಿಭಾಗದಲ್ಲಿ ಸಂಗ್ರಹವೇ ಆರಂಭವಾಗಿಲ್ಲ. ಅಧ್ಯಯನದ ದೃಷ್ಟಿಯಿಂದಲೂ ತುಳುಜಾನಪದ ಇನ್ನೂ ಕನ್ನೆನೆಲವಾಗಿಯೇ ಉಳಿದಿದೆ. ಈ ಸಂಶೋಧನ ಪ್ರಬಂಧದಲ್ಲಿ ಮೊತ್ತಮೊದಲ ಬಾರಿ ತುಳು ಜನಪದ ಸಾಹಿತ್ಯದ ವೈಜ್ಞಾನಿಕ ಅಧ್ಯಯನ ಕಾರ್ಯವನ್ನು ಮಾಡಲಾಗಿದೆ.

# ಪಾಡ್ದನಗಳು

**ಪಾಡ್ದನಗಳ ಸ್ವರೂಪ :**

ತುಳು ಜನಪದ ಸಾಹಿತ್ಯದ ಗೀತ ಸಂಪ್ರದಾಯದಲ್ಲಿ 'ಪಾಡ್ದನಗಳು' ಪ್ರಧಾನವಾದುವು. ಇವುಗಳನ್ನು ಸಾಮಾನ್ಯವಾಗಿ ಜನಪದ ಕಥನ ಕವನಗಳ (Ballans) ಗುಂಪಿಗೆ ಸೇರಿಸಬಹುದು. ಆದರೆ ಅನೇಕ ಪಾಡ್ದನಗಳು Balladನ ವ್ಯಾಪ್ತಿಯನ್ನು ಮೀರಿ ಜನಪದ ಮಹಾಕಾವ್ಯ (Folk epic) ಗಳಾಗುತ್ತವೆ. ಇನ್ನು ಕೆಲವು ಪಾಡ್ದನಗಳು ಲಾವಣಿ ಚಿತ್ರ (Ballad cycle)ನ ಸ್ವರೂಪದವು. ವಸ್ತುವಿನ ದೃಷ್ಟಿಯಿಂದ 'ಪಾಡ್ದನಗಳು ಜನಪದ ಪುರಾಣ (Myths)ಗಳ ವರ್ಗಕ್ಕೆ ಸೇರುತ್ತವೆ.

**ಪಾಡ್ದನ ಶಬ್ದದ ನಿಷ್ಪತ್ತಿ**

'ಪಾಡ್ದನ' ಶಬ್ದದ ಭಿನ್ನರೂಪಗಳಾಗಿ 'ಪಾರ್ದನ', 'ಪಾಡ್ದೊನೆ', 'ಪಾಡ್ದನೊ' ಎಂಬ ಪದಗಳು ರೂಢಿಯಲ್ಲಿವೆ.

(೧) ಎಂ. ಗೋವಿಂದ ಪೈಯವರು 'ಪಾಡ್ದನ'ಗಳನ್ನು 'ಪ್ರಾರ್ಥನೆ' ಎಂಬ ಅರ್ಥದಲ್ಲಿ ಬಳಸಿದ್ದಾರೆ. "ಭೂತಗಳ ಚರಿತ್ರೆಗಳನ್ನು ಆದ್ಯಂತವಾಗಿ ಬಣ್ಣಿಸುವ ಪಾಡ್ದನೆ (ಪ್ರಾರ್ಥನೆ) ಗಳೆಂಬ ವಚನ ಕಾವ್ಯಗಳನ್ನು ಆಯಾ ಭೂತದ ಗುಡಿಯಲ್ಲಿ ಅದರ ತೂಳು ಬಂದವನ ಬಳಗದವರು ಹಾಡುವ ಪದ್ಧತಿ ಉಂಟು.[1]

(೨) ಡಾ. ಬಿ. ಎ. ಸಾಲೆತ್ತೂರು – The word Padadana resembles the Dravidian word Pat – meaning a song. But the nature of a Tulu Padadana is essentially that of Prarthana - Prayer."

ಇವರಿಬ್ಬರ ಅಭಿಪ್ರಾಯದಂತೆ 'ಪಾಡ್ದನ' ಮತ್ತು 'ಪ್ರಾರ್ಥನೆ' ಎಂಬ ಪದಗಳು ಒಂದೇ ಅರ್ಥದವು ಎಂಬ ಭಾವನೆ ಬರುತ್ತದೆ, ಆದರೆ ಈ ಅಭಿಪ್ರಾಯವನ್ನು ಒಪ್ಪಲು ಆಗುವುದಿಲ್ಲ. 'ಪಾಡ್ದನ'ದ ಸ್ವರೂಪ

---

1 ಗೋವಿಂದ ಪೈ. ಎಂ; – "ತುಳುನಾಡು ಪೂರ್ವಸ್ಮೃತಿ"; 'ತೆಂಕನಾಡು' ಪು. 50.

(Form) ಮತ್ತು ಕ್ರಿಯೆ(Action) ಪ್ರಾರ್ಥನೆಯ ರೀತಿಯಲ್ಲಿ ಎಲ್ಲಿಯೂ ಕಾಣಿಸುವುದಿಲ್ಲ. 'ಪ್ರಾರ್ಥನೆ' ಎಂಬ ಸಂಸ್ಕೃತ ಶಬ್ದವು ತುಳುವಿಗೆ ಬರುವಾಗ 'ಪಿರಾರ್ಥನೆ' ಅಥವಾ 'ಪಿರತ್ನನೆ' ಎಂದಾಗುತ್ತದೆ. ಈ ರೀತಿ ಶಬ್ದರೂಪಗಳು ತುಳುವಿನಲ್ಲಿ ರೂಢಿಯಲ್ಲಿವೆ.

(೩) ಟಿ. ಕೇಶವ ಭಟ್ಟ : ಇದರ ಉಚ್ಚಾರಣೆ ಪಾಡ್ದನವಲ್ಲ. ಪಾರ್ದನ, ಪಾರ್ತ್ನ–ಎಂದಿದೆ. 'ಪರತ್ ಪಣ್ಣುನೆ' ಎಂದು ಈ ಸಾಹಿತ್ಯವನ್ನರಿತ ತುಳು ಜನರು ಹೇಳುತ್ತಾರೆ. ಆದುದರಿಂದ 'ಪಳಮೆ' ಎಂಬ ಅರ್ಥವಿರುವ 'ಪರತ್ನನ' ಎಂಬುದೇ ಈ ಶಬ್ದದ ಮೂಲರೂಪವೆಂದು ತಿಳಿಯಬಹುದು."[1]

ಆದರೆ ತುಳು ಭಾಷೆಯಲ್ಲಿ 'ಹಳಮೆ' ಎಂಬರ್ಥದಲ್ಲಿ 'ಪರತ್ನನ' ಎಂಬ ಶಬ್ದರೂಪ ಸಿಗುವುದಿಲ್ಲ.

(೪) 'ಪಾಡ್ದನ' ಶಬ್ದದ ಹೆಚ್ಚು ಅಂಗೀಕೃತವಾದ ಶಬ್ದ ನಿಷ್ಪತ್ತಿ, 'ಹಾಡು' ಎಂಬ ಅರ್ಥವುಳ್ಳ 'ಪಾಡ್' ಅಥವಾ 'ಪಾಟ್' ಎಂಬ ಧಾತುವಿನಿಂದ. ಹೆಚ್ಚಿನ ದ್ರಾವಿಡ ಭಾಷೆಗಳಲ್ಲಿ 'ಪಾಡ್', 'ಪಾಟ್', 'ಪಾರ್' (par.) ಎನ್ನುವ ಧಾತುಗಳಿಗೆ 'ಹಾಡುವುದು' (to sing) ಎನ್ನುವ ಅರ್ಥವಿದೆ.[2]

Ta : pāṭu (pāṭi = to sing; chant; warble; hum.

Ma: pāṭuka = to sing.

Konda : pār. = to sing.

Kurukh : pāṛnā = to sing.

Malto : pāṛe = to sing.

Kannada : pāḍ = to sing.

## ಪಾಡ್ದನ ಮತ್ತು ಸಂಧಿ

'ಪಾಡ್ದನ'ಗಳನ್ನು ಜನಪ್ರಿಯವಾಗಿ 'ಸಂಧಿಗಳು' ಎಂದೂ ಕರೆಯುತ್ತಾರೆ, 'ಕೋಟಿ ಚೆನ್ನಯ' ಪಾಡ್ದನವನ್ನು 'ಬಂಟೆರೆ ಸಂಧಿ', 'ಸಿರಿಯ ಪಾಡ್ದನ'ವನ್ನು 'ಸಿರಿನ ಸಂಧಿ' – ಈ ರೀತಿ ಕರೆಯುವುದು ಹೆಚ್ಚು ರೂಢಿಯಲ್ಲಿದೆ. ಒಂದು ದೀರ್ಘ ಕಾವ್ಯದಲ್ಲಿ ಅಧ್ಯಾಯಗಳು ಇರುವಂತೆ ಕೆಲವು ದೀರ್ಘವಾದ ಪಾಡ್ದನಗಳಲ್ಲಿ ಬೇರೆ ಬೇರೆ ಸಂಧಿಗಳು ಇವೆ. ಒಂದೇ ಪಾಡ್ದನದ ಸಂಧಿಗಳು ಸ್ವತಂತ್ರ ಖಂಡ ಕಾವ್ಯಗಳ ಹಾಗೆ ಅಸ್ತಿತ್ವವನ್ನು ಪಡೆಯುತ್ತವೆ. ಉದಾ : 'ಕೋಟಿ ಚೆನ್ನಯ' ಪಾಡ್ದನದಲ್ಲಿ 'ಪೆರ್ಮಲೆ ಬಲ್ಲಾಳ ಸಂಧಿ', 'ಧೇಯಿ ಬೈದ್ಯೆತಿ ಸಂಧಿ', 'ಕೋಟಿ ಚೆನ್ನಯೆರೆ ಸಂಧಿ' ಇತ್ಯಾದಿ. ಹಾಗೆಯೇ 'ಸಿರಿಯ ಪಾಡ್ದನ'ದಲ್ಲಿ 'ಅಬ್ಬಗೆ ದಾರಗೆ ಸಂಧಿ ಇತ್ಯಾದಿ. ಕ್ರಮೇಣ ಇಡೀ 'ಪಾಡ್ದನ'ಕ್ಕೇ 'ಸಂಧಿ' ಎನ್ನುವ ಪದ ಬಳಕೆಯಾಗಿರಬಹುದು. 'ಸಂಧಿ'

---

1 ಕೇಶವ ಭಟ್ಟ, ಟಿ. : 'ಹಾಡಿನ ಚೂಡಾಮಣಿ'; ಪ್ರಸ್ತಾವನೆ, ಚಿರಸಾಹಿತ್ಯ ಪ್ರಕಾಶನ, ಬೆಂಗಳೂರು, 1971, ಪು.12.

2 Burrow T. and Emeneau M. B. : "A Dravidian Etymological Dictionary". Oxford, 1961, p. 272.

ಎನ್ನುವುದು ಪಾಡ್ದನ'ಕ್ಕಿಂತ ಹೆಚ್ಚು ಪ್ರಚಲಿತವಿರುವ ಶಬ್ದ. ರೂಢಿಯಲ್ಲಿ 'ಪಾಡ್ದನ' ಮತ್ತು 'ಸಂಧಿ' ಗಳಿಗೆ ಯಾವುದೇ ವ್ಯತ್ಯಾಸ ಕಾಣುವುದಿಲ್ಲ.

**ಪಾಡ್ದನಗಳ ವಸ್ತು :**

ವಸ್ತುವಿನ ದೃಷ್ಟಿಯಿಂದ ಪಾಡ್ದನಗಳನ್ನು ಸ್ಥೂಲವಾಗಿ ಹೀಗೆ ವಿಂಗಡಿಸಬಹುದು.

೧) ಅತಿಮಾನುಷ ವಸ್ತುವುಳ್ಳ ಪಾಡ್ದನಗಳು.

೨) ಲೌಕಿಕ ವಸ್ತುವುಳ್ಳ ಪಾಡ್ದನಗಳು.

**ಅತಿಮಾನುಷ ವಸ್ತುವುಳ್ಳ ಪಾಡ್ದನಗಳು**

೧) ಭೂತಕ್ಕೆ ಸಂಬಂಧಿಸಿದ ಪಾಡ್ದನಗಳು

೨) ಪೌರಾಣಿಕ ವ್ಯಕ್ತಿಗಳುಳ್ಳ ಪಾಡ್ದನಗಳು.

೩) ಅತಿಮಾನುಷ, ಅಲೌಕಿಕ ವ್ಯಕ್ತಿಗಳಿಗೆ ಸಂಬಂಧಿಸಿದ ಪಾಡ್ದನಗಳು.

**ಲೌಕಿಕ ವಸ್ತುವುಳ್ಳ ಪಾಡ್ದನಗಳು**

೧) ಸುಖಾಂತ ವಸ್ತು.

೨) ದುರಂತ ವಸ್ತು.

**ಪಾಡ್ದನಗಳನ್ನು ಹಾಡುವ ಸಂದರ್ಭ:**

೧) 'ಪಾಡ್ದನಗಳು' ಅಥವಾ ಸಂಧಿಗಳು' ಹೆಚ್ಚಿನ ಪ್ರಮಾಣದಲ್ಲಿ ಭೂತಗಳನ್ನು ಕುರಿತು ಇವೆ. ಭೂತಗಳಿಗೆ ಸಂಬಂಧಿಸಿದ ಪಾಡ್ದನಗಳನ್ನು ಆಯಾ ಭೂತಗಳ ಉತ್ಸವ – ನೇಮ, ಕೋಲ, ಆಯನ, ಮೆಚ್ಚಿ, ಮೈಮೆ. ಧರ್ಮ ನೇಮಗಳ ಸಂದರ್ಭಗಳಲ್ಲಿ ಹಾಡುತ್ತಾರೆ. ಭೂತವನ್ನು ಕಟ್ಟುವವನು[1] – ವೇಷ ಹಾಕುವವನು – ವೇಷ ಹಾಕಲು ಕುಳಿತಾಗ[2] ಅವನ ಮನೆಯ ಹೆಂಗಸೊಬ್ಬಳು ತಂಬರೆ[3]ಯನ್ನು ಬಡಿಯುತ್ತಾಳೆ. ಅವಳು ಪಾಡ್ದನದ ಮುಂದಿನ ಸಾಲನ್ನು

---

1 ಭೂತದ ವೇಷ ಹಾಕುವವನು ಪರವ, ಪಂಬದ, ನಲ್ಕೆಯವ. ಪಾಣಾರ – ಇವುಗಳಲ್ಲಿ ಯಾವುದಾದರೂ ಒಂದು ಹರಿಜನ ವರ್ಗದವನಾಗಿರುತ್ತಾನೆ.

2 ವೇಷ ಹಾಕಲು ಕುಳಿತುಕೊಳ್ಳುವುದಕ್ಕೆ ತುಳುವಿನಲ್ಲಿ 'ಅಯ್ಯಕ್ಕೆ' ಕುಳಿತುಕೊಳ್ಳುವುದು ಎನ್ನುತ್ತಾರೆ.

3 'ತೆಂಬರೆ'ಯೆಂದರೆ ಸಣ್ಣ ಡೋಲಿನಂತಹ ಚರ್ಮವಾದ್ಯ.

ಹೇಳುತ್ತಾಳೆ. ಭೂತ ಕಟ್ಟುವವನು – ವೇಷಧಾರಿ – ಆ ಪಾಡ್ದನದ ಮುಂದಿನ ಸಾಲನ್ನು ಹೇಳುತ್ತಾನೆ. ಮತ್ತೆ ಒಂದು ಸಾಲನ್ನು ಅವಳು ಹಾಡುತ್ತಾಳೆ. ಈ ರೀತಿ ಅವರಿಬ್ಬರೂ ಒಂದರ ಬಳಿಕ ಒಂದು ಸಾಲುಗಳನ್ನು ರಾಗಬದ್ಧವಾಗಿ ಹೇಳುತ್ತಾಳೆ. ಪ್ರತಿಯೊಂದು ಸಾಲಿನ ಆರಂಭದಲ್ಲಿ "ಏsss ಅsss." ಎನ್ನುವ ಆಲಾಪನೆ ಇರುತ್ತದೆ. ಈ ರೀತಿಯ ಆಲಾಪನೆ ಎರಡ ಸಾಲುಗಳನ್ನು ಕೊಂಡಿಯಂತೆ ಸೇರಿಸಿ, ಕಥನ ಕ್ರಿಯೆಯನ್ನು ಮುಂದುವರಿಸುತ್ತದೆ. ಇಲ್ಲಿ ಭೂತ ಕಟ್ಟುವ ಗಂಡಸು 'ಪಾಡ್ದನ' ಹಾಡುವ ರೀತಿಗೂ, 'ತೆಂಬರೆ' ಬಡಿಯುವ ಹೆಂಗಸು 'ಪಾಡ್ದನ' ಹಾಡುವ ರೀತಿಗೂ ವ್ಯತ್ಯಾಸವಿದೆ.

೨) 'ಪಾಡ್ದನ' ಅಥವಾ 'ಸಂಧಿ'ಗಳನ್ನು ಹೊಲಗಳನ್ನು ನೇಜಿ ತೆಗೆಯುವಾಗ ಹಾಡುತ್ತಾರೆ. ಇದರಲ್ಲಿ ಭೂತದ ಸಂಧಿಗಳೂ ಇರುತ್ತವೆ. ಭೂತದ ಸಂಧಿಗಳನ್ನು ಭೂತದ ಆಚರಣೆ (ritual)ಗಿಂತ ಹೊರಗೆ ಹಾಡಬಾರದು ಎಂಬ ನಿರ್ಬಂಧ ಇದ್ದ ಹಾಗೆ ಕಾಣುವುದಿಲ್ಲ. ನೇಜಿ ತೆಗೆಯುವಾಗ ಈ ಸಂಧಿಗಳು ಪ್ರಯೋಗವಾದರೂ ಇವುಗಳನ್ನು ಶುದ್ಧ ಕೆಲಸದ ಹಾಡುಗಳು. (Work songs) ಎಂಬ ವರ್ಗಕ್ಕೆ ಸೇರಿಸುವುದು ಸರಿಯಾಗುವುದಿಲ್ಲ. ನೇಜಿ ತೆಗೆಯುವಾಗ ಆ ಕೆಲಸ ಮಾಡುವ ಹೆಂಗಸರ ಗುಂಪಿನಲ್ಲಿ ಯಾವಳೋ ಒಬ್ಬಾಕೆ ಅಥವಾ ಇಬ್ಬರು ಮಾತ್ರ ಸಂಧಿ ಗಳನ್ನು ಹಾಡುತ್ತಾರೆ, ಉಳಿದವರು ಹಾಡದೆ ಸುಮ್ಮಗಿರುತ್ತಾರೆ. ಇಬ್ಬರು ಹಾಡುವಾಗ. ಒಬ್ಬಳು ಹಾಡಿದ ಸಾಲನ್ನೇ ಇನ್ನೊಬ್ಬಳೂ ಪುನರಾವರ್ತನೆ ಮಾಡುತ್ತಾಳೆ. ಆಯಾಸ ಪರಿಹಾರ ಕ್ಕಾಗಿ, ಮನೋರಂಜನೆಗಾಗಿ 'ಸಂಧಿಗಳು' ಇಲ್ಲಿ ಬಳಕೆಯಾಗುತ್ತವೆ.

೩) ಮನೆಗಳಲ್ಲಿ ರಾತ್ರಿಯ ವೇಳೆ ಮನೋರಂಜನೆಗಾಗಿ ಕಥೆಗಳನ್ನು ಹೇಳುವಂತೆಯೇ, 'ಸಂಧಿ'ಗಳನ್ನು ಹೇಳುವ ಪದ್ಧತಿ ತುಳುನಾಡಿನಲ್ಲಿ ಹಿಂದೆ ಬಳಕೆಯಲ್ಲಿತ್ತು. ಇಲ್ಲಿ ಭೂತದ ಸಂಧಿಗಳೂ ಸೇರು ತ್ತಿದ್ದುವು. ಲೌಕಿಕ ಪಾಡ್ದನಗಳೂ ಇರುತ್ತಿದ್ದುವು. 'ಕೋಟಿ ಚೆನ್ನಯ' ಮತ್ತು 'ಸಿರಿ' ಯಂತಹ ಭೂತಗಳಲ್ಲದ, ಆದರೆ ಅತಿಮಾನುಷ ಶಕ್ತಿಗಳೆಂದು ಜನರಿಂದ ಅಂಗೀಕೃತವಾದ ವ್ಯಕ್ತಿ ಗಳಿಗೆ ಸಂಬಂಧಿಸಿದ ಪಾಡ್ದನಗಳೂ ಇಲ್ಲಿ ಕಥಿತವಾಗುತ್ತಿದ್ದುವು. ಸಂಪೂರ್ಣವಾಗಿ ಧಾರ್ಮಿಕ ವಾತಾವರಣವುಳ್ಳ, ಆಚರಣೆ (ritual)ಗೆ ಸಂಬಂಧಿಸಿದ ಈ ಸಂಧಿಗಳು ಮನೋರಂಜನೆಯ ಉದ್ದೇಶಕ್ಕಾಗಿ ಲೌಕಿಕ ಪರಿಸರದಲ್ಲೂ ಕ್ರಿಯಾತ್ಮಕವಾಗಿ ಇದ್ದುದು ವಿಶೇಷವಾಗಿದೆ.

೪) 'ಕೋಟಿ ಚೆನ್ನಯ್ಯ ಪಾಡ್ದನ' ಮತ್ತು 'ಸಿರಿಯ ಪಾಡ್ದನ, ಕೋಟಿ ಚೆನ್ನಯರನ್ನು ಮತ್ತು ಸಿರಿಯನ್ನು ಭೂತಗಳೆಂದು ಕರೆಯುವುದಿಲ್ಲ. ಆದರೆ ಅತಿಮಾನುಷ ವ್ಯಕ್ತಿಗಳೆಂದು ಪೂಜಿಸು ತ್ತಾರೆ. 'ಕೋಟಿ ಚೆನಯ್ಯ'ದ ನೇಮದ ವೇಳೆಗೆ ಆ ಪಾಡ್ದನವನ್ನು ಹಾಡುತ್ತಾರೆ. 'ಸಿರಿ'ಯ ಆಚರಣೆಯ ಸಂದರ್ಭದಲ್ಲಿ ಸಿರಿಯ ಪಾಡ್ದನವನ್ನು ಹಾಡುತ್ತಾರೆ.

### ಪಾಡ್ದನಗಳನ್ನು ಹಾಡುವವರು

ತುಳು ಮಾತಾನಾಡುವ ಪ್ರದೇಶದಲ್ಲಿ ಸಾಮಾನ್ಯವಾಗಿ ಬ್ರಾಹ್ಮಣರನ್ನು ಬಿಟ್ಟು, ಉಳಿದ ವರ್ಗದವರ ಹೆಚ್ಚಾಗಿ ಪಾಡ್ದನಗಳನ್ನು ಹಾಡುತ್ತಾರೆ, ಭೂತದ ಪಾಡ್ದಗಳನ್ನು ಭೂತಾರಾಧನೆಯ ಸಂದರ್ಭದಲ್ಲಿ ಭೂತ ಕಟ್ಟುವ ವರ್ಗದವರು ಮಾತ್ರ ಹಾಡುತ್ತಾರೆ. ತುಳುನಾಡಿನಲ್ಲಿ ಹರಿಜನ ವರ್ಗಕ್ಕೆ ಸೇರಿದ ಪಂಬದ, ಪರವ, ನಲ್ಕೆಯವ, ಪಾಣಾರ–ಈ ನಾಲ್ಕು ಒಳ ವರ್ಗದವರು ಭೂತದ ವೇಷವನ್ನು ಹಾಕಿ ಭೂತಾರಾಧನೆಯಲ್ಲಿ ಮುಖ್ಯ

ಪಾತ್ರವಹಿಸುತ್ತಾರೆ. ಈಗಲೂ ಈ ಪದ್ಧತಿ ವ್ಯತ್ಯಾಸವನ್ನು ಪಡೆದಿಲ್ಲ. ಇವರು ಭೂತದ ವೇಷವನ್ನು ಹಾಕುವ ಸಂದರ್ಭದಲ್ಲಿ ಆಯಾಯ ಭೂತಕ್ಕೆ ಸಂಬಂಧಿಸಿದ ಪಾಡ್ದನಗಳನ್ನು ಹಾಡುತ್ತಾರೆ. ಈಗ ಪಾಡ್ದನಗಳ ಸಂಪ್ರದಾಯದಲ್ಲಿ ವೃತ್ತಿಗಾಯಕರ (Minstrels) ಪರಂಪರೆ ಕಾಣಿಸದಿದ್ದರೂ, ಒಂದು ಕಾಲದಲ್ಲಿ ಈ ಪರವ, ಪಂಬದ, ನಲ್ಕೆಯುವ, ಪಾಣಾರರು ವೃತ್ತಿ ಗಾಯಕರ (Minstrels) ರೀತಿಯಲ್ಲಿ ಇದ್ದರೆ ಎನ್ನುವ ಸಂಸಯ ಬರುತ್ತದೆ.

ತಮಿಳಿನಲ್ಲಿ pān = song; melody. ಅಲ್ಲಿ 'pānar' ಎಂಬ ಜಾತಿ ಇದೆ ತಮಿಳುನಾಡಿನಲ್ಲಿ pāṇaṇ = an ancient class of Tamil bards and minstrels. ಮಲಯಾಳಂನಲ್ಲಿ Pāṇan = a caste of musicians, actors and players.[1]

ಆದ್ದರಿಂದ ತುಳುವಿನಲ್ಲಿ 'ಪಾಣಾರ'ರು ಕೂಡಾ ಹಿಂದೆ 'ವೃತ್ತಿ ಗಾಯಕ' (Minstrels) ರು ಆಗಿದ್ದಿರಬೇಕು.

'ಪಂಬದ' ಎನ್ನುವ ಶಬ್ದವು ತುಳುವಿನ 'ಪಣ್ ಪದ' ಅಂದರೆ 'ಪದವನ್ನು ಹೇಳು' ಎನ್ನುವ ಅರ್ಥದಿಂದ 'ಪದವನು ಹೇಳುವವನು' ಎನ್ನುವ ಅರ್ಥವನ್ನು ಹೊಂದಿರಬಹುದು.[2]

'ನಲ್ಕೆಯುವ' ಎನ್ನುವ ಪದವೇ ಹೇಳುವಂತೆ ನಲಿಯುವವನು ಅಂದರೆ ಕುಣಿಯುವವನು (Dancer) ಎಂದು ಅರ್ಥ. ಈ ನಲ್ಕೆಯವರು ಮೂಲದಲ್ಲಿ 'ವೃತ್ತಿ ಕುಣಿತಗಾರ'ರು ಆಗಿದ್ದಿರಬಹುದು.

'ಪರವ' ಎಂಬ ಶಬ್ದವು 'ಪರ ಊರವ' ಎಂಬುದರಿಂದ ಉಂಟಾಗಿರಬಹುದು ಎಂಬ ಅಭಿಪ್ರಾಯವಿದೆ.[1] ಆದರೆ 'ಪರವ' ಎಂಬುದಕ್ಕೆ 'ಹಳೆಯವನು', ಪ್ರಾಚೀನ ಎನ್ನುವ ಅರ್ಥ ಹೆಚ್ಚು ಸಮಂಜಸವೆನಿಸುತ್ತದೆ. ಭೂತಾರಾಧನೆಯಲ್ಲಿ ಪ್ರಧಾನ ಪಾತ್ರ ವಹಿಸುವ 'ಪರವ', 'ಪಂಬದ', 'ನಲ್ಕೆಯವ' ಮುಂತಾದ ಹರಿಜನ ವರ್ಗದವರು ತುಳುನಾಡಿನ 'ಮೂಲ ನಿವಾಸಿಗಳು' ಅಲ್ಲಿ ಈಗ ಇರುವ ಹೆಚ್ಚಿನ ಜಾತಿ ವರ್ಗದವರು ಹೊರಗಿನಿಂದ ಅಲ್ಲಿಗೆ ಬಂದವರು ಎನ್ನುವ ಅಭಿಪ್ರಾಯ ಈ ದೃಷ್ಟಿಯಿಂದಲೂ ಸರಿ ಕಾಣುತ್ತದೆ.

**ಪಾಡ್ದನಗಳ ರೂಪ (Form)**

ಪಾಡ್ದನಗಳ ದೀರ್ಘತೆ ಒಂದೇ ರೀತಿಯಾಗಿ ಇಲ್ಲ. ಹತ್ತು, ಹದಿನೈದು ನಿಮಿಷಗಳ ಕಾಲ ಹಾಡುವ ಪಾಡ್ದನಗಳು ಇರುವಂತೆಯೇ ಮೂರು, ನಾಲ್ಕು ಗಂಟೆಗಳಿಗೂ ಹೆಚ್ಚಿನ ಕಾಲ ಹಾಡುವ ಪಾಡ್ದನಗಳು ಇವೆ. ಈಗ ಉಪಲಬ್ಧವಾಗುವ ದೃಷ್ಟಿಯಿಂದ ಪಾಡ್ದನಗಳ ಸಂಖ್ಯೆ ಬಹಳ ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುತ್ತದೆ.

---

1. Burrow T. and Emeneau M. B.: "A dravidian Etymological Dictionary.", Oxford, 1961, P. 272.

2 ತೆಲುಗು ಜನಪದ ಗಾಯಕರಲ್ಲಿ 'ಪಂಬಲಹರು' ಎಂಬ ವರ್ಗವಿದೆ. ಇವರು ಹರಿಜನರು, ತೆಲುಗಿನಲ್ಲಿ 'ಪಂಬಲ' ಎಂಬ ಹೆಸರು 'ಪಂಬ' ವಾದ್ಯವನ್ನು ಬಾರಿಸುವವರು ಎನ್ನುವುದರಿಂದ ಬಂದಿದೆ ಎಂದು ಅಭಿಪ್ರಾಯಿಸಲಾಗಿದೆ, (ಟಿ. ವಿ. ಸುಬ್ಬರಾವ್: 'ತೆಲುಗುಜನಪದ ಗಾಯಕರು : ಸಾಧನೆ...) ತೆಲುಗಿನ 'ಪಂಬಲ'ರು ಮತ್ತು ತುಳುನಾಡಿನ 'ಪಂಬದ'ರ ಮೂಲ ಒಂದೇಆಗಿರಬಹುದೇ ?

---

1 ಸೇವ ನಮಿರಾಜ ಮಲ್ಲ : 'ಭೂತಾರಾಧನೆಯ ಕಥೆಗಳು', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ 1970, ಪು. VIII

ಆದರ ಮುಂದೆ ವಿವರವಾಗಿ ಚರ್ಚಿಸುವ ಹಾಗೆ, ಅತಿಮಾನುಷ ವಸ್ತುವುಳ್ಳ ಪಾಡ್ದನಗಳು ಉಪಲಬ್ಧವಾಗುವ ದೃಷ್ಟಿಯಿಂದ ಬೇರೆ ಬೇರೆ ಎಂದು ಅನ್ನಿಸಿದರೂ ವಸ್ತುವಿನ ದೃಷ್ಟಿಯಿಂದ ಪರಸ್ಪರ ಸಂಬಂಧವನ್ನು ಪಡೆದಿರುತ್ತವೆ. ಅತಿಮಾನುಷ ವಸ್ತುವುಳ್ಳ ಪಾಡ್ದನಗಳಲ್ಲಿ ಭೂತಕ್ಕೆ ಸಂಬಂಧಿಸಿದ ಪಾಡ್ದನಗಳು ಮತ್ತು ಅತಿಮಾನುಷ ವ್ಯಕ್ತಿಗಳಿಗೆ ಸಂಬಂಧಿಸಿದ ಪಾಡ್ದನಗಳು ಈ ರೀತಿ ಕಾಣಿಸುತ್ತವೆ.

೧ ಭೂತಕ್ಕೆ ಸಂಬಂಧಿಸಿದ ಪಾಡ್ದನಗಳ ಸ್ವರೂಪ

ಪಾಡ್ದನಗಳಲ್ಲಿ ಭೂತಕ್ಕೆ ಸಂಬಂಧಿಸಿದ ಪಾಡ್ದನಗಳು ಸಂಖ್ಯೆಯ ದೃಷ್ಟಿಯಿಂದ ಅಧಿಕವಾಗಿವೆ. ಒಂದೇ ಭೂತಕ್ಕೆ ಸಂಬಂಧಿಸಿದಂತೆ ಅನೇಕ ಪಾಡ್ದನಗಳು ದೊರೆಯುತ್ತವೆ. ಈ ಅನೇಕ ಪಾಡ್ದನಗಳು ಒಂದು ಪಾಡ್ದನದ ಭಿನ್ನಪಾಠಗಳಿಂದ ಹೊರತಾದುವು. ಅಂದರೆ ಒಂದು ಭೂತಕ್ಕೆ ಸಂಬಂಧಿಸಿದಂತೆ ಇರುವ ಒಂದು ಪಾಡ್ದನಕ್ಕೆ ಭಿನ್ನ ಭಿನ್ನ ಪಾಠಗಳು ದೊರೆಯುವ ಹಾಗೆಯೇ ಒಂದೇ ಭೂತಕ್ಕೆ ಸಂಬಂಧಿಸಿದ, ವಸ್ತುವಿನ ದೃಷ್ಟಿಯಿಂದ ಭಿನ್ನತೆಯುಳ್ಳ ಬೇರೆ ಬೇರೆ ಪಾಡ್ದನಗಳೂ ದೊರೆಯುತ್ತವೆ. ಪ್ರಧಾನವಾಗಿ ಭೂತಗಳಿಗೆ ಸಂಬಂಧಿಸಿದ ಹಾಗೆ ಇಂತಹ ಪಾಡ್ದನಗಳನ್ನು ಈ ರೀತಿ ವರ್ಗೀಕರಿಸಬಹುದು.

ಭೂತಗಳ ಪಾಡ್ದನಗಳು

| ೧ ಭೂತದ ಹುಟ್ಟು ಅಥವಾ ಉಗಮ (origin) | ೨ ಭೂತದ ಮಹಾತ್ಮೆ, ಸಾಹಸ (adventures) | ೩ ಭೂತದ ಪ್ರಸರಣ-ಪ್ರಾದೇಶಿಕವಾಗಿ (diffusion) |
|---|---|---|

ಇಲ್ಲಿ ಭೂತದ ಮಹಾತ್ಮೆ, ಸಾಹಸದ ಮೂಲಕ ಪ್ರಾದೇಶಿಕವಾಗಿ ಅದರ ಪ್ರಸರಣವು ಆಗುವ ಕಾರಣ ಇಂತಹ ಪಾಡ್ದನಗಳನ್ನು ಒಟ್ಟಿಗೆ ಭೂತದ ಉಗಮ ಮತ್ತು ಪ್ರಸರಣದ (origin and diffusion) ಪಾಡ್ದನಗಳು ಎಂದು ಕರೆಯಬಹುದು. ಈ ರೀತಿ ಒಂದೇ ಭೂತಕ್ಕೆ ಸಂಬಂಧಿಸಿದ ಬೇರೆ ಬೇರೆ ಪಾಡ್ದನಗಳನ್ನು-ಮುಖ್ಯವಾಗಿ ಅದರ ಪ್ರಸರಣಕ್ಕೆ ಸಂಬಂಧಿಸಿದಂತೆ ಒಟ್ಟು ಮಾಡಿ ಒಂದು 'ಲಾವಣಿ ಚಕ್ರ' (Ballad cycle) ನಿರ್ಮಿಸಬಹುದು. ಈ 'Ballad cycle'ನ್ನು ಆ ಭೂತದ 'epic' ಎಂದು ಕರೆಯಬಹುದು. ಭೂತಗಳಿಗೆ ಸಂಬಂಧಿಸಿದ ಪಾಡ್ದನಗಳನ್ನು 'ಜನಪದ ಮಹಾಕಾವ್ಯ' (folk epic)ಗಳು ಎಂದು ಕರೆಯುವಲ್ಲಿ ಲಾವಣಿ ಚಕ್ರ (Ballad cycle) ವನ್ನು 'ಜನಪದ ಮಹಾಕಾವ್ಯ' (folk epic) ಎಂದು ಪರಿಗಣಿಸುವ ಇತ್ತೀಚಿಗಿನ ಜಾನಪದ ವಿದ್ವಾಂಸರ ಪ್ರವೃತ್ತಿಯನ್ನು ನಾನು ಪರಿಗಣಿಸಿದ್ದೇನೆ. "There have been tendencies to combine songs having a central theme or about a certain hero into a single epic".[1] Finland ನಲ್ಲಿ Sampoo, the miraculous mill ಬಗ್ಗೆ ಈ ರೀತಿ ಮಾಡಿದ್ದಾರೆ. "In Russia and Yugoslavia similar attempts to unite songs about individual heroes or themes into cycles were made in more recent times".[2]

---

1,2. Felix J. Oinas : 'Folk Epic', ; "Folklore and Folklife". Ed. Richard M. Dorson, Chicago, University of Chicago Press, 1972, P. 106-107.

ಉದಾಹರಣೆಗೆ ಪಂಜುರ್ಲಿ ಭೂತ, ಜುಮಾದಿ ಭೂತ, ಗುಳಿಗ ಭೂತ ಮುಂತಾದ ಭೂತಗಳ ಪಾಡ್ದನಗಳಲ್ಲಿ ಪ್ರತಿಯೊಂದು ಭೂತದ ಉಗಮ ಮತ್ತು ಪ್ರಸರಣದ ಪಾಡ್ದನಗಳು ಕೆಲವು ಸಿಗುತ್ತವೆ. ಇವೆಲ್ಲವುಗಳನ್ನು ಒಟ್ಟು ಮಾಡಿ ಆಯಾಯ ಭೂತದ 'ಲಾವಣಿ ಚಕ್ರ' ಅಥವಾ 'ಜನಪದ ಮಹಾಕಾವ್ಯ'ವನ್ನು ಸಂಯೋಜಿಸಬಹುದು. ಪಂಜುರ್ಲಿಯ ಉಗಮ ಮತ್ತು ಪ್ರಸರಣಕ್ಕೆ ಸಂಬಂಧಿಸಿದ ಎಲ್ಲಾ ಪಾಡ್ದನಗಳನ್ನು ಒಟ್ಟಿಗೆ 'ಪಂಜುರ್ಲಿ ಚಕ್ರ' (Panjurly cycle) ಅಥವಾ 'ಪಂಜುರ್ಲಿ ಮಹಾಕಾವ್ಯ' (Panjurly epic) ಎನ್ನಬಹುದು. ಇದೇ ರೀತಿ 'ಜುಮಾದಿ cycle' ಅಥವಾ 'ಜುಮಾದಿ epic', 'ಗುಳಿಗ cycle' ಅಥವಾ 'ಗುಳಿಗ epic' ಮುಂತಾದುವನ್ನು ಗುರುತಿಸಬಹುದು. ಇಂತಹ ಭೂತಗಳ ಪ್ರಸರಣದ ಪಾಡ್ದನದಲ್ಲಿ ಆ ಭೂತ ತನ್ನ ಮಹಿಮೆಯಿಂದ ಜನರಿಗೆ ತೊಂದರೆ ಕೊಡುವುದು, ಅವರು ಅದನ್ನು ನಂಬುವುದು, ಅವರು ಅದಕ್ಕೆ ಗುಡಿ (ಸ್ಥಾನ) ಕಟ್ಟಿಸುವುದು, ಅಲ್ಲಿಂದ ಇನ್ನೊಂದು ಕಡೆ ಇದೇ ಘಟನೆಗಳ ಪುನರಾವರ್ತನೆ – ಈ ತಂತ್ರವನ್ನು ಕಾಣಬಹುದು. ಈ ರೀತಿ ಒಂದೊಂದು ಭೂತದ ಉಗಮ ಮತ್ತು ಪ್ರಸರಣದ ಸ್ವರೂಪವನ್ನು ಮುಂದೆ ಪ್ರತ್ಯೇಕವಾಗಿ ಅಧ್ಯಯನ ಮಾಡಲಾಗುವುದು. ಆದರೆ ಸ್ವರೂಪದ ದೃಷ್ಟಿಯಿಂದ ಪಂಜುರ್ಲಿಯ ಉಗಮಕ್ಕೆ ಸಂಬಂಧಿಸಿದ ಪಾಡ್ದನದ ಜೊತೆಗೆ 'ಕುಪ್ಪೆ ಪಂಜುರ್ಲಿ', ಮಲಾರ ಪಂಜುರ್ಲಿ', 'ಒಡ್ತೆ ಪಂಜುರ್ಲಿ', 'ಅಣ್ಣಪ್ಪ ಪಂಜುರ್ಲಿ', ಭೈರವನಿಗೆ ಸಂಬಂಧಿಸಿದ ಒಂದು ಪಾಡ್ದನ, ಹೆಬ್ರಿ ಬಳ್ಳಾಲರಿಗೆ ಸಂಬಂಧಿಸಿದ ಪಾಡ್ದನ, ಮರ್ದಾಳದ ಬೀಡಿಗೆ ಸಂಬಂಧಿಸಿದ ಪಾಡ್ದನಗಳು ಪಂಜುರ್ಲಿ Cycleನ ಒಳಗೆ ಸೇರ್ಪಡೆಯಾಗುತ್ತವೆ, ಅದೇ ರೀತಿ 'ಜುಮಾದಿ cycle'ನಲ್ಲಿ ಜುಮಾದಿಯ ಉಗಮದ ಪಾಡ್ದನದ ಜೊತೆಗೆ ಕರ್ನಗೆ (ಕರ್ನಕ), ಪಂಚ ಜುಮಾದಿ, ಸಾರಾಲ್ ಜುಮಾದಿ, ಮಲಿ ಜುಮಾದಿ, ಮರ್ಲ್ ಜುಮಾದಿ ಮುಂತಾದ ಪಾಡ್ದನಗಳು ಒಳಗೊಳ್ಳುತ್ತವೆ.

**೨. ಅತಿಮಾನುಷ, ಅಲೌಕಿಕ ವ್ಯಕ್ತಿಗಳಿಗೆ ಸಂಬಂಧಿಸಿದ ಪಾಡ್ದನಗಳು**

ಅತಿಮಾನುಷ ವಸ್ತುವುಳ್ಳ ಪಾಡ್ದನಗಳಲ್ಲಿ ಭೂತಗಳ ಪಾಡ್ದನಗಳನ್ನು ಬಿಟ್ಟು ಇನ್ನು ಕೆಲವು ಪಾಡ್ದನಗಳು ಸಿಗುತ್ತವೆ. ಜೀವಂತವಾಗಿರುವಾಗ ಸಾಹಸಿಗಳಾಗಿದ್ದು ಅಥವಾ ಅಲೌಕಿಕವಾಗಿದ್ದು ಸತ್ತ ಬಳಿಕ ಆರಾಧನೆಗೊಳ್ಳುವ ವ್ಯಕ್ತಿಗಳಿಗೆ ಸಂಬಂಧಿಸಿದ ಪಾಡ್ದನಗಳು. ಈ ರೀತಿ ಆರಾಧನೆಗೊಳ್ಳುವ ವ್ಯಕ್ತಿಗಳಿಗೆ 'ಭೂತಗಳು' ಎಂದು ಕರೆಯುವುದಿಲ್ಲ. ಸಾಂಸ್ಕೃತಿಕ ವೀರರು (Cultural heroes) ಅಥವಾ ಅಲೌಕಿಕ ಮಹಿಳೆಯರು ಈ ವರ್ಗದಲ್ಲಿ ಕಾಣಿಸಿಕೊಳ್ಳುತ್ತಾರೆ. ತುಳುನಾಡಿನಲ್ಲಿ ಬಹಳ ಜನಪ್ರಿಯವಾಗಿರುವ ಮತ್ತು ಸಾರ್ವತ್ರಿಕವಾಗಿರುವ 'ಕೋಟಿ ಚೆನ್ನಯ ಪಾಡ್ದನ' ಮತ್ತು 'ಸಿರಿಯ ಪಾಡ್ದನ'ವನ್ನು ಈ ಗುಂಪಿಗೆ ಸೇರಿಸಬಹುದು. ರಚನೆಯ ದೃಷ್ಟಿಯಿಂದ ನೋಡಿದಾಗ ಈ ಎರಡು ಪಾಡ್ದನಗಳು ದೀರ್ಘವಾಗಿದ್ದು ಅಧ್ಯಾಯ ರೂಪದ ಸಂಧಿಗಳನ್ನು ಒಳಗೊಂಡಿವೆ. 'ಕೋಟಿ ಚೆನ್ನಯ' ಪಾಡ್ದನದಲ್ಲಿ 'ದೇಯಿ ಬೈದ್ಯೆದಿ'ಯ ಸಂಧಿ, ಕೋಟಿ ಚೆನ್ನಯರ ಬಾಲ್ಯದಿಂದ ಅವರು ಪರ್ಮಲೆಯನ್ನು ಬಿಟ್ಟು ಹೋಗುವವರೆಗಿನ ಸಂಧಿ ಮತ್ತು ಕೋಟಿ ಚೆನ್ನಯರು ಪಂಜ ಹಾಗೂ ಎಣ್ಮೂರು ಬೀಡುಗಳಿಗೆ ಬಂದು, ಯುದ್ಧವಾಗಿ ಸಾಯುವವರೆಗಿನ ಸಂಧಿ – ಈ ರೀತಿ ಪ್ರಧಾನವಾಗಿ ಮೂರು ಸಂಧಿ ಅಥವಾ ಭಾಗಗಳನ್ನು ಕಾಣುತ್ತೇವೆ. ಆದರೆ ವಸ್ತುವಿನ ದೃಷ್ಟಿಯಿಂದ ಮತ್ತು ಘಟನೆಗಳ ದೃಷ್ಟಿಯಿಂದ ಈ ಎಲ್ಲಾ ಸಂಧಿಗಳು ಒಂದೇ ಪಾಡ್ದನದ ಭಾಗಗಳಾಗುತ್ತವೆ. ಈ ರೀತಿ ಅತಿಮಾನುಷತೆ ವಿಶೇಷವಾಗಿ ಉಳ್ಳ ದೀರ್ಘವಾದ ಪಾಡ್ದನವನ್ನು 'ಜನಪದ ಮಹಾಕಾವ್ಯ' ಅಥವಾ 'Folk epic' ಎಂದು ಕರೆಯಬಹುದು. "Folk (or oral) epic songs are narrative poems in formulaic and ornamental style

dealing with adventures of extraordinary people.[1] ಇಲ್ಲಿ ಒಂದೊಂದು ಸಂಧಿಯೂ ಒಂದೊಂದು ಸ್ವತಂತ್ರ ಲಾವಣಿ (Ballad) ಯ ಹಾಗೆ ಒಂದು ಕತೆಯನ್ನು ಹೇಳುತ್ತದೆ. ಈ ಜನಪದ ಮಹಾಕಾವ್ಯ (Folk epic)ಗಳ ಮುಖ್ಯ ಪಾತ್ರಗಳು ಅಸಾಮಾನ್ಯ, ಅತಿಮಾನುಷ ಆಗಿರುತ್ತವೆ. ಸಿರಿಯ ಪಾಡ್ದನವು ತನ್ನ ದೀರ್ಘತೆ ಮತ್ತು ಬೇರೆ ಬೇರೆ ಸಂಧಿಗಳ ರಚನೆಯಿಂದಾಗಿ ಇದೇ ರೀತಿ **'ಜನಪದ ಮಹಾಕಾವ್ಯ'** ಎಂಬ ವರ್ಗಕ್ಕೆ ಸೇರುತ್ತದೆ. ಸಿರಿಯ ಪಾಡ್ದನದಲ್ಲಿ ಅಕ್ಕೆರಸು ಸಿರಿ, ಸೊನ್ನೆ, ಗಿಂಡೆ ಮತ್ತು ಅಬ್ಬಗೆ – ದಾರಗೆ ಎನ್ನುವ ದೃಷ್ಟಿಯಿಂದ ಈ ಎಲ್ಲಾ ಪಾಡ್ದನಗಳೂ ಒಂದು ಜನಪದ ಮಹಾಕಾವ್ಯದ ಕಾಲಾನುಕ್ರಮಣಿಕೆಯ ರೂಪದ ಅಧ್ಯಾಯಗಳಾಗಿರುತ್ತವೆ. ದೀರ್ಘತೆಯ ದೃಷ್ಟಿಯಿಂದ ಸ್ವತಂತ್ರವಾದ ಈ ಎರಡು ಪಾಡ್ದನಗಳು – **ಕೋಟಿ ಚೆನ್ನಯ ಮತ್ತು ಸಿರಿಯ ಪಾಡ್ದನ** – ತುಳುನಾಡಿನ **ಅವಳಿ** ಜನಪದ **ಮಹಾಕಾವ್ಯ**ಗಳು (Twin Folk epics) ಎನ್ನಬಹುದು.

**೩. ಪೌರಾಣಿಕ ವ್ಯಕ್ತಿಗಳುಳ್ಳ ಪಾಡ್ದನಗಳು**

ಪೌರಾಣಿಕ ವ್ಯಕ್ತಿಗಳು ಪಾಡ್ದನಗಳ ಪಾತ್ರಗಳಾಗಿ ಉಳ್ಳ ರಚನೆಗಳು ಗಾತ್ರದ ದೃಷ್ಟಿಯಿಂದ ಚಿಕ್ಕದಾದ, ಪ್ರಸರಣದ ಸ್ವರೂಪ ಇಲ್ಲದ ಸ್ವತಂತ್ರವಾದ ರೀತಿಯವು. ಕೃಷ್ಣನ ಬಗ್ಗೆ, ಸೀತೆಯ ಬಗ್ಗೆ, ಬಲೀಂದ್ರನ ಬಗ್ಗೆ, ಸೂರ್ಯ ಚಂದ್ರರ ಬಗ್ಗೆ ಇರುವ ಪೌರಾಣಿಕ ಪಾಡ್ದನಗಳು ಬಿಡಿಬಿಡಿಯಾದ ಸಾಕಷ್ಟು ಚಿಕ್ಕದಾದ ಸ್ವತಂತ್ರ ರಚನೆಗಳು.

**ಲೌಕಿಕ ವಸ್ತುವುಳ್ಳ ಪಾಡ್ದನಗಳು**

ಲೌಕಿಕ ವಸ್ತುವುಳ್ಳ ಪಾಡ್ದನಗಳು ರಚನೆಯ ದೃಷ್ಟಿಯಿಂದ ಬಿಡಿಬಿಡಿಯಾಗಿ ಸ್ವತಂತ್ರವಾದ ಅಸ್ತಿತ್ವವುಳ್ಳವುಗಳು. ಜನಪದ ಕಥನ ಕವನ ಅಥವಾ ಲಾವಣಿ (Ballad) ಇದರ ಸ್ವರೂಪವನ್ನು ಈ ಪಾಡ್ದನಗಳು ಬಹುಮಟ್ಟಿಗೆ ಹೋಲುತ್ತವೆ.

**ಅತಿಮಾನುಷ ವಸ್ತುವುಳ್ಳ ಪಾಡ್ದನಗಳು**

**೧. ಭೂತಗಳಿಗೆ ಸಂಬಂಧಿಸಿದ ಪಾಡ್ದನಗಳು**

ತುಳುನಾಡಿನ ಜನಪದ ಸಂಸ್ಕೃತಿಯಲ್ಲಿ ಭೂತಾರಾಧನೆ ಬಹಳ ಮುಖ್ಯವಾದ ಒಂದು ಅಂಶ. ಈ ಕೃತಿಯಲ್ಲಿ ಭೂತಾರಾಧನೆಯ ಸಮಗ್ರ ಸಂಶೋಧನೆಯನ್ನು ಕೈಗೊಂಡಿಲ್ಲ. ಪಾಡ್ದನದ ದೃಷ್ಟಿಯಿಂದ ಭೂತಾರಾಧನೆಯ ಸಂಸ್ಕೃತಿಯನ್ನು ತಿಳಿದುಕೊಳ್ಳುವಷ್ಟಕ್ಕೆ ಮಾತ್ರ ಈ ಅಧ್ಯಾಯ ಸೀಮಿತವಾಗಿದೆ. ತುಳುನಾಡಿನಲ್ಲಿ ಆರಾಧನೆಗೊಳ್ಳುತ್ತಿರುವ ಭೂತಗಳು ಎಷ್ಟು ಮತ್ತು ಅವು ಯಾವುವು ಎನ್ನುವುದರ ಸಂಪೂರ್ಣ ಚಿತ್ರ ಇನ್ನೂ

---

1 Felix J. Oinas : 'Folk Epic' : "Folklore and Folklife" Ed. Richard M. Dorson, Chicago, University of Chicago Press, 1972, p. 99.

ಸಿಕ್ಕಿಲ್ಲ. ಆದರೆ ಉಪಲಬ್ಧವಾಗಿರುವ ಪಾಡ್ದನಗಳ ಆಧಾರದಿಂದ ಮತ್ತು ಕ್ಷೇತ್ರಕಾರ್ಯದಲ್ಲಿ ಗವುನಿಸಿದ ವಿಚಾರಗಳಿಂದ ತುಳುನಾಡಿನ ಭೂತಗಳ ಪಟ್ಟಿಯನ್ನು ಕೆಳಗೆ ಕೊಡಲಾಗಿದೆ.

೧ ಅಕ್ಕೆರಸು ಪೂಂಜೆದಿ
೨ ಅಂಗಾರ ಭೂತ
೩ ಅಡ್ಕತ್ತಾಯೆ
೪ ಅಡ್ಕದ ಭಗವತಿ
೫ ಅಣ್ಣಪ್ಪ ಪಂಜುರ್ಲಿ
೬ ಅಣ್ಣರ ಕಲ್ಕುಡೆ
೭ ಅತ್ತಾವರ ದೈಯೊಂಗುಳು
೮ ಅಬ್ಬಗೆ – ದಾರಗೆ
೯ ಅಂಬದಾಡಿ ಪಂಜುರ್ಲಿ
೧೦ ಅರಸು ಭೂತ
೧೧ ಅರಸುಳ
೧೨ ಆಳಿಸೆಯಿಂತ್ತಾಯೆ
೧೩ ಆಟಿಕಳೆಂಜೆ
೧೪ ಆಲಿ ಭೂತ
೧೫ ಈಸರ ಕುಮಾರೆ
೧೬ ಉಚ್ಚೆ ಹಂದಿ
೧೭ ಉಬಾರ ಕಲ್ಲುರ್ಟಿ
೧೮ ಉಮ್ಮಲ್ತಿ
೧೯ ಉಳ್ಳಾಯೆ
೨೦ ಉಳ್ಳಾಲ್ದಿ
೨೧ ಊರಿಯಡಿತ್ತಾಯೆ
೨೨ ಎಳೆಯ ಭಗವತಿ
೨೩ ಐತಮಾಮೆ
೨೪ ಒಕ್ಕು ಬಲ್ಲಾಳೆ
೨೫ ಒಡ್ತೆ ಪಂಜುರ್ಲಿ
೨೬ ಒಟ್ಟೆ ಕಲ್ಲುರ್ಟಿ
೨೭ ಒತ್ತೆ
೨೮ ಒರ್‌ಮುಲ್ಲಾಯೆ
೨೯ ಒರ್ ಮಲತ್ತಾಯೆ
೩೦ ಒರಿ ಉಳ್ಳಾಯೆ
೩೧ ಒರ್ ಮುಖತ್ತಾಯೆ
೩೨ ಓಡಿಲ್‌ತ್ತಾಯೆ
೩೩ ಕಚ್ಚಾರಮಾಲ್ದಿ
೩೪ ಕಂಚಿನ ದೇವಿ
೩೫ ಕಂಟಿರಾಯೆ
೩೬ ಕಡಂಕೊಳಿ
೩೭ ಕಡಂತ್ತಾಯ
೩೮ ಕಡರು ಕಳಿ
೩೯ ಕಂಟೆತ್ರಿ ಜುಮಾದಿ
೪೦ ಕಂಡಕರ್ಣೆ
೪೧ ಕಂಡೆಲ ಜುಮಾದಿ
೪೨ ಕತಂತ್ರಿ
೪೩ ಕನಪಾಡಿತ್ತಾಯೆ
೪೪ ಕನ್ನಲ್ಲಾಯೆ
೪೫ ಕನ್ಯಾಕುಮಾರಿ
೪೬ ಕಂಬಿಲ್ಯ
೪೭ ಕರಿಯಮಲ್ಲಿ
೪೮ ಕರ್‌ಂಗೋಲು ದೈವ
೪೯ ಕಲ್ಕುಡೆ
೫೦ ಕಲ್ಲುರ್ಟಿ
೫೧ ಕಳ್ಳ ಭೂತ
೫೨ ಕಳ್ಳೂರತ್ತಾಯೆ
೫೩ ಕಾಂತಾಬಾರೆ – ಬೂದಾಬಾರೆ
೫೪ ಕಾಂತು ನೆಕ್ರಿ ಭೂತ
೫೫ ಕಾಳಕಾಕಾಯಿ
೫೬ ಕಾಳ ಭೈರವ
೫೭ ಕಾಳಮ್ಮ
೫೮ ಕಾಳರಾತ್ರಿ
೫೯ ಕಾಳರಾಹು
೬೦ ಕಾಳಸ್ತ್ರೀ
೬೧ ಕಾಳಿ
೬೨ ಕಾಳೇಶ್ವರಿ
೬೩ ಕಿನ್ನಿಮಾನಿ
೬೪ ಕಿರಾತನಂದಿ
೬೫ ಕುಕ್ಕಿಲ್ಲಾಯೆ
೬೬ ಕುಕ್ಕಿ ಸಂದಾಯೆ
೬೭ ಕುಕ್ಕುಲತ್ತಾಯೆ
೬೮ ಕುಜುಂಬ ಕಾಂಚಿ
೬೯ ಕುಟ್ಟಿಚಾತು

೭೦ ಕುಡುಂಪಾಲು
೭೧ ಕುಂಡಾಯೆ
೭೨ ಕುಪ್ಪೆ ಪಂಜುರ್ಲಿ
೭೩ ಕುಮಾರಸ್ವಾಮಿ
೭೪ ಕುರವೆ
೭೫ ಕುರಿಯತ್ತಾಯೆ
೭೬ ಕುಳೆ
೭೭ ಕೆಂಚಿಕೆಲುತ್ತಾಯೆ
೭೮ ಕೆಂಜಲ್ತಾಯೆ
೭೯ ಕ್ಷೇತ್ರಪಾಲೆ
೮೦ ಕೊಡಮಣ್‌ತ್ತಾಯೆ
೮೧ ಕೊಡಂಬದ್ಯೆ
೮೨ ಕೊರಗ ತನಿಯ
೮೩ ಕೊರಗೆ
೮೪ ಕೊರತಿ
೮೫ ಕೊಲ್ಲೂರಮ್ಮ
೮೬ ಕೋಟಿ ಚೆನ್ನಯೆ
೮೭ ಕೋಟಿ ಪೂಂಜೆ
೮೮ ಕೋಡ್ದಬ್ಬು
೮೯ ಕೋಡಿದಜ್ಜೆ
೯೦ ಖಡ್ಗರಾವಣ
೯೧ ಖಡ್ಗೇಶ್ವರ
೯೨ ಖಡ್ಗೇಶ್ವರಿ
೯೩ ಗಡಿ ರಾಹುತೆ
೯೪ ಗಾಂಧಾರಿ
೯೫ ಗಿಂಡೆ
೯೬ ಗಿರಾವು ಭೂತ
೯೭ ಗುರ್ಕಾರ್ ಭೂತ
೯೮ ಗುಳಿಗನ್ನಾಯೆ
೯೯ ಗುಳಿಗೆ
೧೦೦ ಗೆಜ್ಜೆ ಮುಲ್ಲೆ
೧೦೧ ಚಂಡಿ
೧೦೨ ಚಾಮುಖಿ
೧೦೩ ಚಾಮುಂಡಿ
೧೦೪ ಚಿಕ್ಕಸದಾಯಿ
೧೦೫ ಚಿಕ್ಕು
೧೦೬ ಚಿರ್ಮ ಭಗವತಿ
೧೦೭ ಜಕಣ ಭೂತ
೧೦೮ ಜಟಾಧಾರಿ
೧೦೯ ಜಟ್ಟಿಗೆ
೧೧೦ ಜಡೆತ್ತಾರ್
೧೧೧ ಜದ್ರಾಯೆ
೧೧೨ ಜಂದಾಗ್ರಾತ್ತಾಯೆ
೧೧೩ ಜಾರಂತಾಯೆ
೧೧೪ ಜಿಕ್ಕಿ
೧೧೫ ಜುಮಾದಿ
೧೧೬ ಜುಂಬುಲೆ
೧೧೭ ಜೋಗಿ ಪುರುಷೆ
೧೧೮ ತಡ್ಕಂತಜ್ಜ
೧೧೯ ತನ್ನಿಮಾನಿಗ
೧೨೦ ತಿಮ್ಮಪ್ಪೆ
೧೨೧ ತೋಡಕುಕ್ಕಿನಾರ್
೧೨೨ ತೋಮಜ್ಜೆ
೧೨೩ ದಂಡೆರಾಜವು
೧೨೪ ದರ್ಗಂದಾಯೆ
೧೨೫ ದುಗ್ಗತ್ತಾಯೆ
೧೨೬ ದುಗ್ಗಂತಾಯೆ
೧೨೭ ದುರ್ಗಂದಾಯೆ
೧೨೮ ದುರ್ದಮಾಸರೆ
೧೨೯ ದುಸ್ತ್ರಳಿ
೧೩೦ ದೇಯಿ ಬೈದ್ಯೆತಿ
೧೩೧ ದೇವು ಪೂಂಜೆ
೧೩೨ ಬೈಯುರೆ
೧೩೩ ಧರ್ಮ ದೈವ
೧೩೪ ಧರ್ಮಾಡಿ
೧೩೫ ಧೂಮುರೆ
೧೩೬ ಧೂಮಾವತಿ
೧೩೭ ನಡು ಬಲ್ಲಂದಿ
೧೩೮ ನಲ್ಲಿರುತ್ತಾಯೆ
೧೩೯ ನಾಗೆ
೧೪೦ ನಾಗಕನ್ನೆ
೧೪೧ ನಾಗಂತಾಯಿ

೧೪೨ ನಾಗನಂದಿ
೧೪೩ ನಾಗಬೆರ್ಮೆ
೧೪೪ ನಾಗೇಶ್ವರಿ
೧೪೫ ನಾಡುಭೂತ
೧೪೬ ನಾಯಂತ ಭೂತ
೧೪೭ ನಾರ್ಣತ್ತಾಯ
೧೪೮ ನಾರಾಲ್ತಾಯೆ
೧೪೯ ನಾಲ್‌ಕೈತ್ತಾಯೆ
೧೫೦ ನೀಜೆ
೧೫೧ ನೆತ್ತೆರ್ ಚಾಮುಂಡಿ
೧೫೨ ನೆತ್ತೆರ್ ಭೈರವೆ
೧೫೩ ನೆತ್ರ ಮುಕ್ಕಳಿ
೧೫೪ ಪಂಚ ಜುಮಾದಿ
೧೫೫ ಪಂಜಿ ಗಿರಾವು
೧೫೬ ಪಂಜುರ್ಲಿ
೧೫೭ ಪಂಜಣತ್ತಾಯ
೧೫೮ ಪಚಂಗೆರೆ ದೇವಿ
೧೫೯ ಪಡ್ಕಣತ್ತಾಯೆ
೧೬೦ ಪಂಟ್ರಾಯೆ
೧೬೧ ಪಂಡೊಂಡಿನಾಯೆ
೧೬೨ ಪತಿಕೊಂಡಾಯೆ
೧೬೩ ಪಣೆಮಂಡೆ
೧೬೪ ಪಾಡಿರಾಯೆ
೧೬೫ ಪಾತಾಳ ಗುಳಿಗೆ
೧೬೬ ಪಾತಾಳ ಭೈರವೆ
೧೬೭ ಪಾಲಕತ್ತಾಯೆ
೧೬೮ ಪಿಲಿ ಚಾಮುಂಡಿ
೧೬೯ ಪಿಶುವೈ
೧೭೦ ಪುತ್ತು ಗಿರಾವು
೧೭೧ ಪುರಂಪೆ
೧೭೨ ಪುರಲಾಯ
೧೭೩ ಪುಲಂದಾಯೆ
೧೭೪ ಪುಲ್ಲೂರ ಕಣ್ಣನ್
೧೭೫ ಪೆರಾರ್ ಬೊಳಂದಿ
೧೭೬ ಪೊಟ್ಟೆ
೧೭೭ ಪೊಸ ಭೂತ
೧೭೮ ಪೊಸ ಮಹಾರಾಯೆ
೧೭೯ ಬಂಜನತ್ತಾಯೆ
೧೮೦ ಬಂಟಾಂಡಿ
೧೮೧ ಬಂಬೆ
೧೮೨ ಬಚುರಾಯೆ
೧೮೩ ಬರ್‌ಮಲ್‌ತಾಯ
೧೮೪ ಬಸ್ತಿ ನಾಯಕ
೧೮೫ ಬಾಕಿಲ್ ಬೊಬ್ಬರ್ಯೆ
೧೮೬ ಬಾಕುಡೆಯಿಲಾಯೆ
೧೮೭ ಬಾಕುಂಡ್ತಿ
೧೮೮ ಬಾಲೆ ಬಾರಗೆ
೧೮೯ ಬಾವನಾಯೆ
೧೯೦ ಬಿಕ್ರಮೋಲಾಂಟ
೧೯೧ ಬೀರ ಪುತ್ರನ್
೧೯೨ ಬುದ್ದಂತಾಯೆ
೧೯೩ ಬುದಾಬಾರೆ
೧೯೪ ಬೆರ್ಮೆ
೧೯೫ ಬಿಯಿಯ ಬಾಯ
೧೯೬ ಬೇತಾಳ
೧೯೭ ಬೈದ್ಯನಾಥ
೧೯೮ ಬೈನಾಳಿ
೧೯೯ ಬೈರವೆ
೨೦೦ ಬೈರಾಗಿ ಭೂತ
೨೦೧ ಬೊಮ್ಮರ್ತಾಯೆ
೨೦೨ ಬೋಳಂಗಳತಾಯಿ
೨೦೩ ಭಸ್ಮ ಮೂರ್ತಿ
೨೦೪ ಭೂತನಾಗೆ
೨೦೫ ಭೂತರಾಜ
೨೦೬ ಪುಳಕ ನಂದಿ
೨೦೭ ಮಂಗ್ರಂದಾಯ
೨೦೮ ಮಂಜಟಿನಾಯ
೨೦೯ ಮಂಜಿ ಬೊಮ್ಮ
೨೧೦ ಮಡ್ಡಡ್ಕತ್ತಾಯೆ
೨೧೧ ಮಂಡೆನಾಗೆ
೨೧೨ ಮಡ್ಲಾಯೆ
೨೧೩ ಮಂಡಿ

೨೧೪ ಮಂದ್‌ಮಾಳ್ ಭೂತ
೨೧೫ ಮರ್ವಾಲತ್ತಾಯೆ
೨೧೬ ಮರ್ಲ್‌ಚಿಕ್ಕು
೨೧೭ ಮರ್ಲ್ ಜುಮಾದಿ
೨೧೮ ಮಲ್ಲರಾಯೆ
೨೧೯ ಮರಿಚಂಡಿ
೨೨೦ ಮಲೆಯಾಳ ಚಾಮುಂಡಿ
೨೨೧ ಮಲೆರಾಯೆ
೨೨೨ ಮಹಿಷಂದಾಯೆ
೨೨೩ ಮಹೇಶ್ವರ
೨೨೪ ಮಹೇಶ್ವರಿ
೨೨೫ ಮಾಂಕಾಳಿ
೨೨೬ ಮಾಯಾಲ್ಡ್
೨೨೭ ಮಾಯಂದಾಳ್
೨೨೮ ಮಾರಾವಾಂಡಿ ಭೂತ
೨೨೯ ಮಾರಾಳಮ್ಮ
೨೩೦ ಮಾರಿಯಮ್ಮ
೨೩೧ ಮಾಸ್ತಿ
೨೩೨ ಮಿತ್ತಂತಾಯೆ
೨೩೩ ಮಿಯಾರ್ ಕೊಡಮಣ್‌ತ್ತಾಯೆ
೨೩೪ ಮುಕ್ಕಬ್ಬೆ
೨೩೫ ಮುಂಡದೇರ್
೨೩೬ ಮುಡಿಪುನ್ನಾಯೆ
೨೩೭ ಮುಡ್ಡಿಲ್‌ತ್ತಾಯೆ
೨೩೮ ಮುಂಡತ್ತಾಯೆ
೨೩೯ ಮುಂಡಿಪಾಡಿತ್ತಾಯೆ
೨೪೦ ಮುತ್ತಪ್ಪೆ
೨೪೧ ಮೂಚಿಲ್ಲಾಯೆ
೨೪೨ ಮೂಡಿಪಡಿತ್ತಾಯೆ
೨೪೩ ಮೂಡೆದಾಯೆ
೨೪೪ ಮೂರ್ತಿಲಾಯೆ
೨೪೫ ಮೇಲ್‌ಕಾರತ್ತಾಯೆ
೨೪೬ ಮೊಮ್ಮಾಯಿ
೨೪೭ ಯೆರ್ಮಣ್ಣಾಯೆ
೨೪೮ ರಕ್ತ ಚಾಮುಂಡಿ
೨೪೯ ರಕ್ತೇಶ್ವರಿ
೨೫೦ ರಂಜಕಾಸುರೆ
೨೫೧ ರಾಯೆ
೨೫೨ ರುದ್ರ ಚಾಮುಂಡಿ
೨೫೩ ರುಂದರ ಪಂಜುರ್ಲಿ
೨೫೪ ವರ್ಣ ಪಂಜುರ್ಲಿ
೨೫೫ ವಿಷ್ಣುಮೂರ್ತಿ
೨೫೬ ವೀರ ಕಾಳಿ
೨೫೭ ಶಾಸ್ತಾರೆ
೨೫೮ ಶಿರಾಡಿ ದೈವ
೨೫೯ ಶಿವತ್ತಾಯೆ
೨೬೦ ಸಂಕಲೆ ಗುಳಿಗೆ
೨೬೧ ಸತ್ಯ ದೇವತೆ
೨೬೨ ಸಂಪಿಗೆತ್ತಾಯೆ
೨೬೩ ಸಾರತಮಲ್ಲು
೨೬೪ ಸಾರ ಮಹಾಕಾಳಿ
೨೬೫ ಸಾರಾಲ್ ಜುಮಾದಿ
೨೬೬ ಸುಬ್ಬಿಯಮ್ಮ
೨೬೭ ಸೂ ಕತ್ತೇರಿ
೨೬೮ ಸೊಣ್ಣೆ
೨೬೯ ಸೋಮಾವೇದಿ
೨೭೦ ಹದಿಕಾರಾಯೆ
೨೭೧ ಹರಿಕಾರಾಯೆ
೨೭೨ ಹಾಯಿಗುಳಿ
೨೭೩ ಹೊಸ ಭಗವತಿ
೨೭೪ ಹೊಸಳಿಗಮ್ಮ

ಮೇಲೆ ತಿಳಿಸಿದ ಎಲ್ಲಾ ಭೂತಗಳ ಪಾಡ್ದನಗಳು ಉಪಲಬ್ಧವಿಲ್ಲ. ಕೆಲವು ಭೂತಗಳು ಬೇರೆ ಬೇರೆ ಕಡೆಗಳಲ್ಲಿ ಆರಾಧನೆಯನ್ನು ಪಡೆಯುತ್ತವೆ. ಭೂತಗಳ ಉಗಮ ಅಥವಾ ಹುಟ್ಟನ್ನು ಆಯಾ ಭೂತದ ಪಾಡ್ದನದಲ್ಲಿ ಕೊಡಲಾಗಿದೆ. ಜೊತೆಗೆ ಭೂತಗಳ ಮಹಿಮೆಯನ್ನು ಸಾರುವ ಪಾಡ್ದನಗಳು ಅಧಿಕ ಸಂಖ್ಯೆಯಲ್ಲಿ ದೊರೆಯುತ್ತವೆ. ಪಾಡ್ದನ ಸಾಹಿತ್ಯವನ್ನು ಗಮನಿಸಿಕೊಂಡು ಭೂತಗಳ ಉಗಮಕ್ಕೆ ಸಂಬಂಧಿಸಿದ ಕೆಲವು ಮುಖ್ಯ ಪ್ರಕಾರಗಳನ್ನು ಪಾಡ್ದನಗಳಲ್ಲಿ ಮಾಡಿಕೊಳ್ಳಬಹುದು.

೧ ಪ್ರಾಣಿಗಳು ಭೂತಗಳಾಗಿ ಪರಿವರ್ತನೆಗೊಂಡ ವರ್ಗ.

೨ ಮನುಷ್ಯರು ಆತ್ಮಹತ್ಯೆ, ಕೊಲೆ ಅಥವಾ ಇತರ ರೀತಿಯಲ್ಲಿ ಅಕಾಲ ಮರಣವನ್ನು ಹೊಂದಿ, ಭೂತಗಳಾಗಿ ಪರಿವರ್ತನೆಗೊಂಡ ವರ್ಗ.

೩ ಭೂತಗಳ ಸಂಪರ್ಕದಿಂದ ಮನುಷ್ಯರು ಭೂತಗಳಾಗಿ ಪರಿವರ್ತನೆಗೊಂಡ ವರ್ಗ.

**ಪ್ರಾಣಿಗಳು ಭೂತಗಳಾಗಿ ಪರಿವರ್ತನೆಗೊಂಡ ವರ್ಗ**

ಪಾಡ್ದನಗಳ ಆಧಾರದಿಂದ ಭೂತಗಳ ಹುಟ್ಟನ್ನು ವಿಶ್ಲೇಷಿಸುವುದಾದರೆ ತುಳುನಾಡಿನ ಕೆಲವು ಭೂತಗಳು ಪ್ರಾಣಿಗಳ ಸ್ವರೂಪದಿಂದ ಹುಟ್ಟಿಕೊಂಡವುಗಗಳು. ಮುಖ್ಯವಾಗಿ ಪಂಜುರ್ಲಿ, ಪಿಲ್ ಚಾಮುಂಡಿ ಮುಂತಾದವು. ವಿಶ್ಲೇಷಣಾತ್ಮಕ ಅಧ್ಯಯನಕ್ಕಾಗಿ ಪಂಜುರ್ಲಿ ಭೂತದ ಪಾಡ್ದನವನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

**ಪಂಜುರ್ಲಿ**

ಪಂಜುರ್ಲಿ ಭೂತವು ತುಳುವ ಸಂಸ್ಕೃತಿಯಲ್ಲಿ ಆರಾಧನೆಗೊಳ್ಳುತ್ತಿರುವ ಒಂದು ಪ್ರಮುಖವಾದ ಕುಲದೇವತೆ. ತುಳುನಾಡಿನುದ್ದಕ್ಕೂ ಪಂಜುರ್ಲಿ ಭೂತದ ಅನೇಕ ಗುಡಿಗಳು ಕಾಣಸಿಗುತ್ತವೆ, ಈ ಪಂಜುರ್ಲಿ ಭೂತದ ಬಗ್ಗೆ ಈ ವರೆಗೆ ಹನ್ನೆರಡು ಪಾಡ್ದನಗಳು ದೊರೆತಿವೆ.

**ಪಂಜುರ್ಲಿ ಭೂತದ ಉಗಮ:**

ಈ ವರೆಗೆ ಉಪಲಬ್ಧವಾಗಿರುವ ಆರು ಪಾಡ್ದನಗಳು ಪಂಜುರ್ಲಿ ಭೂತದ ಉಗಮವನ್ನು ವಿವರಿಸುತ್ತವೆ. ಇವುಗಳಲ್ಲಿ ಮೂರು ಪಾಡ್ದನಗಳು ಸಂಪೂರ್ಣವಾಗಿ ಉಗಮದ ಬಗ್ಗೆಯೇ ಇದ್ದರೆ, ಇನ್ನು ಮೂರು ಪಾಡ್ದನಗಳು ಉಗಮದ ಜೊತೆಗೆ ಪಂಜುರ್ಲಿ ಭೂತದ ಮಹಿಮೆ ಹಾಗೂ ಪ್ರಸರ್ಣವನ್ನು ವರ್ಣಿಸುತ್ತವೆ. ಈ ಬೇರೆಬೇರೆ ಪಾಠಗಳ ಸಾರಾಂಶವನ್ನು ಕೆಳಗೆ ಕೊಡಲಾಗಿದೆ.[1]

**ಪಾಡ್ದನ—ಪ$_1$**

ಪಂಜುರ್ಲಿಯು ಜನಿಸಿದ್ದು ಘಟ್ಟದ ಮೇಲೆ. ಒಂದು ಹೆಣ್ಣು ಹಂದಿಯು ಅವಳಿ ಮರಿಗಳಿಗೆ ಜನ್ಮ ಕೊಟ್ಟಿತು. ಅವುಗಳ ಪೈಕಿ ಒಂದು ಗಂಡು, ಇನ್ನೊಂದು ಹೆಣ್ಣು. ಅವುಗಳು ಸಂಬ್ರಾಯ ದೇವರು ಇರುವ ಕಣಿವೆಯ ಮೂಲಕ ಘಟ್ಟದಿಂದ ಕೆಳಗೆ ಇಳಿಯಲು ನಿರ್ಧರಿಸಿದವು ಅವು ದೇವರಿಗೆ ಐದಾರು ವಿಧದ ಹರಕೆಗಳನ್ನು ಸಲ್ಲಿಸಿದುವು; ತಲೆಗೆ ಮತ್ತು ಮೈಗೆ ಸ್ನಾನ ಮಾಡಿದವು. ಪೂರ್ವದ್ವಾರದಿಂದ ಪಶ್ಚಿಮ ದ್ವಾರಕ್ಕೆ ಬಂದವು. ಬಂದು ದೇವರ ಆಶೀರ್ವಾದವನ್ನು ಬೇಡಿ, ಹೀಗೆಂದು ಅರಿಕೆ ಮಾಡಿಕೊಂಡವು: "ಈ ವರೆಗೆ ನಾವು ಅಣ್ಣ–ತಂಗಿ ಆಗಿದ್ದೆವು. ಈ ಘಟ್ಟದಿಂದ ಇಳಿಯುವಾಗ ಗಂಡ–ಹೆಂಡತಿಯರಾಗುತ್ತೇವೆ. . . ದೇವರು ಅದಕ್ಕೆ ಒಪ್ಪಿದರು. ಆ ಹಂದಿಗಳು ಘಟ್ಟದಿಂದ ಕೆಳಕ್ಕೆ ಇಳಿದವು. ಅವುಗಳ ಪೈಕಿ ಹೆಣ್ಣು ಗರ್ಭಿಣಿಯಾಗಿ, ಹತ್ತನೆಯ ತಿಂಗಳಿನಲ್ಲಿ ಬಹಳ ಕಷ್ಟದಿಂದ ಎರಡು ಮರಿಗಳನ್ನು ಹೆತ್ತಿತು. ಆ ಹೆಣ್ಣು ಹಂದಿಯು ತನ್ನ ಮರಿ

---

1. ಪಂಜುರ್ಲಿ ಪಾಡ್ದನಗಳ ಬೇರೆ ಬೇರೆ ಪಾಠಗಳ ಆಕರಗಳು :

ಪ$_1$ ಪ$_5$ ಪ$_6$ – ಸಂ. ಮ್ಯಾನರ್ ಎ., "ಪಾಡ್ದನೊಳು . . . ಮಂಗಳೂರು: ಬಾಸೆಲ್ ಮಿಷನ್ ಪ್ರೆಸ್. 1866.

ಪ$_2$. ಪ$_3$. ಪ$_7$. – ಸಂ. ಅಮೃತ ಸೋಮೇಶ್ವರ. ತುಳುಕೂಟ, ಮಂಗಳೂರು ಇವರು ಪ್ರಕಟಿಸುತ್ತಿದ್ದ 'ತುಳುಕೂಟ' ಮಾಸ ಪತ್ರಿಕೆಯ ಸಂಚಿಕೆಗಳಲ್ಲಿ ಪ್ರಕಟವಾಗಿವೆ.

ಪ$_4$. ಪ$_8$. ಪ$_{10}$ – ಸಂ. ವಾದಿರಾಜ ಭಟ್ಟ, ಕನರಾಡಿ. "ಪಾಡ್ದನಗಳು (ಅಧ್ಯಾಯ್ಯನಾತ್ಮಕ ಸಂಗ್ರಹ). . . ಕಿನ್ನಿಗೋಳಿ: ಯುಗಪುರುಷ ಪ್ರಕಟಣಾಲಯ, 1974. ರಾಮಕೃಷ್ಣ ಶೆಟ್ಟಿ. ಇನ್ನ ಅವರು ಸಂಪಾದಿದ "ಒಡ್ತೆ ಪಂಜುರ್ಲಿ" ಎಂಬ ಪಾಡ್ದದನವು "ತುಳುಕೂಟ" ಪತ್ರಿಕೆಯಲ್ಲಿ ಪ್ರಕಟವಾಗಿದೆ.

ಪ$_1$. ಪ$_5$. ಪ$_6$. ಪಾಡ್ದನಗಳು ಇಂಗ್ಲಿಷಿಗೆ ಅನುವಾದಗೊಂಡು ಪ್ರಕಟವಾಗಿವೆ:

- Burnell A.C., ',The Devil Worship of the Tuluvas,,. Indian Antiquary, Vol. XXIII, XXIV, XXV, XXVI: 1894-1897.

ಗಳೊಂದಿಗೆ ತುಳುನಾಡಿಗೆ ಇಳಿದು, ಈಶ್ವರನ ನಂದನವನವನ್ನು ಪ್ರವೇಶಿಸಿತು. ಅಲ್ಲಿನ ಗಿಡಬಳ್ಳಿಗಳನ್ನು ಹಾಳು ಮಾಡಿ, ತೋಟವನ್ನು ಪುಡಿಪುಡಿಮಾಡಿತು, ಈ ಸುದ್ದಿ ತಿಳಿದ ಈಶ್ವರನು ಆಳುಗಳೊಡನೆ ಬಂದು, ಆ ಕಾಡು ಪ್ರಾಣಿಗಳಿಗಾಗಿ ಹುಡುಕಾಡಿದ. ಆ ಗಂಡು ಮತ್ತು ಹೆಣ್ಣು ಹಂದಿಗಳನ್ನು ಗುಂಡಿಟ್ಟು ಕೊಂದ. ಅವುಗಳ ಎಳೆಯ ಮರಿಗಳನ್ನು ತನ್ನ ಅರಮನೆಗೆ ಕೊಂಡುಹೋದ. ಈಶ್ವರನ ಹೆಂಡತಿ ಪಾರ್ವತಿಗೆ ಮಕ್ಕಳಿರಲಿಲ್ಲ. ಆದ್ದರಿಂದ ಅವಳು ಆ ಹಂದಿಯ ಮರಿಗಳನ್ನು ಬಹಳ ಜಾಗ್ರತೆ ಮತ್ತು ಪ್ರೀತಿಯಿಂದ ಸಾಕಿದಳು. ಕೆಲವು ಕಾಲ ಕಳೆದಾಗ, ಆ ಹಂದಿಯ ಮರಿಗಳು ಈಶ್ವರನ ತೋಟವನ್ನು ಹಾಳು ಮಾಡಲು ಶುರುಮಾಡಿದವು. ಈಶ್ವರನು ಅವುಗಳ ಉಪಟಳ ತಡೆಯಲಾರದೆ, ಅವುಗಳನ್ನು ಕೊಲ್ಲಲು ಸಿದ್ಧನಾದ. ಆಗ ಪಾರ್ವತಿಯು ಅತ್ತು ಗೋಗರೆದು, ಆ ಹಂದಿಯ ಮರಿಗಳನ್ನು ತನ್ನ ಕಣ್ಣ ಮುಂದೆ ಕೊಲ್ಲಬಾರದೆಂದು ಬೇಡಿಕೊಂಡಳು. ಆಗ ಈಶ್ವರ ದೇವನು ಅವುಗಳನ್ನು ಈ ರೀತಿ ಶಪಿಸಿದನು: "ಇನ್ನು ಮುಂದೆ ನೀವು ಹಂದಿಗಳಲ್ಲ. ನೀವು ಇನ್ನು 'ಪಂಜುರ್ಲಿ' ಎಂದು ಹೆಸರು ಪಡೆದು, ಕೆಳಗಿನ ನಾಡಿಗೆ ಇಳಿದು, ಜನರಿಂದ ಗೌರವವನ್ನು ಪಡೆಯಿರಿ. . . ಈ ರೀತಿ ಈಶ್ವರನ ಶಾಪಕ್ಕೆ ಒಳಗಾದ, ಆ ಹಂದಿಯ ಮರಿಗಳು, ಪಂಜುರ್ಲಿ ಭೂತವೆಂಬ ಹೆಸರಿನಲ್ಲಿ ಪ್ರಸಿದ್ಧಿಯನ್ನು ಪಡೆದವು. ಪಂಜಿದ ಕುರುಳಿ = ಹಂದಿಯ ಮರಿ ಪಂಜುರ್ಲಿ.

**ಪಾಡ್ದನ—ಪ$_2$**

ಆಯನಾಡು ರಾಯಲ ಸೀಮೆಯ ರಾಯರ ಮಗಳು ಬೇಸರ ಕಳೆಯುವುದಕ್ಕಾಗಿ ಮಣ್ಣಿನಿಂದ ಎರಡು ಹಂದಿ ಮತ್ತು ಎರಡು ಹಕ್ಕಿಗಳನ್ನು ಮಾಡುತ್ತಾಳೆ. ಅವಳ ಇಚ್ಛೆಯ ಪ್ರಕಾರ ಈಶ್ವರನು ಆ ಬೊಂಬೆಗಳಿಗೆ ಜೀವ ಕೊಡುತ್ತಾನೆ.[2] ಅವಳು ಆ ಹಂದಿಗಳನ್ನು ಘಟ್ಟ (ಮಲೆ)ಕ್ಕೆ ಕಳುಹಿಸುತ್ತಾಳೆ. ಅವುಗಳಲ್ಲಿ ಒಂದು ಗಂಡು, ಇನ್ನೊಂದು ಹೆಣ್ಣು. ಆ ಹಂದಿಗಳು ಕುಕ್ಕೆ ಸುಬ್ರಾಯ ದೇವರಲ್ಲಿಗೆ ಬಂದು ವರಗಳನ್ನು ಪಡೆದು, ಮರಿಗಳನ್ನು ಪಡೆಯುತ್ತವೆ. ಈ ಹಂದಿಮರಿಗಳು ದೊಡ್ಡದಾದಾಗ ಈಶ್ವರನು ಬೆಳೆಸಿದ ಬೆಳೆಗಳನ್ನು ಹಾಳು ಮಾಡಲು ತೊಡಗುತ್ತವೆ. ಈಶ್ವರನು ಸಿಟ್ಟಿನಿಂದ ಆ ಹಂದಿಗಳನ್ನು ಗುಂಡಿಟ್ಟು ಕೊಲ್ಲುತ್ತಾನೆ. ಸತ್ತ ಮೇಲೆ ಅವು "ಪಂಜುರ್ಲಿ" ಭೂತವಾಗಿ ಮಾರ್ಪಡುತ್ತವೆ.

**ಪಾಡ್ದನ—ಪ$_3$**

ಈಶ್ವರನು ಒಂದು ಬಾರಿ ಬೇಟೆಯಾಡಲು ಹೋದವನು, ಮನೆಗೆ ಬರುವಾಗ ಒಂದು ಹಂದಿ ಮರಿಯನ್ನು ತರುತ್ತಾನೆ. ಅವನ ನಾಲ್ವರು ತಂಗಿಯರಾದ ಮಾದು, ಪಾರ್ವತಿ, ಗೌರಿ ಮತ್ತು ಗಂಗಮ್ಮ ಆ ಹಂದಿ ಮರಿಯನ್ನು ಬಹಳ ಮುದ್ದಿನಿಂದ ಸಾಕುತ್ತಾರೆ. ಆ ಹಂದಿಮರಿಯು ಬೆಳೆದು ದೊಡ್ಡದಾದಾಗ, ಈಶ್ವರನ ತೋಟವನ್ನು ಹಾಳು ಮಾಡಲು ತೊಡಗುತ್ತದೆ. ಸಿಟ್ಟುಗೊಂಡ ಈಶ್ವರನು ಆ ಹಂದಿಯನ್ನು ಕೊಲ್ಲುತ್ತಾನೆ. ಸತ್ತ ನಂತರ ಆ ಹಂದಿಯು "ಪಂಜುರ್ಲಿ" ಭೂತವಾಗುತ್ತದೆ.

**ಪಾಡ್ದನ—ಪ$_4$**

ಈ ಪಾಡ್ದನದಲ್ಲಿ "ಪಂಜುರ್ಲಿ" ಯ ಉಗಮ ಹಾಗೂ ಪ್ರಸರಣದ ವಿವರಣೆ ಸಿಗುತ್ತದೆ. ಪಾಡ್ದನದ ಮೊದಲನೆಯ ಅರ್ಧಭಾಗದಲ್ಲಿ ಪಂಜುರ್ಲಿಯ ಉಗಮದ ವರ್ಣನೆ ಇದೆ. ಈಶ್ವರನು ಒಮ್ಮೆ ಕಾಡಿಗೆ ಬೇಟೆ

——

2. ಈಶ್ವರನ ಪತ್ನಿ ಪಾರ್ವತಿಯು ಬೇಸರ ಪರಿಹಾರಕ್ಕಾಗಿ ತನ್ನ ದೇಹದ ಕೊಳೆಯಿಂದ ಒಂದು ಬೊಂಬೆಯನ್ನು ನಿರ್ಮಿಸುವುದು. ಅದಕ್ಕೆ ಈಶ್ವರನು ಜೀವ ತುಂಬುವುದು ಎಂಬ ಗಣಪತಿಯ ಸೃಷ್ಟಿಯ ಮೂಲ ರೂಪವನ್ನು ಇಲ್ಲಿ ಗಣನೆಗೆ ತಂದುಕೊಳ್ಳಬಹುದು. ಶಿಷ್ಟ ಪುರಾಣಗಳು ಜನಪದ ಆಶಯ (motif) ಗಳಿಂದ ತುಂಬಿಕೊಂಡಿವೆ ಎನ್ನುವುದಕ್ಕೆ ಇದು ಒಂದು ನಿದರ್ಶನ.

ಯಾಡಲು ಹೋಗುತ್ತಾನೆ. ಅವನು ಬೇಟೆಯಿಂದ ಹಿಂದಿರುಗುವಾಗ ಕಾಡಿನಲ್ಲಿ ಸಿಕ್ಕಿದ ಹಂದಿಯ ಮರಿಯನ್ನು ಮನೆಗೆ ತರುತ್ತಾನೆ. ಈಶ್ವರನಿಗೆ ಮಕ್ಕಳಿರಲಿಲ್ಲ. ಆದ್ದರಿಂದ ಅವನ ಹೆಂಡತಿ ಪಾರ್ವತಿಯು ಆ ಹಂದಿಯ ಮರಿಯನ್ನು ಬಹಳ ಪ್ರೀತಿ ಮತ್ತು ಜಾಗ್ರತೆಯಿಂದ ಸಾಕುತ್ತಾಳೆ. ಆ ಹಂದಿಮರಿಯು ಬೆಳೆದು ದೊಡ್ಡದಾದಾಗ, ಬೀರು ಬಿರ್ಮಣ ಬಲ್ಲಾಳನ ಗದ್ದೆಯಲ್ಲಿನ ಸುಗ್ಗಿಯ ಭತ್ತದ ಪೈರನ್ನು ಹಾಳುಮಾಡುತ್ತದೆ. ಈಶ್ವರನ ಗದ್ದೆಯು ಪಕ್ಕದಲ್ಲಿಯೇ ಬೀರು ಬಿರ್ಮಣ ಬಲ್ಲಾಳನ ಗದ್ದೆ ಇತ್ತು. ತನ್ನ ಭತ್ತದ ಬೆಳೆಯು ಈಶ್ವರನ ಹಂದಿಯಿಂದ ಹಾಳಾದುದನ್ನು ಕಂಡ ಬಲ್ಲಾಳನು ಈಶ್ವರನಲ್ಲಿಗೆ ಬಂದು ಅವನನ್ನು ಬೈಯುತ್ತಾನೆ. ನಿರುಪಾಯನಾದ ಈಶ್ವರನು ಬಿಲ್ಲುಬಾಣ ತೆಗೆದುಕೊಂಡು ಗದ್ದೆಗೆ ಹೋಗಿ, ತನ್ನ ಹಂದಿಯನ್ನು ಬಾಣ ಪ್ರಯೋಗಿಸಿ ಕೊಲ್ಲುತ್ತಾನೆ. ತನ್ನ ಮುದ್ದಿನ ಹಂದಿಯು ಸತ್ತದ್ದನ್ನು ಕಂಡ ಪಾರ್ವತಿಯು ಬಹಳವಾಗಿ ದುಃಖಿಸುತ್ತಾಳೆ. ಅವಳನ್ನು ಸಂತೈಸುವುದಕ್ಕಾಗಿ ಈಶ್ವರನು ಸತ್ತ ಆ ಹಂದಿಯನ್ನು 'ಪಂಜುರ್ಲಿ' ಭೂತವನ್ನಾಗಿ ಪರಿವರ್ತಿಸುತ್ತಾನೆ. ಆ ಪಂಜುರ್ಲಿ ಭೂತವು ಘಟ್ಟವನ್ನು ಇಳಿದು ತುಳುನಾಡಿಗೆ ಬರುತ್ತದೆ.

**ಪಾಡ್ದನ—ಪ$_5$**

ಈ ಪಾಡ್ದನವು ಮುಖ್ಯವಾಗಿ ಪಂಜುರ್ಲಿ ಭೂತದ ಸಾಹಸಗಳ ಹಾಗೂ ಪ್ರಸರಣವನ್ನು ವಿವರಿಸಲು ಮೀಸಲಾಗಿದೆ. ಆದರೆ ಆರಂಭದ ಕೆಲವು ಸಾಲುಗಳಲ್ಲಿ ಪಂಜುರ್ಲಿಯ ಉಗಮವನ್ನು ಕುರಿತು ಕಲ್ಪನೆಯೊಂದು ದೊರೆಯುತ್ತದೆ:

ಪಂಜುರ್ಲಿಯು ನಾರಾಯಣನ ಶಾಪಕ್ಕೆ ಹಾಗೂ ಈಶ್ವರನ ಅನುಗ್ರಹಕ್ಕೆ ಒಳಗಾಯಿತು. ಈಶ್ವರನು 'ನಂದನವನ' ಎಂಬ ಹೆಸರಿನ ಸುಂದರವಾದ ಒಂದು ತೋಟವನ್ನು ಮಾಡಿದನು. ಅದನ್ನು ಹಂದಿಗಳು ಸಂಪೂರ್ಣವಾಗಿ ನಾಶಮಾಡಿದವು. ಈಶ್ವರನು ಅವುಗಳನ್ನು ಕೊಲ್ಲಲು ಹೊರಟಾಗ, ಅವನ ಹೆಂಡತಿಯು ಅವನನ್ನು ತಡೆದಳು. ಆದ್ದರಿಂದ ಅವನು ಅವುಗಳಿಗೆ ಈ ರೀತಿ ಶಾಪಕೊಟ್ಟನು: "ನನ್ನ ಕಣ್ಣ ಮುಂದೆ ಇರಬೇಡಿ. ಕಾಡ ಹಂದಿಗಳಾದ ನೀವು ಊರಿನಲ್ಲಿ 'ಪಂಜುರ್ಲಿ' ಎಂದು ಕರೆಸಿಕೊಂಡು ನೇಮಬಲಿ ತೆಗೆದುಕೊಳ್ಳಿರಿ. . .

**ಪಾಡ್ದನ—ಪ$_6$ :**

ಈ ದೀರ್ಘವಾದ ಪಾಡ್ದನದ ಪೂರ್ವಾರ್ಧದಲ್ಲಿ ಪಂಜುರ್ಲಿಯ ಉಗಮದ ಬಗ್ಗೆಯೂ ಉತ್ತರಾರ್ಧದಲ್ಲಿ ಪಂಜುರ್ಲಿಯ ಮಹಿಮೆಗಳ ಬಗ್ಗೆಯೂ ವಿವರಣೆ ಇದೆ. ಉಗಮಕ್ಕೆ ಸಂಬಂಧಿಸಿದ ಭಾಗವೂ ದೀರ್ಘವಾಗಿದ್ದು, ಹೆಚ್ಚಾಗಿ ಸಂಭಾಷಣೆಯ ಶೈಲಿಯಲ್ಲಿ ಇದೆ.

ವೈಕುಂಠದಲ್ಲಿ ನಾರಾಯಣ ದೇವರು ತನ್ನ ಮೂವತ್ತ ಮೂರು ಕೋಟಿ ದೇವತೆಗಳ ಪರಿವಾರದೊಡನೆ ಇರುವಾಗ, ಒಂದು ದಿನ ಬ್ರಹ್ಮನು ನಾರಾಯಣ ದೇವರ ದರ್ಶನಕ್ಕೆಂದು ಬಂದನು. ಬ್ರಹ್ಮನು ನಾರಾಯಣನನ್ನು ಸ್ತುತಿಸಿದನು. ಬಳಿಕ ಈಶ್ವರನು ಪಾರ್ವತಿಯೊಡನೆ ಅಲ್ಲಿಗೆ ಬಂದನು. ನಾರಾಯಣ, ಬ್ರಹ್ಮ ಮತ್ತು ಈಶ್ವರ ಇವರು ತಮ್ಮೊಳಗೆ ಬಹುಹೊತ್ತು ಮಾತನಾಡುತ್ತಿದ್ದರು. ಅಷ್ಟರಲ್ಲೆ ನಾರಾಯಣನು ಬೆವರಿದನು. ಅವನು ತನ್ನ ಕಂಕುಳ ಕೆಳಭಾಗವನ್ನು ತುರಿಸಿಕೊಂಡನು. ಆಗ ಬೆವರ ಹನಿಯು ಭೂಮಿಗೆ ಬಿದ್ದಿತು. ಆ ಬೆವರಿನಿಂದ ಒಂದು ದೊಡ್ಡ ಹಂದಿಯು ಹುಟ್ಟಿತು. ಆ ದೃಶ್ಯವನ್ನು ಕಂಡು ನೆರೆದವರೆಲ್ಲರೂ ಆಶ್ಚರ್ಯಗೊಂಡರು. ಅವರೆಲ್ಲರೂ ನಾರಾಯಣನಲ್ಲಿ ಆ ಹಂದಿಯ ಸೃಷ್ಟಿಯ ಬಗ್ಗೆ ವಿಚಾರಿಸಿದರು. ಅವರಿಗೆ ನಾರಾಯಣನು ಈ ರೀತಿ ಉತ್ತರಿಸಿದನು: "ಭೂಲೋಕದ ಮನುಷ್ಯರಲ್ಲಿ ದುಷ್ಟರು ಹೆಚ್ಚಾಗುತ್ತಿದ್ದಾರೆ. ಪಾಪವು ಅವರಲ್ಲಿ ಅಧಿಕವಾಗುತ್ತಿದೆ. ಅದಕ್ಕಾಗಿ ನಾನು ನನ್ನ ದೇಹದ ಬೆವರಿನಿಂದ ಒಂದು ಹಂದಿಯನ್ನು ಸೃಷ್ಟಿಸಿದ್ದೇನೆ. ಅದಕ್ಕೊಂದು ಹೆಸರನ್ನು ಕೊಟ್ಟು, ಅದನ್ನು ಭೂಲೋಕಕ್ಕೆ ಕಳುಹಿಸುತ್ತೇನೆ. ಅದು ಪಾಪಿಗಳಿಗೆ ಉಪದ್ರ ಕೊಟ್ಟು

ಶಿಕ್ಷಿಸಿ ಅವರನ್ನು ಸರಿದಾರಿಗೆ ತರುತ್ತದೆ." ನಾರಾಯಣನು ಆ ಹಂದಿಗೆ ಮಾತು ಬರಿಸುತ್ತಾನೆ; ಅದಕ್ಕೆ 'ಪಂಜುರ್ಲಿ ಭೂತ' ಎಂದು ನಾಮಕರಣ ಮಾಡುತ್ತಾನೆ ಮತ್ತು ಪಾಪಿಗಳಿಗೆ ತೊಂದರೆ ಕೊಡುವುದಕ್ಕಾಗಿ ಅದನ್ನು ಭೂಲೋಕಕ್ಕೆ ಕಳುಹಿಸುತ್ತಾನೆ. ಪಂಜುರ್ಲಿಯು ವೈಕುಂಠದಿಂದ ಭೂಮಿಗೆ ಇಳಿದು ಬರುತ್ತದೆ. ಅದು ಘಟ್ಟದ ಮೇಲಿನಿಂದ ಯೆಲೆನಾಡು ಕಣಿವೆಯ ಮೂಲಕ ಇಳಿದು, ಸುಬ್ರಾಯ ದೇವರನ್ನು ಆರಾಧಿಸಿ ತುಳುನಾಡಿಗೆ ಬರುತ್ತದೆ.

**ಪಂಜುರ್ಲಿ ಭೂತದ ಉಗಮವನ್ನು ಕುರಿತ ಪಾಡ್ದನಗಳ ವಿಶ್ಲೇಷಣೆ**

೧. ಪ$_1$, ಪ$_2$, ಪ$_3$, ಪ$_4$ ಮತ್ತು ಪ$_5$ ಪಾಡ್ದನಗಳಲ್ಲಿ ಕಾಡು ಹಂದಿಗಳು ಬೆಳೆಗಳನ್ನು ನಾಶಮಾಡುತ್ತವೆ. ಈ ಬೆಳೆಯು ಈಶ್ವರ ಅಥವಾ ಒಬ್ಬ ಬಲ್ಲಾಳ ಅಥವಾ ಬೇರೆ ಯಾರಿಗೋ ಸೇರಿದ್ದು ಆಗಿರುತ್ತದೆ. ಈ ಐದು ಪಾಠಗಳ ಪ್ರಕಾರವೂ ಈಶ್ವರನು ಆ ಹಂದಿಗಳನ್ನು ಬೇಟೆಯಾಡಿ ಕೊಲ್ಲುತ್ತಾನೆ. ಸತ್ತ ಬಳಿಕ ಹಂದಿಯು 'ಪಂಜುರ್ಲಿ ಭೂತ'ವಾಗುತ್ತದೆ.

('ಪಂಜುರ್ಲಿ' ಎಂಬ ಪದವು ತುಳುವಿನ 'ಪಂಜಿದ ಕುರುಳೆ' ಎಂಬ ಪದಗಳ ಸೇರುವಿಕೆಯಿಂದ ಆಗಿದೆ. ಪಂಜಿದ ಕುರುಳೆ = ಹಂದಿಯ ಮರಿ.) ಈ ಎಲ್ಲ ಪಾಠಗಳಲ್ಲಿಯೂ 'ಪಂಜಿದ ಕುರುಳೆ' (=ಹಂದಿಯ ಮರಿ) ಯು 'ಪಂಜುರ್ಲಿ ಭೂತ'ವಾಗಿ ಪರಿವರ್ತನೆಗೊಳ್ಳುತ್ತದೆ.

ಕರಾವಳಿ ಪ್ರದೇಶವಾಗಿರುವ ತುಳುನಾಡಿನ ಪೂರ್ವದ ಗಡಿಯಲ್ಲಿ ದಟ್ಟವಾದ ಅರಣ್ಯಗಳಿಂದ ಕೂಡಿ ಕೊಂಡಿರುವ ಪಶ್ಚಿಮ ಘಟ್ಟಗಳಿವೆ. ಈ ಪಶ್ಚಿಮ ಘಟ್ಟಗಳಿಂದ ಅರಣ್ಯಗಳ ಮೂಲಕ ಕಾಡುಹಂದಿಗಳು ಕೆಳ ಭಾಗಕ್ಕೆ ಇಳಿಯುವುದು ಹಾಗೂ ಘಟ್ಟದ ಬುಡದಲ್ಲಿರುವ ತಗ್ಗು ಪ್ರದೇಶದಲ್ಲಿ ಬೆಳೆಸಿದ ಬೆಳೆಗಳನ್ನು ತಿಂದು ಹಾಳುಮಾಡುವುದು ಸಾಮಾನ್ಯ ಸಂಗತಿ. ಆದ್ದರಿಂದ ಈ ಪ್ರದೇಶಗಳಲ್ಲಿ ರೈತರು ಕಾಡುಹಂದಿಗಳನ್ನು ಬೇಟೆ ಯಾಡುವುದು ಒಂದು ದೈನಂದಿನ ಕೆಲಸ. ಕಾಡುಗಳು ಕಡಿಮೆಯಾಗುತ್ತಿರುವ ಇಂದಿನ ದಿನಗಳಲ್ಲೂ ಈ ಪರಿಸ್ಥಿತಿ ವಿಶೇಷ ಬದಲಾವಣೆಯನ್ನು ಪಡೆದಿಲ್ಲ. ಆದ್ದರಿಂದ ತುಳುನಾಡಿನ ಪ್ರಾಚೀನ ಜನರು ತಮ್ಮ ಬೆಳೆಗಳಿಗೆ ಕಾಡ ಹಂದಿಗಳಿಂದ ಆಗುವ ಹಾನಿಯನ್ನು ನಿವಾರಿಸುವುದಕ್ಕೋಸ್ಕರ, ಕಾಡುಹಂದಿಯನ್ನು 'ಪಂಜುರ್ಲಿ' ಎಂಬ ಹೆಸರಿನ ಭೂತದ ರೂಪದಲ್ಲಿ ಆರಾಧನೆ ಮಾಡಲು ತೊಡಗಿರಬೇಕು. ಈ ರೀತಿ ಉಪದ್ರ ಕೊಡುವ ಜೀವಿಯ ಕೋಟಲೆ ಗಳಿಂದ ತಪ್ಪಿಸಿಕೊಳ್ಳುವುದಕ್ಕಾಗಿ, ಅದನ್ನು ಭೂತದ ರೂಪದಲ್ಲಿ ಆರಾಧಿಸುವ ನಿದರ್ಶನಗಳು ಪಾಡ್ದನಗಳಲ್ಲಿ ಸಾಮಾನ್ಯವಾಗಿ ದೊರೆಯುತ್ತವೆ. 'ಪಂಜುರ್ಲಿ'ಯನ್ನು ಒಂದು 'ಕುಲದೇವತೆ' (Totem) ಯಾಗಿ ಪೂಜಿಸಿರು ವುದಕ್ಕೆ ಸಾಕ್ಷಿಯಾಗಿ ಇಂದಿಗೂ ಪಂಜುರ್ಲಿಯ ಭೂತಸ್ಥಾನಗಳಲ್ಲಿ 'ಹಂದಿಯ ಮುಖವಾಡ'ಗಳು 'ಕುಲದೇವತಾ ಚಿಹ್ನೆ (Totemic emblem) ಗಳ ರೂಪದಲ್ಲಿ ಆರಾಧನೆಗೊಳ್ಳುತ್ತಿವೆ. 'ಪಂಜುರ್ಲಿ' ಭೂತದ ಘಂಟಾ ಮಣಿಯ ಹಿಡಿಯಲ್ಲಿಯೂ ಹಂದಿಯ ತಲೆಯ ಆಕಾರವನ್ನು ಎರಕ ಹೊಯ್ದಿರುತ್ತಾರೆ. ಈ ರೀತಿಯ 'ಕುಲ ದೇವತಾರಾಧನೆ' (Totemism) ಯು ಬೇರೆ ಬೇರೆ ಪ್ರಾಣಿಗಳಿಗೆ ಸಂಬಂಧಿಸಿದಂತೆ ಜಗತ್ತಿನಾದ್ಯಂತ ಕಾಣ ಸಿಗುತ್ತದೆ.

೨. ಅಣ್ಣ ತಂಗಿಯರಾಗಿದ್ದ ಹಂದಿಗಳು ಘಟ್ಟ ಇಳಿಯುವಾಗ ಗಂಡ ಹೆಂಡತಿಯರಾದುವು ಎಂಬುದಕ್ಕೆ ಪ$_1$ ಪಾಡ್ದನದಲ್ಲಿ ಸ್ಪಷ್ಟವಾದ ಆಧಾರವಿದೆ. ಹೆಣ್ಣು ಹಂದಿಯು ಗರ್ಭಿಣಿಯಾಗುವುದು ಮತ್ತು ಎರಡು ಹಂದಿ ಮರಿಗಳಿಗೆ ಜನ್ಮಕೊಡುವುದನ್ನು ವರ್ಣಿಸುವಾಗ ಈ ಪಾಡ್ದನದಲ್ಲಿ ಆ ಹಂದಿಮರಿಗಳನ್ನು 'ಅನಿಷ್ಟದ ಬೀಜ' (ಅನಿಷ್ಟೊದ ಬಿದೆ) ಎಂದು ಕರೆಯಲಾಗಿದೆ. ಆ ಹಂದಿಯ ಮರಿಗಳು ಬೆಳೆಗಳನ್ನು ಹಾಳುಮಾಡುತ್ತವೆ ಮತ್ತು

ಈಶ್ವರ ಅವುಗಳನ್ನು ಕೊಲ್ಲುತ್ತಾನೆ. ಇಲ್ಲಿ ಅಣ್ಣ ತಂಗಿಯರ ನಡುವಿನ ವಿವಾಹದ ನಿಷಿದ್ಧತೆಯನ್ನು ಸೂಚ್ಯವಾಗಿ ತಿಳಿಸಲಾಗಿದೆ. ಇಂತಹ ನಿಷಿದ್ಧತೆಯನ್ನು ಮೀರುವುದು ಅನರ್ಥಕಾರಿ ಎಂಬುದನ್ನು ಕೆಡಕು ಉಂಟು ಮಾಡುವ 'ಪಂಜುರ್ಲಿ ಭೂತ'ದ ರೂಪದಲ್ಲಿ ಸಾಂಕೇತಿಕವಾಗಿ ಹೇಳಲಾಗಿದೆ.

ತುಳುನಾಡಿನ ಆದಿವಾಸಿಗಳು ಯಾರು ಎಂಬುದು ಈವರೆಗೆ ಸ್ಪಷ್ಟವಾಗಿ ತಿಳಿದುಬಂದಿಲ್ಲ. ಪ್ರಾಚೀನ ತುಳುನಾಡಿನಲ್ಲಿ ಅರಣ್ಯಗಳಲ್ಲಿ ವಾಸಿಸುತ್ತಿದ್ದ ಯೋಧರಂತಹ 'ಕೋಶರ್' ಜನಾಂಗದವರ ಬಗ್ಗೆ ತಮಿಳು ಸಂಘಂ ಕಾಲದ ಪದ್ಯಗಳಲ್ಲಿ ಉಲ್ಲೇಖಿತವಾಗಿದೆ. ತುಳುನಾಡಿನಲ್ಲಿ ಈಗ ಇರುವ ಜನಾಂಗಗಳ ಪೈಕಿ ಹೊಲೆಯರು ಇಲ್ಲಿನ ಪ್ರಾಚೀನ ಜನಾಂಗದವರು, ಉಳಿದವರೆಲ್ಲಾ ಬೇರೆ ಪ್ರದೇಶಗಳಿಂದ ತುಳುನಾಡಿಗೆ ವಲಸೆ ಬಂದವರು ಎಂಬ ಅಭಿಪ್ರಾಯ ತುಳುನಾಡಿನ ಇತಿಹಾಸಕಾರರಲ್ಲಿ ಪ್ರಬಲವಾಗಿದೆ.[3] ಪಾಡ್ದನಗಳನ್ನು ಹೆಚ್ಚಾಗಿ ಹಾಡುವವರು ಮತ್ತು ಭೂತಾರಾಧನೆಯ ಸಂದರ್ಭಗಳಲ್ಲಿ ಭೂತ ಕಟ್ಟುವವರು ಹೊಲೆಯ ಜನಾಂಗಕ್ಕೆ ಸೇರಿದ ಪರವ ಪಾಣಾರ ಹಾಗೂ ನಲ್ಕೆಯವರು. ತುಳುನಾಡಿನ ಇಂತಹ ಆದಿವಾಸಿಗಳಲ್ಲಿ ಇದ್ದಿರಬಹುದಾದ ಅಣ್ಣ ತಂಗಿಯರ ನಡುವಿನ ಲೈಂಗಿಕ ಸ್ವಚ್ಛಂದತೆಯನ್ನು ತಡೆಗಟ್ಟಲು ನಿಷಿದ್ಧತೆಯ ಸ್ವರೂಪದ ಆಚರಣೆಗಳು ಬಳಕೆಗೆ ಬಂದಿರಬೇಕು. ಪಂಜುರ್ಲಿಯ ಉಗಮವನ್ನು ಕುರಿತ ಹೆಚ್ಚಿನ ಪಾಡ್ದನಗಳು ಅಣ್ಣ-ತಂಗಿಯರ ನಡುವಿನ ಲೈಂಗಿಕ ಸಂಬಂಧದ ನಿಷಿದ್ಧತೆಯನ್ನು ಸಾರುವ ಉದ್ದೇಶವನ್ನು ಹೊಂದಿರಬೇಕು.[4] ತುಳುನಾಡಿಗೆ ಹೊರಗಿ

---

3 ತುಳುನಾಡಿನ ಪ್ರಾಚೀನ ಮಾನವರು ಯಾರು ಎನ್ನುವ ವಿಚಾರದ ಬಗ್ಗೆ ತೀರ್ಮಾನಕ್ಕೆ ಬರುವಂತಹ ಸಂಶೋಧನೆ ನಡೆದಿಲ್ಲ. ಕಾಡುಗಳಲ್ಲಿ ವಾಸಮಾಡುತ್ತಿರುವ ಹೊಲೆಯರ ಕೆಲವು ವರ್ಗದವರಲ್ಲಿ ಪ್ರಾಚೀನ ಸಂಸ್ಕೃತಿಯ ಪಳೆಯುಳಿಕೆಗಳನ್ನು ಈಗಲೂ ಕಾಣಬಹುದು. ತುಳುನಾಡಿನ ಇತಿಹಾಸದಲ್ಲಿ ಆರಂಭದ ಅರಸರಾದ ಆಳುಪರ ಸೇನೆಗಳಲ್ಲಿ ಹೊಲೆಯರು ಯೋಧರಾಗಿ ಕೆಲಸ ಮಾಡಿದ ಬಗ್ಗೆ ದಾಖಲೆ ಸಿಗುತ್ತದೆ. ಧರೇಶನ (2ನೆಯ ಚಿತ್ರವಾಹನ) ಸಾಮಂತ ಜುದ್ಧಮಲ್ಲನ ಆಳು ರಣಮಣ್ಣಿ 'ಅಂಗು ಪೆಸಾರ ಪೊಲೆಗನ್' ರಣಸಾಗರನ ಸೇನೆಯೊಡನೆ ಹೋರಾಡಿ ಮಡಿದನು ಎಂಬ ಸಂಗತಿ ಧರೇಶ ಮತ್ತು ರಣಸಾಗರನ ಕೋಟ ಶಾಸನದಲ್ಲಿ (ಸು. ಕ್ರಿ. ಶ. 8ನೆಯ ಶತಮಾನದ ಉತ್ತರಾರ್ಧ) ಇದೆ. 'ಅಂಗುಪೆಸಾರ ಪೊಲೆಗ' ಎಂದರೆ, ಅಂಗು ಎಂಬ ಹೆಸರಿದ ಹೊಲೆಯ, ಎಂಬ ಅರ್ಥ ಬರುತ್ತದೆ. ಆಳುಪರು ತುಳುನಾಡಿನ ಮೂಲದ ನಿವಾಸಿಗಳಾಗಿದ್ದ ಹೊಲೆಯರನ್ನು ತಮ್ಮ ಆಳುಗಳಂತೆ ಇಟ್ಟುಕೊಂಡಿದ್ದರೇ ಎಂಬ ಸಂಶಯ ಬರುತ್ತದೆ. ಹೊಲೆಯರನ್ನು ರೂಢಿಯಲ್ಲಿ 'ಮೂಲೊಡಕುಳು, (ಮೂಲದವರು) ಎನ್ನುವಲ್ಲಿ ಮೂಲ ನಿವಾಸಿಗಳು ಎನ್ನುವ ಧ್ವನಿಯೂ ಇದೆ. ತುಳುನಾಡಿನ ಸಾಮಾಜಿಕ ಅಧ್ಯಯನ ಹೆಚ್ಚು ವಿಸ್ತೃತವಾಗಿ ನಡೆದಾಗ, ಈ ವಿಚಾರದಲ್ಲಿ ಹೆಚ್ಚಿನ ಬೆಳಕನ್ನು ಚೆಲ್ಲಬಹುದು.

4 ಅಣ್ಣ ತಂಗಿಯರ ನಡುವಿನ ಲೈಂಗಿಕ ಸಂಬಂಧದ ನಿಷಿದ್ಧತೆಯನ್ನು ತಿಳಿಸುವ ನಿದರ್ಶನಗಳು ತುಳು ಜನಪದ ಸಾಹಿತ್ಯದಲ್ಲಿ ಕೆಲವೆಡೆ ಸಿಗುತ್ತವೆ. 'ಒರೊ ಜಪ್ಪೊ ಜವನೇರಳೊ' ಎಂಬ ತುಳು ಜನಪದ ಕಥೆಯಲ್ಲಿ ಅಣ್ಣನು ತಂಗಿಯನ್ನು ವಿವಾಹವಾಗಲು ಬಯಸುವುದು, ತಂಗಿಯು ಅದನ್ನು ನಿರಾಕರಿಸುವುದು, ಅಣ್ಣ ಬೆಂಬತ್ತಿದಾಗ ತಂಗಿಯು ಹೊಳೆಗೆ ಹಾರಿ 'ಬಾಲೆ ಮೀನು' ಆಗುವುದು, ಅಣ್ಣನೂ ಹೊಳೆಗೆ ಹಾರಿ 'ಮುಗುಡು ಮೀನು' ಆಗುವುದು, ಬಾಲೆ ಮೀನು ಮತ್ತು ಮುಗುಡು ಮೀನುಗಳನ್ನು ಬೇರೆ ಬೇರೆಯಾಗಿ ಅಡುಗೆ ಮಾಡುವುದು – ಇಂತಹ ಘಟನಾ ಪರಂಪರೆ ಇದೆ. 'ಬಾಲೆ ಮೀನು' ಮತ್ತು 'ಮುಗುಡುಮೀನು' ಗಳನ್ನು ಒಟ್ಟಿಗೆ ಹಾಕಬಾರದು ಎಂಬ ನಿಷಿದ್ಧತೆಯ ನಂಬಿಕೆ ಜನಪದದಲ್ಲಿ ಸಿಗುತ್ತದೆ.

ಋಗ್ವೇದದ ಯಮಯಮಿಯರ ಸಂವಾದ ಸೂಕ್ತದಲ್ಲಿ ವೈವಸ್ವತನ ಅವಳಿ ಮಕ್ಕಳ ಪೈಕಿ ಯಮಿಯು ಯಮನನ್ನು ಕಾಮಿಸಿ, ಲೈಂಗಿಕ ಸಂಬಂಧವನ್ನು ಬಯಸುತ್ತಾಳೆ. ಆದರೆ ಯಮನು ಸಹೋದರ ಸಹೋದರಿ ಲೈಂಗಿಕ ಸಂಬಂಧ ಪಾಪವೆಂದು ಬುದ್ಧಿಹೇಳಿ, ಅವಳ ಬೇಡಿಕೆಯನ್ನು ನಿರಾಕರಿಸುತ್ತಾನೆ. ಸೋದರ ಸೋದರಿಯರಲ್ಲಿ ವಿವಾಹ ನಡೆಯುವ ಪದ್ಧತಿ ಎಂದಾದರೂ ಇತ್ತೇ ಎನ್ನುವ ಸಂಶಯಕ್ಕೆ, ಹದಿನಾಲ್ಕು ಮಂತ್ರಗಳ ಈ ಸಂವಾದ ಸೂಕ್ತವಾದ ಕಾರಣವಾಗುತ್ತದೆ.

ನಿಂದ ಆಗಮಿಸಿದ ಕೆಲವು ದ್ರಾವಿಡ ವರ್ಗದವರು ಇಂತಹ ನಿಷಿದ್ಧತೆಯ ಹೇರಿಕೆಗೆ ಕಾರಣರೇ ಎಂಬುದು ವಿಚಾರಣೀಯ ಅಂಶ.

೩. ಪ್ರ$_1$, ಪ್ರ$_2$, ಪ್ರ$_3$, ಪ್ರ$_4$ ಮತ್ತು ಪ್ರ$_5$ ಪಾಡ್ದನಗಳಲ್ಲಿ ಈಶ್ವರನು ಹಂದಿಗಳ ಜೊತೆಗೆ ಸಾಹಚರ್ಯ ವಿಟ್ಟುಕೊಂಡ ಚಿತ್ರಣ ಸಿಗುತ್ತದೆ. ಆರಂಭದಲ್ಲಿ ಈಶ್ವರನು ಹಂದಿಗಳನ್ನು ಸಾಕುತ್ತಾನೆ. (ಕೆಲವು ಪಾಠಗಳಲ್ಲಿ ಮಾತ್ರ) ಬಳಿಕ ಕೊಲ್ಲುತ್ತಾನೆ, ಆಮೇಲೆ ಅವುಗಳನ್ನು 'ಪಂಜುರ್ಲಿ ಭೂತ'ವನ್ನಾಗಿ ಪರಿವರ್ತಿಸುತ್ತಾನೆ. ಪಾಡ್ದನ ಪ್ರ$_5$ರಲ್ಲಿ ವೈದಿಕ ಧರ್ಮದ ಇನ್ನೊಂದು ದೇವರಾದ ನಾರಾಯಣನ ಹೆಸರು ಕಾಣಿಸಿಕೊಳ್ಳುತ್ತದೆ. ಆದರೆ ಅಲ್ಲಿ ಅದು ಕ್ರಿಯಾತ್ಮಕವಾಗಿ ಇಲ್ಲ. ಪಾಡ್ದನ ಪ್ರ$_6$ರಲ್ಲಿ ನಾರಾಯಣನು ಮುಖ್ಯ ಪಾತ್ರವನ್ನು ವಹಿಸುತ್ತಾನೆ. ಅದರಲ್ಲಿ ಬ್ರಹ್ಮ ಮತ್ತು ಈಶ್ವರರು ನಾರಾಯಣನ ಅಧೀನರಂತೆ ಚಿತ್ರಿತರಾಗಿದ್ದಾರೆ. ನಾರಾಯಣನ ಬೆವರಿನಿಂದ ಪಂಜುರ್ಲಿಯನ್ನು ಸೃಷ್ಟಿಸುವುದು ಮತ್ತು ದುಷ್ಟರನ್ನು ಶಿಕ್ಷಿಸಲು ಅಂತಹ ಪಂಜುರ್ಲಿಯನ್ನು ಬಳಸಿಕೊಳ್ಳುವುದು : ಈ ಉಪಾಖ್ಯಾನವು ಪುರಾಣಗಳಲ್ಲಿ ಬರುವ ವಿಷ್ಣುವಿನ ವರಾಹಾವತಾರದ ಕಲ್ಪನೆಯನ್ನು ಹೋಲುತ್ತದೆ. ಆದ್ದರಿಂದ ಈ ರೀತಿ ವೈಷ್ಣವ ಧರ್ಮದ ಪ್ರಾಧಾನ್ಯವಿರುವ ಈ ಪಾಡ್ದನದ ಪಾಠವು ರಚನೆಯ ದೃಷ್ಟಿಯಿಂದ ಉಳಿದ ಪಾಠಗಳಿಗಿಂತ ನಂತರ ಹುಟ್ಟಿದ್ದೆಂದು ಸ್ಪಷ್ಟವಾಗುತ್ತದೆ. ಶಾಸನಗಳ ಆಧಾರದಿಂದ ಹೇಳುವುದಾದರೆ, ತುಳುನಾಡಿನಲ್ಲಿ ವೈಷ್ಣವ ಆರಾಧನೆಯು ಕ್ರಿ.ಶ. ೧೧ನೇ ಶತಮಾನದಿಂದ ಕಾಣಿಸಿಕೊಳ್ಳುತ್ತದೆ. ಕ್ರಿ.ಶ. ೧೩ನೇ ಶತಮಾನದ ಉತ್ತರಾರ್ಧದಲ್ಲಿ ಉಡುಪಿಯಲ್ಲಿ ಶ್ರೀ ಕೃಷ್ಣನ ಪ್ರತಿಮೆಯನ್ನು ಪ್ರತಿಷ್ಠಾಪಿಸಿದ ಮಧ್ವಾಚಾರ್ಯರು ವೈಷ್ಣವ ಸಿದ್ಧಾಂತವನ್ನು ಪ್ರಚುರಪಡಿಸಿದ ಮೇಲೆಯೇ ಉಡುಪಿಯು ವೈಷ್ಣವ ಧರ್ಮದ ಒಂದು ಪ್ರಸಿದ್ಧ ಕೇಂದ್ರವಾಯಿತು.

ತುಳುನಾಡಿನಲ್ಲಿ ವೈದಿಕ ಧರ್ಮಗಳ ಪೈಕಿ ಶೈವಧರ್ಮವೇ ಅತ್ಯಂತ ಪ್ರಾಚೀನವಾದುದು. ಕ್ರಿ.ಶ. ೫ನೇ ಶತಮಾನದಿಂದ ಕ್ರಿ.ಶ. ೧೦ನೇ ಶತಮಾನದವರೆಗೆ ತುಳುನಾಡಿನಲ್ಲಿ ಶೈವಧರ್ಮಕ್ಕೆ ಸಂಬಂಧಿಸಿದ ಶಾಸನಗಳು ಮಾತ್ರ ದೊರೆಯುತ್ತವೆ. ಆದ್ದರಿಂದ ಪ್ರ$_6$ ಒಂದನ್ನು ಬಿಟ್ಟು, ಉಳಿದ ಪಾಡ್ದನಗಳಲ್ಲಿ ಈಶ್ವರನು ಪ್ರಧಾನ ಪಾತ್ರ ವಹಿಸುವುದಕ್ಕೆ ಸಮರ್ಥನೆ ಇದೆ. ಈ ಪಾಡ್ದನಗಳಲ್ಲಿಯೂ ಈಶ್ವರನು ಒಬ್ಬ ದೇವರಿಗಿಂತ ಹೆಚ್ಚಾಗಿ, ಒಬ್ಬ ಬೇಸಾಯಗಾರನ ರೀತಿಯಲ್ಲಿ ಚಿತ್ರಿತವಾಗಿದ್ದಾನೆ.[5] ತುಳುನಾಡಿನಲ್ಲಿ ಶೈವ ಧರ್ಮ ಪ್ರಬಲವಾದ ಬಳಿಕ, ಒಬ್ಬ ಗ್ರಾಮೀಣ ರೈತನ ಸ್ಥಾನವನ್ನು ಈಶ್ವರನು ಆಕ್ರಮಿಸಿಕೊಂಡಿರಬೇಕು. ಹಾಗೆಯೇ ಕ್ರಮೇಣ ಆ ಪಾತ್ರಕ್ಕೆ ದೈವತ್ವದ ಕಲ್ಪನೆಯನ್ನು ಆರೋಪಿಸಿರಬೇಕು. ಇದರಿಂದಾಗಿ, ಬೆಳೆಗಳಿಗೆ ಕಾಡುಹಂದಿಗಳು ಹಾನಿಮಾಡುತ್ತಿದ್ದ ಮೂಲಸಂದರ್ಭವು ವೈದಿಕ ಸಂಸ್ಕೃತಿಯ ಪ್ರಭಾವದಿಂದ ಮರೆಯಾಗಿರಬೇಕು. ಪ್ರ$_6$ ಪಾಡ್ದನದಲ್ಲಿಯ ವರಾಹಾವತಾರದ ಕಲ್ಪನೆಯಂತೂ ವೈದಿಕ ಸಂಸ್ಕೃತಿಯ ಪ್ರಭಾವವನ್ನು ಸೂಚಿಸುತ್ತದೆ.

೪. ಪ್ರ$_4$ ಪಾಡ್ದನದಲ್ಲಿ ಈಶ್ವರನು ಬಿಲ್ಲುಬಾಣಗಳನ್ನು ಬಳಸಿ, ಹಂದಿಯನ್ನು ಕೊಲ್ಲುತ್ತಾನೆ. ಪ್ರ$_1$ ಮತ್ತು ಪ್ರ$_2$ ಪಾಡ್ದನಗಳಲ್ಲಿ ಕೋವಿಯಿಂದ ಗುಂಡು ಹೊಡೆದು, ಹಂದಿಯನ್ನು ಕೊಲ್ಲುತ್ತಾನೆ. ಪ್ರ$_3$ ರಲ್ಲಿ ಈಶ್ವರನು ಕೋವಿಯಿಂದ ಹೊಡೆದು ಹಕ್ಕಿಯನ್ನು ಕೆಡಹುತ್ತಾನೆ. ಪ್ರ$_5$ ಪಾಡ್ದನದಲ್ಲಿ ಈಶ್ವರನು ಹಂದಿಗಳನ್ನು ಕೊಲ್ಲಲು

---

5 ಈಶ್ವರನನ್ನು ಬೇಸಾಯಗಾರನನ್ನಾಗಿ ಚಿತ್ರಿಸಿದ ಸಂದರ್ಭಗಳು ತುಳು ಜನಪದ ಸಾಹಿತ್ಯದಲ್ಲಿ ಸಾಕಷ್ಟು ಇವೆ. 'ಟ್ರುವೇಲೆ ಬಾಲೆ ಬಾಲೆ ಪೊಲಿಯೇ' ಎಂಬ ತುಳು ಕಬಿತದಲ್ಲಿ ಈಶ್ವರನು ಒಬ್ಬ ದೊಡ್ಡ ಬೇಸಾಯಗಾರನ ಹಾಗೆ ಕಾಣಿಸಿಕೊಂಡಿದ್ದಾನೆ.

ಬಳಸಿದ ಆಯುಧದ ಪ್ರಸ್ತಾಪ ಇಲ್ಲ. ಕಾಡುಪ್ರಾಣಿಗಳನ್ನು ಬೇಟೆಯಾಡಲು ಬಿಲ್ಲುಬಾಣಗಳನ್ನು ಉಪಯೋಗಿಸುತ್ತಿದ್ದ ಕಾಲವು ಕಳೆದು ಕೋವಿಮದ್ದುಗಳ ಕಾಲ ಬಂದಾಗ, ಪಾಡ್ದನಗಳಲ್ಲಿ ಇಂತಹ ಬದಲಾವಣೆ ಆಗಿರಬೇಕು. ಈ ದೃಷ್ಟಿಯಿಂದ ಗಮನಿಸಿದಾಗ, ಪ$_1$, ಪ$_2$ ಮತ್ತು ಪ$_3$ ಪಾಡ್ದನಗಳಿಗಿಂತ ಪ$_4$ ಪಾಡ್ದನವು ಹೆಚ್ಚು ಪ್ರಾಚೀನ.

### ಪಂಜುರ್ಲಿಯ ಪ್ರಸರಣ

ಪಂಜುರ್ಲಿಯ ಮಹಿಮೆಯನ್ನು ಸಾರುವ ಮತ್ತು ಆ ಮೂಲಕ ತುಳುನಾಡಿನಲ್ಲಿ ಪಂಜುರ್ಲಿಯ ಭೌಗೋಳಿಕ ಪ್ರಸರಣವನ್ನು ತಿಳಿಸುವ ಸುಮಾರು ಏಳೆಂಟು ಪಾಡ್ದನಗಳು ಉಪಲಬ್ಧವಾಗಿವೆ. ಅವುಗಳಲ್ಲಿ ಕೆಲವನ್ನು ಈ ಹಿಂದೆಯೇ ಉಗಮದ ಸಂದರ್ಭದಲ್ಲಿ ಚರ್ಚಿಸಲಾಗಿದ್ದರೂ ಪ್ರಸರಣದ ದೃಷ್ಟಿಯಿಂದ ಮತ್ತೆ ಅವುಗಳನ್ನು ವಿಶ್ಲೇಷಿಸಲಾಗಿದೆ.

### ಪಾಡ್ದನ — ಪ$_5$

ಪಂಜುರ್ಲಿಯ ಮಹಿಮೆ ಮತ್ತು ಸಾಹಸಗಳನ್ನು ಕೆಲವು ಘಟನೆಗಳ ಮೂಲಕ ಇಲ್ಲಿ ವರ್ಣಿಸಲಾಗಿದೆ :

೧. ಪಂಜುರ್ಲಿ ಭೂತವು ತನ್ನ ಮಹಿಮೆಯಿಂದ ಹಲಸಿನ ಮರಕ್ಕೆ ಕಟ್ಟಿದ ಕೋಣಗಳನ್ನು ಕಣ್ಮರೆ ಮಾಡುವುದು.

೨. ಧರ್ಮಸ್ಥಳದಲ್ಲಿ ದೇವರನ್ನು ಹೊರುವ ಭಟ್ಟರ ಕಣ್ಣು ಕಾಣದ ಹಾಗೆ ಮಾಡುವುದು.

೩. ಕೇಪಾಡಿ ದೇವಸ್ಥಾನದ ಆನೆಗೆ ಬಾಯಿಲೆ ಬರಿಸುವುದು.

೪. ಕಲ್ಲೆಬೀಡಿನಲ್ಲಿ ಜಾನುವಾರುಗಳಿಗೆ ರೋಗ ಬರಿಸುವುದು.

೫. ಹೆಬ್ಬಿರಿ ಬಲ್ಲಾಳರ ಹೆಂಡತಿಯರಾದ ಪದುಪಲ ಮತ್ತು ಜಾಕಮ ಎಂಬ ಅಕ್ಕತಂಗಿಯರು ಪಂಜುರ್ಲಿಗೆ ಹೇಳಿಕೊಂಡ ಹರಕೆಯನ್ನು ನೆರವೇರಿಸದುದಕ್ಕೆ ಅವರಿಬ್ಬರನ್ನೂ ಕೊಂದು ಹಾಕಿದ್ದು.

ಈ ಪಾಡ್ದನದಲ್ಲಿ ಪಂಜುರ್ಲಿಯ ಪ್ರಸರಣದ ಸ್ಥಳಗಳು :

ಧರ್ಮಸ್ಥಳ ದೇವಸ್ಥಾನ — ಕೇಪಾಡಿ ದೇವಸ್ಥಾನ — ಕಲ್ಲೆಬೀಡು — ಬೆಂಬುಕಲ್ಲು (ಉದ್ಯಾವರದ ವಿನಾಯಕ ದೇವಸ್ಥಾನ).

ಈ ಪಾಡ್ದನದ ಪ್ರಕಾರ, ಪಂಜುರ್ಲಿಯು ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಆರಾಧನೆ ಗೊಳ್ಳುತ್ತದೆ.

ಧರ್ಮಸ್ಥಳದಲ್ಲಿ ಅಣ್ಣಪ್ಪ ಪಂಜುರ್ಲಿ, ತಿರುಪತಿಯಲ್ಲಿ ಕಾಳಭೈರವ, ಕಲ್ಲೆಬೂಡು (ಬೀಡು) ವಿನಲ್ಲಿ ಕಲ್ಯ ಪಂಜುರ್ಲಿ, ಬೆಂಬುಕಲ್ಲು (ಉದ್ಯಾವರ) ವಿನಲ್ಲಿ ಬೇಬುಕಲ್ಲು ಪಂಜುರ್ಲಿ.

**ಪಾಡ್ದನ — ಪ$_6$**

ಈ ಪಾಡ್ದನದ ಪ್ರಕಾರ, ಮರ್ದಾಳ ಬೀಡುವಿನ ಕೋಣಗಳು ಪಂಜುರ್ಲಿಯ ದೆಸೆಯಿಂದ ಕಾಯಿಲೆಗೆ ಒಳಗಾಗುತ್ತವೆ. ಬೀಡಿನ ಬಲ್ಲಾಳನು ಶಕುನದವ (ಬರ್ಮೆದಾಯೆ) ನಲ್ಲಿ ವಿಚಾರಿಸುತ್ತಾನೆ. ಬಲ್ಲಾಳನು ಪಂಜುರ್ಲಿಗೆ ಒಂದು ಗುಡಿಯನ್ನು ಕಟ್ಟಿಸಿ, ಆರಾಧಿಸಬೇಕೆಂದು ಶಕುನದಿಂದ ತಿಳಿಯುತ್ತದೆ. ಬಲ್ಲಾಳನು ಹಾಗೆಯೇ ಪಂಜುರ್ಲಿಗೆ ಗುಡಿ ಕಟ್ಟಿಸಿ, ಉತ್ಸವ ನಡೆಸುತ್ತಾನೆ. ಅವನ ಕೋಣಗಳು ಗುಣಮುಖವಾಗುತ್ತವೆ.

**ಪಾಡ್ದನ — ಪ$_1$**

ಈ ಪಾಡ್ದನದಲ್ಲಿ, ಪ್ರಸರಣದ ಭಾಗವು ಸ್ಥಳನಾಮಗಳಿಂದ ತುಂಬಿಕೊಂಡಿದೆ, ಪಂಜುರ್ಲಿಯು ತನ್ನ ಮಹಿಮೆಯನ್ನು ಪ್ರದರ್ಶಿಸುವ ಮತ್ತು ಜನರು ಅದನ್ನು ಆರಾಧಿಸುವ ಸ್ಥಳಗಳ ಹೆಸರುಗಳು ಇಲ್ಲಿ ಉದ್ದಕ್ಕೆ ದೊರೆಯುತ್ತವೆ, ಆದರೆ ಪಂಜುರ್ಲಿಯ ಮಹಿಮೆಗಳ ವಿವರಗಳನ್ನು ಇಲ್ಲಿ ಕೊಟ್ಟಿಲ್ಲ, ಪ್ರಸರಣದ ಸ್ಥಳಗಳು ಈ ರೀತಿ ಇವೆ :

ಕುಕ್ಕೆ ಸುಬ್ರಹ್ಮಣ್ಯ — ಧರ್ಮಸ್ಥಳ (ಆಗ ಅಲ್ಲಿ ದೇವರು ಇರಲಿಲ್ಲ) — ಕದ್ರಿ (ಮಂಜುನಾಥ ದೇವಸ್ಥಾನ) — ಧರ್ಮಸ್ಥಳ (ಪಂಜುರ್ಲಿಯು ಇಲ್ಲಿ ಮಂಜುನಾಥನನ್ನು ಸ್ಥಾಪಿಸುತ್ತದೆ) — ಕಾಂತಾವರ — ತೇಂಬೈಲು (ಇಲ್ಲಿ 'ತೇಂಬೈಲು ಪಂಜುರ್ಲಿ'ಯೆಂದು ಕರೆಸಿಕೊಳ್ಳುತ್ತದೆ) — ಬೊಲ್ಯಾಲ (ಇಲ್ಲಿ 'ಬೊಲ್ಯಾಲ ಪಂಜುರ್ಲಿ'ಯೆಂದು ಕರೆಸಿಕೊಳ್ಳುತ್ತದೆ) — ಕಾಪು (ಜನಾರ್ದನ ದೇವಸ್ಥಾನ) — ಕಲ್ಲೆ ಬೂಡು (ಇಲ್ಲಿ 'ಕಲ್ಯಲದ ಪಂಜುರ್ಲಿ'ಯೆಂದು ಕರೆಸಿಕೊಳ್ಳುತ್ತದೆ) — ಹೆಬ್ರಿ.

**ಪಾಡ್ದನ — ಪ$_7$**

ಈ ಪಾಡ್ದನವು 'ಮಲಾರ ಪಂಜುರ್ಲಿ ಪಾಡ್ದನ' ಎಂಬ ಹೆಸರಿನಲ್ಲಿ ಸಿಗುತ್ತದೆ. 'ಮಲಾರು' ಎನ್ನುವುದು ತುಳುನಾಡಿನ ಒಂದು ಸ್ಥಳದ ಹೆಸರು (ಇದು ಈಗಿನ ಬಂಟ್ವಾಳ ತಾಲೂಕಿನಲ್ಲಿದೆ.). ಇಲ್ಲಿ ಪಂಜುರ್ಲಿಯು ನೆಲೆಯೂರಿದ ಕಾರಣ ಅದಕ್ಕೆ 'ಮಲಾರ ಪಂಜುರ್ಲಿ' ಎಂಬ ಹೆಸರು ಬಂದಿತು. ಮಲಾರು ಬೀಡಿನ ಬಲ್ಲಾಳನು ಕೇಪಾಡಿ ದೇವಸ್ಥಾನದಿಂದ ತನ್ನ ಊರಾದ ಮಲಾರಿಗೆ ಪಂಜುರ್ಲಿ ಭೂತವನ್ನು ತಂದು, ಅದನ್ನು ಅಲ್ಲಿ ಸ್ಥಾಪಿಸುತ್ತಾನೆ, ಮಲಾರಿಗೆ ತರುವ ದಾರಿಯಲ್ಲಿ ಪಂಜುರ್ಲಿಯು ಪುತ್ತೂರಿನಲ್ಲಿಯೂ ಸ್ಥಾಪನೆಗೊಳ್ಳುತ್ತದೆ, ಪುತ್ತೂರಿನಲ್ಲಿ ಮಹಾಲಿಂಗೇಶ್ವರ ದೇವರ ಜೊತೆಗೆ ಪಂಜುರ್ಲಿಯು 'ದೆಯ್ಯ ಅಂಗಣತ್ತಾಯ' ಎಂಬ ಹೆಸರಿನಲ್ಲಿ ನೆಲೆಯೂರುತ್ತದೆ.[6]

---

6 ಪುತ್ತೂರು ಮಹಾಲಿಂಗೇಶ್ವರ ದೇವಸ್ಥಾನದ ಅಂಗಣದಲ್ಲಿ (ಗರ್ಭಗುಡಿಯ ಸುತ್ತಲಿನ, ಪ್ರಾಕಾರದ ಒಳಗಿನ ಪ್ರದೇಶ) ಈಗಲೂ ಪಂಜುರ್ಲಿಯ ಗುಡಿ ಇದೆ. ಇದು 'ಅಂಗಣ'ದಲ್ಲಿ ಇರುವ ಕಾರಣ ಅದಕ್ಕೆ 'ಅಂಗಣತ್ತಾಯ' (ಅಂಗಣದವನು) ಎಂದು ಹೆಸರು ಬಂದಿರಬೇಕು.
ಮಂಗಳೂರು ತಾಲೂಕಿನ ಮುನ್ನೂರು ಎಂಬಲ್ಲಿ 'ಪಂಜಣತ್ತಾಯ' ಭೂತದ ಗುಡಿ ಇದೆ. ಈ ಗುಡಿಯಲ್ಲಿ ಹಂದಿಯ ಮುಖವಾಡವಿದೆ. ಇಲ್ಲಿನ ಘಂಟಾಮಣಿಯ ಹಿಡಿಯಲ್ಲಿ ಹಂದಿಯ ತಲೆಯ ರೂಪವಿದೆ. ಆದ್ದರಿಂದ 'ಪಂಜಣತ್ತಾಯ' ಎಂಬುದು 'ಪಂಜುರ್ಲಿ' ಭೂತದ ಇನ್ನೊಂದು ಹೆಸರು ಎಂದು ಕಾಣಿಸುತ್ತದೆ.
ಪಂಜ — ಅಂಗಣತ್ತಾಯ — ಪಂಜಂಗಣತ್ತಾಯ — ಪಂಜಣತ್ತಾಯ ಎಂದು ಆಗಿರಬೇಕು.
ಈ ಪಂಜಣತ್ತಾಯ ಭೂತವು ಮಂಗಳೂರು ತಾಲೂಕಿನ ಬೆಳ್ಮ ಗ್ರಾಮದ 'ಕಲ್ಗದೆ'ಯಲ್ಲಿ ಮೊದಲು ನೆಲೆಯೂರಿ, ಆಮೇಲೆ ಮುನ್ನೂರಿಗೆ ಬಂದು ಅಲ್ಲಿ ಸ್ಥಾಪನೆಗೊಂಡಿತು ಎಂದು ಅದನ್ನು ಕುರಿತ ಪಾಡ್ದನದಲ್ಲಿದೆ.

**ಪಾಡ್ದನ — ಪ$_{8}$**

ಈ ಪಾಡ್ದನದ ಪ್ರಕಾರ ಪಂಜುರ್ಲಿಯು 'ಕುಪ್ಪೆ ಪಂಜುರ್ಲಿ' ಎಂಬ ಹೆಸರಿನಲ್ಲಿ ಕಾಣಿಸುತ್ತದೆ. 'ಕುಪ್ಪೆ' ಎಂಬ ಮನೆತನದವರು ಪಂಜುರ್ಲಿಯನ್ನು ಆರಾಧಿಸಿದ ಕಾರಣ, ಅದಕ್ಕೆ ಆ ಹೆಸರು ಬರುತ್ತದೆ. ಕುಪ್ಪೆ ಪಂಜುರ್ಲಿಯನ್ನು ಕುರಿತೇ ಬೇರೆ ಬೇರೆ ಪಾಡ್ದನಗಳು ದೊರೆತಿವೆ.

ಕುಪ್ಪೆ ಮನೆತನದವರು ಒಂದು ಬದಿಯಲ್ಲಿ ಹಂದಿಯ ಆಕಾರವೂ ಇನ್ನೊಂದು ಬದಿಯಲ್ಲಿ ಮೀನಿನ ಆಕಾರವೂ ಇದ್ದ ಮೀನನ್ನು ಕೊಂದರು. ಬಳಿಕ ಇದರಿಂದ ಭಯಗೊಂಡ ಅವರು ಪಂಜುರ್ಲಿ ಭೂತವನ್ನು ಆರಾಧಿಸಲು ತೊಡಗಿದರು.[7] ಆದ್ದರಿಂದ ಮುಂದೆ ಆ ಪಂಜುರ್ಲಿಗೆ ಆ ಮನೆತನದ ಹೆಸರಾದ 'ಕುಪ್ಪೆ' ಎನ್ನುವುದು ಅಂಟಿಕೊಂಡಿತು.

**ಪಾಡ್ದನ — ಪ$_{9}$**

ಕುಪ್ಪೆ ಪಂಜುರ್ಲಿಯ ಇನ್ನೊಂದು ಪಾಡ್ದನದಲ್ಲಿ ಬೊಮ್ಮನ ಬಲ್ಲಾಳನು ಪಂಜುರ್ಲಿಯ ಅದಮ್ಯ ಶಕ್ತಿಯನ್ನು ತಡೆಯಲಾರದೆ ಮಂತ್ರವಾದಿಯ ಸಹಾಯದಿಂದ, ಅದನ್ನು ಒಂದು ಕೊಳದಲ್ಲಿ (ಬೊಲ್ಯಲ ಗುಂಡಿ) ಹೂಳುತ್ತಾನೆ. ಹೂಳುವಾಗ 'ಎಂಕುಳೆ ಕಾಲೊಗು ಲಕ್ಕಡ. ನೀರ್‌ಗ್ ಮೀನಾಲ, ಕಾಡ್‌ಗ್ ಪಂಜಿಯಾದ ಇಪ್ಪುಲ' (ನಮ್ಮ ಕಾಲದಲ್ಲಿ ಏಳಬೇಡ,ನೀರಿಗೆ ಮೀನಾಗು, ಕಾಡಿಗೆ ಹಂದಿಯಾಗಿ ಇರು) ಎಂದು ಹೇಳುತ್ತಾರೆ. ಕಾರ್ಕಳದ ಭೈರರಸನ ಭಟನಾದ ಕುಪ್ಪೆಕೋಟಿ ವೈದ್ಯನು ಆ ಕೊಳದಲ್ಲಿ ಮೀನು ಹಿಡಿಯಲು ಹೋಗುತ್ತಾನೆ. ಅಲ್ಲಿ ಅವನು ಒಂದು ಬದಿಯಲ್ಲಿ ಮೀನಿನ ಆಕಾರವುಳ್ಳ ಇನ್ನೊಂದು ಬದಿಯಲ್ಲಿ ಹಂದಿಯ ಆಕಾರವುಳ್ಳ ಮೀನನ್ನು ಹಿಡಿಯುತ್ತಾನೆ. ಮೀನು ಹಿಡಿದವರು ಮತ್ತು ಉಪಯೋಗಿಸಿದವರು ರಕ್ತ ಕಾಣುತ್ತಾರೆ, ರಕ್ತ ಕಾರುತ್ತಾರೆ. ಶಕುನದಲ್ಲಿ ಕೇಳಿದಾಗ, ಪಂಜುರ್ಲಿಯೇ ಮೀನಾಗಿ ಕೊಳದಲ್ಲಿತ್ತು ಎಂದು ಗೊತ್ತಾಗುತ್ತದೆ. ಪಂಜುರ್ಲಿಗೆ ನೇಮ (ಉತ್ಸವ) ಮಾಡುತ್ತಾರೆ,

---

7 ತುಳುವಿನಲ್ಲಿ 'ಪಂಜಿಮೀನು' (ಹಂದಿಮೀನು) ಎಂದು ಕರೆಯುವ ಒಂದು ಜಾತಿಯ ಮೀನು ಕಡಲಿನಲ್ಲಿ ಸಿಗುತ್ತದೆ. ಹಂದಿಯ ಮುಖದ ಆಕಾರ ಇರುವ ಕಾರಣ ಅದಕ್ಕೆ 'ಹಂದಿ ಮೀನು' ಎಂಬ ಹೆಸರು ಬಂದಿರಬಹುದು. ಒಂದು ಬದಿಯಲ್ಲಿ ಮೀನಿನ ಆಕಾರ, ಇನ್ನೊಂದು ಬದಿಯಲ್ಲಿ ಹಂದಿಯ ಆಕಾರ ಎಂಬ ಪಾಡ್ದನಗಳಲ್ಲಿನ ಚಿತ್ರಣಕ್ಕೆ ಈ 'ಹಂದಿ ಮೀನು' ಆಧಾರವಾಗಿರಬೇಕು. ವೈದಿಕ ಪುರಾಣಗಳಲ್ಲಿ ಸಿಗುವ ವಿಷ್ಣುವಿನ ಮತ್ಸ್ಯಾವತಾರ ಹಾಗೂ ವರಾಹಾವತಾರಗಳ ಕಲ್ಪನೆ ಮೂಲತಃ ಜಾನಪದದಿಂದ ಪ್ರೇರಣೆ ಪಡೆದಿರಬಹುದು.

ತುಳುನಾಡಿನ ಅತ್ಯಂತ ಪ್ರಾಚೀನ ಅರಸು ಮನೆತನವಾದ ಆಳುಪರ (ಸುಮಾರು ಕ್ರಿ.ಶ. 2ನೇ ಶತಮಾನದಿಂದಲೇ ತುಳುನಾಡಿನಲ್ಲಿ ಆಳುಪರ ಆಳ್ವಿಕೆಯ ದಾಖಲೆಗಳು ಸಿಗುತ್ತವೆ.) ರಾಜಲಾಂಛನ 'ಮೀನು' ಆಗಿತ್ತು. ಕ್ರಿ.ಶ. 967ರ ಕುಂದವರ್ಮನ ವೇಣೂರಿನ ಶಾಸನದಲ್ಲಿ ಆಳುಪರಿಗೆ 'ಮೀನಲಾಂಛನೋಪೇತ' ಎಂಬ ಬಿರುದು ಸಿಗುತ್ತದೆ. ಆಳುಪರ ಕಾಲದ ನಾಣ್ಯಗಳ (ಪಾಂಡ್ಯ ಗದ್ಯಾಣ) ಒಂದು ಬದಿಯಲ್ಲಿ ಎರಡು ಮೀನುಗಳ ಚಿತ್ರಣವಿದೆ. ಎರಡನೆಯ ಆಳುವರಸನ ಬೆಳ್ಮಣ್ಣು ತಾಮ್ರಶಾಸನದ (ಕಾಲ ಸು. ಕ್ರಿ.ಶ. 8ನೇ ಶತಮಾನದ ಮಧ್ಯಭಾಗ) ಮುದ್ರೆಯುಂಗುರದಲ್ಲಿ ಎರಡು ಮೀನುಗಳ ಚಿತ್ರಣವಿದೆ. ವಿವರಗಳಿಗೆ ನೋಡಿ : ರಮೇಶ ಕೆ. ವಿ. (ಡಾ.) ಮತ್ತು ಶರ್ಮ ಎಂ. ಜೆ. : "ತುಳುನಾಡಿನ ಶಾಸನಗಳು", ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ, 1978.

ಪಾಂಡ್ಯರಾಜರಿಗೆ ಇರುವ ಮೀನಿನ ಲಾಂಛನವು ತುಳುನಾಡಿನ ಆಳುಪರಲ್ಲೂ ಯಾಕೆ ಇದೆ? ಇದರ ಚರ್ಚೆಗೆ ನೋಡಿ : Bhat P. Gururaja (Dr.). "Studies in Tuluva History and Culture" Kallianpur, South Kanara, 1975, P. 207-208.

ತಮಿಳುನಾಡಿನ ಪಾಂಡ್ಯರಾಜರಂತೆ ತುಳುನಾಡಿನ ಆಳುಪರೂ ಕಡಲತಡಿಯ ಕರಾವಳಿ ಪ್ರದೇಶವನ್ನು ಆಳುತ್ತಿದ್ದುದರಿಂದ, ಈ ಎರಡೂ ಅರಸು ಮನೆತನಗಳ ರಾಜಲಾಂಛನವಾಗಿ 'ಮೀನು' ಇದ್ದದ್ದು ಕುತೂಹಲಕಾರಿಯಾಗಿದೆ.

**ಪಾಡ್ದನ — ಪ$_{10}$**

ಮೇಲಿನ ರಾಜ್ಯದ ಕನ್ನಡ ಅರಸು ಒಬ್ಬನು ಕೆಳಗಿನ ತುಳುರಾಜ್ಯಕ್ಕೆ ಬಂದು ಕಪ್ಪ ಕೊಡದ ಕಾರ್ಕಳದ ಭೈರರಸನ ರಾಜ್ಯದ ಮೇಲೆ ಧಾಳಿ ಮಾಡುತ್ತಾನೆ. ಆಗ ಭೈರರಸನು ತನ್ನ ನಂಬಿಕಸ್ಥ ಭಟನಾದ ಕುಪ್ಪೆರೋಟಿ ಬೈದ್ಯನೊಡನೆ ಧರ್ಮಸ್ಥಳಕ್ಕೆ (ಕುಡುಪು ನಾಡ್) ಪಲಾಯನ ಮಾಡುತ್ತಾನೆ.[8] ಅಲ್ಲಿ ಅವನು ಪಂಜುರ್ಲಿಯನ್ನು ಆರಾಧಿಸುತ್ತಾನೆ ಮತ್ತು ಕಳೆದುಕೊಂಡ ತನ್ನ ರಾಜ್ಯವನ್ನು ಮತ್ತೆ ಪಡೆಯುತ್ತಾನೆ.[9] (ಒಡ್ತೆ ಪಂಜುರ್ಲಿ ಪಾಡ್ದನದ ಪ್ರಕಾರ.)

ಪಂಜುರ್ಲಿಯ ಮಹಿಮೆ ಹಾಗೂ ಪ್ರಸರಣವನ್ನು ತಿಳಿಸುವ ಇನ್ನೂ ಕೆಲವು ಪಾಡ್ದನಗಳು ಸಿಗುತ್ತವೆ. ಅವುಗಳಲ್ಲಿ ಕೆಲವು ಅಪೂರ್ಣವಾಗಿ ಸಿಕ್ಕುವುದರಿಂದ ಅವುಗಳನ್ನು ಈ ಪ್ರಬಂಧದಲ್ಲಿ ಬಳಸಿಕೊಂಡಿಲ್ಲ.

**ಪಂಜುರ್ಲಿಯ ಪ್ರಸರಣವನ್ನು ಕುರಿತ ತೀರ್ಮಾನಗಳು**

೧. ಪಂಜುರ್ಲಿಯ ಭೌಗೋಳಿಕ ಪ್ರಸರಣದಲ್ಲಿ ಸೂತ್ರರೂಪದ ಒಂದು ಚೌಕಟ್ಟು ಇದೆ. ಈ ಚೌಕಟ್ಟನ್ನು ಹೆಚ್ಚಿನ ಎಲ್ಲ ಭೂತಗಳಿಗೂ ಅನ್ವಯಿಸಬಹುದು. ಒಂದು ಭೂತದ ಪ್ರಸರಣಕ್ಕೆ ಸಂಬಂಧಿಸಿದ ಎಲ್ಲಾ ಪಾಡ್ದನಗಳನ್ನು ಒಟ್ಟಿಗೆ ಒಂದು ಲಾವಣಿ ಚಕ್ರ (Ballad Cycle) ದ ಸ್ವರೂಪದಲ್ಲಿ ವ್ಯವಸ್ಥೆಗೊಳಿಸ ಬಹುದು. ಇಂತಹ ಲಾವಣಿ ಚಕ್ರವು ಉಗಮದ ಪಾಡ್ದನದ ಜೊತೆಗೆ ಸೇರಿದಾಗ, ಒಂದು ಪ್ರತ್ಯೇಕ 'ಜನಪದ ಮಹಾಕಾವ್ಯ' (Folk epic) ದ ವ್ಯಾಪ್ತಿಯನ್ನು ಪಡೆಯುತ್ತದೆ. ಇಲ್ಲಿ ಅಣ್ಣಪ್ಪ ಪಂಜುರ್ಲಿ, ಮಲಾರ ಪಂಜುರ್ಲಿ, ಕುಪ್ಪೆ ಪಂಜುರ್ಲಿ ಮುಂತಾದುವು ಒಟ್ಟು ಸೇರಿ 'ಪಂಜುರ್ಲಿ ಚಕ್ರ' (Panjurly cycle) ವಾಗುತ್ತದೆ. ಪಂಜುರ್ಲಿಯ ಉಗಮಕ್ಕೆ ಸಂಬಂಧಿಸಿದ ಪಾಡ್ದನಗಳನ್ನು ಈ ಲಾವಣಿಚಕ್ರಕ್ಕೆ ಜೋಡಿಸಿದಾಗ, 'ಪಂಜುರ್ಲಿ ಮಹಾಕಾವ್ಯ' (Panjurly epic) ರೂಪಗೊಳ್ಳುತ್ತದೆ. ಇದೇ ರೀತಿ ಗುಳಿಗ ಮತ್ತು ಜುಮಾದಿ ಭೂತಗಳಿಗೆ ಅನುಕ್ರಮವಾಗಿ 'ಗುಳಿಗ ಮಹಾಕಾವ್ಯ' ಮತ್ತು 'ಜುಮಾದಿ ಮಹಾಕಾವ್ಯ'ಗಳನ್ನು ರಚಿಸಬಹುದು.

---

8, 9 ಕನ್ನಡದ ಅರಸನೊಬ್ಬನು ಕಾರ್ಕಳದ ಭೈರರಸನನ್ನು ಸೋಲಿಸಿದಾಗ, ಭೈರರಸನು ರಾಜ್ಯ ಬಿಟ್ಟು ಪಲಾಯನ ಮಾಡಿದ ಪಾಡ್ದನದ ವೃತ್ತಾಂತಕ್ಕೆ ತುಳುನಾಡಿನ ಇತಿಹಾಸದಲ್ಲಿ ಸ್ಪಷ್ಟವಾದ ದಾಖಲೆ ಸಿಗುತ್ತದೆ. ಕೃಷ್ಣದೇವರಾಯನು ವಿಜಯನಗರ ರಾಜ್ಯದ ಸಾಮ್ರಾಟನಾಗಿದ್ದ ಕಾಲದಲ್ಲಿ ಕಾರ್ಕಳದ ಭೈರರಸನಾದ 5ನೆಯ ಭೈರವ (2ನೆಯ ವೀರ ಭೈರರಸ ಒಡೆಯ) ನು ಅವನನ್ನು ಪ್ರತಿಭಟಿಸುವ ಸಾಹಸ ಮಾಡುತ್ತಾನೆ. ಆಗ ಕೃಷ್ಣದೇವರಾಯನು ತಾನೇ ಸೇನೆಯ ನಾಯಕತ್ವವನ್ನು ವಹಿಸಿ, ತುಳುನಾಡಿನ ಮೇಲೆ ದಂಡೆತ್ತಿ ಬಂದು, ಯುದ್ಧದಲ್ಲಿ ಭೈರರಸನನ್ನು ಸೋಲಿಸಿ, ರಾಜ್ಯದಿಂದ ಓಡಿಸುತ್ತಾನೆ. ರಾಜ್ಯವನ್ನು ಕಳೆದುಕೊಂಡ ಭೈರರಸನು ವಿಜಯನಗರ ಸೈನ್ಯವು ಹಿಂದಕ್ಕೆ ಹೊರಟು ಹೋದರೆ ಕಳಸದ ಶ್ರೀ ಕಳಸನಾಥ ದೇವರ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸುವುದಾಗಿ ಬೇಡಿಕೊಳ್ಳುತ್ತಾನೆ. ಈ ವಿಚಾರವು ಕ್ರಿ.ಶ. 1516ರ ಕಳಸ ಶಾಸನದಲ್ಲಿದೆ. ವಿವರಗಳಿಗೆ ನೋಡಿ : ರಮೇಶ ಕೆ. ವಿ. (ಡಾ.), "ತುಳುನಾಡಿನ ಇತಿಹಾಸ", ರಾಷ್ಟ್ರಕವಿ ಗೋವಿಂದಪೈ ಸಂಶೋಧನ ಕೇಂದ್ರ, ಉಡುಪಿ, 1969, ಪುಟ 106-110 ಮತ್ತು Ramesh K. V. (Dr.), "A History of South Kanara", Karnataka University, Dharwar, 1970, P. 215-216.

ಇತಿಹಾಸದ ಕಳಸ ಮತ್ತು ಕಳಸನಾಥ ದೇವಾಲಯದ ಜೀರ್ಣೋದ್ಧಾರದ ಹರಕೆ ಹೇಳಿಕೊಳ್ಳುವ ವಿಚಾರವು ಪಾಡ್ದನದಲ್ಲಿ ಧರ್ಮಸ್ಥಳ ಮತ್ತು ಪಂಜುರ್ಲಿಗೆ ಹರಕೆ ಹೇಳಿಕೊಳ್ಳುವ ರೀತಿಯಲ್ಲಿ ಬದಲಾವಣೆ ಪಡೆದಂತೆ ಕಾಣುತ್ತದೆ.

ಪಂಜುರ್ಲಿಯ ಲಾವಣಿಚಕ್ರಕ್ಕೆ ಅನುಸಾರವಾಗಿ ಅದರ ಭೌಗೋಳಿಕ ಪ್ರಸರಣದ ಸ್ಥಳಗಳನ್ನು ಗುರುತಿಸುವ ಒಂದು ಪ್ರಸರಣದ ಪಂಜುರ್ಲಿಯ ರೇಖಾಚಿತ್ರ (diffusion map) ವನ್ನು ಬಿಡಿಸಬಹುದು.

೬. ಪಂಜುರ್ಲಿಯ ಪ್ರಸರಣದ ಕಾರಣಗಳು : ಕಾಯಿಲೆ, ಕ್ಷಾಮ ಮುಂತಾದುವುಗಳಿಗೆ ಪಂಜುರ್ಲಿ ಮುಂತಾದ ಭೂತಗಳಂತಹ ಅತಿಮಾನುಷ ಶಕ್ತಿಗಳೇ ಕಾರಣ ಎಂಬ ಪ್ರಾಚೀನ ಮಾನವನ ಕಾಲ್ಪನಿಕ ಆಲೋಚನಾ ವಿಧಾನವನ್ನು ಗಮನಿಸಬಹುದು. ಈ ರೀತಿಯ ಪ್ರಾಚೀನ ಮಾನವನ ಮನಸ್ಸು ಕೆಲಸ ಮಾಡುವ ರೀತಿಯಿಂದಾಗಿ, ತುಳುನಾಡಿನ ಬಹಳ ಸ್ಥಳಗಳಲ್ಲಿ ಪಂಜುರ್ಲಿಯು ನೆಲೆ ಊರಿ, ಗುಡಿಗಳಲ್ಲಿ ಸ್ಥಾಪನೆಗೊಂಡು ಆರಾಧನೆಗೊಳ್ಳುವುದನ್ನು ಕಾಣಬಹುದು.

**ಪಂಜುರ್ಲಿಯ ಮಹಿಮೆಯನ್ನು ಸಾರುವ ಪ್ರಸರಣದ ಸ್ಥಳಗಳು**

(ಪ್ರಸರಣದ Mapನ್ನು ಪ್ರತ್ಯೇಕವಾಗಿ ಕೊಡಲಾಗಿದೆ)

ಪ$_4$ : ಘಟ್ಟದ ಮೇಲಿನಿಂದ ತುಳುನಾಡಿಗೆ ಇಳಿಯುವುದು :

ಕುಕ್ಕೆ ಸುಬ್ರಹ್ಮಣ್ಯ
|
ಧರ್ಮಸ್ಥಳ
|
ಕದ್ರಿ ಮಂಜುನಾಥ ದೇವಸ್ಥಾನ
|
ಧರ್ಮಸ್ಥಳ
|
ಕಾಂತಾವರ (ಕಲ್ಲಮದ್ದಾನೆ ಪಂಜ)
|
ತೇಂಬೈಲು (ತೇಂಬೈಲು ಪಂಜುರ್ಲಿ)
|
ಬೊಲ್ಯಾಲ (ಬೊಲ್ಯಾಲ ಪಂಜುರ್ಲಿ)
|
ಕಾಪು
|
ಕಲ್ಯಾಲ ಬೀಡು (ಕಲ್ಯಾಲ ಪಂಜುರ್ಲಿ)
|
ಹೆಬ್ರಿ
|

---

ಪ$_6$ ; ಘಟ್ಟದ ಮೇಲಿನಿಂದ ತುಳುನಾಡಿಗೆ ಇಳಿಯುವುದು.

|

ಕುಕ್ಕೆ ಸುಬ್ರಹ್ಮಣ್ಯ

|

ಮದರ್ಾಳದ ಬೀಡು

---

ಪ$_5$ ; ಘಟ್ಟದ ಮೇಲಿನ ರಾಜ್ಯ :

|

ಕುಕ್ಯಾಳಿ ಕಾರೆಂಗೆ ಬೀಡು (ಕಲ್ಲಬೊಟ್ಟಿ ಪೆರ್ಗಡೆ)

|

ತಿರುಪತಿ ವೆಂಕಟರಮಣ ದೇವಸ್ಥಾನ (ಕಾಳಬೈರವ)

|

ಧರ್ಮಸ್ಥಳ (ಅಣ್ಣಪ್ಪ ಪಂಜುರ್ಲಿ)

|

ಕೇಪಾಡಿ ದೇವಸ್ಥಾನ

|

ಕಲ್ಲೆ ಬೀಡು (ಕಲ್ಯದ ಪಂಜುರ್ಲಿ)

|

ಬೆಂಬುಕಲ್ಲು (ಉದ್ಯಾವರ) ವಿನಾಯಕ ದೇವಸ್ಥಾನ (ಬೆಂಬುಕಲ್ಲು ಪಂಜುರ್ಲಿ)

---

**ಪ$_5$ : ಪಾಡ್ದನದಲ್ಲಿ ಸೆಟ್ಟಿಗಳು ವ್ಯಾಪಾರ ಮಾಡಲು ತೊಡಗುವಾಗ ಗಮನಿಸುವ ಊರುಗಳು (ಪಂಜುರ್ಲಿಯ ಪ್ರಸರಣಕ್ಕೆ ಈ ಊರುಗಳು ಸಂಬಂಧಪಟ್ಟಿಲ್ಲ)**

ಗಟ್ಟದ ಮೇಲಿನ ನಗರ
ಮಕ್ಕ
ಮಕ್ಕಾಯಿ
ಸಿತರ್ಾಳಿ ದ್ವೀಪ
ಕೊಚ್ಚಿ
ಕಣ್ಣಾನೂರು
ಆನೆಗುಂಡಿ
ಇಜಯನಗರ (ವಿಜಯನಗರ)

---

# ಪಂಜುರ್ಲಿ ಭೂತದ ಪ್ರಸರಣದ ರೇಖಾಚಿತ್ರ

## Dippusion Map of Ponjurly

1 ಸುಬ್ರಹ್ಮಣ್ಯ
2 ಧರ್ಮಸ್ಥಳ
2A ಕದ್ರಿ
3 ಕಾಂತಾವರ
3A ಕಾರ್ಕಳ
4 ಕಲ್ಯ
5 ಕಾಪು
6 ಉದ್ಯಾವರ (ಬೆಂಬುಕಲ್ಲು)
7 ಹೆಬ್ರಿ



**ಪ$_{10}$ : ಊಳಿಗದ ಎಂಕಣ್ಣನು ವಿಜಯನಗರದಿಂದ ಕಾರ್ಕಳಕ್ಕೆ ಬರುವ ದಾರಿ :**

ಇಜಾನಗರ — ಮೈನೆ — ಮಾಳೂರು — ಮುಂಡಗದ್ದೆ — ತೂದೂರು — ತೀರ್ಥಹಳ್ಳಿ ಪೇಂಟೆ — ಮಗೋಲಿ ಪೇಂಟೆ (ಮೇಗರಹಳ್ಳಿ ಪೇಟೆ) — ಆಗುಂಬೆ ಪೇಂಟೆ — ಉಂಬುಕೆರೆ— ಹದಿನಾರು ಸುತ್ತು ಘಾಟಿ ಇಳಿದನು — ಸೀತಾನದಿ — ಕಾರ್ಕಳದ ಜೋಡುರಸ್ತೆ — ವೆಂಕಟರಮಣ ದೇವಸ್ಥಾನ — ಅರಸನ ಬೆಟ್ಟು ಗದ್ದೆ — ಹದಿನಾರು ಮೆಟ್ಟಿಲು ಹತ್ತಿದ — ಆನೆಬಾಗಿಲು ದಾಟಿದ — ಕಾರ್ಕಳದ ಅರಸನ ಅರಮನೆ.

**ಮೈಸಂದಾಯ**

ಪ್ರಾಣಿಗಳು ಭೂತಗಳಾಗಿ ಪರಿವರ್ತನೆಗೊಂಡವುಗಳಲ್ಲಿ ಇನ್ನೊಂದು ಪ್ರಮುಖ ದೈವ ಎಂದರೆ 'ಮೈಸಂದಾಯ', ಮಹಿಷ ಅಂದರೆ ಕೋಣ. ಆದ್ದರಿಂದ ಮಹಿಷಂದಾಯ ಅಂದರೆ ಕೋಣನಿಗೆ ಸಂಬಂಧಿಸಿದ ಭೂತ ಎಂದಾಗುತ್ತದೆ. ಆದರೆ ಇಲ್ಲಿ ಪಾಡ್ದನಗಳ ದೃಷ್ಟಿಯಿಂದ ಮೈಸಂದಾಯವು ಬಸವನ ರೂಪದ ಭೂತ ವೆಂದು ಗೊತ್ತಾಗುತ್ತದೆ. ಮೈಸಂದಾಯ ಭೂತದ ಹುಟ್ಟು ಮತ್ತು ಮಹಿಮೆಗೆ ಸಂಬಂಧಿಸಿದಂತೆ ಕೆಲವು ಪಾಡ್ದನಗಳು ದೊರೆಯುತ್ತವೆ. ಮೈಸಂದಾಯ ಭೂತದ ಹುಟ್ಟಿಗೆ ಸಂಬಂಧಿಸಿದಂತೆ ಇರುವ ಒಂದು ಪ್ರಮುಖ ಪಾಡ್ದನವನ್ನು ಇಲ್ಲಿ ನೋಡಬಹುದು. (ಪಾಠ ೧ : ಸಂ. ಅಮೃತ ಸೋಮೇಶ್ವರ, 'ತುಳುಕೂಟ', ಅಕ್ಟೋಬರ್ ೧೯೭೩) ಈ ಪಾಡ್ದನವು ಮೈಸಂದಾಯದ ಭೂತದ ಹುಟ್ಟನ್ನು ಹೇಳುತ್ತದೆ. "ಬಾಲೆ ಬಂಗೇರ ಮತ್ತು ದಾರಗ ಗಣಪಗ ಅವರ ವಿವಾಹ. ಆಮೇಲೆ, ದಾರಗ ಗಣಪಗ ಗರ್ಭಿಣಿಯಾಗುವುದು. ಅವಳು ಇಬ್ಬರು ಮಕ್ಕಳನ್ನು ಹೆರುವುದು. ಆ ಶಿಶುಗಳು ದೊಡ್ಡದಾಗಿ ಆಟವಾಡಲು ಹೋದಾಗ ಉಳಿದ ಮಕ್ಕಳು ಇವರ ಅಪ್ಪ ಯಾರು ಎಂದು ಪ್ರಶ್ನಿಸುವುದು, ಆಗ ಈ ಮಕ್ಕಳು ತಾಯಿಯಲ್ಲಿಗೆ ಬಂದು, ತಮ್ಮ ತಂದೆ ಯಾರು ಎಂದು ಕೇಳುವುದು. ಆಗ ತಾಯಿ ಹೇಳುತ್ತಾಳೆ – "ನಿಮ್ಮ ತಂದೆ ಬಾಲೆ ಬಂಗೇರ. ಉತ್ತರಕ್ಕೆ ದೊಡ್ಡ ಯುದ್ಧ ಮಾಡಲು ಹೋಗಿದ್ದಾರೆ." ಆಗ ಮಕ್ಕಳು "ತಾಯಿ ,ನಾವು ಯುದ್ಧ ಮಾಡಲು ಹೋಗುತ್ತೇವೆ" ಎಂದು ಹಟ ಹಿಡಿದು ಉತ್ತರದ ದಿಕ್ಕಿಗೆ ಹೊರಟರು. ಅಲ್ಲಿ ತಂದೆಯನ್ನು ಕಂಡರು. ಅವರ ಕಾಲಿಗೆ ಎರಗಿದರು. ಆಗ ತಂದೆಯು "ನೀವು ದಕ್ಷಿಣ ಭಾಗಕ್ಕೆ ಯುದ್ಧಕ್ಕೆ ಹೋಗಿರಿ" ಎಂದನು. ಹಾಗೆಯೇ ಇವರು ದಕ್ಷಿಣ ಭಾಗಕ್ಕೆ ಹೋದರು. ಅಲ್ಲಿ ಯುದ್ಧ ಮಾಡಿದಾಗ ಇವರಿಗೆ ಸೋಲಾಯಿತು. ಈ ಮಕ್ಕಳ ರುಂಡ, ಮುಂಡ ಕಡಿದು ಬಿತ್ತು. ಈ ವರ್ತಮಾನ ತಾಯಿಗೆ ಗೊತ್ತಾಗಿ ಆಕೆ ಓಡಿಕೊಂಡು ಬಂದಳು. "ಅಯ್ಯೋಯ್ಯೋ ಮಕ್ಕಳೇ, ಹೇಳಿದ್ದು ನೀವು ಕೇಳಲಿಲ್ಲ, ಹಿಡಿದ ಹಟ ಬಿಡಲಿಲ್ಲ" ಎನ್ನುತ್ತ ಗೋಳೋ ಎಂದು ಅತ್ತಳು. ಮಕ್ಕಳ ರುಂಡ, ಮುಂಡವನ್ನು ತಬ್ಬಿಕೊಂಡಳು. ಮಕ್ಕಳಲ್ಲಿ ಅಣ್ಣನಿಗೆ ಬಲಮೊಲೆಯನ್ನು ಹಿಂಡಿದಳು; ತಮ್ಮನಿಗೆ ಎಡಮೊಲೆಯನ್ನು ಹಿಂಡಿದಳು. "ಕಾಯ ಬಿಟ್ಟು ಕೈಲಾಸಕ್ಕೆ ಸೇರಿ, ಜೀವಬಿಟ್ಟು ವೈಕುಂಠಕ್ಕೆ ಸಲ್ಲಿರಿ, ಮಕ್ಕಳೇ" ಎಂದಳು. ಹಿರಿಯವನಲ್ಲಿ "ಉತ್ತರಕ್ಕೆ ಹೋಗಪ್ಪ ಮಲ್ಲಾಸುರ ಮಗುವೇ ನಂದಿಬಸವನ ರೂಪವಾಗು" ಎಂದಳು. ತಮ್ಮ ಮೈಯ್ಯಸುರನಿಗೆ ವರ ಕೊಟ್ಟಳು – "ದಕ್ಷಿಣಕ್ಕೆ ಹೋಗು ಮೈಯ್ಯಸುರ, ಗರುಡ ಹಕ್ಕಿಯ ರೂಪವಾಗು." ಅಣ್ಣ ಮಲ್ಲಸುರನು ಉತ್ತರಕ್ಕೆ ಹೋದನು. ಬಾಲೆನಂದಿ ಬಸವನ ರೂಪವಾದನು. ತಮ್ಮ ಮೈಯ್ಯಸುರನು ದಕ್ಷಿಣಕ್ಕೆ ಹೋದನು, ಗರುಡ ಪಕ್ಷಿಯ ರೂಪವಾದನು.

ಇಲ್ಲಿ ನಂದಿಬಸವನ ರೂಪ ತಾಳಿದ ಅಣ್ಣ ಮಲ್ಲಸುರನನ್ನೇ 'ಮೈಸಂದಾಯ ಭೂತ'ವೆಂದು ಕರೆಯುತ್ತಾರೆ. ಯುದ್ಧದಲ್ಲಿ ಸಾವನ್ನು ಅಪ್ಪಿದ ಮಲ್ಲಸುರನು ತಾಯಿಯ ವರದ ಮೂಲಕ ಮೈಸಂದಾಯ ಭೂತವಾಗುತ್ತಾನೆ ಎನ್ನುವ ಕಲ್ಪನೆ ಈ ಪಾಡ್ದನದಲ್ಲಿ ಉಲ್ಲೇಖವಾಗಿದೆ. ಇಲ್ಲಿ ತಮ್ಮ ಮೈಯ್ಯಸುರನು ಯುದ್ಧದಲ್ಲಿ

ಮಡಿದ ಮೇಲೆ ತಾಯಿಯ ವರದ ಮೂಲಕ ಗರುಡಪಕ್ಷಿಯಾಗಿ ಅವತಾರ ಎತ್ತುತ್ತಾನೆ. ಹೆಸರಿನ ಸಾಮ್ಯದ ದೃಷ್ಟಿಯಿಂದ ಮೈಯ್ಯಸುರ ಮತ್ತು ಮೈಸಂದಾಯಗಳು ಹತ್ತಿರವಾಗಿವೆ. ಆದರೆ ನಂದಿಬಸವನ ರೂಪವನ್ನು ತಾಳಿದಾತ ಮೈಯ್ಯಸುರನಲ್ಲ, ಮಲ್ಲಸುರ. ಮೈಯನ್ನು ಅಂದರೆ ದೇಹವನ್ನು ಯುದ್ಧದಲ್ಲಿ ಸಲ್ಲಿಸಿದವನು, ಅಂದರೆ ಅರ್ಪಿಸಿದವನು ಎನ್ನುವ ಅರ್ಥದಲ್ಲಿ 'ಮೈಸಂದಾಯ' ಎನ್ನುವ ಅರ್ಥ ಇಲ್ಲಿ ಹೆಚ್ಚು ಹೊಂದಿಕೆಯಾಗು ತ್ತದೆ. ಯುದ್ಧದಲ್ಲಿ ಅಕಾಲಮರಣವನ್ನು ಪಡೆಯುವಲ್ಲಿ Stith Thomsonನ N 330. Accidental killing or death ಎಂಬ ಆಶಯ (Motif) ಇದೆ. ಮನುಷ್ಯನು ಬಸವನ ರೂಪದ ಪ್ರಾಣಿಯಾಗಿ ಪರಿ ವರ್ತನೆಯಾಗುವಲ್ಲಿ D 133 3 Transformation to ox ಎಂಬ ಆಶಯವಿದೆ. ಜೊತೆಗೆ G 303·1·3.1 The devil is developed from man ಎಂಬ ಆಶಯದ ಸೂಚನೆಯೂ ಇದೆ. ಯುದ್ಧದಲ್ಲಿ ಅಕಾಲ ಮರಣವನ್ನು ಪಡೆದ ವ್ಯಕ್ತಿಯು ಭೂತನಾಗುತ್ತಾನೆ ಎನ್ನುವ ಕಲ್ಪನೆಯು ತುಳುನಾಡಿನ ಹೆಚ್ಚಿನ ಭೂತಗಳ ಹುಟ್ಟಿನ ಬಗ್ಗೆ ಸಾಮಾನ್ಯವಾಗಿ ಕಾಣಿಸುವ ಆಶಯ.

ಮೈಸಂದಾಯ ಭೂತದ ಉಗಮವನ್ನು ಕುರಿತು ಇನ್ನೊಂದು ಪಾಠದಲ್ಲಿ ಇಷ್ಟು ವಿವರಗಳು ಸಿಗುವುದಿಲ್ಲ. ಮೈಸಂದಾಯವು ಬಸವನ ರೂಪದಲ್ಲಿ ಇರುವ ಭೂತ. ತಾಯಿ ಅಕ್ಕೆರಸು, ತಂದೆ ಗಾಳಿಕೃಷ್ಣದೇವರು. ಅವರಿಗೆ 'ಐಯಗೆ', 'ಮೈಯಗೆ' ಎನ್ನುವ ಇಬ್ಬರು ಹೆಣ್ಣು ಮಕ್ಕಳು. ಅವರಲ್ಲಿ 'ಮೈಯಗೆ' ಎಂಬುವಳಿಗೆ ಒಂದು ಮಗು ಹುಟ್ಟುತ್ತದೆ. ಹುಟ್ಟುವಾಗಲೇ ಅದರ ತಲೆಯಲ್ಲಿ ಕೊಂಬು ಇರುತ್ತದೆ. ಬಳಿಕ ನಂದಳಿಕೆಯ "ಸಿರಿಗಳು" 'ಅಬ್ಬಗ-ದಾರಗ' ಎನ್ನುವವರು ಈ ಮೈಸಂದಾಯನನ್ನು ಮೊದಲು ನಂಬುತ್ತಾರೆ. ಈ ಪಾಠದ ಪ್ರಕಾರ ಮೈಸಂದಾಯ ದೈವವು ಹುಟ್ಟುವಾಗಲೇ ದೈವವಾಗಿತ್ತು ಎನ್ನುವ ವಿವರಣೆ ಇದೆ. ಇಲ್ಲಿ 'ಮೈಯಗೆ'ಯ ಮಗು ಎನ್ನುವ ಕಾರಣದಿಂದ ಮೈಸಂದಾಯ ಎನ್ನುವ ಹೆಸರು ಸಮರ್ಪಕವಾಗಬಹುದು. ವಿಚಿತ್ರವಾಗಿ ಹುಟ್ಟಿದ ಒಂದು ಮಗುವು ಜನಗಳ ಹೆದರಿಕೆ, ಆಶ್ಚರ್ಯ ಇವುಗಳಿಂದ ಭೂತದ ಸ್ಥಾನವನ್ನು ಪಡೆದಿರಬಹುದು. ಬಸವ ಒಂದು ಭೂತವಾಗುವುದು. Smith Thomsonನ Motif Indexನ G 303·3·3·1·4 devil as an ox ಎಂಬ ಆಶಯವಿದೆ.

ಮೈಸಂದಾಯದ ಮಹಿಮೆಯನ್ನು ಸಾರುವ ಪಾಡ್ದನಗಳು ಸಿಗುತ್ತವೆ. ಮುಖ್ಯವಾಗಿ ಒಂದು ಪಾಡ್ದನ ದಲ್ಲಿ "ಅಬ್ಬಗೆ ಮತ್ತು ದಾರಗೆ" ಎನ್ನುವ ಸಿರಿಗಳು ಮೈಸಂದಾಯನನ್ನು ಭೇಟಿಯಾಗುವ ವಿಚಾರವಿದೆ. ಈ ಪಾಡ್ದನದಲ್ಲಿ ಬಹುಭಾಗ 'ಅಬ್ಬಗ ಮತ್ತು ದಾರಗ' ಎಂಬ ಸಿರಿಗಳ ವಿಷಯವೇ ಇದ್ದರೂ ನೆತ್ತಿಯಲ್ಲಿ ಕೊಂಬು ಇರುವ ಭೂತ ಅಂದರೆ ಮೈಸಂದಾಯ ಕಾಣಿಸುವುದರಿಂದ ಈ ಪಾಡ್ದನವನ್ನು ಮೈಸಂದಾಯ ಪಾಡ್ದನವೆಂದು ಕರೆಯುತ್ತಾರೆ. ಆ ವಿಚಾರ ಬರುವ ಪಾಡ್ದನದ ಕೊನೆಯ ಭಾಗದ ಕನ್ನಡ ರೂಪಾಂತರ ಈ ರೀತಿ ಇದೆ ;

"ಬೀರಂಗಲ್ಲಿನಲ್ಲಿ ಹೋಗುವಾಗ ಸೀರೆ ಕೊಡಹಿ ಉಟ್ಟರು, ಸೆರಂಗಾಲ ಹಾಸುಗಲ್ಲಿನಲ್ಲಿ ಹೋಗುವಾಗ ಕೂದಲು ಸರಿಮಾಡಿ ಕಟ್ಟಿದರು, ನಡುದಾರಿಯಲ್ಲಿ ಹೋದರು. ಬಿದ್ದುಕೊಂಡು ಬರುತ್ತಾನೆ ಒಬ್ಬ ಮನುಷ್ಯ. 'ಎಲ್ಲಿಗೆ ಹೋಗಬೇಕು ಹೆಂಗಸರಿಗೆ' ಎಂದು ಕೇಳಿದರು. "ನಿನಗೆ ಎಲ್ಲಿಗೆ ಹೋಗಬೇಕು ಮನುಷ್ಯ" ಎಂದರು ಅಕ್ಕ ಅಬ್ಬಗ ದೇವಿ. 'ಗಂಡಸೆಂದು ತಿಳಿಯಬೇಡಿ ಹೆಂಗಸರೆ, ಬಾಲ ಕುಮಾರನ ಬ್ರಾಹ್ಮಣ ಮನುಷ್ಯ ನಾನು' ಎಂದ ಬಾಲಕುಮಾರನಿಗೆ ನೆತ್ತಿಯಲ್ಲಿ ಕೊಂಬು. 'ಹೆಂಗಸರೆಂದು ಹೇಳಬೇಡಿ ನಂದಳಿಕೆಯ ಸಿರಿಗಳು ನಾವು' ಎಂದರು ಸಿರಿಗಳು. ಮೈರ ಹಾಸುಗಲ್ಲಿನಲ್ಲಿ ಹೋಗುವಾಗ ನವಿಲಿನ ನರ್ತನ ಮಾಡಿದರು. ಇಬ್ಬರಿದ್ದಲ್ಲಿ ಮೂವರು ಆದರು ನಂದಳಿಕೆಯ ಸಿರಿಗಳು. ಬಾಲ ಕಂದೆಗ ಕುಮಾರನಿಗೆ ಕಂಡಿಗದ ಅಸ್ರಣ್ಣರು ಒಂದು ಪೂಜೆ ಮಾಡಿ ಹೋಗಿದ್ದಾರೆ. ಸತ್ಯದ ಸಿರಿಗಳಾದರೆ ಬಾಗಿಲು ತೆರೆಯಬೇಕು. ಬಾಗಿಲು ತೆರೆಯಿತು. ನಂದಾದೀಪ ನಂದಿಕೊಂಡಿರುವುದು ಉರಿಯುತ್ತಾ ಬಂತು. ಕೊಂಡು ಹೋದ ಹರಕೆ ತೀರಿಸಿದರು. ಮುಂದಿನ ದಿವಸಕ್ಕೆ

ಹರಕೆ ಹೇಳಿದರು. ತೀರ್ಥ ತೆಗೆದುಕೊಂಡರು. ಪ್ರಸಾದ ಹಿಡಿದರು. ಇಳಿದು ಬಂದರು. ಅಕ್ಕ ಅಬ್ಬಗ ದೇವಿ ತಂಗಿ ದಾರಗ ಹೆಂಗಸು, ಬಾಲ ಕಂದಗ ಕುವಾರನನ್ನು ನಂಬಿದರು."

ಮೇಲಿನ ಪಾಡ್ದನದಲ್ಲಿ ಎಲ್ಲೂ ಮೈಸಂದಾಯ ಭೂತದ ಹೆಸರು ನೇರವಾಗಿ ಪ್ರಸ್ತಾಪಿತವಾಗಿಲ್ಲ. ಆದರೆ 'ಅಬ್ಬಗ–ದಾರಗ'ರಿಗೆ ದಾರಿಯಲ್ಲಿ ಕಾಣಿಸುವ ನೆತ್ತಿಯಲ್ಲಿ ಕೊಂಬು ಇರುವ 'ಬಾಲ ಕುಮಾರ' ಮೈಸಂದಾಯನ ಸ್ವರೂಪದವ. ಪಾಡ್ದನದ ಕೊನೆಯಲ್ಲಿ 'ಅಬ್ಬಗ-ದಾರಗರು' 'ಬಾಲ ಕಂದೆಗೆ ಕುಮಾರ'ನನ್ನು ನಂಬಿದ ಸಂಗತಿ ಇದೆ. ಆದರೆ ಮೈಸಂದಾಯ ಭೂತದ ಪ್ರಸರಣಕ್ಕೆ ಸಂಬಂಧಿಸಿದ ಪಾಡ್ದನಗಳು ಹೆಚ್ಚಾಗಿ ಸಿಗುವುದಿಲ್ಲ.

### ಅಕಾಲ ಮರಣದ ಮೂಲಕ ಮನುಷ್ಯರು ಭೂತಗಳಾದ ಪಾಡ್ದನಗಳು

ಪಾಡ್ದನಗಳ ಅಧ್ಯಯನದಿಂದ ಭೂತಗಳ ಉಗಮವನ್ನು ಪರಿಶೀಲಿಸಿದಾಗ ಹೆಚ್ಚಿನ ಭೂತಗಳು ಅಕಾಲ ಮರಣವನ್ನು ಹೊಂದಿದ ಮನುಷ್ಯರ ರೂಪಾಂತರ ಎನ್ನುವ ಸಂಗತಿ ತಿಳಿಯುತ್ತದೆ. ಯುದ್ಧದಲ್ಲಿ ಆತ್ಮಹತ್ಯೆಯ ಮೂಲಕ, ಕೊಲೆಯಿಂದ, ಇತರ ಭೂತದ ಉಪದ್ರವದಿಂದ – ಈ ರೀತಿ ಬೇರೆ ಬೇರೆ ಕಾರಣದಿಂದ ಅಕಾಲ ಮರಣವನ್ನಪ್ಪಿದ ವ್ಯಕ್ತಿಗಳು ಭೂತಗಳಾಗಿ ಮಾರ್ಪಟ್ಟು ಆರಾಧನೆಯನ್ನು ಪಡೆಯುವ ದೈವಗಳಾಗಿ ಕಾಣಿಸಿ ಕೊಳ್ಳುತ್ತಾರೆ. ಉದಾ :– ಬೊಬ್ಬರ್ಯ, ಕಲ್ಕುಡ–ಕಲ್ಲುರ್ಟಿ, ಕೋಟಿ-ಚೆನ್ನಯ, ಕಾಂತಾಬಾರೆ-ಬೂದಾ ಬಾರೆ, ಕೊರಗ ತನಿಯೆ, ಕೋಡ್ದಬ್ಬು, ತನ್ನಿ ಮಾನಿಗ, ಅಕ್ಕೆರಸು ಪೂಂಜೆದಿ, ಸೊನ್ನೆ, ಗಿಂಡೆ, ಅಬ್ಬಗೆ ದಾರಗೆ, ಕೋಟಿಪೂಂಜ, ಒಕ್ಕುಬಲ್ಲಾಳ, ನಾಡು, ಜೋಗಿ ಪುರುಷ, ಬಸ್ತಿ ನಾಯಕ, ತೋಮಜ್ಜ, ಮದಾ ಮಾಳ್, ಚಿಕ್ರ ಮೇಲಾಂಟ, ಮಾಯಂದಾಳ್, ಕಂಬೆರ್ಲ, ಗುರ್ಕಾರ ಭೂತ ಇತ್ಯಾದಿ ಭೂತಗಳೆಲ್ಲಾ ಬೇರೆ ಬೇರೆ ಕಾರಣಗಳಿಂದಾಗಿ ಅಕಾಲ ಮರಣವನ್ನು ಹೊಂದಿದ ಮಾನವ ವ್ಯಕ್ತಿಗಳು. ಜನಪ್ರಿಯತೆ ಮತ್ತು ಪ್ರಾದೇಶಿಕ ವ್ಯಾಪ್ತಿಯ ದೃಷ್ಟಿಯಿಂದ ಇವುಗಳಲ್ಲಿ ಕೋಟಿ ಚೆನ್ನಯ, ಸಿರಿ ಮತ್ತು ಕಲ್ಕುಡ-ಕಲ್ಲುರ್ಟಿ ಪಾಡ್ದನ ಗಳು ತುಳುನಾಡಿನಲ್ಲಿ ಬಹಳ ಪ್ರಧಾನವಾಗಿವೆ. ಕೆಲವು ಮುಖ್ಯವಾದ ಪಾಡ್ದಗಳನ್ನು ಇಲ್ಲಿ ಅಧ್ಯಯನಕ್ಕೆ ಬಳಸಿ ಕೊಳ್ಳಲಾಗಿದೆ.

### 1. ಕೋಟಿ ಚೆನ್ನಯ

ತುಳುನಾಡಿನ ಪಾಡ್ದನಗಳಲ್ಲೆಲ್ಲಾ ಅತ್ಯಂತ ಜನಪ್ರಿಯವಾಗಿರುವುದು 'ಕೋಟಿ–ಚೆನ್ನಯ' ಪಾಡ್ದನ. ಈ ಪಾಡ್ದನದ ಮೂರು ಸಂಧಿಗಳನ್ನು (ದೇಯಿ ಬೈದ್ಯೆದಿ, ಕೋಟಿ ಚೆನ್ನಯ-೧, ಕೋಟಿ ಚೆನ್ನಯ-೨) A manner ಅವರು ೧೮೮೬ರಲ್ಲಿ ತಮ್ಮ 'ಪಾಡ್ದನೊಳು' ಎಂಬ ಸಂಗ್ರಹದಲ್ಲಿ ಮೊತ್ತ ಮೊದಲ ಬಾರಿ ಕೊಟ್ಟಿದ್ದಾರೆ. R. C. Burnell ಅವರ "The Devil Worship of the Tuluvas" ಎಂಬ ಇಂಗ್ಲಿಷ್ ಗ್ರಂಥದಲ್ಲಿ 'ಕೋಟಿ ಚೆನ್ನಯ' ಪಾಡ್ದನದ ಮೂರು ಸಂಧಿಗಳ ಇಂಗ್ಲಿಷ್ ಅನುವಾದವನ್ನು ನೋಡಬಹುದು.

ಪಂಜೆ ಮಂಗೇಶ ರಾಯರು 'ಕೋಟಿ ಚೆನ್ನಯ' ಪಾಡ್ದನದ ಕಥೆಯನ್ನು ಬಾಲ ಸಾಹಿತ್ಯದ ರೂಪದಲ್ಲಿ ಆಕರ್ಷಕವಾಗಿ ಸಾರಾಂಶ ರೂಪದಲ್ಲಿ ಕನ್ನಡದಲ್ಲಿ ಕೊಟ್ಟಿದ್ದಾರೆ. ಪಂಜೆಯವರ 'ಕೋಟಿ ಚೆನ್ನಯ ಕೃತಿ' ಬಂದಮೇಲೆ ಕೋಟಿ ಚೆನ್ನಯರ ಕತೆ ತುಳುನಾಡಿನಲ್ಲಿ ಹೆಚ್ಚು ಜನಪ್ರಿಯವಾಯಿತು. ಕೋಟಿಚೆನ್ನಯ ಪಾಡ್ದನ ವನ್ನು ಆಧರಿಸಿ ತುಳುವಿನಲ್ಲಿ ಎರಡು ನಾಟಕಗಳು ಪ್ರಕಟಗೊಂಡಿವೆ.

೧) ವಿಶುಕುಮಾರ್ ಅವರ 'ಕೋಟಿ ಚೆನ್ನಯ' ಎಂಬ ತುಳು ನಾಟಕ (೧೯೬೭)

೨) ಸೀತಾನದಿ ಗಣಪಯ್ಯ ಶೆಟ್ಟಿಯವರ 'ಕೋಟಿ ಚೆನ್ನಯ' ಎಂಬ ತುಳು ನಾಟಕ (೧೯೭೮)

'ಕೋಟಿ ಚೆನ್ನಯ' ಪಾಡ್ದನವನ್ನು ಆಧರಿಸಿಕೊಂಡು ತುಳು ಯಕ್ಷಗಾನ ಬಯಲಾಟ ಸುಮಾರು ೧೫ ವರ್ಷಗಳಿಂದ ಯಕ್ಷಗಾನ ರಂಗಭೂಮಿಯಲ್ಲಿ ಜನಪ್ರಿಯವಾಗಿ ಪ್ರದರ್ಶಿತವಾಗಿರುತ್ತದೆ. ೧೯೭೨ರಲ್ಲಿ 'ಕೋಟಿ ಚೆನ್ನಯ್ಯ' ಕತೆಯನ್ನು ಆಧರಿಸಿ ವಿಶುಕುಮಾರ್ ನಿರ್ದೇಶನದಲ್ಲಿ ಒಂದು ತುಳು ಸಿನೆಮಾವು ನಿರ್ಮಾಣವಾಗಿದೆ. ದೂಮಪ್ಪ ಮಾಸ್ತರ್ ಅವರು ಕೋಟಿ ಚೆನ್ನಯ ಕತೆಯನ್ನು ಆಧರಿಸಿ ಸ್ವತಂತ್ರವಾಗಿ 'ಕೋಟಿ ಚೆನ್ನಯದ ಕತೆ' ಎಂಬ ಪದ್ಯರೂಪದ ಕೃತಿಯನ್ನು ಪ್ರಕಟಿಸಿದ್ದಾರೆ (೧೯೭೫). ಪ್ರಾದೇಶಿಕವಾಗಿ ಕೋಟಿ ಚೆನ್ನಯರ ಕತೆ ಇಂದಿನ ಸುಳ್ಯ ತಾಲ್ಲೂಕಿನ ಪಮ್ಜಲೆ, ಪಂಜ ಮತ್ತು ಎಣ್ಮೂರು ಎಂಬ ಮೂರುಊರುಗಳಿಗೆ ಸಂಬಂಧಿಸಿದುದು. ಇಂದಿಗೂ ಆ ಸ್ಥಳಗಳಲ್ಲಿ ಕೋಟಿ ಚೆನ್ನಯರ ಪಾಡ್ದನಗಳಲ್ಲಿ ಕಾಣಿಸುವ ಎಷ್ಟೋ ಭೌಗೋಳಿಕ ಸ್ಥಳಗಳು ಸಿಗುತ್ತವೆ. ಸಾಮಾಜಿಕವಾಗಿ ಕೆಳಗಿನ ವರ್ಗದ ಬಿಲ್ಲವರ ಜಾತಿಯಲ್ಲಿ ಹುಟ್ಟಿದ ಕೋಟಿ ಚೆನ್ನಯರೆಂಬ ಅವಳಿ ವೀರರು ಮೇಲುವರ್ಗದವರ ದಬ್ಬಾಳಿಕೆಯನ್ನು ಪ್ರತಿಭಟಿಸಿ ಅದಕ್ಕಾಗಿ ಹೋರಾಡಿ ಮರಣವನ್ನು ಅಪ್ಪುತ್ತಾರೆ. ಕೋಟಿಯು ಕಾಳಗವಾಡುತ್ತಾ ಮಡಿದರೆ, ಚೆನ್ನಯನು ಕೋಟಿಯ ಸಾವನ್ನು ಕಂಡು ದುಃಖದಿಂದ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಸಾಕಷ್ಟು ದೀರ್ಘವಾಗಿರುವ ಮೂರು ಅಥವಾ ನಾಲ್ಕು ಸಂಧಿಗಳ ರೂಪದಲ್ಲಿರುವ, ಅವಳಿ ವೀರರನ್ನು ಕಥಾನಾಯಕರಾಗಿ ಉಳ್ಳ, ಜನಪ್ರಿಯತೆಯ ದೃಷ್ಟಿಯಿಂದ ತುಳುನಾಡಿನಲ್ಲಿ ವ್ಯಾಪಕವಾಗಿರುವ ಕೋಟಿ ಚೆನ್ನಯ ಪಾಡ್ದನವನ್ನು ವಸ್ತು, ರಚನೆ, ಶೈಲಿ ಈ ಎಲ್ಲಾ ದೃಷ್ಟಿಗಳಿಂದಲೂ 'ಜನಪದ ಮಹಾಕಾವ್ಯ' (Folk epic) ಎಂದು ಕರೆಯಬಹುದು.

## ಕೋಟಿ ಚೆನ್ನಯ ಪಾಡ್ದನದ ಸಂಕ್ಷಿಪ್ತ ಕನ್ನಡ ರೂಪ

ಮದುವೆಯಾಗುವ ಮೊದಲು ಮೈನೆರೆದ ಬ್ರಾಹ್ಮಣ ಹುಡುಗಿಯೊಬ್ಬಳನ್ನು ಸಂಕಮಲೆ ಎಂಬ ಕಾಡಿನಲ್ಲಿ ಕಣ್ಣಿಗೆ ಬಟ್ಟೆಕಟ್ಟಿ ಬಿಟ್ಟುಬಿಟ್ಟಿದ್ದರು. ಅಲ್ಲಿಗೆ ಸೇಂದಿ ತೆಗೆಯಲು ಹೋಗಿದ್ದ ಸಾಯನ ಬೈದ್ಯನು ಆಕೆಯ ಆರ್ತನಾದ ಕೇಳಿ ಅವಳ ಬಳಿಗೆ ಹೋದನು. ಪೆರ್ಮಲೆ ಬಲ್ಲಾಳನ ಒಪ್ಪಿಗೆ ಪಡೆದು, ಅವನು ಅವಳನ್ನು ಮನೆಗೆ ಕರೆದುಕೊಂಡು ಬಂದನು. ಆ ಹುಡುಗಿಯನ್ನು ಕುರ್ಗೆಲಿನ ಕಾಂತಣ್ಣ ಬೈದ್ಯನಿಗೆ ಮದುವೆ ಮಾಡಿಕೊಟ್ಟನು. ಆಕೆ ಮೊದಲು ಒಂದು ಹೆಣ್ಣು ಮಗುವನ್ನು ಹೆತ್ತಳು. ಆ ಮಗಳು ಏಳನೇ ವರ್ಷದಲ್ಲಿ ಮಾತನಾಡಲು ಕಲಿತಳು. ಅವಳನ್ನು ಪಳ್ಳಿ ಎಂಬ ಊರಿನ ಪಯ್ಯಬೈದ್ಯ ಎಂಬುವನಿಗೆ ಮದುವೆ ಮಾಡಿಕೊಟ್ಟರು.

ಬೇಟೆಯಾಡಲು ಬೋಂಟೆಮಾರಿಗೆ ಹೋದ ಪೆರ್ಮಲೆ ಬಲ್ಲಾಳನ ಕಾಲಿಗೆ ಒಂದು ಸಂಜಿನ ಮುಳ್ಳು ಚುಚ್ಚಿತು. ಅದರ ನೋವಿನಿಂದ ಚಳಿಯಾಗಿ ಜ್ವರ ಬಂದ ಬಲ್ಲಾಳನಿಗೆ ಔಷಧ ಮತ್ತು ಮಂತ್ರವಾದ ಮಾಡಲು ಬಿರ್ಮಣ ಬೈದ್ಯನನ್ನು ಕರೆತರಲಾಯಿತು. ಅವನ ಔಷಧದಿಂದ ಬಲ್ಲಾಳನ ಜ್ವರವೂ ಹೆಚ್ಚಿತು. ಕಾಲಿನ ಬಾವು ಬೀಗತೊಡಗಿತು. ಆಹಾರವನ್ನು ಸೇವಿಸಲಾಗಲಿಲ್ಲ. ನಿದ್ರೆ ದೂರವಾಯಿತು. ಸಾಯನ ಬೈದ್ಯನು ಒಳ್ಳೆಯ ವೈದ್ಯ ಹಾಗೂ ಮಂತ್ರವಾದಿ ಎಂದು ತಿಳಿದು ಅವನಿಗೆ ಕರೆಹೋಯಿತು.

ಸಾಯನ ಬೈದ್ಯನು ತನಗೆ ಕಣ್ಣು ಕಾಣಿಸುವುದಿಲ್ಲವೆಂದೂ ಔಷಧ ತರಲು ಆಗುವುದಿಲ್ಲವೆಂದೂ ಅವರಿಗೆ ತಿಳಿಸಿ, ತನ್ನ ತಂಗಿ ದೇಯಿ ಬೈದ್ಯೆತಿಯಲ್ಲಿಗೆ ಹೋಗಲು ಹೇಳಿದ. ಹಾಗೆಯೇ ಸೇವಕರು ದೇಯಿ ಬೈದ್ಯೆತಿಯಲ್ಲಿಗೆ ಹೋಗಿ, ವಿಷಯ ತಿಳಿಸಿದರು. ಅವಳು "ನಾನು ಬರುತ್ತಿದ್ದೆ. ಆದರೆ ನಾನು ಈಗ ತುಂಬು ಗರ್ಭಿಣಿ" ಎಂದಳು,

ಸೇವಕರು ಇದನ್ನು ಬಲ್ಲಾಳನಿಗೆ ತಿಳಿಸಿದರು. ಬಲ್ಲಾಳನು ದೇಯಿಯನ್ನು ಕರೆದುಕೊಂಡು ಬರಲು ಅರಮನೆಯ ಪಲ್ಲಕ್ಕಿಯನ್ನು ಕಳುಹಿಸಿದನು. ದೇಯಿಯು ಏಳು ಕಾಡುಗಳಿಗೆ ಹೋಗಿ ಏಳು ವಿಧದ ಗಿಡಮೂಲಿಕೆಗಳನ್ನು ತಂದು ಪಲ್ಲಕ್ಕಿಯಲ್ಲಿ ಇಟ್ಟಳು. ತಾನು ಅದರ ಬದಿಯಲ್ಲೇ ನಡೆಯುತ್ತಾ ಬಲ್ಲಾಳನ ಬೀಡಿಗೆ ಬಂದಳು.

ಬಲ್ಲಾಳನು ದೇಯಿಯಲ್ಲಿ "ನನ್ನ ಜೀವವನ್ನು ರಕ್ಷಿಸು. ಇಂದು ನಾನು ನಿನ್ನ ಗರ್ಭದಲ್ಲಿ ಇನ್ನೊಮ್ಮೆ ಜನಿಸಿದಂತಾಗುತ್ತದೆ. ನೀನು ನನ್ನ ಜೀವ ಉಳಿಸಿದರೆ, ನಿನಗೆ ಅನ್ನ ಬಟ್ಟೆಗಳನ್ನಿತ್ತು ರಕ್ಷಿಸುತ್ತೇನೆ" ಎಂದನು

ದೇಯಿಯ ಔಷಧ ಹಾಗೂ ಮಂತ್ರದಿಂದ ಬಲ್ಲಾಳನ ಕಾಲಿನ ನೋವು ಸಂಪೂರ್ಣ ವಾಸಿಯಾಯಿತು. ದೇಯಿ ತನ್ನ ಮನೆಗೆ ಹೊರಟಾಗ "ನೀವು ಹೇಳಿದ ಅನ್ನ ಬಟ್ಟೆಗಳನ್ನು ಕೊಡಿ" ಎಂದು ಕೇಳಿದಳು. ಮೊದಲು ಬುದ್ಧಿವಂತರಲ್ಲಿ ಕೇಳಬೇಕೆಂದಿದ್ದ ಬಲ್ಲಾಳನು, ಮತ್ತೆ ಅವಳಿಗೆ ವಸ್ತ್ರಾಭರಣಗಳನ್ನು ಕೊಟ್ಟು, ಉಳಿದುದನ್ನು ಅವಳಿಗೆ ಹುಟ್ಟುವ ಮಗುವಿಗೆ ಕೊಡುತ್ತೇನೆ ಎಂದನು.

ಮನೆಗೆ ಹಿಂದಿರುಗುವಾಗ ದಾರಿಯಲ್ಲಿ ದೇಯಿಗೆ ಹೆರಿಗೆಯ ನೋವು ಕಾಣಿಸಿಕೊಂಡಿತು. ಅವಳು ತೆಂಗಿನ ಮರವೊಂದನ್ನು ಅಪ್ಪಿ ಹಿಡಿದು, ಕಣ್ಣೀರಿಟ್ಟಳು. ಆಗ ಬುದ್ಯಂತನು ಅವಳನ್ನು ನೋಡಿ "ಇದೇನು ಗರ್ವ ಹೆಚ್ಚಾಗಿ ಇಲ್ಲಿ ನಿಂತಿದ್ದೀಯಾ" ಎಂದು ಕೇಳಿದನು. "ನಾನು ಅಹಂಕಾರದಿಂದ ಹೀಗೆ ನಿಂತಿದ್ದರೆ ಅದಕ್ಕಾಗಿ ನಾನು ನರಳಬೇಕು, ಇಲ್ಲವಾದರೆ ನನಗೆ ಹುಟ್ಟುವ ಮಕ್ಕಳು ನೋಡಿಕೊಳ್ಳುತ್ತಾರೆ" ಎಂದು ಉತ್ತರ ಕೊಟ್ಟಳು ದೇಯಿ. ದೇಯಿಯ ಹೆರಿಗೆಯ ನೋವಿನ ವರ್ತಮಾನ ತಿಳಿದ ಬಲ್ಲಾಳನು ಅವಳನ್ನು ಬೀಡಿಗೆ ಕರೆತರಿಸಿ ಅವಳ ಹೆರಿಗೆಯ ಏರ್ಪಾಡು ಮಾಡಿದ. ಆಕೆ ಎರಡು ಗಂಡುಮಕ್ಕಳನ್ನು ಹೆತ್ತಳು. ಅವರಿಗೆ ದೇವರ ಹೆಸರಿನಲ್ಲಿ ಕೋಟಿಚೆನ್ನಯರೆಂದು ನಾಮಕರಣ ಮಾಡಿದರು. ಆದರೆ ಮತ್ಸರದಿಂದ ಬಿರ್ಮಣ ಬೈದ್ಯನು ಮಂತ್ರವಾದ ಮಾಡಿ ದೇಯಿಯನ್ನು ಕೊಂದ.

ಬಲ್ಲಾಳನು ತಬ್ಬಲಿಗಳಾದ ಕೋಟಿ ಚೆನ್ನಯರನ್ನು ಸಾಕಲು ಸರಿಯಾದ ವ್ಯವಸ್ಥೆ ಮಾಡಿದ. ಸಾಯನ ಬೈದ್ಯ ಅವರನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದ. ಒಂದು ದಿನ ಕೋಟಿ ಚೆನ್ನಯರು ಬುದ್ಯಂತನ ಮಕ್ಕಳೊಡನೆ ಗೇರುಬೀಜದ ಜೂಜಾಟವನ್ನು ಆಡಿದರು. ಅದರಲ್ಲಿ ಮೊದಲು ಸೋತರೂ ಕೊನೆಗೆ ಗೆದ್ದರು. ತನ್ನ ಮಕ್ಕಳ ಮಾತು ಕೇಳಿ ಬುದ್ಯಂತನು ಕೋಟಿ ಚೆನ್ನಯರಿಂದ ಗೇರುಬೀಜಗಳನ್ನು ಎಳೆದುಕೊಂಡು ಹೋದ. ಆಗ ಕೋಟಿ ಚೆನ್ನಯರೆಂದರು – "ನಾವು ಮಕ್ಕಳು ಎಂದು ಬಲಾತ್ಕಾರದಿಂದ ನೀನು ನಮ್ಮನ್ನು ಲೂಟಿ ಮಾಡಿದೆ. ನಾವು ದೊಡ್ಡವರಾದ ಬಳಿಕ ಆ ಗೇರುಬೀಜಗಳನ್ನು ಹಿಂದೆ ತರುತ್ತೇವೆ."

ಕೋಟಿ ಚೆನ್ನಯರು ಬಲ್ಲಾಳನಲ್ಲಿ ತಮ್ಮ ದುಡಿಮೆಗಾಗಿ ಗದ್ದೆಯನ್ನು ಕೇಳಿದರು. ಬಲ್ಲಾಳನು ಬುದ್ಯಂತನ ಗದ್ದೆಯ ಕೆಳಭಾಗದ ಗದ್ದೆಯನ್ನು ಅವರಿಗೆ ಕೊಟ್ಟ. ಮೊದಲೇ ಹಗೆತನವಿದ್ದ ಬುದ್ಯಂತ ಮತ್ತು ಕೋಟಿ ಚೆನ್ನಯರ ನಡುವೆ ಈ ಅಕ್ಕಪಕ್ಕದ ಗದ್ದೆಗಳ ಕಾರಣ ಘರ್ಷಣೆ ಹೆಚ್ಚಿತು. ಒಂದೇ ದಿನ ಕಂಬಳ ನಡೆಸುವುದು, ಆಳುಗಳಿಗೆ, ಕೋಣಗಳಿಗೆ ಹೊಡೆಯುವುದು ಇಂತಹ ಘಟನೆಗಳು ನಡೆಯುತ್ತಿದ್ದುವು. ಬುದ್ಯಂತನು ಕೋಟಿ ಚೆನ್ನಯರ ಗದ್ದೆಗೆ ತನ್ನ ಗದ್ದೆಯ ನೀರನ್ನೆಲ್ಲ ಬಿಟ್ಟು ಬೆಳೆ ಹಾಳಾಗುವಂತೆ ಮಾಡಿದ. ಈ ಕುರಿತು ಪ್ರಶ್ನಿಸಿದ ಕೋಟಿಯನ್ನು ಬೈಯ್ದು, ಚೆನ್ನಯನನ್ನು ಹಂಗಿಸಿದ. ಆಗ ಅಲ್ಲಿಗೆ ಬಂದ ಚೆನ್ನಯನು ಸಿಟ್ಟು ತಡೆಯಲಾರದ ಬುದ್ಯಂತನನ್ನು ಕೊಂದ.

ತಾವಿನ್ನು ಈ ಊರಲ್ಲಿರುವುದು ಸರಿಯಲ್ಲವೆಂದು ಕೋಟಿ ಚೆನ್ನಯರು ನಿರ್ಧರಿಸಿ, ಬಲ್ಲಾಳನಲ್ಲಿಗೆ ಹೋಗಿ ಕೆಲವು ಕೇಳಿಕೆಗಳನ್ನು ಮುಂದಿಟ್ಟರು. ಕೋಟಿ ಚೆನ್ನಯರು ಬಾಕಿಮಾರು ಗದ್ದೆಯನ್ನು ಕೇಳಿದಾಗ,

ಬಲ್ಲಾಳನು ಅದು ತನ್ನ ಸ್ವಂತ ಉಪಯೋಗಕ್ಕೆ ಬೇಕು ಎಂದ, ನಾಲ್ಕು ವಿಧದ ಹಣ್ಣು ಕೊಡುವ ಹಲಸಿನ ಮರವನ್ನು ಕೇಳಿದಾಗಲೂ ಒಪ್ಪಲಿಲ್ಲ. ಅವರು ಬಲ್ಲಾಳನ ಅಜ್ಜಿಯರ ಎರಡು ತೋಟಗಳನ್ನು ಕೇಳಿದಾಗ ಬಲ್ಲಾಳನು ಸಿಟ್ಟಿನಿಂದ "ಇಂದು ಅಜ್ಜಿಯರ ತೋಟಗಳನ್ನು ಕೇಳಿದ ನೀವು ನಾಳೆ ಅಜ್ಜಿಯರನ್ನೇ ಕೊಡಬೇಕೆಂದು ಕೇಳುವಿರಿ" ಎಂದ. ಇದರಿಂದ ಕೋಪಗೊಂಡ ಕೋಟಿ ಚೆನ್ನಯರು ಬಲ್ಲಾಳನ ಬೀಡಿನಿಂದ ಹೊರಬಂದು, ಆ ಸೀಮೆಯನ್ನೇ ಬಿಟ್ಟುಹೋಗಲು ಸಿದ್ಧರಾದರು. ಆಗ ಬಲ್ಲಾಳನು ತನ್ನ ಪಟ್ಟದ ಆನೆಯನ್ನು ಛೂ ಬಿಟ್ಟ. ಕೋಟಿ ಚೆನ್ನಯರು ಆನೆಯಲ್ಲಿ "ನೀನು ನ್ಯಾಯಕ್ಕಾಗಿ ಹೋರಾಡಲು ಬಂದ ಆನೆಯಾದರೆ ನಿನಗೆ ನಮ್ಮ ಎದೆಯ ಮೇಲೆ ಜಾಗ ಕೊಡುತ್ತೇವೆ; ಆದರೆ ಅನ್ಯಾಯದ ಪಕ್ಷದಲ್ಲಿ ಬಂದಿರುವೆಯಾದರೆ ನಿನ್ನನ್ನು ಸೀಳಿಬಿಡುವೆವು" ಎಂದರು. ಬಂದ ಪಟ್ಟದ ಆನೆ ಹಿಂದೆ ಹೋಯಿತು. ಅದರ ನಂತರ ಕಳುಹಿಸಲ್ಪಟ್ಟ ಕುದುರೆಯೂ ಅವರ ಮಾತನ್ನು ಕೇಳಿ ಸುಮ್ಮನೆ ಹಿಂತಿರುಗಿತು. ಅರಮನೆಯ ಜಟ್ಟಿಗಳೂ ಕೋಟಿಚೆನ್ನಯರ ಬೆದರಿಕೆಗೆ ಹೆದರಿ ಹಿಂದಿರುಗಿದರು.

ಮುಂದೆ ತಾವು ದುರಸ್ತಿ ಮಾಡಲು ಕೊಟ್ಟ ನೇಗಿಲನ್ನು ಬಡಗಿಯಿಂದ ತೆಗೆದುಕೊಳ್ಳಲು ಹೋದರು. ಇವರೊಡನೆ ಒರಟಾಗಿ ನಡೆದುಕೊಂಡು ನಿಂದಿಸಿದ ಬಡಗಿಯನ್ನು ಚೆನ್ನಯನು ಕೊಂದ. ಅದೇ ರೀತಿ ನಿಂದಿಸಿದ ಅಗಸನೊಬ್ಬನನ್ನೂ ಚೆನ್ನಯನು ಕೊಂದ. ಮುಂದೆ ಸುಂಕದ ಕಟ್ಟೆಯೊಂದರಲ್ಲಿ ಖಡ್ಗಕ್ಕೆ ಸುಂಕಕೊಡಬೇಕೆಂದು ಸುಂಕದವನು ಕೇಳಿದಾಗ, ಚೆನ್ನಯನು ಅವನನ್ನೂ ಕೊಂದ. ಅಡಿಕೆ ತಿಂದು ತಲೆತಿರುಗಿದ ಚೆನ್ನಯನು ನೀರು ಕುಡಿಯಬೇಕೆಂದು ಅರವಟ್ಟಿಗೆಯಲ್ಲಿದ್ದ ಬ್ರಾಹ್ಮಣನಲ್ಲಿ ನೀರು ಕೇಳುತ್ತಾನೆ. ಶೂದ್ರರಿಗೆಂದು ಪ್ರತ್ಯೇಕವಾಗಿ ಇಟ್ಟಿದ್ದ ನೀರಿನ ಪಾತ್ರೆಯಲ್ಲಿ ನೀರು ಕುಡಿಯಲು ಅವರು ಒಪ್ಪದೆ, ತಮ್ಮ ಕತ್ತಿಗಳ ಮೇಲೆ ನೀರು ಸುರಿಯಲು ಹೇಳಿ, ನೀರು ಕುಡಿಯುತ್ತಾರೆ. ಆ ಬ್ರಾಹ್ಮಣನು ಮುಂದೆ ನಡೆಯುವ ಘಟನೆಗಳ ಬಗ್ಗೆ ಅವರಿಗೆ ಭವಿಷ್ಯ ತಿಳಿಸುತ್ತಾನೆ. ದಾರಿಯಲ್ಲಿ ಅವರಿಗೆ ಕಾಯಿ ಮಾರುವ ಕಾಂತಕ್ಕೆ ಸಿಕ್ಕುತ್ತಾಳೆ. ಬಾಕುಡರು, ಕೊರಗರು, ಮುಗೇರರು ಅವರ ಆಳುಗಳಾಗುತ್ತಾರೆ. ದನ ಕಾಯುವ ಹುಡುಗರು ಜಾಣ್ಮೆಯ ಒಗಟುಗಳನ್ನು ಹೇಳುತ್ತಾರೆ.

ಬಳಿಕ ಕೋಟಿ ಚೆನ್ನಯ್ಯರು ತಮ್ಮ ಅಕ್ಕ ಕಿನ್ನಿದಾರುವಿನಲ್ಲಿಗೆ ಬರುತ್ತಾರೆ. ಆಗ ಭಾವ ಪಯ್ಯಬೈದ್ಯ ಇರುವುದಿಲ್ಲ. ಕಿನ್ನಿದಾರುವು ತಮ್ಮಂದಿರನ್ನು ಗುರುತಿಸಿದ ಮೇಲೆ ಬಹಳ ಸಂತೋಷಗೊಳ್ಳುತ್ತಾಳೆ. ಅಷ್ಟರಲ್ಲಿ ಪಯ್ಯಬೈದ್ಯನೂ ಅಲ್ಲಿಗೆ ಬರುತ್ತಾನೆ. ಕೋಟಿ ಚೆನ್ನಯರು ಅವನಲ್ಲಿ ಪಂಜದ ಕೇಮರ ಬಲ್ಲಾಳನ ವಿಚಾರವನ್ನು ಕೇಳಿ ತಿಳಿದುಕೊಳ್ಳುತ್ತಾರೆ. ಹಿಂದಿನ ಬಲ್ಲಾಳನಿಗೆ ತಾನು ಆಪ್ತನಾಗಿದ್ದೆನೆಂದೂ ಈಗಿನ ಬಲ್ಲಾಳನಿಗೆ ಚೆಂದಗಿಡಿ ಬೈದ್ಯನು ಆಪ್ತನೆಂದೂ ಪಯ್ಯಬೈದ್ಯನು ತಿಳಿಸುತ್ತಾನೆ.

ಪಂಜದ ಕೇಮರ ಬಲ್ಲಾಳನ ಅರಮನೆಗೆ ಹೋಗುವ ದಾರಿಯಲ್ಲಿ ಕೋಟಿ ಚೆನ್ನಯರು ಚೆಂದಗಿಡಿಯ ಕುತಂತ್ರವನ್ನು ತಿಳಿದರು. ದೂರದಿಂದಲೇ ಇವರನ್ನು ಕಂಡ ಕೇಮರ ಬಲ್ಲಾಳನು ತನ್ನ ಸ್ಥಾನದಲ್ಲಿ ಸೇವಕನೊಬ್ಬನನ್ನು ಕುಳ್ಳಿರಿಸಿ ತಾನು ಮರೆಯಲ್ಲಿದ್ದ. ಕೋಟಿ ಚೆನ್ನಯರು ಇದನ್ನು ಬಯಲುಮಾಡಿದರು ಅಷ್ಟರಲ್ಲಿ ಕೇಮರ ಬಲ್ಲಾಳನಿಗೆ ಪೆರ್ಮಲೆಯಿಂದ ಒಂದು ಪತ್ರ ಬಂದಿತು. ಕೋಟಿ ಚೆನ್ನಯರು ಬುದ್ಯಂತನನ್ನು ಕೊಂದ ಕೊಲೆಗಡುಕರೆಂದೂ ಅವರನ್ನು ಸಂಕೋಲೆಯಲ್ಲಿ ಬಿಗಿದು ಕೋಣೆಯಲ್ಲಿ ಹಾಕಿ ಬಂಧಿಸಬೇಕೆಂದೂ ಅದರಲ್ಲಿ ಬರೆದಿತ್ತು. ಅದನ್ನೋದಿದ ಬಲ್ಲಾಳನು ಕೋಟಿ ಚೆನ್ನಯರನ್ನು ಉಪ್ಪರಿಗೆ ತೋರಿಸಲೆಂದು ಉಪಾಯದಿಂದ ಕರೆದುಕೊಂಡು ಹೋಗಿ, ಅವರ ಕಾಲುಗಳನ್ನು ಸರಪಳಿಯಿಂದ ಬಿಗಿದು, ಬಾಗಿಲು ಮುಚ್ಚಿಬಿಟ್ಟನು.

ಸೆರೆಗೆ ಬಿದ್ದ ಕೋಟಿ ಚೆನ್ನಯರು ಜಿರ್ಮಲ್ ಭೂತವನ್ನು ಪ್ರಾರ್ಥಿಸಿ ತಮ್ಮನ್ನು ರಕ್ಷಿಸಬೇಕೆಂದು ಕೇಳಿಕೊಂಡರು. ಈ ಪ್ರಾರ್ಥನೆಗೆ ಉತ್ತರವಾಗಿ ಅವರ ತೋಳಿಗೆ ಅಮಾನುಷ ಶಕ್ತಿ ಬಂದು, ಸರಪಳಿಗಳು

ತುಂಡಾದುವು. ಒದೆತಕ್ಕೆ ಉಪ್ಪರಿಗೆಯ ಗೋಡೆಯ ಕಲ್ಲುಗಳು ಕುಸಿದುಬಿದ್ದುವು. ಅವರು ಸಿಟ್ಟಿನಿಂದ ಬಲ್ಲಾಳನನ್ನು ಬೈಯ್ದು ಎಣಂಬೂರು ಸೀಮೆಯ ಕಡೆಗೆ ಬಂದರು. ದಾರಿಯಲ್ಲಿ ಪಂಜ ಮತ್ತು ಎಣಂಬೂರುಗಳ ಮಧ್ಯೆ ಇದ್ದ ಗಡಿಕಲ್ಲು ಕಾಣಸಿಕ್ಕಿತು. ಹಿಂದೆ ಪಂಜ ರಾಜ್ಯವು ಎಣಂಬೂರು ರಾಜ್ಯಕ್ಕೆ ಕಪ್ಪ ಸಲ್ಲಿಸುತ್ತಿತ್ತೆಂದೂ ಆಮೇಲೆ ಪಂಜವು ಎಣಂಬೂರಿಗಿಂತ ಪ್ರಬಲವಾಗಿ ಏಳು ಅಡಿ ಜಾಗವನ್ನು ಪಂಜಕ್ಕೆ ಸೇರಿಸಲಾಯಿತೆಂದೂ ಅದರಲ್ಲಿ ಬರೆದಿತ್ತು. ಕೋಟಿಚೆನ್ನಯರು ಆ ಕಲ್ಲನ್ನು ಅಗೆದು ಏಳು ಅಡಿ ದೂರದಲ್ಲಿ ಹುಗಿದು ಎಣಂಬೂರಿಗೆ ಏಳು ಅಡಿ ಜಾಗವನ್ನು ಕೊಟ್ಟರು.

ಅಲ್ಲಿಂದ ಎಣಂಬೂರು ಅರಮನೆಗೆ ಹೋಗುವ ದಾರಿಯಲ್ಲಿ ಕೆಮ್ಮಲೆಯ ಬೆರ್ಮೆರ್ ಭೂತದ ಸ್ಥಾನ ಕಂಡಿತು. ಸೋದರರಿಬ್ಬರೂ ಅದರ ದರ್ಶನ ಮಾಡಿದರು. ಭೂತವು ಅವರಿಗೆ ಪ್ರತ್ಯಕ್ಷವಾಯಿತು. ಅದು ಬಿಳಿ ಕುದುರೆಯ ಮೇಲೆ ಬೆಳ್ಳಿಯ ಛತ್ರವನ್ನು ಹಿಡಿದು ಕುಳಿತಿತ್ತು. ಅದರ ಬಲಭುಜದಲ್ಲಿ ಬಿಳಿ ಶಂಖದ ಮಾಲೆಯಿತ್ತು, ಎಡಭುಜದಲ್ಲಿ ಕಪ್ಪು ಶಂಖದ ಮಾಲೆಯಿತ್ತು. ತಲೆಗೆ ಲೋಹದ ಟೊಪ್ಪಿಗೆಯಿತ್ತು. ಎದೆಯನ್ನು ಗುರಾಣಿ ಮುಚ್ಚಿತ್ತು. ಅದಕ್ಕೆ ಅವರು ಹೂ ಅರ್ಪಿಸಿ ಪೂಜಿಸಲು, ಅದು ಅವರಿಗೆ ಪ್ರಸಾದ ನೀಡಿತು. ಮುಂದೆ ಅವರು ಎಣಂಬೂರು ಬಲ್ಲಾಳನ ಓಲಗಕ್ಕೆ ಹೋದರು. ಬಲ್ಲಾಳನು ಇವರಿಗೆ ಬೇಸಾಯಕ್ಕಾಗಿ ಜಮೀನು ಕೊಟ್ಟನು. ಅವರು ಅಲ್ಲಿ ಬೇಸಾಯ ಆರಂಭಿಸಿದರು. ಆದರೆ ಮುಂಗಾರಿನ ಬೆಳೆಯನ್ನು ಹಂದಿಗಳು ಹಾಳು ಮಾಡಿದವು. ಕೋಟಿ ಚೆನ್ನಯರ ಕೇಳಿಕೆಯಂತೆ ಬಲ್ಲಾಳನು ಬೇಟೆಯ ಏರ್ಪಾಡು ಮಾಡಿದನು. ಗಟ್ಟದ ಮೇಲಿನಿಂದ ಬೇಟೆನಾಯಿಗಳನ್ನು ಕರೆಸಲಾಯಿತು.

ಬೇಟೆಯ ವೇಳೆ ಕೋಟಿಯು ದೊಡ್ಡ ಹಂದಿಯೊಂದನ್ನು ಬಾಣದಿಂದ ಕೆಡವಿದ. ಪಂಜದ ಬಲ್ಲಾಳನ ಮೇಲೆ ಮುಯ್ಯಿ ತೀರಿಸಲಿಕ್ಕಾಗಿ ಸತ್ತ ಹಂದಿಯ ಮೇಲೆ ನೀರು ಚಿಮುಕಿಸಿ ಬೆರ್ಮೆರನ್ನು ನೆನೆದು ಅದನ್ನು ಮತ್ತೆ ಬದುಕಿಸಿದ. ಆ ಹಂದಿಯು ಎದ್ದು ಪಂಜದ ಕಡೆಗೆ ಓಡಿತು. ಅದು ಪಂಜದ ಗದ್ದೆಯ ಹತ್ತಿರ ಬಂದಾಗ ಕೋಟಿಯು ಅದಕ್ಕೊಂದು ಬಾಣಬಿಟ್ಟ. ಸತ್ತುಬಿದ್ದ ಹಂದಿಗಾಗಿ ಪಂಜದವರಿಗೂ ಕೋಟಿಚೆನ್ನಯರಿಗೂ ಕಲಹವಾಯಿತು. ಕೋಟಿ ಚೆನ್ನಯರ ಬಾಣದ ಪೆಟ್ಟು ತಡೆಯಲಾರದೆ ಪಂಜದ ಜನರು ಅನೇಕರು ಸತ್ತು ಹೋದರು, ಉಳಿದವರು ಓಡಿಹೋದರು.

ಹಂದಿಯನ್ನು ಬೇಟೆಯಾಡಿದ ಘಟನೆಯಿಂದ ಪಂಜದ ಬಲ್ಲಾಳನಿಗೆ ಬಹಳ ಅಸಮಾಧಾನವಾಗಿತ್ತು. ಅವನು ಎಣಂಬೂರು ಬಲ್ಲಾಳನಿಗೆ ಮೂದಲಿಕೆಯ ಪತ್ರವೊಂದನ್ನು ಬರೆಸಿದನು. ಆ ಪತ್ರದಲ್ಲಿ ಕೋಟಿ ಚೆನ್ನಯರನ್ನು ಹಳಿದದ್ದು ಮಾತ್ರವಲ್ಲದೆ, ಎಣಂಬೂರು ಬಲ್ಲಾಳರು ಸ್ತ್ರೀವೇಷ ಧರಿಸಬೇಕೆಂದು ಅವಹೇಳನ ಮಾಡಲಾಗಿತ್ತು. ಇದನ್ನು ಓದಿ ಎಣಂಬೂರು ಬಲ್ಲಾಳ ಮತ್ತು ಕೋಟಿ ಚೆನ್ನಯರಿಗೆ ವಿಪರೀತವಾದ ಕೋಪ ಬಂತು. ಕೋಟಿ ಚೆನ್ನಯರು ತಮ್ಮ ಪರಾಕ್ರಮದ ದ್ಯೋತಕವಾಗಿ ಒಂದು ಮುಡಿ ಸಾಸಿವೆಯನ್ನು ತಿಕ್ಕಿ ಧೂಳು ಮಾಡುವುದು, ಕಬ್ಬಿಣದ ನಾಲ್ಕು ಸರಪಳಿಗಳನ್ನು ತುಂಡರಿಸುವುದು – ಇಂತಹ ಪೌರುಷ ಪ್ರದರ್ಶನಗಳನ್ನು ಮಾಡಿ ತೋರಿಸುತ್ತಾರೆ.

ಪಂಜ ಸೀಮೆ ಮತ್ತು ಎಣಂಬೂರು ಸೀಮೆಯವರ ನಡುವೆ ಯುದ್ಧ ಆರಂಭವಾಯಿತು. ಕೋಟಿ ಚೆನ್ನಯರು ವೀರಾವೇಶದಿಂದ ಹೋರಾಡಿದರು. ಏಳು ರಾತ್ರಿ ಏಳು ಹಗಲು ಯುದ್ಧ ನಡೆಯಿತು. ಚೆನ್ನಯನು ಯುದ್ಧ ಮಾಡುತ್ತಿದ್ದಾಗ ಕೋಟಿಯು ಪೀಳ್ಯದೆಲೆ ಜಗಿಯಲು ಕುಳಿತುಕೊಂಡ. ಆಗ ಚಂದಗಿಡಿಯು ಹಿಂದಿನಿಂದ ಒಂದು ಬಾಣ ಬಿಟ್ಟ. ಆ ಬಾಣವು ಕೋಟಿಯ ಮೊಣಕಾಲಿಗೆ ತಾಗಿತು. ಆಗ ಕೋಟಿಯು ಆರ್ಭಟಿಸಿದ. "ಓ ತಮ್ಮಾ, ಪಂಜದ ನಾಯಿಯು ನನ್ನನ್ನು ಹಿಂದಿನಿಂದ ಕಚ್ಚಿತು. ಅದು ಕುಲೀನ ನಾಯಿ

ಯಾಗಿರುತ್ತಿದ್ದರೆ ಮುಂದೆ ಬಂದು ಕಚ್ಚುತ್ತಿತ್ತು. ಈ ಬಾಣವನ್ನು ನಾನು ಮುಟ್ಟಲಾರೆ, ಅದನ್ನು ನೋಡಲಾರೆ"ಹೀಗೆನ್ನುತ್ತ ಆ ಬಾಣವನ್ನು ಕಾಲಿನಿಂದ ಒದೆದ. ಅದು ಚಂದಗಿಡಿಯ ಎದೆಗೆ ನಾಟಲು, ಅವನು ಸತ್ತು ಹೋದ. ಯುದ್ಧದಲ್ಲಿ ಎಣಂಬೂರು ಬಲ್ಲಾಳನಿಗೆ ಜಯವಾಯಿತು. ಆದರ ಬಾಣದ ಆಘಾತಕ್ಕೆ ಒಳಗಾದ ಕೋಟಿಯು ಸಾಯುವ ಹಂತದಲ್ಲಿದ್ದ. "ನನ್ನಿಂದ ನಡೆಯಲಾರಗದು ಒಡೆಯಾ, ನನ್ನ ಬಾಯಿಗೊಂದಿಷ್ಟು ನೀರು ಸುರಿಯಿರಿ. ನಾನು ಸ್ವರ್ಗಕ್ಕೆ ಹೋಗುತ್ತೇನೆ" ಎಂದ ಕೋಟಿ. ಬಲ್ಲಾಳ ಕೆಂದಾಳಿ ಎಳನೀರನ್ನು ತರಿಸಿದ. ಮರುಗುತ್ತಿದ್ದ ಬಲ್ಲಾಳನನ್ನು ಸಮಾಧಾನಪಡಿಸುತ್ತಾ ಕೋಟಿ ಹೇಳಿದ : "ನಾವು ಜೀವದಲ್ಲಿದ್ದಾಗ ಸಹಾಯ ಮಾಡಿದಂತೆಯೇ ಮುಂದೆಯೂ ಸಹಾಯ ಮಾಡುತ್ತೇವೆ. ನಮ್ಮ ಖಡ್ಗಗಳನ್ನು ಯುದ್ಧರಂಗದಲ್ಲಿ ಇಟ್ಟರೆ ಸಾಕು. ನಾವು ಭೂತಗಳಾಗಿ ಮನುಷ್ಯರಂತೆಯೇ ನಿಮ್ಮ ಪರವಾಗಿ ಕಾದಾಡುತ್ತೇವೆ. ಸತ್ತಮೇಲೂ ನಿಮ್ಮ ಬೆಂಬಲಕ್ಕೆ ನಿಲ್ಲುತ್ತೇವೆ." "ಓ ಕೋಟಿ ಬೈದ್ಯ ಇಂದಿನ ತನಕ ನಾನು ಎರಡು ಆನೆಗಳನ್ನು ಪಡೆದಿದ್ದೆ. ಈಗ ಒಂದು ಆನೆಯನ್ನು ಕಳೆದುಕೊಳ್ಳುತ್ತೇನೆ" ಎಂದು ಅಳುತ್ತ ಬಲ್ಲಾಳನು ಕೋಟಿಯ ಬಾಯಿಗೆ ಎಳನೀರನ್ನು ಸುರಿದ. ಶವ ದಹನದ ಬಳಿಕ ಕೋಟಿಯ ಆತ್ಮವು ಬ್ರಹ್ಮನ ಬಳಿಗೆ ಹೋಯಿತು. ತಮ್ಮನಿಲ್ಲದೆ ಒಂಟಿಯಾಗಿ ತನ್ನ ಆಸ್ಥಾನಕ್ಕೆ ಬರಕೂಡದೆಂದು ಬ್ರಹ್ಮನು ಕೋಟಿಗೆ ಹೇಳಿದ. ಕೋಟಿಯು ಬ್ರಹ್ಮಲೋಕದಿಂದ ಹಿಂದಕ್ಕೆ ಬರಬೇಕಾಯಿತು.

ಚೆನ್ನಯನು ಬಾವಿಗೆ ಇಣುಕಿ ತನ್ನ ಮುಖದ ಪ್ರತಿಬಿಂಬವನ್ನು ನೋಡುವಾಗ ಅಣ್ಣನಿಲ್ಲದೆ ತಾನೇಕೆ ಬದುಕಬೇಕೆಂದು ಅನ್ನಿಸಿತು. ಅವನು ಒಂದು ಬಂಡೆಕಲ್ಲಿಗೆ ತನ್ನ ತಲೆಯನ್ನು ಅಪ್ಪಳಿಸಿ, ಆತ್ಮಹತ್ಯೆ ಮಾಡಿಕೊಂಡ. ಈ ದುರಂತ ವಾರ್ತೆಯನ್ನು ಕೇಳಿದ ಬಲ್ಲಾಳನು ಗೋಳಿಟ್ಟು, ಬಳಿಕ ಚೆನ್ನಯನ ಶವಸಂಸ್ಕಾರವನ್ನು ವಿಜೃಂಭಣೆಯಿಂದ ನಡೆಸಿದ.

ಇಬ್ಬರ ಆತ್ಮಗಳೂ ಬ್ರಹ್ಮದೇವರಲ್ಲಿಗೆ ಹೋದಾಗ, ಅವರಿಬ್ಬರೂ ಶುದ್ಧಮಾಡಿಸಿ ಬರಬೇಕೆಂದು ಹೇಳಲಾಯಿತು. ಬಲ್ಲಾಳರು ಆ ಆತ್ಮಗಳಿಗೆ ಶುದ್ಧಿ ಮಾಡಿದರು. ಬಳಿಕ ಆ ಆತ್ಮಗಳು ಗಂಗೆಯಲ್ಲಿ ಸ್ನಾನಮಾಡಿ, ಹದಿನಾರು ಪುಣ್ಯತೀರ್ಥಗಳಲ್ಲಿ ನೀರು ಕುಡಿದು ಪಾಪ ಪರಿಹಾರ ಮಾಡಿಕೊಂಡುವು. ಇಪ್ಪತ್ತನಾಲ್ಕು ಪುಣ್ಯ ಕ್ಷೇತ್ರಗಳಲ್ಲಿ ಮಿಂದು ಪುಣ್ಯವನ್ನು ಗಳಿಸಿಕೊಂಡರು. ಆಮೇಲೆ ಬ್ರಹ್ಮನ ಆಸ್ಥಾನಕ್ಕೆ ಹೋದಾಗ ಅವನು ಅವರನ್ನು ಸನ್ಮಾನಿಸಿ ತನ್ನ ಸಭೆಯಲ್ಲಿ ಅವರನ್ನು ಪ್ರಮುಖರನ್ನಾಗಿ ನೇಮಿಸಿದ. ಹೀಗೆಯೇ ಬ್ರಹ್ಮನಂತೆಯೇ ಕೋಟಿಚೆನ್ನಯರನ್ನು ಗೌರವಿಸುವಂತಾಯಿತು.

ಈ ಕೋಟಿಚೆನ್ನಯ ಪಾಡ್ದನವು ಅನೇಕ ದೃಷ್ಟಿಗಳಿಂದ ಮಹತ್ವಪೂರ್ಣವಾದುದು. ಬಿಲ್ಲವರ ಇಬ್ಬರು ಅವಳಿ ತರುಣವೀರರು. ಪ್ರತಿಷ್ಠಿತ ವರ್ಗದವರ ದಬ್ಬಾಳಿಕೆಯ ವಿರುದ್ಧ ಹೋರಾಡುತ್ತಾ ಹೋಗುವುದನ್ನು, ಅಂತಹ ಹೋರಾಟವೇ ಕೊನೆಗೆ ಅವರ ದುರ್ಮರಣಕ್ಕೆ ಕಾರಣವಾಗುವುದನ್ನು ಸವಿವರವಾಗಿ ಇಲ್ಲಿ ನೋಡಬಹುದು. ಆಗಿನ ಕಾಲದ ಬಲ್ಲಾಳರ ನಡುವಿನ ದ್ವೇಷ, ಮತ್ಸರ, ಸ್ಪರ್ಧಾ ಮನೋಭಾವ, ಬಲ್ಲಾಳರ ಕೈಕೆಳಗಿನ ಮಂತ್ರಿಗಳ ಕುಟಿಲತೆ, ಚಾಣಾಕ್ಷತನ ಇವುಗಳಿಂದಾಗಿ ಹೇಗೆ ಕೆಲವು ನಾಡುಗಳ ಇಡೀ ವ್ಯವಸ್ಥೆಯೇ ಹಾನಿಗೆ ಒಳಗಾಗಿತ್ತು ಎನ್ನುವುದನ್ನು ಕೋಟಿ ಚೆನ್ನಯ ಪಾಡ್ದನವು ತಿಳಿಸುತ್ತದೆ. ಸಾವಧಾನಚಿತ್ತದವನಾಗಿ ಕಾಣಿಸುವ ಕೋಟಿ, ದುಡುಕು ಸ್ವಭಾವದವನಾಗಿ ಕಾಣಿಸುವ ಚೆನ್ನಯ – ಇವರಿಬ್ಬರ ಸಂಯೋಗದಿಂದಾಗಿ ಎರಡು ಭಿನ್ನ ವ್ಯಕ್ತಿತ್ವಗಳು ಒಂದುಗೂಡಿ ಕತೆಯ ದುರಂತಕ್ಕೆ ಕಾರಣವಾಗುತ್ತದೆ. ಹುಟ್ಟುವುದಕ್ಕೆ ಮೊದಲು ತಂದೆಯನ್ನು, ಹುಟ್ಟಿದ ಮೇಲೆ ಕೆಲವೇ ದಿನಗಳಲ್ಲಿ ತಾಯಿಯನ್ನು ಕಳೆದು ಈ ಹುಡುಗರು ಮಾವನ ಮತ್ತು ಪಡುಮಲೆ ಬಲ್ಲಾಳನ ಪೋಷಣೆಯಲ್ಲಿ ಬೆಳೆದು ಸಹಜವಾಗಿಯೇ ದುಡುಕು, ಹಟ, ಉದ್ಧಟತನಗಳನ್ನು ಮೈಗೂಡಿಸಿಕೊಂಡು – ಅದರಲ್ಲೂ ಪ್ರಧಾನವಾಗಿ ಚೆನ್ನಯನು – ಕತೆಯ ದುರಂತದಲ್ಲಿ ತಮ್ಮ ಪಾಲನ್ನೂ ಸಲ್ಲಿಸುತ್ತಾರೆ.

ಆದರೆ ಪಾಡ್ದನದ ಒಟ್ಟು ದುರಂತಕ್ಕೆ ಕೋಟಿ ಚೆನ್ನಯುರಷ್ಟೇ ಕಾರಣರಲ್ಲ. ಪಂಜದ ಕೇಮರ ಬಲ್ಲಾಳ ಮತ್ತು ಎಣ್ಮೂರಿನ ಬಲ್ಲಾಳರ ನಡುವಿನ ದ್ವೇಷ ತಮ್ಮ ತಮ್ಮ ನಾಡುಗಳ ಗಡಿಗೆ ಸಂಬಂಧಿಸಿದ್ದು. ಪಂಜದ ಬಲ್ಲಾಳನು ಕುತಂತ್ರಿಯಾಗಿ ಕ್ರೂರನಾಗಿ ಚಿತ್ರಿತವಾಗಿದ್ದರೆ, ಎಣ್ಮೂರಿನ ಬಲ್ಲಾಳನು ಸಾಧು ಸ್ವಭಾವದವನಾಗಿ, ಆದರೆ ದುರ್ಬಲನಾಗಿ ಕಾಣಿಸಿಕೊಳ್ಳುತ್ತಾನೆ. ಕತೆಯ ದುರಂತದಲ್ಲಿ ಈ ಇಬ್ಬರು ಬಲ್ಲಾಳರ ಗುಣಗಳಿಗೂ ಪಾಲು ಇದೆ. ಪಡುಮಲೆ ಬಲ್ಲಾಳನು ಆರಂಭದಲ್ಲೇ ಹೆಚ್ಚು ಉದಾರಿಯಾಗಿ, ವಾತ್ಸಲ್ಯ ಸ್ವಭಾವದವನಾಗಿ ಚಿತ್ರಿತವಾಗಿದ್ದರೆ, ಕೊನೆ ಕೊನೆಯಲ್ಲಿ ಬುದ್ಯಂತ ಕೋಟಿ-ಚೆನ್ನಯರ ಘರ್ಷಣೆಯ ಬಳಿಕ ಸಿಟ್ಟಿನ, ಹಠದ ವ್ಯಕ್ತಿಯಾಗಿ ಕಂಡುಬರುತ್ತಾನೆ. ಅವನ ಔದಾರ್ಯದ ಹಿಂದೆ ತನ್ನ ಕಾಲಿನ ನೋವನ್ನು ಗುಣಮಾಡಿದ ದೇಯಿ ಬೈದ್ಯೆದಿಯ ಬಗ್ಗೆ ಹೆಚ್ಚು ಲೌಕಿಕವಾದ ಸಂಬಂಧದ ಕಾರಣ ಇದೆ. ಪಡುಮಲೆ ಬಲ್ಲಾಳನ ಮಂತ್ರಿ ಮಲ್ಲಯ ಬುದ್ಯಂತನು ತನ್ನ ವರ್ಗಪ್ರತಿಷ್ಠೆಯಿಂದ, ಸ್ಥಾನದ ಅಹಂಕಾರದಿಂದ ಕೋಟಿ-ಚೆನ್ನಯರನ್ನು ಕೆಣಕುತ್ತಾನೆ. ಆ ಮೂಲಕ ತನ್ನ ಸಾವನ್ನು ತಂದುಕೊಳ್ಳುವುದಷ್ಟೇ ಅಲ್ಲ, ಮುಂದಿನ ಎಲ್ಲ ದುರಂತಗಳಿಗೂ ಬೀಜ ಸ್ವರೂಪದವನಾಗುತ್ತಾನೆ. ಇಲ್ಲಿ ಕೆಟ್ಟ ಮತ್ತು ಒಳ್ಳೆಯ ಎನ್ನುವ ತೀರ ವಿರುದ್ಧವಾದ ಎರಡು ಮೌಲ್ಯಗಳ ಸಂಘರ್ಷದ ಜೊತೆಗೆ ಪಡುಮಲೆ ಬಲ್ಲಾಳನಂತಹ ಸಮ್ಮಿಶ್ರ ವ್ಯಕ್ತಿತ್ವದ ಪಾತ್ರಗಳು ಕಾಣಸಿಗುತ್ತವೆ. ಈ ರೀತಿ ಪಡುಮಲೆ ಬಲ್ಲಾಳನಿಗೆ ಬೇಟೆಯಾಡಲು ಹೋದಾಗ ಕಾಡಿನಲ್ಲಿ ತಾಗಿದ ನಂಜಿನ ಮುಳ್ಳಿನಿಂದ ಆರಂಭವಾಗಿ ಕೋಟಿ ಚೆನ್ನಯರ ಮರಣದವರೆಗೆ ದುರಂತದ ಬೆಳವಣಿಗೆ ನಂಜಿನ ವಾತಾವರಣದಲ್ಲಿಯೇ ಮುಂದುವರಿಯುತ್ತದೆ. ಈ ದುರಂತ ಕಾವ್ಯದಲ್ಲಿ ಆ ಕಾಲದ ವರ್ಗ, ಜಾತಿ ಸಂಘರ್ಷದ ಸಾಮಾಜಿಕ ಧ್ವನಿಗಳು ಇರುವುದು. ಈ ಪಾಡ್ದನದ ಸಾರ್ವತ್ರಿಕತೆಗೆ ಮತ್ತು ಜನಪ್ರಿಯತೆಗೆ ಕಾರಣವಾಗಿದೆ.

ಸಾಂಸ್ಕೃತಿಕವಾಗಿ 'ಕೋಟಿ-ಚೆನ್ನಯ' ಪಾಡ್ದನವು ಪಾಡ್ದನಗಳಲ್ಲೆಲ್ಲಾ ಬಹಳ ಮುಖ್ಯವಾದುದು. ಪ್ರಾಚೀನ ತುಳುನಾಡಿನ ಸಮಾಜದ ಜಾತಿವೃತ್ತಿಗಳ ಸ್ವರೂಪ, ನಂಬಿಕೆಗಳು, ಪದ್ಧತಿಗಳು, ಆಚರಣೆಗಳು, ಯುದ್ಧದ ಕ್ರಮ, ಬೇಸಾಯದ ವಿಧಾನ, ಸಂಚಾರ ಸಂಪರ್ಕ ಸಾಧನಗಳ ರೀತಿಗಳು, ಮನೋರಂಜಕ ಕ್ರೀಡೆಗಳ ಬೇರೆ ಬೇರೆ ವಿಧಗಳು, ಆರ್ಥಿಕ ವ್ಯವಸ್ಥೆಯ ಅಂಶಗಳು ಮುಂತಾದ ಅನೇಕ ಸಂಗತಿಗಳನ್ನು ವಿವರವಾಗಿ ಈ ಪಾಡ್ದನದಲ್ಲಿ ಕಾಣಿಸಿಕೊಂಡಿವೆ ('ಕೋಟಿ-ಚೆನ್ನಯ' ಪಾಡ್ದನದಲ್ಲಿ ವ್ಯಕ್ತವಾಗುವ ತುಳುನಾಡಿನ ಸಂಸ್ಕೃತಿಯ ಬೇರೆ ಬೇರೆ ಅಂಶಗಳನ್ನು ಪ್ರತ್ಯೇಕವಾಗಿ ವಿವರವಾಗಿ ಚರ್ಚಿಸಲಾಗಿದೆ.).

'ಕೋಟಿ-ಚೆನ್ನಯ' ಪಾಡ್ದನದ ಕತೆ ನಡೆದ ಪ್ರದೇಶ ಈಗಿನ ಸುಳ್ಯ ತಾಲೂಕಿನ ಮೂರು ನಾಡುಗಳಾದ ಪಡುಮಲೆ, ಪಂಜ ಮತ್ತು ಎಣ್ಮೂರು. ಬ್ರಾಹ್ಮಣರ ಹುಡುಗಿ ದೇಯಿಯನ್ನು ಕಣ್ಣಿಗೆ ಬಟ್ಟೆಕಟ್ಟಿ ಬಿಟ್ಟ ಸ್ಥಳವಾದ ಸಂಕಮಲೆ, ಕಾಂತಣ್ಣ ಬೈದ್ಯನ ಸ್ಥಳವಾದ ಕೊರ್ಗೇಲ ದೋಬೊ, ಬ್ರಹ್ಮನ ಸ್ಥಾನವುಳ್ಳ ಕೆಮ್ಮಲೆ, ಪೈಯ್ಯ ಬೈದ್ಯನಿರುವ ಸ್ಥಳವಾದ ಪಳ್ಳಿ, ಬೇಟೆಯಾಡುವ ಸ್ಥಳಗಳಾದ ಸಂಕಮಲೆ, ಸೀಮುಳ್ಳ ಮಲೆ-ಆನೆ ಕಲ್ಲು, ತುಪ್ಪೆ ಕಲ್ಲು, ಪಂಜ, ಎಣ್ಮೂರುಗಳ ನಡುವೆ ಕೋಟಿ-ಚೆನ್ನಯರು ಹಂದಿಯನ್ನು ಬೇಟೆಯಾಡಿದ ಸ್ಥಳ 'ಮಂಜೊಲು ಪಾದೆ' ಈ ಎಲ್ಲಾ ಸ್ಥಳಗಳು ಸಾಮಾನ್ಯವಾಗಿ ಈಗಲೂ ಸುಳ್ಯ ತಾಲ್ಲೂಕಿನಲ್ಲಿ ಕಾಣಬಹುದಾದಂತಹ ಜಾಗಗಳು.

(ಕೋಟಿ-ಚೆನ್ನಯ ಪಾಡ್ದನದ ರಚನೆಯ ಕಾಲವನ್ನು "ಪಾಡ್ದನಗಳಲ್ಲಿ ಕಾಲ ನಿರ್ಣಯ" ಎನ್ನುವ ಭಾಗದಲ್ಲಿ ಚರ್ಚಿಸಲಾಗಿದೆ.)

"ಕೋಟಿ-ಚೆನ್ನಯ" ಪಾಡ್ದನದಲ್ಲಿ ಇರುವ ಆಶಯಗಳಲ್ಲಿ ಮುಖ್ಯವಾದುದು ಅವಳಿ ಸಾಂಸ್ಕೃತಿಕ ವೀರರನ್ನು ಕುರಿತದ್ದು – A 515.1.1 Twin culture heroes. ಹಾಗೆಯೇ ಮಂತ್ರವಿದ್ಯೆಗೆ ಸಂಬಂಧಿಸಿದ ಅನೇಕ ಆಶಯಗಳು ದೊರೆಯುತ್ತವೆ;

ಅಕಾಲಮರಣವನ್ನು ಪಡೆದ ಅವಳಿ ವೀರರಾದ ಕೋಟಿ-ಚೆನ್ನಯರನ್ನು ದೈವಗಳ ಸ್ವರೂಪದಲ್ಲಿ ಸಾಂಸ್ಕೃತಿಕ ವೀರರ ರೀತಿಯಲ್ಲಿ ಇಂದು ಆರಾಧಿಸುತ್ತಾರೆ. ಕೋಟಿ-ಚೆನ್ನಯರು ಬೈದ್ಯರು ಜಾತಿಯವರು (ಬಿಲ್ಲವರು). ಆದುದರಿಂದ ಇಂತಹ ಕೋಟಿ-ಚೆನ್ನಯರ ಆರಾಧನೆಯ ಗುಡಿಗಳನ್ನು "ಬೈದರ್ಕಳ ಸ್ಥಾನ" ಎಂದು ಕರೆಯುತ್ತಾರೆ. ಇವುಗಳಿಗೆ "ಬೈದರ್ಕಳ ಗರಡಿ" ಎಂಬ ಹೆಸರು ಬಳಕೆಯಲ್ಲಿದೆ. 'ಗರಡಿ' ಎಂದರೆ 'ವ್ಯಾಯಾಮ ಶಾಲೆ' ಎಂದು ಅರ್ಥ. ಪಂಜದ ಕೇಮರ ಬಲ್ಲಾಳನ ಸೀಮೆಯ ಗರಡಿಯಲ್ಲಿ ನಾನಾ ರೀತಿಯ ಯುದ್ಧವಿದ್ಯೆಗಳನ್ನು ಕಲಿಸುತ್ತಿದ್ದರು ಎಂದು ಪಾಡ್ದನವು ಹೇಳುತ್ತದೆ. ಕೋಟಿ-ಚೆನ್ನಯರು ಗರಡಿಗಳಲ್ಲಿ ಅಭ್ಯಾಸವನ್ನು ಮಾಡಿದರು ಎಂದು ಗೊತ್ತಾಗುತ್ತದೆ, ಅದಕ್ಕಾಗಿ ಕೋಟಿ-ಚೆನ್ನಯರ ಗುಡಿಯನ್ನು ಬೈದರ್ಕಳ ಗರಡಿ' ಎಂದು ಕರೆದಿರಬಹುದು. ಅಕಾಲ ಮರಣವನ್ನು ಪಡೆದವರು ಕೋಟಿ-ಚೆನ್ನಯರು. ಕೋಟಿಯು ಯುದ್ಧ ಮಾಡುತ್ತಾ ಮಡಿಯುತ್ತಾನೆ. ಚೆನ್ನಯನು ಅಗಲಿದ ಅಣ್ಣನ ಮೇಲಿನ ಮೋಹದಿಂದ ಆತ್ಮಹತ್ಯೆಯ ಮೂಲಕ ಮರಣವನ್ನು ಅಪ್ಪುತ್ತಾನೆ. ಈ ರೀತಿ ಯುದ್ಧದಲ್ಲಿ ಮಡಿದವರು ಅಥವಾ ಆತ್ಮಹತ್ಯೆಯ ಮೂಲಕ ಸತ್ತವರು ದೆವ್ವಗಳಾಗಿ ಬಂದು ಮನುಷ್ಯರಿಗೆ ತೊಂದರೆ ಕೊಡುತ್ತಾರೆ ಎನ್ನುವುದು ಒಂದು ಆಶಯ. ಆ ಕಾರಣ ಕ್ಕಾಗಿಯೇ ಇರಬೇಕು ಕೋಟಿ-ಚೆನ್ನಯರು ಸತ್ತ ಮೇಲೆ ಶುದ್ಧದ ಸ್ನಾನವಾಗದೆ ಬ್ರಹ್ಮರಲ್ಲಿಗೆ ಪ್ರವೇಶ ಸಿಕ್ಕುವು ದಿಲ್ಲ. ಕೋಟಿ-ಚೆನ್ನಯರಿಬ್ಬರೂ ಬ್ರಹ್ಮರ ಭಕ್ತರಾಗಿ ಇರುವುದು ಅವರಿಬ್ಬರನ್ನು ದೈವತ್ವದ ಮಟ್ಟಕ್ಕೆ ಏರಿಸಲು ಇನ್ನೊಂದು ಕಾರಣ. ತಮ್ಮ ಬದುಕಿನ ಉದ್ದಕ್ಕೂ ಸಾಹಸಿಗಳಾಗಿ ಹೋರಾಡುತ್ತಾ ಬಂದಿರುವುದು ಮತ್ತೊಂದು ಕಾರಣ. ಈ ಎಲ್ಲ ಕಾರಣಗಳ ಜೊತೆಗೆ ಸಾಮಾಜಿಕವಾದ ಇನ್ನೊಂದು ಕಾರಣವನ್ನು ಇಲ್ಲಿ ಗುರುತಿಸಬಹುದು. ಕೋಟಿ-ಚೆನ್ನಯರು ಜಾತಿಯಿಂದ ಬಿಲ್ಲವರು. ಇಂತಹ ಕೋಟಿ-ಚೆನ್ನಯರ ಸ್ಥಾನಗಳನ್ನು ಮತ್ತು ಗರಡಿಗಳನ್ನು ಕಟ್ಟಿಸುವವರು, ಅವುಗಳನ್ನು ವಿಶೇಷವಾಗಿ ಆರಾಧಿಸುವವರು, ವರ್ಷಕ್ಕೆ ಒಂದು ಬಾರಿ ಈ ಬೈದರ್ಕಳ ನೇಮ (ಉತ್ಸವ) ವನ್ನು ನಡೆಸುವವರು ಬಿಲ್ಲವರು ಎನ್ನುವುದು ಬಹಳ ಮುಖ್ಯವಾದ ಸಂಗತಿ. ಉಳಿದ ಜಾತಿಯವರು ಕೋಟಿ-ಚೆನ್ನಯರನ್ನು ದೈವಗಳೆಂದು ನಂಬಿದರೂ ಅದರ ಉತ್ಸವಗಳಲ್ಲಿ ಪಾಲು ಗೊಂಡರೂ ಅವರನ್ನು ತಮ್ಮ ಕುಲದೈವಗಳು ಎಂದು ಅಂಗೀಕರಿಸಿಕೊಂಡಿಲ್ಲ. ಆದರೆ ಬಿಲ್ಲವರು ಕೋಟಿ-ಚೆನ್ನಯರನ್ನು ತಮ್ಮ ಕುಲದೇವರಂತೆ ಆರಾಧಿಸುತ್ತಾರೆ. ಸಾಮಾಜಿಕವಾಗಿ ಮಾತ್ರವಲ್ಲದೆ, ಧಾರ್ಮಿಕ ಮಟ್ಟ ದಲ್ಲಿ ಭಾವನಾತ್ಮಕವಾಗಿಯೂ 'ಕೋಟಿ-ಚೆನ್ನಯ' ಪುರಾಣ ಮತ್ತು ಆಚರಣೆಯ ಜೊತೆಗೆ ಇವರು ಸಂಬಂಧ ವನ್ನು ಇಟ್ಟುಕೊಂಡಿದ್ದಾರೆ.

ಕೋಟಿ-ಚೆನ್ನಯರ ಅಕ್ಕ ಕಿನ್ನಿದಾರುವಿನ ಬಗ್ಗೆ ಪಾಡ್ದನದಲ್ಲಿ ಒಂದು ಪ್ರಸಂಗ ಬರುತ್ತದೆ. ಕೋಟಿ-ಚೆನ್ನಯರು ಪಂಜದಲ್ಲಿ ಕಿನ್ನಿದಾರುವಿನ ಮನೆಗೆ ಹೋಗುವುದು, ಅವಳನ್ನು ಭೇಟಿಯಾಗುವುದು, ಅವಳು ಸಂಭ್ರಮದಿಂದ ತಮ್ಮಂದಿರನ್ನು ಸತ್ಕರಿಸುವುದು. ಆದರೆ ಮುಂದೆ ಕತೆಯಲ್ಲಿ 'ಕಿನ್ನಿದಾರು ಏನಾದಳು' ಎಂಬ ಯಾವುದೇ ವಿಚಾರವು ಸಿಕ್ಕುವುದಿಲ್ಲ. ಅವಳ ಬದುಕಿನ ಮುಂದಿನ ವಿವರಗಳಾಗಲೀ ಅವಳ ಸಾವಿನ ಸಂಗತಿ ಯಾಗಲೀ ಪಾಡ್ದನದಲ್ಲಿ ಇಲ್ಲ ಆದರೆ ಆಚರಣೆಯ ದೃಷ್ಟಿಯಿಂದ 'ಕೋಟಿ-ಚೆನ್ನಯ'ರ ಆರಾಧನೆಯ ಜೊತೆಗೆ ಕಿನ್ನಿದಾರು ಬರುತ್ತಾಳೆ. ಕೋಟಿ-ಚೆನ್ನಯರ ಗುಡಿಯ ಹತ್ತಿರದಲ್ಲಿ ಪ್ರತ್ಯೇಕವಾಗಿ ಕಿನ್ನಿದಾರುವಿಗೂ ಒಂದು ಗುಡಿಯನ್ನು ಕಟ್ಟಿಸುತ್ತಾರೆ. ಬೈದರ್ಕಳ ನೇಮದಲ್ಲಿ ಕೋಟಿ-ಚೆನ್ನಯರ ಜೊತೆಗೆ ಕಿನ್ನಿದಾರುವೂ ಇರುತ್ತಾಳೆ.

ಇಂದು ತುಳುನಾಡಿನಲ್ಲಿ ಕೋಟಿ-ಚೆನ್ನಯರ ಗುಡಿಗಳು ಅನೇಕ ಕಡೆಗಳಲ್ಲಿ ಕಾಣಿಸುತ್ತವೆ. ಆದರೆ ಇಂತಹ ಗುಡಿಗಳು ಕೋಟಿ-ಚೆನ್ನಯರ ಸಂಚಾರದ ಪ್ರಸರಣಕ್ಕೆ ಸಂಬಂಧಿಸಿದವು ಅಲ್ಲ. ಕೋಟಿ-ಚೆನ್ನಯರನ್ನು ನಂಬುವ, ಮುಖ್ಯವಾಗಿ ಬಿಲ್ಲವ ವರ್ಗದ ಜನರು ತಮ್ಮ ತಮ್ಮ ಊರುಗಳಲ್ಲಿ ಕ್ರಮೇಣ ಇಂತಹ ಗುಡಿಗಳನ್ನು ಕಟ್ಟಿಸುತ್ತಾ ಬಂದಿದ್ದಾರೆ. ಈ ರೀತಿಯ ಗುಡಿಗಳನ್ನು ಕಟ್ಟಿಸುವಾಗ ಮತ್ತು ಬೈದರ್ಕಳ ನೇಮವನ್ನು ಮಾಡುವಾಗ ಒಂದು

ಜನಪದ ನಂಬಿಕೆಯು ಪ್ರಚಲಿತವಾಗಿದೆ. ಯಾರ ಮನೆಯಲ್ಲಿ ಬೇಯಿಸಿದ ಭತ್ತವು ಮೊಳಕೆ ಬರುತ್ತದೆಯೋ ಅವರು ಕೋಟಿ–ಚೆನ್ನಯರಿಗೆ ಗುಡಿಗಳನ್ನು ಕಟ್ಟಿಸಬೇಕು ಮತ್ತು ಉತ್ಸವಗಳನ್ನು ಮಾಡಬೇಕು ಎನ್ನುವುದು ಆ ನಂಬಿಕೆ. ವಾಸ್ತವವಾಗಿ ಈ ನಂಬಿಕೆ ಕೆಲಸ ಮಾಡದಿದ್ದರೂ ಭಕ್ತಿಯ ದೃಷ್ಟಿಯಿಂದ ಇವುಗಳನ್ನು ಒಪ್ಪುತ್ತಾ ಕೋಟಿ-ಚೆನ್ನಯರನ್ನು ಆರಾಧಿಸುತ್ತಾ ಗುಂಡಿಗಳನ್ನು ಕಟ್ಟುತ್ತಾ ಹೋಗಿರುವುದು ಹೆಚ್ಚು ಸ್ಪಷ್ಟವಾದ ಸಂಗತಿ.

'ಕೋಟಿ–ಚೆನ್ನಯ' ಪಾಡ್ದನದ ಕೆಲವು ಭಿನ್ನ ಪಾಠಗಳು ಸಿಕ್ಕಿದರೂ ಮೂಲ ಕಥಾವಸ್ತುವಿನಲ್ಲಿ ವಿಶೇಷವಾದ ವ್ಯತ್ಯಾಸವೇನೂ ಇಲ್ಲ. ವಿವರಗಳಲ್ಲಿ ಕೆಲವು ಬದಲಾವಣೆಗಳು ಮಾತ್ರ ದೊರೆಯುತ್ತವೆ.

## ೬ ಸಿರಿಪಾಡ್ದನ

ಪಾಡ್ದನಗಳಲ್ಲಿ ಜನಪ್ರಿಯವಾಗಿರುವ ಇನ್ನೊಂದು ಪಾಡ್ದನ ಅಂದರೆ 'ಸಿರಿಯ' ಪಾಡ್ದನ. ಇದು ನಾಲ್ಕು ತಲೆಮಾರುಗಳ ಸುದೀರ್ಘವಾದ ಒಂದು ಕತೆ. ಇದರ ಒಂದೊಂದು ಭಾಗವನ್ನು ಒಂದೊಂದು ಪ್ರತ್ಯೇಕ ಸಂಧಿಗಳ ಹಾಗೆ ಹೇಳುತ್ತಾರೆ. ಒಂದೊಂದು ಸಂಧಿಯೂ ಸ್ವತಂತ್ರವಾದ ಕತೆಯ ಸ್ವರೂಪವುಳ್ಳ ಶಕ್ತಿಯುಳ್ಳದ್ದು. ಸುದೀರ್ಘವಾದ, ಸುಂದರವಾದ, ಜನಪ್ರಿಯವಾದ, ದುರಂತ ಸ್ವರೂಪದ ಈ ಸಿರಿಗಳ ಸಂಧಿ ಅಥವಾ ಪಾಡ್ದನವು ಕೋಟಿಚೆನ್ನಯ ಪಾಡ್ದನದಂತೆಯೇ ಆರಾಧನೆಯ ಮಟ್ಟದಲ್ಲಿಯೂ ಹೆಚ್ಚು ಮುಖ್ಯವಾದುದು. ಈ ದೃಷ್ಟಿಯಿಂದ ಕೋಟಿಚೆನ್ನಯ ಮತ್ತು ಸಿರಿಗಳ ಪಾಡ್ದನಗಳನ್ನು ತುಳುನಾಡಿನ 'ಅವಳಿ ಮಹಾಕಾವ್ಯಗಳು' ಎಂದು ಕರೆಯಬಹುದು. ಕೋಟಿ-ಚೆನ್ನಯ ಪಾಡ್ದನ ಬಿಲ್ಲವ ವ್ಯಕ್ತಿಗಳ ಪಾತ್ರಗಳ ಮೂಲಕ ಆ ಸಮಾಜದಲ್ಲಿ ಪ್ರಭಾವವನ್ನು ಬೀರಿ ಅವರಿಗೆ ಧಾರ್ಮಿಕ ಸ್ವರೂಪದ ಕೃತಿಯಾಗಿರುವಂತೆಯೇ ಸಿರಿಗಳ ಪಾಡ್ದನ ಬಂಟ ಸಮಾಜದ ವ್ಯಕ್ತಿಗಳನ್ನು ಒಳಗೊಂಡಿದ್ದು ಅವರ ಸಂಸ್ಕೃತಿಯ ಅನೇಕ ಮೂಲ ಬೇರುಗಳನ್ನು ತಿಳಿಸುವುದರ ಮೂಲಕ ಆ ಸಮಾಜದಲ್ಲಿ ಆರಾಧನೆಯ ಸ್ವರೂಪದಲ್ಲಿ ಹೆಚ್ಚು ಮುಖ್ಯವಾಗಿ ಬಂಟ ಸಮಾಜದಲ್ಲಿ ಸಿರಿಯನ್ನು ಮತ್ತು ಅವಳ ವಂಶದವರನ್ನು ಅದರಲ್ಲೂ ಮುಖ್ಯವಾಗಿ'ಅಬ್ಬಗ_ದಾರಗ'ರನ್ನು ಕುಲದೈವಗಳಂತೆ ಪೂಜಿಸುತ್ತಾರೆ.

ಸಿರಿಯ ಪಾಡ್ದನದಲ್ಲಿ ಲೆಕ್ಕಿಸಿರಿ, ಸೊನ್ನೆ, ಗಿಂಡೆ, ಅಬ್ಬಗ ಮತ್ತು ದಾರಗ ಇವರ ಕತೆಗಳು ಬೇರೆ ಬೇರೆ ಸಂಧಿಗಳಾಗಿ ಕಾಣಸುತ್ತವೆ. ಆದರೆ ಒಂದೇ ವಂಶವು ಬೇರೆ ಬೇರೆ ತಲೆಮಾರುಗಳ ಮೂಲಕ 'ಮುಂದುವರಿಯುವ ಏಕಸೂತ್ರತೆಯ ಎಳೆ ಈ ಎಲ್ಲಾ ಸಂಧಿಗಳನ್ನು ಒಗ್ಗೂಡಿಸಿ, ಒಂದು' ಜನಪದ ಮಹಾಕಾವ್ಯದ ಆಕಾರವನ್ನು ತಂದುಕೊಡುತ್ತದೆ.

"ಸಿರಿಯ" ಪಾಡ್ದನದ ಕತೆ ಬಹಳ ದೀರ್ಘವಾಗಿರುವುದರಿಂದ ಅದರ ಕಥಾ ಸಾರಾಂಶವನ್ನಷ್ಟೇ ಕೊಟ್ಟು ಅದನ್ನು ಅಧ್ಯಯನ ಮಾಡಬಹುದು: "ಹಿಂದೊಮ್ಮೆ ಲಂಕಾನಾಡಿನಲ್ಲಿ ಬರ್ಮ ಎಂಬ ಶ್ರೀಮಂತನಿದ್ದನು. ದೊಡ್ಡದಾದ ಆಸ್ತಿ ಇದ್ದ ಈ ಬೆರ್ಮ ಆಳ್ವನನ್ನು ಎಲ್ಲರೂ 'ಅಜ್ಜೇರು ಎಂದು ಕರೆಯುತ್ತಿದ್ದರು. ಇವನು "ಸತ್ಯನಾಪುರ" ವೆಂಬ ಒಂದು ದೊಡ್ಡದಾದ ಅರಮನೆಯನ್ನು ಕಟ್ಟಿಸಿದನು. ಆದರೆ ಅವನಿಗೆ ಸಂತತಿ ಇರಲಿಲ್ಲ. ಈ ದುಃಖದಿಂದ ಸಂತತಿ ಇಲ್ಲದೆ ತನ್ನ ಮನೆತನ ನಾಶವಾಗುತ್ತದಲ್ಲ ಎಂದು ಬೆರ್ಮ ಆಳ್ವನು ಮರುಗಿದನು. ಆಗ ಸತ್ಯದ ಕಾಲವಾದ್ದರಿಂದ ಇವನ ದುಃಖವು, "ಆದಿ ಅಲ್ಲಡೆ" ಕುಲಬ್ರಹ್ಮ ದೇವರಿಗೆ ಗೊತ್ತಾಯಿತು. ಅವರು ತಾಳ ತಂಬೂರಿ ಧರಿಸಿದ್ದ ಬ್ರಾಹ್ಮಣನ ವೇಷದಿಂದ ಮಧ್ಯಾಹ್ನದ ಬಿಸಿಲಿಗೆ ಸತ್ಯನಾಪುರದ ಅರಮನೆಗೆ ಬಂದು, ಬೆರ್ಮಾಳುವನನ್ನು ಕಂಡು ವ್ಯಸನದ ಕಾರಣವನ್ನು ಕೇಳಿದರು. ಆಗ ಆಳುವನು ತನಗೆ ಸಂತತಿಯಿಲ್ಲದೆ ಈ ಸ್ಥಳ ನಾಶವಾಗುತ್ತದೆಂಬುದೇ ತನ್ನ ವ್ಯಸನದ ಕಾರಣವೆಂದು ಹೇಳಿದನು. ಅದಕ್ಕೆ ಬ್ರಾಹ್ಮಣನು, ಬೆರ್ಮಾಳುವನೇ,

ಯಾರ ಆದಿಮೂಲ ಅಲಡೆಯು ನಾಶವಾಗುತ್ತದೋ ಅವರ ಸಂತತಿ ಕೂಡಾ ನಾಶವಾಗುತ್ತದೆ. ಈ ಸ್ಥಳದ ಆದಿಮೂಲವಾದ ಲಂಕೆ ಲೋಕನಾಡಿನ ಬ್ರಹ್ಮಸ್ಥಾನ ಹಾಳುಬಿದ್ದು ಕಾಡು ಬೆಳೆದಿದೆ. ನೀನು ಹೋಗಿ ಅದನ್ನು ಜೀರ್ಣೋದ್ಧಾರ ಮಾಡಿ ದೈವ ದೇವರಿಗೆ ನಿತ್ಯ ಪೂಜೆ ಮಾಡಿಸಿದರೆ ನಿನಗೆ ಆ ದೇವರು ಸಂತತಿ ಕೊಟ್ಟಾನು. ನಿನಗೆ ನಾಳೆಯಿಂದ ನಲುವತ್ತರ ಯೌವನ ಬರುತ್ತದೆ" ಎಂದು ಹೇಳಿದನು. ಆದರೆ ಆಳ್ವನಿಗೆ ಬ್ರಾಹ್ಮಣನ ಮಾತಿನಲ್ಲಿ ನಂಬಿಕೆ ಬರಲಿಲ್ಲ. ಕೆಲಸದ ಹೆಂಗಸನ್ನು ಕರೆದು ಅಕ್ಕಿ - ಕಾಯಿ ತಂದು ಕೊಡುವಂತೆ ಹೇಳಿ ಒಳಗೆ ನಡೆದನು. ಕೆಲಸದವಳು ಅಕ್ಕಿ - ಕಾಯಿ ತಂದು ನೋಡುವಾಗ ಬ್ರಾಹ್ಮಣ ಮಾಯವಾಗಿ ಬಿಟ್ಟಿದ್ದನು. ಇದರಿಂದ ಆಳ್ವನು ಚಕಿತನಾಗಿ "ಶ್ರೀ ದೇವರೇ ಬ್ರಾಹ್ಮಣನ ವೇಷದಿಂದ ಬಂದು ಹೇಳಿದ್ದೆಂದು" ನಂಬಿ, ಮಾರನೆಯ ದಿವಸವೇ ಅಲ್ಲಿಗೆ ಹೋಗಿ ಕಾಡು ಕಡಿಸಿ ಸ್ಥಳ ಶೋಧನೆ ಮಾಡಿ ದೈವಸ್ಥಾನವನ್ನು ಕಟ್ಟಿಸಿ ದೇವರಿಗೆ ನಿತ್ಯ ಪೂಜೆಗೆ ಜನ ನೇಮಕ ಮಾಡಿ ವೈಭವದಿಂದ ಆರಾಧನೆ ನಡೆಸುವಾಗ ಒಳಗಿನಿಂದ ದೇವರು ಮುಂಚಿನ ಬ್ರಾಹ್ಮಣ ವೇಷದಿಂದಲೆ ಬಂದು ಸಿಂಗಾರದ ಹಾಳೆಯನ್ನು ಬೆರ್ಮಾಳ್ವನ ಸೆರಗಿಗೆ ಹಾಕಿ ಆನೆ ಕಲ್ಲಿನಿಂದ ಗಂಧದ ಗುಳಿಗೆ ತೆಗೆದು ಆ ಹಾಳೆಯ ಮೇಲೆ ಇಟ್ಟು "ನಿನಗೆ ಸಂತತಿ ಕೊಟ್ಟಿರುತ್ತೇನೆ, ಆ ಸಂತತಿಯನ್ನು ನಾನೇ ರಕ್ಷಿಸುತ್ತೇನೆಂದು" ಹೇಳಿ ಒಳಗೆ ಹೋಗಿ ಮಾಯವಾದರು. ಬೆರ್ಮಾಳುವನು ಪ್ರಸಾದವನ್ನು ಸೆರಗಿನಲ್ಲಿ ಹಿಡಿದುಕೊಂಡು ದೇವಸ್ಥಾನಕ್ಕೆ ಪ್ರದಕ್ಷಿಣೆ ಬರುವಾಗ ಸೆರಗಿನಲ್ಲಿ ಮಗು ಕೂಗಿತು. ನೋಡುವಾಗ ಸಿಂಗಾರ ಹೂಗಂಧ ಇಲ್ಲ. ಹಾಳೆಯಲ್ಲಿ ಹೆಣ್ಣುಮಗು ಮಾತ್ರ ಇತ್ತು. ಮಗುವಿಗೆ ಸಿರಿಅಕ್ಕ ಎಂದು ಹೆಸರಿಟ್ಟು ಬಹಳ ಸಂತೋಷದಿಂದ ಅರಮನೆಗೆ ಬಂದು ಮಗುವನ್ನು ಸಂರಕ್ಷಿಸುತ್ತಿದ್ದನು. ಮಗುವು ಬೆಳೆದು ಪ್ರಾಯಭರಿತವಾಗಲು ಆ ಹುಡುಗಿಯನ್ನು ಬಸರೂರು ಕಡೆಯ ಅಂಗಡಿ ಕಾಂತುಪೂಂಜನಿಗೆ ಲಗ್ನಮಾಡಿ ಕೊಟ್ಟನು. ಅವನು ಸತ್ಯನಾಪುರದ ಅರಮನೆಗೆ ಬಂದು ಹೋಗುತ್ತಿದ್ದನು. ಅವನು ಸ್ವಲ್ಪ ವ್ಯಭಿಚಾರಿಯಾಗಿದ್ದನು. ಸಿರಿಯು ಬಸುರಿಯಾದಳು. ಆಗ, ಸೀಮಂತವನ್ನು ತನ್ನ ಮನೆಯಲ್ಲಿ ಮಾಡಬೇಕೆಂದು ಅವಳನ್ನು ಕರೆದುಕೊಂಡು ಹೋದನು. ಸೀಮಂತಕ್ಕೆ ಪೇಟೆಯಿಂದ ಸೀರೆ ರವಕೆ ಹಿಡಿದುಕೊಂಡು ಬರುವಾಗ ಅವನ ಸೂಳೆಯು ಕರೆದು ಅವನಿಗೆ ಬಾಯಾರಿಕೆ ಕೊಟ್ಟಳು. ಇವನು ಬಾಯಾರಿಕೆ ಕುಡಿಯುವಾಗ ಸೀರೆಯನ್ನು ಕೊಂಡುಹೋಗಿ ಉಟ್ಟುಕೊಂಡು ಹೊರಗೆ ಬಂದು ತನಗೊಂದು ಈ ನಮೂನೆ ಸೀರೆ ಬೇಕೆಂದು ಹೇಳಿದಳು. ಆಗ ಅವನಿಗೆ ಸಿಟ್ಟು ಬಂದು ಅವಳನ್ನು ಗದರಿಸಿದನು. ಕೂಡಲೇ ಸೀರೆ ಬಿಚ್ಚಿ ಕಟ್ಟಿಕೊಟ್ಟಳು. ಅದನ್ನು ತಂದು ತಾಯಿಯ ಕೈಯಲ್ಲಿ ಕೊಟ್ಟನು. ಆದರೆ ಆ ರಾತ್ರಿ ಸಿರಿಗೆ ಸ್ವಪ್ನವಾಗಿ "ಸೂಳೆ ಉಟ್ಟ ಸೀರೆಯನ್ನು ನೀನು ತಕೊಳ್ಳಬೇಡ" ಎಂದು ಸತ್ಯವು ಹೇಳಿತು. ಮಾರನೆಯ ದಿನ ಬೆಳಿಗ್ಗೆ ಸೀರೆ ರವಕೆ ಮರ್ಯಾದೆ ಕೊಡುವಾಗ ಸೂಳೆ ಉಟ್ಟ ಸೀರೆ ತಾನು ತೆಗೆದುಕೊಳ್ಳುವುದಿಲ್ಲವೆಂದು ಸಭೆಯಲ್ಲಿ ಹೇಳಿದಳು. ಅದರಿಂದ ಗಂಡನಿಗೆ ಅಪಮಾನವಾಗಿ ಸಿಟ್ಟಾಯಿತು. ಸೀಮಂತವಾದ ಮೇಲೆ ಸಿರಿಯು ಸತ್ಯನಾಪುರದರಮನೆಗೆ ಬಂದಳು. ಕೆಲವು ದಿವಸದ ಮೇಲೆ ಗಂಡು ಮಗುವನ್ನು ಹೆತ್ತಳು. ಆ ವರ್ತಮಾನ ಕೇಳಿಯೂ ಕಾಂತು ಪೂಂಜನು ಅರಮನೆಗೆ ಹೋಗಲಿಲ್ಲ. ಮಗು ಹುಟ್ಟಿದ ಗಳಿಗೆ ಪ್ರಕಾರ "ಅಜ್ಜ ಮಗುವನ್ನು ನೋಡಬಾರದು" ಎಂದು ಜೋತಿಷ್ಯರು ಹೇಳಿದ್ದರು, ಮಗು ಹುಟ್ಟಿ ಆರು ತಿಂಗಳಾದರೂ ಗಂಡನಾಗಲಿ, ಅತ್ತೆಯಾಗಲಿ ಯಾರು ಬರಲಿಲ್ಲ. ಆ ಸಮಯ ಸೌದದ ಅಣ್ಣುಶೆಟ್ಟಿ ಮಗ ಶಂಕರ ಆಳ್ವನು ಸತ್ಯನಾಪುರದರಮನೆಯಲ್ಲಿ ಕೆಲಸದ ಮೇಲ್ವಿಚಾರಣೆ ನೋಡಿಕೊಂಡು ಇದ್ದನು. ಅವನು ತನಗೆ ಪಾಲು ಕೊಡಬೇಕೆಂದು ಕೇಳಿದನು. ಅದಕ್ಕೆ ಆಳುವನು ಅವನಿಗೆ ಸೌದದ ಅರಮನೆಯನ್ನು ಕೊಟ್ಟನು, ಒಂದು ದಿನ ಸಿರಿಯು ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ಕೆಳಗೆ ಬೈಲಿಗೆ ಹೋಗಿದ್ದಳು. ಆಗ ಮಗು ಕೂಗುವುದನ್ನು ಬೆರ್ಮಾಳ್ವನು ಕೇಳಿ ಒಳಗೆ ಹೋಗಿ ಮಗುವನ್ನು ಎತ್ತಿ ಹಿಡಿದು ಸಮಾಧಾನಪಡಿಸುತ್ತಿದ್ದನು. ಬೈಲಿನಿಂದ ಹಿಂತಿರುಗಿದ ಸಿರಿಯು ಆಳ್ವನ ಕೈಗಳಿಂದ ಮಗುವನ್ನು ತೆಗೆದುಕೊಂಡಳು. ಬೆರ್ಮಾಳ್ವನಿಗೆ ಕಾಯಿಲೆ ಸುರುವಾಗಿ ಕ್ರಮೇಣ ಅದೇ ಕಾಯಿಲೆಯಿಂದ ಸತ್ತನು. ಸತ್ತಕೂಡಲೇ ಊರಿನ ಪಾಲವರು ಅವಳ ಗಂಡನಿಗೆ ಜನ ಕಳುಹಿಸಿದರು. ಬರುತ್ತೇನೆಂದು ಹೇಳಿ ಬಾರದೆ ಶಂಕರಾಳ್ವನಿಗೆ ಬೇಕಾದ ಸೂಚನೆ ಕೊಟ್ಟು ಕಳುಹಿಸಿದನು. ಆದರೆ

ಅವನ ಮಾತನ್ನು ಯಾರೂ ಕೇಳಲಿಲ್ಲ. ಚಿತೆಯು ತಯಾರಾದ ಕೂಡಲೇ ಸತ್ಯಕ್ಕೆ ಕೈಮುಗಿದು ಸಿರಿ ಒಬ್ಬಳೇ ಆಳ್ವನ ಹೆಣವನ್ನು ಹೊತ್ತುಕೊಂಡು ಸ್ಮಶಾನಕ್ಕೆ ಹೋಗಿ ದಹನ ಮಾಡಿದಳು – ಆಮೇಲೆ ಶಂಕರಾಳ್ವನು ಸತ್ಯನಾಪುರದರಮನೆಯ ಗಡಿ ತನಗೆ ಕೊಡಬೇಕೆಂದ ಪತ್ತೇರಿ ಕೂಟದ (ಹತ್ತು ಮಂದಿ) ಪಾಲವರಿಗೆ ಹೇಳಿ ಕೊಂಡನು. ಅವರು ನಿನಗೆ ಪಾಲು ಸಿಕ್ಕಲಾರದೆಂದು ಗದರಿಸಿದರು, ಆಗ ಕೂಟದ ಕಳದವರಿಗೆ ಕೈತುಂಬಾ ಹಣ ಕೊಟ್ಟು ಗಡಿಯನ್ನು ಸ್ವಾಧೀನ ಮಾಡಿಕೊಂಡನು. ಕೂಟದ ಕಳದಿಂದ ಸಿರಿ ಅಕ್ಕರಸು ಪೂಂಜದಿಗೆ ಓಲೆ ಕಳುಹಿಸಲ್ಪಟ್ಟಿತು. ಓಲೆ ನೋಡಿ ಸಿರಿಯು ತನ್ನ ಗಂಡನಿಗೆ ಓಲೆ ಕಳುಹಿಸಿದಳು. ಅವನು ಇಲ್ಲವೆಂದು ಜನ ಬಂತು. ಕೂಡಲೇ ಕೂಟದ ಕಳಕ್ಕೆ ಅವಳೇ ಹೋದಳು. ಓಲೆಯ ಕಾರಣವೇನೆಂದು ಕೇಳಿದಳು. ಪಾಲವರು, "ನಮಗೆ, ಅರಮನೆಗೆ ಸರಿಯಾದ ಬಂಟಬೇಕು. ಆದುದರಿಂದ ಶಂಕರಾಳ್ವನಿಗೆ ಗಡಿ ಕೊಡುತ್ತೇವೆ, ನುಡಿಹೇಳುತ್ತೇವೆ. ನೀನು ಒಳಗಿನ ಸರ್ಮಾಡಳಿತದಾರಳಾಗಿರಬೇಕು" ಎಂದು ಹೇಳಿದರು. ಅದಕ್ಕೆ ಸಿರಿಯು ಸಿಟ್ಟಿನಿಂದ ನಿಮ್ಮ ಪತ್ತೇರಿ ಕೂಟ ಹಾಳಾಗಲಿ ಎಂದು ಹೇಳಿ ಅಲ್ಲಿಂದ ಹೊರಟು ಅರಮನೆಗೆ ಬಂದು ದಾರು ಎಂಬ ತನ್ನ ಸೇವಕಿಯನ್ನು ಕರೆದು ಮಗು ಕುಮಾರನನ್ನು ತೊಟ್ಟಿಲು ಸಮೇತ ಹೊರಗೆ ತರಿಸಿ ಮಗುವನ್ನು ಹಿಡಿದುಕೊಂಡು ಲಂಕೆ ಲೋಕನಾಡಿಗೆ ಹೋಗಿ ದೇವರಿಂದ ಅಪ್ಪಣೆ ಪಡೆದು ಗಂಡನ ಮನೆಗೆ ಬಂದು ತನಗೆ ಬರ ಹೇಳ (ವಿವಾಹ ವಿಚ್ಛೇದನ) ಬೇಕೆಂದು ಹೇಳಿದಳು. ಅದಕ್ಕೆ ಗಂಡನು ನೀನು ಹೊತ್ತು ಮುಳುಗುವುದರೊಳಗೆ ಮಾಬುಕಳ ದಾಟಿದರೆ ನಿನಗೆ ಅದೇ ಬರ, ಇಲ್ಲವಾದರೆ ಎಳೆದು ತಂದೇನು ಎಂದು ಹೇಳಿದನು. ಅದನ್ನು ಕೇಳಿ ಸಿರಿಯು ಹೊರಡುವಾಗ ಅವನ ತಾಯಿಯು ಮಗುವಿಗೆ ಹಾಲು ಕುಡಿಸಿದಳು. ಹಾಲು ಕುಡಿದಾದ ಮೇಲೆ, ಈ ಕಡೆಯವರ ನೀರು ಕುಡಿದರೆ ಅದು ನಿನಗೆ ವಿಷವಾಗಲಿ ಎಂದು ಹೇಳಿ ಸಿರಿಯು ಸಿಟ್ಟಿನಿಂದ ಹೊರಟು ಬರುವಾಗ ಅನೇಕ ಹೆಂಗಸರು, ಕೂಗುತ್ತಾ ಅಡ್ಡ ಬಂದು ಹೋಗಬಾರದೆಂದು ತಡೆದರು. ಆದರೆ ಅವರಿಗೆ ಒಂದೊಂದು ವರ ಕೊಡುತ್ತಾ. ಮಾಬುಕಳಕ್ಕೆ ಬರುವಾಗ ಕಡುವಿನ ದೋಣಿಯನ್ನು ಮೊದಲೇ ಕಾಂತು ಪೂಂಜನು, ದಂಡೆಯ ಮೇಲಕ್ಕೆ ಹಾಕಿಸಿ ಅಡಗಿಸಿಟ್ಟಿದ್ದನು. ಸಿರಿಯು "ದೋಣಿ ಬಿಡು" ಎಂದು ಹೇಳಿದ್ದಕ್ಕೆ ಅವನು ತಿರಸ್ಕಾರದಿಂದ ಮಾತಾಡಿದ್ದನ್ನು ಕೇಳಿ ಬಾಳೆಯೆಲೆ ಹಾಸಿ ಅದರ ಮೇಲೆ ಕುಮಾರನ ತೊಟ್ಟಿಲು ಇಟ್ಟು ತನ್ನ ಸತ್ಯವನ್ನು ಸ್ಮರಿಸಿ ನೀರಿಗೆ ಇಳಿದಳು, ಆಗ ಹೊಳೆ ನೀರು ಮೊಳಕಾಲುವರೆಗೆ ಬಂತು. ಕಡವು ದಾಟಿ ಆಚೆಗೆ ನಡೆದಳು. ಆಗ ಕಡವಿನವರು ಬಂದು ಕೂಗಿದರು. ಅದಕ್ಕೆ "ಆರು ತಿಂಗಳು ಮಾತ್ರ ಕಡವು ನಡೆಯಲಿ" ಎಂದು ಹೇಳಿ ಮುಂದೆ ಬಂದಳು. ಬರುವಾಗ ದಾರಿಯಲ್ಲಿದ್ದ ನಾಗಬ್ರಹ್ಮಸ್ಥಾನಗಳಿಗೆ ಕೈಮುಗಿದು, ಉದ್ಯಾವರದ ಕಡವು ದಾಟುವಾಗ ತಡೆದ ವೀರಭದ್ರ ಕುಮಾರನನ್ನು ಕಲ್ಲಾಗಿ ಹೋಗುವಂತೆ ಶಾಪ ಕೊಟ್ಟು ಮುಂದೆ ಕಟ್ಪಾಡಿ ಕನ್ಯಾಸ ಗುತ್ತಿಗಾಗಿ ಸೂಡ ಅರಿಗೆ ಮನೆಗಾಗಿ ನಡೆದು ಜಂತ್ರ ಎಂಬ ಪದವು ಹತ್ತಿ ಅಬ್ಬನಡ್ಕ ಗೋಳಿ ಮರದ ಬುಡಕ್ಕೆ ಬಂದು ಅಲ್ಲಿ ನಿಂತಳು, ತೊಟ್ಟಿಲನ್ನು ಮರಕ್ಕೆ ಕಟ್ಟಿ, ಮಗುವನ್ನು ತೊಟ್ಟಿಲಲ್ಲಿಟ್ಟು ತೂಗುತ್ತಿದ್ದಳು. ಸಿರಿಯು ಅಳುಕಲಿಲ್ಲ. ಕಂಗೆಡಲಿಲ್ಲ. ಎದೆಗಾರಿಕೆ ತೋರಿಸಿ, ಧೈರ್ಯಪಟ್ಟು ಮರದ ನೆರಳಿನಲ್ಲಿ ಬಿಡಾರ ಮಾಡಿದ್ದಳು. ಬಂದ ಆಯಾಸದ ಇಲ್ಲವೆ ಹಸಿವೆಯ ಪರಿವೆಯಾಗಲಿ ಅವಳಿಗಿರಲಿಲ್ಲ. ತಿಂದು ತೇಗಿದಷ್ಟು ಉಲ್ಲಾಸವೂ, ವೀರ ಸ್ತ್ರೀಯರಂತಹ ತೇಜಸೂ ಅವಳಲ್ಲಿ ತೋರಿ ಬರುತ್ತಿತ್ತು. ಆಕೆಯ ಆಗಿನ ರೂಪು ಚಂಡಿಕೆಯ ರೌದ್ರಾವತಾರದಂತಿತ್ತು.

ಬಿಳಿದೇಸಿಂಗರಾಯ, ಕರಿ ಕಾಮುರಾಯ ಎಂಬ ಇಬ್ಬರು ಶಿವದೂತರು ನಾಗರಾಜನಿಂದ ಅನುಮತಿ ಪಡೆದು ನಾಗಲೋಕದ ಬೋಳದ ಕಾಡಿನ ತಾವರೆಕೊಳದಲ್ಲಿ ಹುಟ್ಟಿ ತಮ್ಮಷ್ಟಕ್ಕೆ ಬೆಳೆದು, ತಮ್ಮ ಸತ್ಯದ ಬಲದಿಂದ ಬೋಳದ ರಾಜ್ಯವನ್ನು ಸ್ಥಾಪನೆ ಮಾಡಿ ಎಂಟು ಗುತ್ತಿನವರನ್ನು ಮಂತ್ರಿಗಳಾಗಿಯೂ ಎಂಟುಬಾಳಿಕೆಯರನ್ನು ಸೈನ್ಯಾಧಿಕಾರಿಗಳನ್ನಾಗಿಯೂ ನೇಮಿಸಿ ರಾಜ್ಯಭಾರ ನಡೆಸುತ್ತಿದ್ದರು. ರಾಜ್ಯದ ಪ್ರಜೆಗಳೆಲ್ಲರನ್ನೂ ಭಯಭಕ್ತಿಯಿಂದ ಕಂಡು ಮರ್ಯಾದೆ ಕೊಡುತ್ತಿದ್ದರು. ತುಳುನಾಡಿನಲ್ಲಿ ಕೆಡ್ಡಸದ ಹಬ್ಬವೆಂದರೆ ತುಳವ ಹೆಂಗಸರಿಗೆ ಪವಿತ್ರ ಹಬ್ಬ. ಆ ಸಮಯ ಕ್ಷತ್ರಿಯರು ಮೂರುದಿನ ಬೇಟೆಯಾಡುವ ಪದ್ಧತಿ ಇತ್ತು, ಅದೇ

ಪ್ರಕಾರ ಇವರು ಕೂಡಾ ಬೇಟೆಯಾಡಿದ ಮೇಲೆ ಬೇಟೆಗಾರರನ್ನು ಹಿಂದೆ ಕಳುಹಿಸಿ ಸಂಜೆಯ ಸಮಯ ಗಾಳಿಗೆ ಕೂತು ಅಣ್ಣತಮ್ಮಂದಿರು ವೀಳ್ಯದೆಲೆ ಜಗಿಯುತ್ತಿರುವಾಗ ಸಿರಿಅಕ್ಕ ದೇವಿಯು ಮಗುವಿನ ತೊಟ್ಟಿಲು ತೂಗುವಾಗ ಹಾಡಿದ ಇಂಪಾದ ಜೋಗುಳ ಹಾಡುವಸ್ವರ ಕೇಳಿ ಅಣ್ಣತಮ್ಮಂದಿರು ಆಕಡೆ ಹೋದರು. ಆಗ ಸಿರಿಯು ಅವರನ್ನು ನೋಡಿ ಮುಂದೆ ಬಂದವರು ನನಗೆ ದೊಡ್ಡಣ್ಣ, ಅನಂತರ ಬಂದವರು ನನ್ನ ಸಣ್ಣಣ್ಣ - ಎಂದು ಹೇಳಿ 'ಏನು ಅಣ್ಣಂದಿರಾ' ಎಂದು ಮಾತು ಬೆಳಿಸಿದಳು. ಹೆಣ್ಣಿನ ಮಾತನ್ನು ಕೇಳಿ ಇವಳು ನ್ಯಾಯವಾಗಿ ದೇವಲೋಕದಿಂದ ಬಂದವಳಂತೆ ಕಾಣುತ್ತಾಳೆ ಎಂದು ನೆನೆದು "ತಂಗೀ ನೀನ್ಯಾರು? ನಿನ್ನ ವಿಚಾರವನ್ನು ನಿನ್ನ ಅಣ್ಣಂದಿರಾದ ನಮ್ಮ ಕೂಡೆ ಯಾವ ಸಂಕೋಚವೂ ಇಲ್ಲದೆ ಹೇಳಮ್ಮಾ" ಎಂದರು.

ಆ ಮಾತು ಕೇಳಿ ಸಿರಿಯೂ, ತನ್ನ ಜನ್ಮ ವೃತ್ತಾಂತದ ಚರಿತ್ರೆಯನ್ನೆಲ್ಲಾ ವಿವರವಾಗಿ ಹೇಳಿ "ಅಣ್ಣಯ್ಯನವರೇ ನಿಮ್ಮ ಮನೆ ಎಲ್ಲಿ? ನಿಮ್ಮ ತಂದೆ ತಾಯಿ ಹೆಂಡತಿ ಮಕ್ಕಳು ಎಲ್ಲಾ ಸುಖವಾಗಿದ್ದಾರೆಯೇ? ನಿಮ್ಮ ತಂಗಿಯಾದ ನನಗೆ ನಿಮ್ಮ ವಿಚಾರಗಳನ್ನೆಲ್ಲಾ ಹೇಳಬೇಕೆಂದು" ಕೇಳಿಕೊಂಡಳು. ಅದಕ್ಕೆ "ತಂಗೀ ನಾವು ಕೂಡಾ ನಿನ್ನಂತೆ ನೆತ್ತರಿನಲ್ಲಿ ಹುಟ್ಟಲಿಲ್ಲ, ನೀರಿನಲ್ಲಿ ಬೆಳೆಯಲಿಲ್ಲ. ನಾವೀರ್ವರೂ ವಿಶ್ವನಾಥ ದೇವರ ಅಪ್ಪಣೆ ಪಡೆದು ನಾಗರಾಜನ ವರ ಪಡೆದು" "ಅಡಿ ಕಂಚಿ ಮೇಲೆ ಕಂಚಿ ಪನಿಪಾಲನ ಕಂಚಿ ಮೆಂಚಿನ" ಬೋಳದ ಕಾಡಿನ ಮುತ್ತು–ತಾವರೆ ಕೆರೆಯಲ್ಲಿ ಬಿಳಿ ತಾವರೆ ಹೂವಿನಲ್ಲಿ, ಬಿಳಿ ದೇಶಿಂಗನೆಂದ ನಾನು, ಕೆಂದಾವರೆ ಹೂವಿನಲ್ಲಿ ನನ್ನ ತಮ್ಮ ಕರಿಯ ಕಾಮುರಾಯನೂ ಆರು ಎಸಳಿನ ಮೂರು ಕುಸುಮದಲ್ಲಿ ಹುಟ್ಟಿದೆವು. ನವಿಲಿನ ಮೇಲೆ ಕೂತು ತಿರುಗಾಡಿದೆವು. ಕಡಮದ ಹಾಲು ಕುಡಿದ ಬೆಳೆದು, ನಮಗೆ ನಾಮಕರಣ ಮಾಡಿದವರಿಲ್ಲ. ನಾವು ನಮ್ಮಷ್ಟಕ್ಕೆ ಬೆಳೆದು, ದೊಡ್ಡವರಾದೆವು. ಒಂದು ದಿನ ನೆಲ್ಲಿಯ ಮರದಿಂದ ಮೂರು ನೆಲ್ಲಿ ಕೊಯ್ದೆವು- ನಮ್ಮ ಸತ್ಯದ ನಾಗಬ್ರಹ್ಮನ ಸ್ಮರಣೆ ಮಾಡಿದೆವು. ನಾನು ಒಂದು ನೆಲ್ಲಿಕಾಯಿ ಹಾರಿಸಿ ಕಂಚಿ ಕಡಂಗದ ಹನ್ನೆರಡಂಕಣದ ಅರಮನೆಯಾಗಬೇಕೆಂದು ಹೇಳಿದೆನು. ಹಾಗೆಯೇ ಆಯಿತು. ಮತ್ತೊಂದು ಕಾಯಿ ಹಾರಿಸಿ ಅರಮನೆಗೆ ಬೇಕಾದ ಅಷ್ಟ ಸೌಭಾಗ್ಯ ತುಂಬಿಸಿ ಕೊಡಬೇಕೆಂದು ಹೇಳಿದೆನು. ಹಾಗೆಯೇ ಆಯಿತು. ನನ್ನ ತಮ್ಮನು ಒಂದು ಕಾಯಿಯನ್ನು ಹಾರಿಸಿ ಪ್ರಜೆ ಪರಿವಾರಗಳೂ ಅವರಿಗೆ ಬೇಕಾದ ಭೂಮಿ 'ಮನೆ' ಬದುಕುಫಲ ಭರಿತವಾಗಿರಬೇಕೆಂದು ಹೇಳಿದನು. ಹಾಗೆಯೇ ಆಗಿದೆ. ಈಗ ಇವೆಲ್ಲವನ್ನೂ ನಿನಗೆ ಒಪ್ಪಿಸುತ್ತೇವೆ. ನೀನು ನನ್ನ ಸಹೋದರಿ, ಆದ್ದರಿಂದ ಅನುಮಾನವಿಲ್ಲದೆ ನಮ್ಮ ರಾಜ್ಯಕ್ಕೆ ಬರಬೇಕೆಂದು ಕೇಳಿಕೊಂಡರು.

ಆ ಮಾತಿಗೆ ಸಿರಿಯು ಒಪ್ಪಿ ಅಣ್ಣಂದಿರಾ ನಾನು ಈಗಲೇ ನಿಮ್ಮ ಜೊತೆಯಲ್ಲಿ ಬಂದರೆ ಜನರು 'ಸೊಕ್ಕಿದ ಹೆಣ್ಣು, ಕ್ಷತ್ರಿಯ ರಾಜರನ್ನು ಕೂಡಿಕೊಂಡು ಬಂದಿದ್ದಾಳೆ ಎಂದು ಹೇಳಿಯಾರು. ಆದ್ದರಿಂದ ನೀವು ಊರಿಗೆ ಹೋಗಿ ನಿಮ್ಮ ಜನರನ್ನು ಕೂಡಿಕೊಂಡು ನಿಮ್ಮ ತಂಗಿಯನ್ನು ಕರೆದುಕೊಂಡು ಹೋಗುವ ಕ್ರಮದಲ್ಲಿ ಬಂದರೆ ನಿಮ್ಮ ಜೊತೆಯಲ್ಲಿ ನಿಮ್ಮ ರಾಜ್ಯಕ್ಕೆ ಬರುತ್ತೇನೆಂದು ಹೇಳಿದಳು,

ಸರಿ, ಎಂದು ಹೇಳಿ ಹಿಂತಿರುಗಿದರು. ಇತ್ತ ಸಿರಿಯ ಗಮನ ತನ್ನ ಮಗುವಿನ ಕಡೆಗೆ ಹೋಯಿತು. ಆಗ ಮಗುವಿನ ವಸ್ತ್ರ ಒಗೆಯಲಿಕ್ಕೆ ನೀರು ಇಲ್ಲದಿದ್ದರಿಂದ ಕೂತಲ್ಲಿಯೇ ಗೆಜ್ಜೆ ಕತ್ತಿಯಿಂದ ಭೂಮಿಯನ್ನು ಸೀಳಿ ನೀರು ತೆಗೆದು ವಸ್ತ್ರ ಒಗೆಯಲಿಕ್ಕೆ ದಾರುಗೆ ಹೇಳಿದಳು.

ಆಮೇಲೆ ನೆರೆಮನೆಗೆ ತೆರಳಿ ಸ್ವಲ್ಪ ಹಾಲು ತಂದು ಮಗುವಿಗೆ ಕುಡಿಸಿದಳು. ಮಗು ಕೂಗಲಿಕ್ಕೆ ಆರಂಭಿಸಿತು. ಆ ಹಾಲು ತನ್ನ ಗಂಡನ ಗೋತ್ರದವರ ಹಾಲೆಂದು ತಿಳಿದ ಮೇಲೆ ಅವಳು ದೇವರಿಗೆ ಪ್ರಾರ್ಥನೆ ಮಾಡಿದ್ದಳು. ಆರು ತಿಂಗಳ ಮಗು ಬಾಯಿ ಬಿಚ್ಚಿ ಮಾತಾಡಿತು. "ಅಮ್ಮಾ, ನಿನಗೆ ಅಣ್ಣಂದಿರು ದೊರಕಿದರು. ನೀನು ಅಲ್ಲಿಗೆ ಹೋಗಿ ಸುಖವಾಗಿ ಬಾಳು. ನಾನು ಬ್ರಹ್ಮದೇವರ ಬಳಿಗೆ ಹೋಗಿ ಬೆಳ್ಳಿ ಬೆಟ್ಟು ಸ್ಥಾನದಲ್ಲಿ ನಿಲ್ಲುತ್ತೇನೆ. ಅಲ್ಲಿ ಬೆಳೆಯುತ್ತೇನೆ. ನೀನು ಸಂಕೋಚಪಡಬೇಡ" ಎಂದು ಹೇಳಿತು.

"ಹಾಗೆಯೇ ಆಗಲಿ, ನೀನು ಅಲ್ಲಿ ಬೊಗರೀ ಮರದ ಬುಡದಲ್ಲಿ ನನಗೊಂದು ಸ್ಥಳ ಮಾಡಿ ಇಡು, ವರ್ಷ ತುಂಬುವಾಗ ನಾನೂ ಅಲ್ಲಿಗೆ ಬರುತ್ತೇನೆ" ಎಂದು ಹೇಳಿ ತಾಯಿಯು ತನ್ನ ಹೆಬ್ಬೆಟ್ಟನ್ನು ನೆತ್ತಿಗೆ ಒತ್ತಿ ಮಗುವನ್ನು ಮಾಯ ಮಾಡಿದಳು. ಆಗ ಕೆಲಸದ ದಾರು, "ಅಮ್ಮಾ, ಕುಮಾರ ಮಾಯವಾದ ಮೇಲೆ ನನ್ನನ್ನು ದೈವವಾಗುವಂತೆ ಮಾಡಿರಿ" ಎಂದು ಹೇಳಿದಳು. ಆಗ ಸಿರಿಯು ಎದ್ದು ನಿಂತು ನೀನು ಜಾಲಬೈಕಡ್ತಿಯೆಂಬ ದೈವವಾಗಿ ಮನೆ ಮಕ್ಕಳನ್ನೂ ದನಕರುಗಳನ್ನೂ ಕಾಪಾಡಿಕೊಂಡು ಇರಬೇಕೆಂದು ಅವಳ ನೆತ್ತಿಗೆ ಬೆರಳೊತ್ತಿ ಮಾಯ ಮಾಡಿದಳು. ಬೋಳದ ಕ್ಷತ್ರಿಯರು ಊರ ಪ್ರಜೆಗಳನ್ನು ಕೂಡಿಕೊಂಡು ವೈಭವದಿಂದ ಸಿರಿದೇವಿಯನ್ನು ಕರೆದುಕೊಂಡು ಹೋಗಲಿಕ್ಕೆ ಬಂದರು. ಬಂದವರೇ ಮಗುವನ್ನು ವಿಚಾರಿಸಿದರು. ದೇವಿಯು ಆಗಿ ಹೋದ ವಿಚಾರವನ್ನು ಅವರಿಗೆ ತಿಳಿಸಿದಳು. ನಂತರ ವೈಭವದ ಮೆರವಣಿಗೆಯೊಂದಿಗೆ ಸಿರಿದೇವಿಯೂ ಬೋಳಭಾರಿ ಅರಮನೆಗೆ ಹೋದಳು. ಈ ಸುದ್ದಿಯು ದಿಕ್ಕು ದೇಶಗಳಿಗೆ ತಿಳಿಯಿತು.

ಆಗ ಕೊಟ್ರಾಡಿ ಕೊಡ್ಸರಾಳುವನೆಂಬ ಬಾರಗನು ಇವಳನ್ನು ನೋಡಬೇಕೆಂದು ಬಂದನು. ಆಗ ಪರದೆಯೊಳಗಿಂದ ಗಿಂಡಿಯಲ್ಲಿ ಹಾಲು ಕೊಡುವಾಗ ಅವಳ ಮುಂಗೈಯನ್ನು ನೋಡಿ ಮರುಳಾಗಿ ತನಗೆ ಮದುವೆ ಮಾಡಿ ಕೊಡಬೇಕೆಂದು ಹೇಳಿದನು. ಅವರು ಒಪ್ಪಿದರು. ಕೊಡ್ಸರಾಳ್ವನಿಗೆ ಆ ಮೊದಲು ಅಂಗರಜಾಲು ಬರ್ಕೆ ಬಾಮು ಕಿಲ್ಲರ ತಂಗಿ ಸೋಮಾಳ್ವದಿಯನ್ನು ಮದುವೆಯಾಗಿತ್ತು. ಅವಳಿಗೆ ಬಹಳ ದುಃಖವಾಯಿತು. ತನ್ನ ಗಂಡನು ಲಗ್ನಮಾಡಿ ಕೊಂಡು ಬರಲಿಕ್ಕೆ ಹೋದದ್ದನ್ನು ನೋಡಿ ಮನೆಯ ಸೊತ್ತನ್ನು ಮಾಯಮಾಡಿ, ಚಾವಡಿಯಲ್ಲಿ ದೀಪ ಹಚ್ಚಿಟ್ಟು "ಈ ದೀಪವು ಬರುವವಳ ಕಣ್ಣಿಗೆ ಶೂಲವಾಗಿ ಎದೆಗೆ ಪಗರಿಯಾಗಲಿ" ಎಂದು ಹೇಳಿ ಸೋಮಾಳ್ವದಿಯು ತನ್ನ ತವರು ಮನೆಗೆ ಹೋದಳು.

ಕೊಡ್ಸರಾಳ್ವನು ಲಗ್ನವಾಗಿ ಹೆಂಡತಿಯನ್ನು ಪಾಲಕಿಯಲ್ಲಿ ಕುಳ್ಳಿರಿಸಿ ದಿಬ್ಬಣ ತರುವಾಗ ದೂರದಿಂದ ದೀಪ ಕಂಡು ಅದು ಸಿರಿಯ ಕಣ್ಣಿಗೆ ಸೂಜಿಯಂತೆ ಚುಚ್ಚಿದುದರಿಂದ ಪಾಲಕಿಯನ್ನು ನಿಲ್ಲಿಸಿ ಅಲ್ಲಿ ಇಳಿದು ಅಣ್ಣಂದಿರನ್ನು ಕರೆದು 'ನಾನು ಇಲ್ಲಿಂದ ಮುಂದೆ ಹೋಗಬೇಕಾದರೆ ಅಕ್ಕ ಸೋಮಾಳುವತಿ ಬಂದು ಕೈಹಿಡಿದು ಕರೆದುಕೊಂಡು ಹೋಗಬೇಕು. ಆ ದೀಪ ನನ್ನ ಕಣ್ಣಿಗೆ ಸೂಜಿಯಾಗಿ ಕುಕ್ಕುತ್ತದೆ.' ಎಂದು ಹೇಳಿದಳು. ಅದು ಬಿದ್ದು ಗೋಕಲ್ಲಾಯಿತು. ತನ್ನ 'ಪನ್ನೆತತ್ರ' ವೆಂಬ 'ಓಲೆ ಕೊಡೆಯನ್ನು ಮೇಲೆ ಹಾರಿಸಿದಳು. ಅದು ಬಿದ್ದು 'ಚಕ್ಕೆ ಪಾದೆ ಕಲ್ಲಾಯಿತು.'"ನಾನು ದೀಪ ನಂದಿಸಿದರೆ ನನಗೂ ನಿಮಗೂ ಅಪಕೀರ್ತಿ ಬಂದೀತು. ಅವಳ ಎರಡು ಕಣ್ಣುಗಳು ಕುರುಡಾದೀತು" ಎಂದು ಹೇಳಿದಳು. ಅದನ್ನು ಕೇಳಿ ಎಲ್ಲರೂ ಅಲ್ಲಿಯೇ ನಿಂತರು. ಊರಿನ ಗೃಹಸ್ಥರೂ ಕೊಡ್ಸರಾಳ್ವನೂ ಅಂಗರಜಾಲು ಬರ್ಕೆಗೆ ಹೋಗಿ ಸೋಮಾಳುವತಿಗೆ ಸಮಾಧಾನ ಹೇಳಿ ಕರಕೊಂಡು ಬಂದರು. ಅವಳು ಸಿರಿಯನ್ನು ಕೈಹಿಡಿದು ಕರಕೊಂಡು ಹೋದಳು. ಮಾರನೆಯ ದಿನ ಊಟವಾಗಿ ದಿಬ್ಬಣದೊಡನೆ ಕೊಡ್ಸರಾಳ್ವನು ಬೋಳದರಮನೆಗೆ ಬಂದು, ಅವರಿಬ್ಬರೂ ಸುಖವಾಗಿ ಕಾಲ ಕಳೆದರು. ಸಿರಿ ಬಸುರಾಗಿ ಸೀಮಂತವಾಯಿತು. ಆಗ ಸೋಮಾಳುವತಿಯ ಅಣ್ಣ ಬಾಮು ಕಿಲ್ಲೆಯರು ಸಿರಿಯನ್ನು ಸಮ್ಮಾನದೂಟಕ್ಕೆ ಕರಕೊಂಡು ಬರಲಿಕ್ಕೆ ಅವರ ಮಾವ ನಾರ್ಣಕಿಲ್ಲೆಯರನ್ನು ಕಳುಹಿಸಿ ಅಂಗರ ಜಾಲು ಬರ್ಕೆಯಲ್ಲಿ ಸಮ್ಮಾನದೂಟವಾಗಿ ಹಿಂದೆ ಬರುವಾಗ ಎಲಿಕುಂಜ–ಪಿಲಿಕುಂಜ ನಾಗಬ್ರಹ್ಮ ದೇವರಿಗೆ ಕೈಮುಗಿದು ಮುಂದೆ ಬರುವಾಗ ದಾರಿಯಲ್ಲಿ ಹೊಟ್ಟೆನೋವು ಸುರುವಾಯಿತು. ಅಲ್ಲಿಯೇ ತೋಡಿನಲ್ಲಿ ಹೆಣ್ಣುಮಗುವನ್ನು ಹೆತ್ತಳು. ಆಗ ಅಡಿಕೆ ಬಿಸಾಡಿ ಅಡಿಕೆ ಮರ ಮಾಡಿ ಅದರ ಹಾಳೆಯಲ್ಲಿ ಮಗುವನ್ನು ಮಲಗಿಸಿ ಸೋಮಾಳ್ವದಿಯ ಕೈಯಲ್ಲಿ ಕೊಟ್ಟು, "ಅಕ್ಕಾ, ಈ ಮಗುವನ್ನು ನನ್ನ ಅಜ್ಜ ಕಾನಬೆಟ್ಟಿನ ಅರಮನೆ ಚಂದವಣ್ಣ ಪೆರ್ಗಡೆಯವರ ಕೈಯ್ಯಲ್ಲಿ ಕೊಡಿರಿ, ನಾನು ನನ್ನ ಮಗ ಕುಮಾರನಿದ್ದಲ್ಲಿಗೆ ಹೋಗುತ್ತೇನೆ" ಎಂದು ಹೇಳಿ ಮಾಯವಾದಳು. ಇವಳು ಮಗುವನ್ನು ತಂದು ಸಿರಿಯ ಸಮಾಚಾರವನ್ನು ಗಂಡನಿಗೂ ಅವಳ ಅಣ್ಣಂದಿರಿಗೂ ತಿಳಿಸಿದಳು. ಅವಳ ಅಣ್ಣಂದಿರು ಬೆಳ್ಳಿಬೆಟ್ಟು ಸ್ಥಾನಕ್ಕೆ ಹೋದರು. ಅಲ್ಲಿ ಅವರು ತಾಳಿಮರವಾದರು. ಮಗುವನ್ನು

ಇವರೇ ಸಾಕಬೇಕೆಂದು ಎಷ್ಟು ಪ್ರಯತ್ನ ಮಾಡಿದರೂ ಮಗು ಚಂಡಿ ಹಿಡಿದು ಅಳುತ್ತಾ ಇರುವುದನ್ನು ನೋಡಿ ಮಗುವನ್ನು ಕಾನಬೆಟ್ಟು ಅರಮನೆಗೆ ತಂದು ಚಂದವಣ್ಣ ಪೆರ್ಗಡೆಯವರಿಗೆ ಕೊಟ್ಟರು. ಅವರಿಗೆ ಸಂತತಿ ಇಲ್ಲದ್ದರಿಂದಲೂ ತನ್ನ ಮಾವ ಬಿರ್ಮಾಳುವರ ಮೊಮ್ಮಗಳ ಮಗುವಾದ್ದರಿಂದಲೂ ಬಹಳ ಪ್ರೀತಿಯಿಂದ ಸಾಕಿದರು.

ಮಗುವಿನ ರೂಪಲಾವಣ್ಯಾದಿಗಳು ಮನುಷ್ಯ ಹೆಂಗಸರಲ್ಲಿ ಇರಲಿಲ್ಲ. ಊರಿನ ಹೆಂಗಸರಿಗೆಲ್ಲಾ ಈ ಮಗುವನ್ನು ನೋಡಿ ಮತ್ಸರವಾಗುತ್ತಿತ್ತು. ಈ ಮಗುವಿಗೆ ಚಂದವಣ್ಣ ಪೆರ್ಗಡೆಯರು ಸೊನ್ನೆಯೆಂದು ಹೆಸರಿಟ್ಟರು. ಮಗು ದೊಡ್ಡದಾಗುತ್ತಾ ಎರಡು ವರ್ಷ ಕಳೆಯಿತು.

**ಗಿಂಡೆಯ ಸಂಧಿ**

ಬೆಳ್ಮಣ್ಣು ಎಂಬ ನೆರೆಯೂರಿನ ಮಡಿಕಲ್ಲು ಮನೆಯ ಭಟ್ರ ಹೆಂಡತಿ ಬಸುರಿಯಾಗಿರುವಾಗ ತನಗೆ ಮುಚ್ಚಿಲು ಮರದ ಎಲೆಯಲ್ಲಿ ಕಡುಬು ಮಾಡಿ ತಿನ್ನಬೇಕೆಂಬ ಆಸೆಯಿಂದ ಕೆಲಸದವನನ್ನು ಕರೆದು ಕಾಡಿನಿಂದ ಮುಚ್ಚಿಲು ಎಲೆ ತರುವಂತೆ ಹೇಳಿದಳು. ಆಳು ಹೋಗಿ ನೋಡುವಾಗ ಮರದ ಬುಡದಲ್ಲಿ ಜೊತೆ ಹುಲಿಗಳು ಆಡುತ್ತಿದ್ದವು. ಅವನೆಷ್ಟು ಬೊಬ್ಬೆ ಹೊಡೆದರೂ ಹುಲಿಗಳು ಹೋಗಲಿಲ್ಲ. ಅದನ್ನು ನೋಡಿ ಹಿಂದೆ ಹೋಗಿ "ಎಲೆ ತೆಗೆಯಲು ಹುಲಿಗಳು ಬಿಡುವುದಿಲ್ಲ. ಎರಡು ಹುಲಿಗಳು ಮರದ ಬುಡದಲ್ಲಿವೆ" ಎಂದು ಹೇಳಿದನು. ಅದಕ್ಕೆ 'ನೀನು ಹೋಗಿ ಅಮ್ಮ ಹೆತ್ತ ಮಗುವನ್ನು ನಿಮಗೆ ಕೊಡುತ್ತಾರಂತೆ, ಮುಚ್ಚಿಲು ಎಲೆ ಕೊಡಬೇಕಂತೆ ಎಂದು ಹೇಳು' ಎಂದು ಹೇಳಿ ಕಳುಹಿಸಿದಳು. ಆಳು ಬಂದು ಇವಳು ಹೇಳಿದಂತೆ ಹೇಳಿದನು. ಆಗ ಹುಲಿಗಳು ಮರ ಬಿಟ್ಟು ದೂರ ಹೋದವು. ಆಳು ಬೇಕಾದಷ್ಟು ಎಲೆ ಕೊಯ್ದು ತಂದು ನಡೆದ ವಿಚಾರವನ್ನೆಲ್ಲಾ ಹೇಳಿದನು. ಅಂದೇ ರಾತ್ರಿ ಅವಳು ಹೆಣ್ಣುಮಗುವನ್ನು ಹಡೆದಳು. ಮಗು ಬೆಳೆಯುತ್ತಾ ಎರಡು ವರ್ಷ ಕಳೆಯಿತು. ಒಂದು ದಿನ ಮಧ್ಯಾಹ್ನ ಚಾವಡಿಯಲ್ಲಿ ಆಡುತ್ತಿದ್ದ ಮಗುವನ್ನು ಹುಲಿಗಳು ಎತ್ತಿಕೊಂಡು ಹೋದವು. ಅದನ್ನು ಯಾರೂ ನೋಡಲಿಲ್ಲ. ಅವರು ಎಲ್ಲಾ ಕಡೆ ಹುಡುಕಿದರೂ ಮಗು ಸಿಕ್ಕಲಿಲ್ಲ. ಮಗುವಿನ ಆಶೆ ಬಿಟ್ಟರು.

ಒಂದು ದಿನ ಕಾನಬೆಟ್ಟಿನರ ಮನೆಯ ಕೆಲಸದ ಆಳು ಬಂದು, "ಅಯ್ಯ, ನಮ್ಮ ಕಾನದಲ್ಲಿ ಒಂದು ಮರದ ತೂತಿನೊಳಗೆ ಒಂದು ಮಗುವಿದೆ. ಅದನ್ನು ಎರಡು ಹುಲಿಗಳು ಹಣ್ಣು ತಂದುಕೊಟ್ಟು ಸಾಕುತ್ತವೆ, ಮಗು ನಮ್ಮ ಮಗುವಿನಷ್ಟೇ ದೊಡ್ಡದು" ಎಂದು ಹೇಳಿದ್ದನ್ನು ಕೇಳಿ ಪೆರ್ಗಡೆಯು ಜನರನ್ನು ಕೂಡಿಕೊಂಡು ಅಲ್ಲಿಗೆ ಹೋದನು. ಹೋಗಿ ನೋಡುವಾಗ ಮಗು ಮರದ ತೂತಿನೊಳಗೆ ಇದೆ. ಅದನ್ನು ನೋಡಿ ಪೆರ್ಗಡೆಯು "ಮಾಮಣ್ಣಾ, ಮಾಮಣ್ಣಾ ಆ ಮಗು ನನಗೆ ಕೊಡಿರಿ ನಾನು ಸಾಕುತ್ತೇನೆ" ಎಂದು ಹೇಳಿದನು. ಕೂಡಲೇ ಹುಲಿಗಳು ಮಗುವನ್ನು ಹೊರಗೆ ತಂದು ಕುಳ್ಳಿರಿಸಿ ದೂರ ಹೋಗಿ ನಿಂತವು. ಚಂದವಣ್ಣ ಪೆರ್ಗಡೆಯು ಮಗುವನ್ನು ಎತ್ತಿಕೊಂಡು ಮನೆಗೆ ಬರುವಾಗ ಸೊನ್ನೆಯು ತನಗೆ ಆಡಲಿಕ್ಕೆ ಕಂಚಿನ ಗಿಂಡಿ ಕೊಡಬೇಕೆಂದು ಹಟ ಹಿಡಿದು ಕೂಗುತ್ತಿದ್ದಳು. ಆಗ ಪೆರ್ಗಡೆಯು ಸೊನ್ನೆಯನ್ನು ಕರೆದು "ಇಕೋ ನಿನಗೆ ಗಿಂಡಿ ನಾನು ಕೊಡುತ್ತೇನೆ"ತ ಹೇಳಿ ಮಗುವನ್ನು ತೋರಿಸಿದನು. ಆ ಕೂಡಲೇ ಮಗುವನ್ನು ಅಪ್ಪಿ ಹಿಡಿದು 'ಅಜ್ಜಾ ಈ ಗಿಂಡೆ ನನಗೆ ಬೇಕು. ಮನೆಯವರಿಗೆ ಕೊಡಲಿಕ್ಕಿಲ್ಲ. 'ಗಿಂಡೆ ನನ್ನ ಗಿಂಡೆ'ಯೆಂದು ಹೇಳಿದಳು. ಆದ್ದರಿಂದ ಸೊನ್ನೆ ಗಿಂಡೆಯರು ಕಾನಬೆಟ್ಟಿನ್ನರಮನೆಯಲ್ಲಿ ಬೆಳೆದರು. ಇವರಲ್ಲಿ ಸೊನ್ನೆಯ ರೂಪವು ಹೇಳತೀರದಷ್ಟು ಸುಂದರವಾಗಿತ್ತು. ಇವಳಿಗೆ ಹನ್ನೆರಡುವ ರ್ಷವಾಗುವಾಗ ಉರ್ಕಿದೊಟ್ಟು ಅರಮನೆಯ ಗುರುಮಾರ್ಲನಿಗೆ ಮದುವೆ ಮಾಡಿಕೊಟ್ಟರು.

ಆದರೆ ಗುರುವರ್ಮಾಲನ ತಾಯಿ ಬಹಳ ಮುದುಕಿಯೂ ಒಬ್ಬ ಅಣ್ಣ ಜಾರುವರ್ಮಾಲನು ಕೆಂಜಪರಾಡಿಯಿಂದ ಮಂದುವೆಯಾಗಿ ಅಲ್ಲಿರುವುದರಿಂದಲೂ ಸೊನ್ನೆ ಉರ್ಕಿದೊಟ್ಟು ಅರಮನೆಗೆ ಹೋಗಿ ಅಲ್ಲಿ ಇದ್ದಳು.

ಆಮೇಲೆ ಕಾನಬೆಟ್ಟು ಅರಮನೆಯಲ್ಲಿ ಗಿಂಡೆಯು ಮೈನೆರೆದಳು. ಆದಕ್ಕೆ ಊರಿನ ಹೆಂಗಸರಿಗೆಲ್ಲಾ ಹೇಳಿಕೆ ಮಾಡಿಸಿದರು. ಅದರಲ್ಲಿ ಮುಖ್ಯಸ್ಥರಾದ ಮುಟ್ಟಿಕಲ್ಲು ಮೂಂಕುತ್ತಿ ಮುತ್ತಕ್ಕೆ, ಮಾನೊಟ್ಟು ಬಾಲ ಸರ ಲಿಂಗಕ್ಕೆ, ಕುಡುಂದೂರು ಕರ್ಯಮಣಿ ಕೂಸಕ್ಕೆ, ಚಾವಟಿ ಅಬ್ಬಕ್ಕೆ ಮೊದಲಾದವರು 'ಸೊನ್ನೆ ಬರುವು ದಾದರೆ ನಾವು ಬರುವುದಿಲ್ಲ. ನೀವು ಹೇಳಿಕೆ ಮಾಡುವವರು ಸೊನ್ನಗೆ ಹೇಳಕೂಡದು' ಎಂದು ಹೇಳಿದರು. ನೀರು ಹೊಯ್ಯುವ ದಿವಸ ಊರಿನ ಹೆಂಗಸರೆಲ್ಲಾ ಕೂಡಿ ಅಡುಗೆ ಊಟ ತಯಾರು ಮಾಡುವಾಗ ಸೊನ್ನೆ ಪಲ್ಲಕ್ಕಿಯಲ್ಲಿ ಬರುವುದನ್ನು ನೋಡಿ, ತಮ್ಮ ಕೆಲಸಗಳನ್ನು ಬಿಟ್ಟು, ಸೊನ್ನೆ ಬಂದದ್ದರಿಂದ ನಾವು ಹೋಗುತ್ತೇ ವೆಂದು ಹೇಳಿ ಹೊರಟರು. ಆಗ ಪೆರ್ಗಡೆಯವರು ಅವರನ್ನು ನಿಲ್ಲಿಸಿ ನಾನು ಅವಳನ್ನು ಹಿಂದೆ ಕಳುಹಿಸುತ್ತೇ ನೆಂದು ಹೇಳಿ, ಸೊನ್ನೆ ಬರುವಾಗ ಎದುರಿಗೆ ಹೋಗಿ, "ಮಗು ನೀನು ಹಿಂದೆ ಹೋಗು, ನಮ್ಮ ಊರಿನ ಹೆಂಗಸರಿಗೆ ನಿನ್ನನ್ನು ನೋಡಿದರೆ ಆಗುವುದಿಲ್ಲ. ಅವರೆಲ್ಲಾ ಕಾಗೆ ರೂಪಿನವರಾದ್ದರಿಂದ ನಿನಗೆ ಗೊಡ್ಡು ದಡ್ಡಿ ಯೆಂದು ಹೀಯ್ಯಾಳಿಸುತ್ತಾರೆ. ಅವರಿಗೆ ತಕ್ಕ ಫಲ ದೇವರು ಕೊಡಲಿ, ನಾನು ನಾಳೆ ಬರುತ್ತೇನೆ. ನಾವು ಇದ್ದೇವೆ, ನಮ್ಮ ಸತ್ಯವೂ ಇದೆ" ಎಂದು ಹೇಳಿದರು. ಅದನ್ನು ಕೇಳಿ ಸೊನ್ನೆಯು – "ಆಗಲಿ, ಅವರು ಯಾರಿಗೆ ನೀರು ಹೊಯ್ಯುತ್ತಾರೆಂದು ನೋಡೋಣ. ನಾನು ಹಿಂದೆ ಹೋದಂತೆ ಅವರೂ ಅವರ ಮನೆಗೆ ಹೋದಾರು" ಎಂದು ಹೇಳಿ ಬಹಳ ವ್ಯಸನದಿಂದ ಹಿಂದೆ ಹೋದಳು.

ಕೂಡಿದ ಹೆಂಗಸರಿಗೆಲ್ಲಾ ಬಹಳ ಸಂತೋಷವಾಯಿತು. ಅಡಿಗೆ ಮಾಡಿ ಮದುಮಗಳನ್ನು ಅಲಂಕಾರ ಮಾಡಲಿಕ್ಕೆ ಹೋಗುವಾಗ ಗಿಂಡೆಯು "ನೀವು ಅಲಂಕಾರ ಮಾಡುವುದು ಬೇಡ. ನನ್ನ ಅಕ್ಕ ನನಗೆ ತಂದ ಆಭರಣವನ್ನೆಲ್ಲಾ ಹಿಂದೆ ಕೊಂಡು ಹೋದಳು. ನೀವು ಅಲಂಕಾರ ಮಾಡಲಿಕ್ಕೆ ನಿಮ್ಮ ಹತ್ತಿರ ಏನುಂಟು?" ಎಂದು ಹಂಗಿಸಿದಳು. ಅದನ್ನು ಕೇಳಿ, "ಹೋ ಹೊ ಚಿನ್ನಾಭರಣವೋ ನೋಡು" ಎಂದು ಎಲ್ಲರೂ ಹೊರಟು ತಮ್ಮ ತಮ್ಮ ಮನೆಯಲ್ಲಿದ್ದ ಎಲ್ಲಾ ಚಿನ್ನಾಭರಣಗಳನ್ನು ತಂದು ಗಿಂಡೆಯನ್ನು ಕಾಲಿನಿಂದ ತಲೆಯವರೆಗೆ ಇಟ್ಟು ಶೃಂಗಾರ ಮಾಡಿ ಹೊರಗೆ ಕರೆತಂದರು. ಹೊರಗೆ ಬಂದು ಹಿಂದಿರುಗಿ ನೋಡುವಾಗ ಗಿಂಡೆ ಇಲ್ಲ. ಒಳಗೆ ಹೋಗಿ ನೋಡಿದರು. ಎಲ್ಲೆಲ್ಲಿ ನೋಡಿದರೂ ಕರೆದರೂ ಗಿಂಡೆ ಸಿಗಲಿಲ್ಲ. ಪೆರ್ಗಡೆಗೆ ಹೇಳಿದರು. ಏನು ಮಾಡಿದರೂ ಗಿಂಡೆ ಇಲ್ಲ. ಸೊನ್ನೆಯ ಸತ್ಯವು ಅವಳನ್ನು ಮಾಯ ಮಾಡಿಕೊಂಡು ಹೋಗಿತ್ತು. ಗಿಂಡೆ ಸಿಗಲಿಲ್ಲ. ಹೆಂಗಸರೆಲ್ಲಾ ತಮ್ಮ ಚಿನ್ನಾಭರಣಗಳು ಹೋದುವೆಂದು ಮರುಗುತ್ತಾ ತಮ್ಮ ತಮ್ಮ ಮನೆಗಳಿಗೆ ಹೋದರು.

ಮಾರನೆಯ ದಿವಸ ಚಂದವಣ್ಣ ಪೆರ್ಗಡೆಯು "ಸೊನ್ನೆ ಮೈನೆರೆದು ನಮಗೆ ಸಂತತಿ ಆಗಬೇಕು. ಅವಳ ಮಕ್ಕಳಿಗೆ ಹೆಸರಿಡುವ ಮುಂದೆ ಬ್ರಹ್ಮಲಿಂಗೇಶ್ವರನಿಗೆ ಅಂಕಣದ ಕೆರೆ ಕಟ್ಟಿಸುತ್ತೇನೆ" ಎಂದು ಹೇಳಿ ಕಂಕಣವೆಂಬ ಚಿನ್ನದ ನಗವನ್ನು ತೆಗೆದು ಈಡು ಇಟ್ಟನು. ಕುಲದೈವ ದೇವರುಗಳಿಗೆ ಬಲಿ ಉತ್ಸವಗಳನ್ನು ಮಾಡಿಸುತ್ತೇನೆಂದು ಗುರುವರ್ಮಾಲ ಅವನ ಅಣ್ಣ ಜಾರುವರ್ಮಾಲರ ಮುಂದೆ ಹರಕೆ ಹೇಳಿದನು.

ಒಂದು ವಾರದೊಳಗೆ ಸೊನ್ನೆ ಮೈನೆರೆದಳು. ಕಲಶಾಭಿಷೇಕಕ್ಕೆ ಊರಿನ ಹೆಂಗಸರಿಗೆ ಹೇಳಿಕೆ ಮಾಡಿಸಿ ದರು. ಇವಳನ್ನು ಕಂಡರೆ ನಾಚಿಕೆಯಾಗುವ ಹೆಂಗಸರು, 'ನಾವು ಬರುವುದಿಲ್ಲ, ಅವಳು ಮುದುಕಿ. ಇನ್ನು ಅವಳಿಗೆ ಕಲಶ ನೀರಲ್ಲ, ತುಳಸಿ ನೀರು' ಎಂದು ಬೈದು ಹೀಯಾಳಿಸಿದರು. ಊರ ಹೆಂಗಸರು ಯಾರ್ರೂ ಬರ ಲಿಲ್ಲ. ಆಮೇಲೆ ಕಾನಬೆಟ್ಟಿನರಮನೆಯಲ್ಲಿ ಸೊನ್ನೆಯು ಅವಳಿ ಹೆಣ್ಣುಮಕ್ಕಳನ್ನು ಹೆತ್ತಳು. ಈ ವರ್ತಮಾನ

ಕೇಳಿ ಸೊನ್ನೆಯು ಕೆಲಸದವಳ ಕೂಡೆ 'ಆ ಹೆಂಗಸರು ನಮ್ಮ ಮಕ್ಕಳನ್ನು ನೋಡಬೇಕಾದರೆ ಮುಗುತಿ ತೆಗೆದು ನೋಡಬೇಕೆಂದು ಅಜ್ಜಯ್ಯ ಹರಕೆ ಹೇಳಿದ್ದಾರೆಂದು ಹೇಳಿ, 'ಮೂಗುತಿ ತೆಗೆದು ತಲೆಸೂಡಿಯಲ್ಲಿಟ್ಟು ಕೊಳ್ಳುವಂತೆ ಹೇಳು' ಎಂದಳು. ಅವರು ಮನೆಗೆ ತಲುಪಿ ಬಾಣಂತಿಕೋಣೆಗೆ ಬರುವಾಗ ಕೆಲಸದವಳು ಗುಟ್ಟಾಗಿ ತಿಳಿಸಿದಳು. ಆಗ ಮೂಗುತಿ ತೆಗೆದು ತಲೆಸೂರಿಗೆ ಸಿಕ್ಕಿಸಿಕೊಂಡು ಒಳಗೆ ಹೋಗಿ ಮಕ್ಕಳನ್ನು ನೋಡಿ ಆನಂದ ಪಟ್ಟರು. ಆಗ ಸೊನ್ನೆಯು ಇವರ ಮುಖವನ್ನು ನೋಡಿ 'ಅಯ್ಯೋ ದೇವರೇ, ನೀವೆಲ್ಲರೂ ಸೀಮಂತಕ್ಕೆ ಬರಲಿಲ್ಲವೇನೆಂದು ನೆನೆಸಿದ್ದೆ. ಈ ಸಂಗತಿ ನನಗೆ ಯಾರೂ ಹೇಳಲಿಲ್ಲ. ಹೀಗಾದದ್ದು ಯಾವಾಗ ಅಕ್ಕಾ; ನಾವೇನು ಮಾಡುವುದು ಎಲ್ಲಾ ದೇವರ ಇಚ್ಛೆ'ಯೆಂದು ಮರುಗಿದಳು. ಆಗ ಹೆಂಗಸರು ನಾಚಿಕೆಯಿಂದ ಹೊರಗೆ ಬಂದು ತಮ್ಮ ಮನೆಗೆ ಹೋದರು. ಈ ಮಾತು ಊರಲ್ಲೆಲ್ಲಾ ಹಬ್ಬಿ ಅವರ ಗಂಡಂದಿರು 'ನಾವು ಇರುವಾಗಲೇ ನಿಮ್ಮ ಮೂಗುತಿ ತೆಗೆಸಿದ ಸೊನ್ನೆಯೇ ಹೆಂಗಸರಲ್ಲಿ ರಾಣಿ' ಎಂದು ಹೇಳಿದರು. ನಿಮ್ಮ ಮತ್ಸರಕ್ಕೆ ಹಾಗೆಯೇ ಆಗಬೇಕೆಂದು ಬೈದರು.

ಸೊನ್ನೆಯು ಮಕ್ಕಳಿಗೆ 'ಅಬ್ಬಗ-ದಾರಗ' ಎಂದು ಹೆಸರಿಟ್ಟರು. ಮಕ್ಕಳಿಗೆ ಹತ್ತು ವರ್ಷ ತುಂಬಿತು. ಮುದ್ದಾಗಿ ಬೆಳೆದುಕೊಂಡು ಬಂದವು. ಕಾರ್ಯೇಡಿ (ಕಾರ್ಕಳ) ಹೊಸಂಗಡಿ ಗುತ್ತಿನ ಬೊಳಿಯುಚಂದ್ರನ ಸೆಟ್ಟಿಗೆ ರಾಮ ಲಕ್ಷ್ಮಣರೆಂಬ ಅವಳಿ ಗಂಡು ಮಕ್ಕಳು ಇದ್ದರು. ಅಬ್ಬಗ–ದಾರಗರನ್ನು ರಾಮ ಲಕ್ಷ್ಮಣರಿಗೆ ಕೊಟ್ಟು ಲಗ್ನ ಮಾಡುವುದೆಂದು ನಿಶ್ಚಯವಾಯಿತು. ಲಗ್ನ ಪತ್ರಿಕೆಗಳು ಊರೂರಿಗೆ ಮುಟ್ಟಿದವು. ಅಬ್ಬಗ–ದಾರಗರು ಹುಟ್ಟುವ ಮೊದಲು ಬ್ರಹ್ಮದೇವರಿಗೆ ಹರಕೆ ಹೇಳಿಕೊಂಡಿತ್ತು. ಆದರೆ ಅದನ್ನು ತೀರಿಸಲಿಲ್ಲ. ಬ್ರಹ್ಮನಿಗೆ ಸಿಟ್ಟು ಬಂದು ಅದರ ನೆನಪು ಮಾಡಬೇಕೆಂದು ಲಗ್ನದ ಸನ್ನಾಹದಲ್ಲಿ ಹೇಳಿಕೆ ಕೊಡುತ್ತಿರುವ ಸೊನ್ನೆಯ ಬಳಿಗೆ ಬ್ರಾಹ್ಮಣ ವೇಷದಲ್ಲಿ ಬಂದು, ಅವಳನ್ನು ಮಾತನಾಡಿಸಿ, ಮಕ್ಕಳಿಗೆ ಮದುವೆ ಮಾಡುವಾಗ ನಿಮ್ಮ ದೇವರಿಗೆ ನೀವು ಹೇಳಿದ ಹರಕೆ ಕೊಟ್ಟಿರಾ ಎಂದು ಕೇಳಿದನು. ಸೊನ್ನೆಗೆ ಸಿಟ್ಟು ಬಂತು. 'ಬೇಡಿ ತಿನ್ನುವ ಬ್ರಾಹ್ಮಣಾ ನಿನಗೇಕೆ ಆ ವಿಚಾರ ? ನೀನೇನು ಹರಕೆ ಹೇಳುವಾಗ ತಲೆಯ ಮೇಲೆ ಕೂತು ಇದ್ದಿಯಾ ? ನಾವು ಹೇಳಿದ ಹರಕೆಯ ವಿಚಾರ ನಿನಗೆ ಅಗತ್ಯ ಇಲ್ಲ' ಎಂದು ಗದರಿಸಿದಳು. ಆಗ ಬ್ರಾಹ್ಮಣನು 'ಅವಕ್ಕಾ ಸಿಟ್ಟಾಗಬೇಡ. ನಾನು ಹೋಗುತ್ತೇನೆ' ಎಂದು ಹೇಳಿ, ಅಲ್ಲಿಂದಲೇ ಅಬ್ಬಗ–ದಾರಗರು ಇರುವ ಉರ್ಕಿದೊಟ್ಟು ಮನೆಗೆ ಬಂದು ಕೊಟ್ಟಿಗೆಯಲ್ಲಿದ್ದ ದನಕರುಗಳನ್ನು ಬಿಟ್ಟು ಬೈಲಿಗೆ ಇಳಿಸಿ, ಮನೆಯವರನ್ನು ಕರೆದು ಹೇಳಿ, ಹೋದನು. ಮನೆ ಕೆಲಸದವರೆಲ್ಲಾ ದನಕರುಗಳನ್ನು ಹೊಡಕೊಂಡು ಬರಲಿಕ್ಕೆ ಬೈಲಿಗೆ ಹೋದರು. ಮಕ್ಕಳು ಬ್ರಾಹ್ಮಣನಿಗೆ ಧರ್ಮ ಕೊಟ್ಟರು. ಆಗ ಬ್ರಾಹ್ಮಣನು 'ಮಕ್ಕಳೇ ನಿಮಗೆ ಚೆನ್ನೆಯಾಟ ಗೊತ್ತಿಲ್ಲವೋ ? ಆಡಿ ನೋಡುವ' ಎಂದು ಹೇಳಿದ್ದಕ್ಕೆ ಚೆನ್ನೆಮಣೆ ಕಲ್ಲಿನ ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕಿದ್ದಾರೆಂದು ಹೇಳಿದರು. ಆಗ ಬ್ರಾಹ್ಮಣನು 'ಇಲ್ಲ, ಬೀಗ ಹಾಕಲಿಲ್ಲ ನೋಡಿ' ಎಂದು ಹೇಳಿದಾಗ ಮಕ್ಕಳು ಹೋಗಿ ನೋಡಿದರು. ಕಲ್ಲ ಕರೆಂಬಿಯ ಬಾಗಿಲು ತೆರೆದಿತ್ತು. ಒಳಗಿನಿಂದ ಚೆನ್ನಮಣೆ ತಂದು ಚೆನ್ನೆಯಾಟ ಆಡಿದರು. ಮೂರು ಆಟ ದಲ್ಲಿಯೂ ಅಕ್ಕ ಸೋತಳು. ತಂಗಿ ನಗಾಡಿದಳು, ಅಕ್ಕನಿಗೆ ಸಿಟ್ಟು ಬಂತು. ಚೆನ್ನಮಣೆಯಿಂದ ಒಂದು ಪೆಟ್ಟು ಹೊಡೆದಳು. ಆ ಪೆಟ್ಟು ಕೆನ್ನೆಗೆ ಬಿದ್ದು ತಂಗಿ ಸತ್ತುಹೋದಳು. ಅದನ್ನು ನೋಡಿ, ಈ ಹೆಣವನ್ನು ತೆಗೆದು ಬಾವಿಗೆ ಹಾಕಿ ತಾನೂ ಬಾವಿಗೆ ಬಿದ್ದಳು. ಆ ಬ್ರಾಹ್ಮಣ ಇಷ್ಟನ್ನು ನೋಡಿ ಹೊರಟು ಹೋದನು. ಮನೆ ಯವರೆಲ್ಲಾ ಚೆನ್ನಮಣೆಯನ್ನು ನೋಡಿ ಮಕ್ಕಳನ್ನು ಹುಡುಕಿದರು. ಕಾನಬೆಟ್ಟಿಗೆ ಜನ ಕಳುಹಿಸಿದರು. ತಂದೆ ತಾಯಿಗಳಿಗೆ ಜನ ಕಳುಹಿಸಿದರು. ಕಾನಬೆಟ್ಟಿನ ಪೆರ್ಗಡೆಯವರು ಬಂದರು. ಬಾವಿಕಟ್ಟೆಗೆ ಹೋಗುವಾಗ ಒಂದು ವೀಳ್ಯದೆಲೆ ಸಿಕ್ಕಿತು. ಅದರಲ್ಲಿ ಬರೆದುದನ್ನು ಓದಿ ನೋಡಿದರು. ಅಯ್ಯೋ ದೇವರೆ ನೀನು ಹೀಗೆ ಮಾಡಬಹುದೇ ಎಂದು ಹೇಳಿ, ಬಾವಿಗೆ ಬಿದಿರು ಹಾಕಿದರು. ಆಗ ಸಿಂಗಾರದ ಹಾಳೆಯಂತೆ ಹೆಣಗಳು ಕಂಡು ಬಂದವು. ಅವನ್ನು ಮೇಲಕ್ಕೆ ತೆಗೆದರು. ಕ್ರಮಪ್ರಕಾರ ಜೋಡುಕಾಷ್ಟಗಳನ್ನು ನಿರ್ಮಿಸಿ ಸುಟ್ಟರು.

ಸಂಡುವಾಗ ಬ್ರಹ್ಮದೇವರು ಮೇಲಿನಿಂದ ಬಂದು ಈ ಮಕ್ಕಳನ್ನು ಎಬ್ಬಿಸಿ ಕೈಯಲ್ಲಿ ಹಿಡಿದುಕೊಂಡು ಮೇಲೆ ಹೋದರು. ಅದನ್ನು ನೋಡಿ ಪೆರ್ಗಡೆಯವರು ಮರುಗಿದರು. ಆ ಮಕ್ಕಳನ್ನು ಬ್ರಹ್ಮದೇವರು ಮರಳಿ ತಂದು ನೀವು ಶುದ್ಧ ಮಾಡಿಕೊಂಡು ಬನ್ನಿರಿಯೆಂದು ಹೇಳಿ ಬಿಟ್ಟುಹೋದರು. ಮಾರನೆಯ ದಿನ ತಮ್ಮ ತಾಯಿಯ ಬಳಿಗೆ ಹೋಗಿ ಬ್ರಹ್ಮದೇವರ ಅಪ್ಪಣೆಯನ್ನು ತಿಳಿಸಿ ನಾವು ಬ್ರಹ್ಮಲಿಂಗೇಶ್ವರ ದೇವಸ್ಥಾನಕ್ಕೆ ಹೋಗುತ್ತೇವೆಂದು ಹೇಳಿ ಹೋದವರು ದೇವಸ್ಥಾನದ ಪೂಜೆ ಭಟ್ರು ಮತ್ತು ಅವರ ಹೆಂಡತಿಯ ಮೇಲೆ ಆವೇಶ ಬಂದು ದೇವರ ಬಲಭಾಗದಲ್ಲಿ ಸ್ಥಾಪನೆಯಾದರು.

ಈಗಲೂ ಅಬ್ಬಗ-ದಾರಗರ ಶಿಲಾವಿಗ್ರಹವು ನಂದಳಿಕೆ ದೇವಸ್ಥಾನದಲ್ಲಿ ಇರುವುದನ್ನು ಕಾಣಬಹುದು.

---

ನಾಲ್ಕು ಪ್ರಧಾನ ಸಂಧಿಗಳು 'ಸಿರಿಯ ಪಾಡ್ದನ'ದಲ್ಲಿ ಎಲ್ಲ ಭಾಗಗಳಲ್ಲೂ ದುರಂತದ ಪ್ರಾಧಾನ್ಯ ಕಾಣಿಸುತ್ತದೆ. ಸಿರಿಯ ಸಂಧಿಯಲ್ಲಿ ಬರುವ 'ಅಕ್ಕೆರಸು ಪೂಂಜೆದಿ' ತನ್ನ ಅಭಿಮಾನ, ಛಲ, ಸಾಹಸ ಈ ಗುಣಗಳಿಂದ ತನಗೆ ಒಗ್ಗದ ಸಂಗತಿಗಳನ್ನು, ವ್ಯಕ್ತಿಗಳನ್ನು ಧಿಕ್ಕರಿಸುತ್ತಾ ಹೋಗುತ್ತಾಳೆ. ಲಂಪಟನಾದ ಕಾಂತುಪೂಂಜನಿಗೆ ದಿಟ್ಟತನದಿಂದ ಬರ (ವಿಚ್ಛೇದನ) ಹೇಳಿ ಎರಡನೆಯ ಗಂಡನ ಕೈ ಹಿಡಿಯುವ ಸಾಹಸ ಮಾಡುತ್ತಾಳೆ. ಎರಡನೆಯ ಶಿಶುವನ್ನು ಪ್ರಯಾಣದ ದಾರಿಯಲ್ಲಿ ಪ್ರಸವಿಸಿ ಮಾಯವಾಗುತ್ತಾಳೆ. ಇಲ್ಲಿ 'ಮಾಯಕ' ಆಗುವ ಪ್ರಸಂಗ ಅತಿಮಾನುಷ ಸ್ವರೂಪದ್ದು. ಆ ಮೂಲಕ ಈ ಸಿರಿಯು ದೈವತ್ವದ ಮಟ್ಟಕ್ಕೆ ಏರುತ್ತಾಳೆ. ಇಲ್ಲಿ ಸಿರಿಯು ಈ ಎರಡನೆಯ ಮಗು ಅಂದರೆ 'ಸೊನ್ನೆ'ಯನ್ನು ಹೆತ್ತ ಮೇಲೆ ಮಾಯಕವಾಗುವುದು ಎನ್ನುವ ಕಲ್ಪನೆಯು ಪ್ರಸವವಾದ ಕೂಡಲೇ ಅವಳ ಸಾವನ್ನು ಸಾಂಕೇತಿಕವಾಗಿ ಹೇಳಿದ ರೀತಿಯೆಂದು ಕಾಣುತ್ತದೆ. ಹೆಚ್ಚಿನ ಪಾಡ್ದನಗಳಲ್ಲಿ ವ್ಯಕ್ತಿಗಳು 'ಮಾಯಕ' ಆಗುವ ಪ್ರಸಂಗ ಬರುತ್ತದೆ. ಈ ಎಲ್ಲಾ 'ಮಾಯಕ' ಗಳು ವಾಸ್ತವಿಕ ನೆಲಗಟ್ಟಿನಲ್ಲಿ 'ಸಾವು' ಎಂಬ ಸ್ಥಿತಿಗೆ ಸಮಾನವಾಗಿದೆ. ಅಂತಹ 'ಸಾವು' ಕೊಲೆ ಆಗಿರಬಹುದು, ಆತ್ಮಹತ್ಯೆ ಆಗಿರಬಹುದು ಅಥವಾ ಆಕಸ್ಮಿಕವಾದ ಯಾವುದೇ ರೀತಿಯ ಮರಣವಾಗಿರಬಹುದು.

'ಸಿರಿಯ ಪಾಡ್ದನ'ದ ದುರಂತ ಗುಣಗಳು ಮುಖ್ಯವಾಗಿ ಎರಡು ಮೂಲಗಳಲ್ಲಿ ಕಾಣಿಸುತ್ತವೆ. ಒಂದು ಸಾಂಸ್ಕೃತಿಕ ಸ್ವರೂಪದ್ದು, ಇನ್ನೊಂದು ವೈಯಕ್ತಿಕವಾದದ್ದು. ಸಾಂಸ್ಕೃತಿಕ ಮೂಲದಿಂದ ಬಂದಿರುವ ದುರಂತವು ಪ್ರಧಾನವಾಗಿ ಮಾತೃಮೂಲೀಯ ಕುಟುಂಬ ವ್ಯವಸ್ಥೆಗೆ ಸಂಬಂಧಿಸಿದ್ದು. ಏಕೆಂದರೆ ಅಂತಹ ಕೌಟುಂಬಿಕ ವ್ಯವಸ್ಥೆಯನ್ನು ಈ ಪಾಡ್ದನವು ಸಾರುತ್ತದೆ ಮತ್ತು ಸಮರ್ಥಿಸುತ್ತದೆ. ವೈಯಕ್ತಿಕ ಸ್ವರೂಪದಿಂದ ಬಂದಿರುವ ದುರಂತವು ಇಂತಹ ಮಾತೃಮೂಲೀಯ ಕೌಟುಂಬಿಕ ವ್ಯವಸ್ಥೆಯಲ್ಲಿ ಹೆಣ್ಣೊಬ್ಬಳ ಪಾತ್ರಕ್ಕೆ ಸಂಬಂಧಿಸಿದ್ದು. ಪುರಾಣದ ಮಟ್ಟದಲ್ಲಿ ಈ ಎರಡು ಮೂಲದ ದುರಂತಗಳು ಒಂದು ಇನ್ನೊಂದರೊಡನೆ ಸಂಪರ್ಕವನ್ನು ಪಡೆಯುತ್ತವೆ. ಸಾಂಸ್ಕೃತಿಕ ಮೂಲವು ಸಿರಿಯ ಆಚರಣೆಗೆ ಸಂಬಂಧಿಸಿದ್ದು. ವೈಯಕ್ತಿಕ ಮೂಲವು ಈ ಸಿರಿಯ ಪದ್ಧತಿಯು ವಾರ್ಷಿಕವಾಗಿ ನಡೆಯುವಾಗ ವ್ಯಕ್ತಿಯೊಬ್ಬನು ಅದರಲ್ಲಿ ಭಾಗವಹಿಸುವ ರೀತಿಯನ್ನು ಹೇಳುತ್ತದೆ.

ಸಾಂಸ್ಕೃತಿಕವಾಗಿ ಸಿರಿಯ ಪಾಡ್ದನವು ತುಳುನಾಡಿನ ಬಂಟ ಸಮಾಜದ ಮಾತೃಮೂಲೀಯ ಪದ್ಧತಿ ಅಥವಾ ಅಳಿಯ ಸಂತಾನ ಕಟ್ಟು, ಬಯಕೆ ಪದ್ಧತಿಯ ಸ್ವರೂಪ, ವಿವಾಹ ವಿಚ್ಛೇದನ, ವರದಕ್ಷಿಣೆಯ ಕ್ರಮ – ಮುಂತಾದ ಅನೇಕ ಅಂಶಗಳನ್ನು ತಿಳಿಸುತ್ತದೆ (ಈ ಅಂಶಗಳನ್ನು ಪಾಡ್ದನಗಳಲ್ಲಿ ವ್ಯಕ್ತವಾಗುವ 'ತುಳುನಾಡಿನ ಸಂಸ್ಕೃತಿ' ಎನ್ನುವ ಅಧ್ಯಾಯದಲ್ಲಿ ವಿವರಿಸಲಾಗಿದೆ).

ತುಳುನಾಡಿನಲ್ಲಿ ಸಿರಿಯ ಗುಡಿಗಳಿರುವ ಅನೇಕ ಕಡೆಗಳಲ್ಲಿ ವರ್ಷಕ್ಕೆ ಒಂದು ಬಾರಿ ಸಿರಿಯ ಆಚರಣೆಯನ್ನು ನಡೆಸುತ್ತಾರೆ. ಪಗ್ಗು ತಿಂಗಳಿನ ಹುಣ್ಣಿಮೆಯ ದಿನ ಈ ಆಚರಣೆಯನ್ನು ನಡೆಸುತ್ತಾರೆ. ರಾತ್ರಿಯ ವೇಳೆಗೆ ಈ ಆಚರಣೆಗಳು ಆರಂಭವಾಗುತ್ತವೆ. ಆರಂಭದಲ್ಲಿ ಬ್ರಾಹ್ಮಣ ತಂತ್ರಿಯು ಪ್ರಾಥಮಿಕ ಆಚರಣೆಗಳನ್ನು ನಡೆಸುತ್ತಾನೆ. ಕುಟುಂಬದ ಯಜಮಾನನು ಸಿರಿಗೆ ಹರಕೆಗಳನ್ನು ಅರ್ಪಿಸುತ್ತಾನೆ. ಆಮೇಲೆ ಈ 'ಸಿರಿ ಆಚರಣೆ' ಯಲ್ಲಿ ಭಾಗವಹಿಸುವವರು ಗುಂಪು ಗುಂಪುಗಳಾಗಿ ಕೂಡುತ್ತಾರೆ. ಪ್ರತಿಯೊಂದು ಗುಂಪಿನಲ್ಲಿಯೂ ನಾಲ್ಕು ಅಥವಾ ಐದು ಗಂಡಸರು ಮತ್ತು ಇಪ್ಪತ್ತರಿಂದ ಮೂವತ್ತರಷ್ಟು ಹೆಂಗಸರು ಇರುತ್ತಾರೆ. ಗಂಡಸರು ಕಡು ಕೆಂಪು ಬಣ್ಣದ ಲುಂಗಿ ಉಟ್ಟು ಪ್ರತಿಯೊಂದು ಗುಂಪಿನ ಮಧ್ಯಭಾಗದಲ್ಲಿ ನಿಲ್ಲುತ್ತಾರೆ. ಅವರು ಸಿರಿಯ ಮಗ ನಾದ ಕುಮಾರನನ್ನು ಆವಾಹನೆ ಮಾಡುವವರು. ಅವರನ್ನು 'ಕುಮಾರರು' ಎಂದು ಕರೆಯುತ್ತಾರೆ. ಇಂತಹ ಗುಂಪಿನ ಮಧ್ಯದಲ್ಲಿ ಆರು ಅಥವಾ ಎಂಟು ಮುದುಕಿಯರು ಇರುತ್ತಾರೆ. ಹಳದಿ ಸೀರೆಯನ್ನು ಉಟ್ಟ ಈ ಮುದುಕಿಯರು ಸಿರಿಯ ಆರಾಧಕರಲ್ಲಿ ಬಹಳ ಅನುಭವಸ್ಥರು. ಇವರು ಅನೇಕ ವರ್ಷಗಳಿಂದ ಈ ಸಿರಿಯ ಆಚರಣೆಯಲ್ಲಿ ಭಾಗವಹಿಸಿ ಇರುತ್ತಾರೆ. ಉಳಿದ ಹೆಂಗಸರು ಸಾಮಾನ್ಯವಾಗಿ ನಡುವಯಸ್ಸಿನವರಾಗಿದ್ದು ಬಿಳಿ ಸೀರೆಗಳನ್ನು ಉಟ್ಟಿರುತ್ತಾರೆ. ಅವರು ಈ ಗಂಡಸರು ಮತ್ತು ವಯಸ್ಸಾದ ಹೆಂಗಸರ ಸುತ್ತ ಸುಮಾರಾಗಿ ಆಯತಾಕಾರದಲ್ಲಿ ನಿಂತುಕೊಂಡಿರುತ್ತಾರೆ. ಅವರು ಇಂತಹ ಆಚರಣೆಗಳಲ್ಲಿ ಮೊದಲ ಬಾರಿ ಭಾಗವಹಿಸುವವ ರಾಗಿರುತ್ತಾರೆ. ಇವರ ಹಿಂದುಗಡೆ ಇವರ ಬಂಧು ಮಿತ್ರರು ಗುಂಪು ಕೂಡಿರುತ್ತಾರೆ. ಈ ಸಿರಿಯ ಸ್ಥಾನದ ಸುತ್ತ ಅಥವಾ ಶೈವ ದೇವಾಲಯದಲ್ಲಿ ಆಗುವುದಾದರೆ ಅದರ ಸುತ್ತ ನಿಲ್ಲುವ ಬೇರೆ ಬೇರೆ ಸಮಾಜದ ವರ್ಗ ದವರು ತಮ್ಮ ತಮ್ಮ ಅಂತಸ್ತುಗಳಿಗೆ ಅನುಸಾರವಾಗಿ ಇರುತ್ತಾರೆ. ಸಾಮಾಜಿಕವಾಗಿ ಸಿರಿಯ ಆಚರಣೆಗೆ ಸಂಬಂಧಿಸಿದ ಬಂಟ ಸಮಾಜದವರು ಇಂತಹ ಗುಂಪುಗಳಲ್ಲಿ ಮೊದಲು ಕಾಣಿಸುತ್ತಾರೆ.

ಸಿರಿಯ ಸ್ಥಾನದಲ್ಲಿ ಹರಕೆಯ ಕೆಲಸ ಮುಗಿದ ಮೇಲೆ ಬ್ರಾಹ್ಮಣ ತಂತ್ರಿಯು ಸಿರಿ ದೇವತೆಯನ್ನು ಆವಾಹನೆ ಮಾಡುತ್ತಾನೆ. ಆ ಗುಂಪುಗಳ ಜನರು ಸಿರಿಯ ಪಾಡ್ದನವನ್ನು ಹೇಳಲು ತೊಡಗುತ್ತಾರೆ. ಆ ಆಚರಣೆಯಲ್ಲಿ ನೇರವಾಗಿ ಭಾಗಿಯಾಗುವವರು ಸಿರಿಯ ಆವಾಹನೆಯಲ್ಲಿ ತೊಡಗುತ್ತಾರೆ. ಆರಂಭದ ಸಂದರ್ಭ ದಲ್ಲಿ ಈ ಆವಾಹನೆಯು ಸೌಮ್ಯವಾಗಿದ್ದು ಸಾಮಾನ್ಯವಾಗಿ ನಿಯಂತ್ರಿತವಾಗಿರುತ್ತದೆ. ಭಾಗಿಗಳು ಪಾಡ್ದನವನ್ನು ಹೇಳುತ್ತಾ ಹೋದ ಹಾಗೆಯೇ ಅವರ ಕಣ್ಣುಗಳು ಜೋಲಾಡುತ್ತಾ ಬರುತ್ತವೆ. ಸಾಮೂಹಿಕವಾಗಿ ಹೇಳುತ್ತಾ ಹೋದ ಹಾಗೆಯೇ ಅವರ ವೈಯಕ್ತಿಕ ವ್ಯತ್ಯಾಸಗಳು ಮಾಯವಾಗುತ್ತ ಬರುತ್ತವೆ ಮತ್ತು ಅವರ ಪುರಾಣದ ಸಿರಿಯ ಹಾಗೂ ಕುಮಾರ ದೈವಗಳ ಸ್ವಭಾವಗಳ ಜೊತೆಗೆ ಒಂದಾಗುತ್ತಾ ಬರುತ್ತಾರೆ. ಸುಮಾರು ಒಂದು ಗಂಟೆಯವರೆಗೆ ಈ ರೀತಿ ಹಾಡುವಿಕೆ ನಡೆದ ಮೇಲೆ ಆವಾಹನೆಗೊಳ್ಳುವವರಲ್ಲಿ ಒಬ್ಬಾಕೆ ಆವಾಹನೆಯ ಹೆಚ್ಚು ಉಗ್ರರೂಪವನ್ನು ತೋರಿಸಲು ತೊಡಗುತ್ತಾಳೆ. ಅವಳು ಅಸಂಬದ್ಧ ಶಬ್ದಗಳ ಮೂಲಕ ಬೊಬ್ಬೆ ಹಾಕುತ್ತಾಳೆ. ಶಾಪಗಳನ್ನು ಉಚ್ಚರಿಸುತ್ತಾಳೆ. ಆಮೇಲೆ ನೆಲದಲ್ಲಿ ಬೀಳುತ್ತಾಳೆ. ಆವಾಹನೆಗೊಳ್ಳುವವರಲ್ಲಿ ಒಬ್ಬಳು 'ಸಿರಿ' ಮತ್ತು ಒಬ್ಬ 'ಕುಮಾರನು'. ಈ ರೀತಿ ಮೈ ನಡುಗುತ್ತಾ ಬೊಬ್ಬೆ ಹಾಕುತ್ತಾ ಬಿದ್ದ ಹೆಂಗಸನ್ನು 'ಯಾರು ನೀನು?' ಎಂದು ಕೇಳುತ್ತಾರೆ. ಆಗ ಅವಳು ತಾನು 'ಸಿರಿಯ ವಂಶದವಳಾದ ಸೊನ್ನೆ' ಎಂದು ಹೇಳುತ್ತಾಳೆ. ಮನೆಗಳಲ್ಲಿ ಹೆಂಗಸರಿಗೆ ಮೂರ್ಛೆ ರೋಗಗಳು ಇದ್ದರೆ ಅಂತಹವರನ್ನು ಇಂತಹ ಸಿರಿಯ ಆಚರಣೆಗಳಿಗೆ ಕರೆದುಕೊಂಡು ಬರುತ್ತಾರೆ ಮತ್ತು ಸಿರಿಯ ಹೆಸರಿನಲ್ಲಿ ಹರಕೆಯನ್ನು ಸಲ್ಲಿಸುತ್ತಾರೆ.

ಸಿರಿಯ ಪಾಡ್ದನದಲ್ಲಿ ಆ ಮನೆತನದ ಮೂರು ತಲೆಮಾರುಗಳ ಅಕ್ಕೆಸಿರಿ, ಸೊನ್ನೆ, ಅಬ್ಬಗೆ–ದಾರಗೆ ಅವರ ಕಷ್ಟ-ಸಂಕಷ್ಟಗಳ ಸಮಸ್ಯೆಗಳ ವಿವರಣೆಯನ್ನು ಕಾಣಬಹುದು. ಸಿರಿಯ ಆಚರಣೆಯಲ್ಲಿಯೂ ಹೆಂಗಸರು ಮೈಮೇಲೆ ಆವಾಹನೆಯನ್ನು ತಂದು ಆವೇಶದಿಂದ ದೇಹಕ್ಕೆ ಮತ್ತು ಮನಸ್ಸಿಗೆ ಕಷ್ಟವನ್ನು ತಂದುಕೊಳ್ಳು ತ್ತಾರೆ. ಈ ದೃಷ್ಟಿಯಿಂದ ಸಿರಿಯ ಪಾಡ್ದನ ಮತ್ತು ಆಚರಣೆಗಳಿಗೆ ಸಂಬಂಧ ಕಾಣಿಸುತ್ತದೆ. ಪಾಡ್ದನಗಳಲ್ಲಿರುವ ಸ್ತ್ರೀಯರು – ಅವರನ್ನೇ 'ಸಿರಿ'ಗಳು ಎಂದು ಕರೆಯುತ್ತಾರೆ – ಕಷ್ಟಗಳನ್ನು ಅನುಭವಿಸಿದಂತೆ ಆ ವಂಶದವರು

ಎಂದು ಹೇಳಿಕೊಳ್ಳುವ ಆಚರಣೆಯು ಹೆಂಗಸರು ಮಾನಸಿಕವಾಗಿ ಕಷ್ಟಗಳನ್ನು ಅನುಭವಿಸಿ ಆ ಸಿರಿಗಳಿಗೆ ಅಂದರೆ ತಮ್ಮ ವಂಶದ ಮೂಲ ವ್ಯಕ್ತಿಗಳಿಗೆ ತಮ್ಮ ಭಕ್ತಿ ಗೌರವಗಳನ್ನು ಸಲ್ಲಿಸುತ್ತಾರೆ. ದುರಂತದ ಸ್ಪಷ್ಟರೂಪ ಸಿರಿಯ ಪಾಡ್ದನ ಮತ್ತು ಸಿರಿಯ ಆಚರಣೆಗಳಲ್ಲಿ ಈ ದೃಷ್ಟಿಯಿಂದ ಕಂಡು ಬರುತ್ತವೆ.

ಸಿರಿಯ ಆಚರಣೆಯಲ್ಲಿ ಆವಾಹನೆಗೊಳ್ಳುವ ಹೆಂಗಸರು ಇಂತಹ ಕಠೋರವಾದ ಆವಾಹನೆಗಳಿಂದ ತಮ್ಮ ಕುಟುಂಬದಲ್ಲಿ ಗಂಡಸರಿಂದ ತಮಗಾಗುವ ತೊಂದರೆಗಳನ್ನು ಗುರುತಿಸುವಲ್ಲಿ ಹಾಗೂ ಸಾಮಾನ್ಯ ಸಂಕಷ್ಟಗಳಲ್ಲಿ ಹೆಂಗಸರದ್ದೇ ಆದ ಭಾವನಾತ್ಮಕ ಸಮಾಜ ಒಂದನ್ನು ಕಟ್ಟಿಕೊಳ್ಳುವಲ್ಲಿ ಹೆಚ್ಚು ಸಹಾಯಕವಾಗುತ್ತದೆ. ಈ ದೃಷ್ಟಿಯಿಂದ ಸಿರಿಯ ಪಾಡ್ದನ ಮತ್ತು ಆಚರಣೆಯನ್ನು ಅಧ್ಯಯನ ಮಾಡಿದ *Peter J. Claus* ಎಂಬ ವಿದ್ವಾಂಸನ ಅಭಿಪ್ರಾಯಗಳನ್ನು ಇಲ್ಲಿ ನೋಡಬಹುದು: "Significantly, in light of the moral of the myth' the possessed women usually traces her troubles to neglect and abandonment on the part of her male relatives. In other parts of South Asia, similar conditions have been linked to an overly strict and repressive household environment (Carstairs, n.d.- Opler 1958, Obeyeserkere 1969).

The myth and the ritual thus allow young women to vent fhe emotioal reaction to personal family situations in a dramatic fashion· Indeed, the situation encourages them to do so, The myth and ritual provide an alternative mythical family with which the young women can identify· It is a family whose tragedy is known by everyone, yet one in which tragedy is overcome by virtue."[1]

ಸಿರಿಯ ಪುರಾಣ ಕತೆಯು ಕೆಲವು ಸಾಮಾಜಿಕ ಮತ್ತು ನೈತಿಕ ತತ್ವಗಳನ್ನು ಪ್ರಧಾನವಾಗಿ ಆಧರಿಸಿದೆ. ಅದು ಸ್ತ್ರೀ ಮೂಲದ ಬಂಧುತ್ವ ಮತ್ತು ಕುಟುಂಬದಲ್ಲಿ ಸ್ತ್ರೀಯ ಸ್ಥಾನಮಾನಗಳನ್ನು ನಿರ್ದೇಶಿಸುತ್ತದೆ. ಅದು ಮಾತೃಮೂಲೀಯ ಕುಟುಂಬ ಪದ್ಧತಿಯನ್ನು ಸಮರ್ಥಿಸಿ ಸ್ಥಾಪಿಸುತ್ತದೆ. ಜೊತೆಗೆ ಇಂತಹ ಪದ್ಧತಿಯ ಅನೇಕ ಲೋಪದೋಷಗಳ ಕಡೆಗೂ ಬೆಟ್ಟುಮಾಡಿ ತೋರಿಸುತ್ತದೆ. ಗಂಡಸರು ತಮ್ಮ ಸಂಪತ್ತನ್ನು ಸ್ತ್ರೀಯರಿಗೆ ಕೊಡುವ ಉದ್ದೇಶವೆಂದರೆ ಅವರ ಮೂಲಕ ತಮ್ಮರಕ್ತಸಂಬಂಧದ ಮುಂದುವರಿಕೆಯನ್ನು ಸ್ಥಾಪಿಸುವುದು. ಆದರೆ ಗಂಡಂದಿರಿಗೆ ಅವರನ್ನು ಸಂಪೂರ್ಣವಾಗಿ ತಮ್ಮ ಹತೋಟಿಯಲ್ಲಿ ಇಟ್ಟುಕೊಳ್ಳಲು ಇಲ್ಲಿ ಅವಕಾಶವಿಲ್ಲ. ಮನುಷ್ಯನ ಮೂಲಭೂತ ಮಾನಸಿಕ ವಿಕಾರಗಳಾದ ಕಾಮ ಸ್ವಾರ್ಥ, ಅತ್ಯಾಸೆ, ದೌರ್ಬಲ್ಯ ಇವುಗಳೆಲ್ಲ ಈ ಪಾಡ್ದನದಲ್ಲಿ ಬಹಳ ಶಕ್ತಿಪೂರ್ಣವಾಗಿ, ಕ್ರಿಯಾತ್ಮಕವಾಗಿ ಕಾಣಿಸುತ್ತವೆ. ಹೆಂಗಸರು ತಮ್ಮ ಸಂತಾನವನ್ನು ಪರಿಶುದ್ಧವಾಗಿ ಇಟ್ಟುಕೊಳ್ಳಲು ಮತ್ತು ಮುಂದುವರಿಸಿಕೊಂಡು ಹೋಗಲು ಹೆಣಗಾಡುವುದನ್ನು ಇಲ್ಲಿ ಕಾಣಬಹುದು. ನಿಸ್ಸಹಾಯಕತೆ, ಕೆಟ್ಟ ವ್ಯವಸ್ಥೆ, ಅಗಲುವುದು – ಇವುಗಳಿಂದ ಉಂಟಾಗುವ ಕಾತರಗಳು ಸಮಸ್ಯೆಗಳ ರೂಪದಲ್ಲಿ ವ್ಯಕ್ತಿಗಳನ್ನು ಕಾಡುತ್ತವೆ. ಆದ್ದರಿಂದಲೇ ಸಿರಿಯ ವಾರ್ಷಿಕ ಆಚರಣೆಯ ಸಂದರ್ಭದಲ್ಲಿ ಇಂತಹ ದುರಂತದ ಪರಿಣಾಮಗಳನ್ನು ಅಭಿನಯಿಸಿ, ಜೊತೆಗೇ ಸಾಮೂಹಿಕವಾಗಿ ಇವು ಕಾಣಿಸಿಕೊಳ್ಳುವಾಗ ಹೆಚ್ಚು ಸಾಂತ್ವನದ ವಾತಾವರಣ ಮೂಡಿಸುವಲ್ಲಿ ಅನುಕೂಲ ಎನ್ನುವ ತತ್ವವನ್ನು ಧ್ವನಿಸಲಾಗಿದೆ.

---

1. Peter J· Claus ''The Siri Myth and Ritual : A Mass Possession cult of South India's Ethnology Vol XIV, No· 1' January 1975.

ಸಿರಿಯ ಆಚರಣೆಯಲ್ಲಿ ಉಳಿದ ದೈವಗಳಿಗಿಂತ ಕೆಲವು ವಿಶಿಷ್ಟ ಭಿನ್ನತೆಗಳನ್ನು ಕಾಣುತ್ತೇವೆ. ಸಾಮಾನ್ಯವಾಗಿ ಭೂತಾರಾಧನೆಯಲ್ಲಿ ಕಾಣಿಸುವ ಭಯದ ವಾತಾವರಣ ಸಿರಿಯ ಆಚರಣೆಯಲ್ಲಿ ಇಲ್ಲ. ಈ ಆಚರಣೆಯಲ್ಲಿ ಯಾವುದೇ ಒಂದು ವ್ಯಕ್ತಿ ಸಿರಿಯನ್ನು ಆವಾಹನೆ ಮಾಡಿಕೊಳ್ಳುವುದು ಪ್ರಯೋಜನಕಾರಿಯಾದುದು ಎಂಬ ದೃಷ್ಟಿಯಿಂದಲೇ ಹೊರತು ಭಯದ ಕಾರಣಕ್ಕಾಗಿ ಅಲ್ಲ. ಸಿರಿಯ ಆಚರಣೆಯು ಮಾತೃ ಪ್ರಧಾನ ಕುಟುಂಬಗಳಲ್ಲಿ ಹೆಚ್ಚು ಪ್ರತಿಷ್ಠಿತವಾಗಿರುವ ಬಂಟ ಸಮಾಜಕ್ಕೆ ಸಂಬಂಧಿಸಿರುವುದರಿಂದ ಸಿರಿಯನ್ನು ಆವಾಹನೆ ಮಾಡುವುದು ಉಳಿದ ಯಾವುದೇ ಮಾತೃ ಪ್ರಧಾನ ಕುಟುಂಬದ ಜಾತಿಗಳಿಗೆ ಅಪವಿತ್ರ ಎನ್ನಿಸುವುದಿಲ್ಲ. ಆದ್ದರಿಂದ ಅವರಲ್ಲಿಯೂ ಈ ನಂಬಿಕೆ ಮತ್ತು ಆಚರಣೆ ಪ್ರಭಾವಶಾಲಿಯಾಗಿದೆ.

ಸಿರಿಯ ಪಾಡ್ದನವು ಮಾತೃಮೂಲೀಯ ಬಂಧುತ್ವ ವ್ಯವಸ್ಥೆಯ ಬೇರೆ ಬೇರೆ ಹೆಂಗಸರ ಸಮಸ್ಯೆಗಳನ್ನು ಒಟ್ಟು ಗೂಡಿಸಿ ಸಂಘಟಿಸಿ ಕೊಟ್ಟಿರುವುದು ಅದರ ವೈಶಿಷ್ಟ್ಯ. ವಿಷಯಲಂಪಟನಾದ ಗಂಡ ಕಾಂತುಪೂಂಜ, ಸತ್ಯನಾಪುರದ ಅರಮನೆಯಲ್ಲಿ ಕೆಲಸದ ಮೇಲ್ವಿಚಾರಕನಾಗಿದ್ದು ಸಿರಿಗೆ ಸಿಕ್ಕುವ ಅರಮನೆಯಲ್ಲಿ ಗಡಿ (ಪಾಲು) ಕೊಡಬೇಕೆಂದು ಕೇಳುವ ಶಂಕರ ಆಳ್ವ, ಶಂಕರಾಳ್ವನ ಲಂಚದ ಬಲದಿಂದ ಸಿರಿಗೆ ವಿರುದ್ಧವಾಗಿ ಶಂಕರಾಳ್ವ ಪರವಾಗಿ ಪಾಲಿನ ತೀರ್ಮಾನ ಕೊಡುವ ಪತ್ತೇರಿ–ಕೂಟ (ಪಂಚಾಯಿತಿಯ ಕೂಟ), ಕಡಲಿನಲ್ಲಿ ಸಿರಿಯನ್ನು ದೋಣಿಯ ಮೂಲಕ ದಾಟಿಸಲು ದೋಣಿ ಬಿಡದ ಕಡವಿನವನು, ಅದಕ್ಕೆ ಕಾರಣಕರ್ತನಾದ ಅವಳ ಕಟ್ಟಗಂಡ ಕಾಂತುಪೂಂಜ, ಕೊಡ್ಸರಾಳ್ವನನ್ನು ಎರಡನೆಯ ಮದುವೆಯಾದ ಸಂದರ್ಭದಲ್ಲಿ ಸಿರಿಯ ಮೇಲೆ ಮತ್ಸರ ತಾಳುವ ಸೋಮಾಳ್ವದಿ, ಈ ರೀತಿ ಅನೇಕರ ಮೂಲಕ ಕಷ್ಟಗಳನ್ನು ಅನುಭವಿಸುತ್ತಾಳೆ—ಅಕ್ಕೆಸಿರಿ. ಪ್ರಧಾನವಾಗಿ ಗಂಡನ ಸೂಳೆಗಾರಿಕೆ, ಹಿಂಸಾ ಸ್ವಭಾವ ಇವುಗಳಿಂದ ಅಕ್ಕೆಸಿರಿಯು ರೋಸಿಹೋಗುತ್ತಾಳೆ. ಅದಕ್ಕಾಗಿ ಅವನಿಗೆ ಬರವನ್ನು (ವಿವಾಹ ವಿಚ್ಛೇದನ) ಕೊಡುತ್ತಾಳೆ, ಕೊಡ್ಸರಾಳ್ವನೊಂದಿಗೆ ಎರಡನೆಯ ಮದುವೆಯಾಗುತ್ತಾಳೆ. ಇವುಗಳಲ್ಲಿ ಹೆಣ್ಣೇ ಗಂಡನಿಂದ ವಿವಾಹ ವಿಚ್ಛೇದನವನ್ನು ಪಡೆಯುವುದು ಮತ್ತು ಹೆಣ್ಣಿಗೆ ಎರಡನೆ ಮದುವೆಯಾಗುವುದು — ಇವು ಬಹು ಮುಖ್ಯವಾದ ಎರಡು ಸಾಮಾಜಿಕ ಪದ್ಧತಿಗಳು. ಶಂಕರಾಳ್ವನಿಗೆ ಸತ್ಯನಾಪುರದ ಅರಮನೆಯಲ್ಲಿ ಪಾಲುಕೊಡುವಾಗ ಪತ್ತೇರಿ ಕೂಟದವರಿಗೆ ಅವನು ಲಂಚ ಕೊಡುತ್ತಾನೆ. ಆದ್ದರಿಂದ ಅವರು ಅವನ ಪರವಾಗಿ ತೀರ್ಮಾನವನ್ನು ಕೊಡುತ್ತಾರೆ. ಆಗಿನ ಕಾಲದಲ್ಲಿ ಸಮಾಜದಲ್ಲಿ ಬೇರೂರಿದ್ದ ಭ್ರಷ್ಟಾಚಾರದ ಸ್ವರೂಪವನ್ನು ಇಲ್ಲಿ ಸ್ಪಷ್ಟವಾಗಿ ಕಾಣಬಹುದು.

ತಾಯಿ ಅಕ್ಕೆಸಿರಿಯು ಮಕ್ಕಳಿದ್ದು ಗಂಡನ ದೆಸೆಯಿಂದ ಮತ್ತು ಸಮಾಜದ ದೆಸೆಯಿಂದ ಬದುಕಿನಲ್ಲಿ ದುರಂತವನ್ನು ಕಂಡರೆ, ಮಗಳು ಸೊನ್ನೆಯು ಮಕ್ಕಳಿಲ್ಲದೆ ಸಮಾಜದ ಕಣ್ಣಿನಲ್ಲಿ ದೂಷಣೆಗೆ ಒಳಗಾಗಿ ಬದುಕಿನಲ್ಲಿ ಸಂಕಟವನ್ನು ಪಡುತ್ತಾಳೆ. ತಂಗಿ 'ಗಿಂಡೆ' ಮೈನೆರೆದು ಹೆಂಗಸಾದಾಗ ಅವಳ ನೀರಹಬ್ಬಕ್ಕೆ ಹೋದ ಸೊನ್ನೆಗೆ ಕೂಡಿದ ಹೆಂಗಸರು 'ಬಂಜೆ' ಎಂದು ಅವಮಾನಮಾಡಿ ಬಹಿಷ್ಕಾರ ಹಾಕುತ್ತಾರೆ. ಕೊನೆಗೂ ಬ್ರಹ್ಮರಿಗೆ ಹರಕೆ ಹೇಳುವುದರ ಮೂಲಕ ಸೊನ್ನೆ ಗರ್ಭಧರಿಸುತ್ತಾಳೆ. ಅವಳ ಹೆತ್ತ ಅವಳಿ ಹೆಣ್ಣು ಮಕ್ಕಳು – ಅಬ್ಬಗ ಮತ್ತು ದಾರಗ. ಮಕ್ಕಳು ಆಗುವವರೆಗೆ ಮಕ್ಕಳು ಇರಲಿಲ್ಲ ಎನ್ನುವ ಕಾರಣದಿಂದ ಬದುಕಿನ ದುರಂತವಾದರೆ, ಮಕ್ಕಳು ಜನಿಸಿದ ಮೇಲೆ ಅಂತಹ ಮಕ್ಕಳು ಹೊಡೆದಾಡಿಕೊಂಡು ಮತ್ತು ಆತ್ಮಹತ್ಯೆಯ ಮೂಲಕ ಸತ್ತಾಗ ಸೊನ್ನೆಯ ಬದುಕಿನ ದುರಂತ ಇನ್ನೊಂದು ತುದಿಗೆ ಮುಟ್ಟುತ್ತದೆ. ಬ್ರಹ್ಮರಿಗೆ ಹೇಳಿದ ಹರಕೆಯನ್ನು ತೀರಿಸದ ಕಾರಣ ಮಾತು ಕೊಟ್ಟು ತಪ್ಪ ಬಾರದು ಎಂಬ ತತ್ವದ ಆಧಾರದ ಮೇಲೆ ಸೊನ್ನೆಯ ಬದುಕನ್ನು ಮಕ್ಕಳ ಮರಣದ ದುರಂತ ತುಂಬುತ್ತದೆ.

ಸೊನ್ನೆಯ ಮಕ್ಕಳಾದ ಅಬ್ಬಗ—ದಾರಗರ ಬದುಕು ಎಳವೆಯಲ್ಲಿಯೇ ಅಂದರೆ ಮದುವೆಗೆ ಮುಂಚಿತವಾಗಿಯೇ ಆಕಸ್ಮಿಕವಾಗಿ, ಆದರೆ ಘೋರವಾಗಿ ಕೊನೆಗೊಳ್ಳುವುದರ ಮೂಲಕ ದುರಂತದ ಮತ್ತೊಂದು

ಮುಖಿವು ಪಾಡ್ದನದ ಈ ಭಾಗದಲ್ಲಿ ಸಿಗುತ್ತದೆ. ಆದರೆ ಇಲ್ಲಿನ ಅಬ್ಬಗ—ದಾರಗರ ದುರಂತದಲ್ಲಿ ಅಕ್ಕಸಿರಿಯ ಅಥವಾ ಸೊನ್ನೆಯ ದುರಂತಗಳ ಹಾಗೆ ಸಮಾಜ ಯಾವುದೇ ಪಾತ್ರವನ್ನು ವಹಿಸುವುದಿಲ್ಲ. ಬದಲಾಗಿ ವಿಧಿ—ಹರಕೆಯನ್ನು ಅಬ್ಬಗ—ದಾರಗರ ಹೆತ್ತವರು ತೀರಿಸಲಿಲ್ಲ ಎನ್ನುವ ಕಾರಣಕ್ಕಾಗಿ—ನೇರವಾಗಿ ಈ ದುರಂತಕ್ಕೆ ಏಕೈಕ ಕಾರಣವಾಗುತ್ತದೆ. ಅದಕ್ಕಾಗಿ ಬ್ರಹ್ಮರು ಬ್ರಾಹ್ಮಣ ವೇಷದಲ್ಲಿ ಬಂದು ಅಬ್ಬಗ—ದಾರಗರನ್ನು ಚೆನ್ನೆ ಯಾಟವಾಡಲು ಪ್ರೇರೇಪಿಸಿ, ಆ ಚೆನ್ನೆಯಾಟದಲ್ಲಿ ಅಕ್ಕ ಅಬ್ಬಗ ಸೋತು ತಂಗಿ ದಾರಗ ಗೆಲ್ಲುವಂತೆ ಮಾಡಿ, ಆ ಮೂಲಕ ತಂಗಿಯನ್ನು ಅಕ್ಕ ಬಂಗಾರದ ಚೆನ್ನೆಮಣೆಯಿಂದ ನಡುನೆತ್ತಿಗೆ ಹೊಡೆದು ಕೊಲ್ಲುವಂತೆಯೂ, ಇದ ರಿಂದ ಪಶ್ಚಾತ್ತಾಪಗೊಂಡ ಅಬ್ಬಗಳು ಬಾವಿಗೆ ಬಿದ್ದು ಆತ್ಮಹತ್ಯೆ ಮಾಡಿಕೊಂಡು ಸಾಯುವಂತೆಯೂ ಮಾಡು ತ್ತಾರೆ. ಇಲ್ಲಿ ಅಬ್ಬಗ—ದಾರಗರ ದುರಂತ ಅವರ ಅಥವಾ ಸಮಾಜದ ಯಾವ ತಪ್ಪು ಇಲ್ಲದೆಯೂ ಬಹಳ ಕ್ರೂರವಾಗಿ ಜರುಗುವುದನ್ನು ಕಾಣಬಹುದು. ಸ್ವಾರ್ಥಕ್ಕಾಗಿ ಹರಕೆ ಹೇಳಿ ಮರೆತರೆ ಅನಾಹುತ ಸಂಭವಿಸುತ್ತದೆ ಎಂದು ಹೇಳುವುದು 'ಅಬ್ಬಗ—ದಾರಗ' ಕಥಾನಕದ ಉದ್ದೇಶವಾಗಿದೆ. ಹಾಗೆಯೇ ಅಕ್ಕ ತಂಗಿಯರು ಚೆನ್ನೆ ಯಾಟ ಆಡಬಾರದು ಎನ್ನುವ ಜನಪದ ಸಂಪ್ರದಾಯವೊಂದು ಹುಟ್ಟಿಕೊಳ್ಳಲು ಈ ಕಥಾನಕದ ಭಾಗ ಕಾರಣವಾಗಿದೆ.

ಧಾರ್ಮಿಕವಾಗಿ ಬ್ರಹ್ಮನನ್ನು ಕುರಿತ ನಂಬಿಕೆ ಮತ್ತು ಆರಾಧನೆ, ಬ್ರಹ್ಮಸ್ಥಾನ (ಆಲಡೆ) ಇದರ ಜೀರ್ಣೋ ದ್ಧಾರ, ಬ್ರಹ್ಮನಿಗೆ ಹರಕೆ ಹೇಳುವುದು—ಈ ಎಲ್ಲಾ ದೃಷ್ಟಿಯಿಂದ ಉಳಿದ ಎಲ್ಲಾ ದೈವಗಳ ಆರಾಧನೆ ಯಂತೆಯೇ ಸಿರಿಗಳ ಆರಾಧನೆಯ ಹಿಂದೆಯೂ ಅವುಗಳಿಗಿಂತ ಹೆಚ್ಚು ಶಕ್ತಿಶಾಲಿಯಾದ ಬ್ರಹ್ಮನ ಸ್ವರೂಪದ ಪರಿಚಯವಾಗುತ್ತದೆ.

'ಸಿರಿ' ಯ ಆರಾಧನೆಯಲ್ಲಿ ಅಕ್ಕಸಿರಿ, ಸೊನ್ನೆ, ಗಿಂಡೆ, ಅಬ್ಬಗ – ದಾರಗ — ಇವರು ಐದು ಮಂದಿ ಸಿರಿ ಗಳು. 'ಮೈಯಂಗ' ಮತ್ತು 'ಮಯಿಸಗ' ಎಂಬ ಇಬ್ಬರನ್ನು ಈ ಸಿರಿಗಳ ಜೊತೆಗೆ ಸೇರಿಸುವುದುಂಟು. 'ಮೈಸಂದಾಯ' ಭೂತದ ಒಂದು ಪಾಡ್ದನದಲ್ಲಿ 'ಐಯಗೆ' ಮತ್ತು 'ಮೈಯಗೆ' ಎಂಬ ಇಬ್ಬರು ಹೆಣ್ಣು ಮಕ್ಕಳು ಇರುತ್ತಾರೆ. ಅವರಲ್ಲಿ ಮೈಯಗೆ ಎನ್ನುವವಳಿಗೆ ಹುಟ್ಟುವ ಮಗು ತಲೆಯಲ್ಲಿ ಕೊಂಬು ಇರುವ 'ಮೈಸಂದಾಯ' ನಂದಳಿಕೆಯ ಸಿರಿಗಳಾದ 'ಅಬ್ಬಗ—ದಾರಗ'ರು ಈ 'ಮೈಸಂದಾಯ' ವನ್ನು ಮೊದಲು ನಂಬುತ್ತಾರೆ. ಆದ್ದರಿಂದ ಈ ಮೈಯಗೆ ಮತ್ತು ಮಯಿಸಗರನ್ನು ಸಿರಿಗಳ ಜೊತೆಗೆ ಸೇರಿಸಿರಬಹುದು. ಕವತ್ತಾರು, ನಂದಳಿಕೆ ಮುಂತಾದ ಕಡೆಗಳಲ್ಲಿ ನಡೆಯುವ ಸಿರಿಗಳ ಆರಾಧನೆಯಲ್ಲಿ–ಈ ಸಿರಿಗಳು ಆವೇಶವಾಗುವ ಕಾರ್ಯಕ್ರಮಕ್ಕೆ 'ದಳಿಯ ಹಾಕುವುದು' ಎನ್ನುತ್ತಾರೆ. ಅಕ್ಕಸಿರಿಯ ಮಗನಾದ 'ಕುಮಾರ' ನಿಗೂ ಆರಾಧನೆ ಸಲ್ಲುತ್ತದೆ. ಸಿರಿಯ ಪಾಡ್ದನದಲ್ಲಿ ಕುಮಾರನು ತೊಟ್ಟಿಲ ಮಗುವಾಗಿರುವಾಗಲೇ ಗಂಡನಿಂದ ವಿಚ್ಛೇದನ ಹೊಂದಿ ಮನೆಬಿಟ್ಟು ಹೊರಟ ಸಿರಿಯು ದಾರಿಯಲ್ಲಿ ಇರುವಾಗ ಕುಮಾರ ಮಾಯವಾಗುತ್ತಾನೆ. ಅದಕ್ಕಿಂತ ಮೊದಲು ಆರು ತಿಂಗಳ ಮಗು ಕುಮಾರ, 'ನಾನು ಬ್ರಹ್ಮದೇವನ ಬಳಿ ಹೋಗುತ್ತೇನೆ' ಎಂದು ಹೇಳುತ್ತದೆ. ಆದ್ದರಿಂದ ಪಾಡ್ದನದಲ್ಲಿ ಕುಮಾರನು ಕೇವಲ ಆರು ತಿಂಗಳ ಮಗುವಾಗಿ ಮಾತ್ರ ಕಾಣಿಸಿಕೊಂಡು ಮಾಯವಾಗಿ ಬ್ರಹ್ಮನ ಸ್ಥಾನಕ್ಕೆ ಸೇರಿದ ಎಂದು ಹೇಳುವಲ್ಲಿ ಅತಿಮಾನುಷತೆಯ ಸ್ವರೂಪ ಇದೆ. ಬಹುಶಃ ಸರಿಯಾದ ಆಹಾರ ಆರೈಕೆ ಇಲ್ಲದೆ ದಾರಿಯಲ್ಲಿ ಸಿರಿಯ ಆರು ತಿಂಗಳ ಮಗು ಕುಮಾರ ಸತ್ತು ಹೋಗಿರಬಹುದು. ಆ ವಾಸ್ತವಿಕ ಸಾವನ್ನು ಅತಿಮಾನುಷತೆಯ ಮಟ್ಟದಲ್ಲಿ ಪೌರಾಣಿಕ ಚೌಕಟ್ಟಿನಲ್ಲಿ ಕುಮಾರನು ಮಾಯವಾದ ಹಾಗೆ, ಬ್ರಹ್ಮರ ಸ್ಥಾನಕ್ಕೆ ಸೇರಿದ ಹಾಗೆ ಚಿತ್ರಿಸಲಾಗಿದೆ. ಆದ್ದರಿಂದ ಅಂತಹ ಮಗು ಕುಮಾರನಿಗೂ ಸಿರಿಗಳ ಆರಾಧನೆಯಲ್ಲಿ ಸ್ಥಾನ ಸಿಕ್ಕಿದೆ.

ಸಿರಿಗೆ ಸಂಬಂಧಿಸಿದಂತೆ ಇನ್ನೂ ಇಬ್ಬರು ದೈವಗಳಾಗುವುದನ್ನು ಪಾಡ್ದನದಲ್ಲಿ ಹೇಳಲಾಗಿದೆ. ಸಿರಿಯನ್ನು ಕಾಮಿಸಿ ಬಂದು ಅವಳ ಶಾಪದಿಂದ ಕಲ್ಲಾದ 'ಮಹೇಶ್ವರ ಕುಮಾರ' ನು ಆಕೆಯ ಕಟಾಕ್ಷದಿಂದ 'ಸೇಮಿಕಲ್ಲ

ಪಂಜುರ್ಲಿ' ಎನ್ನಿಸುತ್ತಾನೆ. ಅಕ್ಕೆಸಿರಿಯು ಕೆಲಸದಾಕೆ ಬಹಳ ನಂಬಿಕಸ್ಥ ಹೆಣ್ಣು. 'ದಾರು' ಎಂಬುವಳು ಸಿರಿಯ ಕೃಪೆಯಿಂದ 'ಜಾಲ ಬೈಕಡ್ತಿ' ಎಂಬ ದೈವವಾಗುತ್ತಾಳೆ. ಮನೆ ಮಕ್ಕಳನ್ನೂ ದನಕರುಗಳನ್ನೂ ಕಾಪಾಡಿಕೊಂಡು ಬರುವ ದೈವವೆಂದು 'ಜಾಲ ಬೈಕಡ್ತಿ' ಯನ್ನು ಆರಾಧಿಸುತ್ತಾರೆ.

ಆಶಯಗಳ ದೃಷ್ಟಿಯಿಂದ 'ಸಿರಿ'ಯ ಪಾಡ್ದನವು ಬಹಳ ಮುಖ್ಯವಾಗಿದೆ. 'ಸಿರಿ', 'ಕುಮಾರ', 'ದಾರು' ಮುಂತಾದವರು ಮಾಯವಾಗಿ ದೈವಗಳಾಗುವುದು, 'ಅಬ್ಬಗ—ದಾರಗ'ರು ಆಕಸ್ಮಿಕ ಸಾವಿನ ಮೂಲಕ ದೈವಗಳಾಗುವುದು, ಸಾಮಾಜಿಕವಾದ ಅನೇಕ ವಿಕೃತಿಗಳು, ವೈಶಿಷ್ಟ್ಯಗಳು ಇಲ್ಲಿ ಇವೆ. ಅತಿಮಾನುಷತೆ ಆರಂಭದಿಂದ ಕೊನೆಯವರೆಗೂ ತನ್ನ ಕಾರ್ಯವನ್ನು ನಿರ್ವಹಿಸುತ್ತದೆ.

## ೩ ಕಲ್ಕುಡ - ಕಲ್ಲುರ್ಟಿ

ಅಕಾಲ ಮರಣವನ್ನು ಹೊಂದಿದ ಮನುಷ್ಯರು ಭೂತಗಳಾಗಿ ರೂಪಾಂತರವನ್ನು ಹೊಂದಿ ಆರಾಧನೆಯನ್ನು ಪಡೆಯುವ ಭೂತಗಳ ಪಾಡ್ದನಗಳಲ್ಲಿ ಬಹಳ ಮುಖ್ಯವಾದವುಗಳೆಂದರೆ 'ಕಲ್ಕುಡ–ಕಲ್ಲುರ್ಟಿ' ಪಾಡ್ದನಗಳು. ಈ ಹಿಂದೆ ನೋಡಿದ 'ಕೋಟಿ – ಚೆನ್ನಯ' ಪಾಡ್ದನ ಮತ್ತು 'ಸಿರಿಯ ಪಾಡ್ದನ, ಗಳಲ್ಲಿ ಇದೇ ಆಶಯ ಪ್ರಧಾನವಾಗಿದ್ದರೂ ಸ್ಪಷ್ಟವಾಗಿ ಭೂತಗಳೆಂದೇ ಕರೆಯಲಾಗುವುವುಗಳು 'ಕಲ್ಕುಡ – ಕಲ್ಲುರ್ಟಿ' ಭೂತಗಳು. ಜನಪ್ರಿಯತೆಯ ದೃಷ್ಟಿಯಿಂದಲೂ ಆರಾಧನೆಯ ವೈಶಿಷ್ಟ್ಯದ ದೃಷ್ಟಿಯಿಂದಲೂ 'ಕಲ್ಕುಡ–ಕಲ್ಲುರ್ಟಿ' ಭೂತಗಳು ಹೆಚ್ಚು ಸಾರ್ವತ್ರಿಕವಾಗಿ ತುಳುನಾಡಿನಲ್ಲಿ ಕಾಣಿಸಿಕೊಳ್ಳುತ್ತವೆ. ಭೂತಾರಾಧನೆಯ ಸಮಾಜಗಳಲ್ಲಿ ಯಾವುದೇ ಒಂದು ವಿಶಿಷ್ಟ ಜಾತಿಗೆ ನೇರವಾಗಿ ಸಂಬಂಧಪಡದೆ ಎಲ್ಲ ವರ್ಗದವರಿಂದಲೂ ಈ ಭೂತಗಳು ಆರಾಧನೆಯನ್ನು ಪಡೆಯುತ್ತವೆ. 'ಕಲ್ಕುಡ' ಎಂದರೆ 'ಬೀರುಕಲ್ಕುಡ', 'ಕಲ್ಲುರ್ಟಿ' ಎಂದರೆ ಅವನ ತಂಗಿ 'ಕಾಳಮ್ಮ'. ಈ ಅಣ್ಣತಂಗಿ ದೈವಗಳು ಪಾಡ್ದನದಲ್ಲಿ ಮತ್ತು ಆರಾಧನೆಯಲ್ಲಿ ಸಾಮಾನ್ಯವಾಗಿ ಜೊತೆ ಜೊತೆಯಾಗಿಯೇ ಕಾಣಿಸುತ್ತವೆ. 'ಕಲ್ಕುಡ—ಕಲ್ಲುರ್ಟಿ' ಭೂತಗಳ ಪಾಡ್ದನದ ಅನೇಕ ಪಾಠಗಳು ಸಿಗುತ್ತವೆ. ಇಲ್ಲಿ ಮುಖ್ಯವಾಗಿ ಅಂತಹ ಆರು ಪಾಡ್ದನಗಳ ಪಾಠಗಳ ಆಧಾರದಿಂದ ಈ ಅಧ್ಯಯನವನ್ನು ಮಾಡಲಾಗಿದೆ. ಐತಿಹಾಸಿಕ ದಾಖಲೆಗಳು ಇರುವ, ಸಾಮಾಜಿಕ ವರ್ಗಗಳ ಅಂತರವನ್ನು ಪ್ರತಿಪಾದಿಸುವ ಮತ್ತು ವ್ಯಕ್ತಿ ಮೂಲವಾದ ಮತ್ಸರ, ದ್ವೇಷ ಮುಂತಾದ ಮೌಲ್ಯಗಳ ಸಂಘರ್ಷವನ್ನು ಹೇಳುವ 'ಕಲ್ಕುಡ—ಕಲ್ಲುರ್ಟಿ' ಪಾಡ್ದನಗಳ ಕೆಲವು ಪಾಠಗಳ ಆಕರಗಳು :

K 1 : ಕಲ್ಲುರ್ಟಿ — ಮ್ಯಾನರ್ ಎ; 'ಪಾಡ್ದನೊಳು', ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು 1886.
K 2 : ಪೊಸಭೂತ — ಅದೇ
K 3 : ಕಲ್ಕುಡೆ — ಅದೇ
K 4 : ಕಲ್ಕುಡ — ವಾದಿರಾಜ ಭಟ್ಟ ಕನರಾಡಿ; 'ಪಾಡ್ದನಗಳು' ಯುಗ ಪುರುಷ ಪ್ರಕಾಶನ, ಕಿನ್ನಿಗೋಳಿ, 1974.
K 5 : ಕಲ್ಲುರ್ಟಿ — ಅದೇ
K 6 : ಕಲ್ಲುರ್ಟಿ — ಅದೇ

### K 1 ಪಾಠದ ಕನ್ನಡ ರೂಪಾಂತರ

"ಶಂಭು ಕಲ್ಕುಡ ಮತ್ತು ಇರಾವತಿ ಎಂಬ ದಂಪತಿಗಳು ಕೆಲ್ಲತ್ತ ಮಾರೆನಾಡು ಎಂಬಲ್ಲಿ ವಾಸವಾಗಿದ್ದರು. ಎಲ್ಯಣ್ಣ, ಮಲ್ಲಣ್ಣ, ಬೀರು, ಬಿಕ್ಕರು ಮತ್ತು ನಂದು ಎಂಬ ಐದು ಮಂದಿ ಗಂಡು ಮಕ್ಕಳೂ ಕಲ್ಲುರ್ಟಿ ಎಂಬ ಮಗಳೂ ಅವರಿಗೆ ಹುಟ್ಟಿದರು. ಎಲ್ಯಣ್ಣ ಬಡಗಿಯಾದ. ಮಲ್ಲಣ್ಣ ಕಮ್ಮಾರನಾದ. ಬೀರು ಅಕ್ಕಸಾಲಿಯಾದ.

ಬಿಕ್ಕುರು ತಾವುದ ಕೆಲಸಗಾರನಾದ. ದೀರ್ಘಕಾಯನಾದ ನಂದು ಕಲ್ಲುಕುಟಿಗನಾದ. ಆಮೇಲೆ ಇವರ ಹೆಸರು ಗಳು ಬದಲಿದವು. ಎಲ್ಯಣ್ಣನನ್ನು ಮಲೆನಾಡೆಚ್ಚವನೆಂದರು. ಮಲ್ಲಣ್ಣನನ್ನು ಸೂತ್ರಲೆಚ್ಚವನೆಂದರು. ತಾವುದ ಕೆಲಸದವನನ್ನು ಚಿಮುಟಗಾರನೆಂದರು. ಆಕ್ಕಸಾಲಿಗನನ್ನು ಯಾರಣ್ಣನೆಂದೂ ಕಲ್ಲುಕುಟಿಗ ನಂದುವನ್ನು ಕಲ್ಕುಡನೆಂದೂ ಕರೆಯತೊಡಗಿದರು.

ನಂದು ಮತ್ತು ಕಲ್ಲುರ್ಟಿಒಟ್ಟಿಗೇ ಬೆಳೆದರು. ನಂದು ಗರ್ಭದಲ್ಲಿರುವಾಗಲೇ ಶಂಭು ಕಲ್ಕುಡನಿಗೆ ಬೇಲೂರು ಮತ್ತು ಬೆಳಗೊಳಗಳಿಂದ ಒಂದೇ ಸಮನೆ ಓಲೆಗಳೂ ದೂತರೂ ಬರತೊಡಗಿದರು. ಗರ್ಭಿಣಿಗೆ ಔಷಧೋಪ ಚಾರ ನಡೆಸಿ ತಾನು ಬರುವೆನೆಂದು ಅವನು ಉತ್ತರಿಸಿದ. ಹಾಗೆಯೇ ಅವಳಿಗೆ ಐದು ಸೇರು ಸಾಸಿವೆ, ಮೂರು ಸೇರು ಕಾಳಮೆಣಸು, ಒಣಕೊಬ್ಬರಿ, ಒಂದು ತಂಬಿಗೆ ಎಣ್ಣೆ ಮತ್ತು ಅರ್ಧಸೇರಿನ ಕಂಚಿನ ಪಾತ್ರೆಯೊಂದನ್ನು ಕೊಟ್ಟು, ಗಂಜಿ ಊಟ ಮುಗಿಸಿ ಪ್ರಯಾಣಕ್ಕೆ ಸಿದ್ಧನಾದ. ತನ್ನ ಜಾತಿ ಬೆಳೆಯುವಂತೆ ಜನಿವಾರವನ್ನು ಮುಂಗೈಗೆ ಸಿಕ್ಕಿಸಿ ಉಳಿಗಳನ್ನು ಹರಿತ ಮಾಡಿ ಚೀಲದಲ್ಲಿ ಹಾಕಿಕೊಂಡ. ಅಳತೆಯ ದಾರವು ಚೀಲದಲ್ಲಿತ್ತು. ಆಮೇಲೆ ಸ್ನಾನ ಮಾಡಿ ಉಡುಪು ತೊಟ್ಟು ಹೆಂಡತಿಯೊಡನೆ ತಾನು ಬೆಳ್ಗೊಳಕ್ಕೆ ಹೋಗುತ್ತೇನೆಂದು ಹೇಳಿಹೊರಟ.

ರಸ್ತೆಯಲ್ಲಿ ಹೋಗುವಾಗ ಶುಭ ಶಕುನವೊಂದು ಅವನಿಗೆ ತೋರಿತು. ಒಂದು ಮರಕ್ಕೆ ಆನೆಯನ್ನು ಬಿಗಿ ದಿದ್ದರು. ಅವನು ಸಂತೆಕಟ್ಟೆ ದಾಟಿ, ಕೊಕ್ಕಡ, ನೇರೆಂಕಿಗ್ರಾಮಗಳಲ್ಲಿ ಮುಂದುವರಿದ. ಹೀಗೆ ಬೆಳ್ಗೊಳಕ್ಕೆ ತಲುಪಿ ಅಲ್ಲಿ ಕಲ್ಲಿನ ಹನ್ನೆರಡು ಮೆಟ್ಟಲುಗಳನ್ನು ಇಳಿದು, ದ್ವಾರಕ್ಕೆ ಬಂದು ಮೂರು ಅಂಗಳಗಳನ್ನು ದಾಟಿದ. ಆಮೇಲೆ ಚಾವಡಿಯ ಬದಿಯಿಂದ ನವರತ್ನ ಖಚಿತವಾದ ಸ್ತಂಭದ ಬಳಿಗೆ ಹೋದ. ಅರಸು ಅಲ್ಲಿ ನವಿಲಿನ ಗರಿಯ ಸಿಂಹಾಸನದಲ್ಲಿ ಕುಳಿತಿದ್ದ. ಶಂಭುಕಲ್ಕುಡ ಅವನಿಗೆ ವಂದಿಸಿದ.

"ಬಾ, ಕುಳಿತುಕೊಳ್ಳು ಕಲ್ಕುಡ" ಎಂದರು ಅರಸು.

"ನನ್ನನ್ನೇಕೆ ಕರೆಸಿದಿರಿ ?" ಎಂದು ಅವನು ಪ್ರಶ್ನಿಸಿದ.

"ಇಂದು ಸಂಜೆಯಾಯಿತು'' ಎಂದರು ಅರಸರು. "ನೀನು ಐದು ಸೇರು ಅಕ್ಕಿ ಕೊಂಡು ಹೋಗಿ ಊಟ ಮಾಡು. ನಾಳೆ ನೀನು ಮಾಡಬೇಕಾದ ಕೆಲಸ ಹೇಳುತ್ತೇನೆ. ಕೆಲಸವನ್ನು ಮಾತ್ರ ಚೆನ್ನಾಗಿ ಮಾಡಬೇಕು" ಎಂದರು ಅರಸರು.

ಹಾಗೆಯೇ ಅಕ್ಕಿ ಕೊಂಡುಹೋಗಿ ಊಟ ಮಾಡಿ ಮಲಗಿದ. ಮರುದಿನ ಸೂರ್ಯೋದಯಕ್ಕೆ ಅರಮನೆಗೆ ಹೋದ. ಸಾವಿರ ಕಂಬ ಮತ್ತು ನೂರಿಪ್ಪತ್ತು ವಿಗ್ರಹಗಳುಳ್ಳ ಒಂದು ಬಸ್ತಿ, ತೋಟದೊಳಗೆ ಒಂದು ಚಿಕ್ಕ ಬಸ್ತಿ, ಅಂಗಳಕ್ಕೊಂದು ಕಲ್ಲಿನ ಆನೆ ಮತ್ತು ಗೋಮಟೇಶ್ವರನ ಒಂದು ದೊಡ್ಡ ಮೂರ್ತಿಯನ್ನು ನಿರ್ಮಿಸ ಬೇಕೆಂದು ಅರಸರು ಆಜ್ಞಾಪಿಸಿದರು. ಇವುಗಳ ಕೆಲಸ ಚಮತ್ಕಾರವಾಗಿರಬೇಕೆಂದು ವಿವರಿಸಿ, ಒಂದು ಬಾಗಿಲು ತೆರೆದರೆ ಎಲ್ಲ ಬಾಗಿಲುಗಳು ಮುಚ್ಚಬೇಕು; ಒಂದು ಬಾಗಿಲು ಮುಚ್ಚಿದರೆ ಸಾವಿರ ಬಾಗಿಲುಗಳೂ ತೆರೆಯುವಂತಿರ ಬೇಕು ಎಂದರು. ಇಷ್ಟಲ್ಲದೆ ನರ್ತಕಿಯರಿಗೊಂದು ನಿವಾಸವನ್ನೂ ಓಡುತ್ತಿರುವ ಆನೆ, ಕುದುರೆ ಮತ್ತು ಸಿಂಹಗಳ ಮೂರ್ತಿಗಳನ್ನೂ ಕೆತ್ತಬೇಕೆಂದು ಹೇಳಿದರು.

"ಆದರೆ ಕಲ್ಲನ್ನು ನಾನೇ ಆರಿಸುತ್ತೇನೆ" ಎಂದನವ.

"ಓ, ಅಲ್ಲಿ ದೊಡ್ಡ ಬಂಡೆಯಿದೆ. ಬೇಕಾದ ಕಲ್ಲನ್ನು ಆರಿಸು'' ಎಂದರು ಅರಸರು.

'ಪೆರಿಯ ಕಲ್ಲುಣಿ' ಎಂಬ ಬಂಡೆಯ ಬಳಿಗೆ ಹೋಗಿ ಅವನು ದಿಕ್ಪಾಲಕರನ್ನು ನೆನೆದ. ಬಂಡೆಯಲ್ಲಿ ಒಂದೆಡೆ ಉಳಿಯನ್ನು ಇಟ್ಟು ಕೊಡಲಿಯಿಂದ ಬಡಿದ. ರಕ್ತದಿಂದ ಮಾಂಸ ಬೇರಾಗುವಂತೆ ಕಲ್ಲುಗಳು ಸೀಳಿದವು,

ಆಮೇಲೆ ಸಾವಿರ ಕಂಬ ಮತ್ತು ನೂರ ಇಪ್ಪತ್ತು ವಿಗ್ರಹಗಳ ಬಸ್ತಿಯನ್ನೂ ನರ್ತನ ಶಾಲೆಯನ್ನೂ ನರ್ತಕಿಯರ ನಿವಾಸವನ್ನೂ ನಿರ್ಮಿಸಿದ. ಏಳು ಬಸದಿಗಳ ದ್ವಾರಗಳಲ್ಲಿ ಏಳು ಗೋಪುರಗಳನ್ನು ಕಟ್ಟಿ, ಏಳು ವಿಗ್ರಹಗಳನ್ನು ತಯಾರಿಸಿದ. ಕುದುರೆ, ಆನೆ, ಸಿಂಹಗಳ ಮೂರ್ತಿಗಳನ್ನೂ ಕಡೆದ, ಆಮೇಲೆ ಗೊಮ್ಮಟನ ವಿಗ್ರಹವನ್ನು ಕೆತ್ತಿದ. ಹೀಗೆ ಅವನಿಗೆ ಹೇಳಿದ ಕೆಲಸ ಮುಗಿಯಿತು.

"ನಾನು ಇಲ್ಲಿ ಬಂದು ಒಂದು ವರ್ಷ ಆರು ತಿಂಗಳಾಯಿತು" ಎಂದನವ. "ನಾನು ಊರಿಗೆ ಹಿಂತಿರುಗಬೇಕು. ನಾನು ಗರ್ಭಿಣಿ ಹೆಂಡತಿಯನ್ನು ಬಿಟ್ಟುಬಂದಿದ್ದೆ" ಎಂದ. ಅರಸನು ಅವನಿಗೆ ಮಲಗಲು ಒಂದು ಮಂಚ, ಕುಳಿತು ಕೊಳ್ಳಲು ಒಂದು ಕುರ್ಚಿ, ಪಂಚದೀವಟಿಗೆಯ ಸನ್ಮಾನ, ಒಂದು ಬಡಿಗೆ, ವಸ್ತ್ರ ಮತ್ತು ವೀಳ್ಯಗಳನ್ನು ನೀಡಿದ.

ಈ ಕಡೆ ಅವನ ಮನೆಯಲ್ಲಿ ಅವನಿಗೆ ಗಂಡು ಹೆಣ್ಣು ಅವಳಿ ಜವಳಿ ಮಕ್ಕಳಾಗಿದ್ದರು. ಮಗ ದೊಡ್ಡವನಾಗುತ್ತಿದ್ದಾಗ ಇತರ ಮಕ್ಕಳು ಅವನನ್ನು ತಂದೆ ಇಲ್ಲದವ ಎಂದು ಬಹಿಷ್ಕರಿಸಿದರು. ಅವನು ಸುಮ್ಮನೆ ಮನೆಗೆ ಬಂದು ತಾಯಿಯೊಡನೆ ತನಗೆ ಅಪ್ಪನಿಲ್ಲವೆ ? ಎಂದು ಪ್ರಶ್ನಿಸಿದ್ದ.

ಆಕೆ "ಏಕೆ?" ಎಂದು ಕೇಳಿದಳು.

"ನಾನು ತಂದೆಯಿಲ್ಲದೆ ಗಯ್ಯಾಳಿಗೆ ಹುಟ್ಟಿದವನೆಂದು ಹುಡುಗರು ನಿಂದಿಸುತ್ತಿದ್ದಾರೆ. ಅದು ನಿಜವಾದರೆ ನಿನ್ನ ಕುತ್ತಿಗೆಯನ್ನು ಕತ್ತರಿಸಬೇಕೆಂದಿರುವೆ".

"ಅಯ್ಯೋ ಮಗನೇ" ಎಂದಳಾಕೆ. "ನೀನು ನನ್ನ ಹೊಟ್ಟೆಯಲ್ಲಿ ಏಳು ತಿಂಗಳಿನವನಿದ್ದಾಗ ನಿನ್ನಪ್ಪ ಬೆಳ್ಗೊಳಕ್ಕೆ ಕೆಲಸ ಮಾಡಲು ಹೋದರು. ಈಗ ಒಂದೂವರೆ ವರ್ಷವಾಯಿತು. ಅವರು ಬರುವ ಸಮಯವಾಯಿತು".

"ನನ್ನಪ್ಪನನ್ನು ನೋಡದೆ ಇರಲಾರೆ" ಎನ್ನುತ್ತ ಅವನೇ ಅನ್ನ, ಹಾಲು ಮೊಸರಿನ ಬುತ್ತಿಕಟ್ಟಿ ಕುದುರೆಯ ಮೇಲೆ ಹೊರಟ. ಸಾರೊಳಿ ಮರವೊಂದರ ಬಳಿ ಅವನು ಕುದುರೆಯನ್ನು ಕಟ್ಟಿದಾಗ, ಅಲ್ಲೇ ಅಪ್ಪನು ತನ್ನ ಉಡುಗೊರೆಗಳನ್ನಿಟ್ಟು ವಿಶ್ರಾಂತಿ ಪಡೆಯುವುದು ಕಾಣಿಸಿತು. ಅವರಿಬ್ಬರಿಗೂ ಪರಿಚಯವಾಯಿತು. ಮಗ ತಾನು ಬಂದ ಕೆಲಸ ಹೇಳಿದನಲ್ಲದೆ, ತಾನು ತನ್ನ ತಂದೆ ಮಾಡಿದ ಕೃತಿಗಳನ್ನು ನೋಡಬೇಕೆಂದ.

ಹಾಗೆಯೇ ಅವರು ಬೆಳ್ಗೊಳಕ್ಕೆ ಹೋದರು. ಅಲ್ಲ ಶಂಭು ಕಲ್ಕುಡನು ಪಂಚದೀವಟಿಗೆ ಹಿಡಿದುಕೊಂಡು ತನ್ನ ಕೃತಿಗಳನ್ನು ತೋರಿಸುತ್ತಾ ಮಹಾನವಮಿ ಸ್ತಂಭದ ಬಳಿ ಬಂದರು.

ಮಗನು ಕೆಲಸಕ್ಕೆ ತಲೆದೂಗಿ "ಆ ಕಪ್ಪೆಯ ಮೂರ್ತಿಯು ಚೆನ್ನಾಗಿಲ್ಲ. ಅದರ ಕಣ್ಣು ಕಾಲುಗಳನ್ನು ಸರಿಯಾಗಿ ಕೆತ್ತಿಲ್ಲ" ಎಂದ.

"ಓಹ್, ಎಷ್ಟು ಮಂದಿ ನನ್ನ ಕೆಲಸ ನೋಡಿ ತಲೆದೂಗಿದರು. ನಿನ್ನೆ ಹುಟ್ಟಿದ ಕೂಸಾದ ನಿನಗೆ ನನ್ನ ಕೆಲಸದಲ್ಲಿ ದೋಷ ಕಂಡು ಬಂತೆ ? ಅರಸರಿಗೆ ಈ ಸುದ್ದಿ ತಿಳಿದರೆ ನನ್ನನ್ನು ಆನೆಯ ಕಾಲಿಗೆ ಬಿಗಿದು ಕುದುರೆ ಚಾವಟಿಯಿಂದ ಹೊಡೆಸಿಯಾರು. ನನ್ನನ್ನು ಅವಮರ್ಯಾದೆಗೆ ಒಳಪಡಿಸಿಯಾರು" ಎನ್ನುತ್ತ ಅವನು ತನ್ನ ಚಾಕು ತೆಗೆದು ಗಂಟಲನ್ನು ಕೊಯ್ದುಕೊಂಡು ಸತ್ತುಹೋದ.

"ನೀ ಸತ್ತರೂ ನಿನ್ನ ಉಳಿಯನ್ನು ನಾ ಬಿಡಲಾರೆ" ಎಂದ ಮಗ. ಅರಸನಿಗೆ ಈ ವಾರ್ತೆ ತಿಳಿದು ಮಗನನ್ನು ಕರೆಸಿದ. ಮಗ ಮುಂದೆ ತಂದೆಗಿಂತಲೂ ಚೆಲುವಾದ ವಿಗ್ರಹಗಳನ್ನೂ ಬಸದಿಗಳನ್ನೂ ಮಂದಿರಗಳನ್ನೂ ಕಟ್ಟಿದ. ಬೇಲೂರಿನ ವಿಗ್ರಹಕ್ಕಿಂತ ಎರಡು ಪಾಲು ಹೆಚ್ಚು ಎತ್ತರದ ಗುಮ್ಮಟ ವಿಗ್ರಹಗಳನ್ನು ಕೆತ್ತಿದ.

ಆಮೇಲೆ ಕೊಲ್ಲೂರಿಗೆ ಹೋಗಿ ದೇವಸ್ಥಾನ ಕಟ್ಟಿ ಮೂಕಾಂಬಿಕಾ ದೇವಿಯನ್ನು ಸ್ಥಾಪಿಸಿದ. ಬಳಿಯರ ನಾಡು ಮತ್ತು ನಗರಗಳಲ್ಲಿ ದೇವಸ್ಥಾನಗಳನ್ನು ಕಟ್ಟಿದ. ಕಾರ್ಕಳದ ಭೈರರಸು ಒಡೆಯರು ಈ ಸುದ್ದಿ ಕೇಳಿ ತನ್ನ ರಾಜ್ಯದಲ್ಲಿ ಸ್ವಲ್ಪ ಕೆಲಸ ಮಾಡಬೇಕೆಂದು ಅವನನ್ನು ಬರಮಾಡಿದರು. ಅವನ ಆಜ್ಞೆಯಂತೆ ಅವನು ಸಾವಿರ ಕಂಬಗಳ ಬಸ್ತಿಯನ್ನು, ನೂರಿಪ್ಪತ್ತು ವಿಗ್ರಹಗಳನ್ನು, ಒಂದು ನೃತ್ಯ ಶಾಲೆಯನ್ನು, ನರ್ತಕಿಯರಿಗೊಂದು ವಸತಿಯನ್ನೂ ನಿರ್ಮಿಸಿದನು.

ಕಾರ್ಕಳದ ಭೈರರಸು ಕಲ್ಕುಡನೊಡನೆ ಒಂದು ಗೊಮ್ಮಟನ ವಿಗ್ರಹವನ್ನು ಕೆತ್ತಬೇಕೆಂದರು. ಕಲ್ಕುಡನು ಅದನ್ನು ಕೆತ್ತಿದ. ಬಂಟಕಂಬವನ್ನೂ ಮಹಾನವಮಿ ಸ್ತಂಭವನ್ನೂ ನಿರ್ಮಿಸಿದ.

"ಕಾರ್ಕಳದ ಐದುಸಾವಿರ ಜನರು ಇಲ್ಲಿ ಗೊಮ್ಮಟ ಸ್ವಾಮಿಯ ವಿಗ್ರಹವನ್ನು ಎತ್ತಲು ಬರಬೇಕು" ಎಂದು ಕಲ್ಕುಡ ನುಡಿದ. "ಬರುವಾಗ ಐವತ್ತು ತೆಂಗಿನಕಾಯಿಗಳನ್ನು, ಅಡಿಕೆ ಮತ್ತು ಹೂಗಳನ್ನು ತರಬೇಕು".

ಆದರೆ ಐದುಸಾವಿರ ಜನರಿಂದಲೂ ಅದನ್ನು ಎತ್ತಲಾಗಲಿಲ್ಲ. ಅವರು ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸಿದರು.

ಆಗ ಅರಸರು ಕಲ್ಕುಡನೇ ಅದನ್ನು ಹೇಗಾದರೂ ಮಾಡಿ ಯತ್ನಿಸಬೇಕೆಂದು ಕೇಳಿಕೊಂಡರು.

ಕಲ್ಕುಡನು ತನ್ನ ಎಡಗೈಯನ್ನು ವಿಗ್ರಹದ ಕೆಳಗಿಟ್ಟು ಎತ್ತಿ ನಿಲ್ಲಿಸಿ ಹೇಳಿದ : "ನನಗೆ ಕೊಡುವುದನ್ನು ಕೊಡಿ. ನನಗೆ ಮನೆಗೆ ಹೋಗಬೇಕು. ನಾನು ಇಲ್ಲಿಗೆ ಬಂದು ಹನ್ನೆರಡು ವರ್ಷವಾಯಿತು".

ಅರಸರು "ನನ್ನ ರಾಜ್ಯದಲ್ಲಿ ಕೆಲಸ ಮಾಡಿದ ಕಲ್ಕುಡನು ಇನ್ನೊಂದು ರಾಜ್ಯದಲ್ಲಿ ಕೆಲಸ ಮಾಡಬಾರದು" ಎನ್ನುತ್ತ ಅವನ ಎಡಗೈಯನ್ನೂ, ಬಲಗಾಲನ್ನೂ ಕಡಿದು ಹಾಕಿದರು.

'ಓ ಒಡೆಯಾ' ಎಂದು ಕಲ್ಕುಡ ಅತ್ತ. "ನನ್ನನ್ನು ಓಡಿ ಅಲೆದಾಡದಂತೆ ಮಾಡಿದಿರಿ. ಆದರೆ ನಾನಿನ್ನೂ ನಿಷ್ಪ್ರಯೋಜಕನಾಗಿಲ್ಲ. ಇನ್ನು ನಾನು ಇಲ್ಲಿ ನೀರೂ ಮುಟ್ಟಲಾರೆ" ಎಂದು ಕೋಪದಲ್ಲಿ ವೇಣೂರಿಗೆ ಹೋದ.

ವೇಣೂರಿನಲ್ಲಿ ತಿಮ್ಮಣ್ಣಾಜಿಲ ಎಂಬುವರು ಅರಸರಾಗಿದ್ದರು. ಅವರು ಕಲ್ಕುಡನೊಡನೆ ತನ್ನ ರಾಜ್ಯದಲ್ಲಿ ಕೆಲಸ ಮಾಡಬೇಕೆಂದು ಕೇಳಿಕೊಂಡರು.

"ಒಡೆಯಾ, ನನಗೆ ಕಾಲಿಲ್ಲ, ಕೈಯಿಲ್ಲ. ನಾನು ಹೇಗೆ ಕೆಲಸ ಮಾಡಲಿ ?" ಎಂದನವ. "ನಾನು ಬೇರೆ ಕಡೆ ಕೆಲಸ ಮಾಡಬಾರದೆಂದು ಕಾರ್ಕಳದ ಭೈರರಸರು ನನ್ನ ಕೈಕಾಲುಗಳನ್ನು ಕಡಿದು ಹಾಕಿಸಿದರು. ಅಲ್ಲಿ ಮತ್ತೆ ನೀರೂ ಮುಟ್ಟದೆ ಹೊರಟು ಬಂದೆ."

'ನಿನ್ನ ಜಾತಿಯವರನ್ನು ಬರಹೇಳುತ್ತೇನೆ. ನೀನವರಿಗೆ ಕಲ್ಲು ಕೆತ್ತನೆಯ ಕೆಲಸವನ್ನು ಕಲಿಸು,"

"ಇತರರಿಗೆ ಕಲಿಸುವುದರ ಬದಲು ನಾನೇ ಚೆನ್ನಾಗಿ ಕೆಲಸ ಮಾಡಲಾರೆನೆ?" ಎಂದ ಕಲ್ಕುಡ.

"ಹಾಗೆಯೇ ಆಗಲಿ" ಎಂದರು ಅರಸರು. ಅವನು ಗೊಮ್ಮಟನ ಪ್ರತಿಮೆಯನ್ನೂ ಒಂದು ಬಸ್ತಿಯನ್ನೂ ನಿರ್ಮಿಸಿದ. ತನ್ನ ಪ್ರತಿರೂಪವುಳ್ಳ ಒಂದು ಬಂಟ ಕಂಭವನ್ನೂ ಕೆತ್ತಿದ.

ತನ್ನ ಅಣ್ಣನನ್ನು ಹನ್ನೆರಡು ವರ್ಷಗಳಿಂದ ನೋಡದಿದ್ದ ಕಲ್ಲುರ್ಟಿಗೆ ಅವನನ್ನು ನೋಡಿ ಬರುವ ಇಚ್ಛೆಯಾಯಿತು. ಹಾಗೆಯೇ ಅವಳು ಅವನಿಗೆಂದು ಒಂದುವರೆ ಸೇರು ತುಪ್ಪ, ಮೂರು ತುಂಡು ಬೆಲ್ಲ, ಹಾಲು, ಮೊಸರುಗಳನ್ನು ಹಾಕಿದ ತಿಂಡಿಗಳನ್ನು ತಯಾರಿಸಿದಳು. ಅಕ್ಕಿ, ಸಕ್ಕರೆ, ತೆಂಗಿನಕಾಯಿಗಳನ್ನು ಮಿಶ್ರಮಾಡಿ ಎಲೆಯಲ್ಲಿ ಕಟ್ಟಿ ಒಂದು ಪಾತ್ರೆಯಲ್ಲಿ ಹಾಕಿ ತನಗೆ ಬೇಕಾದ ತಿಂಡಿಗಳನ್ನು ಕಟ್ಟಿ ಹೆಗಲಿನ ಮೇಲೆ ಹಾಕಿಕೊಂಡಳು, ತಲೆಗೆ ಮುತ್ತಿನ ಹಾರವನ್ನು ಕುತ್ತಿಗೆ, ಕಿವಿ, ಕೈಗಳಿಗೆ ವಾಲೆ, ಕೊಪ್ಪ ಮುಂತಾದ ಆಭರಣವನ್ನು ಧರಿಸಿ, ಹೂಮಾಲೆ ಮುಡಿದು ಕೊಂಡಳು. ಕಾಲಿಗೆ ಕಾಲುಂಗುರ ಧರಿಸಿ, ಕಣ್ಣಿಗೆ ಕಾಡಿಗೆ ಹಚ್ಚಿಕೊಂಡಳು. ಸೊಂಟಕ್ಕೆ ಕಪ್ಪುವಸ್ತ್ರವನ್ನು ಬಿಗಿದು, ಹಸಿರು ರವಿಕೆಯನ್ನು ತೊಟ್ಟಳು. ಹಣೆಗೆ ಅಕ್ಷತೆಯನ್ನಿಟ್ಟಳು.

ಅವಳು ಹೊರಟಾಗ ಶುಭಶಕುನಗಳಾದವು. ಅವಳು ಬೇಲೂರಿಗೆ ತಲುಪಿ ಅಲ್ಲಿ ತನ್ನ ಅಣ್ಣನನ್ನು ಕೇಳಲು, ಅವನು ಬೆಳ್ಗೊಳದಲ್ಲಿರುವನೆಂದು ಜನರು ಹೇಳಿದರು. ಬೆಳ್ಗೊಳಕ್ಕೆ ಹೋದಾಗ ಅವನು ಏರ್ನಾಡಿಗೆ ಹೋಗಿದ್ದಾನೆಂದರು. ಏರ್ನಾಡಿನಲ್ಲಿ ಅವನು ನಡಕ್ಕೆ ಹೋಗಿದ್ದಾನೆಂದರು. ಅಲ್ಲಿಗೆ ಆಕೆ ಹೋದಾಗ ಅವನು ನಗರಕ್ಕೆ ಹೋಗಿರುವನೆಂದರು. ಅಲ್ಲಿ ಹೋಗಲು ಅವನು ಕೊಲ್ಲೂರಿಗೆ ಹೋಗಿರುವನೆಂದರು. ಆಕೆ ಕೊಲ್ಲೂರಿಗೆ ಹೋದಾಗ ಅವನು ಪೆದ್ದೂರಲ್ಲಿರುವನೆಂದು ಜನರು ಹೇಳಿದರು. ಕೊನೆಗೆ ಆಕೆ ಕಾರ್ಕಳಕ್ಕೆ ಹೋಗಿ ವಿಚಾರಿಸಿದಳು. ಅಲ್ಲಿ ಅರಸರು ಅವನ ಕೈಕಾಲುಗಳನ್ನು ಕತ್ತರಿಸಿದ ಸುದ್ದಿ ಆಕೆಗೆ ತಿಳಿಯಿತು. ಅವನು ವೇಣೂರಿಗೆ ಹೋಗಿದ್ದಾನೆಂಬುದನ್ನು ಆಕೆ ಅರಿತು, ಅಳುತ್ತ ಅಲ್ಲಿಂದ ಹೊರಟಳು.

ದಾರಿಯಲ್ಲಿ ಉಪ್ಪಿನಂಗಡಿಯಲ್ಲಿ ತನ್ನ ಅಣ್ಣ ವೇಣೂರಿನಲ್ಲಿ ಕೆಲಸ ಮಾಡುತ್ತಿರುವನೆಂಬುದನ್ನು ಜನರೊಡನೆ ಕೇಳಿ ಖಚಿತ ಮಾಡಿಕೊಂಡಳು. ಅಲ್ಲಿಂದ ವೇಣೂರಿಗೆ ಓಡಿಕೊಂಡೇ ಹೋದಳು. ದಾರಿಯಲ್ಲಿ ತಿಂಡಿಗಳ ಗಂಟುಗಳನ್ನು ನದಿಗೆ ಎಸೆದಳು.

ಅವಳು ವೇಣೂರಿನಲ್ಲಿ ಅವನ ಬಳಿಗೆ ಹೋದಾಗ ಅವನು ಗೊಮ್ಮಟ ಸ್ವಾಮಿಯ ವಿಗ್ರಹದ ಸುತ್ತಿನ ಆವರಣದ ಕೆಲಸವನ್ನು ಮುಗಿಸುತ್ತಿದ್ದ. ತನ್ನ ಪ್ರತಿರೂಪವನ್ನು ಸ್ತಂಭದಲ್ಲಿ ಕೆತ್ತುತ್ತಿದ್ದ. ಆಗ ಕಲ್ಲುರ್ಟಿ ಬಂದು ಅವನ ಕಾಲಬಳಿ ಬಿದ್ದು.

"ಅಣ್ಣಾ ; ನಿನ್ನ ಒಂದು ಕಾಲನ್ನೂ ಕೈಯನ್ನೂ ಕಳಕೊಂಡೆ" ಎಂದು ಅತ್ತಳು.

"ರಾಮ ರಾಮ ; ಇದೇನಾದರೂ ಕಳ್ಳತನ ಅಥವಾ ವಂಚನೆಗಾಗಿ ಆದುದಲ್ಲ. ನಾನು ಬೇರೆಲ್ಲಾದರೂ ಕೆಲಸ ಮಾಡಬಾರದೆಂದು ಕಾರ್ಕಳದ ಭೈರರಸರು ಹೀಗೆ ಮಾಡಿದರು."

ಅವಳು ಕೋಪದಲ್ಲಿ ಧಿಗ್ಗನೆದ್ದು ಕಾರ್ಕಳದ ಮುಖಮಾಡಿ ಶಪಿಸಿದಳು :

"ನನ್ನ ಅಣ್ಣನ ಕೈಕಾಲುಗಳನ್ನು ಕಡಿದ ಅರಸನನ್ನು ನಾನು ನೋಡಿಕೊಳ್ಳದೆ ಬಿಡಲಾರೆ : ನಾವು ಹೀಗೇ ಬಾಳಬೇಕಣ್ಣ ? ನಿನ್ನ ಕೆಲಸದ ಸಾಮಾನುಗಳನ್ನೂ ನನ್ನ ಆಭರಣಗಳನ್ನೂ ಇಲ್ಲಿ ಬಿಸಾಡೋಣ".

ಹಾಗೆಯೇ ಅವರು ದೇವಾಲಯಕ್ಕೆ ಮೂರು ಪ್ರದಕ್ಷಿಣೆ ಹಾಕಿದರು.

"ನಮ್ಮನ್ನು ಮಾಯಮಾಡು ಮಹದೇವ" ಎಂದು ಪ್ರಾರ್ಥಿಸಿದರು.

"ಅವರು ಕಾರ್ಕಳಕ್ಕೆ ಅಭಿಮುಖವಾಗಿ ಮಾಯವಾದರು. ನಮ್ಮ ಜನನಕ್ಕಾಗಲೀ ಮರಣಕ್ಕಾಗಲೀ ಯಾವ ಸಮಾರಂಭವನ್ನು ಮಾಡಲಿಲ್ಲ. ನಾವು ಕನ್ಯಾತೀರ್ಥದ ಕಾವೇರಿಯಲ್ಲಿ ಸ್ನಾನ ಮಾಡೋಣ, ಆಮೇಲೆ ಗಂಗಾಸ್ನಾನ ಮಾಡುವ" ಎಂದಳು ಕಲ್ಲುರ್ಟಿ.

ಅವರಿಬ್ಬರೂ ಕಾವೇರಿಯಲ್ಲಿ ತೀರ್ಥಸ್ನಾನ ಮುಗಿಸಿ, ಉತ್ತರದ ಗಂಗೆಯಲ್ಲೂ ಮಿಂದರು. ತಿರುಪತಿಯಲ್ಲಿ ಅನಂತ ನೋಂಪಿ ಮತ್ತು ರಂಗಪೂಜೆಗಳನ್ನು ನೋಡಿದರು. ಕಲ್ಲುರ್ಟಿ ತನ್ನ ದೇಹದ ಮೇಲೆ ಚುಕ್ಕೆಗಳನ್ನಿಟ್ಟು, ನಾಗಬೆತ್ತವನ್ನು ಹಿಡಿದುಕೊಂಡಳು. ಆಮೇಲೆ ಭಸ್ಮದ ಪೆಟ್ಟಿಗೆಯನ್ನು ಚೀಲದಲ್ಲಿ ಹಾಕಿ ತಿಮ್ಮಪ್ಪನೊಡನೆ ತನಗೆ ಶಕ್ತಿ ಬರುವಂತೆ ಬೇಡಿಕೊಂಡಳು. ಅಲ್ಲಿಂದ ಇಬ್ಬರೂ ಕಾರ್ಕಳಕ್ಕೆ ಹೋದರು. ಅಲ್ಲಿ ಕಲ್ಕುಡನು ಅವಳಿಗೆ ತನ್ನನ್ನು ಅಂಗಹೀನ ಮಾಡಿದ ಅರಸರ ಅರಮನೆಯನ್ನು ತೋರಿಸಿದ.

ಅಲ್ಲಿ ಉತ್ತರದ ದ್ವಾರದ ಮೂಲಕ ಅರಮನೆಗೆ ಹೊಕ್ಕು ಅರಸರ ಹಾಸಿಗೆಗೆ ಬೆಂಕಿ ಹಚ್ಚಿ, ಅವರ ಆಭರಣದ ಪೆಟ್ಟಿಗೆಯನ್ನು ಅಡಗಿಸಿಟ್ಟರು. ಅನೇಕ ಅಂಗಡಿಗಳನ್ನು ಶೆಟ್ಟಿಗಳ ಮನೆಗಳನ್ನು ಸುಟ್ಟರು. ಇಡೀ ಕಾರ್ಕಳ ನಗರವೇ ಸುಟ್ಟುಹೋಯಿತು,

"ನೀನು ಹೆಂಗಸರಲ್ಲಿ ಪ್ರವೇಶವಾಗು ; ನಾನು ಗಂಡಸರನ್ನು ಹಿಡಿಯುತ್ತೇನೆ" ಎಂದಳು ಕಲ್ಲುರ್ಟಿ.

ಕಾರ್ಕಳದ ಐದುಸಾವಿರ ಮಂದಿಗೂ ಇದರಿಂದಾಗಿ ಹುಚ್ಚು ಹಿಡಿಯಿತು. ಅರಸರ ತಾಯಿಯನ್ನು ಏಳು ರಾತ್ರಿ ನೀರಿನಲ್ಲಿ ಕಲ್ಕುಡ ಮತ್ತು ಕಲ್ಲುರ್ಟಿ ಮುಳುಗಿಸಿದರು. ಅವರು ಪ್ರತ್ಯಕ್ಷವಾಗಿ ರಾತ್ರಿಯಲ್ಲಿ ಮಾಯವಾಗುತ್ತಿದ್ದರು.

'ನೀನು ಕಲ್ಲಸ್ನೊಗೆಯು ಅಣ್ಣ, ನಾನು ಮನೆಗಳಿಗೆ ಬೆಂಕಿ ಕೊಡುತ್ತೇನೆ' ಎಂದಳು ಕಲ್ಲುರ್ಟಿ. ನನ್ನಣ್ಣನ ಕೈಕಾಲು ಕಡಿದ ಅರಸರೇ, ನಾವೀಗ ಸತ್ತಬಳಿಕ ನಿಮ್ಮನ್ನು ನಾಶಮಾಡುತ್ತೇವೆ. ಅರಮನೆಯಲ್ಲಿ ನಾಯಿಯ ಹೆಣವನ್ನು, ಅಮೇಧ್ಯವನ್ನು ಅವರು ಇರಿಸಿದರು.

'ಅಯ್ಯೋ ರಾಮ, ಈ ಭೂತಗಳು ನನ್ನನ್ನು ಬಿಡೋದಿಲ್ವೇ?' ಎಂದು ಅರಸರು ಉದ್ಗರಿಸಿದರು.

'ಯಾರಾದರೂ ಅದನ್ನು ಪೂಜಿಸಿ ಸಮಾಧಾನಪಡಿಸುವರೆ ? ಮಂತ್ರವಾದಿಗಳಾದ ನಾಲ್ಯಾಣ ಕಲ್ಯಾಣದಾರ, ಕಲ್ಲಿಬೊಟ್ಟಿಯ ಅಡಂಗರು, ಕಲಾಯಿಯ ಬೊಯ್ಯಂದಾರ ಮತ್ತು ಮತಿಕಾಲದ ತಂತ್ರಿಗಳಾದ ಮಾರದಂಗರು ಅರಸರಲ್ಲಿಗೆ ಹೋದರು.

"ಯಾರ ಮಂತ್ರ — ತಂತ್ರಗಳೂ ನಾವು ಮಣಿಯುವುದಿಲ್ಲ' ಎಂದು ಕಲ್ಲುರ್ಟಿ ಗುಡುಗಿದಳು—'ನನ್ನಣ್ಣನ ಜೀವನವನ್ನು ನಾಶ ಮಾಡಿದ ನಿನ್ನನ್ನು ನಾಶಮಾಡದಿರಲಾರೆವು."

ಯಾರ ಮಂತ್ರ — ತಂತ್ರಗಳಿಗೂ ಫಲಿಸಲಿಲ್ಲ. ಅರಸ ಕಳವಳಗೊಂಡು ಬೇರೆ ಯಾರಾದರೂ ಮಂತ್ರವಾದಿಗಳು ಇದ್ದಾರೆಯೇ ? ಎಂದು ವಿಚಾರಿಸಿದರು.

"ಉಪ್ಪಿನಂಗಡಿ (ಉಬಾರ್) ಯಲ್ಲಿ ಒಬ್ಬ ಪ್ಯೊಲಾರೆ ಎಂಬ ಮಂತ್ರವಾದಿಯಿದ್ದಾರೆ. ಅವರನ್ನು ಕರೆದರೆ ಆದೀತು" ಎಂದು ಅರಸರ ಪರಿವಾರದವರು ಹೇಳಿದರು.

ಅರಸರು ಒಬ್ಬದೂತನೊಡನೆ ಹ್ಯೊಲಾರಿಗೆ ಪತ್ರಕಳುಹಿಸಿದರು. ಹ್ಯೊಲಾರರು ಅದನ್ನೋದಿ ಕಾರ್ಕಳಕ್ಕೆ ಹೊರಟರು. ಆದರೆ ಉಪ್ಪಿನಂಗಡಿ ಹೊಳೆಗೆ ಅವರು ಇಳಿಯುವಾಗ ಕಲ್ಲುರ್ಟಿ ಮತ್ತು ಕಲ್ಕುಡ, 'ನೀವು ಹಿಂದೆ ಹೋಗುವಿಯೋ ಅಲ್ಲ ನಾವು ನಿಮಗೆ ಇಲ್ಲೇ ಕಲ್ಲು ಒಡೆಯಲೋ ?" ಎಂದುವು.

ಹ್ಯೊಲಾರರು ಹೆದರಿ ಮನೆಗೆ ಹಿಂದೆ ಓಡಿಬಂದು ಕಂಚಿನ ಪೆಟ್ಟಿಗೆಯ ಮೇಲೆ ಕುಳಿತರು. ಅವರಿಗೆ ತುಂಬಾ ಖೇದವಾಯಿತು. ತಾವೇನು ಮಾಡಬೇಕೆಂದು ಅವರಿಗೆ ತೋಚದಾಯಿತು. ಭೂತಗಳು ತನ್ನ ವಶವಾಗಬೇಕೆಂದು ಅವರು ಪ್ರಾರ್ಥಿಸಿದರು.

'ನೀನೇನೂ ಮಂತ್ರ ತಂತ್ರ ಮಾಡಬಾರದು, ಹ್ಯೊಲಾರರೇ' ಎಂದವು ಭೂತಗಳು. "ನಾವೆಂದಂತೆ ನೀವು ಮಾಡಬೇಕು. ನಮಗೆ ನೀವೀಗ ಅರ್ಧಸೇರು ತುಂಬೆಹೂ, ಒಂದು ಸೇರು ಬೆಳ್ತಿಗೆ ಅಕ್ಕಿ, ಕಲ್ಲುಸುಣ್ಣ, ಒಂದ. ಬೆತ್ತ, ಅಡಿಕೆ ಮರದ ಮೇಲೆ ಒಂದು 'ಮುಂಡಲೆ' ವೀಳ್ಯದೆಲೆ ಮತ್ತು ಕಪಿಲೆಗಬ್ಬದ ಹಸುವಿನ ಹಾಲು–ಇವನು ಕೊಡಬೇಕು. ಮತ್ತೆ ನೀವೀಗ ಕಾರ್ಕಳಕ್ಕೆ ಹೋಗಿ. ಅರಸರು ನಿಮಗೆ ಭೂಮಿಯನ್ನು ದಾನ ಕೊಡುತ್ತಾರ್ನೆ ಅಲ್ಲಿ ಒಂದು ಕೋಣೆಯಲ್ಲಿ ನಮ್ಮನ್ನು ಪೂಜಿಸಿ, ನಿಮ್ಮ ಅಡಿಕೆಯನ್ನು ತುಂಡುಮಾಡಿ ಜಗಿಯಿರಿ. ನಾವಾಗ ಬರುತ್ತೇವೆ. ಅಲ್ಲಿ ನಮ್ಮನ್ನು ಹಿಡಿದು ಅಡಿಕೆಯಲ್ಲಿ ಸ್ಥಂಭನ ಮಾಡಿ ಇಲ್ಲಿ ಉಪ್ಪಿನಂಗಡಿಗೆ ತನ್ನಿ. ಆಮೇಲೆ ನಾವು ನಿಮ್ಮೊಡನೆ ಇರುತ್ತೇವೆ.'

ಹ್ಯೊಲಾರರು ಹಾಗೆಯೇ ಕಾರ್ಕಳಕ್ಕೆ ಹೋಗಿ ಮಂತ್ರವಾದ ಮಾಡಿದರು. ಭೂತಗಳು ಅಡಿಕೆಯೊಳಗೆ ಸೇರಿಕೊಂಡವು. ಕಾರ್ಕಳದ ಪಟ್ಟಣದಲ್ಲಿ ಶಾಂತಿ ನೆಲೆಸಿತು. ಅರಸರ ತಾಯಿ ನೀರಿನಲ್ಲಿ ಮುಳಗುವುದು ನಿಂತು ಹೋಯಿತು.

ಹ್ಯೊಲಾರರು ಉಪ್ಪಿನಂಗಡಿಗೆ ಭೂತಗಳಿದ್ದ ಅಡಿಕೆಯನ್ನು ತಂದರು. ಅಲ್ಲಿ ಒಂದು ಕೋಣೆಯನ್ನು ಕಟ್ಟಿ, ಅದಕ್ಕೆ ಕಲಶವನ್ನು ಜೋಡಿಸಿ, ಭೋಜನ ಕೂಟವನ್ನಿತ್ತು ಅವುಗಳನ್ನು ನಂಬಿದರು. ಅವುಗಳಿಗೆ ಹೂವಿನ ಪೂಜೆ ಮಾಡಿ ಕಲ್ಕುಡನಿಗೂ ಕಲ್ಲುರ್ಟಿಗೂ ಯೋಗ್ಯವಾದ ಉಡುಪುಗಳನ್ನು ಕೊಟ್ಟರು. ಅವುಗಳ ಅವರ ಸತ್ಕಾರವನ್ನು ಸ್ವೀಕರಿಸಿ ಅಂದಿನಿಂದ ಹ್ಯೊಲಾರರ ಮನೆಯ ಭೂತಗಳೆಂದು ಹೆಸರುಪಡೆದವು.

'ನೀವೆಲ್ಲಿ ಹೋದರೂ ನಾವು ನಿಮ್ಮನ್ನು ಮರೆಯಲಾರೆವು' ಎಂದವು ಆ ಭೂತಗಳು.

ಅರಸರು ಹಿಂದೆ ತರಿಸಿದ್ದ ಮಂತ್ರವಾದಿಗಳಿಗೆಲ್ಲ ಅವುಗಳು ಪೀಡೆ ಕೊಟ್ಟವು. ಅವರ ಮನೆಗಳನ್ನು ಆಕಸ್ಮಿಕವಾಗಿ ಸುಟ್ಟವು. ಅವರನ್ನು ಕಾಯಿಲೆಗೀಡು ಮಾಡಿದವು. ನಡಬಲ್ಯಾಯನನ್ನು ಕರೆದು, ಕತ್ರುಮರದ ಹಲಗೆಯ ಮೇಲೆ ಶಂಖ ಊದಿ ಪ್ರಶ್ನೆ ನೋಡಲು ಅವರು ಕೇಳಿದರು. ಅವನು ಅದು ಕಲ್ಲುರ್ಟಿ ಭೂತದ ಪೀಡೆ ಎಂದು ಭವಿಷ್ಯ ಹೇಳಿದ. ಹಾಗೆಯೇ ಅವರು ಅದಕ್ಕೆ ಸ್ಥಾನ ಕಟ್ಟಿಸಿ ಆಹಾರವಿತ್ತು ಪೂಜಿಸಿದರು. ಅವರಿಗೆ ಉಂಟಾಗಿದ್ದ ಪೀಡೆ ಆಗ ಶಮನವಾಗತೊಡಗಿತು.

ಆಮೇಲೆ ಭೂತಗಳು ಅರ್ವದಗುತ್ತು (ಅಳದಂಗಡಿ), ಬಂಗರ ಗುತ್ತು, ಬಂಗಾಡಿ ಮತ್ತು ಮೈಸೂರಿನಾ ಪುರಕ್ಕೆ ಹೋದವು. ಅವು ಹೋದಲ್ಲೆಲ್ಲ ಗ್ರಾಮಸ್ಥರಿಂದ ಆಹಾರ ಪಡೆದವು. ಒಂದು ಮಧ್ಯರಾತ್ರಿಯಲ್ಲಿ ಉಪ್ಪಿನಂಗಡಿಯ ಕಡವಿನಲ್ಲಿ ದೋಣಿ ನಡೆಸುವ ರಾಮಗುಡ್ಡ ಕುಂಜನನ್ನು ದೋಣಿ ತರಲು ಕರೆದವು.

'ಈ ಮಧ್ಯರಾತ್ರಿಯಲ್ಲಿ ಯಾವ ಹೆಂಗಸಪ್ಪ ದೋಣಿತರಲು ಹೇಳುವುದು?' ಎಂದು ಅವನು ಉದ್ಗರಿಸಿದ. 'ನನ್ನ ದೋಣಿ ತೂತಾಗಿದೆ. ರಾತ್ರಿಯಲ್ಲಿ ನೀರಿನ ಸುಳಿಗಳನ್ನೂ ಕಲ್ಲುಗಳನ್ನೂ ಕಾಣಲಾರೆ, ನಾನು ದೋಣಿಯನ್ನು ಹಗ್ಗದಲ್ಲಿ ಕಟ್ಟಿದ್ದೇನೆ. ಅದನ್ನು ತರಲಾರೆ' ಎಂದ.

"ದೋಣಿ ತೂತಾಗಿ ಚುಕ್ಕಾಣಿ ಬಗ್ಗಿದ್ದುದರಿಂದ ನೀನದನ್ನು ತರಲಾರೆಯಾ?" ಎಂದು ಕಲ್ಲುರ್ಟಿ ಕೇಳಿದಳು.

ಅವಳು ದೋಣಿಯನ್ನು ಎಳೆದು ನದಿದಾಟಿದಳು. ಆದರೆ ಕಡವಿನವನನ್ನು ಮತ್ತೆ ದೋಣಿ ನಡೆಸಲು ಆಕೆ ಬಿಡಲಿಲ್ಲ.

"ಏನಾಶ್ಚರ್ಯವಪ್ಪ ಇದು" ಎನ್ನುತ್ತ ದೋಣಿಯವನು ನಡಲ್ಯಾಯನೊಡನೆ ಪ್ರಶ್ನೆ ಕೇಳಿದ.

"ಇದು ಭೂತದ ಪೀಡೆ" ಎಂದ. ನಡುಬಲ್ಯಾಯ. 'ದೋಣಿ ಸರಿಯಾಗಿ ಹೋಗ ಬೇಕಾದರೆ ನೀನ ಭೂತಕ್ಕೆ ಕಲ್ಲಿನ ಸಾನ್ನಿಧ್ಯವನ್ನು ಕಟ್ಟಿಸಿ ಪೂಜಿಸಬೇಕು."

'ಹಾಗದರೆ ನನ್ನ ಮನೆಯಲ್ಲೇ ಸ್ಥಾನಕಟ್ಟಿ ಅವುಗಳನ್ನು ನಂಬುತ್ತೇನೆ' ಎಂದನವ.

ಕಲ್ಲುರ್ಟಿಯು ಅವನಿಗೆ ಕನಸಿನಲ್ಲಿ ಮತ್ತೆ ಹೇಳಿತು :

'ನಾವು ಸ್ಥಾನದ ಅಸ್ತಿವಾರ ಕಟ್ಟುತ್ತೇವೆ. ಅದರ ಮೇಲೆ ನೀನು ಕಟ್ಟಡ ಕಟ್ಟು.'

ಒಯಿಪು ಎಂಬಲ್ಲಿ ಕಲ್ಲುರ್ಟಿಯು ಕಡವೈಕಲೆ ದೇವರ ದೇವಾಲಯಕ್ಕೂ ಕಡವಿನಲ್ಲಿ ಆಕೆಗೂ ಸ್ಥಾನ ಕಟ್ಟಲು ಆಸ್ತಿವಾರ ಹಾಕಿತು. ಅವುಗಳ ಮೇಲೆ ರಾಮಕುಂಜನು ಸ್ಥಾನಗಳನ್ನು ಕಟ್ಟಿದ. ಆಮೇಲೆ ಅಲ್ಲಿ ನೇಮವನ್ನಿತ್ತು, ಆಹಾರವನ್ನು ಅರ್ಪಿಸಿದ.

'ನಮಗೆ ಸಂತೋಷವಾಯಿತು. ನಾವು ಎಲ್ಲಾ ಕಡೆ ಸಂಚರಿಸುತ್ತಿದ್ದರೂ ನಿನ್ನನ್ನು ಮರೆಯುವುದಿಲ್ಲ' ಎಂದವು ಭೂತಗಳು.

ಪೂರ್ವ ಪಶ್ಚಿಮ ರಾಜ್ಯಗಳ ಮಧ್ಯದಲ್ಲೂ ಉತ್ತರದ ಅಂಕೋಲಾ, ದಕ್ಷಿಣದ ರಾಮೇಶ್ವರ ಘಟ್ಟಗಳ ಕಾವೇರಿ ಮತ್ತು ನುಗುರು ಎಂಬ ಮಳಲ ದಂಡೆಗಳ ಮಧ್ಯದ ಪ್ರದೇಶದಲ್ಲಿದ್ದ ಪ್ರತಿಯೊಂದು ಮನೆಯಲ್ಲೂ ಕಲ್ಕುಡ ಮತ್ತು ಕಲ್ಲುರ್ಟಿ ಭೂತಗಳು ಆಹಾರ ಸ್ವೀಕರಿಸಿದವು."

ಕಲ್ಕುಡ - ಕಲ್ಲುರ್ಟಿ ಪಾಡ್ದನಗಳ ಬೇರೆ ಬೇರೆ ಪಾಠಗಳು ಇದ್ದರೂ ಕತೆಯ ಮೂಲವಸ್ತುವಿನಲ್ಲಿ ವ್ಯತ್ಯಾಸವೇನೂ ಇಲ್ಲ. ಐತಿಹಾಸಿಕ ವ್ಯಕ್ತಿಗಳಾದ ಕಾರ್ಕಳದ ಭೈರರಸ ಮತ್ತು ವೇಣೂರಿನ ತಿಮ್ಮಣ್ಣಾಜಿಲ ಇವರುಗಳಿಂದ ನಿರ್ಮಾಣಗೊಂಡ ಎರಡು ಗೊಮ್ಮಟ ಪ್ರತಿಮೆಗಳ ರಚನೆಯ ಹಿಂದುಗಡೆ ಇರುವ ಕಲ್ಲುಕುಟ್ಟಿಗ ವ್ಯಕ್ತಿಯೊಬ್ಬನ ದುರಂತ ಮರಣವನ್ನು ಈ ಪಾಡ್ದನದಲ್ಲಿ ಮಾರ್ಮಿಕವಾಗಿ ಚಿತ್ರಿಸಲಾಗಿದೆ. ಶಂಭು ಕಲ್ಕುಡ ಶ್ರವಣಬೆಳ್ಗೊಳದ ಗುಮ್ಮಟನನ್ನು ಕಡೆದದ್ದು, ಅವನ ಶಿಲ್ಪದಲ್ಲಿ ಮಗ ಬೀರಕುಲ್ಕಡ ದೋಷವನ್ನು ಗುರುತಿಸುವುದು ಇದರಿಂದ ಅವಮಾನಿತನಾದ ಅಪ್ಪ ಆತ್ಮಹತ್ಯೆ ಮಾಡಿಕೊಳ್ಳುವುದು, ಮಗ ಕಾರ್ಕಳದ ಭೈರರಸನ ಮಾತಿನಂತೆ ಕಾರ್ಕಳದ ಗುಮ್ಮಟವನ್ನು ಕೆತ್ತುವುದು, ಅಂತಹ ಗುಮ್ಮಟವನ್ನು ಆತ ಬೇರೆಲ್ಲೂ ಮಾಡಬಾರದೆಂದು ಕಾರ್ಕಳದ ಭೈರರಸನು ಬೀರಕಲ್ಕುಡನ ಒಂದು ಕಾಲು ಮತ್ತು ಒಂದು ಕೈಯನ್ನು ಕತ್ತರಿಸುವುದು, ಆ ಯಾತನೆಯಿಂದ ಆತ ವೇಣೂರಿಗೆ ಬಂದು ತಿಮ್ಮಣ್ಣಾಜಿಲನ ಮಾತಿನಂತೆ ಒಂದು ಗೊಮ್ಮಟವನ್ನು ಕೆತ್ತುವುದು, ಕಾರ್ಕಳದ ಅರಸನ ಮೇಲಿನ ದ್ವೇಷದಿಂದ ಅಣ್ಣ ಬೀರಕಲ್ಕುಡ ಮತ್ತು ತಂಗಿ ಕಲ್ಲುರ್ಟಿ ಮಾಯವಾಗಿ ಭೂತಗಳಾಗುವುದು, ಭೂತಗಳಾಗಿ ಕಾರ್ಕಳದ ಅರಸನನ್ನು ಬಗೆಬಗೆಯಾಗಿ ಹಿಂಸಿಸುವುದು - ಈರೀತಿ ಪಾಡ್ದನದ ಕತಾಸರಣಿ ನಾಟಕೀಯವಾಗಿ ದುರಂತದ ರೂಪದಲ್ಲಿ ಚಲಿಸುತ್ತದೆ.

ಕಾರ್ಕಳದಲ್ಲಿ ನಿರ್ಮಿಸಿದ ಗೊಮ್ಮಟನಂತಹ ಪ್ರತಿಮೆಯನ್ನು ಬೀರ ಕಲ್ಕುಡನು ತುಳುನಾಡಿನಲ್ಲಿ ಬೇರೆಲ್ಲೂ ನಿರ್ಮಿಸಬಾರದು ಎಂಬ ಸ್ವಾರ್ಥ ಮನೋಧರ್ಮದಿಂದ ಕಾರ್ಕಳದ ಭೈರರಸನು ಕಲ್ಕುಡನ ಎಡಕೈಯನ್ನು ಬಲಕಾಲನ್ನು ಕಡಿದು ಹಾಕಿಸುವಲ್ಲಿ, ಆ ಅರಸನ ಸ್ವಾರ್ಥಕ್ಕಾಗಿ ಬಡ ಕಲ್ಕುಡನೊಬ್ಬನನ್ನು ಬಲಿಯಾಗಿಸುವ ಸಂದರ್ಭದ ದುರಂತವಿದೆ. ಪ್ರತಿಷ್ಠಿತ ವರ್ಗದ ಪ್ರತಿಷ್ಠೆಯನ್ನು ಕಾಪಾಡುವುದಕ್ಕಾಗಿ ಬಡಪಾಯಿ ಕಲ್ಕುಡನೊಬ್ಬನು ಕಾಲು ಮತ್ತು ಕೈಯನ್ನು ಕಳೆದುಕೊಳ್ಳುವುದು ತೀರ ದುರ್ಭರ ಸಂದರ್ಭವಾಗಿರುವುದು ಅಷ್ಟೇ ಅಲ್ಲ. ಎಲ್ಲಕಾಲಕ್ಕೂ ಪ್ರತಿಷ್ಠಿತರು ತಮ್ಮ ವೈಭವಕ್ಕಾಗಿ ಕೆಳವರ್ಗದವರನ್ನು ಹೇಗೆ ಹಿಂಸಿಸುತ್ತಾರೆ ಶೋಷಿಸುತ್ತಾರೆ ಎನ್ನುವುದಕ್ಕೆ ಕಲ್ಕುಡ ಕಲ್ಲುರ್ಟಿ ಪಾಡ್ದನವು ಒಂದು ಜೀವಂತ ನಿದರ್ಶನವಾಗಿದೆ. ಆದರೆ ಈ ಪಾಡ್ದನದ ಮಹತ್ವ ಇರುವುದು ಅನಂತರದ ಸಂದರ್ಭದಲ್ಲಿ. ವೇಣೂರಿನಲ್ಲಿ ಗೊಮ್ಮಟನನ್ನು ಕೆತ್ತಿ ಆದಮೇಲೆ ಕಲ್ಕುಡ ಮತ್ತು ಕಲ್ಲುರ್ಟಿ ಮಾಯವಾಗುತ್ತಾರೆ ಅಂದರೆ ಅಣ್ಣ ಮತ್ತು ತಂಗಿ ಅವಮಾನವನ್ನು ಸಹಿಸಲಾರದೆ ಪ್ರತೀಕಾರ ಭಾವನೆಯಿಂದ ಬೆಂದು ಆತ್ಮಹತ್ಯೆ ಮಾಡಿಕೊಂಡಿರಬೇಕು. ಮಾಯಕವಾಗುವುದಕ್ಕೆ ಮೊದಲು ಕಲ್ಲುರ್ಟಿಯು

ಕೋಪದಲ್ಲಿ ಧಿಗ್ಗನೆ ಎದ್ದು ಕಾರ್ಕಳದ ಕಡೆಗೆ ಮುಖಮಾಡಿ ಪ್ರತಿಜ್ಞೆ ಮಾಡುತ್ತಾಳೆ - "ಎನ್ನ ಅಣ್ಣನ ಕೈಕಾರ ಕಳೆಯಿ ಅರಸನು ತೂವಂದೆ ಕೇಣಂದೆ ಬುಡಯೆ" (ನನ್ನ ಅಣ್ಣನ ಕೈಕಾಲುಗಳನ್ನು ಕಡಿದ ಅರಸನನ್ನು ನಾನ್ನು ನೋಡಿಕೊಳ್ಳದೆ ಬಿಡಲಾರೆ). ಕಲ್ಕುಡ ಒಂದು ಕಡೆ ಹೇಳುತ್ತಾನೆ: 'ಮನುಷ್ಯ ರೂಪದಲ್ಲಿದ್ದ ನನ್ನ ಕೈಕಾಲು ತೆಗೆದಿದ್ದೀರಲ್ಲ, ಮಾಯದಲ್ಲಿ ನಾನು ಅವರನ್ನು ಬಿಡುವುದಿಲ್ಲ.' ಕಲ್ಲುರ್ಟಿ ಹೇಳುವ ಮಾತು - "ಕೈಕಾಲು ತೆಗೆದವರ ಚಂದವನ್ನು ಈ ರೂಪದಲ್ಲಿ ಆಗದಿದ್ದರೆ ಮಾಯದಲ್ಲಿ ಆದರೂ ನೋಡಬೇಕು.' ಈ ಮಾತುಗಳನ್ನು 'ಕಲ್ಕುಡ – ಕಲ್ಲುರ್ಟಿ' ಯರಿಗೆ ಆದ ಹಿಂಸೆಯಿಂದ ಅವರ ಮನಸ್ಸಿನಲ್ಲಿ ಜ್ವಲಿಸುತ್ತಿದ್ದ ಪ್ರತೀಕಾರ ಭಾವನೆಯ ದ್ಯೋತಕಗಳಾಗಿವೆ. ಜೀವಂತವಾಗಿರುವಾಗ ಅಸಹಾಯಕರಾಗಿದ್ದ ಶೋಷಿತವರ್ಗದ ಅಣ್ಣ ತಂಗಿಯರಾದ ಕಲ್ಕುಡ-ಕಲ್ಲುರ್ಟಿಯರ ಅವಮ್ಯಯಾತನೆ ದ್ವೇಷದ ರೂಪ ತಾಳಿ, ಶೋಷಕನಾದ ಪ್ರತಿಷ್ಠಿತ ವರ್ಗದ ಕಾರ್ಕಳದ ರಸನನ್ನು ಭೂತದ ಸಂಕೇತದ ಮೂಲಕ ಪೀಡಿಸುವ ಹಿಂಸಿಸುವ ಫಲ ಈ ಪಾಡ್ದನದಲ್ಲಿ ಧ್ವನಿತವಾಗುತ್ತದೆ. ಭೂತಗಳಾದ ಕಲ್ಕುಡ - ಕಲ್ಲುರ್ಟಿಯರು ಕಾರ್ಕಳದ ಅರಸನ ಅರಮನೆಯನ್ನು ಹೊಕ್ಕು ಅರಸನ ಹಾಸಿಗೆಗೆ ಬೆಂಕಿ ಹಚ್ಚುತ್ತಾರೆ. ನಗರದ ಅಂಗಡಿಗಳನ್ನು, ಮನೆಗಳನ್ನು ಸುಡುತ್ತಾರೆ. ಕಾರ್ಕಳದ ನಗರವನ್ನೇ ಬೆಂಕಿಗೆ ಆಹುತಿ ಮಾಡುತ್ತಾರೆ. ಕಾರ್ಕಳದ ಐದುಸಾವಿರ ಮಂದಿಗೆ ಹುಚ್ಚು ಹಿಡಿಸುತ್ತಾರೆ. ಅರಸನ ತಾಯಿಯನ್ನು ಏಳು ರಾತ್ರಿ ನೀರಿನಲ್ಲಿ ಮುಳುಗಿಸಿ ಇಡುತ್ತಾರೆ. ಮನೆ ಮನೆಗಳಿಗೆ ಕಲ್ಲು ಎಸೆಯುತ್ತಾರೆ. ಅರಮನೆಯಲ್ಲಿ ನಾಯಿಯ ಹೆಣವನ್ನು, ಮಲವನ್ನು ತಂದು ಇರಿಸುತ್ತಾರೆ, ಈ ಎಲ್ಲಾ ಪೀಡಿನ, ಪ್ರತೀಕಾರದ ಕೆಲಸಗಳಲ್ಲಿ ಕಲ್ಕುಡ ನಿಗಿಂತಲೂ ಅವನ ತಂಗಿ ಕಲ್ಲುರ್ಟಿ ಒಂದು ಕೈ ಮಿಗಿಲು ಎನ್ನಿಸುತ್ತಾಳೆ. ಈ ಅನಾಹುತಗಳನ್ನು ಮಾಡುವಾಗ ಕಲ್ಲುರ್ಟಿ ಹೇಳುವ ಒಂದು ಮಾತು ಗಮನಾರ್ಹವಾಗಿದೆ. "ಜೋಗೊಡು ಎನ್ನ ಅಣ್ಣನ ಕೈಕಾರ್ ಕಡ್ತ್‌ದ್ ಪುಣೆತ್ತಾರ್ ಮಾಯೊಡು ಎಂಕುಳು ಪೊಣಿಯೋ ಅರಸುಳೇ ... (ಮನುಷ್ಯರಾಗಿದ್ದಾಗ ನನ್ನ ಅಣ್ಣನ ಕೈ ಕಾಲನ್ನು ಕಡಿದು ನಿಮ್ಮ ಹಠವನ್ನು ಮೆರೆದಿರಿ, ನಾವೀಗ ಮಾಯದ ರೂಪದಲ್ಲಿ ನಮ್ಮ ಹಠವನ್ನು ಸಾಧಿಸುತ್ತೇವೆ ಅರಸರೇ). ಹಾಗೆಯೇ ಕಲ್ಲುರ್ಟಿಯ ಇನ್ನೊಂದು ಮಾತು "ನನ್ನ ಅಣ್ಣನ ಜೀವನವನ್ನು ನಾಶ ಮಾಡಿದ ನಿನ್ನನ್ನು ನಾಶ ಮಾಡದೇ ಇರಲಾರೆವು." ಕೊನೆಗೂ ಈ ಭೂತಗಳ ಉಪದ್ರವವನ್ನು ತಡೆಯಲಾರದೆ ಅವುಗಳಿಗೆ ಸ್ಥಾನಕಟ್ಟಿಸಿ ಆಹಾರ ಕೊಟ್ಟು ಪೂಜೆ ಮಾಡುತ್ತಾನೆ ಕಾರ್ಕಳದ ಭೈರರಸ. ಈ ಸಂದರ್ಭ ಬಹಳ ಮಾರ್ಮಿಕ ವಾಗಿ ಪಾಡ್ದನದ ಧ್ವನಿಯನ್ನು ತಿಳಿಸುತ್ತದೆ. ಜೀವಂತರಾಗಿದ್ದಾಗ 'ಕಲ್ಕುಡ-ಕಲ್ಲುರ್ಟಿ' ಯವರಿಗೆ ಹಿಂಸಿಸಿದ ಅರಸನೇ ಸತ್ತ ಮೇಲೆ ಅವರಿಗೆ ಗುಡಿ ಕಟ್ಟಿಸಿ ಅವರನ್ನು ಆರಾಧಿಸುತ್ತಾನೆ. ಜೀವಂತವಾಗಿರುವಾಗ ತಮ್ಮಿಂದ ಹಿಂಸೆಗೊಳಗಾದ ಈ ಶೋಷಿತರು ಭೂತಗಳಾದ ಮೇಲೆ, ಪ್ರತಿಷ್ಠಿತ ವರ್ಗದವರು ಅವರಿಗೆ ಗುಡಿ ಕಟ್ಟಿಸಿ ಆರಾಧಿಸುವ, ಭಯ ಪಡುವ ರೀತಿ-ಇದು ಅದುಮಲ್ಪಟ್ಟ ಜನರ ಪ್ರತೀಕಾರ ಭಾವನೆಯ ಸಾಂಕೇತಿಕ ಅಭಿವ್ಯಕ್ತಿ ಯಾಗಿ ಈ ಪಾಡ್ದನದಲ್ಲಿ ಕಾಣಿಸಿಕೊಳ್ಳುತ್ತದೆ.

'ಕಲ್ಕುಡ - ಕಲ್ಲುರ್ಟಿ' ಪಾಡ್ದನದಲ್ಲಿ ಐತಿಹಾಸಿಕವಾಗಿ ಶ್ರವಣಬೆಳಗೊಳ' ಕಾರ್ಕಳ ಮತ್ತು ವೇಣೂರುಗಳ ಗೊಮ್ಮಟ ಪ್ರತಿಮೆಗಳ ರಚನೆಯ ವಿಚಾರಗಳು ವಿಶೇಷವಾಗಿ ಕಾಲದ ಅಂತರವಿಲ್ಲದೆ ಕಾಣಿಸುತ್ತವೆ. ಈ ಪಾಡ್ದನದ ರಚನೆಯಲ್ಲಿ ಕಾಲದ ಅಂತರವನ್ನು ಕಡೆಗಣಿಸಿ ಮೌಲ್ಯಗಳ ಸಂಘರ್ಷವನ್ನು ಸ್ಥಾಪಿಸುವ ದೃಷ್ಟಿಯಿಂದ ಈರೀತಿ ಮಾಡಿರಬಹುದು ಎಂದು ಅನ್ನಿಸುತ್ತದೆ (ಈ ಪಾಡ್ದನದ ಕಾಲವನ್ನು ಕುರಿತ ಚರ್ಚೆಯನ್ನು 'ಪಾಡ ನಗಳ ಕಾಲ ನಿರ್ಣಯ' ಎನ್ನುವ ಅಧ್ಯಾಯದಲ್ಲಿಯೂ ಈ ಪಾಡ್ದನದಲ್ಲಿ ವ್ಯಕ್ತವಾಗುವ ಸಾಂಸ್ಕೃತಿಕ ಅಂಗ ಗಳನ್ನು 'ಪಾಡ್ದನಗಳಲ್ಲಿ ವ್ಯಕ್ತವಾಗುವ ತುಳುನಾಡಿನ ಸಂಸ್ಕೃತಿ' ಎಂಬ ಅಧ್ಯಾಯದಲ್ಲಿಯೂ ಕೊಡಲಾಗಿದೆ).

'ಕಲ್ಕುಡ - ಕಲ್ಲುರ್ಟಿ' ಪಾಡ್ದನದ ಪಾಠಗಳಲ್ಲಿ 'ಕಲ್ಕುಡೆ' ($K_3$) ಬಹಳ ಸಂಕ್ಷಿಪ್ತವಾಗಿದೆ. ಇದರ ಪ್ರಕಾರ ಸೂವ ಕಲ್ಕುಡನಿಗೆ ಐವರು ಗಂಡು ಮಕ್ಕಳು, ಕೊನೆಯವಳು ಒಬ್ಬಳು ಹೆಣ್ಣು. ತಂದೆ ಸೂವ ಕಲ್ಕುಡನು ಬೆಳಗೊಳದಲ್ಲಿ ಗೊಮ್ಮಟನ ಪ್ರತಿಯನ್ನು ಮಾಡುತ್ತಾನೆ. ಅದರಲ್ಲಿ ಮಗ ಶಂಭು ಕಲ್ಕುಡನು ದೋಷವನ್ನು

ತೋರಿಸಿಕೊಟ್ಟಾಗ ತಂದೆಯು ಚೂರಿಯಿಂದ ತನ್ನ ಪ್ರಾಣವನ್ನು ಕಳೆದುಕೊಳ್ಳುತ್ತಾನೆ. ಬೆಳ್ಗೊಳದಿಂದ ಕಾರ್ಕಳಕ್ಕೆ ಬಂದ ಶಂಭು ಕಲ್ಕುಡನು ಅಲ್ಲಿ ಗೊಮ್ಮಟ ಮೂರ್ತಿಯ ಕೆಲಸವನ್ನು ಮಾಡುತ್ತಾನೆ. ಅಲ್ಲಿಂದ ವೇಣೂರಿಗೆ ಬಂದು ವೇಣೂರಿನಲ್ಲಿಯೂ ಗೊಮ್ಮಟನ ಕೆಲಸವನ್ನು ಮಾಡುತ್ತಾನೆ. ಇದನ್ನು ಕಂಡ ಭೈರಸೂಡರು (ಕಾರ್ಕಳದ ಭೈರರಸ) ಶಂಭು ಕಲ್ಕುಡನ ಒಂದು ಕೈ ಮತ್ತು ಒಂದು ಕಾಲನ್ನು ತೆಗೆಸುತ್ತಾರೆ. ಅಲ್ಲಿಂದ ಕಾರಿಂಜದಲ್ಲಿ ಕೆಲಸ ಮಾಡುತ್ತಾನೆ. ಆಮೇಲೆ ತೀರ್ಥಗಳಲ್ಲಿ ಸ್ನಾನ ಮಾಡುತ್ತಾನೆ.

ಸಂಕ್ಷಿಪ್ತವಾದ ಈ $K_3$ ಪಾಠದಲ್ಲಿ ಸಾಮಾನ್ಯವಾದ ಪಾಠಕ್ಕಿಂತ ಸ್ವಲ್ಪ ಭಿನ್ನವಾಗಿ ತಂದೆಯನ್ನು ಸೂವ ಕಲ್ಕುಡನೆಂದೂ ಮಗನನ್ನು ಶಂಭು ಕಲ್ಕುಡನೆಂದೂ ಕರೆಯಲಾಗಿದೆ. ಇಲ್ಲಿ ಕಲ್ಕುಡನ ತಂಗಿ ದುರ್ಗಮ್ಮ. ಆದರೆ ಅವಳ ಹೆಸರು ಮಾತ್ರ ಕಾಣಿಸುತ್ತದೆಯೇ ಹೊರತು ಅವಳು ಎಲ್ಲೂ ಪಾತ್ರವಾಗಿ ಬರುವುದಿಲ್ಲ. ಪಾಡ್ದನದ ಕೊನೆಯಲ್ಲಿ ಕಲ್ಕುಡನ ತೀರ್ಥಸ್ನಾನದ ವಿಚಾರವಿದೆ. ಆದರೆ ಅವನ ಮರಣದ ವಿಚಾರ ಅಸ್ಪಷ್ಟವಾಗಿದೆ. ಪಾಡ್ದನದ ಕೇಂದ್ರ ಬಿಂದುವಾದ ಕಲ್ಕುಡನ ಕೈಕಾಲುಗಳನ್ನು ಭೈರರಸನು ಕಡಿಯುವ ಸಂಗತಿ ಒಂದೇ ಮಾತಿನಲ್ಲಿ ಸ್ಪಷ್ಟವಾಗಿ ಕಾಣಿಸಿಕೊಂಡಿದೆ. ಆದರೆ ಕಲ್ಕುಡ ಭೂತವಾದ ವಿಚಾರವಾಗಲೀ ಅವನು ಭೈರರಸನಿಗೆ ತೊಂದರೆ ಕೊಟ್ಟ ವಿಚಾರವಾಗಲೀ ಇಲ್ಲಿ ಇಲ್ಲ.

ಕಲ್ಲುರ್ಟಿ ಪಾಡ್ದನ (ಪಾಠ $K._1$) ಹೆಚ್ಚು ಜನಪ್ರಿಯವಾದ, ಎಲ್ಲ ಸಂಗತಿಗಳನ್ನು ವಿವರವಾಗಿ ಉಳ್ಳ ಸಾಮಾನ್ಯ ಪಾಠ (Standard Text). ಈ ಪಾಠದಲ್ಲಿ ಇರುವ ವೈಶಿಷ್ಟ್ಯಗಳನ್ನು ಈ ಹಿಂದೆಯೇ ಅಧ್ಯಯನ ಮಾಡಿದೆ.

'ಪ್ರೊಸ ಭೂತ' ಪಾಡ್ದನವು ($K_2$ ಪಾಠ) ಸಾಮಾನ್ಯವಾಗಿ $K_1$ ಪಾಠವನ್ನೇ ಹೋಲುತ್ತದೆ. ಈ ಪಾಡ್ದನದಲ್ಲಿ ಕಲ್ಕುಡನನ್ನು 'ಪ್ರೊಸ ಭೂತ' ವೆಂದು ಕರೆಯಲಾಗಿದೆ. ಅಂದರೆ ಈ ಭೂತದ ಆರಾಧನೆಯ ಆರಂಭದ ಕಾಲದಲ್ಲಿ ಈರೀತಿ ಕರೆದಿರಬಹುದು. ಬೆಳ್ಗೊಳದಲ್ಲಿ ತಂದೆ ಶಂಭು ಕಲ್ಕುಡನು ಕೆಲಸ ಮಾಡುವುದು, ಅಲ್ಲಿಗೆ ಮಗ ಬೀರ ಕಲ್ಕುಡನು ಹೋಗಿ ತಂದೆಯ ಶಿಲ್ಪದಲ್ಲಿ ದೋಷ ಕಂಡು ಹಿಡಿಯುವುದು - ಇಲ್ಲಿಂದ ಆರಂಭವಾಗಿ ಕಾರ್ಕಳ ವೇಣೂರಿನಲ್ಲಿ ನಡೆಯುವ ಘಟನೆಗಳು $K._1$ ಪಾಠದ ಹಾಗೆಯೇ ಇವೆ. ಪಾಡ್ದನದ ಕೊನೆಯ ಭಾಗದಲ್ಲಿ ಮಂತ್ರವಾದಿಗಳು ಬರುವುದು, ಆಮೇಲೆ ಬೇರೆ ಬೇರೆ ಊರುಗಳಲ್ಲಿ ಕಲ್ಕುಡನನ್ನು ನಂಬುವುದು, ಅವನಿಗೆ ಗುಡಿಗಳನ್ನು ಕಟ್ಟಿಸುವುದು - ಈ ವಿವರಗಳಲ್ಲಿ $K_2$ ಪಾಠಕೂ $K_1$ ಪಾಠಕ್ಕೂ ಕೆಲವು ವ್ಯತ್ಯಾಸಗಳು ಕಾಣಿಸುತ್ತವೆ. ಕಲ್ಕುಡನ ಪ್ರಸರಣಕ್ಕೆ ಸಂಬಂಧಿಸಿದ ತುಳುನಾಡಿನ ಅನೇಕ ಸ್ಥಳಗಳ ಹೆಸರುಗಳು ಇಲ್ಲಿ ಬರುತ್ತವೆ. ಈರೀತಿ ಕಲ್ಕುಡ - ಕಲ್ಲುರ್ಟಿಯರಿಗೆ ಸಂಬಂಧಿಸಿದ ಅವರ ಮಹಿಮೆಯನ್ನು ಸಾರುವ ಮತ್ತು ಆದಕ್ಕಿಂತ ಹಿಂದೆ ಕಲ್ಕುಡನ ಸಂಚಾರವನ್ನು ಗುರುತಿಸುವ ಸ್ಥಳಗಳ ಹೆಸರುಗಳ ಪಟ್ಟಿಯನ್ನು, ಅಂತಹ ಸ್ಥಳಗಳ ನಕ್ಷೆಯನ್ನು (Map) ಮುಂದೆ ಕೊಡಲಾಗಿದೆ. ಕಲ್ಕುಡನನ್ನು ಕುರಿತ $K_4$ ಪಾಡ್ದನದ ಪಾಠದಲ್ಲಿ ಮುಖ್ಯ ಕಥಾವಸ್ತು ಇದೇ ರೀತಿಯಲ್ಲಿ ಇದೆ. ತಂದೆ ಸಮು ನಾರಾಯಣ. ತಾಯಿ ಇರವೆದಿ. ಅವರ ಮಗ ಬೀರುಅಚ್ಚುವ ಕಥೆಯ ಪ್ರಧಾನ ವ್ಯಕ್ತಿ. ತಂದೆಯ ಕೆಲಸದಲ್ಲಿ ಮಗ ಊನ ತೋರಿಸಿ ಕೊಟ್ಟಾಗ ತಂದೆಯು ಶಿಲ್ಪದ ಉಳಿಯಿಂದ ತನ್ನ ಪ್ರಾಣವನ್ನು ಕಳೆದುಕೊಳ್ಳುತ್ತಾನೆ. ಕಾರ್ಕಳದಲ್ಲಿ ಗೊಮ್ಮಟನನ್ನು ಮಾಡಿದ ಬೀರು ಅಚ್ಚುವನಿಗೆ ಭೈರರಸನು ಕೊಟ್ಟ ಹಿಂಸೆ ಒಂದೇ ರೀತಿ ಇದ್ದರೂ ಹೆಚ್ಚು ಮಾರ್ಮಿಕವಾಗಿದೆ -'ಬಂಗಾರ ಬಳೆ ನಿನಗೆ ಬಹುಮಾನವೆಂದು ಬಲಕೈ ತೆಗೆದರು, ಕಾಲಿಗೆ ಕಡಗ ಎಂದು ಎಡದ ಕಾಲು ತೆಗೆದರು. ಈ ಊರಿನಲ್ಲಿ ಕೆಲಸಮಾಡಿ ತಿನ್ನಬಾರದು. ನೀನು ತಂದೆಯನ್ನು ಕೊಂದ ಮಗ ಎಂದು ಬಿಟ್ಟರು". ವೇಣೂರಿನ 'ಮಾದೇವಿ' ದೇವಸ್ಥಾನದಲ್ಲಿ ಕಲ್ಕುಡನು ಮಾಯವಾಗುತ್ತಾನೆ. ಆಗ ಅವನು ಕಾರ್ಕಳದ ಅರಸರ ಬಗ್ಗೆ ಹೇಳುವ ಒಂದು ಮಾತು - 'ಜೋಗೊಡು ಕೈಕಾರ್ ಕಳೆತ್ತರತ್ವಾ. ಮಾಯೊಡು ಯಾನ್ ಅರೆನ್ ದೀವಯೇ" (ಜೋಗದಲ್ಲಿ ಕೈಕಾಲು ತೆಗೆದಿದ್ದೀರಲ್ಲಾ ಮಾಯದಲ್ಲಿ ನಾನು ಅವರನ್ನು ಇಡುವುದಿಲ್ಲ). ಮುಂದಿನ ಘಟನೆ ಎರಡು ಸಾಲುಗಳಲ್ಲಿ ಬಂದು ಪಾಡ್ದನ ಮುಕ್ತಾಯಗೊಳ್ಳುತ್ತದೆ.

ಕಾರ್ಕಳಪೇಟೆಯನ್ನು ಬೆಂಕಿ ಇಟ್ಟು ಸುಟ್ಟುಹಾಕಿದರು. ಅರಸನ ಹೆಂಡತಿಗೂ ಅರಸನಿಗೂ ಹುಚ್ಚು ಹಿಡಿಸಿದರು.

### $K_5$. 'ಕಲ್ಲುರ್ಟಿ' ಪಾಡ್ದನ

ಈ ಪಾಠದಲ್ಲಿ ಸಂಕ್ಷಿಪ್ತವಾಗಿ 'ಕಲ್ಕುಡ-ಕಲ್ಲುರ್ಟಿ'ಯರ ಕತೆ ಬರುತ್ತದೆ. $K_4$ ಪಾಠದಲ್ಲಿ ಕಲ್ಕುಡನೇ ಪಾಡ್ದನದ ಉದ್ದಕ್ಕೂ ಬರುತ್ತಾನೆ. ಎಲ್ಲಿಯೂ ಕಲ್ಲುರ್ಟಿಯ ಪ್ರಸ್ತಾಪವೇ ಬರುವುದಿಲ್ಲ. $K_5$ ಪಾಠದಲ್ಲಿ ಅರ್ಧಭಾಗದವರೆಗೆ ಕಲ್ಕುಡನ ವೃತ್ತಾಂತವೂ ಉಳಿದ ಅರ್ಧಭಾಗದಲ್ಲಿ ಕಲ್ಕುಡನನ್ನು ಸೇರಿಕೊಂಡು ಕಲ್ಲುರ್ಟಿಯ ವೃತ್ತಾಂತವೂ ಬರುತ್ತದೆ. ಇದು ಬಹುಮಟ್ಟಿಗೆ $K_1$ ಪಾಠದ ಸಂಕ್ಷಿಪ್ತ ರೂಪದಂತೆ ಕಾಣಿಸುತ್ತದೆ. ಪಾಡ್ದನದ ಕೊನೆಯ ಭಾಗದಲ್ಲಿ ಕಲ್ಕುಡ-ಕಲ್ಲುರ್ಟಿ ಭೂತಗಳ ಪ್ರಸರಣದ ಮೂಲಕ ಅವರ ಮಹಿಮೆಯನ್ನು ತಿಳಿಸಲಾಗಿದೆ.

### 'ಕಲ್ಲುರ್ಟಿ ಪಾಡ್ದನ' $K_6$

ಈ ಪಾಠದಲ್ಲಿ ಕತೆಯ ಮಧ್ಯಭಾಗದಿಂದ ಪಾಡ್ದನ ಆರಂಭವಾಗುತ್ತದೆ. ಅಂದರೆ ಅಣ್ಣನನ್ನು ಹುಡುಕಲು ತಂಗಿ ಕಲ್ಲುರ್ಟಿ ಹೊರಡುವಲ್ಲಿಂದ ಪಾಡ್ದನವು ಸುರುವಾಗುತ್ತದೆ. ತಂಗಿ ಸತ್ಯಮ್ಮ : ಇಲ್ಲಿ ಅವಳ ಪ್ರಯಾಣದ ಸಿದ್ಧತೆಗಳನ್ನು – ಅಲಂಕಾರ ಮತ್ತು ಬುತ್ತಿಯ ಸಿದ್ಧತೆ – ವಿವರವಾಗಿ ಕೊಡಲಾಗಿದೆ. ಇಲ್ಲಿ ತಂಗಿ ಸತ್ಯಮ್ಮಳ ಸಂಚಾರವನ್ನು ಬಹಳ ವಿವರವಾಗಿ ಕೊಡಲಾಗಿದೆ. ಅವಳು ಉಡುಪಿಗೆ ಬಂದಾಗ ಉಡುಪಿಯಲ್ಲಿ ಕೃಷ್ಣನು ಕಪಟವೇಷದಿಂದ ಅವಳ ಅಣ್ಣನ ರೂಪದಲ್ಲಿ ಬರುವ ಸ್ವಾರಸ್ಯಕರ ಪ್ರಸಂಗವೊಂದು ಸಿಗುತ್ತದೆ-"ಕೊಲ್ಲೂರಿನಲ್ಲಿ ಇಲ್ಲ ಅಣ್ಣ. ಅಲ್ಲಿಂದಾದರೋ ಬಂದು ಬಂದು ಬಂದಳು ಉಡುಪಿಯ ರಾಜ್ಯಕ್ಕೆ. ಉಡುಪಿಗೆ ಬಂದು ಉಡುಪಿಯಲ್ಲಿ ಕೇಳಿದಾಗ ನಿನ್ನ ಅಣ್ಣ ಯಾರೋ ಏನೋ ಎಂದರು. ಕಪಟ ನಾಟಕದ ಕೃಷ್ಣದೇವರು ಅಣ್ಣನ ರೂಪವಾಗುತ್ತಾರೆ. ಉಡುಪಿಯ ಪೇಟೆಗೆ ಸುತ್ತು ಬರುವಾಗ, ಕಪಟ ನಾಟಕದ ಕೃಷ್ಣದೇವರು 'ಅಯ್ಯಾ ತಂಗಿ ನಾನು ಇಲ್ಲಿದ್ದೇನೆ' ಎನ್ನುತ್ತಾರೆ. ಬಾ ತಂಗಿ ಎಂದು ಅವಳನ್ನು ಅಪ್ಪಿ ಹಿಡಿದು ಮುತ್ತು ಕೊಡಲು ಬಂದಾಗ ಅವಳು 'ನನ್ನನ್ನು ಹಿಡಿಯಬೇಡಿ, ಮುಟ್ಟಬೇಡಿ, ದೂರ ನಿಲ್ಲಿ' ಎಂದಳು. 'ನನ್ನ ಅಣ್ಣ ನೀವು' ಎಂದು ಹೇಳಿದರು. 'ನನ್ನ ಅಣ್ಣ ನೀವಲ್ಲ. ನೀವು ಕಪಟ ನಾಟಕದ ಕೃಷ್ಣದೇವರು' ಎಂದಳು. 'ಅಯ್ಯೋ ಸತ್ಯಮ್ಮ, ನಿನಗೆ ಹೇಗೆ ಗೊತ್ತು' ಎಂದು ಕೇಳಿದರು. ಆಗ ಅವಳು 'ನೀವು ಕಪಟ ನಾಟಕದವರು. ನಿಮ್ಮ ಹಾಗೆಯೇ ನಾನೂ ಕಪಟ ನಾಟಕದವಳು. ನೀವು ಹೋಗಿ ವಸಂತದಲ್ಲಿ ಓಲಗವಾಗಿ. ನಾನು ಹೋಗುತ್ತೇನೆ ಅಣ್ಣನ ಹುಡುಕಾಟಕ್ಕೆ' ಎಂದಳು. ಈ ಪ್ರಸಂಗ ಉಡುಪಿಯ ಕೃಷ್ಣನ ರಸಿಕತೆಯನ್ನು, ಲೀಲೆಯನ್ನು ಹೇಳುವ ಉದ್ದೇಶದಿಂದ ನಿರ್ಮಾಣವಾದ ಹೊಸಸೃಷ್ಟಿ ಎಂದು ಕಾಣುತ್ತದೆ. ಬೇರೆ ಯಾವ ಪಾಠದಲ್ಲಿಯೂ ಇದು ಇಲ್ಲ. ಕಲ್ಕುಡನ ತಂಗಿಯು ಎಲ್ಲ ಮನುಷ್ಯರ ಹಾಗೇ ಇರುವ ಕಾಲದಲ್ಲಿಯೇ ತಾನು ಕಪಟ ನಾಟಕದವಳು ಎಂದು ಹೇಳಿಕೊಳ್ಳುವುದು ಆರೋಪಿತ ಅತಿಮಾನುಷತೆಯಾಗುತ್ತದೆ. ಈ ದೃಷ್ಟಿಯಿಂದಲೂ ಈ ಪ್ರಸಂಗ ಅನಂತರದ ಸೇರ್ಪಡೆ ಎನ್ನುವುದು ಸ್ಪಷ್ಟ. ಪಾಡ್ದನದ ಮುಂದಿನ ಭಾಗದಲ್ಲಿಯೂ ಕಲ್ಕುಡನ ತಂಗಿ ಕಾರ್ಕಳಕ್ಕೆ ವೇಣೂರಿಗೆ ಹೋಗುವುದು, ಕೊನೆಗೆ ವೇಣೂರಿನಲ್ಲಿ ಕೈಕಾಲು ಕಳೆದುಕೊಂಡ ಅಣ್ಣನನ್ನು ಭೇಟಿಯಾಗುವುದು ಬರುತ್ತದೆ. ಅಲ್ಲಿ ಅಣ್ಣನ ಅವಸ್ಥೆಯ ಬಗ್ಗೆ ತಂಗಿ ವಿಚಾರಿಸಿದಾಗ, ತಂಗಿಗೆ ಅಣ್ಣನು ತಿಳಿಸುವ ರೂಪದಲ್ಲಿ ಕಲ್ಕುಡನ ಹಿಂದಿನ ವೃತ್ತಾಂತವು ವರ್ಣಿತವಾಗಿದೆ. ಹಿನ್ನೋಟ ತಂತ್ರದ ಕಲ್ಪನೆಯಲ್ಲಿ ಈ ರಚನೆ ಬರುತ್ತದೆ. ಈ ಪ್ರಸಂಗ ಮುಗಿದ ಮೇಲೆ ಕಲ್ಕುಡ ಮತ್ತು ಅವನ ತಂಗಿ ಮಾಯವಾಗುವುದು, ಅನಂತರ ಕಾರ್ಕಳದ ಅರಸನಿಗೆ ಹಿಂಸೆ ಕೊಡುವುದು ವಿವರವಾಗಿ ಬಂದಿದೆ. ಕಾರ್ಕಳದಲ್ಲಿ ಅವರು ಮಾಡುವ ಹಿಂಸೆಯ ಸ್ವರೂಪವು ವಿವರಗಳ ದೃಷ್ಟಿಯಿಂದ ಹಿಂದಿನ ಪಾಡ್ದನಗಳಿಗಿಂತ ಬೇರೆಯಾಗಿದೆ. "ನಡುರಾತ್ರಿ ಜಾವದ ಹೊತ್ತಿಗೆ ಬಂದರು ಕಾರ್ಕಳಪೇಟೆಗೆ,

ಕಾರ್ಕಳ ಪೇಟೆಯನ್ನು ಬೆಂಕಿಯಿಟ್ಟು ಸುಟ್ಟು ನಾಶಮಾಡಿದರು. ಅರಸನ ಮನೆಗೆ ಹೋದರು. ಅರಸ ಮತ್ತು ಅರಸನ ಹೆಂಡತಿ ಮಲಗುವ ಕೋಣೆಯಲ್ಲಿದ್ದಾರೆ. ಅರಸನ ಹೆಂಡತಿಯನ್ನು ಕೈಕಾಲು ಹಿಡಿದು ನಡುರಾತ್ರಿ ಜಾವದ ಹೊತ್ತಿಗೆ ಬೆಟ್ಟುಗದ್ದೆಯಲ್ಲಿ ತಂದಿಟ್ಟರು. ಅರಸ ಮಲಗುವ ಹಾಸಿಗೆಗೆ ಎಲ್ಲ ಹೇಸಿಗೆಗಳನ್ನು ತಂದು ಹಾಕಿದರು. ನಾಯಿಯ ಹೆಣ, ಬೆಕ್ಕಿನ ಹೆಣ, ಎಲ್ಲ ಹೇಸಿಗೆ ತಂದು ಹಾಕಿದರು. ಅರಸನ ಅರಮನೆಯನ್ನು ಬೆಂಕಿ ಇಟ್ಟು ಸುಟ್ಟು ನಾಶಮಾಡಿದರು. ಪೇಟೆ ಕೊನೆಯಲ್ಲಿ ಕಲ್ಲು, ಪೇಟೆ ತುದಿಯಲ್ಲಿ ಬೆಂಕಿ, ಪೇಟೆಯ ನಡುವಿನಲ್ಲಿ ನಿಂತು ಚಂದ ನೋಡಿದರು."

'ಕಲ್ಕುಡ-ಕಲ್ಲುರ್ಟಿ' ಪಾಡ್ದನಗಳ ಬೇರೆಬೇರೆ ಪಾಠಗಳಲ್ಲಿ $K_1$ ಪಾಠವು ಹೆಚ್ಚು ಸಮಗ್ರವಾಗಿ, ವಿವರವಾಗಿ ಕಾಣಿಸಿಕೊಂಡಿದೆ. ಈ ಪಾಠದಲ್ಲಿ ಕಲ್ಕುಡ ಮತ್ತು ಕಲ್ಲುರ್ಟಿ ಇವರ ವೃತ್ತಾಂತಗಳು ಒಂದು ಇನ್ನೊಂದರ ಜೊತೆಗೆ ಬೆಸೆದುಕೊಂಡು ಸಾವಯವ ರೂಪದಲ್ಲಿ ಪಾಡ್ದನದ ರಚನೆಯಾಗಿದೆ. ಇದೇ ಪಾಡ್ದನ ಸಂಕ್ಷಿಪ್ತವಾಗಿ ಅಥವಾ ಕಲ್ಕುಡ ಮತ್ತು ಕಲ್ಲುರ್ಟಿಯರ ಪ್ರಾಧಾನ್ಯವನ್ನು ಬೇರೆಬೇರೆಯಾಗಿ ಗಮನಿಸಿಕೊಂಡು ಪಾಡ್ದನದ ಬೇರೆ ಬೇರೆ ಪಾಠಗಳು ಸೃಷ್ಟಿಯಾಗಿರಬೇಕು. ಆದರೆ ಪಾಡ್ದನದ ಪ್ರಧಾನ ವಸ್ತು ಎಲ್ಲಿಯೂ ಸ್ವಲ್ಪವೂ ವ್ಯತ್ಯಾಸವನ್ನು ಪಡೆಯದಿರುವುದು ಗಮನಾರ್ಹ.

### ಕಲ್ಕುಡ-ಕಲ್ಲುರ್ಟಿಯರ ಸಂಚಾರದ ಸ್ಥಳಗಳು

(ಪ್ರಸರಣದ Mapನ್ನು ಪ್ರತ್ಯೇಕವಾಗಿ ಕೊಡಲಾಗಿದೆ)

(ಅ) ವ್ಯಕ್ತಿಗಳಾಗಿ :

ಕೆಲ್ಲತ್ತ ಮಾರ್ನಾಡು
|
ಬೇಲೂರು, ಬೆಳ್ಗೊಳ
|
ನಗರ
|
ಕೊಲ್ಲೂರು
|
ಕಾರ್ಕಳ
|
ವೇಣೂರು

(ಆ) ಭೂತಗಳಾಗಿ

ವೇಣೂರು
|
ಕಾರ್ಕಳ
|
ಉಬಾರೆ (ಉಪ್ಪಿನಂಗಡಿ)
|

ಅರವದ ಗುತ್ತು (ಅಳದಂಗಡಿ)
|
ಬಂಗಾಡಿ
|
ನಾವೂರು
|
ಉಬಾರ ಕಡವು
|
ಹಾನೂರು
|
ಬಾರಾಡಿ
|
ಸಾನೂರು
|
ಮಣ್ಣಾಪು
|
ಬೊಲ್ಯ
|
ಪನಂಬೂರು
|
ಅನ್ಗಾಳ್ಯೊ
|
ಮುಂಡಾರ್
|
ಮುಂಜಪೋಲಿ (ಪುಂಜಗೋಲಿ) ಕಟ್ಟೆ
|
ಮಿೂಯಾರ್
|
ಪೇರಾಜೆ

## ಕಲ್ಕುಡ-ಕಲ್ಲುರ್ಟಿಯ ಪ್ರಸರಣದ ರೇಖಾಚಿತ್ರ

## Diffusion Map of Kalkuda & Kallurti



# ೪. ಬೊಬ್ಬರ್ಯ

ಮನುಷ್ಯರು ಕಾಳಗದಲ್ಲಿ ಸತ್ತ ಮೇಲೆ ಭೂತಗಳಾಗಿ ಪರಿವರ್ತನೆಗೊಂಡು ಆರಾಧನೆಯನ್ನು ಪಡೆಯುವ ವಸ್ತುವುಳ್ಳ ಪಾಡ್ದನಗಳಲ್ಲಿ ಬೊಬ್ಬರ್ಯ ಪಾಡ್ದನವು ಮುಖ್ಯವಾದುದು. ಸಮುದ್ರದ ಕಾಳಗದಲ್ಲಿ ಮಡಿದ ಮುಸ್ಲಿಂ ವ್ಯಾಪಾರಿಯೊಬ್ಬನ ಕಥೆಯು ಬೊಬ್ಬರ್ಯನ ಪಾಡ್ದನದಲ್ಲಿ ಇದೆ. ಮುಸ್ಲಿಂ ಸಂಸ್ಕೃತಿಯ ಪ್ರಭಾವವು ತುಳುನಾಡಿನಲ್ಲಿ ಆದ ಮೇಲೆ ಇಂತಹ ಕಥೆಯೊಂದು ಘಟನೆಯೊಂದರ ಆಧಾರದ ಮೇಲೆ ರಚನೆಯಾಗಿರಬೇಕು. ಮುಸ್ಲಿಂ ಜನಾಂಗದವರು ತುಳುನಾಡಿನಲ್ಲಿ ಪ್ರಧಾನವಾಗಿ ವ್ಯಾಪಾರ ವೃತ್ತಿಯನ್ನು ಉಳ್ಳವರು. ಆದ್ದರಿಂದಲೇ ಅವರನ್ನು ಸಾಮಾನ್ಯವಾಗಿ 'ಬ್ಯಾರಿ' ಅಂದರೆ 'ವ್ಯಾಪಾರಿ' ಎಂದು ಕರೆಯುತ್ತಾರೆ. ಅಂತಹ ವ್ಯಾಪಾರಿಯೊಬ್ಬನ ಮಕ್ಕಳು ಮೊದಲು ಸಮುದ್ರದ ಬದಿಯಲ್ಲಿ ಬೇರೆ ಬೇರೆ ಜೀನಸು ಮುಂತಾದ ಸಾಮಗ್ರಿಗಳ ವ್ಯಾಪಾರವನ್ನು ಮಾಡುತ್ತಾರೆ. ಅನಂತರ ಹಡಗಿನ ಮೂಲಕ ದೂರ ದೂರದ ಊರುಗಳಿಗೆ ಹೋಗಿ ವ್ಯಾಪಾರವನ್ನು ನಡೆಸುತ್ತಾರೆ. ಮುಸ್ಲಿಂ ವರ್ತಕರು ತುಳುನಾಡಿನ ಕರಾವಳಿಯ ರೇವು ಪಟ್ಟಣಗಳ ಮೂಲಕ ದೂರ ದೂರದ ಊರುಗಳ ಜೊತೆಗೆ ವ್ಯಾಪಾರದ ಸಂಬಂಧವನ್ನು ಇಟ್ಟುಕೊಂಡಿದ್ದರು ಎಂಬುದನ್ನು ತುಳುನಾಡಿನ ಇತಿಹಾಸದಲ್ಲಿ ಹೇಳಲಾಗಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಇವರನ್ನು 'ನವಾಯತರು' ಎಂದು ಕರೆಯುತ್ತಾರೆ. ಬೊಬ್ಬರ್ಯ ಪಾಡ್ದನದ ಕೆಲವು ಪಾಠಗಳು ದೊರೆಯುತ್ತವೆ. ಅಂತಹ ಒಂದು ಜನಪ್ರಿಯ ಪಾಠವನ್ನು ಮೊದಲು ಗಮನಿಸಿ ಬಳಿಕ ಉಳಿದ ಪಾಠಗಳ ಜೊತೆಗೆ ಹೋಲಿಸಿ ಅದರ ವೈಶಿಷ್ಟ್ಯವನ್ನು ಗುರುತಿಸಬಹುದು.

**ಬೊಬ್ಬರ್ಯ ಪಾಡ್ದನ (ಕನ್ನಡ ರೂಪಾಂತರ) $B_1$ ಪಾಠ**

"ಸುಲಿಕಲ್ಲ ಮುರವೆ ಮತ್ತು ಬೀಟಿ ಪಾತುಮ್ಮರಿಗೆ ಏಳು ಮಕ್ಕಳು". ಅವರಿಗೆ ಕಾಯಿರಿ, ಕಲಸಪ್ಪೆ, ಗೆಂಡೆ ಬೊಮ್ಮಯ, ಸಿಂಕಿರಿ ಸಂವಣಿ, ಸುಮಣಿ ಅನಂತೆ, ಸರಪೂಳಿ ಮತ್ತು ಸುಣ್ಣ ಜಾನು ನಾಯಿಕ ಎಂದು ಹೆಸರಿಟ್ಟರು. ಬೊಬ್ಬರ್ಯನೂ ಅವರಲ್ಲೊಬ್ಬ.

ಅವರಿಗೆ ಬರಹ ಕಲಿಸಲು ಹ್ಯೊಗೆ ತಂದರು. ಓಲೆಗಳನ್ನು ಕತ್ತರಿಸಿದರು, ಓದಿಸಿದರು. ಹೀಗೆ ಅವರ ಅಕ್ಷರಾಭ್ಯಾಸ ಮುಗಿಯಿತು.

ಇನ್ನು ನಾವು ಊರಿನಲ್ಲಿ ವ್ಯಾಪಾರ ಮಾಡುವೆವೆಂದು ಅವರು ತೂಕ ಮತ್ತು ಅಳತೆಯ ಪಾತ್ರೆಗಳನ್ನು ಹೆಗಲಿಗೇರಿಸಿದರು. ಒಂದು ಸಾವಿರ ಕಟ್ಟು ಬೆಲ್ಲ, ಹುರಿಹಗ್ಗ ಮೊದಲಾದವುಗಳನ್ನು ಮಾರಾಟ ಮಾಡಿದರು.

ಒಂದೊಂದು ಮನೆಯಿಂದ ಒಂದೊಂದೇ ತೆಂಗಿನ ಮರದ ಗರಿಯ ತಟ್ಟೆಗಳನ್ನು ಸಂಗ್ರಹಿಸಿ ಸಮುದ್ರದ ಬದಿಯಲ್ಲಿ ಹದಿನಾರು ಬಾಗಿಲುಳ್ಳ ಅಂಗಡಿ ಕಟ್ಟಿಸಿದರು. ಪ್ರತಿಯೊಂದು ಬಾಗಿಲಲ್ಲಿ ಬೇರೆ ಬೇರೆ ವಸ್ತುಗಳ ವ್ಯಾಪಾರ ನಡೆಸಿದರು. ವ್ಯಾಪಾರದಲ್ಲಿ ಅವರಿಗೇನೂ ಪ್ರಯೋಜನವಾಗಲಿಲ್ಲ.

ಇನ್ನು ದೋಣಿ ನಡೆಸುವ ವ್ಯವಹಾರ ಮಾಡುವುದೆಂದು ಅವರು ಯೋಚಿಸಿ ಏಳು ವರಹದ ಎಮ್ಮೆ ಕರುವನ್ನು ಮಾರಿದರು. ಅವರ ಜಾತಿಯವರೊಡನೆ ಪೆರ್ಯ ಕಡಂಜಾರಿಗೆ ಹೋಗಿ ಬ್ರಾಹ್ಮರಣನ್ನು ಕಂಡು ಕೈಮುಗಿದು ತಾವು ಜಾತಿ ನೀತಿಯ ಬ್ಯಾರಿಗಳೆಂದು ಅರುಹಿದರು. ಮತ್ತೆ ತಮಗೆ ದೋಣಿಗೆ ಬೇಕಾದ ಮರ ವನ್ನು ಮಾರಾಟ ಮಾಡಬೇಕೆಂದು ಹಣವನ್ನು ಮುಂದಿಟ್ಟರು. ಬ್ರಾಹ್ಮಣರಿಗೆ ಹಣವನ್ನು ಕಂಡು ಸಮಾಧಾನ ವಾಗಿ ಬೇಕಾದ ಮರವನ್ನು ತಮ್ಮ ಕಾಡಿನಿಂದ ಕಡಿಯಬಹುದೆಂದು ಹೇಳಿದರು. ಚಂದಕ್ಕೆ ಹೊನ್ನೆಮರ, ತಿರುಳಿಗೆ ಸಿರುವು ಮರ, ಬೆನ್ನಿನ ಭಾಗಕ್ಕೆ ಮತ್ತು ಕೆಳಗಿನ ಭಾಗಕ್ಕೆ ಸಾಗುವಾನಿ ಮರಗಳನ್ನು ಆರಿಸಿದರು. ಆಮೇಲೆ ಮಲೆನಾಡಿನ ಬಡಗಿಯನ್ನು ಕರಿಸಿ ಮರಕಡಿಸಿದರು. ಆಗ ಸಾಗುವಾನಿಯ ಮರ ಉರುಳದಿರಲು ಜ್ಯೋತಿಷಿಯೊಡನೆ ಪ್ರಶ್ನೆ ಕೇಳಿದರು. ಆಗ ಪೂಂಜಳಿಕೆ ಹನ್ನೆರಡು ಮಾಗಣೆಯಲ್ಲಿ ಬೆರ್ಮೆರಿಗೆ ಗುಡಿ ಸಿದ್ಧ ವಾಗುತ್ತಿದೆಯೆಂದು ತೋರಿತು. ಸರಿ, ನಾವೂ ಬೆರ್ಮೆರ ಗುಡಿಯನ್ನು ಕಟ್ಟಿಸುವೆವೆಂದು ಸಂಕಲ್ಪಿಸಿ ಅದನ್ನು ಕಟ್ಟಿಸಿದರು.

ಮರವನ್ನು ಅಳತೆ ಮಾಡಿ, ದೋಣಿಗೆ ತುದಿ, ಅದರ ಕೂವೆಮರಕ್ಕೆ ಬುಡದ ಅಂಶವೆಂದು ನಿರ್ಧರಿಸಿ ಅದನ್ನು ಎಳೆದುಕೊಂಡು ಪಳ್ಳಿಪಳ್ಕೆ, ಪಳ್ಳಿಯ ಕರಿಯ, ಸೂಳೆ ಕುಂಬಳೆ, ಮುಚ್ಚಿದ ಕರಿಯ, ಪಂಜಿಮಾರೆ ಕರಿಯ, ಮದ್‌ಮಲೆ ಗುಂಡಿ, ಬೊಳ್ಳೆದ ಕರಿಯ, ತಂಬದ ಗುಂಡಿ, ತಾರಡಿ ಪರಿಪು ಮುಂತಾದ ಊರುಗಳನ್ನು ದಾಟಿದರು. ಮುಂದೆ ಮೂಡಂಬೈಲು ಕರಿಯ, ಉದ್ಯಾವರದ ಕರಿಯದ ಮಾರ್ಗವಾಗಿ ಪೊನ್ನೆದಂಗಡಿ ಊರನ್ನು ತಲುಪಿದರು.

ಬಡಗಿ ದೋಣಿಯ ಕೆಲಸ ಆರಂಭಿಸಿದ. ಜಾನುವಾರುಗಳ ಕೋಣೆ, ಮಕ್ಕಳ ಕೋಣೆ, ಮುತ್ತು, ರತ್ನ ವಜ್ರ ಮಾಣಿಕ್ಯ, ಅಕ್ಕಿ ಭತ್ತ ಮುಂತಾದವುಗಳಿಗೆ ಬೇಕಾದ ಉಗ್ರಾಣಗಳನ್ನು ಕಟ್ಟಿಯಾಯಿತು.

ದೋಣಿ ನಡೆಸಲು ಆದಿ ಮರಕಲ, ಅನತನ್ನ ಮರಕಲಬೊಬ್ಬರಿ, ಕುಂಞಾಲಿ, ಕೆರಪಿದೇವು ಮರಕಲ ನೇಮಿಸ ಲ್ಪಟ್ಟರು. ಹಾಯಿಯ ಬಟ್ಟೆ, ಕಬ್ಬಿಣದ ಆಣಿ, ಆಡು, ಕುರಿ, ಹೆಂಡ, ಸೆರೆ–ಬೆಸ್ತರು ಹೇಳಿದುದನ್ನು ಎಲ್ಲ ಸಂಗ್ರಹಿಸಿ ದರು. ಅಮೇಲೆ ಊರಿನಲ್ಲಿದ್ದ ಭತ್ತವನ್ನು ದೋಣಿಯಲ್ಲಿ ತುಂಬಿಸಿ, ಗಾಳಿ ಬೀಸುವ ದಿಕ್ಕನ್ನು ಪರಿಶೀಲಿಸಿ ಹಾಯಿ ಬಿಟ್ಟರು. ಗಾಳಿಯ ರಭಸಕ್ಕೆ ತೆಂಕು ರಾಜ್ಯಕ್ಕೆ ದೋಣಿ ಹೋಯಿತು. ಮಕ್ಕೊಡು ಕೋಟಿ ದಾರಿಯಾಗಿ ಕೊಚ್ಚಿಗೆ ಅದು ಮುಟ್ಟಿತು. ಅಲ್ಲಿ ಒಂದೂವರೆ ವರ್ಷ ವ್ಯಾಪಾರ ಮಾಡಿದ ನಂತರ ವಜ್ರ ವೈಡೂರ್ಯ ಮುತ್ತು, ಮಾಣಿಕ್ಯ, ಬಂಗಾರ ಇತ್ಯಾದಿಗಳನ್ನು ತುಂಬಿಸಿಕೊಂಡು ಊರಿಗೆ ಹಿಂತಿರುಗಿದರು.

ಹಿಂದೆ ಬರುವಾಗ ಕಲ್ಲಿನ ದೋಣಿಯೊಂದು ಉತ್ತರದಿಂದ ಬರುತ್ತಿತ್ತು. ಅದರ ಬ್ಯಾರಿಗಳಿಗೂ ಇವರಿಗೂ ಮಾತಿನಲ್ಲಿ ಘರ್ಷಣೆಯಾಗಿ ಜಗಳವಾಯಿತು. ಈ ಜಗಳ ಏಳು ದಿನ ಬಿಲ್ಲು ಬಾಣ ಬಂದೂಕುಗಳಿಂದ ನಡೆಯಿತು. ಕೊನೆಗೆ ಬ್ಯಾರಿಗಳ ದೋಣಿ ಒಡೆದು ಹೋಯಿತು. ಹಾಯಿ ಹರಿಯಿತು. ಕೂವೆ ಮರ ಮುರಿಯಿತು. ದೋಣಿಯೊಳಗೆ ನೀರು ಸೇರಿತು. ಬ್ಯಾರಿಗಳು ನೀರಲ್ಲಿ ಮುಳುಗಿದರು. ಬೆಸ್ತ ಮರಕಲರು ಈಜಿ ದಡ ಸೇರಿದರು, ಒಬ್ಬ ಬ್ಯಾರಿ ಮಾತ್ರ ಕಾಪುವಿನ ಹತ್ತಿರ ದಡ ಸೇರಿದ. ಆದರೆ ಅವನು ಮಾಯ ವಾಗಿ ಬೆರ್ಮೆರೊಡನೆ ಸೇರಿ ಬಿಟ್ಟ. ಆಮೇಲೆ ಬೇರೆಯವರ ಮೇಲೆ ಆವೇಶ ಬಂತು. ಅಲ್ಲಿಂದ ಮುಂದೆ ಮುಂಗ್ಲುದೊಟ್ಟಿ ಎಂಬಲ್ಲಿನ ಸ್ಥಾನದಲ್ಲಿ ಸೇರಿ ಮತ್ತೆ ಮೂಲೂರಿನ ಒಂದು ಸ್ಥಾನದಲ್ಲಿ ಸೇರಿದ. ಅಲ್ಲಿ

ಪೊಂಗಬೇರ ಬೈದ್ಯನೆಂಬವನನ್ನು ತಾವರೆಕೆರೆಯಲ್ಲಿ ಏಳು ರಾತ್ರಿ, ಎಂಟು ಹಗಲು ಮುಳುಗಿಸಿಟ್ಟ. ಜನರು ಸೇರಿ ಕೆರೆಗೆ ಹೋದ ಬೈದ್ಯನ ಹೆಜ್ಜೆ ಕಾಣುತ್ತದೆ. ಆದರೆ ಮರಳಿದ ಹೆಜ್ಜೆ ಕಾಣುವುದಿಲ್ಲವೆಂದು ಜ್ಯೋತಿಷ್ಯರೊಡನೆ ಕೇಳಿದರು. ಆಮೇಲೆ ಮೂಲೂರು ಸ್ಥಾನಕ್ಕೆ ಊರವರು ಹೋಗಿ ಪ್ರಾರ್ಥಿಸಿಕೊಂಡ ಮೇಲೆ ಮುಳುಗಿದ ಬೈದ್ಯನು ಮೇಲಕ್ಕೆದ್ದು ಬಂದ. ಅಲ್ಲಿನ ಜನ ಬೊಬ್ಬರ್ಯನನ್ನು ಆರಾಧಿಸಿದರು.

ಅಲ್ಲಿಂದ ಮಲ್ಲಾರ ಸ್ಥಾನಕ್ಕೆ ಹೋಗಿ ತನಗೆ ಸ್ಥಾನಬೇಕೆಂದು ಸ್ವಪ್ನದಲ್ಲಿ ಭೂತ ಹೇಳಿತು. ಅಲ್ಲಿ ಸ್ಥಾನ ಕಟ್ಟಿಸಿದರು. ಅಲ್ಲಿಂದ ಕಾಪು, ಅಜ್ಜಾಲ, ಪಾಂಗಾಳ, ಕಟಪಾಡಿ, ಮಟ್ಟಿ, ಉದ್ಯಾವರಗಳಲ್ಲಿಯೂ ಸ್ಥಾನ ಕಟ್ಟಿಸಿದರು. ಉಡುಪಿಯಲ್ಲಿ ಭೂತ ಜಳಕ ಮಾಡಿ ಅನಂತೇಶ್ವರ ದೇವರನ್ನು ಕಂಡಿತು. ಅಲ್ಲಿಯೂ ಸ್ಥಾನ ಕಟ್ಟಿಸಿದರು. ಚಿಟ್ಟುಪಾಡಿ, ಮಲಪು, ಪೊಡ ಬಾಂಡೇಶ್ವರ, ಕಲ್ಮಾಡಿಗಳಿಗೂ ಅದು ಹೋಯಿತು. ಹೀಗೆ ಮೂಡಣ ಗಟ್ಟದ ರಾಜ್ಯದಿಂದ ಪಡುವಣ ಕಡಲವರೆಗೆ, ಉತ್ತರದ ಅಂಕೋಲೆಯಿಂದ ಮಂಜೇಶ್ವರದವರೆಗೆ ಬಿರ್ಮರ ಗುಂಡ ಮತ್ತು ದೇವರ ದೇವಸ್ಥಾನಗಳಲ್ಲಿ ಬೊಬ್ಬರ್ಯ ಭೂತ ನೆಲಸಿತು.

ಈ ಬೊಬ್ಬರ್ಯ ಪಾಡ್ದನದಲ್ಲಿ ಮುಸ್ಲಿಂ ವ್ಯಾಪಾರಿಗಳ ಅಂದರೆ ಬ್ಯಾರಿಗಳ ದೋಣಿಗೂ ಕಲ್ಲಿನ ದೋಣಿಗೂ ಘರ್ಷಣೆಯಾಗಿ ಎರಡು ಗುಂಪಿನವರಿಗೂ ಬಿಲ್ಲು ಬಾಣ, ಬಂದೂಕುಗಳ ಯುದ್ಧವಾಗಿ ಕೊನೆಗೆ ಬ್ಯಾರಿಗಳ ದೋಣಿ ಒಡೆಯುತ್ತದೆ. ಬ್ಯಾರಿಗಳು ನೀರಿನಲ್ಲಿ ಮುಳುಗುತ್ತಾರೆ. ಈ ಬ್ಯಾರಿ ಮಾಯವಾಗಿ ಬೆರ್ಮರೊಡನೆ (ಬ್ರಹ್ಮರೊಡನೆ) ಸೇರಿ ಬಿಡುತ್ತಾನೆ. ಸಮುದ್ರದ ನೀರಿನಲ್ಲಿ ಮುಳುಗಿದ ಬ್ಯಾರಿಯು ಮಾಯ ವಾಗುತ್ತಾನೆ ಎಂದರೆ ನೀರಿನಲ್ಲಿ ಸಾಯುತ್ತಾನೆ ಎನ್ನುವ ಅರ್ಥ. ಬ್ರಹ್ಮನ ಆರಾಧನೆ ಪಾಡ್ದನದಲ್ಲಿ ಬಂದಿದೆ. ಬ್ಯಾರಿಗಳು ಹಡಗಿಗೆ ಮರವನ್ನು ಕಡಿಯುವಾಗ, ಹಡಗನ್ನು ನೀರಿಗೆ ಇಳಿಸುವಾಗ ಬ್ರಹ್ಮನಿಗೆ ಹರಕೆಯನ್ನು ಸಲ್ಲಿಸುತ್ತಾರೆ. ಆದ್ದರಿಂದಲೇ ಈ ಬ್ಯಾರಿ ಬ್ರಹ್ಮರ ಜೊತೆಗೆ ಸೇರಿ ಹೋಗುತ್ತಾನೆ. ಈ ರೀತಿ ಕಡಲಿನಲ್ಲಿ ಹಡಗು ಕಾಳಗದ ಚಿತ್ರಣ ಸಾಮಾನ್ಯವಾಗಿ ಪಾಡ್ದನದಲ್ಲಿ ಬೇರೆ ಕಡೆ ಸಿಗುವುದಿಲ್ಲ. ಇದು ಒಂದು ಬಹಳ ಮುಖ್ಯವಾದ ದಾಖಲೆಯಾಗಿದೆ. ಇಲ್ಲಿ ಬ್ಯಾರಿಗಳ ಮರದ ಹಡಗು ಮತ್ತು ಇವರ ಜೊತೆಗೆ ಕಾಳಗ ಮಾಡುವ ವೈರಿಗಳ ಕಲ್ಲಿನ ಹಡಗು (ಕಲ್ಲಿದ ಪಡಾವು) ಇವುಗಳ ಹೆಸರುಗಳು ಬರುತ್ತವೆ. ಇಲ್ಲಿ ಕಲ್ಲಿನ ಹಡಗು ಎನ್ನುವುದರ ಅರ್ಥ ಗಟ್ಟಿಯಾದ ಅಥವಾ ಲೋಹದ ಹಡಗು ಎನ್ನುವುದು ಇರಬಹುದು. ಆದರೆ ಬೊಬ್ಬರ್ಯ ಪಾಡ್ದನದ ಇನ್ನೊಂದು ಪಾಠದಲ್ಲಿ 'ಕಲ್ಪ ಪಡಾವು' ಅಂದರೆ 'ಕಳ್ಳಹಡಗು' ಎನ್ನುವ ಮಾತು ಬರುತ್ತದೆ. ಇಲ್ಲಿ 'ಕಳ್ಳ ಹಡಗು' ಎನ್ನುವ ಶಬ್ದ ಹೆಚ್ಚು ಸಮರ್ಪಕವಾಗಿ ಕಾಣಿಸುತ್ತದೆ. ಸಮುದ್ರದಲ್ಲಿ ಕಳ್ಳತನದಿಂದ ಸಾಮಗ್ರಿಗಳನ್ನು ಮಾರುವ ಹಡಗುಗಳು ಇರುತ್ತವೆ. ಅಂತಹ ಒಂದು ಹಡಗು ಬ್ಯಾರಿಗಳ ಹಡಗಿನ ಜೊತೆಗೆ ಘರ್ಷಣೆ ಮಾಡಿರಬೇಕು.

ನೀರಿನಲ್ಲಿ ಮುಳುಗಿ ಸತ್ತ ಬ್ಯಾರಿಯು ಈ ರೀತಿ ಅಕಾಲಮರಣವನ್ನು ಪಡೆದ ಕಾರಣ ಭೂತವಾಗಿ ಪರಿವರ್ತನೆಗೊಂಡ ಎನ್ನುವ ಕಲ್ಪನೆ ಪ್ರಕಟವಾಗಿದೆ. ಪಾಡ್ದನದ ಮುಂದಿನ ಭಾಗದಲ್ಲಿ ಈ ಬೊಬ್ಬರ್ಯ ಭೂತದ ಮಹಿಮೆಯನ್ನು ಪ್ರಧಾನವಾಗಿ ಒಂದು ಘಟನೆಯ ಮೂಲಕ ಹೇಳಲಾಗಿದೆ : 'ಪೊಂಗದೇರ ಬೈದ್ಯ ನನ್ನು ಬೊಬ್ಬರ್ಯ ಭೂತವು ನೀರಿನಲ್ಲಿ ಮುಳುಗಿಸಿಟ್ಟು ತನ್ನ ಶಕ್ತಿಯನ್ನು ಪ್ರದರ್ಶಿಸುವುದು. ಬಳಿಕ ಬೊಬ್ಬರ್ಯ ಭೂತದ ಪ್ರಸರಣವು ಅನೇಕ ಸ್ಥಳಗಳ ಹೆಸರುಗಳ ಉಲ್ಲೇಖದೊಡನೆ ಸಿಗುತ್ತದೆ. ಮೂಡಣ ಗಟ್ಟದ ರಾಜ್ಯದಿಂದ ಪಡುವಣದ ಕಡಲವರೆಗೆ, ಉತ್ತರದ ಅಂಕೋಲದಿಂದ ದಕ್ಷಿಣದ ಮಂಜೇಶ್ವರದವರೆಗೆ, ಬ್ರಹ್ಮರ ಸ್ಥಾನ ಮತ್ತು ದೇವರ ದೇವಸ್ಥಾನಗಳಲ್ಲಿ ಬೊಬ್ಬರ್ಯಭೂತ ನೆಲೆಸಿತು ಎನ್ನುವ ಮಾತು ಬೊಬ್ಬರ್ಯ ಭೂತದ ಪ್ರಸರಣವನ್ನು, ಜನಪ್ರಿಯತೆಯನ್ನು ಸೂಚಿಸುತ್ತದೆ. ಬೊಬ್ಬರ್ಯ ಪಾಡ್ದನದಲ್ಲಿ

ಇರುವ ಮುಖ್ಯ ಆಶಯ (Motif)ವು O221.4-Seaman who defies God shipwreked ಎಂಬುದನ್ನು ಹೋಲುವಂತೆ ಕಾಣುತ್ತದೆ.

ಇಲ್ಲಿ 'ಬೊಬ್ಬರ್ಯ' ಎನ್ನುವ ಶಬ್ದ ಹೇಗೆ ಬಂದಿತು ಎನ್ನುವುದನ್ನು ಗಮನಿಸಬಹುದು. ಇಲ್ಲಿ ನೀರಿನಲ್ಲಿ ಮುಳುಗಿ ಸತ್ತು ಮಾಯವಾಗಿ ಬೊಬ್ಬರ್ಯ ಭೂತವಾಗುವವನು ಒಬ್ಬ ಬ್ಯಾರಿ. ಈ ವ್ಯಾಪಾರದ ಬ್ಯಾರಿಗಳ ಹೆಸರುಗಳು ಪಾಡ್ದನದ ಆರಂಭದಲ್ಲಿ ಸಿಗುತ್ತವೆ. ಸುಲಿಕಲ್ಲ ಮುರವೆ ಬ್ಯಾರಿ ಮತ್ತು ಪಾತಮ್ಮಳ ಏಳು ಮಕ್ಕಳ ಹೆಸರುಗಳು ಈರೀತಿ ಇವೆ : ಕಾಯಿರಿ. ಕಲಸಪ್ಪೆ. ಗೆಂಡ ಬೊಮ್ಮಯೆ, ಸಿಂಕಿರ ಸುವುಣಿ, ಸುಮುಣಿ ಅನಂತೆ, ಸರಪೊಳಿ, ಸುಣ್ಣ ಜಾನಾನಾಯಿಕೆ - ಈ ಏಳು ಮಂದಿಯಲ್ಲಿ ಒಬ್ಬ ಬ್ಯಾರಿಯು ಬೊಬ್ಬರ್ಯ. ಇಲ್ಲಿ ಬೊಬರ್ಯನ ಹೆಸರನ್ನು ಹೋಲುವ ಹೆಸರೆಂದರೆ "ಬೊಮ್ಮಯ್ಯ" ಎಂಬ ಹೆಸರು. 'ಬೊಮ್ಮಯ ಬ್ಯಾರಿ' ಎನ್ನುವುದು 'ಬೊಮ್ಮ ಬ್ಯಾರಿ" ಆಗಿ ನಂತರ 'ಬೊಬ್ಬಬ್ಯಾರಿ' ಯಾಗಿ ಬಳಿಕ 'ಬೊಜ್ಯಾರಿಯಾಗಿ, ಕೊನೆಗೆ "ಬೊಬ್ಬರ್ಯ" ಡಾ॥ ಬಿ. ಎ. ಸಾಲೆತೊರೆ ಅವರು ಬಾಬುಬ್ಯಾರಿ, ಬೊಬ್ಬರ್ಯ ಆಗಿರಬೇಕು ಎನ್ನುತ್ತಾರೆ.[1] ಆದರೆ ಈ ಅಭಿಪ್ರಾಯಕ್ಕೆ ಪಾಡ್ದನದಲ್ಲಿ ಆಧಾರ ಸಿಗುವುದಿಲ್ಲ. ಈ ಬ್ಯಾರಿಗಳೊಂದಿಗೆ ವ್ಯಾಪಾರ ಮಾಡುವ ಮರಕಲರಲ್ಲಿ ಒಬ್ಬನ ಹೆಸರು 'ಬೊಬ್ಬರಿ' ಎಂದಿದೆ. ಈ ಹೆಸರು ಬೊಬ್ಬರ್ಯ ಎನ್ನುವುದನ್ನು ಬಹಳ ಚೆನ್ನಾಗಿ ಹೋಲುತ್ತದೆ. ಆದರೆ ಇಲ್ಲಿ ಬೊಬ್ಬರಿಯು ದೋಣಿ ನಡೆಸುವ ಮರಕಲರ ವರ್ಗಕ್ಕೆ ಸೇರಿದವನು. ಅವನು ಬ್ಯಾರಿ ಎಂದು ಎಲ್ಲೂ ಪಾಡ್ದನದಲ್ಲಿ ಬಂದಿಲ್ಲ. ನೀರಿನಲ್ಲಿ ಹಡಗು ಮುಳುಗುವಾಗ ಬರುವ ಮಾತಿನಲ್ಲಿಯೂ ಬ್ಯಾರಿಗಳು ಮತ್ತು ಮರಕಲರ ವ್ಯತ್ಯಾಸ ಇದೆ. 'ಬ್ಯಾರಿಗಳು ನೀರಿನಲ್ಲಿ ಮುಳುಗಿದರು, ಬೆಸ್ತ ಮರಕಲರು ಈಜಿ ದಡ ಸೇರಿದರು.' ಆದ್ದರಿಂದ ಮುಳುಗಿದ ವ್ಯಕ್ತಿ ಬ್ಯಾರಿಯೇ ಎನ್ನುವುದು ಇಲ್ಲಿ ಸ್ಪಷ್ಟವಾಗಿದೆ. ಆದರೆ ದೋಣಿ ನಡೆಸುವ ಮರಕಲರ ಹೆಸರನ್ನು ಹೇಳುವಾಗ "ಬೊಬ್ಬರಿ" ಯ ಜೊತೆಗೆ 'ಕುಂಞಾಲಿ' ಎಂಬ ಹೆಸರು ಬರುತ್ತದೆ. ಕುಂಞಾಲಿ ಎಂಬ ಹೆಸರು ಜನಪ್ರಿಯವಾಗಿ ಬ್ಯಾರಿಗಳ ಹೆಸರು. ಆದ್ದರಿಂದ ಇಲ್ಲಿನ ಮರಕಲರು ಬ್ಯಾರಿಗಳ ರೀತಿಯವರು ಆಗಿದ್ದರೇ ಎನ್ನುವ ಸಂಶಯ ಬರುತ್ತದೆ. ಏಕೆಂದರೆ ಮರಕಲ ಮತ್ತು ಬ್ಯಾರಿ ಎಂಬ ಹೆಸರುಗಳು ವೃತ್ತಿ ಸೂಚಕವಾಗಿದ್ದಾಗ ಅವುಗಳ ಜಾತಿಯ ಅರ್ಥವನ್ನು ಕೊಡಬೇಕಾಗಿಲ್ಲ. ಈ ಮರಕಲ ಮತ್ತು ಬ್ಯಾರಿಯ ಸಂಬಂಧವನ್ನು ಸ್ಥಾಪಿಸಿದರೆ 'ಬೊಬ್ಬರಿ' ಎಂಬುವನು 'ಬೊಬ್ಬರಿಯ' ಆದ ಎಂಬ ನಿಷ್ಪತ್ತಿ ಹೆಚ್ಚು ಸಹಜವಾಗುತ್ತದೆ.

ಬೊಬ್ಬರ್ಯ ಪಾಡ್ದವದ ಇನ್ನೊಂದು ಪಾಠ ($B._2$-ಸಂ. ಕನನಾಡಿ ವಾದಿರಾಜ ಭಟ್ಟ—ಪಾಡ್ದನಗಳು 1974.) ದಲ್ಲಿ $B._1$ ಪಾಠದ ಸಂಕ್ಷಿಪ್ತ ರೂಪ ಸಿಗುತ್ತದೆ. ವ್ಯಾಪಾರದ ವಿವರಗಳು ಬಹಳ ಕಡಿಮೆ ಇವೆ. ಮುಖ್ಯ ವಸ್ತುವಿನಲ್ಲಿ ಯಾವುದೇ ವತ್ಯಾಸವಿಲ್ಲ. ಆದರೆ ಹಡಗು ಕಾಳಗದ ಸಂದರ್ಭದಲ್ಲಿ ಬ್ಯಾರಿಗಳ ಹಡಗಿನೊಡನೆ ಹೊರಾಡುವುದು $B._1$ ಪಾಠದಂತೆ ಕಲ್ಲಿನ ಹಡಗು ಅಲ್ಲ, 'ಕಳ್ವ ಪಡಾವು' (ಕಳ್ವ ಹಡಗು).—'ತಿರುಗಾನಗ ಅಕುಳೆ ಎದುರು ಕಳ್ವ ಪಡಾವು ತಿಕ್ಕಂಡ್, ನಡು ದಲದಿಡೆ ಕೊಂತು ಕೊಲಲ ಕಳ್ವ ಪಡಾವು ದುಗ್ಗ ಪಡಾವುಗುಳು ಅಪುಂಡ್ '(ಹಡಗನ್ನು ತಿರುಗಿಸಿದಾಗ ಅವರ ಎದುರಿಗೆ ಕಳ್ಳ ಹಡಗು ಸಿಗುತ್ತದೆ. ನಡು ಕಡಲಿನಲ್ಲಿ ಕಳ್ವ ಹಡಗಿಗೂ ಅವರ ಹಡಗಿಗೂ ಯುದ್ಧವಾಯಿತು). ಬೊಬ್ಬರ್ಯನ ಮಹಿಮೆಯ ಘಟನೆ $B._2$ ಪಾಠದಲ್ಲಿ $B_1$ ಪಾಠದ ಹಾಗೆ ಇದೆ—'ಪೊಂಗದೇರ್ ಬೈದ್ಯ' ನ ವೃತ್ತಾಂತ. $B._2$ ಪಾಠದ ಕೊನೆಯಲ್ಲಿ ಬೊಬ್ಬರ್ಯನ ಪ್ರಸರಣದ ಸ್ಥಳದ ಹೆಸರಗಳು ಬಹಳ ಸಂಕ್ಷಿಪ್ತವಾಗಿದ್ದು $B._1$ ಪಾಠಕ್ಕಿಂತ ಭಿನ್ನವಾಗಿದೆ.

ಬೊಬ್ಬರ್ಯನ ಕತೆಗೆ ಸಂಬಂಧಿಸಿದಂತೆ ಒಂದು ಐತಿಹ್ಯ ದೊರೆಯುತ್ತದೆ. ಬೊಬ್ಬರ್ಯನ ತಾಯಿ ಮೊದಲು ಜೈನ ಹೆಣ್ಣಾಗಿದ್ದಾಳೆಂದೂ ಅವಳ ಮೂಗಿನಲ್ಲಿ ಇರುತ್ತಿದ್ದ ವಿಷ ಸರ್ಪದಿಂದ ಅನೇಕ ಗಂಡಂದಿರು

---

1. Dr. B.A. Saletore : "Ancient Karnataka - History of Tuluva." P. 463.

ಮರಣ ಹೊಂದಿದ್ದಾರೆಂದೂ ಕೊನೆಗೆ ಮುಸ್ಲಿಂನೊಬ್ಬ ಆಕೆಯನ್ನು ಮದುವೆಯಾಗಿ, ಉಪಾಯದಿಂದ ಆ ಸರ್ಪವನ್ನು ಕೊಂದನೆಂದೂ ಐತಿಹ್ಯ ಹೇಳುತ್ತದೆ. ಆದರೆ ಈ ಐತಿಹ್ಯವನ್ನು ಪಾಡ್ದನದಲ್ಲಿ ನಾನು ಎಲ್ಲೂ ಗಮನಿಸಿಲ್ಲ. ಆದರೆ ಜೈನ ಹೆಣ್ಣು ಮತ್ತು ಮುಸ್ಲಿಂ ಗಂಡಿನ ವಿವಾಹ ಅಪೂರ್ವವಾಗಿ ನಡೆಯುತ್ತಿತ್ತು ಎನ್ನುವುದನ್ನು ಈ ಐತಿಹ್ಯ ಸೂಚಿಸುತ್ತದೆ.

ಬೊಬ್ಬರ್ಯ ಭೂತದ ಆರಾಧನೆಯಲ್ಲಿಯೂ ಮುಸ್ಲಿಂ ಸಂಸ್ಕೃತಿಯ ಪ್ರಭಾವ ಇದೆ. ಬೊಬ್ಬರ್ಯನ ತಲೆಗೆ ಬೆಳ್ಳಿಯ ಉದ್ದವಾದ ಟೊಪ್ಪಿಗೆ ಇದೆ. ಇದು ಮುಸ್ಲಿಂ ಟೊಪ್ಪಿಯನ್ನು ಹೋಲುತ್ತದೆ. ಇದಕ್ಕೆ ಚಿನ್ನದ ಕೀರಿಟವಿರುತ್ತದೆ. ಎಡಗೈಯಲ್ಲಿ ಗಂಟೆ, ಬಲಗೈಯಲ್ಲಿ ಸುತ್ತಿಗೆ, ಸೊಂಟಕ್ಕೆ ಬೆಳ್ಳಿಯ ಉಡ್ಯಾಣ, ಮೊಣಕಾಲಿನವರೆಗೆ ಮಾತ್ರ ವಸ್ತ್ರ ಉಡಲಾಗುತ್ತದೆ. ಇಲ್ಲಿ ಬಲಗೈಯ ಸುತ್ತಿಗೆಯು ಹಡಗಿನ ಕೆಲಸದ ಸಂಕೇತವಾಗಿರಬಹುದು. ಮೊಣಕಾಲಿನವರೆಗೆ ಮಾತ್ರ ವಸ್ತ್ರ ಉಡುವುದು ಮುಸ್ಲಿಂಮರ ಲುಂಗಿ ಉಡುವ ಕ್ರಮ.

ಬೊಬ್ಬರ್ಯನ ಮಹಿಮೆಯನ್ನು ಸಾರುವ ಪ್ರಸರಣದ ಸ್ಥಳಗಳು ( B 1 ಪಾಠ )

ಯೇರಿಕಲ್ಲ್ ಬೊಂಡಿಕಲ್ಲ್
—
ಪೊಡಿಕಲಾಯ ಬ್ರಹ್ಮ
|
ಮಂಗಲ್‌ದೊಟ್ಟಿ
|
ಮೂಳೂರು
|
ಮಲ್ಲಾರ
|
ಕಾಪು
|
ಅಚ್ಚಾಲ
|
ಬಾಹು
|
ಪಾಂಗಳ (ಇಬ್ಬರು ಸಿರಿಗಳು ; ಜನಾರ್ಧನ ದೇವರು)
|
ಮುದೊಟ್ಟು (ಮಹಾಲಿಂಗೇಶ್ವರ ದೇವರು)
|
ಕಟಪಾಡಿ
|
ಪೊಸರ್ ಕುರೆಕುಂಜ
|

ವಂಟ್ಟೆ (ವಿಷ್ಣುಮೂರ್ತಿ ದೇವರು)

|

ಉದ್ಯಾವರ (ವಿನಾಯಕ ದೇವರು)

—

ವೊಡಿಪ್ಪು (ಉಡುಪಿ) (ಆದಿ ಅನಂತೇಶ್ವರ ದೇವರು)

|

ಯೆಡುಮೊಸಂಸ್ಥಾನ

|

ಚಿಟ್ಟುಪಾಡಿ

|

ಕುಡಾರ್ (ಮಲಪು) (ಶಂಕರನಾರಾಯಣ ದೇವರು)

|

ವೊಡಬಾಂಡೇಶ್ವರ (ಬಲರಾಮ ದೇವರು)

|

ಬಿಲ್ಲುಗುಡ್ಡೆ ಯೆತ್ರಾಳ (ನಂದೇಶ್ವರ ದೇವರು)

|

ಕಲ್ಮಾಡಿ ಪಾದೆ

|

ತೂಣದ ಪಾದೆ

|

ವರ್ಕಾರ್

# ೫. ಕೊರಗ ತನಿಯು

ವ್ಯಕ್ತಿಯೊಬ್ಬನು ಅಕಾಲ ಮರಣವನ್ನು ಪಡೆದು ಭೂತವಾಗಿ ಮಾರ್ಪಾಟು ಆದಮೇಲೆ ಆತನಿಗೆ ಆರಾಧನೆ ಸಲ್ಲುತ್ತದೆ. ಅಂತಹ ಪಾಡ್ದನಗಳಲ್ಲಿ ವಿಶಿಷ್ಟವಾದ ಎರಡು ಪಾಡ್ದನಗಳೆಂದರೆ,

1. ಕೊರಗ ತನಿಯು  2. ಕೋಡ್ದಬ್ಬು – ತನ್ನಿಮಾನಿಗ

ಈ ಎರಡು ಪಾಡ್ದನಗಳು ಸಮಾಜದ ತೀರ ಕೆಳವರ್ಗವಾಗಿದ್ದ ಹೊಲೆಯರಿಗೆ ಸಂಬಂಧಪಟ್ಟವು. ಹೊಲೆಯರು ಆಕಸ್ಮಿಕ ಮರಣದ ಬಳಿಕ ಇಲ್ಲಿ ಭೂತಗಳಾಗುತ್ತಾರೆ. ಈ ಕೊರಗ ತನಿಯು ಭೂತ ಮತ್ತು ಕೋಡ್ದಬ್ಬು ಭೂತಗಳನ್ನು ಸಮಾಜದ ಉಳಿದ ವರ್ಗದವರು ನಂಬುತ್ತಾರೆ ಮತ್ತು ಆರಾಧಿಸುತ್ತಾರೆ. ಆದರೆ ಈ ಕೊರಗ ತನಿಯು ಮತ್ತು ಕೋಡ್ದಬ್ಬು ಭೂತಗಳು ಹೊಲೆಯ ಸಮಾಜದಲ್ಲಿ ಕುಲ ದೈವಗಳ ಹಾಗೆ ಹೆಚ್ಚು ಜನಪ್ರಿಯವಾಗಿ ಆರಾಧನೆಗೊಳ್ಳುತ್ತವೆ. ಹೊಲೆಯರು ಭೂತಗಳಾಗಿ ಪರಿವರ್ತನೆಯಾಗಿರುವುದು ಇದಕ್ಕೆ ಕಾರಣವಾಗಿರಬೇಕು. ಹೊಲೆಯರ ಕೇರಿಗಳಲ್ಲಿ ಕೋಡ್ದಬ್ಬುವಿನ ಮತ್ತು ಕೊರಗ ತನಿಯನ ಸ್ಥಾನಗಳು (ಗುಂಡಿಗಳು) ಹೆಚ್ಚಾಗಿ ಕಾಣಸಿಗುತ್ತವೆ.

ಕೊರಗ ತನಿಯು ಒಬ್ಬ ಹೊಲೆಯರ ಹುಡುಗ. ತಂದೆಯನ್ನು ತಾಯಿಯನ್ನು ಚಿಕ್ಕ ವಯಸ್ಸಿನಲ್ಲೇ ಕಳೆದುಕೊಂಡವ. ಅವನನ್ನು ಸಾಕುವವಳು ಕಳ್ಳು ಮಾರುವ 'ಮೈರಕ್ಕೆ ಬೈದ್ಯೆದಿ'. ಒಂದು ಬಾರಿ ಕದ್ರಿಯ ದೇವಸ್ಥಾನಕ್ಕೆ ಆತ ಹೋಗಿ ಗೋಪುರದ ಮಾಡಿಗೆ ಬಾಗಿದ್ದ ಮಾದಳದ ಹಣ್ಣನ್ನು ಕದ್ದು ತಿನ್ನಲು ಪ್ರಯತ್ನಿಸಿದಾಗ ಮಾಯವಾಗುತ್ತಾನೆ, ಕಲ್ಲಾಗುತ್ತಾನೆ, ಆಮೇಲೆ ಭೂತವಾಗುತ್ತಾನೆ. ಈ ಅಂಶವನ್ನು ಪಾಡ್ದನದಲಿ ಚರ್ಚಿಸುವುದಕ್ಕೆ ಮೊದಲು ಕೊರಗ ತನಿಯು ಪಾಡ್ದನದ ಸಮಗ್ರ ಪಾಠವನ್ನು ನೋಡಬಹುದು —

**ಕೊರಗ ತನಿಯು ಪಾಡ್ದನದ ಕನ್ನಡ ರೂಪಾಂತರ :**

"ಪಣಂಬೂರು ಪಟ್ಟಸಾಲೆಯಲ್ಲಿ ಪರವರ ಓಡಿ" ಎಂಬುವನು ಇದ್ದನು. ಅವನ ಹೊಲತಿ (ಪತ್ನಿ) 'ಅಚುಮೈರೆ.' ಅವರಿಗೊಬ್ಬ ಮಗ 'ತನಿಯು.' ಅವನು ಮೂವತ್ತು ದಿನದ ಮಗುವಾಗಿದ್ದಾಗ ತಾಯಿ ಸತ್ತಳು. ಆಮೇಲೆ ತಂದೆಯು ಸತ್ತನು. ಕೊರಗ ತನಿಯನಿಗೆ ದಿಕ್ಕು ದೆಸೆ ಎಲ್ಲಾ ಅಳಿಯಿತು. ಆತನ ವಂಶದವರಾದ ಏಳು ಕೊಪ್ಪದ ಕೊರಗರು ಅಳಿದು ಹೋದರು. ಏಳು ಕೊಪ್ಪದ ಡೋಲನ್ನು ಒಂದು ಕಡೆ ತೂಗು ಹಾಕಿದ. ನಡುರಾತ್ರಿ ಜಾವದ ಹೊತ್ತಿಗೆ ಓಡಿಯ ಮಗ ತನಿಯನು ಮನೆಯಿಂದ ಇಳಿದು ಊರು ಬಿಟ್ಟು ಹೊರಟನು. ಬಂದು ಒಂದು ಕಲ್ಲಾಪುವಿನ ಗಡಿಗೆ ಮುಟ್ಟಿದನು. ಅಲ್ಲಿಗೆ ತಲುಪಿದಾಗ ಬೆಳ್ಳಿ ಮೂಡಿತು, ಬೆಳಕು ಹರಿಯಿತು. ಅಲ್ಲಿ ಬೊಳುಂಗರಿಯ ಹೊಗೆಯನ್ನು ದಾಟಿದನು. ದಡ್ಡಲದ ಕಾಯಿಯನ್ನು ಹೆಕ್ಕಿದನು.

ದಡ್ಡಲದ ಕಾಯಿಯನ್ನು ತೆಂಗಿನಕಾಯಿ ಎಂದು ಇಟ್ಟನು. ಬೊಳುಂಗರೆಯ ಹ್ಯೊಗೆಯನ್ನು ಅಕ್ಕಿ ಎಂದು ಇಟ್ಟನು. ಪೂರ್ವದಿಕ್ಕಿಗೆ ಮುಖವಮಾಡಿ ದೇವರಿಗೆ ಕೈಮುಗಿದನು. ಆರೀತಿ ಕೈಮುಗಿದು ನೋಡುವಾಗ ಅಲ್ಲಿ ಮೈರಕ್ಕೆ ಬೈದ್ಯೆದಿ ಇದ್ದಾಳೆ. ಅವಳ ಮಗ ಚೆನ್ನಯ, ಮಗಳು ಅತ್ತು ಬೈದ್ಯೆದಿ. ತಾಯಿ ಮತ್ತು ಮಗ ಕಳ್ಳು ಹೊತ್ತುಕೊಂಡು ಬರುತಿದ್ದಾರೆ. ಕೊರಗ ತನಿಯನು ಓಡಿ ಹೋಗಿ ಅವರಿಗೆ ಅಡ್ಡವಾಗಿ ದಾರಿಯಲ್ಲಿ ನಿಂತನು. ಮೈರಕ್ಕೆ ಬೈದ್ಯೆದಿ ಅವನನ್ನು ನೋಡಿದಳು. 'ಯಾರು ಮಗ ? ದಾರಿ ಬಿಡು ಆಕಡೆ ಹೋಗು' ಎಂದಳು. ಅವನು ಒಮ್ಮೆ ನೋಡುವಾಗ ಅಳುತ್ತಾನೆ, ಇನ್ನೊಮ್ಮೆ ನೋಡುವಾಗ ನಗುತ್ತಾನೆ. ತನಿಯನು ಅವಳಲ್ಲಿ ಹೇಳುತ್ತಾನೆ–'ದಾರಿ ಬಿಡಲು ನೀವು ಕೇಳುತ್ತಿರಾ, ನನಗೆ ಸೊಂಟಕ್ಕೆ ಸುತ್ತಲು ಬಟ್ಟೆ ಇಲ್ಲ. ಸುತ್ತಲು ಬಟ್ಟೆ ಕೊಡಿ ತಾಯಿ.' ಮೈರಕ್ಕೆ ಚೆನ್ನಯನ ಕಳ್ಳಿನ ಕೊಡವನ್ನು ಇಳಿಸಿದಳು. ಚೆನ್ನಯನ ತಲೆಯ ಮೇಲಿನ ಸಿಂಬಿಯ ಬಟ್ಟೆಯನ್ನು ತೆಗೆಸಿದಳು. ಆ ಬಟ್ಟೆಯನ್ನು ತನಿಯನಿಗೆ ಕೊಟ್ಟಳು. ತನಿಯನು ಆ ಬಟ್ಟೆಯನ್ನು ಸೊಂಟಕ್ಕೆ ಸುತ್ತಿಕೊಂಡನು. ಮರೆಯಿಂದ ಹೊರಗೆ ಬಂದನು. ಒಮ್ಮೊಮ್ಮೆ ನಗುತ್ತಾನೆ ಹುಡುಗ,ಒಮ್ಮೊಮ್ಮೆ ಅಳುತ್ತಾನೆ. "ಎಲ್ಲಿಂದ ಬಂದಿ ಮಗನೆ: ನೀನು ಎಲ್ಲಿಗೆ ಹೋಗುವವನು?" ಎಂದು ಮೈರಕ್ಕೆ ಕೇಳಿದಳು. ಕೊರಗ ತನಿಯನು, "ನಾನು ಪಣಂಬೂರ ಪಟ್ಟಸಾಲೆಯಿಂದ ಬಂದೆ. ತಾಯಿ ಸತ್ತಳು, ತಂದೆ ಸತ್ತನು. ಏಳು ಕೊಪ್ಪದ ಕೊರಗರು ಅಳಿದು ಹೋದರು. ದಿಕ್ಕು ಬಿಟ್ಟು ದೇಶಾಂತರ ಬಂದೆ ನಾನು. ಉಣ್ಣಲು ಸ್ವಲ್ಪ ಅನ್ನವಿರುವ ರಾಜ್ಯಕ್ಕೆ' ದುಡಿಯಲು ಸ್ವಲ್ಪ ಕೆಲಸವಿರುವ ರಾಜ್ಯಕ್ಕೆ ಹೋಗುತ್ತೇನೆ ಎಂದು ನಾನು ಬಂದೆ" ಎಂದನು. 'ಹಾಗೆ ಹೋಗುವ ಹುಡಗನಾದರೆ ನನ್ನ ಜೊತೆಗೆ ಬರುತ್ತೀಯಾ' ಎಂದು ಮೈರಕ್ಕೆ ಕೇಳಿದಳು. ಅದಕ್ಕೆ ಅವನು 'ಬರಲಿಕ್ಕೇನು ಬರುತ್ತೇನೆ. ನನ್ನನು ನೀವು ನೋಡಿಕೊಳ್ಳುತ್ತೀರಾ' ಎಂದು ಹೇಳಿದನು. ಆಗ ಅವಳು 'ನನಗೆ ಎರಡು ಮಕ್ಕಳಿದ್ದಾರೆ. ನೀನು ಸೇರಿ ಮೂವರಾಯಿತು' ಎಂದಳು. 'ಹಾಗಾದರೆ ನಾನು ಬರುತೇನೆ' ಎಂದ ತನಿಯ. ಮೈರಕ್ಕೆಯು ಮಗ ಚೆನ್ನಯನಲ್ಲಿ ಹೇಳಿದಳು. "ಏನು ಮಗ ಚೆನ್ನಯ, ಕೇಳಿದಿಯಾ. ಬುತ್ತಿ ಅನ್ನ ವನ್ನು ಬಿಟ್ಟು, ಅವನಿಗೆ ಉಣ್ಣಲೂ ಕೊಡು.' ಬುತ್ತಿಯ ಅನ್ನವನ್ನು ಅವನಿಗೆ ಉಣ್ಣಿಸಿದರು. ಕಳ್ಳಿನ ಮಡು ಯನ್ನು ಹೊರಿಸಿದರು. ಎದುರಿನಿಂದ ತಾಯಿ, ಹಿಂದಿನಿಂದ ಚೆನ್ನಯ ಬೈದ್ಯ, ಅವನ ಹಿಂದಿನಿಂದ ತನಿಯ ಮಡಕೆಯ ಕಳ್ಳು ಹೊತ್ತುಕೊಂಡು ಹೋದನು.

ಆಗ 'ಅತ್ತುಲಾ ಬೈದ್ಯೆದಿ' ದೂರದಿಂದ ಇವರನ್ನು ನೋಡಿದಳು. "ನನ್ನ ತಾಯಿ ಮತ್ತು ಅಣ್ಣ ಇಬ್ಬರೇ ಹೋದದ್ದು. ಈಗ ಮೂರು ಜನ ಬರುತ್ತಿದ್ದಾರೆ" ಎಂದು ಭಾವಿಸಿದಳು. ಇವರು ಮೂರು ಜನ ಮನೆಗೆ ತಲುಪಿದಾಗ 'ಅತ್ತುಲ ಬೈದ್ಯೆದಿ' ತಾಯಿಯಲ್ಲಿ ಕೇಳುತ್ತಾಳೆ. "ಓಯ್ ಇಂತಹ ಹುಡುಗ ಇಷ್ಟು ಸುಂದರ ಎಲ್ಲಿ ಸಿಕಿದ ?" "ಕಲ್ಲಾಪುವಿನ ಗುಡಿಯಲ್ಲಿ ನಮಗೆ ಸಿಕ್ಕಿದ." ಎಂದಳು ತಾಯಿ ಮೈರಕ್ಕೆ. "ಹೊರಗಿನ ಕೆಲಸಕ್ಕೆ ಆಗ ಬಹುದು ಎಂದು ನಾನು ಕರೆದುಕೊಂಡು ಬಂದೆ." ಚೆನ್ನಾಗಿ ಅವನನ್ನು ಸಾಕುತ್ತಾ ಸಲಹುತ್ತಾ ಬರಬೇಕು. ದಿಕ್ಕು ದೆಸೆ ಇಲ್ಲದ ಹುಡುಗ. ಇಷ್ಟು ಹೇಳಿ ಮೈರಕ್ಕೆ ಅವನ ತಲೆಯ ಮೇಲಿದ್ದ ಮಡಕೆಯ ಕಳ್ಳನ್ನು ತೆಗೆದಳು. ಆ ಮಡಕೆಯ ಕಳ್ಳನ್ನು ಕಳ್ಳಿನ ಜಾಡಿಗೆ ಹೊಯ್ದಳು.

ಏಳು ರಾತ್ರಿ ಎಂಟು ಹಗಲು ಕಳ್ಳನ್ನು ಮಾರಿ ಮುಗಿಯಲಿಲ್ಲ. 'ಓ ತನಿಯ, ತಂದ ಕಳ್ಳು ಮುಗಿಯಲಿಲ್ಲ' ಎಂದು ಕದ್ರಿಯ ದೇವಸ್ಥಾನಕ್ಕೆ ಹರಕೆ ಹೇಳಿದಳು. "ನನ್ನ ಮಗ ತನಿಯ ತಂದ ಕಳ್ಳು ಮುಗಿದರೆ ಕದ್ರಿಯ ದೇವಸ್ಥಾನಕ್ಕೆ ಕಂಚಿನ ಹೊದಿಕೆ ಇಡಿಸುತ್ತೇನೆ." ಎಂದು ಮೈರಕ್ಕೆ ಹರಕೆ ಹೇಳಿದಳು. ಹೇಳಿದ ನಾಲಗೆ ಗಂಟಲಿ ನಲ್ಲಿ ಆಗುವಷ್ಟರಲ್ಲಿಯೇ ಮಡಕೆಯ ಕಳ್ಳು ಮಾರಾಟವಾಗಿ ಮುಗಿಯಿತು.

ಮಗನನ್ನು ಸಾಕುತ್ತಾ ಇದ್ದಾಳೆ ಮೈರಕ್ಕೆ ಬೈದ್ಯೆದಿ. "ಮಗ ಚೆನ್ನಯ 'ನೆಡಿಲ್' 'ನ' ಕೋಲನ್ನು ಕಡಿ. ತನಿಯನಿಗೆ ಒಂದು ಕೊಟ್ಟಿಗೆಯನ್ನು ಕಟ್ಟು" ಎಂದಳು. "ಅಡಕೆ ತೋಟಕ್ಕೆ ಹೋಗು. ಒಂದು ಹಾಳೆಯನ್ನು

ತೆಗೆದುಕೋ, ಒಂದು ಕೊಪ್ಪರವನ್ನು ಮಾಡಿ ಅವನ ತಲೆಗೆ ಕೊಡು" ನೆಡಿಲಿನ ಕೋಲನ್ನು ತಂದನು, ಒಂದು ಕೊಟ್ಟೆಯನ್ನು ಕಟ್ಟಿದನು. ಆ ಕೊಟ್ಟಿಗೆಯಲ್ಲಿಯೇ ಇರುತ್ತಾನೆ ತನಿಯ. ಒಡತಿಯ ಮನೆಯ ಹೊರಗಿನ ಕೆಲಸವನ್ನು ಮಾಡಿ ಉಣ್ಣುತ್ತಾ ತಿನ್ನುತ್ತಾ ಇರುತ್ತಾನೆ.

ತನಿಯ ಹುಡುಗ ಹೋಗಿ ದೊಡ್ಡವನಾದ. ತಾಯಿ ಮೈರಕ್ಕೆಯನ್ನು ಕರೆಯುತ್ತಾನೆ. "ಯಾರಮ್ಮ ತಾಯಿ, ನನಗೊಂದು ಪೀಂಪಿಲಿ ಕತ್ತಿಯನ್ನು ಕೊಡಿ. ನನ್ನ ಕುಲಜನ್ಮದ ಕೆಲಸವನ್ನು ಮಾಡುತ್ತೇನೆ" ಎಂದನು. ಅವನ ತಾಯಿ ಹೇಳಿದ ಹರಕೆ ಎಂದರೆ, "ಕದ್ರಿಯ ದೇವಸ್ಥಾನಕ್ಕೆ ಸಾವಿರ ಕೈಬುಟ್ಟಿ ಎಂದು ಇದೆ. ನನಗೆ ಅದನ್ನು ತೀರಿಸಬೇಕು" ಎಂದು ಹೇಳುತ್ತಾನೆ. ಚೆನ್ನಯ ಬೈದ್ಯ ಒಂದು ಕತ್ತಿಯನ್ನು ಮಾಡಿಸಿಕೊಡುತ್ತಾನೆ. ತನಿಯನು ಬೀಳಲುಗಳ ರಾಶಿಯನ್ನು ಕಡಿಯುತ್ತಾನೆ. "ಬೀಳಲುಗಳಿಂದ ಸಾವಿರ ಕೈಬುಟ್ಟಿಗಳನ್ನು ಒಪ್ಪಿಸಿ ಬರುತ್ತೇನೆ" ಎಂದನು. ಸಾವಿರ ಕೈಬುಟ್ಟಿಗಳನ್ನು ಕೊಂಡುಹೋಗಿ ಕದ್ರಿಯ ದೇವಸ್ಥಾನಕ್ಕೆ ಒಪ್ಪಿಸಿದನು. ತಾಯಿ ಮತ್ತು ತಂದೆ ಹೇಳಿದ ಹರಕೆಯನ್ನು ಮಗ ತೀರಿಸಿದನು. ಅಲ್ಲಿಂದ ಹೊರಟು ತನಿಯನು ಮೈರಕ್ಕೆ ಬೈದ್ಯತಿಯ ಮನೆಗೆ ಬಂದನು. ಅವಳ ಕೆಲಸವನ್ನು ಮಾಡುತ್ತಾ ಇದ್ದನು.

ಒಂದು ದಿನ ಮೈರಕ್ಕೆ ಬೈದ್ಯತಿ ತನಿಯನನ್ನು ಕರೆದಳು. "ಓ ಎಲ್ಲಿ ಹೋದೆ ತನಿಯ, ಈ ಕಡೆ ಒಮ್ಮೆ ಬಾ" ಎಂದಳು. ತನಿಯ ಬಂದನು, "ಏನು ಕರೆದಿರಿ, ಏನು ಕೆಲಸ" ಎಂದು ಕೇಳಿದನು. "ಮಗನೇ ನನಗೆ ಕದ್ರಿಯ ದೇವಸ್ಥಾನಕ್ಕೆ ಏಳು ಹೊರೆಯನ್ನು ಕೊಂಡು ಹೋಗಲು ಇದೆ. ಅದಕ್ಕಾಗಿ ಏಳು ಜನರನ್ನು ಸಿದ್ಧ ಮಾಡು" ಎಂದಳು. "ಏಳು ಜನರು ಬೇಡ ತಾಯಿ, ಏಳು ಜನರ ಹೊರೆಯನ್ನು ನಾನು ಒಬ್ಬನೇ ಕೊಂಡು ಹೋಗುತ್ತೇನೆ. ಏಳು ಜನರ ಊಟವನ್ನು ಏಳು ಅಡಿಕೆಯನ್ನು ನನಗೆ ಕೊಡಿರಿ. ಏಳು ಜನರ ಏಳು ಕುಪ್ಪಿ (ಬಾಟ್ಲಿ) ಕಳ್ಳನ್ನು ನನಗೆ ಕೊಡಿರಿ" ಎಂದನು. ಹಾಗೆಯೇ ಅವನಿಗೆ ಕೊಟ್ಟರು. ಅವನು ಅದನ್ನು ತೆಗೆದು ಕೊಂಡನು. ಏಳು ಕುಪ್ಪಿ ಕಳ್ಳನ್ನು ಕೊಟ್ಟಿದ್ದಾರೆ. ಅವನು ಚೆನ್ನಯ ಬೈದ್ಯನಲ್ಲಿ ಹೇಳುತ್ತಾನೆ. "ಏಳು ಜನರ ಹೊರೆಯನ್ನು ಒಂದೇ ಹೊರೆ ಮಾಡಿ ಕಟ್ಟಿರಿ" ಎಂದು. ಹಾಗೆಯೇ ಹೊರೆಯನ್ನು ಕಟ್ಟಿ ಇಟ್ಟಿದ್ದಾರೆ. ಅದನ್ನು ಅಲ್ಲಿಂದ ಹೊತ್ತುಕೊಂಡು ಕದ್ರಿಯ ದೇವಸ್ಥಾನಕ್ಕೆ ಹೋದನು. ದೇವಸ್ಥಾನದ ಹೊರಗೆ ನಿಂತುಕೊಂಡು ಹೊರೆಯನ್ನು ಒಳಗೆ ಎಸೆದನು. ಆ ಕಡೆ ಈ ಕಡೆ ನೋಡುವಾಗ ಗೋಪುರದ ಮಾಡಿಗೆ ಮಾದಳದ ಹಣ್ಣೊಂದು ಮರದಿಂದ ಬಾಗಿಕೊಂಡಿತ್ತು. "ನನ್ನ ತಾಯಿಗೆ ಮಾದಳದ ಹಣ್ಣಿನಲ್ಲಿ ಬಹಳ ಪ್ರೀತಿಯೆಂದು ಹೇಳಿ ಕೊಯ್ಯಲು ಗೋಪುರಕ್ಕೆ ಕಾಲಿಟ್ಟನು. ಆ ಹಣ್ಣಿಗೆ ಕೈಕೊಡುವಾಗ ತನಿಯನು ಅಲ್ಲಿಯೇ ಮಾಯವಾದನು. ಮಾಯದ ಕಲ್ಲಾಗಿ ಇದ್ದಾನೆ."

ಈ 'ಕೊರಗ ತನಿಯ' ಪಾಡ್ದನದ ಕೊನೆಯಲ್ಲಿ ಕದ್ರಿಯ ದೇವಸ್ಥಾನದ ಅಂಗಳದಲ್ಲಿದ್ದ ಮರದಿಂದ ಹೊಲೆಯರ ಹುಡುಗ ತನಿಯನು ಮಾದಳದ ಹಣ್ಣನ್ನು ಕೀಳಲು ಗೋಪುರಕ್ಕೆ ಕಾಲಿಟ್ಟಾಗ ಮಾಯವಾಗುತ್ತಾನೆ. ಕೊರಗ ತನಿಯನ ಇನ್ನೊಂದು ಪಾಠದಲ್ಲಿ ಇದೇ ಸಂದರ್ಭದಲ್ಲಿ ಕೊರಗ ತನಿಯನು ದೇವಸ್ಥಾನದ ಅಂಗಣದ ಮರದಿಂದ ಮಾದಳದ ಹಣ್ಣನ್ನು ಕಿತ್ತದ್ದರಿಂದ ಮೈಸಂದಾಯ ಭೂತದ ವಕ್ರದೃಷ್ಟಿಗೆ ಬಲಿಯಾಗಿ ಮಾಯೆಯು ಸೇರಿಗೆಗೆ ಸಂದು ಹೋಗುತ್ತಾನೆ ಎನ್ನುವ ವಿಚಾರ ಇದೆ. ಈ ಎರಡೂ ಪಾಠಗಳ ಪ್ರಕಾರ. ಕದ್ರಿಯ ದೇವಸ್ಥಾನಕ್ಕೆ ಹೊಲೆಯನ ಪ್ರವೇಶ ಅವನ ತಪ್ಪು. ಆದ್ದರಿಂದ ಅವನು ಮಾಯವಾದ ಎನ್ನುವ ಅರ್ಥ ಸಿಗುತ್ತದೆ. ಭೂತಗಳ ಪಾಡ್ದನದಲ್ಲಿ ಮಾಯವಾದ ಎಂದರೆ, ಸಾಯುವುದರ ಅತಿಮಾನುಷ ಕಲ್ಪನೆಯ ರೂಪ. ಆದ್ದರಿಂದ ಸಮಾಜದ ಕಣ್ಣಿನಲ್ಲಿ ಅಸ್ಪೃಶ್ಯನಾಗಿದ್ದ ಹೊಲೆಯರ ಜಾತಿಯ ಕೊರಗ ತನಿಯನು ದೇವಸ್ಥಾನಕ್ಕೆ ಪ್ರವೇಶ ಮಾಡಿದ್ದು ಅಪರಾಧ ಎನ್ನುವ ಕಾರಣಕ್ಕಾಗಿ ಆಗಿನ ಕಾಲದ ಸಮಾಜದ ವಕ್ರದೃಷ್ಟಿಗೆ ಒಳಗಾಗಿ ಶಿಕ್ಷೆಯ

ರೂಪದಲ್ಲಿ ಸಾವನ್ನು ಪಡೆದಿರಬೇಕು. ಆದರೆ ಇಂತಹ ಸಾವನ್ನು ಸಮಾಜವು ಕೊಲೆಯೆಂದು ಹೇಳಿಕೊಳ್ಳದೆ ಅದಕ್ಕೆ 'ಮೈಸಂದಾಯ' ಭೂತದ ವಕ್ರದೃಷ್ಟಿ ಎಂದೋ ದೇವರ ಮಾಯೆ ಎಂದೋ ಅತಿಮಾನುಷ ಸ್ವರೂಪ ವನ್ನು ಕೊಟ್ಟಿರಬೇಕು. ಹೊಲೆಯ ಹುಡುಗನೊಬ್ಬನ ದುರಂತವು ಸಮಾಜದ ದುಷ್ಟ ಕಟ್ಟುಪಾಡುಗಳ ಕಾರಣದಿಂದ ಹೇಗೆ ಆಗಬಹುದು ಎನ್ನುವುದಕ್ಕೆ ಕೊರಗ ತನಿಯ ಪಾಡ್ದನ ಒಂದು ಸಾಕ್ಷಿಯಾಗಿದೆ. ತಮ್ಮ ಬಳಗದ ಒಬ್ಬ ಹುಡುಗನ ಮರಣ ಅಥವಾ ಕೊಲೆಯ ವಿರುದ್ಧ ಏನೂ ಮಾಡಲೂ ಅಸಾಧ್ಯವಾದ ಅಶಕ್ತ ಹೊಲೆಯರು—ಈ ವಸ್ತುವನ್ನು ಪಾಡ್ದನದ ರೂಪದಲ್ಲಿ ರಚಿಸಿ ಸಹಜವಾಗಿಯೇ ಅತಿಮಾನುಷ ವಾತಾವರಣದ ಭೂತದ ಕಲ್ಪನೆಯನ್ನು ಕೊರಗ ತನಿಯನಿಗೆ ಕೊಟ್ಟಿರಬೇಕು. ಈ ದೃಷ್ಟಿಯಲ್ಲಿ ಒಂದು ಕಡೆ ಕೊರಗ ತನಿಯನ ಸಾವಿಗೆ ಕಾರಣವಾದ ಸಮಾಜ ಅವನ ಮರಣವನ್ನು ನಿಷಿದ್ಧತೆಯ ಉಲ್ಲಂಘನೆಯ ಶಿಕ್ಷೆ ಎನ್ನುವ ಸಮರ್ಥನೆಯ ಧಾಟಿಯಲ್ಲಿ ಹೇಳಿಯೂ, ಸತ್ತ ಬಳಿಕ ಅವನಿಗೆ ದೈವತ್ವವನ್ನು ಆರೋಪಿಸಿ, ಸಂಬಂಧಿಸಿದ ವರ್ಗವು ಕೊರಗ ತನಿಯ ಭೂತದ ಬಗ್ಗೆ ಗೌರವದ ಆರಾಧನೆಯನ್ನೇನೂ ಇಟ್ಟುಕೊಂಡಿಲ್ಲ. ಇಂದಿಗೂ ಕೊರಗ ತನಿಯ ಭೂತ ಮುಖ್ಯವಾಗಿ ಇರುವುದು ಹೊಲೆಯರ ದೈವವಾಗಿ ಹಾಗೂ ಕೆಲವು ಕೆಳ ವರ್ಗಗಳ ಸಮಾಜಗಳಲ್ಲಿ ಮಾತ್ರ.

ಚಿಕ್ಕ ಘಟನೆಯೊಂದನ್ನುಳ್ಳ ಸಣ್ಣ ಪಾಡ್ದನ ಕೊರಗ ತನಿಯ. ಪಾಡ್ದನದ ರಚನೆಯ ದೃಷ್ಟಿಯಿಂದ ಸಂಕ್ಷಿಪ್ತವಾಗಿ, ಆದರೆ ಕೆಲವೊಂದು ಬಾರಿ ಸುಂದರವಾಗಿ ಕಾಣಿಸಿಕೊಂಡಿದೆ. ಅನಾಥ ಹರಿಜನ ಬಾಲಕನೊಬ್ಬನ ದೀನ ಬದುಕನ್ನು ಪದರ ಪದರವಾಗಿ ಚಿತ್ರಿಸುವ ಶೈಲಿ ಮಾರ್ಮಿಕವಾಗಿದೆ. ಮೈರಕ್ಕೆ ಬೈದ್ಯೆತಿಯ ಆಶ್ರಯ, ಆ ಹುಡುಗನಲ್ಲಿರುವ ವಾತ್ಸಲ್ಯ ಸಹಜವಾಗಿ ವ್ಯಕ್ತವಾಗಿದೆ. ಸೊಂಟಕ್ಕೆ ಸುತ್ತಿಕೊಳ್ಳಲು ಬಟ್ಟೆಯಿಲ್ಲದೆ ಬಹುಶಃ ಪೂರ್ಣ ಬೆತ್ತಲೆಯಾಗಿ ದಾರಿಯಲ್ಲೆ ಅಡಗಿ ಕುಳಿತು ಮೈರಕ್ಕೆಯಲ್ಲಿ ಬಟ್ಟೆ ಯಾಚಿಸುವ ತನಿಯನ ಚಿತ್ರಣ ಕರುಣಾಜನಕವಾಗಿದೆ. ಕಾಡಿನ ಬೀಳಲುಗಳಿಂದ ಬುಟ್ಟಿ ಮುಂತಾದುವುಗಳನ್ನು ಹೆಣೆಯುವ ಹೊಲೆಯರ ವೃತ್ತಿ, ತಾಳೆಮರದಿಂದ ಕಳ್ಳು ಇಳಿಸಿ ಕಳ್ಳನ್ನು ಹೊತ್ತು ಮಾರುವ ಬೈದ್ಯರ ವೃತ್ತಿ–ಈ ಎರಡು ವೃತ್ತಿಕಾರರು ಇಲ್ಲಿ ಮುಖ್ಯವಾಗಿದ್ದಾರೆ. ದೇವಸ್ಥಾನಗಳಿಗೆ ಹೇಳುವ ಹರಕೆ ಅವುಗಳನ್ನು ತೀರಿಸುವಲ್ಲಿ ಅವರ ಶ್ರದ್ಧೆ ಈ ಅಂಶ ಇಲ್ಲಿ ತಿಳಿದುಬರುತ್ತದೆ. ಸಾಂಸ್ಕೃತಿಕವಾಗಿ ಹೊಲೆಯರ ಬದುಕನ್ನು, ಸಾಮಾಜಿಕವಾಗಿ ಹೊಲೆಯರ ಬದುಕಿನ ಸಂಕಷ್ಟಗಳನ್ನು, ವೈಯಕ್ತಿಕವಾಗಿ ಹೊಲೆಯರ ಹುಡುಗ ತನಿಯನ ಜೀವನವನ್ನು ತಿಳಿಸುತ್ತದೆ–ಕೊರಗ ತನಿಯನ ಪಾಡ್ದನ. ಸಮಾಜದ ತೀರ ಕೊನೆಯ ವರ್ಗವು ಭೂತದ ಮಟ್ಟಕ್ಕೆ ಏರಿ ಆರಾಧನೆಯನ್ನು ಪಡೆಯಬಲ್ಲುದು ಎನ್ನುವುದು ಭೂತಾರಾಧನೆಯ ಧಾರ್ಮಿಕ ವಲಯದಲ್ಲಿ ಬಹಳ ಸಮಾಧಾನದ, ಸಂತೋಷದ ವಿಷಯವಾದರೆ, ಅಂತಹ ಹೊಲೆಯನೊಬ್ಬನು ಭೂತವಾಗಬೇಕಾಗಿ ಬಂದ ಸಂದರ್ಭ ಮತ್ತು ಅದರಲ್ಲಿ ಸಮಾಜದ ಅನಿಷ್ಟ ಪಾತ್ರ–ಇವುಗಳನ್ನು ಆಲೋಚಿಸಿದಾಗ ಕೊರಗ ತನಿಯ ಪಾಡ್ದನವು ಅಷ್ಟೇ ದುಃಖವನ್ನು ಕೊಡುತ್ತದೆ. ಈ ದೃಷ್ಟಿಗಳಿಂದ ಇದೊಂದು ಗಮನಾರ್ಹ ಪಾಡ್ದನ.

## ೬. ಕೋಡ್ದಬ್ಬು—ತನ್ನಿಮಾನಿಗ

ಹೊಲೆಯನೊಬ್ಬನು ಭೂತವಾದ ಇನ್ನೊಂದು ಪಾಡ್ದನವೆಂದರೆ ಕೋಡ್ದಬ್ಬುವಿನ ಪಾಡ್ದನ. ಕೋಡ್ದಬ್ಬುವನ್ನು ಈಗ ಭೂತದ ಹಾಗೆ ಆರಾಧಿಸುತ್ತಾರೆ. ಹೆಚ್ಚಾಗಿ ಹೊಲೆಯರ ಸಮಾಜಗಳಲ್ಲಿ ಕೋಡ್ದಬ್ಬು ಭೂತವು ಕುಲಭೂತದ ಹಾಗೆ ಮಹತ್ವವನ್ನು ಪಡೆದಿದೆ. ಹೊಲೆಯರ ಹುಡುಗನೊಬ್ಬ ಬೇರೆ ವರ್ಗದವರ ಆಶ್ರಯದಲ್ಲಿ ಬೆಳೆಯುವುದು ಕೊರಗ ತನಿಯ ಪಾಡ್ದನದ ಹಾಗೆ ಕೋಡ್ದಬ್ಬು ಪಾಡ್ದನದಲ್ಲಿಯೂ ಇದೆ. ಆದರೆ ಈ ಪಾಡ್ದನದಲ್ಲಿ ಸಾಮಾನ್ಯವಾಗಿ ಆರಂಭದಿಂದಲೂ ಈ ಹೊಲೆಯರ ಹುಡುಗನಿಗೆ ಸಂಬಂಧಿಸಿದಂತೆ ಪವಾಡಗಳು ಅತಿಮಾನುಷ ಘಟನೆಗಳ ವಿವರಗಳು ಸಿಗುತ್ತವೆ. ಆದರೂ ಒಡೆಯ ಮತ್ತು ಸೇವಕನ ಸಂಬಂಧ ಇಲ್ಲಿಯೂ ಹೆಚ್ಚು ಆತ್ಮೀಯ ವಾತಾವರಣದಲ್ಲಿ ಇರುವುದನ್ನು ಕಾಣಬಹುದು. ಹೊಲೆಯರ ಹುಡುಗನೊಬ್ಬನು ತನ್ನ ಸಾಮರ್ಥ್ಯದಿಂದ ಮಾಂತ್ರಿಕನಾದಾಗ, ಪಂಡಿತನಾದಾಗ, ವೈದ್ಯನಾದಾಗ ಸಮಾಜದ ಉಳಿದ ಮೇಲು ವರ್ಗದವರು ಮತ್ತು ಮತ್ಸರಿಗಳಾದ ವೃತ್ತಿಯವರು ಅವನನ್ನು ಹೇಗೆ ಸಂಚುಮಾಡಿ ಕೊಂದರು ಎನ್ನುವುದು ಈ ಪಾಡ್ದನದ ಮುಖ್ಯ ವಸ್ತು. ಆದರೆ ಮುಂದೆ ಅದಕ್ಕೆ ಇನ್ನು ಅನೇಕ ಅತಿಮಾನುಷ ಘಟನೆಗಳು ಸೇರುತ್ತಾ ಹೋಗಿ ಕೋಡ್ದಬ್ಬುವು ಪ್ರಭಾವಶಾಲಿ ಭೂತಗಳಲ್ಲಿ ಒಂದು ಎನ್ನುವ ಮಟ್ಟಕ್ಕೆ ಹೋಗಿ ಮುಟ್ಟುತ್ತದೆ.

**ಕೋಡ್ದಬ್ಬು ಪಾಡ್ದನದ ಕನ್ನಡ ಸಾರಾಂಶ :**

ಕಚ್ಚಿದರಮನೆಯಲ್ಲಿರುವ ಕೊಡಂಗೆ ಬನ್ನಾರು ಕಾಂತುಲ್ಲಾರು ಎಂಬ ಯಜಮಾನನಿಗೆ ಒಂದು ದಿನ ಮುಗೇರರ ಪಟ್ಟಿನಲ್ಲಿ ತಾಯಿಯನ್ನು ಕಳೆದುಕೊಂಡ ಹೊಲೆಯರ ಹೆಣ್ಣು ಮಗು ಸಿಗುವುದು. ಅವನ ಮತ್ತು ಅವನ ಹೆಂಡತಿ ಸಿರಿಕೊಂಡೆ ಬಾರಗೆದಿ ಆ ಹೆಣ್ಣು ಶಿಶುವಿಗೆ ಬಾಲೆಕಚ್ಚಿರಮಾಲ್ದಿ ಎಂದು ಹೆಸರಿಟ್ಟು, ಪ್ರೀತಿಯಿಂದ ಸಾಕುವುದು. ದೊಡ್ಡವಳಾದ ಮೈನೆರೆದ ಆ ಹುಡುಗಿಯು ದೇವರ ನೈವೇದ್ಯ ಪ್ರಸಾದವನ್ನು ಊಟಮಾಡಿದಾಗ, ಅವಳಿಗೆ ಗರ್ಭ ನಿಲ್ಲುವುದು. ಅವಳಿಗೆ ಮದುವೆಯಾಗದೆ ಬಸಿರು ಬಂದದ್ದಕ್ಕೆ ಊರವರು ಹೀಯಾಳಿಸಿದಾಗ ಅವಳ ಜಾತಿಯವರು ಅವಳ ಬಗ್ಗೆ ಅರಸನಿಗೆ ದೂರು ಹೇಳುವುದು. ಅರಸನು ಕಾಂತುಬಾರಗರಿಗೆ ತಿಳಿಸಿದಾಗ ಅವರು ದುಃಖಿಗೊಳ್ಳುವುದು. ಕಚ್ಚಿರಮಾಲ್ದಿಯು ತಾನು ಗಂಡಸರ ಮೈ ಮುಟ್ಟಲಿಲ್ಲ, ಸತ್ಯದ ಪರೀಕ್ಷೆಗೆ ಸಿದ್ಧಳೆಂದು ತಿಳಿಸುವುದು. ರಾಜನು ಒಡ್ಡಿದ ಸತ್ಯದ ಪರೀಕ್ಷೆಗಳಲ್ಲಿ ಜಯಶಾಲಿಯಾಗುವುದು; ಕಾಯಿಸಿದ ಎಣ್ಣೆಯ ಕೊಪ್ಪರಿಗೆಯಲ್ಲಿ ಮುಳುಗಿ ಏಳುವುದು, ಕಾದ ಪಂಚಲೋಹದ ಗುಂಡನ್ನು ಕೈಯಲ್ಲಿ ಇಟ್ಟುಕೊಳ್ಳುವುದು, ಆಕೆ ಗಂಡು ಮಗುವನ್ನು ಹೆರುವುದು, ಆ ಮಗುವು (ಬಾಲೆ ಬಾರಗನು) ಮೂರು ವರ್ಷವಾಗುವಾಗಲೇ ತಾಯಿಯೊಡನೆ ಅರಮನೆಗೆ ಬರುವುದು, ಕಾಗೆ ಕೋಳಿಗಳನ್ನು ಬಿಲ್ಲಿನಿಂದ ಹೊಡೆದು ಕೊಲ್ಲುವುದು, ಕಲ್ಲನ್ನು ಮಂತ್ರಿಸಿ ಸತ್ತ ಕಾಗೆ ಕೋಳಿಗಳನ್ನು ಬದುಕಿಸುವುದು. ಈ ರೀತಿ ಹುಡುಗನ ಮಹಿಮೆಯು ಪಸರಿಸುವುದು. ದನ ಕಾಯುವ ಹುಡುಗರು ಈತನನ್ನು ತಂದೆಯಿಲ್ಲದವನೆಂದು ಹಂಗಿಸಿದಾಗ ಅವರನ್ನು ಶಿಕ್ಷಿಸುವುದು. ತಾನು ಹೊಡೆದುಕೊಂಡು ಹೋದ ಕಪಿಲೆ ದನವನ್ನು ಒಂದು ನೆಗಳೆಯು ನೀರಿನೊಳಗೆ ಎಳೆದುಕೊಂಡು ಹೋಗುವುದು. ಬಾಲೆ ಬಾರಗನು ಮಂತ್ರಿಸಿದ ಕಲ್ಲಿನಿಂದ ನೀರನ್ನು ಆರುವಂತೆ ಮಾಡಿದಾಗ, ನೆಗಳೆಯು ದನವನ್ನು ಅವನಿಗೆ

ಬಿಟ್ಟುಕೊಟ್ಟು, ತನಗೆ ಗೊತ್ತಿದ್ದ ಎಲ್ಲಾ ಮಂತ್ರ ವಿದ್ಯೆಯನ್ನು ಅವನಿಗೆ ಕಲಿಸುವುದು. ಈ ಮಂತ್ರವಿದ್ಯೆಯ ಸಹಾಯದಿಂದ ಅವನು ದೊಡ್ಡ ಮಾಂತ್ರಿಕ ಪಂಡಿತನಾಗುವುದು. ಕಾಯಿಲೆ, ಭೂತ ಪ್ರೇತ ಪಿಶಾಚಿಗಳ ಬಾಧೆಗಳನ್ನು ಗುಣ ಮಾಡುವುದು. ಇವನ ಕೀರ್ತಿಯನ್ನು ಸಹಿಸಲಾರದ ವೈದ್ಯರೂ ಮಂತ್ರವಾದಿಗಳೂ ಮತ್ಸರದಿಂದ ಇವನನ್ನು ಕೊಲ್ಲಲು ಸಂಚು ಮಾಡುವುದು. ತಾವು ಒಂದು ಬಾವಿಯನ್ನು ತೋಡಿಸಿ, ಅದರಲ್ಲಿ ನೀರು ಹೇಳಲು ಬಾಲೆ ಬಾರಗನನ್ನು ಕರೆಸುವುದು. ದುಃಖಿತರಾದ ಕೊಡಂಗೆ ಬನ್ನಾರರಲ್ಲಿ ಬಾಲೆ ಬಾರಗನು 'ನಾನು ನಿಮ್ಮ ಜೊತೆಯಲ್ಲಿ ಜೋಗದಲ್ಲಿ ಬಾರದಿದ್ದರೆ ಮಾಯದಲ್ಲಿ ಬರುವೆನು' ಎಂದು ಹೇಳಿ ಸಮಾಧಾನ ಪಡಿಸುವುದು. ಆತನು ನೀರು ನೋಡಲೆಂದು ಬಾವಿಗೆ ಇಳಿದಾಗ, ಪಿತೂರಿ ನಡೆಸಿದ್ದ ಮಂತ್ರವಾದಿಗಳು ಮೊದಲೆ ಸಿದ್ಧಪಡಿಸಿದ್ದ ಹಾಸುಕಲ್ಲನ್ನು ಅವನು ಮೇಲಕ್ಕೆ ಮುಚ್ಚಿ, ಅದರ ಮೇಲೆ ಮಣ್ಣು ಹಾಕಿ, ರಣ ಗೋಳಿಮರವನ್ನು ನೆಡುವುದು. ಬಾವಿಯಿಂದ ಕೋಳಿ, ಎಮ್ಮೆ, ಕರು ಮುಂತಾದ ಪ್ರಾಣಿಗಳ ಕೂಗು ಕೇಳಿಸುವುದು. ಸಹಾಯಕ್ಕಾಗಿ ಕೂಗನ್ನು ಕೇಳಿ, ಕೋಟಿ ಚೆನ್ನಯರು ತಮ್ಮ ಸುರ್ಯದಿಂದ ಹಾಸುಕಲ್ಲನ್ನು ಎಬ್ಬಿಸುವಾಗ ಅವರ ಬಂಟ ಕತ್ತಿಯು ಮೋಟಾಗುವುದು. ಮುಗೇರರ ಪಗರಿಯಿಂದಲೂ ಅದನ್ನು ಎಬ್ಬಿಸಲು ಅಸಾಧ್ಯವಾಗುವುದು. ಆ ದಾರಿಯಾಗಿ ಬಂದ ತನ್ನಿಮಾನಿಗಳು ತನ್ನ ಗೆಜ್ಜೆಕತ್ತಿಯನ್ನು ತೆಗೆದು ತನ್ನ ಕುಲದ ನಾಗಬ್ರಹ್ಮರನ್ನು ಪ್ರಾರ್ಥಿಸಿ, ಕತ್ತಿಯಿಂದ ಕಲ್ಲಿನ ಮೇಲೆ ಗೆರೆ ಎಳೆಯುವುದು. ಆಗ ಕಲ್ಲು ಪುಡಿಪುಡಿಯಾಗುವುದು. ಅವಳು ತಾನು ಉಟ್ಟ ಪಟ್ಟೆಸೀರೆಯ ಸೆರಗನ್ನು ಬಿಚ್ಚಿ, ಬಾವಿಯೊಳಗೆ ಇಳಿಸುವುದು. ಅದರ ಸಹಾಯದಿಂದ ಬಾಲೆ ಬಾರಗನು ಮೇಲಕ್ಕೆ ಬರುವುದು. ತನ್ನಿಮಾನಿಗಳು ಅವನಲ್ಲಿ 'ಅಣ್ಣಾ ನೀನೂ ನಾನೂ ಯಾವಾಗಲೂ ಅಣ್ಣ ತಂಗಿಯಾಗಿರಬೇಕು' ಎನ್ನುವುದು. ಅದಕ್ಕೆ ಬಾಲೆಬಾರಗನು 'ತಂಗೀ, ನೀನು ನನ್ನ ತಂಗಿಯಾಗಿರುವುದಾದರೆ ನಾವು ಜೋಗ ಬಿಟ್ಟು ಮಾಯವಾಗುವ. ನಾನು ಗಾಲಿಕೆರೆಯಲ್ಲಿ ವೀರಭದ್ರದೇವರು, ನಾಗಬ್ರಹ್ಮಸ್ಥಾನದಲ್ಲಿ ಉಲ್ಲಾಯನು; ಮೂಡುಗಿರಿಯಲ್ಲಿ ಕಾಳ ಭೈರವನು; ಕಂಚೀರಾಯ, ಜಡ್ತಾಯ, ಕಾಳರಾಹು, ಜಟಾಧಾರಿ, ಕಲ್ಕುಡ ಎಂಬ ಹೆಸರಿನ ದೈವವಾಗಿರುತ್ತೇನೆ. ನೀನು ಆದಿಯಲ್ಲಿ ಲೆಕ್ಕೆಸಿರಿ, ಆಮೇಲೆ ಕಾಲರಕಾಯಿ, ಅನಂತರ ಕಲ್ಲುರ್ಟಿ, ಸತ್ಯದೇವತೆ. ಆದ್ದರಿಂದ ನಾವು ಊರನ್ನು ಬಿಟ್ಟು ಗಟ್ಟದ ಮೇಲೆ ಹೋಗಿ, ತುಳುನಾಡಿಗೆ ಬೇರೆ ದೈವಗಳು ಬಾರದಂತೆ ಕೋಟೆ ಕಟ್ಟುವ' ಎಂದು ಮಾಯವಾಗಿ, ಗಟ್ಟಕ್ಕೆ ಹೋಗಿ, ಏಳು ಕೋಟೆ ಕಟ್ಟಿ 'ಕೋಟೆದ ಬಬ್ಬು' ಎಂಬ ಹೆಸರಿನಿಂದ ತನ್ನಿಮಾನಿಗಳೊಂದಿಗೆ ಇರುವುದು. ಆಗ ಜಾರಂದಾಯ ಮುಂಡತ್ತಾಯ ಮೊದಲಾದ ರಾಜಂದೈವಗಳು ತುಳುನಾಡನ್ನು ನೋಡಬೇಕೆಂದು ಗಟ್ಟ ಇಳಿದು ಬರುವುದು. ಅವರನ್ನು ಬೊಬ್ಬರ್ಯ ಭೂತವು ದಾರಿಯಲ್ಲಿ ತಡೆಯುವುದು, ಆಗ ರಾಜಂದೈವಗಳು ಕೋಟೆದ ಬಬ್ಬುವಿನಲ್ಲಿ ದೂರು ಕೊಡುವುದು. ಕೋಟೆದ ಬಬ್ಬುವು ತನ್ನ ಕತ್ತಿಯಿಂದ ಜೊಬ್ಬರ್ಯನ ಒಂದು ಕಾಲನ್ನು ಕಡಿಯುವುದು. ಕೋಟೆದ ಬಬ್ಬು ಮತ್ತು ತನ್ನಿಮಾನಿಗ ತುಳುನಾಡಿಗೆ ಇಳಿದು ಬರುವುದು. ಅಂದಿನ ಬಾಲೆಬಾರಗನು ಇಂದು ತುಳುವರ ಪಾಲಿಗೆ 'ಕೋಟೆದ ಬಬ್ಬು' ದೈವ ಎನ್ನಿಸುವುದು. 'ಹೊಲೆಯನು ಭೂತವಾಗಿ ಬಂದಿದ್ದಾನೆ' ಎಂದು ಜನರು ಅವನನ್ನು ನಂಬುವುದು. ಬಂಗಾಡಿ, ತಂಜಕಂಬ, ಮುಂಡಾಜೆ, ಕುಡುಮ (ಧರ್ಮಸ್ಥಳ), ಬೊಳ್ತೀರ (ಬೆಳ್ತಂಗಡಿ), ನಾಯಿಮುಂಞ, ಬೆದ್ರ (ಮೂಡುಬಿದ್ರೆ)ದ ಕೋಟೆ, ಬೋಳಾರ, ಊರ್ವದವರೆಗೆ ಸಂಚಾರ ಮಾಡುವುದು. ಕೋಡ್ದಬ್ಬು ತನ್ನಿಮಾನಿಗರು ಗಟ್ಟದ ಬುಡದಿಂದ ಕಡಲವರೆಗೆ, ಅಂಕೋಲೆ ಗಡಿಯಿಂದ ತೆಂಕು ಮಲೆಯಾಳದವರೆಗೆ ಕೇರಿ ಕೇರಿಯಲ್ಲಿ ಗುಡಿಕಟ್ಟಿಸಿ, ಮೆರೆಯುವುದು."

ಕೋಡ್ದಬ್ಬುವಿನ ಪಾಡ್ದನದಲ್ಲಿ ಅತಿಮಾನುಷ ಘಟನೆಗಳು ಕಥನದ ಉದ್ದಕ್ಕೂ ನಡೆಯುತ್ತವೆ. ಬಾಲೆ ಕಚ್ಚಿರಮಾಲ್ದಿಯು ಗರ್ಭ ಧರಿಸುವುದು, ಅವಳ ಸತ್ಯದ ಪರೀಕ್ಷೆಗಾಗಿ ಬಿಸಿಎಣ್ಣೆಯ ಕೊಪ್ಪರಿಗೆಯಲ್ಲಿ ಮುಳುಗಿ ಎದ್ದು ಬರುವುದು, ಕಾದ ಪಂಚಲೋಹದ ಗುಂಡನ್ನು ಕೈಯಲ್ಲಿ ಏನೂ ನೋವಾಗದಂತೆ ಹಿಡಿದುಕೊಳ್ಳುವುದು— ಈ ರೀತಿಯ ಪವಾಡಗಳು, ಅಲೌಕಿಕ ಘಟನೆಗಳು ಅವಳ ಮಗನ ಕಾಲಕ್ಕೂ ಮುಂದುವರಿಯುತ್ತವೆ. 'ಹುಡುಗ ಬಬ್ಬುವು ಮಂತ್ರಿಸಿ ಕಲ್ಲನ್ನು ಎಸೆದಾಗ ಅವನೇ ಹೊಡೆದ ಕಾಗೆ ಕೋಳಿಗಳು ಜೀವತಾಳಿ ಎದ್ದು ಓಡುವುದು,

ಬ್ರಹ್ಮರಗುಂಡಿಗೆ ಕಲ್ಲು ಮಂತ್ರಿಸಿ ಹಾಕಿದಾಗ ನೀರೆಲ್ಲಾ ಆರಿಹೋಗಿ ಮೊಸಳೆಯು ದನವನ್ನು ಹಿಂದಕ್ಕೆ ಕೊಡುವುದು— ಈ ಸಂದರ್ಭದಲ್ಲಿ ಪಾಡ್ದನದ ಕತೆಯು ಪವಾಡದ ಮಟ್ಟದಲ್ಲಿಯೇ ಮುಂದುವರಿಯುತ್ತದೆ. ಆದರೆ ಹೊಲೆಯರ ಹುಡುಗ ಬಾಲೆ ಬಾರಗನು ಮಂತ್ರ ವಿದ್ಯೆಯಿಂದ ಮದ್ದು ಕೊಟ್ಟು ಕಾಯಿಲೆಗಳನ್ನು ಗುಣ ಮಾಡುವುದು, ಇವನ ಕೀರ್ತಿಯನ್ನು ಕಂಡು ಸೈರಿಸಲಾರದೆ ಮತ್ಸರಗೊಂಡ ಕೆಲವು ವೈದ್ಯರು, ಮಂತ್ರವಾದಿಗಳು ಇವನನ್ನು ಕೊಲ್ಲಲು ಸಂಚು ಹೂಡುವುದು, ಹೆಚ್ಚು ವಾಸ್ತವಿಕ ವಿಚಾರ. ಈ ರೀತಿಯ ಸಂಚಿಗೆ ಬಲಿಯಾಗಿ ಆತನು ಬಾವಿಯಲ್ಲಿ ತನ್ನ ಅಸುವನ್ನು ಕಳೆದುಕೊಳ್ಳಬೇಕಾಗುತ್ತದೆ. ಹೊಲೆಯರ ಹುಡುಗನೊಬ್ಬ ಪರಾಕ್ರಮಿಯಾಗಿ ಬುದ್ಧಿವಂತನಾಗಿ ಉತ್ಕರ್ಷವನ್ನು ಪಡೆದಾಗ ಸಮಾಜದ ಮೇಲು ವರ್ಗದವರು ಮತ್ಸರದಿಂದ ಆತನನ್ನು ಬಾವಿಗೆ ಹಾಕಿ, ಅವನ ಮೇಲೆ ಕಲ್ಲು ಹಾಸರೆಯನ್ನು ಹಾಸುತ್ತಾರೆ. ಈ ರೀತಿ ಹಾಸರೆಯ ಅಡಿಯಲ್ಲಿ ಮಂತ್ರವಾದಿಗಳ ಪಿತೂರಿಗೆ ಸಿಕ್ಕಿಬಿದ್ದ ಬಬ್ಬುವನ್ನು ತನ್ನಿಮಾನಿಗಳು ಕಲ್ಲಿನಡಿಯಿಂದ ಪಾರುಮಾಡಿ, ತನ್ನ ಸೀರೆಯನ್ನು ಬಾವಿಗೆ ಇಳಿಸಿ ಅವನನ್ನು ಬಾವಿಯಿಂದ ಮೇಲಕ್ಕೆ ಎಳೆಯುತ್ತಾಳೆ. ಅಣ್ಣ ತಂಗಿಯರಂತೆ ಅವರಿಬ್ಬರು ಮನುಷ್ಯ ದೇಹವನ್ನು ಬಿಟ್ಟು ಮಾಯವಾಗುತ್ತಾರೆ. ಇಲ್ಲಿಯೂ ಅಲೌಕಿಕ ಘಟನೆಗಳೆಲ್ಲವನ್ನು ಕಳಚಿದರೆ ಬಾವಿಯಲ್ಲಿ ಬಿದ್ದು ಹಾಸುಕಲ್ಲಿನ ಹೊಡೆತದಿಂದ ಒಂದೋ ಬಬ್ಬುವು ಅಲ್ಲಿಯೇ ತನ್ನ ಪ್ರಾಣವನ್ನು ಬಿಟ್ಟಿರಬೇಕು. ಅಥವಾ ತನ್ನಿಮಾನಿಗಳಂಥವಳು ಅವನನ್ನು ಮೇಲಕ್ಕೆತ್ತಿದ ಬಳಿಕ ಅವನ ಪ್ರಾಣ ಹೋಗಿರಬಹುದು. ಆದರೆ ಮುಖ್ಯವಾಗಿ ಈ ಘಟನೆಯಿಂದಲೇ ಅವನ ಮರಣ ಸಂಭವಿಸಿತು ಎಂಬುದು ಸ್ಪಷ್ಟವಾಗುತ್ತದೆ. ಪಾಡ್ದನದ ಮುಂದಿನ ಭಾಗದಲ್ಲಿ ಕೋಟೆದ ಬಬ್ಬುವಿನ ಸಂಚಾರವನ್ನು. ಮಹಿಮೆಯನ್ನು ಸಾರಲಾಗಿದೆ. ಅನೇಕ ಭೂತಗಳ ಜೊತೆಗೆ ಬಬ್ಬುವಿನ ಸಂಪರ್ಕವನ್ನು ಇಲ್ಲಿ ಹೇಳಲಾಗಿದೆ. 'ಹೊಲೆಯನು ಭೂತವಾಗಿ ಬಂದಿದ್ದಾನೆ' ಎನ್ನುವಾಗ ಅದನ್ನು ಅಲೌಕಿಕ ಮಟ್ಟದಲ್ಲಿ ಗಂಭೀರವಾಗಿ ಭಾವಿಸುತ್ತಾರೆ, ಅವನನ್ನು ಆರಾಧಿಸುತ್ತಾರೆ. ಆದರೂ ಈ ಭೂತವು ಉಳಿದ ಹೆಚ್ಚಿನ ಭೂತಗಳಂತೆಯೇ ಬ್ರಹ್ಮನಿಗೆ ಮತ್ತು ಇತರ ಕೆಲವು ದೇವರುಗಳಿಗೆ ತನ್ನ ಭಕ್ತಿಯನ್ನು ಸೂಚಿಸಿ ತನ್ನ ಸ್ಥಾನವನ್ನು ನಿರ್ಮಾಣ ಮಾಡಿಕೊಳ್ಳುತ್ತದೆ. ಬೊಬ್ಬರ್ಯ ಭೂತವು ಸಮುದ್ರದ ಹೊಗೆಯಲ್ಲಿ ಒಂದು ಕಾಲನ್ನು ಘಟ್ಟದ ಮೇಲೆ ಇನ್ನೊಂದು ಕಾಲನ್ನು ಇಟ್ಟುಕೊಂಡು ತುಳುನಾಡಿಗೆ ಘಟ್ಟ ಇಳಿದು ಬರುವ ಜಾರಂದಾಯ, ಮುಂಡತ್ತಾಯ, ಮೊದಲಾದ ರಾಜನ್ ದೈವಗಳಿಗೆ ಅಡ್ಡಿಯುಂಟು ಮಾಡುವುದು, ಆಗ ಬಬ್ಬುವು ಬೊಬ್ಬರ್ಯನ ಒಂದು ಕಾಲನ್ನು ಕಡಿಯುವುದು— ಇಂತಹ ಸಂದರ್ಭದಲ್ಲಿ ಎಲ್ಲ ಅಲೌಕಿಕ ವಾತಾವರಣದ ಭೂತಗಳ ಸಂದರ್ಭದಲ್ಲಿಯೂ ಲೌಕಿಕ ಬದುಕಿನ ಘರ್ಷಣೆಗಳನ್ನು ಕಾಣಬಹುದು.

## ೭. ಆಲಿಭೂತ

ಮನುಷ್ಯರು ಭೂತಗಳಾಗುವ ಪಾಡ್ದನಗಳಲ್ಲಿ ದೇವತೆಗಳು ಅಥವಾ ಭೂತಗಳ ಉಪದ್ರವದಿಂದ ಅಸು ನೀಗಿದವರು ಒಂದು ಪ್ರಮುಖ ವರ್ಗವಾಗಿ ಕಾಣಿಸುತ್ತಾರೆ. ಕೊರಗತನಿಯ ಪಾಡ್ದನದಲ್ಲಿ ಮೈಸಂದಾಯ ಭೂತದ ಕಾರಣದಿಂದ ಕೊರಗ ತನಿಯನು ಮಾಯವಾಗಿ ಭೂತವಾದನು ಎಂಬ ವಿಚಾರ ಇದೆ. ಈ ರೀತಿ ವ್ಯಕ್ತಿಯು ಭೂತದ ಶಕ್ತಿಯಿಂದ ತನ್ನ ಪ್ರಾಣವನ್ನು ಕಳೆದುಕೊಂಡು ಆ ಮೇಲೆ ತಾನೇ ಭೂತವಾಗಿ ಆರಾಧನೆಯನ್ನು ಪಡೆಯುವ ಕ್ರಮವನ್ನು 'ಆಲಿ' ಭೂತದ ಪಾಡ್ದನದಲ್ಲಿಯೂ ನೋಡಬಹುದು. ಇಲ್ಲಿ ವಿಶೇಷವಾದ ಅಂಶವೆಂದರೆ ಮುಸ್ಲಿಂ ವ್ಯಕ್ತಿಯಾದ 'ಆಲಿಬ್ಯಾರಿ'ಯು ಭೂತದ ಉಪದ್ರವದಿಂದ ಸತ್ತು 'ಆಲಿಭೂತ'ವಾಗುತ್ತಾನೆ. ಈ ಭೂತವನ್ನು 'ಆಲಿಚಾಮುಂಡಿ ಭೂತ'ವೆಂದು ಕರೆಯುತ್ತಾರೆ. ಆ ಆಲಿಭೂತದ ಪಾಡ್ದನದ ಕತೆ ಬಹಳ ಸ್ವಾರಸ್ಯವಾಗಿದೆ—

"ಕುಂಬಳೆ ಸೀಮೆಯ ಆರಿಕ್ಕಾಡಿಯಲ್ಲಿ ಗುಡ್ಡೆಯ ಮನೆ ಎನ್ನುವ ಒಂದು ಮಲೆಯಾಳಿ ಬಿಲ್ಲವರ ಮನೆತನ ಇತ್ತು. ಅವರಿಗೆ 'ರಕ್ತೇಶ್ವರಿ'ಯಾದ ಮಂತ್ರಮೂರ್ತಿಯು ಧರ್ಮದೈವ. ಅವರ ಮನೆಯ ಅಂಗಳದಲ್ಲಿಯೇ ಈ ಭೂತಕ್ಕೆ ಒಂದು ಗುಡಿಯು. ಹಿಂದಿನ ಒಂದು ಕಾಲದಲ್ಲಿ ಆಲಿಬ್ಯಾರಿ ಎನ್ನುವ ಒಬ್ಬ ಮಂತ್ರವಾದಿಯು ದ್ವೀಪದಿಂದ ತಿರುಗುತ್ತಾ ಬಂದವನು; ಆ ಊರಿನಲ್ಲಿ ಸ್ವಲ್ಪ ಕಾಲ ವಾಸವಾಗಿದ್ದನು. ಆಗ ಆತನಿಗೆ ತತ್ಕಾಲಕ್ಕೆ ವಾಸವಾಗಿರಲು ಈ ಗುಡ್ಡೆಯ ಮನೆಯವರು ಒಂದು ಖಾಲಿ ಮನೆಯನ್ನು ಬಿಟ್ಟು ಕೊಟ್ಟರು. ಈ ಆಲಿಬ್ಯಾರಿಯ ಮಂತ್ರವಾದದಲ್ಲಿ ಆ ಊರಿನವರಿಗೆಲ್ಲಾ ನಂಬಿಕೆ ಹುಟ್ಟಿತು. ಅವನು ಹೀಗೆಯೇ ಸ್ವಲ್ಪ ಕಾಲ ಆ ಊರಿನಲ್ಲಿಯೇ ನೆಲೆಸಿದನು. ಹೀಗಿರುವಾಗ ಈ ಮಂತ್ರವಾದಿಗೆ ಅಲ್ಲಿನ ದೇಯಿ ಎನ್ನುವ ಹೆಣ್ಣಿನಲ್ಲಿ ಖುಷಿಯಾಯಿತು. ಅವಳನ್ನು ಹಿಡಿಯಲು ಪ್ರಯತ್ನ ಮಾಡಿದ. ಆದರೆ ಹೆಣ್ಣು ಒಪ್ಪಲಿಲ್ಲ. ಬ್ಯಾರಿಯು ಮಂತ್ರದ ಬಲದಿಂದ ಹೆಣ್ಣನ್ನು ವಶೀಕರಣ ಮಾಡಿ ಹಾಳು ಮಾಡಿದ. ಇದು ಊರಿಗೆಲ್ಲ ಹರಡಿತು. ಗುಡ್ಡೆಯ ಮನೆಯ ಹಿರಿಯರಿಗೂ ಬ್ಯಾರಿಯ ದುರ್ಬುದ್ಧಿ ತಿಳಿಯಿತು. ಆದರೆ ಬ್ಯಾರಿಯು ದೊಡ್ಡ ಮಂತ್ರವಾದಿಯಾಗಿರುವುದರಿಂದ ಸುದ್ದಿಯನ್ನು ಬಹಿರಂಗ ಮಾಡದೆಯೇ ಬಹಳ ಬೇಸರದಿಂದ ತನ್ನ ಧರ್ಮ-ದೈವ ಮಂತ್ರಮೂರ್ತಿ (ರಕ್ತೇಶ್ವರಿ)ಗೆ ಹರಕೆ ಹೇಳಿದನು. ಆ ಭೂತವು ಬ್ಯಾರಿಯನ್ನು ಬೆನ್ನು ಹಿಡಿಯಲು ಸುರು ಮಾಡಿತು. ಆದರೆ ಆ ಬ್ಯಾರಿ ದೊಡ್ಡ ಮಂತ್ರವಾದಿಯೇ ಆಗಿರುವುದರಿಂದ ಅವನ ಸೊಂಟದ ನೂಲಿನಲ್ಲಿ 'ತಾಯಿತ' (ಉರ್ಕು) ಇದ್ದು, ಅದು ಅವನಿಗೆ ದೇಹಕ್ಕೆ ರಕ್ಷೆಯಾಗಿತ್ತು. ಆ ತಾಯಿತ ಅವನ ಸೊಂಟದಲ್ಲಿರುವವರೆಗೆ ಭೂತಕ್ಕೆ ಅವನನ್ನು ಏನು ಮಾಡಲು ಸಾಧ್ಯವಾಗಲಿಲ್ಲ.

ಒಂದು ದಿನ ಆಲಿಬ್ಯಾರಿಯು ಮಂತ್ರವಾದ ಮಾಡಲು ಎಂದು ಪೂರ್ವದ ಕಡೆ ಹೋದವನು, ಅಲ್ಲಿ ಸಿಕ್ಕಿದ ಅಕ್ಕಿ, ತೆಂಗಿನಕಾಯಿಯ ಹೊರೆಯನ್ನು ಹೊತ್ತುಕೊಂಡು ಆರಿಕ್ಕಾಡಿಯ ಪೂರ್ವ ಭಾಗದ ಪದವಿನಲ್ಲಿ ಬರುವಾಗ, ಒಂದು ನೀರಿನ ಹಳ್ಳದಲ್ಲಿ ಒಂದು ಸುಂದರವಾದ ಹೆಣ್ಣು ಸೊಂಟದವರೆಗೆ ನೀರಿನಲ್ಲಿ ನಿಂತುಕೊಂಡು ಬತ್ತಲೆ ಸ್ನಾನ ಮಾಡುವುದನ್ನು ನೋಡಿದನು. ಆಲಿಯು ಅವಳ ಹತ್ತಿರ ಬಂದನು. ಆ ಹೆಣ್ಣು ಕೂಡ

ಇವನನ್ನು ನೋಡಿ ವೈಯ್ಯಾರದಿಂದ ನಕ್ಕಳು. ಬ್ಯಾರಿಯ ಬುದ್ಧಿಯೇ ತಿರುಗಿತು. "ನಾನು ನಿನ್ನ ಒಟ್ಟಿಗೆ ಸ್ವಲ್ಪ ಹೊತ್ತು ಸ್ನಾನ ಮಾಡಬೇಕೋ?" ಎಂದು ಅವಳಲ್ಲಿ ಕೇಳಿದನು. ಆಗ ಆ ಹೆಣ್ಣು "ನನ್ನ ಹಾಗೆಯೇ ಬತ್ತಲೆಯಾಗಿ ನೀನು ನೀರಿನಲ್ಲಿ ಇಳಿದು ಸ್ನಾನ ಮಾಡಬಹುದು" ಎಂದಳು. ಆಲಿಯೂ ತಲೆಯ ಮೇಲಿನ ಹೊರೆಯನ್ನು ತೆಗೆದು ಕಲ್ಲಿನ ಮೇಲೆ ಇಟ್ಟನು. ಕೈಯಲ್ಲಿದ್ದ ಕೊಡೆಯನ್ನು ಅಲ್ಲಿಯೇ ಒರಗಿಸಿಟ್ಟನು. ಕಾಲಿನ ಮೆಟ್ಟನ್ನು ಕಳಚಿದನು. ನೀರಿಗೆ ಹಾರಲು ಸಿದ್ಧವಾದಾಗ, ಆ ಹೆಣ್ಣು 'ನಿಲ್ಲು' ಎಂದಳು. 'ಯಾಕೆ' ಎಂದು ಕೇಳಿದ ಆಲಿಬ್ಯಾರಿ. ಸ್ನಾನ ಮಾಡುತ್ತಿದ್ದ ಆ ಹೆಣ್ಣು, ಹಳ್ಳದ ಸ್ವಲ್ಪ ಬದಿಗೆ ಬಂದು ತುದಿಗಾಲಿನಲ್ಲಿ ನಿಂತು 'ನಿನ್ನ ಸೊಂಟದಲ್ಲಿ ಇರುವುದು ಏನು?' ಎಂದು ಕೇಳಿದಳು. ಬ್ಯಾರಿಗೆ ಬಹಳ ಆನಂದವಾಯಿತು. ಸೊಂಟದಲ್ಲಿದ್ದ ಮಂತ್ರದ ನೂಲು ಮತ್ತು ತಾಯಿತವನ್ನು ತುಂಡು ಮಾಡಿ ತೆಗೆದು ಕಲ್ಲಿನ ಮೇಲೆ ಇಟ್ಟನು. ಆ ಮೇಲೆ ನೀರಿಗೆ ಹಾರಿದ ಆಲಿಬ್ಯಾರಿಯನ್ನು ಹೆಣ್ಣಿನ ರೂಪದಲ್ಲಿದ್ದ ಮಂತ್ರಮೂರ್ತಿಯು ಮಾಯ ಮಾಡಿ, ಅವನ ಪ್ರೇತವನ್ನು ಕೈಯಲ್ಲಿ ಹಿಡಿದುಕೊಂಡು ಮೇಲೆ ಬಂದಿತು.

ಕುಂಬಳೆ ಸೀಮೆಯ ಅಂಬಲಡ್ಕದಲ್ಲಿ ಇಚ್ಲಂಪಾಡಿಯವರ ಒರಿತನದಲ್ಲಿ ಪಂಬ್ರಾಣದವರ ಆಡಳಿತದಲ್ಲಿ ಕಿನ್ನಿಮಾಣಿ-ಪೂಮಾಣಿ ಭೂತಗಳಿಗೆ ನೇಮ ನಡೆಯುತ್ತಿತ್ತು. ಪೂಮಾಣಿಯ ನೇಮದ ದಿವಸ ಆರಿಕ್ಕಾಡಿ ಪಾದೆಸ್ಥಾನದ ಐವರು ಭೂತಗಳು ಅಂಬಲಡ್ಕದ ಒಡೆಯರು ಬೇಟೆಗೆ ಬರುತ್ತಾರೆ. ಹಾಗೆ ಬಂದವರು ಆಲಿಯು ಮಾಯವಾದ ಹಳ್ಳದ ಬಳಿಯಲ್ಲಿಯೇ ಒಂದಕ್ಕೆ ಹೋಗಬೇಕು. ಹಾಗೆ ಹೋಗುವಾಗ ಅಲ್ಲಿ ಆಲಿಯ ಪ್ರೇತವನ್ನು ಕೈಯಲ್ಲಿ ಹಿಡಿದುಕೊಂಡು ಮುಂದಿನ ದಾರಿ ಏನು ಎಂದು ಹುಡುಕುತ್ತಿದ್ದ ಮಂತ್ರಮೂರ್ತಿಯನ್ನು ನೋಡಿದರು. ಅದನ್ನು ಮಾತಾಡಿಸಿ ಸಂಗತಿಯನ್ನು ತಿಳಿದರು. ನನಗೂ ನನ್ನ ಸೇವಕನಾದ ಈ ಆಲಿಗೂ ನಿಮ್ಮ ಪಾದೆ ಸ್ಥಾನದಲ್ಲಿ ಎಡದ ಭಾಗದಲ್ಲಿ ಅಂಗೈಯಷ್ಟು ಜಾಗವನ್ನು ನೆಲೆಯೂರಲು ಕೊಟ್ಟರೆ, ಆಲಿಯನ್ನು ನನ್ನ ಮಾಯಾ ಬಲದಿಂದ 'ಆಲಿ ಚಾಮುಂಡಿ' ಎಂಬ ಹೆಸರಿನ ಭೂತವನ್ನಾಗಿ ಮಾಡಿ, ನಾಲ್ಕು ದಿನ ಕಪ್ಪ ಕಾಣಿಕೆಯನ್ನು ಪಡೆದು, ನಿಮ್ಮ ಪಾದೆಸ್ಥಾನವನ್ನು ಬೆಳಗಿಸಿ ಕೊಡುತ್ತೇನೆ. ಕಲಿಕಾಲದಲ್ಲಿ ಶಕ್ತಿಯಿದ್ದವನು ಬಗ್ಗಿಸುವಾಗ, ಅನ್ಯಾಯ ಮೆರೆಯುವಾಗ, ಸಾಲ ತೆಗೆದುಕೊಂಡವನು ಸೋಲಿಸುವಾಗ, ಸೋತವರು ಆಲಿಗೆ ಹರಕೆ ಹೇಳಿ ಕೋಳಿಯ ಕಾಣಿಕೆಯನ್ನು ಮಾಡಿದರೆ ಸಿಹಿ ನೀರು ಹುಟ್ಟುವಲ್ಲಿಂದ ಉಪ್ಪು ನೀರು ಸೇರುವವರೆಗೆ ಅಂತಹವರಿಗಾಗಿ ಸಹಾಯಮಾಡಿ, ನಂಬಿದವರಿಗೆ ಇಂಬು ಮಾಡಿಸಿ ಕೊಡುತ್ತೇನೆ' ಎಂದು ಭಾಷೆ ಹೇಳಿತು. ನಂಬಿದ ಐವರು ಭೂತಗಳು ಪಾದೆಯಲ್ಲಿ ಮಂತ್ರಮೂರ್ತಿಯನ್ನು, ಆಲಿ ಚಾಮುಂಡಿಯನ್ನು ನೆಲೆಗೊಳಿಸಿದರು. ಸುಗ್ಗಿ ತಿಂಗಳಲ್ಲಿ ಆಲಿಗೆ ಮೂರು ದಿನ ಕೋಲ ಕೊಟ್ಟರು. ಊರಿನವರ ಹರಕೆ ಬರಲು ಶುರುವಾಯಿತು. ಪಾದೆಸ್ಥಾನದ ಆಲಿ ಚಾಮುಂಡಿ, ಪಂಬ್ರಾಣದವರ ನೆಚ್ಚಿನ ಭೂತವಾಯಿತು."

ಕೇರಳದ ಸೀಮೆಯಲ್ಲಿರುವ ಕಾಸರಗೋಡು ತಾಲೂಕಿನ ಕುಂಬಳೆಯಲ್ಲಿ ನಡೆದ ಹಾಗೆ ಈ ಆಲಿಭೂತದ ಕಥಾನಕವಿದೆ. ಮಲೆಯಾಳಿ ಜಿಲ್ಲವರ ಮನೆತನದ ಮಂತ್ರವಾದಿಯಾದ ಮುಸ್ಲಿಂ ವ್ಯಕ್ತಿ ಆಲಿ ಬ್ಯಾರಿಯು ಮಂತ್ರವಾದದಿಂದ ಹೆಣ್ಣುಗಳನ್ನು ವಶೀಕರಣ ಮಾಡುವುದು, ಯಾವುದೇ ಭೂತದ ಪ್ರಭಾವದಿಂದ ತಪ್ಪಿಸಿಕೊಳ್ಳಲು ಮಂತ್ರದ ನೂಲು ತಾಯಿತಗಳನ್ನು ಕಟ್ಟಿಕೊಳ್ಳುವುದು—ಈ ಎಲ್ಲಾ ವಿವರಗಳಲ್ಲಿಯೂ ಕೇರಳದ ಮಲೆಯಾಳಂ ಸಂಸ್ಕೃತಿಯ ಪ್ರಭಾವ ಸ್ಪಷ್ಟವಾಗಿದೆ. ಕೇರಳದಲ್ಲಿ ಮಂತ್ರವಾದಿಗಳು ಬಹಳ ಪ್ರವೀಣರು, ಮುಸ್ಲಿಂ ಬ್ಯಾರಿಗಳು ಹೆಂಗುಸರನ್ನು ಹಾಳು ಮಾಡುತ್ತಾರೆ; ಎನ್ನುವ ಹಿಂದೂ ಸಂಸ್ಕೃತಿಯ ಕೆಲವು ಅಭಿಪ್ರಾಯಗಳು ಈ ಪಾಡ್ದನದಲ್ಲಿ ಕಾಣಿಸುತ್ತವೆ. ಆಲಿ ಬ್ಯಾರಿಯಂತಹ ಯಾವನೋ ಒಬ್ಬ ಮಂತ್ರವಾದಿಯು ಹೆಣ್ಣುಗಳ ಹುಚ್ಚಿನಿಂದ ಜನಗಳ ಕೋಪಕ್ಕೆ ಈಡಾಗಿರಬಹುದು. ಹೆಣ್ಣಿನ ಬಲೆಯನ್ನು ಒಡ್ಡಿ ಯಾರೋ ಅವನನ್ನು ಕೊಂದಿರಬಹುದು (ಮಹಾಭಾರತದಲ್ಲಿ ದ್ರೌಪದಿಯನ್ನು ಮೋಹಿಸಿದ ಕೀಚಕನನ್ನು ಭೀಮನು ಕೊಂದುಹಾಕಿದಂತೆ). ಈ ರೀತಿಯ ಆಲಿಯ ಕೊಲೆಯನ್ನು ದೈವದ ಉಪದ್ರವದಿಂದ ಸತ್ತದ್ದು ಎಂದು

ಪರಿವರ್ತಿಸುವಲ್ಲಿ ಕೊಲೆಯ ವಿಚಾರವನ್ನು ಮರೆಮಾಡುವ ದೃಷ್ಟಿ ಇರುವಂತೆಯೇ, ಮಹಾ ಮಂತ್ರವಾದಿಯೊಬ್ಬನ ಸಾವು ಖಂಡಿತವಾಗಿಯೂ ದೈವ ಅಥವಾ ಭೂತದ ಪ್ರಭಾವದಿಂದಲೇ ಆಗಿರಬೇಕು ಎನ್ನುವ ಧಾರ್ಮಿಕ ನಂಬಿಕೆಯೂ ಮಿಳಿತವಾಗಿರುವುದು ಕಾಣಿಸುತ್ತದೆ. ಆಲಿ ಬ್ಯಾರಿಯು ಸಾಮಾನ್ಯ ಬ್ಯಾರಿಯಾಗಿದ್ದರೆ ಸತ್ತ ಬಳಿಕ ಭೂತವಾಗುತ್ತಿರಲಿಲ್ಲ. ಅವನು ದೊಡ್ಡ ಮಂತ್ರವಾದಿ ಆಗಿ ಇದ್ದದ್ದು ಅವನನ್ನು ಸತ್ತ ಬಳಿಕ ಭೂತವೆಂದು ಕಲ್ಪನೆ ಮಾಡಲು ಕಾರಣವಾಗಿರಬೇಕು.

ಈ ರೀತಿ ಮುಸ್ಲಿಂ ವ್ಯಕ್ತಿಯೊಬ್ಬನು ಭೂತವಾದಾಗ ಸಹಜವಾಗಿಯೇ ಆ ಸಂಸ್ಕೃತಿಯ ಸ್ವರೂಪ ಭೂತಾರಾಧನೆಯ ಮೇಲೂ ಪ್ರಭಾವವನ್ನು ಬೀರುತ್ತದೆ. ಆಲಿಭೂತದ ವೇಷವನ್ನು ಕಟ್ಟುವವನು ಸಿಲ್ಕಿನ ಲುಂಗಿಯನ್ನು ಉಟ್ಟು ಬಂಗಾರದ ಉದ್ದವಾದ ಟೊಪ್ಪಿಯಂತಹ ಅಲಂಕಾರವನ್ನು ತಲೆಗೆ ಇಟ್ಟುಕೊಳ್ಳುತ್ತಾನೆ. ಈ ಭೂತದ ಆರಾಧನೆಗೆ ಹಿಂದುಗಳು ಮತ್ತು ಮುಸ್ಲಿಮರು ಬರುತ್ತಾರೆ ಮತ್ತು ಹರಕೆಯನ್ನು ಹಾಕುತ್ತಾರೆ. 'ಆಲಿ ಚಾಮುಂಡಿ' ಭೂತವು ಸತ್ತ ವ್ಯಕ್ತಿಗಳ ಪ್ರೇತವನ್ನು ಬಿಡಿಸುತ್ತದೆ ಎನ್ನುವುದು ಜನರ ನಂಬಿಕೆ. ಆಲಿಯು ಜೀವಂತವಾಗಿದ್ದಾಗ ಮಂತ್ರವಾದಿಯಾಗಿ ಇದ್ದದ್ದು ಇದಕ್ಕೆ ಕಾರಣವಾಗಿರಬೇಕು. ಇನ್ನೊಂದು ಸ್ವಾರಸ್ಯದ ವಿಷಯ ಎಂದರೆ 'ಆಲಿಭೂತ'ವನ್ನು ಭಕ್ತಿಯಿಂದ ಆರಾಧಿಸುವ ಹೆಣ್ಣುಗಳ ಒಂದು ವರ್ಗ, ವೇಶ್ಯಾ ವೃತ್ತಿಯನ್ನು ಮಾಡುವ ಹೆಣ್ಣುಗಳು (ಕಸುಬುದ ಪೊಣ್ಣುಲು) ಈ ಆಲಿಭೂತವನ್ನು ಬಹಳ ಭಕ್ತಿಯಿಂದ ಗೌರವಿಸುತ್ತಾರೆ. ಆಲಿಯು ಮನುಷ್ಯನಾಗಿದ್ದಾಗ ಹೆಣ್ಣಿನ ಹುಚ್ಚನಾಗಿದ್ದುದು. ಹೆಣ್ಣಿನ ಹುಚ್ಚಿನಿಂದಲೇ ಅವನು ಸತ್ತು ಭೂತವಾದದ್ದು ಹೆಣ್ಣುಗಳ ಈ ನಂಬಿಕೆಗೆ ಕಾರಣವಾಗಿರಬಹುದು.

## ೮. ಕಾಂತಾಬಾರೆ ಬೂದಾಬಾರೆ

ಕೋಟಿ-ಚೆನ್ನಯರು ಹೇಗೆ ಅವಳಿ ವೀರರಾಗಿ ತಮ್ಮ ಸಾಹಸದಿಂದ ಮೆರೆದು, ಅಕಾಲ ಮರಣದ ಬಳಿಕ ದೈವಗಳ ಪಟ್ಟಕ್ಕೆ ಏರುತ್ತಾರೆಯೋ ಅದೇ ರೀತಿ ಕಾಂತಾಬಾರೆ-ಬೂದಾಬಾರೆ ಎಂಬ ಅವಳಿ ತರುಣರು ತಮ್ಮ ಸಾಹಸ ಕೆಲಸಗಳಿಂದ ತುಳುನಾಡಿನಲ್ಲಿ ಹೆಸರು ಪಡೆದು ಚೌಟರಿಗೂ ಸಾಮಂತರಸರಿಗೂ ಯುದ್ಧವಾದಾಗ ಸಾಮಂತರಸರ ಪರವಾಗಿ ಹೋರಾಡಿ ಮಡಿಯುತ್ತಾರೆ ಎಂದು ಪಾಡ್ದನ ಹೇಳುತ್ತದೆ. ಇವರಿಗೂ ದೈವಗಳ ಪದವಿ ಸಿಕ್ಕಿ ಲೆಕ್ಕೆಸಿರಿ ಭೂತದ ನೇಮವಾಗುವಾಗ ಇವರಿಗೂ 'ಅಗೆಲು' ಆಗುತ್ತದೆ. ಇವರು ಬಿಲ್ಲವ ವರ್ಗದವರೆಂದೂ ಸಾಮಂತರಸರ ಆಶ್ರಯದಲ್ಲಿ ಬೆಳೆದರೆಂದೂ ಪಾಡ್ದನದಲ್ಲಿ ತಿಳಿಸಲಾಗಿದೆ. ಕಾಂತಾಬಾರೆ ಬೂದಾಬಾರೆ ಪಾಡ್ದನದ ಕತೆಯ ಮುಖ್ಯ ಸಾರಾಂಶ ಈ ರೀತಿ ಇದೆ :

ಉಳ್ಳೂರು ಗುತ್ತಿನ ಪೆರ್ಗಡೆಯ ರಾಣಿ ಉಳ್ಳ ಪೆರ್ಗಡ್ತಿಯು ಸುರತ್ಕಲೆ ಕಟ್ಟೆಯಲ್ಲಿ ನಿಲ್ಲಿಸಿ, ಅನಾಥಳಾಗಿ ನಿಂತಿದ್ದ ಹುಡುಗಿಯನ್ನು ವಿಚಾರಿಸುತ್ತಾಳೆ. ಅವಳು ಅನಾಥ ಬಿಲ್ಲವರ ಹುಡುಗಿ ಎಂದು ತಿಳಿದಾಗ ಅವಳನ್ನು ತಂದು ಸಾಕಿ, ಬಿಲ್ಲವರ ಹುಡುಗನೊಬ್ಬನೊಂದಿಗೆ ಮದುವೆ ಮಾಡುತ್ತಾಳೆ. ಅವಳಿಗೆ ಜನಿಸಿದ ಅವಳಿ ಗಂಡು ಮಕ್ಕಳಾದ ಕಾಂತಾಬಾರೆ ಬೂದಾಬಾರೆಯರು ವಿದ್ಯೆ ಬುದ್ಧಿಗಳಿಂದ, ಪರಾಕ್ರಮದಿಂದ ಪ್ರಸಿದ್ಧರಾಗುತ್ತಾರೆ. ಸಾಮಂತರಸರಲ್ಲಿ 'ಮಾವ' ಎಂದು ಕರೆಯುವಷ್ಟು ಆತ್ಮೀಯತೆಯಿಂದ ಬೆಳೆದ ಈ ತರುಣರು ಅವರಿಗಾಗಿಯೇ ಚೌಟರ ಜೊತೆಗೆ ಹೋರಾಡಿ ಮರಣವನ್ನು ಅಪ್ಪುತ್ತಾರೆ.

ಕಾಂತಾಬಾರೆ - ಬೂದಾಬಾರೆಯರ ಪಾಡ್ದನದ ಕತೆಯು ಕೆಲವು ಅಂಶದಲ್ಲಿ ಕೋಟಿ ಚೆನ್ನಯ ಪಾಡ್ದನವನ್ನು ಹೋಲುತ್ತದೆ. ಬಿಲ್ಲವರ ಬಡ ಹುಡುಗಿ ಅನಾಥಳಾಗಿ ಉಳ್ಳ ಪೆರ್ಗಡ್ತಿಯ ಆಶ್ರಯದಲ್ಲಿ ಬೆಳೆಯುವುದು, ಉಳ್ಳೂರು ಅರಮನೆಯ ಬಾವಿಯ ನೀರನ್ನು ಕುಡಿದು ಗರ್ಭವತಿಯಾದ ಆಕೆ ಕಾಂತಾಬಾರೆ-ಬೂದಾಬಾರೆಯರನ್ನು ಹೆರುವುದು, ಬಲಶಾಲಿಯಾದ ಈ ಮಕ್ಕಳು ಸಾಮಂತರಸರ ಆಶ್ರಯದಲ್ಲಿ ಸುಖವಾಗಿ ಬೆಳೆಯುವುದು, ಈ ತರುಣರ ಸಾಹಸದ ಕೆಲಸಗಳು — ಒಂದೇ ರಾತ್ರಿಯಲ್ಲಿ ಗದ್ದೆಯ ಅಗಳನ್ನು ಕಡಿಯುವುದು — ಒಂದು ರಾತ್ರಿಯಲ್ಲಿ ದೊಡ್ಡದಾದ ನೀರಿನ ತೋಡನ್ನು ನಿರ್ಮಿಸುವುದು — ಮುಂತಾದ ಅನೇಕ ವಿವರಗಳು ಇಲ್ಲಿ ದೊರೆಯುತ್ತವೆ.

ಯುದ್ಧದಲ್ಲಿ ಮಡಿದ ಕಾರಣದಿಂದ ಈ ವೀರ ತರುಣರನ್ನು ದೈವಗಳ ರೂಪದಲ್ಲಿ ಆರಾಧಿಸಲಾಯಿತು. ಇಂತಹ ಕಾಂತಾಬಾರೆ-ಬೂದಾಬಾರೆಯರ ಸಾಹಸ ಪರಾಕ್ರಮಗಳಿಗೆ ಸಂಬಂಧಿಸಿದಂತೆ ಅನೇಕ ಐತಿಹ್ಯ ರೂಪದ ವಿವರಗಳು ಪಾಡ್ದನದಲ್ಲಿ ಸಿಗುತ್ತವೆ. ಇಂತಹ ಕತೆಗಳಲ್ಲೆಲ್ಲ ಅತಿಶಯತೆಯ ಸ್ವರೂಪ ಮುಖ್ಯವಾಗಿದೆ. ಕಾಳಗದಲ್ಲಿ ಮಡಿದವರ ಸಾವು ಭೂತಗಳಾಗಿ ಪರಿವರ್ತನೆಗೊಳ್ಳಲು ಕಾರಣ ಎನ್ನುವುದು ಹೆಚ್ಚು ಸ್ಪಷ್ಟವಾದ

ಮಾತಂ. ಐತಿಹಾಸಿಕವಾಗಿ ಚೌಟ ಅರಸರ ಮತ್ತು ಸಾಮಂತರಸರ ನಡುವಿನ ಯುದ್ಧದಲ್ಲಿ ಪ್ರಸಂಗ ಬರುತ್ತದೆ. ಮುಖ್ಯವಾಗಿ 'ಅಗೆಲು' ಎನ್ನುವ ರೀತಿಯ ಗೌರವದ ಅರ್ಪಣೆ ಈ ದೈವಗಳಿಗೆ ಸಲ್ಲುತ್ತದೆ.

**ಪೌರಾಣಿಕ ಹಿನ್ನೆಲೆಯುಳ್ಳ ಭೂತಗಳ ಪಾಡ್ದನಗಳು** –

ಪಾಡ್ದನದಲ್ಲಿ ಭೂತಗಳ ಕಥೆಯನ್ನು ಒಳಗೊಂಡ ಪ್ರಕಾರದಲ್ಲಿ ಇನ್ನೊಂದು ಪ್ರಮುಖ ವರ್ಗವೆಂದರೆ ಪೌರಾಣಿಕ ಹಿನ್ನೆಲೆ ಇರುವ ಭೂತಗಳ ಪಾಡ್ದನಗಳು. ಪುರಾಣ ಯುಗದಿಂದ ಇಳಿದು ಬಂದವುಗಳೆಂದೋ ಬೇರೆ ಬೇರೆದೇವತೆಗಳ ಅವತಾರವೆಂದೋ ಉಳಿದವುಗಳೆಂದೋ ಕರೆಯಿಸಿಕೊಳ್ಳುವ ಅನೇಕ ದೈವಗಳಿವೆ. ಚಾಮುಂಡಿ, ರಕ್ತೇಶ್ವರಿ (ಲೆಕ್ಕೆಸಿರಿ), ಧೂಮಾವತಿ (ಜುಮಾದಿ) ಮುಂತಾದ ಶಕ್ತಿ ದೇವತೆಗಳು ದುರ್ಗೆಯ ಅಂಶದಿಂದ ಹುಟ್ಟಿಕೊಂಡವುಗಳು. ಗುಳಿಗ, ಭೈರವ, ವೀರಭದ್ರ ಮೊದಲಾದ ಭೂತಗಳು ರುದ್ರಾಂಶ ಉಳ್ಳವುಗಳು. ಪಂಜುರ್ಲಿಯ ಪಾಡ್ದನದಲ್ಲಿಯೂ ವಿಷ್ಣುವಿನ ಮೂಲಕದ ಸೃಷ್ಟಿ ಮತ್ತು ಶಿವನ ಪರಿವಾರಕ್ಕೆ ಅದು ಸೇರುವ ವಿಚಾರವನ್ನು ಹಿಂದೆ ನೋಡಿದ್ದೇವೆ. ಈ ರೀತಿ ಪೌರಾಣಿಕ ಸ್ವರೂಪವುಳ್ಳ ಭೂತಗಳ ಮಹಿಮೆಯನ್ನು ಸಾರುವ ಅನೇಕ ಪಾಡ್ದನಗಳು ಸಿಗುತ್ತವೆ. ಲೆಕ್ಕೆಸಿರಿ, ಜುಮಾದಿ, ಗುಳಿಗ, ಚಾಮುಂಡಿ ಈ ಭೂತಗಳ ಪಾಡ್ದನಗಳನ್ನು ಮುಖ್ಯವಾಗಿ ಈ ದೃಷ್ಟಿಯಿಂದ ನೋಡಬಹುದು. 'ಲಾವಣಿ ಚಕ್ರ'ದ (Ballad Cycle) ರೂಪವನ್ನು ಇಂತಹ ಪಾಡ್ದನಗಳಲ್ಲಿ ಸಾಮಾನ್ಯವಾಗಿ ಗುರುತಿಸಬಹುದು.

೧. **ಜುಮಾದಿ**

ತುಳುನಾಡಿನ ಭೂತಾರಾಧನೆಯ ಸಂಪ್ರದಾಯದಲ್ಲಿ ಪೌರಾಣಿಕ ಸಂಸರ್ಗದಿಂದ ಬಂದಿರುವ ಹೆಣ್ಣು ಭೂತಗಳಲ್ಲಿ 'ಧೂಮಾವತಿ' ಮುಖ್ಯವಾದುದು. ಈ 'ಧೂಮವತಿ' ಎನ್ನುವುದೇ ತುಳುವಿನಲ್ಲಿ 'ಜುಮಾದಿ' ಎಂದು ಆಗಿದೆ. ಜುಮಾದಿ ಭೂತವು ಬೇರೆ ಬೇರೆ ಹೆಸರುಗಳಲ್ಲಿ ಹೆಣ್ಣು ಭೂತವಾಗಿ ಕಾಣಿಸಿಕೊಳ್ಳುವುದು ಸಾಮಾನ್ಯವಾಗಿ ಸಿಗುತ್ತದೆ. ಪಿಲಿಚಾಮುಂಡಿ, ಮಹಾಕಾಳಿ, ಭದ್ರಕಾಳಿ, ಕಾಳಮ್ಮ ಮತ್ತು ದುರ್ಗೆಯ ಇನ್ನು ಕೆಲವು ಉಗ್ರರೂಪಗಳು ಈ ಜುಮಾದಿಯ ಬೇರೆ ಬೇರೆ ರೂಪಗಳು ಎಂದು ಭಾವಿಸಲಾಗಿದೆ. ಅಂತಹ ರೂಪಗಳನ್ನು ಮುಂದೆ ಗಮನಿಸಲಾಗುವುದು. ಜುಮಾದಿ ಭೂತಕ್ಕೆ ಸಂಬಂಧಿಸಿದ ಪಾಡ್ದನಗಳನ್ನು ಇಲ್ಲಿ ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಅಂತಹ ಅನೇಕ ಪಾಡ್ದನಗಳು ಸಿಗುತ್ತವೆ. ಅವುಗಳಲ್ಲಿ ಮೂಲಕ್ಕೆ ಸಂಬಂಧಿಸಿದ ಪಾಡ್ದನಗಳು ಬಹಳ ಕಡಿಮೆ. ಹೆಚ್ಚಿನ ಪಾಡ್ದನಗಳು ಜುಮಾದಿ ಭೂತದ ಮಹಿಮೆಯನ್ನು ಸಾರುತ್ತವೆ. ಈ ರೀತಿ ಮಹಿಮೆಯನ್ನು ಹೇಳುವ ಪಾಡ್ದನಗಳಲ್ಲಿ ಕೆಲವು ಬಾರಿ ಪ್ರಸರಣದ ಸ್ವರೂಪವು ದೊರೆಯುತ್ತದೆ. ಇಲ್ಲಿ ಮುಖ್ಯವಾಗಿ ಜುಮಾದಿ ಭೂತದ ೯ ಪಾಡ್ದನಗಳನ್ನು ಇಟ್ಟುಕೊಂಡು ಅಧ್ಯಯನವನ್ನು ಮಾಡಿದೆ. ಇವುಗಳಲ್ಲಿ ಮೊದಲನೆಯ ಒಂದು ಪಾಡ್ದನ ಜುಮಾದಿ ಭೂತದ ಉಗಮಕ್ಕೆ ಸಂಬಂಧಪಟ್ಟದ್ದು. ಉಳಿದ ೮ ಪಾಡ್ದನಗಳು ಜುಮಾದಿ ಭೂತದ ಮಹಿಮೆಯನ್ನು ಹೇಳುತ್ತವೆ. ಅವುಗಳಲ್ಲಿ ಕೆಲವು ಪಾಡ್ದನಗಳು ಕೇವಲ ಒಂದು ಘಟನೆಯ ಮೂಲಕ ಜುಮಾದಿ ಭೂತದ ಮಹಿಮೆಯನ್ನು ಸಾರಿದರೆ, ಇನ್ನು ಕೆಲವು ಪಾಡ್ದನಗಳಲ್ಲಿ ಭೂತದ ಸಂಚಾರ ರೂಪದ ಪ್ರಸರಣ ಮತ್ತು ಆ ಮೂಲಕದ ಮಹಿಮೆಯ ಪ್ರಸಾರ ವಿವರವಾಗಿ ಸಿಗುತ್ತದೆ. ತುಳುನಾಡಿನ ಬೇರೆ ಬೇರೆ ಊರುಗಳ ಉಲ್ಲೇಖ ಹಾಗೆಯೇ ಕೆಲವೊಮ್ಮೆ ಅರಸು ಮನೆತನಗಳ ಉಲ್ಲೇಖ ಇಂತಹ ಪಾಡ್ದನಗಳಲ್ಲಿ ಸಿಗುತ್ತವೆ.

ಜುಮಾದಿ ಎಂಬ ಹೆಸರನ್ನು ಗಮನಿಸಿದಾಗ ಅದು 'ಧೂಮಾವತಿ' ಎನ್ನುವುದರಿಂದ ಬಂತು ' ಎನ್ನುವುದು ಸ್ಪಷ್ಟ. 'ಧೂಮ' ಎಂದರೆ 'ಹೊಗೆ' ಎಂದು ಅರ್ಥ. ಆದ್ದರಿಂದ 'ಧೂಮಾವತಿ' ಅಂದರೆ 'ಹೊಗೆಯ

ದೇವತೆ' ಎಂದು ಅರ್ಥ ಆಗುತ್ತದೆ. ಧೂಮಾವತಿ ಅಥವಾ ಜುಮಾದಿ ಭೂತವು 'ಹೊಗೆಯ ವರ್ಣದ ಭೂತ' ಎನ್ನುವ ವಿಚಾರ ಜುಮಾದಿ ಭೂತದ ಮಹಿಮೆಯುನ್ನು ಹೇಳುವ ಅನೇಕ ಪಾಡ್ದನಗಳಲ್ಲಿ ಇದೆ. ಆದರೆ ಹೊಗೆಯ ವರ್ಣದ ಈ ಭೂತಕ್ಕೆ ಅಂದರೆ ಜುಮಾದಿಗೆ ಆ ಬಣ್ಣ ಯಾಕೆ ಬಂತು ಎನ್ನುವುದರ ಬಗ್ಗೆ ಪಾಡ್ದನಗಳಲ್ಲಿ ವಿವರಣೆ ಸಿಗುವುದಿಲ್ಲ- ಜುಮಾದಿ ಭೂತದ ಉಗಮುವನ್ನು ಹೇಳುವ $J_1$ ಪಾಡ್ದನದಲ್ಲಿಯೂ ಈ ಬಗ್ಗೆ ಏನೂ ಸಿಗುವುದಿಲ್ಲ. ಇಲ್ಲಿ ಅಧ್ಯಯನಕ್ಕೆ ಬಳಸಿರುವ ಜುಮಾದಿ ಭೂತಗಳ 9 ಪಾಡ್ದನಗಳ ವಿವರ ಈ ರೀತಿ ಇದೆ :

$J_1$—ಜುಮಾದಿ—1 : ಸಂ. ಕನರಾಡಿ ವಾದಿರಾಜ ಭಟ್ಟ ; ಪಾಡ್ದನಗಳು 1974.

$J_2$—ಜುಮಾದಿ—2 : ಅದೇ.

$J_3$—ಜುಮಾದಿ—3 ; (ಕರ್ನಕ) : ಅದೇ.

$J_3B$—ಕರ್ನಗೆ : ಸಂ. ಅಮೃತ ಸೋಮೇಶ್ವರ. 'ತುಳುಂಕೂಟ' ಮೇ 1972.

$J_4$—ಸಾರಾಲ ಜುಮಾದಿ ii : ಸಂ. A Manner–ಪಾಡ್ದನೊಳು 1886.

$J_5$—ಜುಮಾದಿ—1 ; ಅದೇ.

$J_6$—ಧೂಮಾವತಿ ; ಅದೇ.

$J_7$—ಜುಮಾದಿ : ಸಂ. A. C. Burnell – the devil worship of Tuluvas.

$J_8$—ದೇವುಪೂಂಜ ಪಾಡ್ದನ : ಅಪ್ರಕಟಿತ.

$J_9$—ಜುಮಾದಿ ಪಾಡ್ದನ : ಅಪ್ರಕಟಿತ.

## $J_1$ ಪಾಡ್ದನದ ಕನ್ನಡ ರೂಪಾಂತರ

"ಜಗತ್ತಿಗೆ ಬೇಕಾದ ಮಹಾತಾಯಿ. ಅವರು ಹೇಳಿದರು, 'ಭಕ್ತರನ್ನು ಪಾಲಿಸುತ್ತಾ ದುಷ್ಟರನ್ನುಸಂಹಾರ ಮಾಡಬೇಕು.' ಸಂಹಾರಮಾಡಿಕೊಂಡು ಬರುವಾಗ ದುಷ್ಟರ ಸಂಖ್ಯೆ ಹಾಗೆಯೇ ಉಳಿಯುತ್ತಾ ಬಂತು. ಅಂತಹ ಸಮಯದಲ್ಲಿ ದುಷ್ಟರ ಸಂಖ್ಯೆ ಹೆಚ್ಚುತ್ತಾ ಬರುವಾಗ, ಅವರನ್ನು ಸಂಹಾರ ಮಾಡಲು ನನ್ನ ಭಕ್ತಿ ಪ್ರಕಾರ ಧೂಮಾವತಿ ಹೆಣ್ಣನ್ನು ಸೃಷ್ಟಿಮಾಡಿ ದುಷ್ಟರನ್ನು ಸಂಹಾರ ಮಾಡುತ್ತಾ ಬರುವಾಗ, ದುಷ್ಟರಪಾಳ್ಯ ನಾಶವಾಗಲು, ನಿನ್ನನ್ನು ಸೃಷ್ಟಿಮಾಡಿದೆ. ಆ ಸಮಯದಲ್ಲಿ ದುಷ್ಟರನ್ನು ಸಂಹಾರಮಾಡುತ್ತಾ ಬರುವಾಗ ಭೂಮಿಯಲ್ಲಿ ನಾಲಗೆಯನ್ನು ಹಾಸಿಕೊಂಡಿರಬೇಕು. ನಾನು ದುಷ್ಟರ ಸಂಹಾರಮಾಡುತ್ತಾ ಬರುವಾಗ, ಅವರ ರಕ್ತವು ನಿನ್ನ ನಾಲಗಗೆ ಬೀಳಬೇಕು ಎಂದರು. ಅವರ ರಕ್ತವನ್ನು ಬಲಿ ತೆಗೆದುಕೊಂಡೆ. ನನಗೆ ಬೇಕೆಂದು ಸೃಷ್ಟಿ ಮಾಡಿದೆ. ಇನ್ನು ನೀನು ಮೇಲಿನ ಸ್ವಾಮಿ ಆದಿನಾರಾಯಣನು ಇದ್ದಲ್ಲಿಗೆ ಹೋಗು. ಪುನಃ ವರವನ್ನು ಕೊಡುತ್ತಾರೆ. ಆದಿನಾರಾಯಣನಲ್ಲಿಗೆ ಹೋಗುವಾಗ ಹದಿನಾರು ವರ್ಷದ ಹುಡುಗಿಯಾಗಿ ಹೋದೆ. ಆದಿನಾರಾಯಣನು ಸತ್ಯ ಹಿಡಿದು ಜಪ ಮಾಡುತ್ತಿದ್ದಾರೆ. ಜಪ ಮಾಡುತ್ತಿರುವಾಗ ನೇರ ಹೋಗಿ ಅವರೆದುರು ನಿಂತೆ. ನೀನು ಕೆಳಗಿನ ಭೂಲೋಕದಿಂದ ಮೇಲಿನ ಸ್ವರ್ಗಕೆ ಯಾಕೆ ಬಂದೆ ? ಹಾಗಾದರೆ ಕೆಳಗಿನ ಭೂಲೋಕದಲ್ಲಿ ಮಹಾತಾಯಿ ಮಂತ್ರದಿಂದ ಸೃಷ್ಟಿ ಮಾಡಿದರು, ಅವರು ಸಂಹಾರ ಮಾಡುವಾಗ ದುಷ್ಟರ ರಕ್ತವನ್ನು ಬಲಿ ತೆಗೆದುಕೊಂಡೆ. ನಾನು ಸೃಷ್ಟಿಸಿದೆ. ನನಗಿಂತ ದೊಡ್ಡ ಒಡೆಯ ಇದ್ದಾರೆ. ಮೇಲಿನ ಸ್ವಾಮಿಯವರ ಪಾದದ ಬಳಿಗೆ ಹೋಗು. ಪುನಃ ಅವರು ವರ ಕೊಡುತ್ತಾರೆ. ಬೇಕಾದ ಬಲಿ ಕೊಡುತ್ತಾರೆ ಎಂದರು. ಆ ಪ್ರಕಾರ ಸ್ವಾಮಿ, ನಿಮ್ಮ ಪಾದದ ಬಳಿಗೆ ಬಂದೆ.

ನಿಮ್ಮ ಜಪವನ್ನು ಕೆಡಿಸಿದೆ. ಇಂದು ನಾನು ಹಸಿವೆಯಿಂದ ಕ್ಷೀಣಳಾಗಿದ್ದೇನೆ. ನನಗೆ ಬೇಕಾದ ಬಲಿ ನೀವು ಕೊಡಬೇಕು. ಅಷ್ಟು ಮಾತು ಕೇಳಿದರು; ನಾರಾಯಣ ದೇವರು. ನನ್ನ ಸ್ನಾನದ ಕೆರೆಗೆ ಹೋಗು. ನನ್ನ ಸ್ನಾನದ ಕೆರೆಯಲ್ಲಿ ಕುಸುಮವುಂಟು. ಮೀನುಗಳಿವೆ. ಕುಸುಮವನ್ನು ಬಾಡಿಸಬೇಡ, ಮೀನುಗಳನ್ನು ಕೊಲ್ಲಬೇಡ, ನಿನ್ನ ಆಹಾರವನ್ನು ತೆಗೆದುಕೊಂಡು ಬಾ. ಸ್ನಾನದ ಕೆರೆಗೆ ಹೋಗಿ ನಾನು ಅಂಗ-ನೀರನ್ನು ತೆಗೆದುಕೊಂಡು ಬರುವಾಗ ಹಸಿವೆ ನಿಲ್ಲಲಿಲ್ಲ. ಬಾಯಾರಿಕೆ ನಿಲ್ಲಲಿಲ್ಲ. ಅಂಗ-ನೀರು ನಿಲ್ಲಲಿಲ್ಲ-ಎರಡನೇ ಬಾರಿ ಬಂದು ಹೇಳಿದೆ. ಹೇಳಿದಾಗ ಸಾವಿರ ಕುರಿ ಮತ್ತು ಸಾವಿರ ಆಡುಗಳನ್ನು ಕಡಿದು ಬಲಿ ಕೊಟ್ಟರು. ಆನೆ ಕಡಿದು ಬಲಿ ಕೊಟ್ಟರು ಆದಿನಾರಾಯಣ. ಹಸಿವೆ ಬಾಯಾರಿಕೆ ನಿಲ್ಲಲೇ ಇಲ್ಲ. ಅಂಗ ನೀರು ಆರಲೇ ಇಲ್ಲ. ನಾಲಗೆಗೆ ರುಚಿ ಸಿಗಲಿಲ್ಲ. ಹಲ್ಲಿನ ಕೊಬ್ಬು ನಿಲ್ಲಲಿಲ್ಲ. ನನಗೆ ಇನ್ನಾವ ಬಲಿ ಇದೆ ಎಂದು ಕೇಳಿದೆ. ಆದಿನಾರಾಯಣ ಹೇಳಿದರು-ಸಾವಿರ ಕುರಿ, ಸಾವಿರ ಆಡು, ಆನೆ ಕಡಿದು ಬಲಿಕೊಟ್ಟೆ. ನಿನಗೆ ಹೊಟ್ಟೆ ತುಂಬಲಿಲ್ಲ. ಬಾಯಾರಿಕೆ ನಿಲ್ಲಲಿಲ್ಲ. ಹಾಗಾದರೆ ಆನೆ ಕಟ್ಟಿ ಆಳಬಹುದು, ಹೆಣ್ಣು ಕಟ್ಟಿ ಆಳಲು ಸಾಧ್ಯವಿಲ್ಲ: ಹೇಳಿದರು. ತನ್ನ ಕೈಯ ಕಿರುಬೆರಳನ್ನು ಕಡಿದರು. ಆದಿನಾರಾಯಣರು ನರಬಲಿ ಕೊಟ್ಟರು. ಇನ್ನು ನೀನು ಭೂಲೋಕಕ್ಕೆ ಹೋಗು, ಕಂಚಿಯ ಹಣೆ, ನೂಲಿನ ಏಣಿಯಲ್ಲಿ ಕೆಳಗೆ ಭೂಲೋಕಕ್ಕೆ ಇಳಿಸಿ ಕೊಟ್ಟರು. ನೀನು ಹೋಗು, ದೇವರ ಸ್ಥಳದಲ್ಲಿ ನರರಿಂದ ಆಹಾರ ತೆಗೆದುಕೊ ಎಂದರು. ಕೆಳಗೆ ಭೂಲೋಕಕ್ಕೆ ಬಂದು ಪಂಜಕಲ್ಲು ಒಡೆದು ಪಂಜಜುಮಾದಿ ಎನಿಸಿಕೊಂಡೆ. 'ಸಾರಾಲ್' ಕೊಡುವಾಗ ಸಾರಾಲ್ ಜುಮಾದಿ ಎನ್ನಿಸಿಕೊಂಡೆ. ಮಲೆಯಲ್ಲಿ ಮಂಜದಲ್ಲಿ ಭೋಗ ಕೊಡುವಾಗ ಮಲೆ ಜುಮಾದಿ ಎನ್ನಿಸಿಕೊಂಡೆ. ಮುಖ ಕಾಡಿಗೆ ಹಚ್ಚಿದೆ, ಮುರುಳು ಜುಮಾದಿ ಎನಿಸಿಕೊಂಡೆ. ಜಗತ್ತಿನಲ್ಲಿ ದೇವರ ಸ್ಥಳ ನೋಡಿದೆ. 'ಕಟ್ಟಿಲ್' ಇಳಿದು ತೆರೆದ ಬಾಗಿಲಿನಲ್ಲಿ ನರರಿಂದ ಆಹಾರ ತೆಗೆದುಕೊಂಡೆ."

## $J_2$ ಪಾಡ್ದನದ ಕನ್ನಡ ರೂಪಾಂತರ

"ಮೇಲಿನ ಕಲ್ಯ ಕೆಳಗಿನ ಕಲ್ಯಗದ ಬೀಡು. ಕಲ್ಯ ಕೊಂಡಾರಿಗರು, ಕಾಪೆಕೊಂಡಾರಿಗರು, ಭೂತದ ಸೂಡುವ ದೈವವಿಲ್ಲವೆಂದು ಹೇಳಿದರು. ಸಹಾಯಕ್ಕೆ ದೈವ ಇಲ್ಲವೆಂದು ಹೇಳಿದರು. ಮೂಲಕ್ಕೆ ಭೂತ ಇಲ್ಲವೆಂದು ಹೇಳಿದವರು. ದೈವವನ್ನು ತೆಗೆದುಕೊಂಡು ಬರಲು ಹೋಗಬೇಕೆಂದು ಹೇಳಿದರು. ಎಣ್ಣೆ ಹಚ್ಚಿದರು. ಸ್ನಾನ ಮಾಡಿದರು. ಮೈಯೊರೆಸಿದರು, ಮಡಿ ಉಟ್ಟರು, ಸರಪಳಿ ಶ್ರೇಷ್ಠ ಬಟ್ಟೆಯನ್ನು ತೊಟ್ಟರು. ಅಂಚು ಇರುವ ದೋತ್ರವನ್ನು ಉಟ್ಟರು. ಮುತ್ತಿನ ಮುದ್ರೆಯಿರುವ ಉಂಗುರ ಇಟ್ಟರು, ಕೈಗೆ ಬಂಗಾರದ ಬಳೆಯಿಟ್ಟರು. ಶೃಂಗಾರವಾದರು. ಮುಂದಿನಿಂದ ಸಂಗೀತ, ಹಿಂದಿನಿಂದ ಸೇವಕರು, ಬಾರಗ ಪಂಕ್ತಿದ ಕಲ್ಯ ಕೊಂಡಾರಿಗರು. ಕಾಪೆಕೊಂಡಾರಿಗರು, ಭೂತವನ್ನು ತೆಗೆದುಕೊಂಡು ಬರಲು ಹೋದರು. ನಮ್ಮ ಊರಿನಲ್ಲಿ ಈಗ ಕಳ್ಳರು ಹೆಚ್ಚುತ್ತಾ ಬಂದಿದ್ದಾರೆ, ಆಭರಣಗಳಲ್ಲಿ ಕುಂಡಲ, ನೇಗಿಲಿನಲ್ಲಿ ಮೊನೆ ಉಳಿಯಲಿಲ್ಲ. ಕಳ್ಳರ ಸಾಪಿನಿಂದ ಹೊಳೆಯಾಚೆ ಎಳನೀರು. ಅಡಿಕೆ ಮರದಲ್ಲಿ ಅಡಿಕೆ ಉಳಿಯಲಿಲ್ಲ, ಮನೆಯಲ್ಲಿ ಹೆಣ್ಣು ಉಳಿಯಲಿಲ್ಲ. ಹಾಗಿರುವುದರಿಂದ ದೈವ ತರಲು ಹೋದರು. ಹೊಳೆಯಾಚೆ ಬಂದಿದೆ ಗಂಡು. ಹೊಳೆಯೀಚೆ ಬಂದಿದೆ ಹೆಣ್ಣು. ಹೊಳೆ ಸೇತುವೆ ದಾಟಿದರು. ದೊಡ್ಡ ಹೊಳೆ ದಾಟಿದರು. ಹೊಳೆಯಾಚೆಯು 'ಉಸ್ಮಂದ' ಬದಿಗೆ ಹೋದರು, ಒಬ್ಬರು ನೇಕರ ಪಟ ಮಾಡುತ್ತಿದ್ದರು. ಮುಖ ನೋಡಿದ. ಎಲ್ಲಿಂದ ಬಂದದ್ದು, ಎಲ್ಲಿಗೆ ಹೋಗಬೇಕು ಎಂದ ನೇಕರ. ಕಲ್ಯಗದ ಬೀಡಿನಿಂದ ಬಂದುದ್ದು, ಏನಾಗಬೇಕು ಎಂದು ಕೇಳಿದರು. ನಿನ್ನೆ ಬಂದಿದ್ದರೆ ಅಚ್ಚ ಪಚ್ಚಡವನ್ನು ಕೊಡುತ್ತಿದ್ದೆ. ಅಚ್ಚ ಪಚ್ಚಡೆ ಬೇಡವೆಂದರು. ಪಾದಕಾಣಿಕೆ ಕೊಡುತ್ತಿದ್ದ ಎಂದರು. ಪಾದಕಾಣಿಕೆ ಬೇಡವೆಂದರು. ಕಲ್ಯಗದ ಬೀಡಿನಲ್ಲಿ ಭೂತ ಇಲ್ಲ. ಭೂತ ಕೊಟ್ಟು ಕಳುಹಿಸಬೇಕು ಎಂದರು. ಕಲ್ಯಕೊಂಡಾರಿಗರು ಭೂತವನ್ನು ನೆನೆದರು. ಯಾವ ಭೂತ ಬೇಕು, ಯಾವ

ಭೂತ ಬೇಡ ಎಂದರು ನೆಕರ. 'ಪಿಲಿಚಾಮುಂಡಿ, ಭೂತಬೇಕೋ ?' ಬೇಡವೆಂದರು. ಪಂಜುರ್ಲಿ ಭೂತ ಬೇಕೋ ? 'ಬೇಡ'ವೆಂದರು, 'ಮರ್ಳು ಭೂತ ಜುಮಾದಿ ಬೇಕು' ಎಂದರು. ಕಲ್ಯಕೊಂಡಾರಿಗರು ಕಾಪೆಕೊಂಡು ವರ್ಗಡೆ. ಹಾಳೆಯನ್ನು ತೆಗೆದರು. ಒಂದು ವೀಳ್ಯದೆಲೆ ತೆಗೆದರು. ಹಾಳೆಯಲ್ಲಿದ್ದ ಪಂಚೋಲೆ ತೆಗೆದರು. ಮಾವಿನೆಲೆಯಲ್ಲಿಟ್ಟ ಮುಂಡಾಲೆ ತೆಗೆದರು. ಒಂದು ಅಡಿಕೆ ತೆಗೆದರು. ಐದು ಪೋಳು ಮಾಡಿದರು. ಮಂತ್ರ ಮಾಡಿದರು. ಒಂದು ವೀಳ್ಯದೆಲೆ ತೆಗೆದರು. ಭೂತದ ಬಹಿರೂಪ ಬರೆದರು. ಗಂಡು ರೂಪ ಹೆಣ್ಣು ರೂಪ ಬರೆದರು. ಒಂದು ಎಳೆ ಓಂಗಾರ ತೆಗೆದರು. ಅದನ್ನು ಕೊಟ್ಟರು. ಧೂಮ್ರ ಜುಮಾದಿಯನ್ನು ಕೊಟ್ಟರು. ನಿನ್ನ ಧೂಮ್ರ ಜುಮಾದಿಯನ್ನು ಆಳುವಾಗ ಜಾಗ್ರತೆ ಎಂದರು. ಧೂಮ್ರ ಜುಮಾದಿಯನ್ನು ತೆಗೆದುಕೊಂಡು ಬಂದರು. ತಂದು, ಪಡುಬದಿಯ ಚಾವಡಿಯಲ್ಲಿ ನಂಬಬೇಕು. ಪಟ್ಟೆ, ಪಕ್ಷ ಬೇಕು. ಸೆಗಣಿ ಸಾರಿಸಬೇಕು. ನಂದಾದೀಪ ಉರಿಸಬೇಕು : ಇದು ಹಬ್ಬ ಕೊಡಬೇಕು. ವರ್ಷಕ್ಕೆ ಆರು ತಿಂಗಳಿಗೆ ಭೂತದ ಭಾರೀ ಮಹಿಮೆ ಕಂಡುಬರಬಹುದು ಎಂದರು. ಭೂತವನ್ನು ತಂದರು, ಪಡುಚಾವಡಿಯಲ್ಲಿ ನಂಬಿದರು. ಒಂದು ವರ್ಷದಲ್ಲಿ ಆರು ತಿಂಗಳಿನ ಬಲಿ ಕೊಟ್ಟರು. ಭೂತ ಮಹಿಮೆಯನ್ನು ತಡೆಯಲಾಗುವುದಿಲ್ಲವೆಂದು ಹೇಳಿದರು ಕಲ್ಯ ಕೊಂಡಾರಿಗರು. ಮನೆ ಮನೆಯಲ್ಲಿ ದುಃಖದ ಕೂಗು. 'ಈ ಭೂತದ ಮಹಿಮೆಯಿಂದ ತಡೆಯಲಾಗುವುದಿಲ್ಲ' ಎಂದರು. ತಾಮ್ರದ ತಂಬಿಗೆ ಮಾಡಿಸಿದರು. ತಂಬಿಗೆಯಲ್ಲಿ ಭೂತವನ್ನು ತುಂಬಿಸಿದರು. ಬೆಟ್ಟುಗದ್ದೆಯಿಂದ ಹೊಂಡ ತೆಗೆಸಿದರು, ಭೂತವನ್ನು ತಾಮ್ರದ ತಂಬಿಗೆಯಲ್ಲಿ ಹಾಕಿ ಹೂಗಿದರು. ತಂಬಿಗೆಯ ಬಾಯಿ ಮುಚ್ಚಿದರು. ಮಣ್ಣು ಮುಚ್ಚಿದರು. ಹತ್ತು ಹನ್ನೆರಡು ವರ್ಷಗದ್ದೆಯನ್ನು ಬಂಜರಾಗಿಬಿಟ್ಟರು. ಹತ್ತು ಹನ್ನೆರಡು ವರ್ಷದ ಬಳಿಕ ಕಾನದ ಕಟದ ಮನುಷ್ಯರನ್ನು ಕರೆಸಿದರು. ಕಲ್ಯ ಕಟದನಲ್ಲಿ ಹಾರೆಕೊಂಡಾರಿಗರುಕಾಪೆಗೊಂಡು ಪೆರ್ಗಡೆ. ಬೆಟ್ಟುಗದ್ದೆ ಸಾಗುವಳಿ ಮಾಡಬೇಕೆಂದರು. ಕಾನದನಲ್ಲಿ ಕೊಟ್ಟರು. ಕಾನದ ಮತ್ತು ಕಟದರು ಬಳಿಯ ಮಣ್ಣು ತೆಗೆಯಲು ಹೋದರು. ಬಳಿಯ ಮಣ್ಣು ತೆಗೆಯುತ್ತಾ ಹೋಗುವಾಗ ಹಾರೆಯ ಬುಡಕ್ಕೆ ತಂಬಿಗೆ ಸಿಕ್ಕಿತು. ಅದನ್ನು ತೆಗೆದರು. ಕಾನದೆ ಕಟದೆಯರು ತಿಳಿನೀರಿನಿಂದ ಕೆಸರು ನೀರಿಗೆ ಇಟ್ಟರು. ಇದು ನಮಗೆ ಸಿಕ್ಕಿದ ನಿಧಿ ಎಂದರು. ಬಾಯಿ ಒಡೆದು ನೋಡಿದಾಗ ಹಾರೆಗಳು ಮುಖಕ್ಕೆ ಹಾರಿದವು. ದಿಕ್ಕು ದಿಕ್ಕಿಗೆ ಹೋದವು."

## $J_3$ ಪಾಡ್ದನದ ಕನ್ನಡ ರೂಪಾಂತರ

"ಮೇಲಿನ ಮಲಾರ ಕೆಳಗಿನ ಮಲಾರದ ಮಾಪ್ರು ಪರೆಂದರು, ಚೆಂಕ್ಕು ಸುಂಗುಲಾಯ ಪರೆಂದರು. ಮೇಲಿನ ಮಲಾರದ ಬೀಡಿನ ಬಲ್ಲಾಳರು, ಪಾಪು ಪರೆಂದರು ಬಲ್ಲಾಳರ ಒಳಗಿನ ಹೆಣ್ಣು ಕರ್ನಕ. ಹೊರಗಿನ ಹೆಣ್ಣು ಕಬರಾಗ. ಅಡುಗೆ ಸಿದ್ಧತೆ ಮಾಡಿದರು ಸೊಸೆ, ಅನ್ನಕ್ಕೆ ಅನ್ನ ಅಕ್ಕಿ ಹಾಕಿದರು. ಸಣ್ಣ ಗೆಜ್ಜೆಕತ್ತಿ ಹಿಡಿದರು. ಬುಟ್ಟಿಯಲ್ಲಿ ಹಾಕಿದರು. ಹಿತ್ತಲಿಗೆ ಹೋದರು. ಮುಳ್ಳಿನಗೇಟು ತೆಗೆದರು. ಬೀಳಲು ಹಿಡಿದು ತೊಂಡೆಕಾಯಿ ಕೊಯ್ದರು. ಬೀಳಲು ಹಿಡಿದು ಅಲಸಂಡೆ ಕೊಯ್ದರು. ಬನ್ನ ಎಕ್ಕರ್ಪೆ ಕೊಯ್ದರು. ದೊಡ್ಡ ಕುಂಬಳಕಾಯಿ ಕೊಯ್ದರು, ಬೂದಿ ಕುಂಬಳಕಾಯಿ ಕೊಯ್ದರು. ಬುಟ್ಟಿ ತುಂಬಿತು. ಹಿತ್ತಲಿನಿಂದ ಹೊರಗೆ ಬಂದರು. ಮುಳ್ಳಿನ ಗೇಟು ಸರಿಸಿದರು. ಹೀಗೆ ನೋಡುವಾಗ ಬಾಳೆಯಗೊನೆ ಒಂದೊಂದು ಹಣ್ಣಾಗಿದೆ. ಹಣ್ಣಾದುದನ್ನು ತಿಂದರು, ಕಾಯಿಗಳನ್ನು ಬುಟ್ಟಿಯಲ್ಲಿ ಹಾಕಿಕೊಂಡರು. ಮಾಪ ಜುಮಾದಿಗೆ ಕೊಡಿ ಕಟ್ಟಿದ ಬಾಳೆ ಅದು. ಅದು ಸೊಸೆಗೆ ಗೊತ್ತಿಲ್ಲ. ತನ್ನ ಬೀಡಿಗೆ ನಡುವಿನ ಚಾವಡಿಗೆ ಬಂದರು. ಬುಟ್ಟಿ ಆಕಡೆ ಇಟ್ಟರು. ಒಳಗೆ ಹೋದರು. ಬೆಂದ ಅನ್ನದ ಗಂಜಿ ತೆಗೆದರು. ಕಂಚಿಯ ಮೆಟ್ಟುಕತ್ತಿ ತಂದರು. ತಾಮ್ರದ ತಪಲೆಯಲ್ಲಿ ನೀರು ಇಟ್ಟುಕೊಂಡರು. ವೈಯಾರದಲ್ಲಿ ತರಕಾರಿ ಹಚ್ಚಿದರು. ಮಸಾರದಲ್ಲಿ ರುಬ್ಬಿದರು. ನೀರು ಬೆರಸಿ ಒರೆಯಲ್ಲಿಟ್ಟರು. ತೆಂಗಿನಕಾಯಿ

ಜಿರೆಸಿ ಸಾವಿರ ಬಗೆಯ ಪದಾರ್ಥ, ಹುಳಿ ಮೆಣಸು ಜಿರೆಸಿ ಸಾವಿರ ಬಗೆ ಪದಾರ್ಥಮಾಡಿದರು. ಅಡುಗೆಯ ಸಿದ್ಧತೆ ಮಾಡಿದರು.

"ಯಶಾರದು ಮಾವ ಬನ್ನಿ" ಮೈಗೆ ಎಣ್ಣೆ ಹಚ್ಚಿದರು. ತಲೆಗೆ ನೈಯಣ್ಣೆ ಹಾಕಿದರು. ಮೈಗೆ-ಮೈಯಣ್ಣೆ ಹಾಕಿದರು. ಬಿಸಿನೀರು ಕೊಟಡಿಗೆ ಹೋದರು. ಸಾವಿರ ಕೊಡ ಬಿಸಿನೀರು ಮಾಡಿದರು. 'ಸ್ನಾನಕ್ಕೆ ಬನ್ನಿ ಮಾವ' ಎಂದರು. ಸೊಸೆ ಕೈಯಲ್ಲಿ ತುಂಡು ಸಾಬೂನು ಹಿಡಿದುಕೊಂಡರು. ಗೆರಟೆಯಲ್ಲಿ ಸೀಗೆ. ಮುಂದಿನಿಂದ ಮಾವ, ಹಿಂದಿನಿಂದ ಸೊಸೆ. ಬಿಸಿನೀರಿನ ಕೊಟಡಿಗೆ ಹೋದರು. ಸಾಬೂನು ಹಾಕಿದರು. ಒಮ್ಮೆ ಶುದ್ಧವಾದರು. ಸಾವಿರ ಕೊಡ ಬಿಸಿ ನೀರಿನ ಕೊಟಡಿಯಿಂದ ಬಂದರು. ಪಡುಬದಿಯ ಕೋಣೆಗೆ ಹೋದರು. ಜಪ ಮಾಡಿದರು. ಜಪದಿಂದ ಎದ್ದರು. ಕುಳಿತುಕೊಳ್ಳಲು ಮಣೆ ಇಟ್ಟರು. ಸೊಸೆ 'ಬಂಗ' ಬಾಳೆಯ ಕೊಡಿ ಎಲೆ ಹಾಕಿದರು. ನೀರು ಚಿಮುಕಿಸಿದರು. ಅನ್ನ ಬಡಿಸಿದರು. ಪದಾರ್ಥ ಬಡಿಸಿದರು. ಒಂದು ಹಿಡಿ ಅನ್ನ ಉಂಡರು. ಒಂದು ಹಿಡಿಯಲ್ಲಿ ಕಲ್ಲು ಸಿಕ್ಕಿತು. ಮತ್ತೊಂದು ಹಿಡಿ ಅನ್ನ ಉಂಡರು, ಸೆಗಣಿ ಸಿಕ್ಕಿತು. ದಡಕ್ಕನೆ ಎದ್ದರು. ಅವರ ಜುಟ್ಟಿನಲ್ಲಿ ಹಿಡಿದರು. ಕೈಸೋಲುವವರೆಗೆ ಗುದ್ದಿದರು. ಕಾಲು ಸೋಲುವವರೆಗೆ ತುಳಿದರು. ಕುತ್ತಿಗೆಯ ಸರ ಹಾರಿಹೋಯಿತು. ಕೈಯ ಬಳೆ ಹುಡಿಯಾಯಿತು. ಮೂಗಿನ ನತ್ತು ತುಂಡಾಗಿ ಬಿತ್ತು. ಬರುತ್ತ ಬಡಿದಕೊಳ್ಳುತ್ತಾ ಆಲದ ಮರಕ್ಕೆ ಹತ್ತಿದರು ಕರ್ನಕ. ಹತ್ತಿದ್ದನ್ನು ನೋಡಿ ಮಾವನೂ ಹತ್ತಿದರು. ಮಾವ ಮರದಲ್ಲಿ ಹೋಗುವಾಗ ಅವರು ಕೊಂಬೆ ಕೊಂಬೆಯಲ್ಲಿ ಹೋದರು. ಮಾವ ಕೊಂಬೆ ಕೊಂಬೆಯಲ್ಲಿ ಪೋಗುವಾಗ ಅವರು ಎಲೆ ಎಲೆಯಲ್ಲಿ ಹೋದರು. ಎಲೆಎಲೆಯಲ್ಲಿ ಹೋಗಿ ತಾವರೆಯ ಕೆರೆಗೆ ಹಾರಿದರು. ಮಾವನೂ ಹಾರಿದರು. ಎಳೆದು ಮೇಲೆ ಹಾಕಿದರು. ಎಳೆದು ಮೇಲೆ ಹಾಕುವಾಗ ಜೀವ ಹೋಗಿದೆ. ಹೊಳೆಯಾಚೆಯ ಮಾವಿನ ಮರ ಹಾಗೂ ಹೊಳೆಯಾಚೆಯ ಹಲಸಿನ ಮರವನ್ನು ಕಡಿದರು. ಕಟ್ಟಿಗೆ ಮಾಡಿಸಿದರು. ಮಸಣದ ಗದ್ದೆಯಲ್ಲಿ ಕಾಷ್ಟ ತಯಾರಿಸಿದರು. ಹೆಣವನ್ನು ಹೊತ್ತುಕೊಂಡು ಹೋದರು. ಮುಂದಿನಿಂದ ಬೆಂಕಿ, ಹಿಂದಿನಿಂದ ಹೆಣ, ಕಾಷ್ಟಕ್ಕೆ ಮೂರು ಸುತ್ತು ಬಂದರು. ಹೆಣವನ್ನು ಕಾಷ್ಟದಲ್ಲಿಟ್ಟರು. ತಲೆ ಬದಿಯಲ್ಲಿ ಬೆಂಕಿ ಕೊಟ್ಟರು. ಕಾಲಿನ ಬದಿಯಲ್ಲಿ ಬೆಂಕಿ ಕೊಟ್ಟರು. ಆಕಾಶಕ್ಕೆ ಹೊಗೆ, ಭೂಮಿಗೆ ಮರೆ ಒರಗಿಸಿದರು. ಗದ್ದೆಬಿಟ್ಟು ಅಂಚಿನಲ್ಲಿ ನಿಂತರು. ನಡುಭಾಗ ಹೊತ್ತಿಕೊಂಡು ಬರುವವರೆಗೆ, ಕೆರೆಗೆ ಇಳಿದರು. ದೇಹ ಶುದ್ಧವಾದರು. ದುಃಖದ ಗಂಜಿ ಉಣಲು ಕುಳಿತರು. ಕಿಟಕಿಯ ತೀರದಲ್ಲಿ ದುಃಖದ ಗಂಜಿ ಉಂಡರು. ಗರುಡ ಪಕ್ಷಿಯ ರೂಪವಾಗಿ, ಜುಮಾದಿಯು ಕರ್ನಕಳ ಕರುಳನ್ನು ತೆಗೆದನು. ಎಲೆಯಲ್ಲಿ ಕಟ್ಟಿದನು. ಕಿಟಕಿಯಲ್ಲಿ ಬಂದನು. ಅವರು ಊಟ ಮಾಡುವ ಪಾತ್ರೆಗೆ ಹಾಕಿದನು. ತನ್ನ ಮಾಂಸವನ್ನು ತಾನು ತಿನ್ನಬೇಕು ಎಂದನು. ಇದು ಏನಪ್ಪ ಕಟ್ಟು ಎಂದು ಬಿಡಿಸಿದರು. ಬಿಡಿಸಿ ನೋಡುವಾಗ ಕರುಳು, 'ಅಯ್ಯೋ ಜುಮಾದಿಯೇ, ನೀನು ಹೀಗೆ ಮಾಡುವಿಯೆಂದು ಎಣಿಸಲಿಲ್ಲವಲ್ಲ' ಎಂದರು. 'ತನ್ನ ಮಾಂಸವನ್ನು ತನಗೆ ತಿನ್ನಿಸಿದೆಯೋ' ಎಂದರು. "ಅಯ್ಯೊ ಜುಮಾದಿಯೇ ನನ್ನ ಕಣ್ಣು ಕಟ್ಟಿಗೆ ಹಾಕಿದೆ' ಎಂದರು.

## $J_3$ B ಕರ್ನಗೆ ಪಾಡ್ದನದ ಕನ್ನಡ ರೂಪಾಂತರ

"ಆಲಂಪಡ್ಕ ಐನೂರು ಆಳು, ಮುಗೆರನಾಡ ಮುನ್ನೂರು ಆಳು ಸೇರಿದ್ದಾರೆ. ಪೊಳಲಿಯ ದೇವಿಯ ರಾಜಂಗಣದಲ್ಲಿ ನ್ಯಾಯ ಮುಗಿಯಲಿಲ್ಲ, ಕೂಟ ಚದುರಲಿಲ್ಲ. ಮರುದಿನ ಮುಲಾರ ಜುಮಾದಿಯ ಅಂಗಣದಲ್ಲಿ ಕೂಟ ನಿರ್ಧಾರವಾಯಿತು, ಮಾಪ್ರ ಪರಂದರು ಕೂಟಕ್ಕೆ ಹೋದರು. ಅವರ ಸೊಸೆ ಬೆಳಿಗ್ಗೆಯೆದ್ದು ಗೃಹಕೃತ್ಯಗಳನ್ನೆಲ್ಲ ಮಾಡಿದಳು. ಅಡುಗೆಯನ್ನು ಮಾಡಿದಳು. ಬೇರೆ ಬೇರೆ ತರಕಾರಿಗಳನ್ನು ಕೊಯ್ಯಲ್ದು ತರಕಾರಿ ಹಿತ್ತಲಿಗೆ ಹೋದಳು. ಆ ತರಕಾರಿಗಳಿಗೆ ಕಟ್ಟಿದ ಜುಮಾದಿ ಭೂತದ ಕೊಡಿ (ಮಾಂತ್ರಿಕರಕ್ಷೆ) ಯನ್ನು ಕತ್ತರಿಸಿ ಹಾಕಿದಳು. ಅಲಸಂಡೆ, ಸಾರಪೀರೆ, ಸಿಹಿಕುಂಬಳ, ಬದನೆ ಮುಂತಾದ ತರಕಾರಿಗಳನ್ನು

ಕೊಯ್ದಳು. ಈರೀತಿ ಅವಳು ಕೊಯ್ಯುವಾಗ ತೆಂಗಿನ ಮರದ ತುದಿಯಿಂದ ಅವಳಲ್ಲಿ ಕರೆದು ಹೇಳಿತು. 'ಕರ್ನಗ, ಕೊಯ್ಯಬೇಡ. ಒಡೆಯರು ಅದಕ್ಕೆ ಮಲಾರ ಜುಮಾದಿಯ ಕೊಡಿ ಕಟ್ಟಿದ್ದಾರೆ.' ಆಗ ಕರ್ನಗಳು 'ಮಲಾರ ಜುಮಾದಿಯು ಸ್ಥಾನದಲ್ಲಿ ಇರುತ್ತಾನೆ. ಅಣ್ಣ ಬರುವಾಗ ನನಗೆ ಪಲ್ಯ ಸಿದ್ಧವಾಗಬೇಕು.' ಎಂದು ಹೇಳಿ, ತರಕಾರಿ ಕೊಯ್ದು ಪಲ್ಯ ಮಾಡಿ, ಸಿದ್ಧ ಮಾಡಿದಳು. ಮಾಪು ಪರಂದರು ಮನೆಗೆ ಬಂದರು. ಸ್ನಾನ ಮಾಡಿ ಊಟಕ್ಕೆ ಕುಳಿತರು. ಅನ್ನದಲ್ಲಿ ಅವರಿಗೆ ಒಂದು ಹಿಡಿ ತಲೆ ಕೂದಲು ಸಿಕ್ಕಿತು. ಇನ್ನೊಮ್ಮೆ ಉಣ್ಣುವಾಗ ಒಂದು ಹಿಡಿ ಕಲ್ಲು ಸಿಕ್ಕಿತು. ಅವರು ಎದ್ದರು. ಕರ್ನಗಳ ಜುಟ್ಟು ಹಿಡಿದು ಬೇಕಾದಷ್ಟು ಶಿಕ್ಷೆ ಕೊಟ್ಟರು. 'ನನಗೆ ಇನ್ನು ಶಿಕ್ಷೆ ಕೊಟ್ಟರೆ ಮಲಾರ ಜುಮಾದಿಯ ಆಣೆ ಉಂಟು" ಎಂದಳು. ಮಲಾರ ಜುಮಾದಿ ಇದ್ದರೆ, ಅವನ ಸ್ಥಾನದಲ್ಲಿ ಇರುತ್ತಾನೆ. ಎಂದು ಹೇಳಿ ಅವರು ಕರ್ನಗಳಿಗೆ ತಡೆಯಲಾರದ ಶಿಕ್ಷೆ ಕೊಟ್ಟರು. ಶಿಕ್ಷೆ ತಡೆಯಲಾರದೆ ಕರ್ನಗೆ ಬಾವಿಗೆ ಬಿದ್ದಳು ಮಾಯವಾದಳು."

### $J_4$ (ಸಾರಾಲ ಜುಮಾದಿ) ಪಾಡ್ದನದ ಕನ್ನಡ ರೂಪಾಂತರ

ಸಾರ ಬೊಳಿಯೂರು ಊರಿತ್ತು. ಸಾವಿರ ಜನರು ಅಲ್ಲಿ ಬಂದು ಚಾವಡಿಯನ್ನು ಕಟ್ಟಿದ್ದರು. ಕಂಚಿನ ಪಾತ್ರೆಯನ್ನು ತೆಗೆದುಕೊಂಡು ಸಾರಾಲ ಜುಮಾದಿಯು ಕಾಲು ತೊಳೆಯಿತು. ಬೆಳ್ಳಿಯ ಪಾತ್ರೆಯಲ್ಲಿ ಮುಖ ತೊಳೆಯಿತು. ಬಾಗಿಲಲ್ಲಿಟ್ಟಿದ್ದ ವೀಳ್ಯದೆಲೆಯನ್ನು ಜಗಿಯಿತು.

ಅಲ್ಲಿಂದ ಹೊರಟು ಬ್ರಹ್ಮಸ್ಥಾನದ ಬಳಿಗೆ ಹೋಯಿತು; ಮುಂದೆ ಕರಿಯ ಎಂಬ ಊರನ್ನು ಹಾದು ಕಂದೇಲ್ ಎಂಬಲ್ಲಿಗೆ ಬಂತು. ಅಲ್ಲಿಂದ ಬ್ರಾಹ್ಮಣರು ಕಟ್ಟಿಸಿದ ದೇವಾಲಯದ ದಾರಿಯಾಗಿ, ಅಡ್ಡದ ಬೈಲನ್ನು ದಾಟಿಮುಂಗೆರ್ನಾಡನ್ನು ತಲುಪಿತು. ಅಲ್ಲಿ ಆರು ಭೂತಗಳನ್ನು ಎರಡು ದೇವರನ್ನು ಅದು ಕಂಡಿತು. ಮುಂದೆ ಮದ್ರಾಳ ಬೀಡನ್ನು ದಾಟಿ ಈರಂದ ಬೆಟ್ಟಿಗೆ ಚಾವಡಿಗೆ ಬಂತು. ಅಲಂಗಾರು ಎಂಬಲ್ಲಿನ ಮಠವನ್ನು ಸ್ವಾಧೀನಪಡಿಸಿ ಪಾಣೆ ಮಂಗಳೂರನ್ನು ಹಾದು ಪಣಂಬೂರಿನ ದೇವರ ದರ್ಶನವನ್ನುಮಾಡಿತು. ನಂದಾವರದ ದೇವರನ್ನು ಊರ ಮಣೇಲಿನ ಬ್ರಹ್ಮಭೂತಗಳನ್ನು ಅದು ಸಂದರ್ಶಿಸಿತು. ಪಾಣೆ ಮಂಗಳೂರಿನಲ್ಲಿ ಶೆಟ್ಟಿಗಳು ಕಟ್ಟಿಸಿದ ಬಸ್ತಿ ಮತ್ತು ಬ್ರಾಹ್ಮಣರು ಕಟ್ಟಿಸಿದ ದೇವಸ್ಥಾನಗಳನ್ನು ಹಾದು ಕಂಚುಗಾರರ ಕೇರಿಗೆ ಹೋಗಿ ಅಲ್ಲಿಂದ ಸಮಗಾರರ ರಸ್ತೆಗೆ ಹೋಯಿತು- ಮುಂದೆ ನಂದನವನದಲ್ಲಿ ಕುಜುಂಬದೇರೆ ಮತ್ತು ತಂಕರ ಬೈದ್ಯರೆಂಬವರಲ್ಲಿ ಕಾಯಿಲೆಯನ್ನುಂಟು ಮಾಡಿತು. ಅವರು ಜೋಯಿಸರನ್ನು ವಿಚಾರಿಸಿದರೆ :

"ಇದು ಜುಮಾದಿ ಭೂತದ ಉಪದ್ರ" ಎಂದು ಪ್ರಶ್ನೆಯಲ್ಲಿ ತೋರಿಬಂತು. 'ಈ ಗ್ರಾಮದಲ್ಲಿ ಅವನಿಗೆ ಉತ್ಸವ ನಡೆಸಿದರೆ ಕಾಯಿಲೆ ವಾಸಿಯಾಗುತ್ತದೆ."

ಊರವರು ಸೇರಿ, ಕೋಳಿಜೂಜು ನಡೆಯುವ ಹಲಸಿನ ಮರದ ಅಡಿಯಲ್ಲಿದ್ದ ಚಾವಡಿಯಲ್ಲಿ ಜುಮಾದಿಗೆ ಬಲಿಯನ್ನು ಅರ್ಪಿಸಿದರು.

"ನನಗೆ ಆಹಾರ ಸಾಕಾಷ್ಟಾಯಿತು; ಆದರೆ ನನಗೊಂದು ಸ್ಥಾನವು ಆಗಬೇಕು" ಎಂದಿತು ಭೂತ.

ಊರವರೆಲ್ಲ ಒಟ್ಟುಸೇರಿ ಒಂದು ಸಮಿತಿಯನ್ನು ನೇಮಿಸಿದರು. ನಂದನವನದಲ್ಲಿ ಒಂದು ಸ್ಥಾನ ಕಟ್ಟಿದರು. ಧ್ವಜ ಸ್ಥಂಭವನ್ನು ರಥವನ್ನು ತಯಾರಿಸಿದರು. ಅನಂತರ ಅಲ್ಲಿ ಒಂದು ಔತಣವನ್ನು ಏರ್ಪಡಿಸಿದರು.

• ಜುಮಾದಿಯು ಅಲ್ಲಿಂದ ಹೊರಟು, ಸಾವಿರ ಮನೆಗಳಿದ್ದ ಸಾರಪುಲಿಂಕಾಡಿಮಾರು ಎಂಬಲ್ಲಿಗೆ ಬಂತು. ಅಲ್ಲಿಂದ ಕಲ್ಲಿಬೊಟ್ಟ ಕಾಯೆರಿ ದಾರಿಯಾಗಿ ಉಮ್ಮನ ಬೊಟ್ಟು ಹೊಳೆಯನ್ನು ದಾಟಿ ಅಂಬಡಾಡಿ ಮಾರ್ಗವಾಗಿ

ಮುಂಟಮೆ ಎಂಬಲ್ಲಿ ಅರಳಿ ಮರದ ಹತ್ತಿರ ನಿಂತಿತು. ಅದರೊಡನೆ ಬಂಟ ಎಂಬ ಸೇವಕ ಭೂತವೂ ಇತ್ತು. ಅಲ್ಲಿಂದ ಸಂದಾರ್ ಬೆಟ್ಟು ಬೀಡಿಗೆ ಹೋಯಿತು. ಅಲ್ಲಿ ಕೋಚಾಳ್ವ ಬಲ್ಲಾಳರು ವಾಸಿಸುತ್ತಿದ್ದರು. ಬೀಡಿನಲ್ಲಿ ಒಡನೆಯೇ ರೋಗಗಳುಂಟಾದವು. ಬಲ್ಲಾಳರು ಜೋಯಿಸರೊಡನೆ ಕೇಳಿದಾಗ ಜುಮಾದಿ ಭೂತ ಎಂಬುದು ತಿಳಿಯಿತು.

"ಜನರಿಗೆ ಕ್ಷೇಮವಾಗ ಬೇಕೆ ? ಹಾಗಾದರೆ ಜುಮಾದಿಗೆ ಆಹಾರ ಕೊಡಬೇಕು. ಹೂವಿನ ಪೂಜೆ ನಡೆಸ ಬೇಕು" ಎಂದರು ಜೋಯಿಸರು.

ಬಲ್ಲಾಳರು ಇದಕ್ಕೊಪ್ಪಿ ಪ್ರತಿಜ್ಞೆ ಮಾಡಿದರು, ಕಾಯಿಲೆ ಗುಣಮುಖವಾಯಿತು. ಅವರು ಅನಂತರ ಕ್ರಮವಾಗಿ ಜುಮಾದಿಯ ಆರಾಧನೆ ನಡೆಸಿದರು.

ಮುಂದಿನ ವರ್ಷ ಕೋಚಾಳ್ವರಿಗೆ ಜುಮಾದಿ ಎಂದಿತು : "ನೀನೊಬ್ಬನೇ ಈ ಜಾತ್ರೆ ನಡೆಸುವುದು ಸರಿಯಲ್ಲ. ನೀನೂ ಅಂಬಡಾಡಿ ಮಾಗಣೆಯ ಜನರೂ ಒಟ್ಟಾಗಿ ನನಗೊಂದು ಸ್ಥಾನ ಕಟ್ಟುವುದು ಒಳ್ಳೆಯದು."

ಹಾಗೆಯೇ ಅಂಬಡಾಡಿ ಗ್ರಾಮಸ್ಥರೂ ಕೋಚಾಳ್ವರೂ ಒಟ್ಟುಸೇರಿ ಲಕ್ಕಿರೆ ಎಂಬಲ್ಲಿ ಬಂಡೆಯ ಮೇಲೆ ಸ್ಥಾನಕಟ್ಟಿ ವರ್ಷಂಪ್ರತಿ ಜಾತ್ರೆ ನಡೆಸುತ್ತ ಬಂದರು.

ಒಂದೆರಡು ವರ್ಷಗಳ ನಂತರ ಜುಮಾದಿಯು "ನನ್ನ ಸ್ಥಾನಕ್ಕೆ ಇದು ಯೋಗ್ಯವಾದ ಸ್ಥಳವಲ್ಲ. ಬೇರೊಂದು ಕಡೆ ನನಗೆ ಸ್ಥಾನವನ್ನು ಕಟ್ಟಿಕೊಡಿ" ಎಂದಿತು.

ಇದನ್ನು ಕೇಳಿ ಕೋಚಾಳ್ವರು ಅಂಬಡಾಡಿಯ ಗ್ರಾಮಸ್ಥರು ಒಟ್ಟಾಗಿ ಮಾಗಲಿಮಾರ್ ಎಂಬಲ್ಲಿ ಒಂದು ಸ್ಥಾನವನ್ನು ಕಟ್ಟಿಸಿ ಜಾತ್ರೆಯನ್ನು ಜರುಗಿಸಿದರು.

ಮೂರನೇ ವರ್ಷ ಜುಮಾದಿ ಅಲ್ಲಿಂದ ಹೊರಟಿತು. ಕೋಡಿಗ್ರಾಮ ಮಾಗಣೆಯ ದಾರಿಯಾಗಿ ಪರಾರಿ ಗುತ್ತು ಎಂಬಲ್ಲಿಗೆ ಹೋಗಿ ಅಲ್ಲಿ ಜನರಿಗೆ ಕಾಯಿಲೆಯನ್ನುಂಟು ಮಾಡಿತು. ಪ್ರಶ್ನೆಯಲ್ಲಿ ಕೇಳುವಾಗ ಅದರ ಉಪದ್ರವವೆಂದು ಅಲ್ಲಿನ ಜನರಿಗೆ ಕಂಡುಬಂತು.

"ಹಾಗಾದರೆ ನಾವೇನು ಮಾಡಲಿ ? ಎಂದು ಅವರು ಜೋಯಿಸರನ್ನು ವಿಚಾರಿಸಿದರು.

ಜೋಯಿಸರೆಂದರು : "ನಿಮ್ಮ ಗ್ರಾಮದಲ್ಲಿ ಅದಕ್ಕೊಂದು ಸ್ಥಾನ ಕಟ್ಟಿಸಬೇಕು. ಅದೇ ಅದರ ಅಪೇಕ್ಷೆ."

ಇದನ್ನು ಕೇಳಿ ಗ್ರಾಮದ ಪ್ರತಿಷ್ಠಿತರೆಲ್ಲ ಒಂದು ದಿನ ನೆರೆದು ವಿಚಾರ ವಿನಿಮಯ ನಡೆಸಿದರು.

"ಜುಮಾದಿಗೆ ಸ್ಥಾನ ಬೇಕಂತೆ. ಅದಕ್ಕಾಗಿ ರೋಗ ಹಬ್ಬಿದೆ. ಪ್ರಶ್ನೆಯಲ್ಲಿ ಹಾಗೆಂದು ಕಂಡು ಬಂದಿದೆ." ಎಂದರು ಗ್ರಾಮ ಮುಖ್ಯಸ್ಥರು ಉಳಿದವರಿಗೆ. ಗ್ರಾಮಸ್ಥರು ಆಗ ಭೂತಕ್ಕೆ ಕೈಮುಗಿದು ಗೃಹಸ್ಥರನ್ನು ಕುರಿತ್ತು ಹೀಗೆಂದರು; 'ಇಂದು ನಿಮ್ಮ ಕೆಲವರ ಮನೆಗಳಲ್ಲಿ ಮಾತ್ರ ರೋಗ ಬಂದಿರಬಹುದು. ಆದರೆ ನಾಳೆ ಇಡೀ ಗ್ರಾಮಕ್ಕೆ ಹಬ್ಬಬಹುದು. ಆದ್ದರಿಂದ ನೀವು ಪರಾರಿ ಗುತ್ತು ಮತ್ತು ಕೋಡಿ ಗ್ರಾಮ ಮಾಗಣೆಯ ಮುಖ್ಯಸ್ಥರು ಒಟ್ಟಿಗೆ ಕಟ್ಟಿಸಿ.'

ಪರಾರಿಯ ಬಳಿ ಗುಂಪ್ಡದ ತುದಿಯಲ್ಲಿ ಸ್ಥಾನಕಟ್ಟಿಸಿದರು. ಜಾತ್ರೆಯನ್ನು ನಡೆಸಿದರು.

ಮುಂದಿನ ವರ್ಷ ಜುಮಾದಿ ಭೂತವು ಕೋಡಿಗ್ರಾಮ ಮಾಗಣೆಯಿಂದ ಹೊರಟು ಕಲ್ಲಿಬೆಟ್ಟು ಸ್ಥಾನ

ಎಂಬಲ್ಲಿಗೆ ಹೋಯಿತು. ಅಲ್ಲಿ ಸೇಂದಿ ತಯಾರಿಸುವ ವರ್ಗದ ದೇಯಿ ಬೈದ್ಯತಿ ಎಂಬುವಳ ಮನೆಯಲ್ಲಿ ಕಾಯಿಲೆಯನ್ನುಂಟು ಮಾಡಿತು. ಅಲ್ಲಿಯಂಪ ಪ್ರಶ್ನೆಯಲ್ಲಿ ಜುಮಾದಿ ಭೂತದ ಉಪದ್ರವವೆಂದುಕಂಡುಬಂತು. ಆಕೆಯೂ ಗ್ರಾಮಸ್ಥರೂ ಕೂಡಿ ಒಂದು ಸ್ಥಾನವನ್ನು ಕಟ್ಟಿಸಿ ಜಾತ್ರೆ ನಡೆಸಿದರು.

ಜುಮಾದಿ ಭೂತವು ಪರಂಗಿಪೇಟೆಯ ವರದೇಶ್ವರ ದೇವಸ್ಥಾನ, ಸೋಮನಾಥ ಕಟ್ಟಡಗಳನ್ನು ಹಾದು, ಆಡ್ಯಾರಗುತ್ತಿನ ದುಗ್ಗ ಭಂಡಾರಿಗಳ ಮನೆಯಲ್ಲಿ ಕಾಯಿಲೆಯನ್ನುಂಟು ಮಾಡಿತು. ಅವರಿಗೆ ಜುಮಾದಿಯಪೀಡೆ ಎಂದು ತಿಳಿದು ಗ್ರಾಮಸ್ಥರ ಅಪ್ಪಣೆ ಪಡೆದು ಒಂದು ಹಳ್ಳದ ಬದಿಯಲ್ಲಿ ಸ್ಥಾನಕಟ್ಟಿಸಿ ಜಾತ್ರೆಮಾಡಿಸಿದರು. ಮುಂದಿನ ವರ್ಷ ಅದು ಕಣ್ಣೂರು ಬೀಡಿನ ಬಲ್ಲಾಳರ ಮನೆಯಲ್ಲಿ ಪೀಡೆ ಕೊಟ್ಟಿತು. ಪಶ್ನೆಯಲ್ಲಿ ನೋಡಿದಾಗ ಜುಮಾದಿಗೆ ಬೀಡಿನಲ್ಲೊಂದು ತೂಗುಮಂಚ ಬೇಕೆಂದು ತೋರಿತು. ತೂಗುಮಂಚ ಕಟ್ಟಿದೊಡನೆ ಬಲ್ಲಾಳರ ಮನೆಯಲ್ಲಿ ಕಾಯಿಲೆ ನಿವಾರಣೆಯಾಯಿತು. ಬಲ್ಲಾಳರು ಭೂತವನ್ನು ಬರೇ ಹೂಗಳಿಂದ ಪೂಜೆ ಮಾಡತೊಡಗಿದರು.

ಅಲ್ಲಿಂದ ಅದು ಮಂಗಳೂರಿನ ಬಳಿಯ, ಜಪ್ಪುವಿಗೆ ಹೋಯಿತು. ಅಲ್ಲಿದ್ದ ಕಾನೆಕರಿಯ ಎಂಬ ಕಡವನ್ನು ಕೋಚರೈ ಮತ್ತು ಸೋಮಪ್ಪ ರೈ ಎಂಬುವರು ನಡೆಸುತ್ತಿದ್ದರು. ಅವರಿಗೂ ಪೀಡೆ ಕೊಟ್ಟಿತು. ಆಗ ಅವರು ಊರವರೊಡನೆ ಅದಕ್ಕೆ ಒಂದು ಸ್ಥಾನವನ್ನು ಕಟ್ಟಿಸಿದರು.

ಹೀಗೆಯೇ ಮುಂದೆ ಅದು ಅತ್ತಾವರಕ್ಕೆ ಹೋಗಿ ಪೆರ್ಗಡೆಬೆಟ್ಟು ಎಂಬಲ್ಲಿಂದ ಭಂಡಾರವನ್ನು ಸ್ವಾಧೀನ ಪಡಿಸಿತು. ಅಲ್ಲಿನ ಜನರಿಗೆ ಪೀಡೆ ಕೊಟ್ಟಿತು. ಅವರು ಒಟ್ಟಾಗಿ ಸ್ಥಾನವನ್ನು ಕಟ್ಟಿಸಿ ವರ್ಷಂಪ್ರತಿ ಅದರ ಜಾತ್ರೆ ನಡೆಸತೊಡಗಿದರು.

**೨೫ ಪಾಡ್ದನದ ಕನ್ನಡ ರೂಪಾಂತರ**

ಮೊಗರುನಾಡು ಸಾವಿರ ಸೀಮೆಗೆ ಬಂದೆ. ಬಂಟ್ವಾಳದಲ್ಲಿ ನಂದನ ಹಿತ್ತಿಲು ದಾಟಿದೆ. ಅಂಬಡಾಡಿ ಐಂದಾಲ ಪಟ್ಟಕ್ಕೆ ಬಂದೆ. ಐವರು ಭೂತಗಳಿಗೆ ಸ್ಥಾನ, ಒಬ್ಬರು ಬ್ರಹ್ಮರಿಗೆ ಮಾಡಲ್ಲಿ ತೆಗೆದುಕೊಂಡೆ. ಅಲ್ಲಿಂದ ಪಂಚನಡ್ಕದ ಗೋಳಿಯನ್ನು ದಾಟಿದೆ. ಬೆಜಣದ ಪದವು ಏರಿದೆ. ಅಮುಣಜದ ಆದಿಬೆಟ್ಟು ಬ್ರಹ್ಮರನ್ನು ನೋಡಿದೆ. ಪೊಯ್ಯೆಪಿಲ ಪೊಡಿಕರ ಗೋಳಿದಾಟಿದೆ. ಪೊಳಲಿಯ ಪರಮೇಶ್ವರಿ ದೇವಿಯನ್ನು ನೋಡಿದೆ. ಪೊಳಲಿಯ ಮೂರು ಸಾವಿರ ಜನರು ಸೇರಿದರು. ಪೊಳಲಿಯ ಗೋಪುರದ ಬಾಗಿಲಿನಲ್ಲಿ ಚಪ್ಪರದ ಬಲಿ ತೆಗೆದುಕೊಂಡೆ. ಸ್ಥಾನ ಬೇಕು ಎಂದು ಹೇಳಿದೆ. ಉರಿಪಾದಯ ಸ್ಥಾನವನ್ನು ವಶಕ್ಕೆ ತೆಗೆದುಕೊಂಡೆ. ದೊರೆಯ ವರೆಗೂ ತನ್ನ ಪ್ರಭಾವವನ್ನು ತೋರಿಸುತ್ತೇನೆಂದು ನಿರ್ಧರಿಸಿದೆ. ಅಡ್ದನದ ಹೊಳೆಯನ್ನು ದಾಟಿದೆ. ಇಟ್ಟೆಯಿ ಗ್ರಾಮವನ್ನು ದಾಟಿದೆ. ಕಾಳಿ ಬೋಳೂರು ದಾಟಿದೆ. ಮೂಳೂರಿನ ಮುಂಡಿತ್ತಾಯ ಭೂತವನ್ನು ನೋಡಿದೆ. ನಾಲೆಯ ಕಡವುದನ್ನು ದಾಟಿದೆ. ಅಣಜ ಬಣ್ಣಾಕುಳವನ್ನು ನೋಡಿದೆ, ಬಲ್ಲ ಮಲೆಯ ಗುಡ್ಡೆಯ ಸ್ಥಾನವನ್ನು ವಶಕ್ಕೆ ತೆಗೆದುಕೊಂಡೆ. ಅಮೃತೇಶ್ವರ ದೇವರನ್ನು ನೋಡಿದೆ. ದೇವರ ಶಿರಿಯಂಬಲದಲ್ಲಿ, ಅಂಗಣದಲ್ಲಿ ಮೆಚ್ಚಿ ಬಲಿಬೇಕು ಎಂದು ತೆಗೆದುಕೊಂಡೆ. ಪಡುಅಡಿಯ ಸ್ಥಾನ ಬೇಕು ಎಂದು ತೆಗೆದುಕೊಂಡೆ. ಪಾಳತಿಕಟ್ಟೆಯಲ್ಲಿ ಚಪ್ಪರದ ಬಲಿ ತೆಗೆದುಕೊಂಡೆ. ಡೋಣಂಜ ಕಲ್ಲಿಮುಗುರು ದಾಟಿದೆ. ಐಂದಾಲ ಪಟ್ಟಕ್ಕೆ ಬಂದು ಸಂಪೆಂಜದ ಬೀಡಿಗೆ ಬಂದೆ. ಅಲ್ಲಿ ಸಾರಕುಳ್ಳಾಯನನ್ನು ನೋಡಿದೆ. ಸಮಾಜದಲ್ಲಿ ಸಿಡುಬು ರೋಗವನ್ನು ತಂದು ಹಾಕಿದೆ. ಇದು ಏನು ಸೋಜಿಗ ಈ ಕಲಿಯುಗದಲ್ಲಿ ಬಂತು ಎಂದು ಪಂಚಾಂಗದಲ್ಲಿ ಕೇಳಿದರು. ಆಗ ಈ ರಾಜ್ಯದಲ್ಲಿ ದೇವರಿಗೆ ಸಮಾನವಾದ ಒಂದು ದೈವ ಬಂದಿದೆ. ಒಂದು ದೈವಕ್ಕೆ ಏನು ಬೇಕು ? ಎಂದು ಕೇಳಿದರು. ಸಂಪೆಂಜದ ಬೀಡಿನಲ್ಲಿ ಮುತ್ತುಗಳಿಂದ ಅಲಂಕಾರಗೊಂಡ ತೂಗುವ ಉಯ್ಯಾಲೆ ಕಟ್ಟಿಸಬೇಕು ಎಂದು ಹೇಳಿದೆ. ಐಂದಾಲ ಬಲ್ಲಾಳನು ಹಿಡಿದ ಖಡ್ಗ, ಪಾಣೆಮುಟ್ಟಾರಿನ ಸ್ಥಾನ, ಏರುವ ಧ್ವಜ, ಎಳೆಯುವ ಬಂಡಿ ಬೇಕು ಎಂದು ಹೇಳಿದೆ. ಅಲ್ಲಿ ದೇವರು ಎಂದು ಕರೆಸಿ ಕೊಳ್ಳುವವನು ಆದಿನಾಥದೇವನು. ನಾನು ಆದಿನಾಥ ಜುಮಾದಿ ಎಂದು ಹೇಳಿಸಿಕೊಂಡೆ.

**$J_6$ ಪಾಡ್ದನದ ಕನ್ನಡ ರೂಪಾಂತರ :**

ಒಂದು ದಿನ ಚೌಟಅರಸನು ಗದ್ದುಗೆಯಲ್ಲಿ ಕುಳಿತುಕೊಂಡಿದ್ದಾಗ ಅಲ್ಲಿ ಹೊರಗಡೆ ಇದ್ದ ಒಂದು ಗೋವೆ ಮಾವಿನ ಮರದಲ್ಲಿ ಒಂದು ಗೆಲ್ಲು ಎಲ್ಲರೂ ನೋಡುತ್ತಾ ಇದ್ದ ಹಾಗೆ ಮುರಿದು ಕೆಳಕ್ಕೆ ಬೀಳುತ್ತದೆ. 'ಈ ರೀತಿ ಬಹಳ ವಿಶೇಷವಾಗಿದ್ದ ಆ ಮಾವಿನ ಮರದಿಂದ ತನ್ನಿಂದ ತಾನಾಗಿಯೇ ಗೆಲ್ಲು ಮುರಿದುಬಿದ್ದುದರಲ್ಲಿ ಏನೋ ಆಶ್ಚರ್ಯವಿದೆ. ಇದು ಊರಿಗೆ ಒಳ್ಳೆಯದಲ್ಲ. ಇದರಲ್ಲಿ ಏನೋ ಕಾರಣಿಕ ಮಹಿಮೆ ಇದೆ' ಎಂದು ಅಲ್ಲಿ ನೆರೆದ ಸಭೆಯವರು ಚೌಟರಲ್ಲಿ ಹೇಳಿದರು. ಆಗ ಚೌಟರಸನು ಈ ವಿಚಾರದಿಂದ ಚಿಂತಾಕ್ರಾಂತನಾಗಿ ಸೋಮನಾಥ ದೇವರಿಗೆ ಭಕ್ತಿಯಿಂದ ಪ್ರಾರ್ಥನೆ ಮಾಡಿ ಅರಿಕೆಯನ್ನು ಮಾಡಿಕೊಂಡನು. ಆ ಹೊತ್ತಿಗೆ ಚೌಟನ ಅರಮನೆಯಲ್ಲಿ ಇನ್ನೊಂದು ವಿಚಿತ್ರ ಸಂಗತಿ ನಡೆಯಿತು. ಅವನ ಕಂಬಳದ ಕೋಣಗಳು ಎರಡು ಕೂಡಾ ಹಠಾತ್ ಕಾಯಿಲೆಯಿಂದ ಮಲಗಿ ಏನೂ ತಿನ್ನದೆ ಕುಡಿಯದೆ ತಲೆಯನ್ನು ಕೆಳಗೆ ಹಾಕಿ ರಕ್ತ ಕಾರಲು ತೊಡಗಿದವು. ಇದರಿಂದ ಭಯಗೊಂಡ ಚೌಟ ಅರಸನು ಅಗ್ರಹಾರದ ಬ್ರಾಹ್ಮಣರಲ್ಲಿ ಇದರ ನಿಮಿತ್ತವನ್ನು ಕೇಳಿದನು. ಆ ಬ್ರಾಹ್ಮಣನು ತನ್ನ ಬಲ್ಮೆ ಶಾಸ್ತ್ರದ ಆಧಾರದಿಂದ ಕವಡೆಗಳನ್ನು ಲೆಕ್ಕಮಾಡಿ "ಒಂದು ಕ್ರೂರ ಭೂತ, ಹೊಗೆಯ ಬಣ್ಣದ್ದು ಧೂಮಾವತಿ ಎಂಬ ಹೆಸರಿನ ಭೂತವು ಕಾಣಿಸುತ್ತದೆ. ಇದೇ ಭೂತವು ನಿಮ್ಮ ಅರಮನೆಯ ಮುಂದಿನ ಮಾವಿನ ಮರದ ಗೆಲ್ಲನ್ನು ಮುರಿದದ್ದು. ಇದೇ ಭೂತವೇ ನಿಮ್ಮ ಕೋಣಗಳಿಗೆ ಕಾಯಿಲೆಯನ್ನು ತಂದು ಹಾಕಿದ್ದು. ಅದಕ್ಕಾಗಿ ನೀವು ಇನ್ನು ಮೇಲೆ ಆ ಧೂಮಾವತಿ ಭೂತವನ್ನು ನಂಬಿ ಸ್ಥಿರ ಮಾಡಬೇಕು, ಆ ರೀತಿ ಮಾಡಿದರೆ ನಿಮಗೆ ಒಳ್ಳೆಯ ಪರಿಣಾಮವಾಗುತ್ತದೆ. ಇಲ್ಲದಿದ್ದರೆ ಅದು ನಿಮ್ಮನ್ನು ಬಿಡುವುದಿಲ್ಲ" ಎಂದು ಹೇಳಿದನು. ಆಗ ಅರಸನು ಬ್ರಾಹ್ಮಣರಲ್ಲಿ ಆ ಭೂತವನ್ನು ನಂಬುವ ಕ್ರಮ ಹೇಗೆ ಎಂದು ಕೇಳಿದನು, ಆಗ ಬ್ರಾಹ್ಮಣನು – "ಅರಸನೇ, ನಿಮ್ಮ ಅರಮನೆಯ ಉತ್ತರಭಾಗದಲ್ಲಿ ಸ್ಥಾನವನ್ನು ಕಟ್ಟಿಸಿ ಮಂಚವನ್ನು ಇಟ್ಟು, ಕಬ್ಬಿಣದ ಸಂಕೋಲೆಯ ಉಯ್ಯಾಲೆಯನ್ನು ಮಾಡಿಸಿ, ಮಣಿ ಕಡ್ಸರೆ (ಖಡ್ಗ) ಮಾಡಿಸಿ, ಶುದ್ಧದಲ್ಲಿ ಒಳ್ಳೆಯ ದಿನ ನೋಡಿ ಭೂತದ ಪಾತ್ರಿಯನ್ನು ತರಿಸಿ, ಭೂತವನ್ನು ನೆಲೆಮಾಡಿ, ನಂಬಿಕೊಂಡು ಭೋಗ ಕೊಟ್ಟರೆ ನಿಮಗೆ ಎಲ್ಲವು ಒಳ್ಳೆಯದಾಗುತ್ತದೆ" ಎಂದು ಹೇಳಿದನು. ಚೌಟ ಅರಸನು ಹಾಗೆಯೇ ಮಾಡುತ್ತೇನೆ ಎಂದು ಹೇಳಿದಾಗ ಕೂಡಲೇ ಆ ಕೋಣಗಳ ಕಾಯಿಲೆ ಗುಣವಾಯಿತು. ಚೌಟ ಅರಸನು ಹೇಳಿದ ಮಾತಿನಂತೆಯೇ ಧೂಮಾವತಿ ಭೂತವನ್ನು ಸ್ಥಿರಮಾಡಿ, 12 ಕೋಳಿ, 24 ಎಳನೀರು, 24 ತೆಂಗಿನಕಾಯಿ, 24 ಕವಳಿಗೆ ವೀಳ್ಯದೆಲೆ, 24 ಅಡಿಕೆ – ಈ ಸಾಮಗ್ರಿಗಳಿಂದ ತಂಬಿಲವನ್ನು ಮಾಡಿ ವೈಭವದಿಂದ ಆ ಭೂತವನ್ನು ನಂಬಿದರು

ಧೂಮಾವತಿ ಭೂತವು ಇನ್ನು ಪಶ್ಚಿಮ ರಾಜ್ಯಕ್ಕೆ ಹೋಗಬೇಕು ಎಂದು ನಿರ್ಧರಿಸಿ ವೇಣೂರಿಗೆ ಇಳಿದುಕೊಂಡು ಬಂತು. ಅಲ್ಲಿ ಜೈನ ಗೊಮ್ಮಟ ಮೂರ್ತಿ ಇತ್ತು. ಈ ಜೈನರಿಗೆ ತನ್ನ ಮಹಿಮೆಯನ್ನು ತೋರಿಸಬೇಕೆಂದು ಧೂಮಾವತಿ ಭೂತವು ನಿರ್ಧರಿಸಿತು. ಗೊಮ್ಮಟನಿಗೆ ಅಭಿಷೇಕ ಮಾಡುವ ಪೂಜೆಯ ಇಂದ್ರರಿಗೆ ಈ ಭೂತವು ಹೊಡೆದು ಅವರಿಗೆ ಮೂರ್ಛೆ ತಪ್ಪುವಂತೆ ಮಾಡಿತು. ನೆರೆದ ಜೈನರೆಲ್ಲ ಗಾಬರಿಯಾದಾಗ, ಅವರ ಮುಖ್ಯಸ್ಥನು, 'ಇದು ಏನೋ ಒಂದು ಉಪದ್ರ ಇರಬೇಕು. ಇದನ್ನು ನಿಮಿತ್ತದಲ್ಲಿ ನೋಡಬೇಕು' ಎಂದು ಹೇಳಿದನು. ಹಾಗೆಯೇ ಎಲ್ಲರೂ ಬಲ್ಮೆಯವನ ಹತ್ತಿರ ಹೋಗಿ, ಈ ಘಟನೆಯ ನಿಮಿತ್ತವನ್ನು ಕೇಳಿದರು. ಆಗ ಬಲ್ಮೆಯವನು ತನ್ನ ವಿದ್ಯೆಯ ಬಲದಿಂದ ನಿಮಿತ್ತ ನೋಡಿ ಹೀಗೆ ಹೇಳಿದನು – "ಹೊಗೆಯ ಬಣ್ಣದ ಭೂತದ ಉಪದ್ರ ಕಠಿಣವಾಗಿ ಕಾಣುತ್ತಿದೆ ಇದೇ ಭೂತವು ಪೂಜೆಯ ಇಂದ್ರನಿಗೆ ಪೆಟ್ಟು ಕೊಟ್ಟಿರುವುದು ಇದು ಬಹಳ ಮಹಿಮೆಯ ಭೂತ. ಅದು ಈಗ ಬಸದಿಯ ಹೊರ ಅಂಗಣದಲ್ಲಿ ಗಾಳಿ ಆಕಾರದಲ್ಲಿ ತಿರುಗುತ್ತಾ ಇದೆ." ಇಷ್ಟು ಹೊತ್ತಿಗೆ ಅಲ್ಲಿ ಡೋಲು ಹೊಡೆಯುವ ಮೊಯಿಲಿಯೊಬ್ಬನಿಗೆ ಮೈ ನಡುಗಲು ಸುರುವಾಯಿತು. ನಡುಗುತ್ತಾ ನಡುಗುತ್ತಾ ಅವನು ತನ್ನ ಮೈಗೆ ತಾನೇ ಕೈಯಿಂದ ಹೊಡೆಯುತ್ತಾ ತನ್ನ ತಲೆಯನ್ನು ಕಲ್ಲಿಗೆ

ತಾಗಿಸುತ್ತಾ ಇದ್ದಾಗ, ನೆರೆದ ಜೈನರಿಗೆಲ್ಲ ಆಶ್ಚರ್ಯವೂ ಭಯವೂ ಆಯಿತು. ಅವರು ಇದರ ಪರಿಹಾರಕ್ಕಾಗಿ ಸೋಮನಾಥ ದೇವರನ್ನು ಪ್ರಾರ್ಥಿಸಿದಾಗ ನಡುಗುವ ಪೊಯ್ಲಿಯು ಈ ರೀತಿ ಬಾಯಿ ಬಿಟ್ಟನು – "ನಾನು ಜುಮಾದಿ ಎಂಬ ಹೆಸರಿನ ಹೊಗೆಯ ಭೂತ. ನಿಮ್ಮ ರಾಜ್ಯವನ್ನು ನೋಡಬೇಕು ಎಂದು ಬಂದು, ಗೊಮ್ಮಟ ಪ್ರತಿಮೆಯನ್ನು ನೋಡಿ, ನಿಮ್ಮ ಕಡೆಯ ಮನುಷ್ಯನನ್ನು ಬೀಳಿಸಿದೆ. ಯಾಕೆಂದರೆ ನಿಮ್ಮ ದೇವರ ಉತ್ತರ ಭಾಗದಲ್ಲಿ ನನಗೆ ಒಂದು ನೆಲೆಯಾಗಬೇಕು." ಆಗ ಅಲ್ಲಿದ್ದ ಜೈನರು – "ನಾವು ಇಷ್ಟರವರೆಗೆ ನಮ್ಮ ಬಸದಿಯ ಹತ್ತಿರ ಬೇರೆ ಭೂತಗಳನ್ನು ನಂಬಿದವರಲ್ಲ. ಇನ್ನು ಹೊಸದಾಗಿ ಹೇಗೆ ನಂಬುವುದು ? ನಮ್ಮ ಗುರು ಬಂದರೆ ಬಹಳ ಸಿಟ್ಟುಗೊಂಡಾನು. ಇದಕ್ಕೆ ಏನು ಮಾಡುವುದು" ಎಂದರು. ಆಗ ಭೂತವು ಬಹಳ ಸಿಟ್ಟಾಗಿ ಇನ್ನೊಬ್ಬ ಜೈನನನ್ನು ಹೊಡೆದು ಕೆಳಕ್ಕೆ ಹಾಕಿತು. ಅವನಿಗೆ ಕೈಕಾಲು ಅಲುಗಾಡಿಸಲಾಗಲಿಲ್ಲ. ಬಾಯಿಯಲ್ಲಿ ಮಾತಾಡಲೂ ಆಗಲಿಲ್ಲ. ಅವನು ಹೊರಳಿ ಹೊರಳಿ ಎದೆಗೆ ಗುದ್ದಲು ತೊಡಗಿದನು. ಆಗ ಆ ಜೈನರು "ನಾವು ಈ ಭೂತಕ್ಕೆ ಎದುರು ಉತ್ತರ ಕೊಟ್ಟದ್ದು ಸರಿಯಾಗಲಿಲ್ಲ. ಹೇಗಾದರೂ ಆಗಲಿ. ಅದನ್ನು ನಂಬುವ" ಎಂದು ಆ ಭೂತಕ್ಕೆ ಭರವಸೆಯನ್ನು ಕೊಟ್ಟು ಪ್ರಾರ್ಥನೆ ಮಾಡಿಕೊಂಡರು. ಆಗ ಆ ಸಂಕಟಪಟ್ಟ ಜೈನರು ಗುಣವಾದರು. ಹೇಳಿದಂತೆಯೇ ಅವರು ಆ ಭೂತಕ್ಕೆ ಸ್ಥಾನವನ್ನು ಕಟ್ಟಿಸಿ, ಕೋಲ, ಬಲಿಯನ್ನು ಕೊಟ್ಟು ಸಂತೋಷಮಾಡಿದರು.

### 17 ಪಾಡ್ದನದ ಕನ್ನಡ ರೂಪಾಂತರ

"ಪೊಳಲಿ (ಪುರಲಿ) ಊರಿನ ಪರಮೇಶ್ವರಿ ದೇವರಿಗೆ ವರ್ಷಂಪ್ರತಿ ಮೂವತ್ತು ದಿನದ ಜಾತ್ರೆ ನಡೆಯುತ್ತದೆ. ಆಗ ಏಳು ದಿನ ಕಾಲ್ಚೆಂಡಾಟದ ಪಂಕ್ಯವಿದೆ. ಮೂರು ದಿನ ಕೋಳಿ ಅಂಕ್ಯವಿದೆ. ಮೂವತ್ತು ದಿನ ಅಡಿಕೆಯಲ್ಲಿ ಆಡುತ್ತಾರೆ. ತೆಂಗಿನಯಿಯ ಜೂಜಾಟ ನಡೆಸುತ್ತಾರೆ. ಮೂವತ್ತೂ ದಿನವೂ ದೇವಸ್ಥಾನದಲ್ಲಿ ದೀಪೋತ್ಸವ ನಡೆಯುತ್ತದೆ. ಇದರ ಮೊದಲು ಧ್ವಜಾರೋಹಣವಾಗುತ್ತದೆ. ಇವನ್ನೆಲ್ಲ ನೋಡಲು ಆಡೂರು ದೇರೆಬೈದ್ಯನೆಂಬುವನು ಹೋಗುವವನಿದ್ದ. ಅವನು ತನ್ನ ಅಳಿಯಂದಿರನ್ನು ಕರೆದು ಮಧ್ಯಾಹ್ನದ ಮೂರ್ತೆಯನ್ನು ಮಾಡಿಸಿದ. ಕೋಳಿ ಜೂಜಿಗಾಗಿ ಅವನು ನಾಲ್ಕೆಂಟು ಕೋಳಿಗಳನ್ನು ಸಾಕಿದ್ದ. ಅವುಗಳಿಗೆ ನೀರು ಮತ್ತು ಭತ್ತವನ್ನು ಇಡಿಸಿದ. ಮಧ್ಯಾಹ್ನ ತಾನು ಊಟ ಮಾಡಿ ಅಳಿಯಂದಿರಿಗೂ ಊಟ ಮಾಡಿಸಿದ. ಆಮೇಲೆ ಧೋತ್ರವನ್ನುಟ್ಟು ಮುಂಡಾಸು ಸುತ್ತಿದ. ಕಾಲಿಗೆ ಎಕ್ಕಡವನ್ನು ಹಾಕಿ, ಛತ್ರಿಯನ್ನು ಹಿಡಿದು, ಕೋಳಿಗಳನ್ನು ತನ್ನ ಅಳಿಯಂದಿರ ಕೈಯಲ್ಲಿ ಕೊಟ್ಟ. ಕೋಳಿಗಳ ಅಂಕದ ಸಮಯದಲ್ಲಿ ಕಟ್ಟುವ ಹರಿತವಾದ ಕತ್ತಿಗಳ ಕಟ್ಟನ್ನು ತನ್ನ ಕೈಯಲ್ಲಿ ಹಿಡಿದುಕೊಂಡ.

ಅಡೂರಿನ ಜುಮಾದಿ ಭೂತದ ಸ್ಥಾನದ ಮುಂದೆ ನಿಂತು ಅವನು ಹೀಗೆ ಪ್ರಾರ್ಥಿಸಿದ :

"ಪೊಳಲಿಯ ಕೋಳಿ ಅಂಕದಲ್ಲಿ ನನ್ನ ಕೋಳಿ ಗೆಲ್ಲುವಂತೆ ಮಾಡಿದರೆ ಕೋಳಿಯ ಔತಣ, ದೋಸೆ ಮುಂತಾದುವನ್ನು ಸಲ್ಲಿಸುತ್ತೇನೆ."

ಹೀಗೆಂದು ಅಲ್ಲಿಂದ ಹೊರಟು ಸರಕಲ ಬಿರ್ಮಣ ಬೈದ್ಯನ ಮನೆ ಹತ್ತಿರ ಬಂದ. ಬಿರ್ಮಣ ಬೈದ್ಯನು ಆಗ ತಾಳೆಮರದಲ್ಲಿ ಸೇಂದಿ ತೆಗೆಯುತ್ತಿದ್ದ.

"ಪೊಳಲಿ ಜಾತ್ರೆಗೆ ಹೋಗೋಣವೇ ?" ಎಂದು ಅವನು ಬಿರ್ಮಣ ಬೈದ್ಯನೊಡನೆ ಕೇಳಿದ.

"ಹೋಗಲಿಕ್ಕೆ ಹೋಗಬಹುದಿತ್ತು" ಎಂದು ಬಿರ್ಮಣ ಉತ್ತರಿಸಿದ. "ಆದರೆ ನನ್ನೊಡನೆ ಕೋಳಿ ಇಲ್ಲ."

"ಹಾಗಾದರೆ ನಾವೇ ಹೋಗುತ್ತೇವೆ. ನೀನು ನಿಲ್ಲು" ಎಂದು ದೇರೆಬೈದ್ಯ ಹೊರಟ. ಆಗ ತತ್ತಿಯಿಡಲು ಕುಳಿತ ಹೆಣ್ಣು ಕೋಳಿಯು ಕೂಗಿತು.

ದೇರೆಬೈದ್ಯನು ಪೊಳಲಿಗೆ ಹೋಗುವ ದಾರಿಯಲ್ಲಿ ಆನೆ ಕಟ್ಟಿದ. ಅಶ್ವತ್ಥದ ಮರವನ್ನು ಹಾದು ಕುದುರೆಯನ್ನು ಕಟ್ಟಿದ ಕಿನ್ನಿ ಗೋಳಿ ಮರವನ್ನು ದಾಟಿದ. ನವಿಲುಕುಣಿಯ ಮೈರ ಪಾದೆ, ಮರಲೂರ ಕಿನ್ನಿ ಮಂಗೆರ, ಬೆಳೆಸಾಲು, ಮಂದಿಮಾಳೆ ಕಲ್ಲು ಮಾರ್ಗವಾಗಿ ಗುರುಪುರದ ಬಯಲಿಗೆ ಬಂದು ಮಣೇಲು ಬೈಲಿಗೆ ಮುಂದ್ವರಿದ. ಅಲ್ಲಿಂದ ಆ ಮುಂದೆ ಬಯಲನ್ನು ಹಾದು ಪೊಳಲಿಯನ್ನು ಸಮೀಪಿಸಿದ.

ಆಗ ಪೊಳಲಿಯ ಬಾಕಿ ಮಾರು ಗದ್ದೆಯಲ್ಲಿ ಮಣೇಲು ಗ್ರಾಮದ ಐದು ಸಾವಿರ ಜನರು ನೆರೆದಿದ್ದರು ಪೊಳಲಿ ಗ್ರಾಮದ ಮೂರು ಸಾವಿರ ಜನ ಸೇರಿದ್ದರು.

ಪೊಳಲಿ ದೇವಸ್ಥಾನದ ಗೋಪುರದಲ್ಲಿ ಮುಖ್ಯಸ್ಥರಾದ ಚಿಕ್ಕರಾಯರೂ ಇತರರೂ ಕೂಡಿದ್ದರು. ದೇರೆ ಬೈದ್ಯನು ನೆರಳಿನ ಜಾಗವನ್ನು ಹುಡುಕಿ ಅಲ್ಲಿ ತನ್ನ ಕೋಳಿಗಳನ್ನು ಕಟ್ಟಲು ಅಳಿಯಂದಿರಿಗೆ ಆಜ್ಞಾಪಿಸಿದನು. ಆಮೇಲೆ ಛತ್ರಿಯನ್ನು ಕೆಳಗಿಟ್ಟು, ಚಪ್ಪಲಿಯನ್ನು ಬಿಟ್ಟು, ಚಿಕ್ಕರಾಯರಿಗಿಂತ ಸ್ವಲ್ಪ ಕೆಳಗೆ ನಿಂತ.

ಸೊಲ್ಮೆಪುದೆಪಡಿಯೆ ಎಂಬವನು ಆಗ ಹೇಳಿದ "ನೀನೂ ಬಂದಿಯಾ ದೇರೆ ಬೈದ್ಯ? ನಿನ್ನ ಜಾತಿಯವರು ಅಲ್ಲಿ ಕುಳಿತಿರುವರಲ್ಲ ? ಅವರೊಡನೆ ಕುಳಿತುಕೊಳ್ಳು."

ದೇರೆಬೈದ್ಯನು ತನ್ನ ಜಾತಿಯವರ ಬಳಿಗೆ ಹೋಗಿ ಅವರಿಗೆ ಕೈಮುಗಿದ. ಅವರು ಅವನನ್ನು ತಮ್ಮ ಬಳಿ ಕುಳಿತುಕೊಳ್ಳಲು ಹೇಳಿ ಜಾಗಮಾಡಿಕೊಟ್ಟರು. ಅವನು ಅವರೊಡನೆ ಕುಳಿತು ಉಭಯ ಕುಶಲೋಪರಿ ಮಾತಾಡಿದ.

ಇಷ್ಟು ಹೊತ್ತಾಗುವಾಗ ಡೊಂಬರಾಟಕ್ಕೆ ಬೇಕಾದ ಗಾಳಿ ಬೀಸಿತು. "ಗಾಳಿ ಬೀಸಿತು. ಇನ್ನೇನು ನೋಡುವುದು ? ಕೋಳಿ ಅಂಕವನ್ನು ಆರಂಭಮಾಡುವ ಆಗದೆ?" ಎಂದರು ಅವರು.

ನೀರೆಮಾರ್ಗದ ಕುಂಪಾಲಿ ಕುಬಾಲದೇರೆ ಎದ್ದ.

"ಹಾಗಾದರೆ ಕುಬಾಲದೇರೆ ಮತ್ತು ಆಡೂರ ದೇರೆಯವರ ಕೋಳಿಗಳೊಳಗೆ ಕಾಳಗವಾಗಲಿ. ಕೋಳಿಗಳ ಕಾಲುಗಳಿಗೆ ಕತ್ತಿಯನ್ನು ಕಟ್ಟಿ ಬಿಡುವ" ಎಂದು ನೆರೆದವರು ಮಾತಾಡಿಕೊಂಡರು.

ಕೋಳಿಗಳೊಡನೆ ಜೂಜಾಟ ನಡೆಯಿತು. ಒಂದರ ಹಿಂದೊಂದಾಗಿ ಕೋಳಿಗಳ ಕಾಲುಗಳಿಗೆ ಕತ್ತಿಗಳನ್ನು ನೂಲಿನಿಂದ ಬಿಗಿದರು. ಆಡೂರ ದೇರೆಬೈದ್ಯನ ಕೋಳಿಗಳೆಲ್ಲ ಕಾಳಗದಲ್ಲಿ ಗೆದ್ದವು. ಆಗ ಮಣೇಲಿನ ಐದು ಸಾವಿರ ಜನರೂ ಪೊಳಲಿಯ ಮೂರು ಸಾವಿರ ಜನರೂ ಚಿಕ್ಕರಾಯರೂ ಹೀಗೆಂದರು : "ಆಡೂರ ದೇರೆ ಬೈದ್ಯ ನಿನ್ನ ಕೈಯಲ್ಲಿ ಕೃತ್ರಿಮ ಕತ್ತಿಯಿದೆ, ಕೃತ್ರಿಮ ನೂಲಿನ ಉಂಡೆಯಿದೆ."

"ಕೃತ್ರಿಮ ಕತ್ತಿಯು ನನಗೆ ತಿಳಿಯದು" ಎಂದು ದೇರೆಬೈದ್ಯ ನುಡಿದ. "ಕೃತ್ರಿಮ ನೂಲು ನನಗೆ ತಿಳಿಯದು. ಆದರೆ ಯಾವ ಸ್ಥಳ ಶುಭಕಾರಿ, ಯಾವ ಸಮಯದಲ್ಲಿ ರಾಹುಕಾಲವಿದೆ ಎಂಬುದಷ್ಟೇ ನನಗೆ ಗೊತ್ತು."

"ಹಾಗಾದರೆ ನಿನ್ನ ಕತ್ತಿಗಳನ್ನು ಪರೀಕ್ಷಿಸಬೇಕು" ಎಂದರವರು. ಹಾಗೆಯೇ ಬಂಡೆಕಲ್ಲಿನ ಮೇಲೆ ಕೈಯಿಟ್ಟು ಅವನು ಸತ್ಯಪ್ರಮಾಣ ಮಾಡಿದ.

ಆಮೇಲೆ ಕತ್ತಿಗಳನ್ನು ತೆಗೆದುಕೊಂಡು ತಾನಿನ್ನು ಹೋಗುತ್ತೇನೆ ಎಂದು ನೆರೆದವರೊಡನೆ ಅಪ್ಪಣೆ ಕೇಳಿ ಕೋಳಿಗಳನ್ನೆಲ್ಲ ತನ್ನ ಅಳಿಯಂದಿರಿಗೆ ಹೊತ್ತು ತರಲು ಹೇಳಿದ. ಹೀಗೆ ಕೋಳಿಗಳೊಡನೆ ಅವನೂ ಅಳಿಯಂದಿರೂ ಅತ್ರೇಲ ಕಡಲಿನ ಬಳಿಗೆ ಬಂದರು. ಅಲ್ಲಿ ದೋಣಿಯವನು ತನಗೊಂದು ಕೋಳಿಯನ್ನು ಕೊಡಬೇಕೆಂದು ಕೇಳಿದ. ದೇರೆಬೈದ್ಯನು ತನಗೆ ಮೊದಲು ದೊರಕಿದ್ದ ಕೋಳಿಯನ್ನು ಅವನಿಗೆ ಕೊಟ್ಟ. ಉಳಿದ ಕೋಳಿಗಳೊಡನೆ ತನ್ನ ಮನೆ ಸೇರಿದ.

ದೋಣಿ ಬಿಡುವ ಮರಕಾಲನು ಕೋಳಿಯ ಗರಿಗಳನ್ನು ಕೀಳಲು ತನ್ನ ಹೆಂಡತಿಯೊಡನೆ ಕೊಟ್ಟ. ಅವಳು ಮಣ್ಣಿನ ಪಾತ್ರೆಯಲ್ಲಿ ಅದನ್ನು ಹಾಕಿ ಒಳಗೆ ಹೋದಳು. ಆಗ ಸತ್ತುಹೋಗಿದ್ದ ಆ ಕೋಳಿಯು ಜೀವತಾಳಿ ಮನೆಯ ಛಾವಣಿಗೆ ಹಾರಿ ಕೂಗಿತು. ಮುಂದೆ ಅದು ಆಡೂರ ದೇರೆಬೈದ್ಯನ ಮನೆಗೆ ಓಡಿತು.

"ಮೊದಲು ಸಿಕ್ಕಿದ್ದ ಕೋಳಿಯನ್ನು ಜುಮಾದಿ ಭೂತಕ್ಕೆ ಅರ್ಪಿಸುತ್ತೇನೆಂದು ನೀನು ಹೇಳಿದ್ದಿ. ಆದರೆ ನೀನು ಅದನ್ನು ಮರಕ್ಕಾಲನಿಗೆ ಕೊಟ್ಟಿರುವಿ" ಎಂದಿತು ಕೋಳಿ.

ದೇರೆಬೈದ್ಯನಿಗೆ ಸಂಕಟವಾಯಿತು.

ಆಗ ಅವನ ತಂಗಿಗೊಂದು ಕನಸು ಬಿತ್ತು. ಅವನಿಗೆ ಸಂಕಟ ಬಂದುದರಿಂದ ಆಕೆ, "ಅವನಲ್ಲಿಗೆ ಹೋಗಬೇಕು ಮತ್ತು ಅವನಿಗೆ ಸಂಕಟ ನಿವಾರಣೆಯಾಗುತ್ತದೆ" ಎಂದು ಹೇಳಿದಂತೆ ಭಾಸವಾಯಿತು. ಅವಳು ಕೂಡಲೇ ಎದ್ದು ತನ್ನ ಗಂಡನ ಅಪ್ಪಣೆ ಪಡೆದು ಆಡೂರಿಗೆ ಹೋದಳು. ಅಲ್ಲಿ ಜುಮಾದಿ ಭೂತಕ್ಕೆ ಆಹಾರವನ್ನು ಅರ್ಪಿಸಿದ ಕೂಡಲೇ ದೇರೆಬೈದ್ಯನ ಸಂಕಟ ಪರಿಹಾರವಾಯಿತು.

## $J_8$ ಪಾಡ್ದನದ ಸಾರಾಂಶ

ಐತಿಹಾಸಿಕ ವ್ಯಕ್ತಿಯಾದ ದೇವುಪೂಂಜನಿಗೆ ಸಂಬಂಧಿದಂತೆ ಈ ಪಾಡ್ದನವಿದೆ. ದೇವುಪೂಂಜನು ವೇಣೂರಿನ ತಿಮ್ಮಣ್ಣಾಜಿಲಿನ ಸೇನಾಧಿಪತಿಯಾಗಿದ್ದನು. ಅಜಿಲರಿಗೂ ಬಂಗರಸರಿಗೂ ನಡೆದ ಯುದ್ಧದಲ್ಲಿ ದೇವುಪೂಂಜನ ಪರಾಕ್ರಮದಿಂದ ಬಂಗರಸನ ಸೇನಾಪತಿಯಾದ ದುಗ್ಗಣ್ಣಕೊಂಡೆಯು ಯುದ್ಧದಲ್ಲಿ ಸಾಯುತ್ತಾನೆ. ಯುದ್ಧದಲ್ಲಿ ಗೆದ್ದರೆ ಜುಮಾದಿ ಭೂತಕ್ಕೆ ಹರಕೆ ಸಲ್ಲಿಸುತ್ತೇನೆಂದು ದೇವುಪೂಂಜ ಹೇಳಿಕೊಂಡಿರುತ್ತಾನೆ. ಆದರೆ ಕಾಳಗದ ವೇಳೆ ತನಗೆ ಸಹಾಯದ ವೀಳ್ಯವನ್ನು ಒದಗಿಸಿದ ಜುಮಾದಿ ದೈವಕ್ಕೆ ಸಲ್ಲಿಸಬೇಕೆಂದಿದ್ದ ಹರಕೆಯ ನೇಮಕ್ಕೆ ದೇವುಪೂಂಜನು ಸಕಾಲಕ್ಕೆ ಬರುವುದಿಲ್ಲ. ನೇಮಕ್ಕೆ ಹೋಗುವ ಬದಲು ದೇವುಪೂಂಜನು ಬಂಗರಸನ ಮೇಳದ ಸಿಂಗಾರಿ ಸೂಳೆ ಸಿದ್ದುವಿನೊಂದಿಗೆ ಚೆನ್ನೆಯಾಟಕ್ಕೆ ನಿಲ್ಲುತ್ತಾನೆ. ಇದರಿಂದ ಜುಮಾದಿ ದೈವದ ಆಗ್ರಹಕ್ಕೆ ದೇವುಪೂಂಜ ಬಲಿಯಾಗುತ್ತಾನೆ.

## $J_9$ ಪಾಡ್ದನ

ದೇಬೆ ಎಂಬವಳು ತನ್ನ ಅಣ್ಣನ ಮೋಸದಿಂದ ಗುಡನ ಮನೆಯ ಆಸರೆ ತಪ್ಪಿಹೋಗಿ ಬಾಳ್ವೆಗೆಟ್ಟಿರುತ್ತಾಳೆ. ಇದರಿಂದ ಬೇಸತ್ತು ಬದುಕು ಬೇಡವಾಗಿ ಕೊನೆಗೆ ಜುಮಾದಿ ಭೂತದೊಡನೆ ಅಂಗಲಾಚಿ ಮಾಯವಾಗಿ ಅದರೊಡನೆ ಸೇರಿ ಹೋಗುತ್ತಾಳೆ.

ಜುಮಾದಿ ಭೂತಕ್ಕೆ ಸಂಬಂಧಿಸಿದ ಈ ೯ ಅಥವಾ ೧೦ ಪಾಡ್ದನಗಳನ್ನು 'ಜುಮಾದಿ Cycle' ಎಂದು ಕರೆಯಬಹುದು. ಈ ಜುಮಾದಿ Cycle ಜುಮಾದಿ ಭೂತದ ಸಮಗ್ರ ಸ್ವರೂಪವನ್ನು ಕೊಡುವ ದೃಷ್ಟಿಯಿಂದ

ಜುಮಾದಿ epicನ ಮಾದರಿಯಲ್ಲಿ ಕಾಣಿಸುತ್ತದೆ. ಜುಮಾದಿ ಭೂತದ ಉಗಮ ಮತ್ತು ಮಹಿಮೆ ಪ್ರಸರಣಗಳನ್ನು ಈ 'ಜುಮಾದಿ Cycle' ಅಥವಾ 'ಜುಮಾದಿ epic'ನಲ್ಲಿ ನೋಡಬಹುದು. ಜುಮಾದಿಯ ಬಗ್ಗೆ ಸಿಕ್ಕುವ ಇನ್ನು ಯಾವುದೇ ಪಾಡ್ದನಗಳು ಕೂಡಾ ಈ 'ಜುಮಾದಿ Cycle'ಗೆ ಸೇರುತ್ತವೆ.

ಜುಮಾದಿ ಭೂತದ ಉಗಮವನ್ನು ಹೇಳುವ ಪಾಡ್ದನ $J_1$. ಇಲ್ಲಿ ಜುಮಾದಿಯ ಹುಟ್ಟಿಗೆ ಪೌರಾಣಿಕ ಚೌಕಟ್ಟು ಇದೆ. ಮಾತ್ರವಲ್ಲದೆ, ಪೌರಾಣಿಕ ಆಶಯಗಳ ಸ್ವರೂಪವಿದೆ. ವೈದಿಕ ಪುರಾಣಗಳ ಪ್ರಭಾವ ಸಾಮಾನ್ಯವಾಗಿ ಇಲ್ಲಿ ಗೊತ್ತಾಗುವ ವಿಚಾರ. ಜಗತ್ತಿನ ಮಹಾತಾಯಿ ಭೂಲೋಕದ ದುಷ್ಟರ ಸಂಹಾರಕ್ಕಾಗಿ ಧೂಮಾವತಿ ಹೆಣ್ಣನ್ನು ಸೃಷ್ಟಿ ಮಾಡಿದರು ಎನ್ನುವ ಕಲ್ಪನೆಯೂ ದುಷ್ಟರ ಸಂಹಾರಕ್ಕಾಗಿ ದೇವರು ಅವತಾರ ಎತ್ತುತ್ತಾನೆ ಅಥವಾ ತನ್ನ ಪರಿವಾರದವರನ್ನು ಕಳುಹಿಸಿಕೊಡುತ್ತಾನೆ ಎಂಬ ಆಶಯಕ್ಕೆ ಅನುಗುಣವಾಗಿದೆ. ಜಗತ್ತಿನ ಮಹಾತಾಯಿ ಎನ್ನುವಲ್ಲಿ 'ದುರ್ಗೆ'ಯನ್ನು ಗುರುತಿಸಬಹುದು. ದುರ್ಗೆಯ ತಾಮಸ ಸ್ವರೂಪವಾಗಿ ಇರುವ ಅನೇಕ ದೇವತೆಗಳಲ್ಲಿ ಧೂಮಾವತಿಯೂ ಒಂದು. ಆದ್ದರಿಂದಲೇ ಇಲ್ಲಿ ದುಷ್ಟರ ಸಂಹಾರಕ್ಕಾಗಿ ಮಹಮ್ಮಾಯಿಯಿಂದ ಅಂದರೆ ದುರ್ಗೆಯಿಂದ ಸೃಷ್ಟಿಯಾಗುವ ಧೂಮಾವತಿಯ ಸ್ವರೂಪ ಉಗ್ರವಾಗಿದೆ. ರಕ್ತವನ್ನು ನಾಲಗೆಗೆ ಬೀಳಿಸಿ ಅದನ್ನು ನೆಕ್ಕುವ ಭಯಂಕರ ವಿಧಾನವನ್ನು ಧೂಮಾವತಿಗೆ ಬೋಧಿಸುತ್ತಾಳೆ. ಈ ಧೂಮಾವತಿಯ ಜನನದ ವೃತ್ತಾಂತಕ್ಕೆ ಪೌರಾಣಿಕ ದೇವರಾದ ನಾರಾಯಣನು ಸಂಬಂಧಪಡುತ್ತಾನೆ.

ನಾರಾಯಣನು ಧೂಮಾವತಿಗೆ ಬೇರೆ ಬೇರೆ ಸಾತ್ವಿಕ ಬಲಿಗಳನ್ನು ಕೊಟ್ಟನು. ಪ್ರಾಣಿ ಬಲಿಗಳನ್ನು ಕೊಟ್ಟನು. ಆದರೆ ಅವಳಿಗೆ ಅವು ಯಾವುದರಿಂದಲೂ ತೃಪ್ತಿಯಾಗುವುದಿಲ್ಲ. ಕೊನೆಗೆ ತನ್ನ ಕೈಯ ಕಿರುಬೆರಳನ್ನು ಕಡಿದು, ನರ ಬಲಿಯನ್ನು ಕೊಟ್ಟಾಗ ಅವಳು ತೃಪ್ತಳಾಗುತ್ತಾಳೆ. ಭೂಲೋಕಕ್ಕೆ ಹೋಗಿ ದೇವರ ಸ್ಥಳದಲ್ಲಿ ಮನುಷ್ಯರಿಂದ ಆಹಾರ ತೆಗೆದುಕೊಂಡಿರು ಎಂದು ನಾರಾಯಣನಿಂದ ವರವನ್ನು ಪಡೆಯುತ್ತಾಳೆ. ಧೂಮಾವತಿಯು ನಾರಾಯಣನಲ್ಲಿಗೆ ಹದಿನಾರು ವರ್ಷದ ಹುಡುಗಿಯಾಗಿ ಹೋಗುವುದು ಆಗ ನಾರಾಯಣ ಜಪ ಮಾಡುತ್ತಾ ಇರುವುದು. ಈ ಪ್ರಸಂಗ ಒಂದು ಜನಪದ ಕಲ್ಪನೆ. ಮೋಹಿಸುವ ಅಂಶವನ್ನು ಈ ರೀತಿ ತಂದಿರಬಹುದು. ಧೂಮಾವತಿಗೆ ಯಾವುದೇ ಪ್ರಾಣಿ ಬಲಿಯಲ್ಲಿಯೂ ಹೊಟ್ಟೆ ತುಂಬದೆ, ಬಾಯಾರಿಕೆ ನಿಲ್ಲದೆ ಇದ್ದಾಗ ನಾರಾಯಣ ಹೇಳುತ್ತಾನೆ : 'ಆನೆ ಕಟ್ಟಿ ಆಳಬಹುದು, ಹೆಣ್ಣು ಕಟ್ಟಿ ಆಳಲು ಸಾಧ್ಯವಿಲ್ಲ." ಇದು ಜನಪದ ಗಾದೆಯನ್ನು ಬಳಸಿಕೊಂಡ ರೀತಿ. ಈ ಪಾಡ್ದನದ ಕೊನೆಯ ಭಾಗದಲ್ಲಿ ಜುಮಾದಿಯ ಬೇರೆ ಬೇರೆ ಹೆಸರುಗಳು ಮತ್ತು ಅವುಗಳಿಗೆ ಕಾರಣವನ್ನು ಒಂದೊಂದು ಮಾತಿನಲ್ಲಿ ಹೇಳಲಾಗಿದೆ.

ಪಂಚಕಲ್ಲು ಒಡೆದ ಕಾರಣ 'ಪಂಚ ಜುಮಾದಿ', ಸಾರಾಳು ಅಂದರೆ ಸಾವಿರ ಮಂದಿ ಹರಕೆ ಕೊಡುವ ಕಾರಣ ಸಾರಾಲ ಜುಮಾದಿ', ಮರೆಯಲ್ಲಿ, ಮಂಜದಲ್ಲಿ ಭೋಗ ಕೊಡುವಾಗ ಅಂದರೆ ಮಲೆ ಪ್ರದೇಶಗಳಲ್ಲಿ ಆರಾಧನೆಯನ್ನು ಪಡೆಯುವಾಗ 'ಮಲೆ ಜುಮಾದಿ', ಮುಖಕ್ಕೆ ಕಾಡಿಗೆಯನ್ನು ಹಚ್ಚಿಕೊಂಡಾಗ 'ಮರುಳು ಜುಮಾದಿ' ಇಲ್ಲಿ ಮುಖಕ್ಕೆ ಕಾಡಿಗೆ ಹಚ್ಚುವುದು ಎನ್ನುವುದು ಹೆಂಗಸರ ಒಂದು ಅಲಂಕಾರ. ಜುಮಾದಿ ಭೂತವು ಹೆಣ್ಣು ಭೂತವಾದ ಕಾರಣ ಈ ರೀತಿ ಮುಖಕ್ಕೆ ಕಾಡಿಗೆ ಹಚ್ಚಿಕೊಂಡು ಮರುಳು ಜುಮಾದಿ ಎಂದರೆ ಮರುಳು ಮಾಡುವ (ಆಕರ್ಷಿಸುವ ಜುಮಾದಿ) ಎನ್ನಿಸಿಕೊಂಡಿರಬಹುದು.

$J_2$ ಪಾಡ್ದನವು ಜುಮಾದಿ ಭೂತದ ಮಹಿಮೆಯನ್ನು ಹೇಳುವ ಒಂದು ಪಾಡ್ದನ. ಇಲ್ಲಿ ಭೂತವನ್ನು ಒಂದು ಕಡೆಯಿಂದ ತಂದು ಸ್ಥಾಪಿಸಿದ ಮೇಲೆ ಭೂತದ ಮಹಿಮೆಯು ಅನೇಕ ಉಪದ್ರವದ ಮೂಲಕ ಕಾಣಿಸಿಕೊಳ್ಳುತ್ತದೆ. ಕಲ್ಯಗದ ಬೀಡಿನ ಕಲ್ಯಕೊಂಡಾರಿಗರು ಕಳ್ಳರ ಹಾವಳಿ ತಡೆಯಲಾರದೆ ನೆಕರ ಬೀಡಿನಿಂದ

ಜುಮಾದಿ ಭೂತವನ್ನು ತರುತ್ತಾರೆ. ಕಳ್ಳರ ಹಾವಳಿಯನ್ನು ತಡೆಯಲು ಜುಮಾದಿ ಭೂತ ಬಹಳ ಸಮರ್ಥ ವಾದುದು ಎಂಬ ನಂಬಿಕೆ ಈ ಪಾಡ್ದನದಲ್ಲಿ ಸ್ಪಷ್ಟವಾಗಿದೆ. ಇಲ್ಲಿಯೂ ಜುಮಾದಿಯನ್ನು 'ಮರುಳು ಭೂತ ಜುಮಾದಿ' ಎನ್ನಲಾಗಿದೆ. ಇಲ್ಲಿ ಭೂತವು ತನ್ನ ಮಹಿಮೆಯನ್ನು ಪ್ರದರ್ಶಿಸಲು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಪ್ರಸರಣದ ರೂಪದಲ್ಲಿ ಸಂಚಾರ ಹೋಗುವುದಿಲ್ಲ. ಬದಲಾಗಿ ಮನುಷ್ಯರು ತಮ್ಮ ಪ್ರಯೋಜನಕ್ಕಾಗಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಭೂತವನ್ನು ತರುತ್ತಾರೆ. ಈ ರೀತಿ ಭೂತವನ್ನು ತರುವ ವಿಧಾನವನ್ನು ಈ ರೀತಿ ಹೇಳಲಾಗಿದೆ; ಪಂಚೋಳಿ ವೀಳ್ಯದೆಲೆಯಲ್ಲಿ ಭೂತದ ಬಹಿರರೂಪ ಬರೆಯುವುದು. ಇಲ್ಲಿ ಗಂಡು ರೂಪ ಹೆಣ್ಣು ರೂಪ ಬರೆದರು ಎಂದಿದೆ. ಅಂದರೆ ಜುಮಾದಿ ಭೂತವು ಹೆಣ್ಣು ಭೂತವಾದರೂ ಗಂಡಿನ ಹಾಗೆಯೇ ಪರಾಕ್ರಮಶಾಲಿ ಎನ್ನುವ ಅರ್ಥದಲ್ಲಿ ಈ ಮಾತು ಬಂದಿರಬಹುದು. ಪಾಡ್ದನದ ಕೊನೆಯ ಭಾಗದಲ್ಲಿ ಜುಮಾದಿ ಭೂತದ ಉಗ್ರ ಪ್ರತಾಪವನ್ನು ವರ್ಣಿಸಲಾಗಿದೆ. ಸಾಧಾರಣವಾದ ಬಲಿಗಳಿಗೆ ಜುಮಾದಿ ಶಮನವಾಗುವುದಿಲ್ಲ ಎನ್ನುವುದನ್ನು ಇಲ್ಲಿ ಹೇಳಲಾಗಿದೆ. ಈ ಭೂತದ ಮಹಿಮೆ ವಿಶೇಷ ವಾದುದು ಎನ್ನುವುದಕ್ಕೆ ಇಂತಹ ಪಾಡ್ದನಗಳು ಹುಟ್ಟಿಕೊಂಡಿರಬಹುದು.

$J_3$ ಪಾಡ್ದನವು ಭೂತದ ಮಹಿಮೆಯನ್ನು ಇನ್ನೊಂದು ರೀತಿಯಲ್ಲಿ ಹೇಳುತ್ತದೆ. ತುಳುನಾಡಿನ ಹಳ್ಳಿ ಗಳಲ್ಲಿ ತರಕಾರಿಗಳಿಗೆ ಅಥವಾ ಕೆಲವು ಫಲಸಸ್ಯಗಳಿಗೆ ಯಾವುದಾದರೊಂದು ಭೂತದ ಹೆಸರಿನಲ್ಲಿ ಮಾಂತ್ರಿಕ ರಕ್ಷೆ ಯನ್ನು ಕಟ್ಟುತ್ತಾರೆ. ಇದಕ್ಕೆ "ಕೊಡಿ" ಕಟ್ಟುವುದು ಎನ್ನುತ್ತಾರೆ. ಇಂತಹ ಕೊಡಿ ಕಟ್ಟುವುದು ಕಳ್ಳರಿಂದ ಆ ಸಸ್ಯದ ಉತ್ಪನ್ನಗಳನ್ನು ರಕ್ಷಿಸುವುದಕ್ಕಾಗಿ ಈ ರೀತಿ ಕೊಡಿ ಕಟ್ಟಿದ ಸಸ್ಯದ ಉತ್ಪನ್ನಗಳನ್ನು ಕಿತ್ತರೆ, ಉಪ ಯೋಗಿಸಿದರೆ ಅವರು ಆ ಭೂತದ ಉಪದ್ರದಿಂದ ಸಾಯುತ್ತಾರೆ ಅಥವಾ ಗಂಡಾಂತರಕ್ಕೆ ಒಳಗಾಗುತ್ತಾರೆ ಎನ್ನುವ ನಂಬಿಕೆ ಇದೆ. ಅಂತಹ ನಂಬಿಕೆಯ ಸಮರ್ಥನೆಗಾಗಿ ಮತ್ತು ಜುಮಾದಿ ಭೂತದ ಮಹಿಮೆಯನ್ನು ಈ ರೀತಿ ಸಾರುವುದಕ್ಕಾಗಿ ಈ ಪಾಡ್ದನವು ಹುಟ್ಟಿಕೊಂಡಿರಬಹುದು. ಇಲ್ಲಿ ಮಾಪು ಪರಂದರ ಸೊಸೆ ಕರ್ನಕಳು ಜುಮಾದಿ ಭೂತದ ಕೊಡಿ ಕಟ್ಟಿದ ಬಾಳೆ ಗಿಡದ ಹಣ್ಣು ಮತ್ತು ಕಾಯಿಗಳನ್ನು ಕೊಯ್ಯುತ್ತಾಳೆ. ಅವಳ ಮಾವ ಬಂದಾಗ ಅಡುಗೆ ಸಿದ್ಧಮಾಡಿ ಬಡಿಸುತ್ತಾಳೆ. ಅನ್ನದಲ್ಲಿ ಭತ್ತ, ಕಲ್ಲು, ಸೆಗಣಿ ಸಿಕ್ಕುತ್ತದೆ. ಮಾಪು ಪರಂದರು ಕರ್ನಕಳ ಜುಟ್ಟಿನಲ್ಲಿ ಹಿಡಿದು ಗುದ್ದುತ್ತಾರೆ, ತುಳಿಯುತ್ತಾರೆ. ನಾನಾ ಹಿಂಸೆ ಕೊಡುತ್ತಾರೆ. ಅವಳು ತಪ್ಪಿಸಿಕೊಂಡು ಆಲದ ಮರಕ್ಕೆ ಹತ್ತಿ ತಾವರೆಯ ಕೆರೆಗೆ ಹಾರುತ್ತಾಳೆ. ಮಾವನು ಅವಳ ಬೆನ್ನಿಗೆ ಹಾರುತ್ತಾನೆ. ಆದರೆ ಇಲ್ಲಿ ಕರ್ನಕಳ ಜೀವ ಹೋಗಿರುತ್ತದೆ. ದುಃಖಿತರಾದ ಮಾಪು ಪರಂದರು ಅವಳ ಸಂಸ್ಕಾರ ಮುಗಿಸಿ ಉಣ್ಣುವಾಗ ಗರುಡ ರೂಪದಲ್ಲಿ ಬಂದು ಜುಮಾದಿಯು ಕರ್ನಕಳ ಕರುಳನ್ನು ಹಾಕುತ್ತದೆ. ಮಾಪು ಪರಂದರು ಜುಮಾದಿಯನ್ನು ಸ್ಮರಿಸುತ್ತಾ ದುಃಖಿಸುತ್ತಾರೆ. ಇಲ್ಲಿ ಜುಮಾದಿ ಭೂತದ ಕೊಡಿ ಕಟ್ಟಿದ ಬಾಳೆಯ ಹಣ್ಣನ್ನು ತಿಂದಕಾರಣ ಕರ್ನಕ ಸಾಯುತ್ತಾಳೆ. ಅದರ ಕಾಯಿಗಳ ಪಲ್ಯವನ್ನು ಊಟ ಮಾಡಬೇಕಾಗಿ ಬಂದ ಮಾಪು ಪರಂದರು ಸೊಸೆಯ ಮರಣಕ್ಕೆ ಕಾರಣವಾಗುತ್ತಾರೆ. ಸೊಸೆಯ ಕರುಳನ್ನು ಅನ್ನದಲ್ಲಿ ಕಾಣುತ್ತಾರೆ.

$J_3B$ ಪಾಡ್ದನದಲ್ಲಿಯೂ ಕರ್ನಗೆಯ ಇದೇ ವೃತ್ತಾಂತ ಇದೆ. ಈ ಪಾಡ್ದನದಲ್ಲಿ ತರಕಾರಿಗೆ ಜುಮಾದಿಯ ಕೊಡಿ ಕಟ್ಟಿದ್ದನ್ನು ನಿರ್ಲಕ್ಷಿಸಿ ಕರ್ನಗೆ ತರಕಾರಿ ಕೊಯ್ಯುತ್ತಾಳೆ, ಪಲ್ಯ ಮಾಡುತ್ತಾಳೆ. ಮಾಪು ಪರಂದರ ಶಿಕ್ಷೆಗೆ ಒಳಗಾಗುತ್ತಾಳೆ. ಕೊನೆಗೆ ಬಾವಿಗೆ ಹಾರಿ ಮಾಯಕವಾಗಿ ಜುಮಾದಿಯ ಪ್ರಭಾವಕ್ಕೆ ಒಳಗಾಗುತ್ತಾಳೆ. ಕರ್ನಗೆಯ ಈ ಎರಡು ಪಾಡ್ದನಗಳ ಕೊನೆಯಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಆದರೆ ಎರಡು ಕಡೆಗಳಲ್ಲಿಯೂ ಜುಮಾದಿ ಭೂತದ ಕೊಡಿ ಕಟ್ಟಿದ ಸಸ್ಯದ ಉತ್ಪನ್ನವನ್ನು ಕೊಯ್ದ ಕಾರಣ ಜುಮಾದಿ ಭೂತದ ಉಪದ್ರಕ್ಕೆ ಬಲಿ ಯಾಗಿ ಕರ್ನಗೆ ಸಾಯುತ್ತಾಳೆ. ಜುಮಾದಿ ಭೂತದ ಮಹಿಮೆಯನ್ನು ತುಳು ನಾಡಿನ "ಕೊಡಿ ಕಟ್ಟುವುದು" ಎಂಬ ಜನಪದ ನಂಬಿಕೆ ಮತ್ತು ಮಂತ್ರವಿದ್ಯೆಯೊಂದರ ಆಧಾರದ ಮೇಲೆ ಘಟನೆಯೊಂದರ ರೂಪದಲ್ಲಿ $J_3$ ಪಾಡ್ದನದಲ್ಲಿ ಹೇಳಲಾಗಿದೆ.

$J_4$ ಪಾಡ್ದನವನ್ನು "ಸಾರಾಲ ಜುಮಾದಿ ಪಾಡ್ದನ" ಎಂದು ಕರೆಯಲಾಗಿದೆ. ಇದು ಜುಮಾದಿ ಭೂತದ ಮಹಿಮೆಯನ್ನು ಪ್ರಸರಣದ ರೂಪದಲ್ಲಿ ಹೇಳುವ ಪಾಡ್ದನ. ಸಾರ ಬೆಳಿಯೂರು ಎಂಬ ಊರಿನಲ್ಲಿ ಜುಮಾದಿ ಭೂತವು ಆರಾಧನೆಯನ್ನು ಪಡೆಯುವಲ್ಲಿಂದ ಈ ಪಾಡ್ದನ ಆರಂಭವಾಗುತ್ತದೆ. ಅಲ್ಲಿ ಸಾವಿರ ಜನರು (ಸಾರಾಳು) ಈ ಚಾವಡಿಯನ್ನು ಕಟ್ಟುತ್ತಾರೆ. ಆದ್ದರಿಂದ ಈ ಜುಮಾದಿಗೆ ಸಾರಾಲ ಜುಮಾದಿ ಎನ್ನುವ ಹೆಸರು ಬಂದಿರಬೇಕು. ಈ ಜುಮಾದಿಯು ಬೇರೆ ಬೇರೆ ಊರುಗಳಲ್ಲಿ ತನ್ನ ಮಹಿಮೆಯನ್ನು ಪ್ರದರ್ಶಿಸಿ ಆರಾಧನೆಯನ್ನು ಪಡೆಯುವ ಕ್ರಮ ಪಾಡ್ದನದ ಉದ್ದಕ್ಕೂ ಕಾಣಿಸುತ್ತದೆ. ಹೆಚ್ಚಾಗಿ ಈ ಜುಮಾದಿ ಭೂತದ ಉಪದ್ರ ಕಾಣಿಸುವುದು ರೋಗ ಕಾಯಿಲೆಗಳ ರೂಪದಲ್ಲಿ. ನಂದನವನದಲ್ಲಿ ಕುಜುಂಬ ದೇರೆ ಮತ್ತು ತಂಕರ ಬೈದ್ಯನಿಗೆ ಕಾಯಿಲೆ ಉಂಟು ಮಾಡುವುದು, ಕೋಟಾಳ್ವನ ಬೀಡಿನಲ್ಲಿ ರೋಗ ಉಂಟು ಮಾಡುವುದು, ಪರಾರಿ ಗುತ್ತಿನಲ್ಲಿ ಜನರಿಗೆ ಕಾಯಿಲೆ ಉಂಟು ಮಾಡುವುದು, ಕಲ್ಲುಬೆಟ್ಟಿನಲ್ಲಿ ದೇಯಿ ಬೈದ್ಯೆದಿಗೆ ಕಾಯಿಲೆ ಉಂಟು ಮಾಡುವುದು, ಅಪ್ಯಾರು ಗುತ್ತಿನ ದುಗ್ಗ ಬಂಡಾರಿಯ ಮನೆಯಲ್ಲಿ ಸಂಕಟ ತಂದು ಹಾಕುವುದು, ಕಣ್ಣೂರು ಬಲ್ಲಾಳರ ಮನೆಯಲ್ಲಿ ಸಂಕಟ ತಂದು ಹಾಕುವುದು, ಜಪ್ಪು ಕಾಣಿಕರಿಯದಲ್ಲಿ ಕೋಚರ್ಯ, ಸೋಂಪರ್ಯ ಯವರಿಗೆ ಸಂಕಟ ತಂದು ಹಾಕುವುದು, ಪೆರ್ಗಡೆಬೆಟ್ಟಿನಲ್ಲಿ ಕಾಯಿಲೆ ತಂದು ಹಾಕುವುದು, ಈರೀತಿ ತನ ಮಹಿಮೆಯನ್ನು ತೋರಿಸುವುದಕ್ಕಾಗಿ ಜುಮಾದಿಯು ಬೇರೆ ಬೇರೆ ಕಡೆಗಳಲ್ಲಿ ಮನುಷ್ಯರಿಗೆ ರೋಗವನ್ನು ತಂದು ಹಾಕುವ ಕೆಲಸ ಮಾಡುತ್ತದೆ. ಈ ರೀತಿ ಉಪದ್ರ ಕಾಣಿಸಿಕೊಂಡಾಗ ಅಲ್ಲಿನ ಜನರು ಬಲ್ಮೆಯವರಲ್ಲಿ ನಿಮಿತ್ತ ಕೇಳುತ್ತಾರೆ. ಅದು ಜುಮಾದಿ ಭೂತದ ಉಪದ್ರ ಎಂದು ಗೊತ್ತಾದಾಗ ಅದನ್ನು ನಂಬಿ ಅದಕ್ಕೆ ಸೇವೆ ಸಲ್ಲಿಸುತ್ತಾರೆ. ಜುಮಾದಿ ಭೂತಕ್ಕೆ ಸೇವೆ ಸಲ್ಲಿಸುವ ರೀತಿಯು ಹೆಚ್ಚಾಗಿ ಸ್ಥಾನ ಕಟ್ಟಿಸುವುದು ಆಗಿದೆ. ನಂದನವನದಲ್ಲಿ ಸ್ಥಾನ ಕಟ್ಟಿಸಿದ ಮೇಲೆ ಧ್ವಜಸ್ತಂಭವನ್ನು ರಥವನ್ನು ಮಾಡುತ್ತಾರೆ. ಅಂಬಡಾಡಿ ಮಾಗಣೆ ಯಲ್ಲಿ ಸ್ಥಾನ ಕಟ್ಟಿಸಿ ವರ್ಷಂಪ್ರತಿ ಜಾತ್ರೆ ನಡೆಸುತ್ತಾರೆ. ಪರಾರಿಯಲ್ಲಿಯೂ ಹಾಗೇ. ಕಣ್ಣೂರು ಬೀಡಿ ನಲ್ಲಿ ಜುಮಾದಿ ಭೂತಕ್ಕೆ ತೂಗು ಮಂಚ ಕಟ್ಟಿಸುತ್ತಾರೆ. ಹೂವಿನ ಪೂಜೆ ಸಲ್ಲಿಸುತ್ತಾರೆ. ನಂದಾರ ಬೆಟ್ಟಿ ನಲ್ಲಿಯೂ ಜುಮಾದಿಗೆ ಹೂವಿನ ಪೂಜೆ ನಡೆಸುತ್ತಾರೆ. ಜುಮಾದಿ ಹೆಣ್ಣು ಭೂತವಾದ್ದರಿಂದ ಹೂವಿನ ಪೂಜೆ ಅದಕ್ಕೆ ವಿಶಿಷ್ಟವಾಗಿದೆ (ಸಾರಾಲ ಜುಮಾದಿ ಪಾಡ್ದನದಲ್ಲಿನ ಜುಮಾದಿಯ ಪ್ರಸರಣದ ಸ್ಥಳಗಳನ್ನು ಮುಂದೆ ಕೊಡಲಾಗಿದೆ).

$J_5$ ಪಾಡ್ದನವು ಸಂಕ್ಷಿಪ್ತವಾಗಿ ಜುಮಾದಿ ಭೂತದ ಪ್ರಸರಣವನ್ನು ಕೊಡುತ್ತದೆ. ಭೂತದ ಮಹಿಮೆಯ ವಿವರಣೆಗಳು ಇಲ್ಲಿ ಇಲ್ಲ. ಭೂತದ ಸಂಚಾರದ ಸ್ಥಳಗಳ ಪಟ್ಟಿ ಮಾತ್ರ ಸಿಗುತ್ತದೆ. (ಇದನ್ನು ಮುಂದೆ ಕೊಡಲಾಗಿದೆ).

$J_6$ ಪಾಡ್ದನವು ಪ್ರಧಾನವಾಗಿ ಭೂತದ ಮಹಿಮೆಯನ್ನು ವಿವರವಾಗಿ ಕೊಡುವ ಪಾಡ್ದನ. ಚೌಟರಸನ ಅರಮನೆಯ ಮುಂದೆ ಇದ್ದ ಮಾವಿನ ಮರದ ಗೆಲ್ಲೊಂದು ಮುರಿದು ಬೀಳುವುದು, ಅವನ ಕೋಣಗಳು ಕಾಯಿಲೆ ಬೀಳುವುದು, ಬಲ್ಮೆಯಲ್ಲಿ ನೋಡಿದಾಗ ಅದು ಜುಮಾದಿ ಭೂತದ ಉಪದ್ರವೆಂದು ಗೊತ್ತಾಗುವುದು, ಆದ್ದರಿಂದ ಚೌಟರಸನು ಅದನ್ನು ನಂಬಿ ಅದಕ್ಕೆ ಸ್ಥಾನವನ್ನು ಕಟ್ಟಿಸುವುದು – ಇದು ಮಹಿಮೆಯ ಒಂದು ಪ್ರಸಂಗ. ಇಲ್ಲಿ ಜುಮಾದಿ ಭೂತವನ್ನು ಹೊಗೆಯ ಬಣ್ಣದ್ದು ಎಂದು ಹೇಳಿದೆ. ಜುಮಾದಿ ಭೂತಕ್ಕೆ ಉಯ್ಯಾಲೆಯನ್ನು ಮಾಡಿ ಸುವುದು ಈ ಸಂದರ್ಭದಲ್ಲಿ ಗೊತ್ತಾಗುತ್ತದೆ. ಜುಮಾದಿ ಭೂತಕ್ಕೆ ಸಲ್ಲಿಸುವ ಕೋಳಿ ಮುಂತಾದ ಪ್ರಾಣಿ ಬಲಿಯೂ ಈ ಸಂದರ್ಭದಲ್ಲಿ ಚಿತ್ರಿತವಾಗಿದೆ. ಜುಮಾದಿ ಭೂತದ ಮಹಿಮೆಯನ್ನು ಹೇಳುವ ಈ ಪಾಡ್ದನದ ಇನ್ನೊಂದು ಘಟನೆಯು ಸ್ವಲ್ಪ ವಿಶಿಷ್ಟವಾಗಿದೆ. ಏಕೆಂದರೆ ಜೈನ ಧರ್ಮದವರು ಭೂತವನ್ನು ನಂಬದೇ ಇರು ವುದು; ಕೊನೆಗೆ ಅದರ ಮಹಿಮೆ ಅರ್ಥವಾದ ಮೇಲೆ ನಂಬಿ ಅದಕ್ಕೆ ಸ್ಥಾನ ಕಟ್ಟಿಸುವುದು – ಈ ಪ್ರಸಂಗ ಇಲ್ಲಿ ಬರುತ್ತದೆ. ಧರ್ಮದ ದೃಷ್ಟಿಯಿಂದ ಜೈನ ಸಂಸ್ಕೃತಿ ಮತ್ತು ಭೂತಾರಾಧನೆಯ ಸಂಸ್ಕೃತಿಗಳ ನಡುವಿನ

ಸಂಘರ್ಷವನ್ನು ಇಲ್ಲಿ ಕಾಣಬಹುದು. ಸಾಂಸ್ಕೃತಿಕವಾಗಿ ಸಂಭವಿಸಿರಬಹುದಾದ ಒಂದು ಘಟನೆಯು ಪ್ರಸಂಗ ಒಂದರ ರೂಪದಲ್ಲಿ ಈ ಪಾಡ್ದನದಲ್ಲಿ ಸ್ಥಾನವನ್ನು ಪಡೆದಿರಬೇಕು. ಜೈನರು ಬೇರೆ ದೇವರನ್ನು ನಂಬುವುದಿಲ್ಲ ಎನ್ನುವ ಮಾತನ್ನು ಹೇಳಿದಾಗ ಜುಮಾದಿ ಭೂತವು ಅವರ ಮನುಷ್ಯರಿಗೆ ತೊಂದರೆ ಕೊಡುವುದರ ಮೂಲಕ ತನ್ನ ಪರಾಕ್ರಮವನ್ನು ತೋರಿಸುತ್ತದೆ. ಆ ಮೂಲಕ ಜೈನರು ಜುಮಾದಿ ಭೂತವನ್ನು ನಂಬುತ್ತಾರೆ. ಈ ಪ್ರಸಂಗದಲ್ಲಿ ಐತಿಹಾಸಿಕವಾಗಿ ವೇಣೂರಿನ ಅಜಿಲ ಮನೆತನ ಮತ್ತು ತಿಮ್ಮಣ್ಣಾಜಿಲನು ಸ್ಥಾಪಿಸಿದ ಗೊಮ್ಮಟ ಪ್ರತಿಮೆಯ ವಿಚಾರ ಬರುತ್ತದೆ. ಚೌಟರ ಅರಮನೆ ಮತ್ತು ವೇಣೂರಿನ – ಈ ಎರಡು ಸ್ಥಳಗಳಲ್ಲಿ ಮಾತ್ರ ಜುಮಾದಿ ಭೂತದ ಮಹಿಮೆಯ ಪ್ರದರ್ಶನ ಈ ಪಾಡ್ದನದಲ್ಲಿ ನಡೆಯುತ್ತದೆ.

$J_7$ ಪಾಡ್ದನವು ಜುಮಾದಿ ಭೂತದ ಮಹಿಮೆಯನ್ನು ಒಂದು ಘಟನೆಯ ಮೂಲಕ ಸಾರುವ ಪಾಡ್ದನ. ಇಲ್ಲಿಭೂತದ ಪ್ರಸರಣದ ವಿಚಾರ ಇಲ್ಲ. ಕೋಳಿ ಅಂಕಕ್ಕೆ ಹೋಗುವ ಬೇರೆ ವೈದ್ಯನು ಜುಮಾದಿ ಭೂತಕ್ಕೆ ಹೇಳಿದ ಮಾತನ್ನು ಮರೆತ ಕಾರಣ ಅನಾಹುತಕ್ಕೆ ಒಳಗಾಗುತ್ತಾನೆ. ಕೋಳಿ ಅಂಕದಲ್ಲಿ ಮೊದಲು ಸಿಕ್ಕಿದ ಕೋಳಿಯನ್ನು ಜುಮಾದಿ ಭೂತಕ್ಕೆ ಅರ್ಪಿಸುತ್ತೇನೆ ಎಂದು ಹರಕೆ ಹೇಳಿದ್ದ ಆಡೂರ ದೇರಬೈದ್ಯನು ಆ ಮಾತನ್ನು ಮರೆತು ದೋಣಿ ಬಿಡುವ ಮರಕಾಲನಿಗೆ ಕೊಟ್ಟಾಗ ಜುಮಾದಿಯ ಮಹಿಮೆಯಿಂದ ಆ ಸತ್ತುಹೋದ ಕೋಳಿಯು ಜೀವ ತಾಳುತ್ತದೆ. ಅದು ದೇರೆಬೈದ್ಯನ ಮನೆಗೆ ಓಡಿಕೊಂಡು ಬಂದು ಅವನ ತಪ್ಪನ್ನು ತೋರಿಸಿ ಕೊಡುತ್ತದೆ. ದೇರೆಬೈದ್ಯನಿಗೆ ಕಾಯಿಲೆ ತಂದು ಹಾಕುತ್ತದೆ. ಕೊನೆಗೆ ಜುಮಾದಿ ಭೂತಕೆ ಆಹಾರ ಅರ್ಪಿಸಿದ ಮೇಲೆ ದೇರೆಬೈದ್ಯನ ಸಂಕಟ ನಿವಾರಣೆಯಾಗುತ್ತದೆ.

ಹಳ್ಳಿಗಳಲ್ಲಿ ಸಣ್ಣ ಸಣ್ಣ ಉದ್ದೇಶಗಳಿಗೂ ಜುಮಾದಿಗೆ ಹರಕೆ ಹೇಳುತ್ತಿದ್ದರು ಎನ್ನುವುದನ್ನು ಈ ಪಾಡ್ದನದಲ್ಲಿ ನೋಡಬಹುದು. ಕೋಳಿ ಅಂಕದಲ್ಲಿ ಕೋಳಿ ಸಿಗಬೇಕೆಂದು ಭೂತಗಳಿಗೆ ಹರಕೆ ಹೇಳುವುದು ತುಳುನಾಡಿನಲ್ಲಿ ಒಂದು ಜನಪ್ರಿಯ ಕ್ರಮ. ಅದರ ಸ್ಥಾಪನೆ ಈ ಪಾಡ್ದನದಲ್ಲಿ ಇದೆ. ಸಾಂಸ್ಕೃತಿಕವಾಗಿ ಈ ಪಾಡ್ದನವು ಕೋಳಿ ಅಂಕದ ಪದ್ಧತಿಯ ವಿವರಣೆಗಳನ್ನು, ಪೊಳಲಿ ಜಾತ್ರೆಯ ಮಹತ್ವವನ್ನು ಹೇಳುತ್ತದೆ.

$J_8$ ಪಾಡ್ದನವು ಬೇವುಪೂಂಜನ ದುರಂತಕ್ಕೆ ಸಂಬಂಧಿಸಿದ ಜುಮಾದಿಯ ಮಹಿಮೆಯನ್ನು ಸಾರುವ ಪ್ರಸಂಗವನ್ನು ಒಳಗೊಂಡಿದೆ. ಇಲ್ಲಿಯೂ ಒಂದು ಘಟನೆಯು ಜುಮಾದಿಯ ಮಹಿಮೆಯನ್ನು ಸ್ಥಾಪಿಸುತ್ತದೆ. ಆದರೆ ಉಳಿದ ಪಾಡ್ದನಗಳ ಘಟನೆಗಿಂತ ಇದು ವೈಶಿಷ್ಟ್ಯವಾಗಿರುವುದಕ್ಕೆ ಬೇವುಪೂಂಜನು ಐತಿಹಾಸಿಕ ವ್ಯಕ್ತಿಯೂ ಪರಾಕ್ರಮಶಾಲಿಯೂ ಆಗಿರುವುದು ಕಾರಣ. ತಿಮ್ಮಣ್ಣಾಜಿಲನ ಸೇನಾಪತಿಯಾದ ದೇವುಪೂಂಜನು ಬಂಗರಸರೊಡನೆ ನಡೆಯುವ ಯುದ್ಧದಲ್ಲಿ ಜಯ ಲಭಿಸಲು ಜುಮಾದಿ ಭೂತಕ್ಕೆ ಹರಕೆ ಹೇಳುತ್ತಾನೆ. ಆದರೆ ಹರಕೆಯ ನೇಮಕ್ಕೆ ಹೋಗುವಾಗ ಸೂಳೆ ಸಿದ್ದುವಿನೊಡನೆ ಚೆನ್ನೆಯಾಟವಾಡುತ್ತಾ ನಿಲ್ಲುತ್ತಾನೆ. ಸಹಾಯ ಮಾಡಿದ ಜುಮಾದಿ ಭೂತವನ್ನು ಕಡೆಗಣಿಸಿದ ಕಾರಣ ದೇವುಪೂಂಜನ ದುರಂತ ಆಗುತ್ತದೆ. ಕೇವಲ ನಂಬುವುದು, ಸ್ಥಾನ ಕಟ್ಟಿಸುವುದು ಎಂದು ಇರುವ ಪಾಡ್ದನಕ್ಕಿಂತ ಸಾಹಸಿಯೊಬ್ಬನ ಸಣ್ಣ ದೌರ್ಬಲ್ಯ ಅವನ ಬದುಕಿನ ದುರಂತಕ್ಕೆ ಹೇಗೆ ಕಾರಣವಾಗುತ್ತದೆ ಎನ್ನುವ ದೃಷ್ಟಿಯಿಂದ ಈ ಪಾಡ್ದನವು ಗಮನಾರ್ಹವಾದುದು.

$J_9$ ಪಾಡ್ದನವು ಜುಮಾದಿಯ ಮಹಿಮೆಯನ್ನು ಇನ್ನೊಂದು ರೀತಿಯಲ್ಲಿ ಸಾಧಿಸುವ ವಸ್ತುವನ್ನುಳ್ಳದ್ದು. ಇದು "ದೇಬೆ" ಎನ್ನುವ ಹೆಣ್ಣೊಬ್ಬಳ ದುರಂತವನ್ನು ಕುರಿತದ್ದು. ಇಲ್ಲಿ ದೇಬೆಯ ದುರಂತ ಜುಮಾದಿ ಭೂತದ ನಂಬಿಕೆಗೆ ಸಂಬಂಧಿಸಿದ್ದು ಅಲ್ಲ. ಅದು ಅವಳ ಕುಟುಂಬಕ್ಕೆ ಸಂಬಂಧಪಟ್ಟದ್ದು. ಅಣ್ಣನ ಮೋಸದಿಂದ ಗಂಡನ ಮನೆಯ ಆಶ್ರಯವನ್ನು ಕಳೆದುಕೊಂಡ ದೇಬೆಗೆ ಬದುಕು ಬೇಡವಾಗುತ್ತದೆ.

ಆದಕ್ಕಾಗಿ ಜುಮಾದಿ ಭೂತವನ್ನು ಬೇಡಿಕೊಂಡು ಅವರೊಂದಿಗೆ ಮಾಯವಾಗುತ್ತಾಳೆ. ಇದು ಹೆಣ್ಣೊಬ್ಬಳ ಆತ್ಮಹತ್ಯೆಯ ಸಂಬಂಧಕೊಟ್ಟು ರಚಿಸಿದ ಪಾಡ್ದನವಿರಬೇಕು.

**ಜುಮಾದಿ ಭೂತದ ಪ್ರಸರಣದ ಸ್ಥಳಗಳು**

$J_5$ ಮುಗೆರನಾಡು ಸಾರಸೀಮೆ—ಬಂಟ್ವಾಳ—ಅಂಬಡಾಡಿ—ಪಂಚನಡ್ಕದಗೋಳಿ—ಬೆಣ್ಣದ ಪದವು—ಅಮುಣಂಜ-ಪೊಯ್ಯೆ ಪೂಡಿಕರ ಗೋಳಿ—ಪುರಾಳ (ಮೊಳಲಿ)— ಅಡ್ಡಣದ ಹೊಳೆ—ಇಟ್ಟೆಯಿ—ಕಾಳಿ ಬೋಳೂರು—ಮೂಳೂರು—ಸಾಲೆದ ಕರಿಯ (ಸಾಲೆಯ ಕಡವು)—ಬಲ್ಲಮಲೆ—ಪಡುಅಡಿ—ಪಾಳತಿಕಟ್ಟೆ—ದೊಣೆಂಜಕಲ್ಲ್—ಮುಗೇರ್-ಸಂಪೆಂಜದ ಬೂಡು.

$J_4$ ಸಾರದ ಬೆಳಿವೂರು—ಕಂದೆಲ್‌ಗುಂಡ—ಮುಗೆರ್ ನಾಡು ಸೀಮೆ—ಬಾರ್ದಲದ ಬೂಡು—ಮುಂಟಮೆದ ಗೋಳಿ—ಅಡ್ಡಂದ ಪಾದೆ—ಇರಂದ ಬೊಟ್ಟು—ಅಲಂಗಾರ್—ಪಾಣಿ ಮುಗೆರ್—ಪುಳಿಂಕೆ ದಿಮಾರ್—ಅಂಬಡಾಡಿ—ಕುದಿಗ್ರಾಮ ಮಾಗಣೆ—ಪರಾರಿ ಗುತ್ತು—ತುಂಬೆ—ಸುಜೇರು—ಪರಂಗಿಪೇಟೆ—ಸೋಮನಾಥ ಕಟ್ಟೆ—ಅಡ್ಯಾರ ಗುತ್ತು—ಕಣ್ಣೂರು ಬೂಡು ಜಪ್ಪು—ಕಾಣೆ ಕರಿಯ—ಅತ್ತಾವರ.

## 2. ಗುಳಿಗ

ಗುಳಿಗ ಭೂತವನ್ನು ರುದ್ರಾಂಶ ಸಂಭೂತವಾದ ಭೂತ ಎಂದು ಭಾವಿಸುತ್ತಾರೆ. ರುದ್ರನ ತಾಮಸ ಸ್ವರೂಪದಲ್ಲಿ ಹೆಚ್ಚು ಉಗ್ರವಾಗಿ ಇರುವ ಭೂತ ಗುಳಿಗ. ಅದರ ಸಾಹಸ ಮಹಿಮೆಯನ್ನು ತೋರಿಸುವ ರೀತಿಗಳು ಭಯಾನಕವಾದವು. ಈ ಗುಳಿಗನಿಗೆ ಅರ್ಪಣೆಯನ್ನು ಸಲ್ಲಿಸುವ ಕಲ್ಲಿಗೆ 'ಗುಳಿಗನ ಕಲ್ಲು' ಎನ್ನುತ್ತಾರೆ. ಮನುಷ್ಯರಿಗೆ ಉಪದ್ರಕೊಡುವಾಗ ಗುಳಿಗನ ಹೊಡೆತ ಬಹಳ ಪ್ರಸಿದ್ಧವಾದುದು ಮತ್ತು ಹೆದರಿಕೆ ಹುಟ್ಟಿಸುವಂತಹದ್ದು, ಇಂತಹ ಹೊಡೆತಕ್ಕೆ 'ಗುಳಿಗನ ಪೆಟ್ಟು' ಎನ್ನುತ್ತಾರೆ. ಈ ಭೂತದ ಸ್ವಭಾವವೇ ಸಾಮಾನ್ಯವಾಗಿ ಕಿಲಾಡಿ ಸ್ವರೂಪದ್ದು, ಮನುಷ್ಯರಿಗೆ ಜಾನುವಾರುಗಳಿಗೆ ತೊಂದರೆಯನ್ನು ಕೊಡುವುದು, ಹಾಗೆಯೇ ರಕ್ಷಿಸುವುದು ಎಂಬ ನಂಬಿಕೆ ಗುಳಿಗನ ಬಗ್ಗೆ ಇದೆ. ಅದಕ್ಕಾಗಿ ಗುಳಿಗನಿಗೆ ಮಂತ್ರಿಸಿ ತೆಂಗಿನಕಾಯನ್ನು ರಕ್ಷೆಯಾಗಿ ಇಟ್ಟುಕೊಳ್ಳುತ್ತಾರೆ. ಗುಳಿಗ ಭೂತಕ್ಕೆ ಸಂಬಂಧಿಸಿದಂತೆ ಕೆಲವು ಪಾಡ್ದನಗಳು ಸಿಗುತ್ತವೆ. ಆದರೆ ಪಾಡ್ದನಗಳಿಗಿಂತಲೂ ಹೆಚ್ಚಾಗಿ ಗುಳಿಗನ ಪರಾಕ್ರಮವನ್ನು ಮಹಿಮೆಯನ್ನು ಹೇಳುವ ಐತಿಹ್ಯಗಳು ದೊರೆಯುತ್ತವೆ. ಒಂದೊಂದು ಸಣ್ಣ ಸಣ್ಣ ಘಟನೆಯೂ ಗುಳಿಗನ ಒಂದೊಂದು ಐತಿಹ್ಯವಾಗುತ್ತದೆ. ಆದರೆ ಇವು ಯಾವುವೂ ಪಾಡ್ದನದ ರೂಪದಲ್ಲಿ ಸಿಗುವುದಿಲ್ಲ. ಗುಳಿಗನು ಪ್ರಸಿದ್ಧ ಭೂತವಾದರೂ ಸ್ಥಾನಗಳಲ್ಲಿ ದೊಡ್ಡ ಪ್ರಮಾಣದ ಉತ್ಸವ ಪಡೆಯುವ ಪ್ರತಿಷ್ಠಿತ ಭೂತವಲ್ಲ. ಅದರ ಪಾಡ್ದನಗಳು ಕಡಿಮೆ ಸಿಕ್ಕುವುದಕ್ಕೆ ಅದು ಒಂದು ಕಾರಣವಾಗಿರಬೇಕು. ಗುಳಿಗ ಭೂತಕ್ಕೆ ಸಂಬಂಧಿಸಿದ ಮೂರು ಪಾಡ್ದನಗಳು ಕಡಿಮೆ ಸಿಕ್ಕುವುದಕ್ಕೆ ಇದು ಒಂದು ಕಾರಣವಾಗಿರಬೇಕು. ಗುಳಿಗ ಭೂತಕ್ಕೆ ಸಂಬಂಧಿಸಿದ ಮೂರು ಪಾಡ್ದನಗಳನ್ನು ಇಲ್ಲಿ ಗಮನಿಸಲಾಗಿದೆ.

೧) $G_1$—ಗುಳಿಗ : ಸಂ. ಕನರಾಡಿ ವಾದಿರಾಜ ಭಟ್ಟ—ಪಾಡ್ದನಗಳು—೧೯೭೪

೨) $G_2$—ಸುಬ್ಬಿಯಮ್ಮ : ಸಂ. ಅಮೃತ ಸೋಮೇಶ್ವರ.

೩) $G_3$—ಕೊಲ್ಲೂರು ಮೂಕಾಂಬಿಕ ಜೇವು : ಸಂ. ಅಮೃತ ಸೋಮೇಶ್ವರ.

ಇವುಗಳಲ್ಲಿ $G_1$ ಗುಳಿಗನ ಉಗಮಕ್ಕೆ ಸಂಬಂಧಿಸಿದ್ದು, $G_2$ ಮತ್ತು $G_3$ ಗುಳಿಗನ ಮಹಿಮೆಗೆ ಸಂಬಂಧಿಸಿದ್ದು.

## $G_1$ ಪಾಡ್ದನದ ಕನ್ನಡ ರೂಪಾಂತರ

"ತಂದೆಯೆಂದರೆ ಗಾಳಿ ದೇವರು, ತಾಯಿಯೆಂದರೆ ಭದ್ರಕಾಳಿ. ತಾಯಿ ಎಡಬದಿಯಲ್ಲಿ, ತಾಯಿ ಬಲಭಾಗದಲ್ಲಿ: 'ಹಾಗಾದರೆ ತಿಂಗಳು ಪರಿಪೂರ್ಣ ತುಂಬಿಬಂದಾಗ ಎಲ್ಲಿ ಬರಬೇಕು ಅಮ್ಮ" ಎಂದು ಕೇಳಿದನು. 'ಹಾಗಾದರೆ ದೇವರು ಕೊಟ್ಟ ಬಾಗಿಲು ಇದೆ ಇಲ್ಲಿ ಬಾ" ಎಂದು ಹೇಳಿದರು. 'ಅಲ್ಲಿ ಬರುವುದಿಲ್ಲ ಅಮ್ಮ ನಾನು." 'ಹಾಗಾದರೆ ಮತ್ತೆ ಎಲ್ಲಿಂದ ಬರುವೆ?' 'ತಲೆ ಒಡೆದು ಬಾ' 'ಅಲ್ಲಿ ಬರುವುದಿಲ್ಲ.' 'ಬೆನ್ನು ಒಡೆದು ಬಾ' ಎಂದರು. 'ಬೆನ್ನಿನಲ್ಲಿ ಬಂದರೆ ಬೆನ್ನಿನಲ್ಲಿ ಹುಟ್ಟಿದ ತಮ್ಮನೆಂದು ಹೇಳಿಯಾರು. ಹಾಗಾದರೆ ನಾನು ಬರುವ ಬಾಗಿಲು ಬೇರೆ ಇದೆ. ಬಲದ ಸಿರಿಮೊರೆ ಒಡೆದು ನಾನು ಭೂಮಿಯಲ್ಲಿ ಜನಿಸುತ್ತೇನೆ' ಭೂಮಿಯಲ್ಲಿ ಜನಿಸಿ ತಾಯಿಯ ಬಲಮೊಲೆ ತಿಂದು ಒಡೆದು ಕೈತಟ್ಟಿ ನಕ್ಕನು. ಅಷ್ಟು ಹೊತ್ತಾಗುವಾಗ ಹದಿನಾರು ಕಾಳರು, ಹದಿನಾರು ಭೂತರು, ಶನಿ, ಗುಳಿಗ, ಮಂತ್ರಗುಳಿಗ ಮೇಲಾದ ಗುಳಿಗಬಂಟ ಮಾರ್ನಗುಳಿಗ ಬಂದರು. ಹುಟ್ಟಿ ಹದಿನಾರು ದಿವಸವಾದಾಗ ಭೂಮಿ ಬಿಡುತ್ತೇನೆ, ಆಕಾಶದಲ್ಲಿರುತ್ತೇನೆ ಎಂದು ಹೇಳಿದನು. ಆಕಾಶಕ್ಕೆ ಹೋಗಿ ನಾರಾಯಣ ದೇವರನ್ನು ಹಣ್ಣೆಂದು ತಿನ್ನಲು ಹೋದನು. 'ಹಾಗಾದರೆ ಹೀಗೆ ಮಾಡುವುದು ಬೇಡ. ನಿನಗೆ ಆಹಾರ ನಾನು ಕೊಡುತ್ತೇನೆ, ಶಾಪ ಕೊಟ್ಟರು. ಕುರಿ ಕಡಿದರು. ಕುರಿಯ ಬಿಂದು ಕೊಟ್ಟರು. ಕೈಯಾರಿತೊ ಬಾಯಾರಿತೋ ಎಂದು ಕೇಳಿದರು. ನನ್ನ ಕೈ ಬಲವಿಲ್ಲ. ಬಾಯಾರಲಿಲ್ಲ. ಕಂದುರೆ ಕಡಿದರು. ಕಂದುರೆಯ ರಕ್ತ ಬಿಂದು ಕೊಟ್ಟರು. ಒಂಟೆ ಕಡಿದರು, ಒಂಟೆಯ ರಕ್ತ ಬಿಂದು ಕೊಟ್ಟರು. ಶಾಪ ಕೊಡುತ್ತಾರೆ–'ನಿನಗೆ ಕೆಳಗೆ ಸಿರಿಲೋಕದಲ್ಲಿ ನರಹುಳ ಸೃಷ್ಟಿಮಾಡಿದ್ದೇನೆ ನಾನು. ಒಳ್ಳೆಯದನ್ನು ಕೊಡುತ್ತಾರೆ. ಹಾಕುತ್ತಾರೆ. ನಿನ್ನನ್ನು ಬಾಲ ಸೇತುವೆಯಲ್ಲಿ, ನೂಲು ಕೈಹಗ್ಗದಲ್ಲಿ ನಾಡಿಗೆ ಕಳುಹಿಸುತ್ತೇನೆ ಎಂದರು. ನಾಡಿಗೆ ಇಳಿದು ಮೂರು ಕಲ್ಲು ಹಾಕುವವನ ಕೈಯಿಂದ ನೀನು ತೆಗೆದುಕೊಳ್ಳ ಬೇಕು. ಅಷ್ಟೊಂದು ಕೊಡಬೇಕಾದರೆ ಆಕಾಶದವರೆಗೆ ಏಣಿ, ಪಾತಾಳ ಹೊಲಿಯುವ ಸೂಜಿ ತಂದುಕೊಡ ಬೇಕು, ಹೊಯ್ಗೆಯ ಹಗ್ಗ, ಗೆರಸೆಯ ಬದನಿಕೆ, ಒನಕೆಯ ಹಗ್ಗ, ಸಮುದ್ರ ಅಳೆಯುವ ಸೇರು ತಂದು ಬಂದರೆ ನಿಮಗೆ ಆಗುವ ಬಲಭೋಗ ಕೊಡುತ್ತೇನೆ.' ನಾಡಿಗೆ ಇಳಿಯುವಾಗ ಪೆರ್ಗಲ ಮೋಂಟು ಬೈದ್ಯ ಈಚಲಿಗೆ ಮೂರ್ತೆಗೆ ಹೋಗಿದ್ದಾರೆ. ಕಳ್ಳಿನ ಮಡಕೆಯನ್ನು ಆಹಾರವಾಗಿ ತೆಗೆದುಕೊಂಡನು. ಅಲ್ಲಿ ಸಣ್ಣ ಗೋಳಿಮರದಲ್ಲಾದನು. ಕುಳಿತು ದೂರಕ್ಕೆ ನೋಡುವಾಗ ಮರ್ದಲ ಬತ್ತಿ ಕಾಣುತ್ತದೆ. ಮರ್ದಲ ಬತ್ತಿಯಲ್ಲಿ ಮಂಜು ಬೀರ ವೈದ್ಯ ಇದ್ದಾರೆ. ನೆಲ್ಲಿಕಲ್ಲಿನ ಮಲೆಗೆ ಹೋಗಿದ್ದಾರೆ. ಕಳ್ಳಿನ ಮಡಕೆಯನ್ನು ಆಹಾರವಾಗಿ ಪಡೆದನು. ಅಲ್ಲಿ ವರ್ಷದ ನೇಮ ಕೊಟ್ಟರು. ಅಲ್ಲಿಂದ ಜಾರ ಸೀಮೆಗೆ ಬಂದನು. ಜಾರ ಸೀಮೆಗೆ ಬಂದು ಗಡಿ ಹಾಕಿದ ಸ್ಥಳದಲ್ಲಾದನು. ಜಾರ ಸೀಮೆಯ ಬಾರಗರು ವರ್ಷಂಪ್ರತಿ ನೇಮಕೊಟ್ಟರು."

## $G_2$ 'ಸುಬ್ಬಿಯಮ್ಮ' ಪಾಡ್ದನದ ಕನ್ನಡ ರೂಪಾಂತರ

"ಘಟ್ಟದ ಮೇಲೆ ರಾಮು ಗುಳಿಗಂದಾರ ಮತ್ತು ಅವನ ಮಗಳು ಸುಬ್ಬಿಯಮ್ಮ ಇದ್ದರು. ಅವರಿಗೆ ಬಳೆ ಮಾರುವ ಕೆಲಸ. ಅವರು ಘಟ್ಟ ಇಳಿದು ಮಂಗಳೂರಿಗೆ ಬಂದು ಬಳೆ ಮಾರುತ್ತಾರೆ. ಅಲ್ಲಿಂದ ಮಂಜೇಶ್ವರಕ್ಕೆ ಬಂದು ಬಳೆ ಮಾರುತ್ತಾ ಹೋಗುತ್ತಾರೆ. ಅಲ್ಲಿ ರಾತ್ರಿ ಹೊತ್ತು ತಂಗುತ್ತಾರೆ. ಮಾಲಾಡಿ ಗುತ್ತಿನಲ್ಲಿ ಅವರಿಗೆ ಆದಿನ ರಾತ್ರಿ ತಂಗಲು ಬಿಡಾರ ಸಿಗುತ್ತದೆ. ರಾತ್ರಿಯ ಹೊತ್ತು ಹಣ್ಣು ಹಾಲು ತಿಂದು

ಮಲಗುತ್ತಾರೆ. ಬೆಳಿಗ್ಗೆ ರಾಮು ಗುಳಿಗಂದಾರ್ ಬಳೆ ಮಾರಲು ಹೋಗುತ್ತಾನೆ. ಮಗಳು ಸುಬ್ಬಿಯಮ್ಮ ಬಾಚಣಿಗೆ ಎಣ್ಣೆ ತೆಗೆದುಕೊಂಡು ತಲೆ ಬಾಚುತ್ತಾಳೆ. ಬಾಲೆಮುಡಿ ಕಟ್ಟುತ್ತಾಳೆ. ಮುಡಿಯ ಬಲಕ್ಕೆ ಸಿಂಗಾರ ವನ್ನು ಮುಡಿಯುತ್ತಾಳೆ. ಎಡಕ್ಕೆ ಸಂಪಿಗೆ ಹೂವನ್ನು ಇಡುತ್ತಾಳೆ, ಕುಂಕುಮದ ಬೊಟ್ಟು ಇಡುತ್ತಾಳೆ, ಸೀರೆ ಉಡುತ್ತಾಳೆ. ಕೊಡ ತೆಗೆದುಕೊಂಡು ನೀರು ತರಲು ಬಾವಿಗೆ ಹೋಗುತ್ತಾಳೆ. ಇಷ್ಟು ಸುಂದರವಾಗಿ ಅಲಂಕಾರ ಮಾಡಿಕೊಂಡು ಬಾವಿಯಲ್ಲಿಗೆ ಬಂದ ಚೆಲುವೆ ಸುಬ್ಬಿಯಮ್ಮನ ಮೇಲೆ ಗುಳಿಗನ ಕಣ್ಣು ಬೀಳುತ್ತದೆ. ಗುಳಿಗನು ಗೆಂದಗಿಡಿಯ (ಹದ್ದು) ರೂಪವಾಗಿ ಬಾವಿಯ ಪಣೆಮರದಲ್ಲಿ ಕುಳಿತುಕೊಳ್ಳುತ್ತಾನೆ. ಸುಬ್ಬಿಯು ಬಾವಿಯಿಂದ ನೀರು ಎಳೆಯುವಾಗ ಬಾವಿಯ ಮರ ತುಂಡಾಗುತ್ತದೆ. ಕೈಸಾಂಗ ಕಡಿಯುತ್ತದೆ, ಗುಳಿಗನು ಸುಬ್ಬಿಯನ್ನು ಬಾವಿಗೆ ಎಳೆದು ಹಾಕುತ್ತಾನೆ. ಸುಬ್ಬಿ ನೀರಿನಲ್ಲಿ ಮೇಲೆ ಕೆಳಗೆ ಆಗುತ್ತಾಳೆ. ಅಲ್ಲಿ ಅವಳ ಜೀವ ಹೋಗುತ್ತದೆ. ರಾಮು ಗುಳಿಗಂದಾರ್ ಮನೆಗೆ ಬಂದು ಸುಬ್ಬಿಯನ್ನು ಹುಡುಕಿ ಕೊನೆಗೆ ಬಾವಿಯಲ್ಲಿ ನೋಡಿ ದಾಗ ಅವಳ ಹೆಣವನ್ನು ಅಲ್ಲಿ ಕಾಣುತ್ತಾನೆ. ಆ ಹೆಣಕ್ಕೆ ಶವಸಂಸ್ಕಾರ ನಡೆಯುತ್ತದೆ. ಅವಳ ಹೆಣಕ್ಕೆ ಬೆಂಕಿ ಕೊಡುವಾಗ ಅರ್ಧ ಉರಿಯುವಷ್ಟರಲ್ಲಿ ಅವಳ ಮೂರು ಕೂಗು ಕೇಳಿಸುತ್ತದೆ. 'ಯಾರ ಜೊತೆಗೆ ಹೋಗು ತ್ತೀಯ ಮಗಳೇ' ಎಂದು ತಂದೆ ಕೇಳುತ್ತಾನೆ. ಗುಳಿಗನ ಜೊತೆಗೆ ನಾನು ಹೋಗುತ್ತಿದ್ದೇನೆ ಎನ್ನುತ್ತಾಳೆ. ಸುಬ್ಬಿಯ ಬಗ್ಗೆ ಪಾಡ್ದನದ ಕೊನೆಯಲ್ಲಿ ಬರುವ ಮಾತು ಬಹಳ ಮುಖ್ಯವಾಗಿದೆ – "ಸುಬ್ಬಿ ಬಾರಿ ಪೊರ್ಲುದ ಪೊಣ್ಣು ಆದಿತ್ತನೆಡ್ದಾವರ ಅಳೆಗ ಗುಳಿಗನ ದಿಟ್ಟಿ ಆಂಡಂದ್ ಪಣ್ವೇರ್, ಗುಳಿಗನ ಸೇರಿಗೆಡ್ ಇತ್ತಿನ ಈ ಸುಬ್ಬೀಗ್ ತಲಪಾಡಿನ ಸಾನ ಉಂಡು" (ಸುಬ್ಬಿ ಬಹು ಸುಂದರ ಹೆಣ್ಣು ಆಗಿದ್ದುದರಿಂದ ಅವಳಿಗೆ ಗುಳಿಗನ ದೃಷ್ಟಿ ಆಯಿತು ಎಂದು ಹೇಳುತ್ತಾರೆ. ಗುಳಿಗನ ವಶದಲ್ಲಿ ಇದ್ದ ಈ ಸುಬ್ಬಿಗೆ ತಲಪಾಡಿಯಲ್ಲಿ ಸ್ಥಾನ ಇದೆ)."

## $G_3$ 'ಕೊಲ್ಲೂರ ಮೂಕಾಂಬಿಜೇವು' ಪಾಡ್ದನದ ಕನ್ನಡ ರೂಪಾಂತರ :

"ಮೂಕಾಂಬಿ ಜೇವನ್ನು ದೇವಸ್ಥಾನದ ಪೂಜಾರಿಯಾಗಿದ್ದ ಪಟ್ಟಣ ತಂತ್ರಿಗೆ ಮದುವೆ ಮಾಡಿಕೊಡು ತ್ತಾರೆ. ಬಡತನದ ಕಾರಣದಿಂದ ದುಡಿಯಲು ದಕ್ಷಿಣ ರಾಜ್ಯಕ್ಕೆ ಹೋಗುತ್ತಾನೆ. ಹೆಂಡತಿ ತಾನು ಬರುವೆನೆಂದು ಹಠ ಹಿಡಿದರೂ ಕೇಳದೆ ಕಡಂಬಾರ ಮಯ್ಯರ ಬೂಡಿನಲ್ಲಿ ಬಿಟ್ಟು ಹೋಗುತ್ತಾನೆ. ಕಡಂಬಾರ ಮಯ್ಯರು ಹಿರಿಯರಾದವರು, ಆಶ್ರಯ ಕೊಡುವವರು, ಮುಕಾಂಬಿ ಜೇವಿಗೆ ಮಾವನಂತಿರುವವರು. ಈ ಕಡಂಬಾರ ಮಯ್ಯರು ಮೂಕಾಂಬಿ ಜೇವುವಿಗೆ ಪ್ರತ್ಯೇಕವಾದ ಮನೆಯನ್ನು ಕೊಡುತ್ತಾರೆ. ಆದರೆ ಇದೇ ಕಡಂಬಾರ ಮ್ಯೆಯ್ಯರು ಒಂದುದಿನ ಮೂಕಾಂಬಿ ಜೇವುವಿನ ಮನೆಗೆ ಬಂದು ಬಲತ್ಕಾರವಾಗಿ ಅವಳ ಸಂಗವನ್ನು ಅನುಭವಿಸು ತ್ತಾರೆ. ಆಮೇಲೆ ತಾನು ಮಾಡಿದ ತಪ್ಪು ಬೇರೆಯವರಿಗೆ ತಿಳಿಯಬಾರದೆಂದು ಮೂಕಾಂಬಿ ಜೇವುವಿಗೆ ಗುಳಿಗನ ಶಾಪ ಹಾಕುತ್ತಾರೆ. ಮುಕಾಂಬಿ ಜೇವುವು ಗುಳಿಗನ ಉಪದ್ರದಿಂದ ಸಾಯುತ್ತಾಳೆ. ಅವಳು ಸತ್ತ ಮೇಲೆ ಮಯ್ಯರು 'ನಿಮ್ಮ ಹುಡುಗಿಯನ್ನು ಕರೆದುಕೊಂಡು ಹೋಗಿ' ಎಂದು ಅವಳ ತಂದೆತಾಯಿಗೆ ತಿಳಿಸುತ್ತಾರೆ. ತಂದೆ ತಾಯಿಗಳು ಬರುವಾಗ ಮಗಳ ಚಿತೆಯನ್ನು ಕಂಡು ಹಾರಿ ಚಿತೆಗೆ ಬಿದ್ದು ಪ್ರಾಣ ಕಳೆದುಕೊಳ್ಳುತ್ತಾರೆ. ದಕ್ಷಿಣದ ರಾಜ್ಯಕ್ಕೆ ಹೋದ ಪಟ್ಟಣತಂತ್ರಿಗೆ ಕೆಟ್ಟ ಕನಸು ಬೀಳುತ್ತದೆ. ಹೆಂಡತಿಯನ್ನು ನೋಡಲು ಬಂದ ಪಟ್ಟಣತಂತ್ರಿಯು ಹೆಂಡತಿಯ ಬೆಂಕಿಯನ್ನು ನೋಡುತ್ತಾನೆ. ಅವನು ಹೆಂಡತಿಯ ಮೇಲಿನ ಪ್ರೇಮದಿಂದ ಬೆಂಕಿಗೆ ಹಾರಿ ಪ್ರಾಣವನ್ನು ಬಿಡುತ್ತಾನೆ.

ಗುಳಿಗ ಭೂತದ ಉಗಮವನ್ನು ಹೇಳುವ $G_1$ ಪಾಡ್ದನ ಮತ್ತು ಮಹಿಮೆಯನ್ನು ಹೇಳುವ $G_2$ ಮತ್ತು $G_3$ ಪಾಡ್ದನಗಳು ಹಾಗೂ ಅದೇ ರೀತಿ ಇತರ ಪಾಡ್ದನಗಳು ಒಟ್ಟು ಸೇರಿ 'ಗುಳಿಗ Cycle' ಆಗುತ್ತದೆ. ಗುಳಿಗ ಭೂತದ ಹುಟ್ಟು ಮತ್ತು ಮಹಿಮೆಯ ಬೇರೆ ಬೇರೆ ಘಟನಾ ಪರಂಪರೆಗಳನ್ನು ಒಳಗೊಂಡ ಈ ಪಾಡ್ದನಗಳನ್ನು ಸಮಗ್ರವಾಗಿ 'ಗುಳಿಗ epic' ಎಂದು ಕರೆಯಬಹುದು.

G.1 ಪಾಡ್ದನವು ಗುಳಿಗನ ಉಗಮವನ್ನು ತಿಳಿಸುತ್ತದೆ. ಗುಳಿಗ ಭೂತವು ಭಯಂಕರವಾದುದು, ಉಗ್ರ ಸ್ವರೂಪದ್ದು ಎನ್ನುವ ವಿಚಾರ ಅದರ ಹುಟ್ಟಿನಲ್ಲಿಯೇ ಸ್ಪಷ್ಟವಾಗಿದೆ. ತಂದೆ ಗಾಳಿ ದೇವರು, ತಾಯಿ ಭದ್ರಕಾಳಿ. ಇಲ್ಲಿ ಗುಳಿಗನ ತಂದೆ ಗಾಳಿದೇವರು ಅಂದರೆ ವಾಯುದೇವ ಎಂದಾಗುತ್ತದೆ. ಗುಳಿಗನ ಸ್ವರೂಪವನ್ನು ಹೇಳುವಾಗಲೂ ಅದು ಗಾಳಿಯ ರೂಪದ ಭೂತ ಎನ್ನುತ್ತಾರೆ. 'ಗುಳಿಗನ ಪೆಟ್ಟು' ಗಾಳಿಯಲ್ಲಿ ಬರುವುದು, ಗುಳಿಗನ ಗಾಳಿ ತಾಗಿ ಮೂರ್ಛೆ ಹೋಗುವುದು ಮುಂತಾದ ಜನಪದ ಕಲ್ಪನೆಗಳು ಗುಳಿಗ ಭೂತದ ಬಗ್ಗೆ ಇವೆ. ಅದು ಕಣ್ಣಿಗೆ ಕಾಣದಿರುವುದು. ಅಂದರೆ ಅದೃಶ್ಯವಾಗಿರುವುದು ಎನ್ನುವ ಅಭಿಪ್ರಾಯವು. ಗುಳಿಗವು ಗಾಳಿದೇವರ ಮಗ ಎನ್ನುವ ಪಾಡ್ದನದ ವಿಚಾರಕ್ಕೆ ಪೋಷಕವಾಗಿದೆ. ಹಾಗೆಯೇ ಗುಳಿಗನ ತಾಯಿ ಭದ್ರಕಾಳಿ ಎನ್ನುವುದರ ಮೂಲಕ ಗುಳಿಗ ಭೂತದ ಉಗ್ರ ಸ್ವರೂಪವನ್ನು ಹೇಳಲಾಗಿದೆ. ಅದಕ್ಕಿಂತಲೂ ಹೆಚ್ಚು ಸ್ವಾರಸ್ಯವಾದ ಮತ್ತು ವಿಚಿತ್ರವಾದ ಸಂಗತಿ ಎಂದರೆ ಗುಳಿಗ ತಾಯಿಯ ಹೊಟ್ಟೆಯಿಂದ ಹೊರಗೆ ಬಂದ ರೀತಿ. ತಾಯಿಗೆ ತಿಂಗಳು ತುಂಬಿ ಬಂದಾಗ ಆತ ತಾಯಿಯ ಬಲದ ಸಿರಿಮೊಲೆಯನ್ನು ಒಡೆದು ಭೂಮಿಯಲ್ಲಿ ಜನಿಸುತ್ತಾನೆ. ಜನಿಸಿದೊಡನೆಯೇ ಬಲಮೊಲೆಯನ್ನು ತಿಂದು ಚಪ್ಪಾಳೆ ಹೊಡೆದು ನಗುತ್ತಾನೆ. ಗುಳಿಗನ ವಿಕಟ ಅಟ್ಟಹಾಸವನ್ನು ಗುಳಿಗ ಭೂತದ ಆರಾಧನೆಯಲ್ಲಿ ಕೇಳಬಹುದು. ಅವನು ಭಯಂಕರ ರೀತಿಯಲ್ಲಿ ತಾಯಿಯ ಸಿರಿಮೊಲೆಯಿಂದ ಹೊರಗೆ ಬಂದದ್ದು, ಹೊರಗೆ ಬಂದೊಡನೆ ಚಪ್ಪಾಳೆ ತಟ್ಟಿ ನಕ್ಕದ್ದು ಇವೆಲ್ಲಾ ಅವನ ತಾಮಸ ಗುಣವನ್ನು ಹೇಳುತ್ತವೆ. ಹುಟ್ಟಿದೊಡನೆಯೇ ಅವನಿಗೆ ಇಂತಹದೇ ತಾಮಸ ಸ್ವಭಾವದ ಕಾಳರು, ಧೂತರು, ಶನಿಗುಳಿಗ, ಮಂತ್ರಗುಳಿಗ, ದೊಡ್ಡಗುಳಿಗ, ಬಂಟಮಾರಿನ ಗುಳಿಗ ಮುಂತಾದವರು ಜೊತೆ ಸೇರುತ್ತಾರೆ. ಇಲ್ಲಿ ಗುಳಿಗನ ಪರಿಸರವೇ ಹೆಚ್ಚು ಭಯಾನಕ ಸ್ವರೂಪದ್ದು ಎಂದು ಗೊತ್ತಾಗುತ್ತದೆ. ಇಲ್ಲಿ ಗುಳಿಗವು ನಾರಾಯಣ ದೇವರನ್ನು ಹಣ್ಣು ಎಂದು ತಿನ್ನಲು ಹೋಗುತ್ತದೆ. ಪೌರಾಣಿಕ ಕತೆಯಲ್ಲಿ ವಾಯುವಿನ ಮಗ ಹನುಮಂತನು ಇದೇ ಕೆಲಸ ಮಾಡುತ್ತಾನೆ, ಗುಳಿಗನು ಹನುಮಂತನಂತೆಯೇ ವಾಯುವಿನ ಮಗನಾದ್ದರಿಂದ ಅವನಿಗೂ ಈ ಪ್ರಸಂಗವನ್ನು ಸೇರಿಸಿರಬಹುದು. ಪ್ರಾಣಿ ಬಲಿಗಳನ್ನು ಮಾಡಿ ಗುಳಿಗನಿಗೆ ತೃಪ್ತಿಯಾಗದೇ ಇದ್ದಾಗ ನರಬಲಿಗಾಗಿ ಆತನನ್ನು ಭೂಲೋಕಕ್ಕೆ ಕಳುಹಿಸುತ್ತಾರೆ. ಅದ್ದರಿಂದಲೇ ಇರಬೇಕು–ಗುಳಿಗನ ಉಪದ್ರವದಿಂದ ಹೆಚ್ಚಾಗಿ ಮನುಷ್ಯರು ಸಾಯುತ್ತಾರೆ ಎನ್ನುವ ನಂಬಿಕೆ ಜನಪ್ರಿಯವಾಗಿರುವುದು. ನಾರಾಯಣ ದೇವರು ಗುಳಿಗನನ್ನು ಆಕಾಶದಿಂದ ಭೂಮಿಗೆ ಇಳಿಸುವ ಕ್ರಮ–ಬಾಲಪಾಪು, ನೂಲು ಕೈಸಾಂಗ್, ಜನಪದೀಯವಾಗಿದೆ. ಪಾಡ್ದನದ ಮುಂದಿನ ಭಾಗದಲ್ಲಿ ಗುಳಿಗನ ಮಹಿಮೆ ಮತ್ತು ಸಂಚಾರವಿದೆ. ಮೋಂಟು ಬೈದ್ಯನಲ್ಲಿ, ಪಡೆಜುಬೀರ ಬೈದ್ಯನಲ್ಲಿ ಕಳ್ಳಿನ ಮಡಕೆಯನ್ನು ಆಹಾರವಾಗಿ ತೆಗೆದುಕೊಳ್ಳುವುದು, ನೇಮವನ್ನು ಪಡೆಯುವುದು ಮುಂತಾದ ಪ್ರಸಂಗಗಳು ಬರುತ್ತವೆ. ಇಲ್ಲಿ ಗುಳಿಗನ ಉಗಮ ನೇರವಾಗಿ ರುದ್ರನಿಂದ ಎಂದು ಕಾಣಿಸದಿದ್ದರೂ ಭದ್ರಕಾಳಿಯ ಮಗ ಎನ್ನುವ ದೃಷ್ಟಿಯಿಂದ ಅದೇ ರೀತಿಯ ಪರಿಸರ ಕಾಣಿಸುತ್ತದೆ.

$G_2$ ಪಾಡ್ದನವು ಸುಬ್ಬಿಯಮ್ಮನ ದುರಂತ ಕತೆಯನ್ನು ಹೇಳುತ್ತದೆ. ಇಲ್ಲಿ ಗುಳಿಗನು ಮಹಿಮೆಗಿಂತ ಹೆಚ್ಚಾಗಿ ಗುಳಿಗನ ಉಪದ್ರವದಿಂದ ನಿರಪರಾಧಿ ಹೆಣ್ಣೊಬ್ಬಳು ಹೇಗೆ ದುರಂತ ಮರಣವನ್ನು ಅಪ್ಪಿದಳು ಎನ್ನುವ ಕಥನ ಪ್ರಧಾನವಾಗಿದೆ. ಪಾಡ್ದನದ ಮುಕ್ಕಾಲು ಭಾಗವು ರಾಮು ಗುಳಿಗಂದಾರ ಮತ್ತು ಅವರ ಮಗಳು ಸುಬ್ಬಿಯಮ್ಮ ಇವರ ಕತೆಗೆ ಸಂಬಂಧಿಸಿದ್ದು. ಅವರ ಬಳೆ ಮಾರುವ ವ್ಯಾಪಾರ, ಆ ಸಂಬಂಧದ ಸಂಚಾರ–ಈ ಸಂಗತಿಗಳು ಬಂದಿವೆ. ಸುಂದರ ಹೆಣ್ಣು ಸುಬ್ಬಿಯಮ್ಮ ಅಲಂಕಾರ ಮಾಡಿಕೊಂಡ ವರ್ಣನೆ ಆಕರ್ಷಕವಾದ ಒಂದು ಚಿತ್ರಣ. ಆದರೆ ಪಾಡ್ದನದ ಕೊನೆಯ ಸಾಲುಗಳು ಹೇಳುವಂತೆ ಸುಬ್ಬಿಯ ಈ ಸೌಂದರ್ಯವೇ ಅವಳ ಮೇಲೆ ಗುಳಿಗನ ದೃಷ್ಟಿ ಬೀಳಲು ಕಾರಣವಾಯಿತು. ನೀರು ಸೇದಲು ಬಾವಿಯ ಬಳಿಗೆ ಹೋದ ಸುಬ್ಬಿಯಮ್ಮಳನ್ನು ಗುಳಿಗ ಬಾವಿಗೆ ಎಸೆದು ಹಾಕುತ್ತದೆ. ಗುಳಿಗ ಭೂತದ ತಾಮಸ ಗುಣ ಈ ಘಟನೆಯಲ್ಲಿ ಸ್ಪಷ್ಟವಾಗುತ್ತದೆ. ಸುಂದರವಾದ ಹೆಣ್ಣಿಗೆ ಕಣ್ಣಿನ ದೃಷ್ಟಿ ಬೀಳುತ್ತದೆ ಎಂಬ ನಂಬಿಕೆಯ ಜೊತೆಗೆ ಗುಳಿಗನ ದೃಷ್ಟಿ ಬೀಳುತ್ತದೆ ಎನ್ನುವ ನಂಬಿಕೆಯು ಹಳ್ಳಿಗಳಲ್ಲಿ ಪ್ರಚಲಿತವಾಗಿದೆ. ಕಣ್ಣಿನ ದೃಷ್ಟಿ

ಎನ್ನುವ ಒಂದು ಮಾನಸಿಕ ಸೂತ್ರದ ಕಲ್ಪನೆಯನ್ನು ಭೂತದ ಕಲ್ಪನೆಯನ್ನಾಗಿ ಮಾರ್ಪಡಿಸಿರಬಹುದು. ಇದರಿಂದಾಗಿಯೇ ಗುಳಿಗ ಭೂತದ ಉತ್ಸವಗಳಲ್ಲಿ ಹೆಣ್ಣು ಮಕ್ಕಳನ್ನು ಹತ್ತಿರ ಸುಳಿಯಲು ಬಿಡುವುದಿಲ್ಲ. ಗುಳಿಗನ ದೃಷ್ಟಿ ಬೀಳುತ್ತದೆ ಎನ್ನುವ ಭಯ ಇದಕ್ಕೆ ಕಾರಣ. ಸುಬ್ಬಿಯಮ್ಮಳ ಹೆಣವನ್ನು ಚಿತೆಯಲ್ಲಿ ಉರಿಸುವಾಗ ಅವಳು ಮೂರು ಬೊಬ್ಬೆ ಹಾಕಿ ತಾನು ಗುಳಿಗನ ಜೊತೆಗೆ ಹೋಗುತ್ತೇನೆ ಎಂದಳಂತೆ. ಹೀಗೆ ಅವಳು ಗುಳಿಗ ಪರಿವಾರವನ್ನು ಸೇರಿದ ಕಾರಣ ಅವಳು ದೈವವಾಗಿ ಉತ್ಸವಗಳಲ್ಲಿ ಆರಾಧನೆ ಪಡೆಯುತ್ತಾಳೆ. ತಲಪಾಡಿ ಎನ್ನುವಲ್ಲಿ ಸುಬ್ಬಿಯಮ್ಮಳಿಗೆ ಸ್ಥಾನ (ಗುಡಿ) ಇದೆ.

ವಾಸ್ತವಿಕವಾಗಿ ಸುಬ್ಬಿಯಮ್ಮಳಂತಹ ಹೆಣ್ಣೊಬ್ಬಳು ಬಾವಿಗೆ ನೀರು ಸೇದಲು ಹೋದಾಗ ಬಾವಿಯ ಅಡ್ಡಮರ ಮುರಿದು ಅವಳು ಬಾವಿಗೆ ಬಿದ್ದು ನೀರಿನಲ್ಲಿ ಪ್ರಾಣವನ್ನು ಕಳೆದು ಕೊಂಡಿರಬಹುದು. ಅದು ಆಕಸ್ಮಿಕವಾಗಿ ನಡೆದ ಒಂದು ದುರಂತ ಮರಣ. ಆದರೆ ಇಂತಹ ಸ್ವೈಜ ಘಟನೆ ಮತ್ತು ಮರಣವನ್ನು ಹಾಗೆಂದು ಒಪ್ಪಿಕೊಳ್ಳದೆ ಅದು ಯಾವುದೇ ಒಂದು ದುಷ್ಟ ಶಕ್ತಿಯ ಕಾರಣದಿಂದ ಆಯಿತು ಎಂದು ಭಾವಿಸುವ ಜನಪದರು ಸುಬ್ಬಿಯಮ್ಮಳ ಮರಣಕ್ಕೆ ಗುಳಿಗನ ಕಾರಣವನ್ನು ತಂದು ಸೇರಿಸಿರಬೇಕು. ಈ ಲೌಕಿಕ ಘಟನೆಯು ಕಾರಣವಾಗಿಯೇ ಸುಬ್ಬಿಯಮ್ಮಳು ದೈವದ ರೂಪಕ್ಕೆ ಸೇರುತ್ತಾಳೆ. ಅವಳನ್ನು ಕುರಿತ ಪಾಡ್ದನವು ಅಲೌಕಿಕ ವಾಗುತ್ತದೆ.

G3 ಪಾಡ್ದನವು ಕೊಲ್ಲೂರು ಮೂಕಾಂಬಿ ಜೇವುವಿನ ದುರಂತ ಕತೆಯನ್ನು ಹೇಳುವ ಪಾಡ್ದನ. ಆಶ್ರಯ ನೀಡಿದ ವ್ಯಕ್ತಿಯೇ ಶೀಲ ಭಂಗ ಮಾಡಿದುದರಿಂದ ಮುಗ್ಧ ಹೆಣ್ಣೊಬ್ಬಳು ಅಪಮಾನವನ್ನು ತಡೆದ ಕೊಳ್ಳಲಾರದೆ ಕೊಳ್ಳಕ್ಕೆ ಹಾರಿಕೊಂಡು ಪ್ರಾಣತ್ಯಾಗ ಮಾಡಿದ ದಾರುಣ ಕತೆ ಮೂಕಾಂಬಿ ಜೇವು ಪಾಡ್ದನದ ವಸ್ತು. ಲೌಕಿಕವಾಗಿಯೇ ನೋಡಿದರೆ ದುರಂತದ ಮಾರ್ಮಿಕ ಚಿತ್ರಣವಿರುವ ಈ ಕಥನ ಕವನವು ಗುಳಿಗ ಭೂತದ ಕಾರಣದಿಂದ ಅಲೌಕಿಕ ಪಾಡ್ದನದ ಮಟ್ಟಕ್ಕೆ ಮುಟ್ಟುತ್ತದೆ. ಆದರೂ ಈ ಪಾಡ್ದನದಲ್ಲಿ ನಮ್ಮ ಮನವನ್ನು ತಟ್ಟುವುದು ಲೌಕಿಕವಾದ ಬದುಕೇ. ಮೂಕಾಂಬಿ ಜೇವುವಿಗೆ ಆಶ್ರಯಕೊಟ್ಟ ಕಡಂಬಾರ ಮಯ್ಯರು ಬಲಾತ್ಕಾರದಿಂದ ಮುಗ್ಧ ಹೆಣ್ಣು ಮೂಕಾಂಬಿ ಜೇವುವನ್ನು ಅನುಭವಿಸುತ್ತಾರೆ. ಅವಳು ಬಾಗಿಲು ತೆಗೆಯದೇ ಇದ್ದಾಗ ಬಾಗಿಲಿಗೆ ಮೂರು ಪೆಟ್ಟು ಒಪ್ಪರಂತೆ. ಆಗ ಬಾಗಿಲು ಹದಿನಾರು ಸೀಳಾಯಿತಂತೆ. ತಾನು ಮಾಡಿದ ದುಷ್ಕೃತ್ಯ ಬಹಿರಂಗವಾಗಬಾರದೆಂದು ಮಯ್ಯರು ಮೂಕಾಂಬಿ ಜೇವುವಿಗೆ ಗುಳಿಗನ ಶಾಪ ಹಾಕುತ್ತಾರೆ. ಇದರಿಂದ ಅವಳ ಪ್ರಾಣ ಹೋಗುತ್ತದೆ. ಆದರೆ ಕೊಳಕ್ಕೆ ಹಾರಿಕೊಂಡು ಅವಳು ಪ್ರಾಣ ತ್ಯಾಗ ಮಾಡಿದ್ದು ಹೆಚ್ಚು ಸಹಜ ಮತ್ತು ವಾಸ್ತವಿಕ. ಶೀಲವನ್ನು ಕಳೆದುಕೊಂಡ ಹೆಣ್ಣು ಸಾಮಾನ್ಯವಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಆದರೆ ಆ ಪ್ರಸಂಗವನ್ನು ಗುಳಿಗನ ಶಾಪದಿಂದ ಮೂಕಾಂಬಿ ಜೇವು ಸತ್ತಳು ಎಂದು ಹೇಳುವುದರ ಮೂಲಕ ಎರಡು ಉದ್ದೇಶಗಳನ್ನು ಸಾಧಿಸಲಾಗಿದೆ. ಒಂದು–ಮೂಕಾಂಬಿ ಜೇವುವಿನ ಆತ್ಮಹತ್ಯೆ ಮತ್ತು ಅದರ ಮೂಲ ಕಾರಣವನ್ನು ಮರೆಮಾಚುವುದು. ಇದು ಬಹುಶಃ ಮಯ್ಯರಿಂದಲೇ ಆಗಿರಬಹುದಾದ ಕೆಲಸ. ಇನ್ನೊಂದು–ಯಾವುದೇ ವಿಶೇಷ ಮರಣವನ್ನು–ಆತ್ಮಹತ್ಯೆಯಂತಹ ಸಾಧಾರಣ ಸಾವು ಎಂದು ಒಪ್ಪಿಕೊಳ್ಳದೆ ಅದಕ್ಕೆ ಭೂತದ ಉಪದ್ರ ಮುಂತಾದ ಅಲೌಕಿಕ ಕಾರಣಗಳನ್ನು ಆರೋಪಿಸುವ ಜನಪದರ ಸ್ವಭಾವ. ಈ ಪಾಡ್ದನದಲ್ಲಿ ತಂತ್ರದ ದೃಷ್ಟಿಯಿಂದ ಒಂದು ವಿಶಿಷ್ಟ ಅಂಶವಿದೆ–ಮೂಕಾಂಬಿ ಜೇವುವಿನ ಗಂಡನು ಪತ್ನಿಯ ಮರಣ ಕಾಲಕ್ಕೆ ದೂರವಿದ್ದಾತ ಕೆಟ್ಟ ಕನಸನ್ನು ಕಾಣುತ್ತಾನೆ. ಆ ಕಾರಣ ಕ್ಕಾಗಿಯೇ ಪತ್ನಿ ಇದ್ದಲ್ಲಿಗೆ ಧಾವಿಸಿ ಬರುತ್ತಾನೆ. ಸುಬ್ಬಿಯಮ್ಮ ಪಾಡ್ದನವು ಹೆಣ್ಣೊಬ್ಬಳ ದುರಂತವನ್ನು ಆಕಸ್ಮಿಕ ಕಾರಣದಿಂದ ಹೇಳಿದರೆ, ಮೂಕಾಂಬಿ ಜೇವು ಪಾಡ್ದನವು ಹೆಣ್ಣೊಬ್ಬಳ ದುರಂತವನ್ನು ಗಂಡಿನ ಪಾಶವೀ ಕೃತ್ಯದಿಂದ ತಿಳಿಸುತ್ತದೆ.

## 3. ಪಿಲಿ ಚಾಮುಂಡಿ

ಪಿಲಿ ಚಾಮುಂಡಿ ಭೂತವನ್ನು ದುರ್ಗೆಯ ಅಂಶ ಎನ್ನುವ ದೃಷ್ಟಿಯಿಂದ ಜುಮಾದಿಗೆ ಸಮಾನವಾದುದು ಎಂದು ಭಾವಿಸುತ್ತಾರೆ. ಚಾಮುಂಡಿ ಎನ್ನುವ ದೇವಿಯು ಹುಲಿಯಲ್ಲಿ ಸವಾರಿ ಮಾಡಿ ರಾಕ್ಷಸರನ್ನು ಕೊಂದ ಪ್ರಸಂಗಗಳು ಪೌರಾಣಿಕ ಕತೆಗಳಲ್ಲಿ ಬರುತ್ತವೆ. ಆ ಪೌರಾಣಿಕ ಸ್ವರೂಪವನ್ನು ಉಗ್ರವಾದ ವಾತಾವರಣದಲ್ಲಿ ಪಿಲಿ ಚಾಮುಂಡಿ (ಹುಲಿ ಚಾಮುಂಡಿ) ಭೂತ ಎಂದು ಕರೆಯಬಹುದು. ಈ ಭೂತದ ಗುಡಿಗಳಲ್ಲಿ ವಿಗ್ರಹ ವಿರುತ್ತದೆ. ಈ ಹುಲಿಯ ವಿಗ್ರಹಗಳು ಚಾಮುಂಡಿಯ ವಾಹನದ ರೂಪದಲ್ಲಿ ಇಂದೂ ಆ ಗುಡಿಗಳಲ್ಲಿ ಕಾಣಿಸಿಕೊಳ್ಳುತ್ತವೆ. ಆದರೆ ಹುಲಿಯನ್ನೇ ಒಂದು ಸಮಾಜ ತಮ್ಮ ಕುಲದೇವತೆ (Totem)ಯನ್ನಾಗಿ ಆರಾಧಿಸಿಕೊಂಡು ಬಂದಿರುವುದು ಅಸಂಭವವಿರಲಾರದು. ಈ ರೀತಿ ಹುಲಿಯು ಕುಲದೇವತೆಯಾಗಿರುವುದು ಭಾರತದ 'ಧೇಲ್ಕಿ ಖರಿಯಾ' ಮತ್ತು ಮಧ್ಯ ಪ್ರದೇಶದ 'ಕುಮಾರ' ಮುಂತಾದ ಜನಾಂಗಗಳಲ್ಲಿ ಸಿಗುತ್ತದೆ. ತಮ್ಮ ಜಾನುವಾರುಗಳನ್ನು ನಾಶಮಾಡುವ, ತಮ್ಮ ಪ್ರಾಣಕ್ಕೆ ಅಪಾಯವನ್ನು ಒಡ್ಡುವ ಹುಲಿಗಳು ದಟ್ಟವಾದ ಕಾಡುಗಳು ಇರುವ ತುಳುನಾಡಿನ ಜನರಿಗೆ ಇತ್ತೀಚೆಗಿನವರೆಗೂ ತೀರ ಪರಿಚಿತವಾಗಿದ್ದವು. ಈ ರೀತಿಯ ಹುಲಿಗಳನ್ನು ಬೇಟೆಯಾಡುವ ಜೊತೆಯಲ್ಲಿಯೇ ಒಂದು ರೀತಿಯ ಭಯದ ಕಾರಣದಿಂದ ಆರಾಧಿಸುತ್ತಿದ್ದಿರಬಹುದು. ಮುಂದೆ ಇಂತಹ ಹುಲಿಯ ಆರಾಧನೆಗೆ ಪೌರಾಣಿಕ ಕಲ್ಪನೆಗಳು ಸೇರಿ ಅದು ಹುಲಿ ಚಾಮುಂಡಿ ದೇವತೆಯಾಗಿ ಮಾರ್ಪಾಟಾಗಿರಬಹುದು. ಆದರೆ ಈ ಹುಲಿ ಚಾಮುಂಡಿ ಭೂತದ ಉಗಮವನ್ನು ಹೇಳುವ ಪಾಡ್ದನಗಳು ಸಿಗುವುದಿಲ್ಲ. ಪಿಲಿ ಚಾಮುಂಡಿ ಭೂತದ ಮಹಿಮೆಯನ್ನು ಹೇಳುವ ಪಾಡ್ದನಗಳು ಸಿಗುತ್ತವೆ. ಅಂತಹ ಒಂದು ಪಾಡ್ದನವನ್ನು ಇಲ್ಲಿ ಗಮನಿಸಬಹುದು :

"ಹಿಂದೆ ಮಂಜು ಪೂಂಜನೆಂಬ ಬೇಸಾಯಗಾರನೊಬ್ಬನಿದ್ದ. ತುಂಬೆಜಾಲೆ ಎಂಬ ಒಂದು ಗದ್ದೆಯನ್ನು ಪಡೆದು ಅದರಲ್ಲಿ ಒಂದು ಬೆಳೆ ಬೆಳೆಸಿದ. ಅಲ್ಲಿ ಕಳ್ಳರ ಹಾವಳಿ ಪ್ರಬಲವಾಯಿತು. ಹೀಗಾಗಿ ಒಂದು ಎಳನೀರೂ ತೆಂಗಿನ ಮರಗಳಲ್ಲಿ ಉಳಿಯಲಿಲ್ಲ. ಅವನು ಶೇಖರಿಸಿದ ಭತ್ತದ ರಾಶಿಯೂ ಉಳಿಯಲಿಲ್ಲ. ಇದರಿಂದ ದುಃಖಿತನಾದ ಮಂಜ ಪೂಂಜನು ತಾನೊಂದು ಭೂತವನ್ನು ನಂಬಿ ಕಳ್ಳರನ್ನು ಸದೆ ಬಡಿಸುತ್ತೇನೆ ಎಂದು ತನ್ನ ಮಗಳೊಡನೆ ಹೇಳಿ ಬಾಳೊಳಿಯುವರ ರಾಜ್ಯಕ್ಕೆ ಹೋದ.

"ನಾನು ತುಂಬೆಜಾಲೆ ಎಂಬ ಗದ್ದೆಯನ್ನು ಪಡೆದು ಸಾಗುವಳಿ ಮಾಡುತ್ತಿದ್ದೇನೆ. ಆದರೆ ಅಲ್ಲಿ ಕಳ್ಳರ ಹಾವಳಿಯಿಂದಾಗಿ ಏನನ್ನೂ ಬೆಳೆಸಲು ಸಾಧ್ಯವಿಲ್ಲದಂತಾಗಿದೆ. ಆದ್ದರಿಂದ ಕಳ್ಳರನ್ನು ನಾಶಮಾಡುವಂಥ ಒಂದು ಭೂತವನ್ನು ನನಗೆ ಕೊಡಿ" ಎಂದು ಮಂಜು ಪೂಂಜ ಅರಿಕೆ ಮಾಡಿದ.

ನಿನಗೆ ಯಾವ ಭೂತಬೇಕೆಂದು ಬಾಳೊಳಿಯುವರು ಕೇಳಿದಾಗ, ಪಿಲಿ ಚಾಮುಂಡಿ ಭೂತವೇ ಬೇಕೆಂದು ಮಂಜುಪೂಂಜ ಹೇಳಿದ. ಬಾಳೊಳಿಯುವರಿಗೆ ಮುನ್ನೂರು ವರಹಗಳನ್ನು ಕೊಟ್ಟ.

ಹಣವನ್ನು ಕಂಡೊಡನೆ ಬಾಳೊಳಿಯುವರು ತನ್ನ ಭೂತದ ಗೋಡವೆಯನ್ನೇ ಮರೆತುಬಿಟ್ಟರು. ಅವರ ಬಾಯಲ್ಲಿ ನೀರೂರಿತು. ಅವರು ಪಂಚಲೆ ಬಳ್ಳಿಯ ವೀಳ್ಯದೆಲೆಯನ್ನು ತರಿಸಿ ಅದರಲ್ಲಿ ಭೂತದ ಪ್ರತಿ–ರೂಪವನ್ನು ಬರೆಸಿದರು,

ಅದನ್ನು ಮತ್ತೆ ಮಂಜು ಪೂಂಜನ ಕೈಗಿತ್ತು ಹೇಳಿದರು : "ಇಗೋ ಈ ಭೂತವನ್ನು ನಿನ್ನ ಊರಿಗೆ ಕೊಂಡುಹೋಗಿ ಅಲ್ಲಿ ಹಾರ್ದಿಕವಾಗಿ ನಿಷ್ಠೆಯಿಂದ ಪೂಜಿಸು."

ಮಂಜು ಪೂಂಜ ಸಂತೋಷದಿಂದ ಭೂತದೊಡನೆ ತನ್ನೂರಿಗೆ ಹಿಂತಿರುಗಿದ. ಅಲ್ಲಿ ಅದನ್ನು ನಿಷ್ಠೆಯಿಂದ ಪೂಜಿಸಿದ. ಆರು ತಿಂಗಳಲ್ಲಿ ಅವನ ಹಿರಿಯ ಮಗಳನ್ನು ಭೂತವು ಕೊಂದಿತು. ಒಂದು ವರ್ಷದಲ್ಲಿ ಮಂಜು ಪೂಂಜನೇ ಸ್ವತಃ ಅದಕ್ಕೆ ಬಲಿಯಾದ. ಎರಡು ವರ್ಷವಾಗುವಾಗ ಅದು ಗಂಗೆ ಎಂಬಾಕೆಯನ್ನು ಬಲಿ ತೆಗೆದು ಕೊಂಡಿತು.

ಮಂಜು ಪೂಂಜನ ಮನೆಯವರು ಚಿಂತಾಕ್ರಾಂತರಾದರು. "ಮಕ್ಕಳೂ ಬಂಧಗಳೂ ಇರುವ ಮನೆಯೊಳಗೆ ಈ ಭೂತವನ್ನು ಪೂಜಿಸುವುದು ಸಾಧ್ಯವಿಲ್ಲ" ಎಂದು ಅವರು ಅದನ್ನು ಒಂದು ಮರದ ಬಳಿಗೆ ಕರೆದು ಕೊಂಡು ಹೋಗಿ ಅದರ ಬುಡದಲ್ಲಿಟ್ಟು ಅಲ್ಲಿ ಅದನ್ನು ಪೂಜಿಸಿದರು. ತುಂಬೆಜಾಲಿನಲ್ಲಿ ತನಗೊಂದು ಸ್ಥಾನವೂ ಖಡ್ಗವೂ ಬೇಕೆಂದು ಭೂತ ಕೇಳಿಕೊಂಡಿತು. ಹಾಗೆಯೇ ಅವುಗಳನ್ನು ಒದಗಿಸಿಕೊಟ್ಟರು. ಅದು ಅಲ್ಲಿಯೇ ಸ್ಥಾಪನೆಗೊಂಡಿತು.

ಮುಂದೆ ಒಂದು ದಿನ ಪಿಲಿ ಚಾಮುಂಡಿ ಭೂತ ಅಲ್ಲಿಂದ ಹೊರಟಿತು. ಹೊರಡುವಾಗ ಕಂಚಿನ ದೀಪವನ್ನು ಉರಿಸಿ ಆರ್ಭಟಿಸಿತು. ಅದು ಅಡ್ಡಂದ ಗುಡ್ಡೆಯನ್ನು ಏರಿತು. ಮಿಜಾರಿನ ಇಂದ್ರಾಲ ಪಟ್ಟವನ್ನು ದಾಟಿತು, ಅಲ್ಲಿಂದ ಪದವು ಮುರ ಎಂಬಲ್ಲಿಗೆ ಹೋಯಿತು. ಮತ್ತೆ ಬೆಳ್ಳಿ ಬೆಟ್ಟನ್ನು ದಾಟಿ ಪೆರಾರಿಗೆ ಬಂತು. ಪೆರಾರಿನಲ್ಲಿ ನೂರು ಜನರಿದ್ದರು. ಅಲ್ಲಿ ಬಾಲಂದಿ ಭೂತವನ್ನು ಮಾರಿಬೆಟ್ಟಿನ ಬ್ರಹ್ಮದೇವರನ್ನು ದರ್ಶನಮಾಡಿತು.

ಅಲ್ಲಿ ತನ್ನ ಸ್ಥಾನಕ್ಕೆ ಒಂದು ಖಡ್ಗ ಬೇಕೆಂದು ಕೇಳಿಕೊಂಡಿತು. ಪೆರಾರಬೆಟ್ಟಿನ ನೂರು ಜನರು ಮಾರಿಬೆಟ್ಟಿನ ಗುಡ್ಡೆಯಲ್ಲಿ ಸಭೆ ಸೇರಿ ಅಡಿಕೆಯನ್ನು ರಾಶಿ ಹಾಕಿದರು. ಅಲ್ಲಿಯೇ ಒಂದು ಸ್ಥಾನವನ್ನು ಕಟ್ಟಿದರು. ಪಿಲಿ ಚಾಮುಂಡಿ ಭೂತವು ಅಂದಿನಿಂದ ಅವರನ್ನು ರಕ್ಷಿಸುವ ಛತ್ರದಂತಾಯಿತು. ಅದರ ಪ್ರತೀತಿಯೂ ಹಾಗೆ ಹಬ್ಬಿತು. ನೂರು ಜನರಿರುವ ಭೂಮಿಯಿಂದ ಮತ್ತೆ ಭೂತವು ಮುಂದುವರಿಯಿತು. ಅಡ್ಡಂದ ಗುಡ್ಡೆಯನ್ನು ಏರಿ ಮುಂದೆ ಬೆಳ್ಳಿಮಾರ ಗುತ್ತಿಗೆ ಹೋಯಿತು. ಇಂಥ ವಿಪತ್ತಿಗೆ ಏನು ಕಾರಣವೋ ಎಂದು ಅಲ್ಲಿನ ಜನರು ಭಾವಿಸಿದರು. ಆಮೇಲೆ ಜೋಯಿಸರು ಭೂತಕ್ಕೊಂದು ಸ್ಥಾನ ಕಟ್ಟಿಸಬೇಕೆಂಬುದನ್ನು ಕಂಡುಕೊಂಡರು. ಆ ನೂರು ಜನರು ಉಪಯೋಗಿಸುವ ಖಡ್ಗವನ್ನು ಎತ್ತಿ ಜನರು ಎಸೆದರು. ಅದು ಮುಕ್ಕೋಡಿ ವಲಕುಡು ಎಂಬ ಗ್ರಾಮದಲ್ಲಿ ಬಿತ್ತು. ಅಲ್ಲಿ ಭೂತವು ತನಗೊಂದು ಸ್ಥಾನ ಕಟ್ಟಿಸಬೇಕೆಂದು ಕೇಳಿ ಕೊಂಡಿತು. ಹಾಗೆಯೇ ಅಲ್ಲಿಯ ಜನ ಸ್ಥಾನವನ್ನು ಕಟ್ಟಿಸಿದರು. ಭೂತವು ಅಲ್ಲಿಯೇ ಶಾಶ್ವತವಾಗಿ ನೆಲೆಸಿತು."

ಈ ಪಾಡ್ದನದಲ್ಲಿ ಮಂಜು ಪೂಂಜನೆಂಬವನು ಕಳ್ಳರ ಹಾವಳಿ ತಡೆಯಲಾರದೆ ಇನ್ನೊಂದು ಕಡೆಯಿಂದ ಪಿಲಿ ಚಾಮುಂಡಿ ಭೂತವನ್ನು ತರುವ ವೃತ್ತಾಂತವಿದೆ. ಆದರೆ ತನ್ನ ಕುಲದೇವತೆಯಾದ ಪಿಲಿ ಚಾಮುಂಡಿ ಯನ್ನು ಹಣದ ಆಸೆಯಿಂದ ಬಾಳೊಳಿಯವರು ಮಂಜುಪೂಂಜನಿಗೆ ಕೊಡುತ್ತಾರೆ. ಆದ್ದರಿಂದ ಪಿಲಿ ಚಾಮುಂಡಿ ಭೂತವು ಮಂಜು ಪೂಂಜನ ಮನೆಯಲ್ಲಿ ಅನಾಹುತಗಳನ್ನು ತಂದು ಹಾಕುತ್ತದೆ. ಕೊನೆಗೆ ಅಲ್ಲಿ ಸ್ಥಾನವನ್ನು ಕೇಳಿ ಪಡೆದು ಸ್ಥಾಪನೆಗೊಳ್ಳುತ್ತದೆ. ಅನಂತರ ಬೇರೆ ಬೇರೆ ಊರುಗಳಿಗೆ ಹೋಗಿ ತನ್ನ ಸಾಹಸ ದಿಂದ ಮಹಿಮೆಯನ್ನು ತೋರಿಸಿ ಆ ಊರುಗಳಲ್ಲಿ ಆರಾಧನೆಯನ್ನು ಪಡೆಯುತ್ತದೆ. ಪಿಲಿಚಾಮುಂಡಿ ಭೂತಕ್ಕೆ ಸ್ಥಾನವನ್ನು ಕಟ್ಟಿಸುದರ ಜೊತೆಗೆ ಹೆಚ್ಚಿನ ಕಡೆ ಅದು ಖಡ್ಗಬೇಕು ಎಂದು ಕೇಳುತ್ತದೆ. ಪಿಲಿ ಚಾಮುಂಡಿ ಭೂತದ ಆರಾಧನೆಯಲ್ಲಿ ಅದರ ಖಡ್ಗ ಬಹಳ ಮುಖ್ಯವಾದುದು. ಆ ಭೂತದ ಉಗ್ರ ಸ್ವರೂಪ ವನ್ನು ಈ ಪಾಡ್ದನದ ಘಟನೆಗಳು ತಿಳಿಸುತ್ತವೆ.

ಈ ಪಾಡ್ದನಕ್ಕೆ ಇನ್ನೊಂದು ಪಾಠಾಂತರ ಸಿಗುತ್ತದೆ. ಈ ಪಾಠದ ಪ್ರಕಾರ ಓಬಾದೇಶಿ ಎನ್ನುವವರು ನೆಕರೆಯ ಕೈಯಿಂದ ವೀಳ್ಯದೆಲೆಯಲ್ಲಿ ಮಂತ್ರಿಸಿದ ಪಿಲಿಚಾವುಂಡಿ ಭೂತವನ್ನು ತರುತ್ತಾರೆ. ಅದರ ಪ್ರಭಾವ ತಡೆಯಲು ಅಸಾಧ್ಯವಾಗುತ್ತದೆ. ಕೊನೆಗೆ ಆ ಭೂತಕ್ಕೆ ಬಲಿ, ಕೋಲವನ್ನು ಕೊಡುತ್ತಾರೆ. ಪಿಲಿಚಾವುಂಡಿ ಪಾಡ್ದನದ ಈ ಪಾಠದಲ್ಲಿ ಹಿಂದಿನ ಪಾಠದಂತೆ ಪ್ರಸರಣದ ಸಂಗತಿ ಇಲ್ಲ. ಎರಡೂ ಪಾಠಗಳಲ್ಲಿಯೂ ಪಿಲಿ ಚಾವುಂಡಿ ಭೂತವನ್ನು ಒಂದೆಡೆಯಿಂದ ಇನ್ನೊಂದು ವೀಳ್ಯದೆಲೆಯಲ್ಲಿ ಮಂತ್ರಿಸಿ ತರುವ ಚಿತ್ರಣವಿದೆ.

## ೪. ಕಾಳಭೈರವ (ಮುಂಡತ್ತಾಯ)

ಕಾಳಭೈರವ ಭೂತವನ್ನು ಮುಂಡತ್ತಾಯ ಎಂದೂ ಕರೆಯುತ್ತಾರೆ. ಇದು ರುದ್ರಾಂಶ ಸಂಭೂತವಾದ ಭೂತ. ಪಾಡ್ದನಗಳಲ್ಲಿ ಇದನ್ನು 'ಮುಡದೇರ್ ಕಾಳಭೈರವ' ಎಂದು ಕರೆಯಲಾಗಿದೆ. ಭೈರವನ ಉಗ್ರ ಸ್ವರೂಪವಾದ ಭೂತ. ಪಾಡ್ದನಗಳಲ್ಲಿ ಇದನ್ನು 'ಮುಡದೇರ್ ಕಾಳಭೈರವೆ' ಎಂದೂ ಕರೆಯಲಾಗಿದೆ. ಭೈರವನ ಉಗ್ರಸ್ವರೂಪವಾದ ಈ ಭೂತವು ಉಗಮವಾದ ಬಗ್ಗೆ ಸ್ಪಷ್ಟವಾದ ಪಾಡ್ದನಗಳು ಸಿಗುವುದಿಲ್ಲ. ಆದರೆ ಈಶ್ವರನ ಮುಂಡ (ಹಣೆ) ದಲ್ಲಿ ಜನಿಸಿದ ಕಾರಣ 'ಮುಂಡತ್ತಾಯ' ಎಂಬ ಹೆಸರು ಬಂತು ಎಂಬ ಅಭಿಪ್ರಾಯವಿದೆ. ಮುಖ್ಯವಾಗಿ ಈಶ್ವರನ ಪರಿಸರದಲ್ಲಿ ಪೌರಾಣಿಕ ಕಲ್ಪನೆಯಿಂದ ತಾಮಸ ಪ್ರವೃತ್ತಿಯಲ್ಲಿ ಇರುವ ಭೂತವು 'ಕಾಳಭೈರವ'. ಕೆಲವೊಮ್ಮೆ ಪಂಜುರ್ಲಿಯ ಇನ್ನೊಂದು ರೂಪವೇ 'ಕಾಳಭೈರವ' ಎನ್ನುವ ಮಾತು ಪಂಜುರ್ಲಿಯ ಒಂದು ಪಾಡ್ದನದಲ್ಲಿ ಇದೆ – "ತಿರುಪತಿ ವೆಂಕಟರಮಣ ದೇವೆರೆ ಬಲಭಾಗೊಡು ಉಂತುದು, ದುಂಬು ಪಟ್ಟಪರಕೆ ದೆತ್ತೊಂದು ಕಾಳಭೈರವೇಂದ್ ಪಟ್ಟಾಯೆ" (ತಿರುಪತಿ ವೆಂಕಟರಮಣ ದೇವರ ಬಲಭಾಗದಲ್ಲಿ ನಿಂತು, ಮೊದಲು ಹರಕೆಯನ್ನು ಸ್ವೀಕರಿಸಿ ಕಾಳಭೈರವನೆಂದು ಹೇಳಿಸಿಕೊಂಡೆ).

ಕಾಳಭೈರವನ ಬಗ್ಗೆ ಸಿಕ್ಕುವ ಪಾಡ್ದನವು ಪ್ರಧಾನವಾಗಿ ಕಾಳಭೈರವನ ಮಹಿಮೆಯನ್ನು ಬೇರೆ ಬೇರೆ ಘಟನೆಗಳ ಮೂಲಕ ಪ್ರಸರಣದ ರೂಪದಲ್ಲಿ ಹೇಳುತ್ತದೆ. ಈ ರೀತಿ ತನ್ನ ಮಹಿಮೆಯನ್ನು ಪ್ರದರ್ಶಿಸುತ್ತಾ ಬೇರೆ ಬೇರೆ ಊರುಗಳಲ್ಲಿ ಸ್ಥಾನವನ್ನು ಕಟ್ಟಿಸಿಕೊಂಡು ಆರಾಧನೆಯನ್ನು ಪಡೆಯುವ ರೀತಿಯನ್ನು ಒಂದು ಪಾಡ್ದನದಲ್ಲಿ ನೋಡಬಹುದು.

### 'ಮುಡದೇರ್ ಕಾಳಭೈರವ' ಪಾಡ್ದನದ ಸಂಕ್ಷಿಪ್ತ ಕನ್ನಡ ರೂಪ

ನಾಲ್ವರು ಪುರುಷರು (ಬೈರಾಗಿಗಳು) ಪಶ್ಚಿಮದ ಸಮುದ್ರವನ್ನು ನೋಡಲು ಎಂದು ಜೋಳಿಗೆಯೊಡನೆ ಮುಗೇರ್‌ಕಾಡ್ ಎಂಬಲ್ಲಿಗೆ ಬರುತ್ತಾರೆ. ಅವರ ಕುಲಭೂತ 'ಕಾಳಭೈರವ'. ಅವರು ಬರುವಾಗ ಇರ್‌ದೊಟ್ಟು ಚಾವಡಿಯ ಬಳಿ ಕತ್ತಲಾದ್ದರಿಂದ ಅಲ್ಲಿಯೇ ತಂಗುತ್ತಾರೆ. ಮರುದಿನ ಎದ್ದು ಸ್ನಾನ ತೀರಿಸಿ ಬೂದಿ ಬಳಿದು ಕುಳಿತರು. ಆಗ ಅವರನ್ನು ಹಿಂಬಾಲಿಸಿದ ಕಾಳಭೈರವ ಭೂತವು ಕಪಿಲ ವರ್ಣದ ದನವಾಗಿ ಅವರ ಮುಂದೆ ಮೇಯುತ್ತಾ ಬರುತ್ತದೆ. ಅವರು ಅದನ್ನು ಕಟ್ಟಿಹಾಕಿ ಹಾಲು ಕರೆಯುತ್ತಾರೆ. ಹಾಲು ಕರೆಯುವಾಗ ಒಂದು ಮೊಲೆಯಿಂದ ನೀರು ಬಂತು; ಮತ್ತೊಂದರಿಂದ ಹಾಲು, ಮತ್ತೊಂದು ರಕ್ತ, ನಾಲ್ಕನೆಯ ಮೊಲೆಯಲ್ಲಿ ಏನೂ ಇರಲಿಲ್ಲ. ಅವರು ತಮ್ಮ ಶಾಸ್ತ್ರದ ಪುಸ್ತಕವನ್ನು ತೆಗೆದು ಅದು ಏನು ಎಂದು ನೋಡಿದರು. ಆಗ ಅದು ತಮ್ಮ ಕುಲಭೂತ 'ಕಾಳಭೈರವ' ಎಂದು ಗೊತ್ತಾಯಿತು. ಅವರು ತಾವು ಅಡಿಗೆ ಮಾಡಲು ಒಲೆಗೆ ಸಿದ್ಧ ಮಾಡಿದ್ದ ಮೂರು ಕಲ್ಲುಗಳಲ್ಲಿ ಒಂದನ್ನು ಎತ್ತಿ ಒಗೆದು, ಈ ಗ್ರಾಮದಲ್ಲಿ ನಿನಗೆ ಬೇಕಾದ ಆಹಾರವನ್ನು

ತೆಗೆದುಕೋ ಎಂದು ಶಾಪ ಕೊಟ್ಟರು. ಮುಂದೆ ಅವರು ಪಾಣೆಮಂಗಳೂರಿನಲ್ಲಿ ಶಂಕರಬೈದ್ಯನ ಮನೆಯಲ್ಲಿ ಬಿಡಾರ ಮಾಡಿ ಮಲಗಿದಾಗ ಅವರ ಕನಸಿನಲ್ಲಿ ಕಾಳಭೈರವ ಬಂದು ತನಗೆ ಅಲ್ಲಿಯೂ ಸ್ಥಾನವಾಗಬೇಕು ಎಂದು ಹೇಳಿತು. ಅವರು ಇನ್ನೊಂದು ಕಲ್ಲನ್ನು ಅಲ್ಲಿ ಬಿಸಾಡಿ ವಾಸವಾಗಲು ಶಾಪಕೊಟ್ಟರು. ಅದೇ ರೀತಿ ಮುಂದೆ ಬೇರೆ ಬೇರೆ ಊರುಗಳಿಗಾಗಿ ಕೀರಡಿಬರ್ಕೆಯಲ್ಲಿ ತಂಗಿದ್ದಾಗ ಅಲ್ಲಿಯೂ ಕಾಳಭೈರವ ಕಾಣಿಸಿಕೊಂಡನು. ಅಲ್ಲಿಯೂ ಒಂದು ಕಲ್ಲನ್ನು ಎಸೆದರು. ಮುಂದೆ ಅವರು ಬೇರೆ ಬೇರೆ ಊರುಗಳಿಗಾಗಿ ಕೋಟೆಕಾರಿಗೆ ಬಂದರು. ಅಲ್ಲಿ ತಂಕರು ಬೈದ್ಯೆದಿ ಕೊಟ್ಟ ಅಕ್ಕಿಯನ್ನು ಬೇಯಿಸಿ ಊಟ ಮಾಡಿದರು. ಅವಳ ಒಬ್ಬನೇ ಮಗ ಸಿದ್ಧಮರ್ದ ಬೈದ್ಯನಿಗೆ ತಾವು ಮಲೆಯಾಳ ದೇಶಕ್ಕೆ ಹೋಗಿಬರುವವರೆಗೆ ಮದುವೆ ಮಾಡಬಾರದೆಂದೂ ತಾವು ಬಂದಮೇಲೆ ಅವನಿಗೆ ಶಾಸ್ತ್ರ ಕಲಿಸುತ್ತೇವೆ ಎಂದು ಹೇಳಿದರು. ಅವರು ಹೋದಮೇಲೆ ತಂಕರು ಬೈದ್ಯದಿಯ ಬಡತನ ಕಳೆದು ಐಶ್ವರ್ಯ ಹೆಚ್ಚಿತು. ಅವಳು ಒಪ್ಪದಿದ್ದರೂ ಊರಿನವರು ಅವಳ ಮಗನಿಗೆ ಬಲಾತ್ಕಾರದಿಂದ ಮದುವೆ ಮಾಡಿಸಿದರು. ಮಲೆಯಾಳಕ್ಕೆ ಹೋದ ಬೈರಾಗಿಗಳು ಹಿಂದಕ್ಕೆ ಬಂದಾಗ ಸಿದ್ಧಮರ್ದನಿಗೆ ಮದುವೆಯಾದ ವಿಚಾರ ಗೊತ್ತಾಗಿ ಸಿಟ್ಟುಗೊಂಡರು. ಓಡಿಹೋಗಿ ತಂಕರು ಬೈದ್ಯೆದಿಯು ಬೈರಾಗಿಗಳಲ್ಲಿ ಕ್ಷಮೆ ಕೇಳಿದಾಗ ಅವರು ಗಣಪತಿದೇವರ ಜಪದ ಮಾಲೆಯನ್ನು ಅವಳಿಗೆ ಕೊಟ್ಟರು. ಅವಳು ಅದನ್ನು ಮಗನ ಕುತ್ತಿಗೆಗೆ ಹಾಕಿ ಕೋಟೆಕಾರ್‌ನಲ್ಲಿ ಸ್ಥಾನವನ್ನು ಕಟ್ಟಿಸಿದಳು. ಊರವರ ಸಹಕಾರದಿಂದ ನೇಮ ಮಾಡಿಸಿದಳು. ಈ ರೀತಿ ಕೊಟ್ಟಾರದಲ್ಲಿ (ಸೋಮೇಶ್ವರದ ಹತ್ತಿರ) ಕಾಳ ಭೈರವನಿಗೆ ಆರಾಧನೆ ಆರಂಭವಾಯಿತು. ಸೋಮೇಶ್ವರದ ಸೋಮನಾಥ ದೇವರಿಗೆ ಕಾಳ ಭೈರವನ ಸ್ಥಾನದಲ್ಲಿ ಕೋಳಿ ಕೂಗಿದಾಗ ಸಿಟ್ಟುಬಂತು. ಮಧು ಮಾಂಸ ಸೇವಿಸುವ ಭೂತವು ನನ್ನನ್ನು ಬಳಿ ಬರಲು ಬಿಡುವುದಿಲ್ಲ ಎಂದು ದೇವರ ಆಕ್ಷೇಪಣೆಯಾಯಿತು. ಆಗ ಕಾಳ ಭೈರವನು 'ನನಗೆ ಮಧು ಮಾಂಸವೂ ಉಂಟು. ಮಾಂಸ ರಹಿತ ಜೈನರ ಧರ್ಮವೂ ಉಂಟು' ಎಂದನು. ಅವನು ಸೋಮನಾಥ ದೇವರ ಸ್ಥಳದಿಂದ ಇಳಿದು ಒಂಬತ್ತು ಕೆರೆಗಳನ್ನು ದಾಟಿ, ಉಳ್ಳಾಲ ಅರಮನೆಯನ್ನು ದಾಟಿ ಹೋಗುವಾಗ ಚೌಟ ಅರಸನ ಪಟ್ಟದ ಆನೆ ಕಾಣಿಸಿತು. ಅದಕ್ಕೆ ಕಾಳ ಭೈರವ ಭೂತವು ಉಪದ್ರವ ಕೊಟ್ಟಿತು. ಜ್ಯೋತಿಷ್ಯದಲ್ಲಿ ಕೇಳಿದಾಗ ಅದು ಮುಂಡೆದಾಯನ ಅಂದರೆ ಕಾಳ ಭೈರವನ ಉಪದ್ರ ಎಂದು ಗೊತ್ತಾಯಿತು. ಸಿದ್ಧಮರ್ದ ಬೈದ್ಯನನ್ನು ಕರೆಸಿ ಭೂತಕ್ಕೆ ಹರಕೆ ಹೇಳಿ ಗುಣ ಮಾಡಿಸಿದರು ಚೌಟರು ಕಾಳಭೈರವ ಭೂತಕ್ಕೆ ಮಾಡಿಸಿದ ನೇಮವನ್ನು ನೋಡಲು ಉಳ್ಳಾಲ ಗುತ್ತಿನ ಸೇಕ ಕೋಚಾಳ್ವರು ಬಂದಿದ್ದರು. ಬಿಲ್ಲವರ ಭೂತಕ್ಕೆ ಇಷ್ಟು ವೈಭವದ ನೇಮ ಸರಿಯಲ್ಲ ಎಂದು ಸಿಟ್ಟಿನಿಂದ ಎದ್ದು ಮನೆಗೆ ಬಂದರು. ಕೂಡಲೇ ಮುಡೆದಾಯನ ಉಪದ್ರದಿಂದ ಅವರಿಗೆ ಮೈಲಿಗೆ ಬೇನೆ ಸುರುವಾಯಿತು. ಅವರು ಕಾಳ ಭೈರವನಿಗೆ ಹೇಳಿ ನೇಮ ಕೊಡಿಸಿದ ಮೇಲೆ ಗುಣವಾಯಿತು. ಮುಂದೆ ಕಾಳಭೈರವನು ಮಂಗಳಾದೇವಿ ದೇವಸ್ಥಾನಕ್ಕೆ ಹೋಗಿ ಅಲ್ಲಿಂದ ಪಾಂಡೇಶ್ವರಕ್ಕೆ ಹೋಗುವಾಗ, ಅಲ್ಲಿ ಮಹಾಲಿಂಗೇಶ್ವರ ದೇವರ ಬಲಿ ನಡೆಯುತ್ತಿತ್ತು. ಅಲ್ಲಿಯೂ ಅವನು ಕೋಳಿ ರೂಪದಲ್ಲಿ ಕೂಗುವಾಗ ದೇವರು ಆಕ್ಷೇಪಣೆ ಮಾಡಿದರು. ಆಗ ಒಬ್ಬ ಬ್ರಾಹ್ಮಣನ ಮೈಮೇಲೆ ಕಾಳಭೈರವನ ಆವೇಶ ಬಂತು. ಕಾಳಭೈರವನಿಗೆ ಪಚ್ಚಿನಾಡು ಬರ್ಕೆಯಲ್ಲಿ ಸ್ಥಾನ ಕಟ್ಟಿಸಿ ನೇಮಕೊಟ್ಟರು. ಮುಂದೆ ಅತ್ತಾವರದಲ್ಲಿ ಹನ್ನೆರಡು ಎಮ್ಮೆಗಳನ್ನು ಕಾಳ ಭೈರವ ತಪ್ಪಿಸಿದನು. ಅವನನ್ನು ನಂಬಿ ಸ್ಥಾನ ಕಟ್ಟಿಸಿದ ಮೇಲೆ ಎಮ್ಮೆಗಳು ಸಿಕ್ಕಿದವು.

ಈ ಕಾಳ ಭೈರವ ಮುಂಡತ್ತಾಯ ಪಾಡ್ದನದಲ್ಲಿ ಕಾಳ ಭೈರವನ ಮಹಿಮೆಯನ್ನು ಪ್ರಕಟಿಸುವುದಕ್ಕೆ ಅನೇಕ ಸ್ಥಳಗಳು ಅನೇಕ ಘಟನೆಗಳು ಬರುತ್ತವೆ. ತುಳುನಾಡಿಗೆ ಅದು ಬೈರಾಗಿಗಳ ಮೂಲಕ ಬಂತು ಎನ್ನುವಲ್ಲಿ ಸ್ಥಳೀಯವಾಗಿ ಅದರ ಹುಟ್ಟಿಗೆ ಯಾವುದೇ ಸೂಚನೆ ಸಿಗುವುದಿಲ್ಲ. ಪೌರಾಣಿಕ ಕಲ್ಪನೆಯ ಉಗ್ರಸ್ವರೂಪದ ಒಂದು ಭೂತದ ಸ್ಥಾನಗಳು ಬೇರೆ ಬೇರೆ ಕಡೆ ಸ್ಥಾಪನೆಗೊಂಡುದಕ್ಕೆ ಸಮರ್ಥನೆಯು ಈ ಪಾಡ್ದನದಲ್ಲಿ ಸಿಗುತ್ತದೆ. ಮಲೆಯಾಳ ಸಂಸ್ಕೃತಿಯ ಪ್ರಭಾವವು ಇದರಲ್ಲಿ ಇದೆ. ಐತಿಹಾಸಿಕವಾಗಿ ಉಳ್ಳಾಲದ ಚೌಟ ಅರಸರ ಆಳ್ವಿಕೆಯ ವಿಚಾರ ಬರುತ್ತದೆ. ಧಾರ್ಮಿಕವಾಗಿ ಮಧು ಮಾಂಸ ಸೇವಿಸುವ ಕಾಳ ಭೈರವ ಭೂತವು ಸಸ್ಯಾಹಾರ

ಸೇವನೆಯು ದೇವರುಗಳಾದ ಸೋಮನಾಥ, ಮಹಾಲಿಂಗೇಶ್ವರ ಅವರಿಂದ ಆಕ್ಷೇಪಣೆಗೆ ಒಳಗಾಗುವುದು, ಆಗ ಈ ಭೂತಕ್ಕೆ ಮಾಂಸ ಸಹಿತವಾದ ಅರ್ಪಣೆಯ ಜೊತೆಗೆ ಮಾಂಸ ರಹಿತವಾದ ಜೈನ ಧರ್ಮದ ರೀತಿಯ ಅರ್ಪಣೆಯು ನಡೆಯುವುದನ್ನು ಪಾಡ್ದನದಲ್ಲಿ ನೋಡಬಹುದು. ಈಗಲೂ ಇಂತಹ ಕೆಲವು ಭೂತಗಳ ಆರಾಧನೆಯಲ್ಲಿ ಮಾಂಸದ ಅರ್ಪಣೆ ಮಾಡುವಾಗಲೇ ಪ್ರತ್ಯೇಕವಾಗಿ ಒಂದು ಬದಿಯಲ್ಲಿ 'ಜೈನೆರೆ ಅಗೆಲು' ಎಂಬ ಸಸ್ಯಾಹಾರದ ಅರ್ಪಣೆಯನ್ನು ಮಾಡುತ್ತಾರೆ. ಕಾಳಭೈರವನ ಮಹಿಮೆಯ ಸಾಧನೆಗಾಗಿ ಕೆಲವು ಅತಿಮಾನುಷ ಘಟನೆಗಳು ನಡೆಯುತ್ತವೆ. ಪ್ರಸರಣ ರೂಪದ ಪಾಡ್ದನಗಳ ದೃಷ್ಟಿಯಿಂದ ಹಿಂದೆ ನೋಡಿದ ಪಾಡ್ದನಗಳಿಗಿಂತ ಇದು ವಿಶೇಷವಾಗಿ ಭಿನ್ನವಾಗಿಲ್ಲ.

### 'ಕಾಳಭೈರವ'ನ ಪ್ರಸರಣದ ಸ್ಥಳಗಳು

ಮಂಗೆರ್‌ನಾಡು — ಬಾರ್ದಲ ಬೂಡು — ಅಡ್ಡಲ ಪಾದೆ — ನರಿಕೊಂಬು — ಇರಂದ ಬೊಟ್ಟು — ಪಾಣ್ಣೂರು (ಪಾಣಿ ಮಂಗೇರ್) — ಪಾಣ್ಯೂರು ಪೊಳೆ — ನಂದನ ಹಿತ್ಲು — ಪುಳಿಂಕೆಮಾರು — ಅಂಬಡಾಡಿ — ಪರಕೋಟೆ — ಅಂಬಡಾಡಿ ನಂದೆರೆ ಬೊಟ್ಟು ಬೂಡು — ಕುದಿಗ್ರಾಮ ಮಾಗಣೆ — ಪೆರಿಪಡಿ ದೇವಸ್ಥಾನ — ತುಂಬ್ಯ — ಸುಜೀರ್—ಕೀರಾಡಿ ಬನ್ನಾಕುಳೆ ಬರ್ಕೆ—ವರದೇಶ್ವರ ದೇವಸ್ಥಾನ— ಅರ್ಕುಳ ಹೊಳೆ — ಅಡ್ಯಾರ್ ಮಾಗಣೆ — ಮೈಕಣ ಹೊಳೆ — ಕಣ್ಣೂರ ಬೂಡು—ಗಾಣದ ಬೊಟ್ಟು—ನಂತೂರು ಕರಿಬೊಟ್ಟು — ಬಜಾಲ್ — ಬಜಾಲ್ ಕರಿಯ (ಕಡಪು) — ಪರಿಯಾಲದ ಸಾರಸೀಮೆ—ಪೂವಾಡಿ ಕಲ್ಲೆ— ಜೊಳ್ಮ — ಮೂಳಾರು ಗುತ್ತು — ಮೂಳಾರ್ ಕಂಬಳ — ಕಲ್ಲಡ ಪದಾವು — ಮೈರಮಡ್ಯಾರ್ — ಕೋಟೆಕಾರ್ — ಕೊಟ್ಟಾರ (ಸೋಮೆಶ್ವರದ ಹತ್ತಿರ), -ಉಳ್ಳಾಲ — ಮಂಗಾರ ಕರಿಯ — ಮಂಗಳಾದೇವಿ ದೇವಸ್ಥಾನ — ಪಾಂಡೇಶ್ವರ — ಪಚ್ಚನಾಡಿ ನೀರ್ ಬರ್ಕೆ — ಅತ್ತಾವರ.

### ೫. ಮುಂಡಿಪಾಡಿತ್ತಾಯ

ಮುಂಡಿಪಾಡಿತ್ತಾಯ ಭೂತವು ಕಾಶಿಯಲ್ಲಿ ಕಾಳ ಭೈರವನೆಂದು ಪ್ರಸಿದ್ಧವಾದುದು ಎಂದು ಹೇಳುತ್ತಾ ಆ ಭೂತದ ಒಂದು ಪಾಡ್ದನವು ಆರಂಭವಾಗುತ್ತದೆ. ಮುಂಡತ್ತಾಯ, ಮುಂಡಿಪಾಡಿತ್ತಾಯ, ಕಾಳ ಭೈರವ ಈ ಹೆಸರುಗಳೆಲ್ಲ ಒಂದೇ ಭೂತದ ಬೇರೆ ಬೇರೆ ಸ್ಥಳಗಳ ಪ್ರಾದೇಶಿಕ ರೂಪವಾಗಿ ಕಾಣಿಸಿಕೊಳ್ಳುತ್ತವೆ.

ಮುಂಡಿಪಾಡಿತ್ತಾಯ ಭೂತದ ಪಾಡ್ದನವು ಸಂಕ್ಷಿಪ್ತವಾಗಿದ್ದು ಅದರ ಮಹಿಮೆಯನ್ನು ಪ್ರಸರಣದ ರೂಪದಲ್ಲಿ ಹೇಳುತ್ತದೆ. "ವೈದ್ಯನಾಥನೆಂಬುವನು ಗಟ್ಟದಿಂದ ಕೆಳಗೆ ತುಳುನಾಡಿಗೆ ಇಳಿಯುತ್ತಾನೆ. ಅವನನ್ನು ಮುಂಡಿಪಾಡಿತ್ತಾಯ ಭೂತವು ಹಿಂಬಾಲಿಸುತ್ತದೆ. ಅವನು ಕೋಟೆಕಾರಿನ ಕೊಂಡಾಣ ಎನ್ನುವ ಸ್ಥಾನಕ್ಕೆ ಬರುತ್ತಾನೆ. ಅವನು ವಿಭೂತಿಯ ಉಂಡೆಗಳನ್ನು ಸಂಜೀವನ ಗಿಡದ ಬೇರನ್ನು ತೆಗೆದುಕೊಂಡು 'ಸಿಯೆರಾ'ದ ಕೋಟೆಬೆಟ್ಟು ಸ್ಥಾನಕ್ಕೆ ಬರುತ್ತಾನೆ. ಅಲ್ಲಿನ ಸಿಯೆರಾಗುತ್ತಿಗೆ ಹೋಗುತ್ತಾನೆ. ಕೊಲ್ಲ ಬೆಟ್ಟು ಸ್ಥಾನದಲ್ಲಿ ರಾಮಹೆಂಡರನ ಕಾಲದಲ್ಲಿ ಈ ಭೂತದ ಉತ್ಸವವು ಧ್ವಜ ಏರಿಸುವುದು, ಬಂಡಿ ಈ ವೈಭವಗಳಿಂದ ನಡೆಯುತ್ತದೆ. ಈ ಭೂತವು ಯೆಡ್ಡೂರು ಗ್ರಾಮದ ರಕ್ಷಕನಾಗಿ ಪ್ರಸಿದ್ಧಿ ಪಡೆಯುತ್ತದೆ ಮತ್ತು ಅಲ್ಲಿಯೇ ನೆಲಸುತ್ತದೆ.

### ೬. ಮಾರಾವಾಂಡಿ ಭೂತ

ಮಾರಾವಾಂಡಿ ಭೂತವು ಶೈವ ಧರ್ಮದ ಚಾಮುಂಡೇಶ್ವರಿಯ ಗಂಡು ರೂಪ ಮತ್ತು ತಾಮಸ ಸ್ವಭಾವದ ಭೂತದ ರೂಪ. ದುರ್ಗೆಯ ಗಂಡು ರೂಪವಾಗಿ ಮಾರಾವಾಂಡಿ ದೈವವು ತನ್ನ ಮಹಿಮೆಯನ್ನು ಪ್ರಸರಣದ ರೂಪದಲ್ಲಿ ಸಾರುವುದನ್ನು ಆ ಭೂತದ ಪಾಡ್ದನವು ತಿಳಿಸುತ್ತದೆ :

"ತುಳುನಾಡಿನ ವೇಣೂರು ಸೀಮೆಯ ಮಾರಾ ಗ್ರಾಮದ ಪಚ್ಚೇರು ಎಂಬಲ್ಲಿನ ಕಿಟ್ಟು, ರಂಗ ಮತ್ತು ಗೋವಿಂದ ಎಂಬ ಹುಡುಗರು ಕಾಶಿ, ರಾಮೇಶ್ವರ ಯಾತ್ರೆಗೆ ಹೋಗಿ ಹಿಂದಕ್ಕೆ ಬರುವಾಗ ಮೈಸೂರಿಗೆ ಬರುತ್ತಾರೆ. ಅಲ್ಲಿ ಮಹಿಷಾಸುರನನ್ನು ವಧಿಸಿದ ಚಾಮುಂಡೇಶ್ವರಿ ಬೆಟ್ಟಕ್ಕೆ ಹೋಗಿ ಚಾಮುಂಡೇಶ್ವರಿಯನ್ನು ಪೂಜಿಸುತ್ತಾರೆ. ಮಹಾಕಾಳಿ ವಂಶದ ಚಾಮುಂಡೇಶ್ವರಿಯನ್ನು ತಮ್ಮ ಮನೆ ದೇವರನ್ನಾಗಿ ಮಾಡಿಕೊಳ್ಳ ಬಯಸಿ ಅವರ ದೇವಿಯನ್ನು ತೆಂಗಿನಕಾಯಿಯಲ್ಲಿ ಜಪಿಸಿ, ಮಂತ್ರದಲ್ಲಿ ಬಂಧಿಸಿ, ಬೆಟ್ಟ ಇಳಿದು, ತಮ್ಮ ಊರಿಗೆ ಬರುತ್ತಾರೆ. ಅಲ್ಲಿ ದೇವಿಯನ್ನು ದಿನನಿತ್ಯ ಸಂತರ್ಪಣೆಯೊಡನೆ ಪೂಜಿಸುತ್ತಾರೆ. ಆದರೆ ದೇವಿ "ತನಗೆ ಈ ಸಸ್ಯಾಹಾರದ ಬಲಿ ಸಾಲದು, ತಾನು ಊರಿಗೆ ಇಳಿದು ಮಧುಮಾಂಸದ ಬಲಿ ತೆಗೆದುಕೊಳ್ಳುತ್ತೇನೆ" ಎಂದಳು. ತಾನು ಹೆಣ್ಣುವೇಷವನ್ನು ಬಿಟ್ಟು, ಗಂಡಸಿನ ರೂಪವನ್ನು ಧರಿಸುತ್ತೇನೆ" ಎಂದು ಹೇಳಿದಳು. ಆಗ ಅವಳ ಆ ಮೂರು ಜನ ಭಕ್ತರು ಅವಳಲ್ಲಿ ಮಾರಾಗುತ್ತಿನ ಯಜಮಾನರನ್ನು ಒಲಿಸುವಂತೆ ಕೇಳಿಕೊಂಡರು. ಮಾರಾಗುತ್ತಿನ ಬಾರಗರು ಯೋಗ್ಯವಾದ ಬಲಿ ಕೊಡಿಸುತ್ತಾರೆ ಎಂದು ಹೇಳಿದರು. ಆಗ ಭೂತವು ಮಾರಾಗುತ್ತಿನಲ್ಲಿ ಕೋಣಗಳಿಗೆ ಹುಚ್ಚು ಹಿಡಿಸಿತು. ಉಮ್ಮಣ್ಣಾಳ್ವ ಎಂಬವರ ಮೈಮೇಲೆ ಆವೇಶ ಬರಿಸಿತು. ಪುರೋಹಿತರಲ್ಲಿ ನಿಮಿತ್ತ ಕೇಳಿದಾಗ, ಮಹಾಕಾಳಿವಂಶದ ಮಾರಾವಾಂಡಿ ಎನ್ನುವ ದೈವವು ಮನೆಯಲ್ಲಿ ಮಂಚವನ್ನೂ ಸ್ಥಾನಮಾನವನ್ನೂ ಬಲಿಯನ್ನೂ ಕೇಳುತ್ತದೆ ಎಂದು ಗೊತ್ತಾಯಿತು. ಉಮ್ಮಣ್ಣಾಳ್ವರು ಅದಕ್ಕೆ ಅದೇ ರೀತಿ ಮಂಚ, ಸ್ಥಾನ ಮಾಡಿಸಿ ಬಲಿ ನೇಮ ಕೊಟ್ಟರು. ಮುಂದೆ ಅದು ಅಲ್ಲಿಂದ ಸಂಚಾರ ಹೊರಟು ಬೇರೆ ಬೇರೆ ಊರುಗಳಲ್ಲಿ ತನ್ನ ಮಹಿಮೆಯನ್ನು ತೋರಿಸಿ ಆರಾಧನೆಯನ್ನು ಪಡೆಯುತ್ತದೆ. ಅದು ದಾರಿಯಲ್ಲಿ ಮೈಸಂದಾಯ ಭೂತವನ್ನು ಭೇಟಿಯಾಗುವುದು, ಬೈದರ್ಕಳ ಭೂತವನ್ನು ಭೇಟಿಯಾಗುವುದು, ಭೂತಗಳ ನಡುವೆ ಜಗಳವಾಗುವುದು ಮುಂತಾದ ವಿವರಗಳು ಬರುತ್ತವೆ. ಮೈಸಂದಾಯ, ಮಾರಾವಾಂಡಿ ಮತ್ತು ಪೆರಿಂಜ ಮಾರಿನ ದೈವ–ಈ ಮೂರು ದೈವಗಳು ಒಟ್ಟಾಗಿ ತಮ್ಮ ನಡುವೆ ಒಪ್ಪಂದ ಮಾಡಿಕೊಂಡು ಊರುಗಳನ್ನು ಹಂಚಿಕೊಂಡವು. ಮಾರು ಮತ್ತು ಗುಂಡಿರುಗಳ ಒಡೆತನ ಮಾರಾವಾಂಡಿ ದೈವಕ್ಕೆ ಸಿಗುತ್ತದೆ. ಆದ್ದರಿಂದ ಅದು 'ಎರಡೂರು ದೈವ' ಎಂದು ಹೆಸರನ್ನು ಪಡೆಯುತ್ತದೆ. ಈ ಎರಡೂರು ದೈವವು ವೇಣೂರಿನ ತಿಮ್ಮಣ್ಣಾಬಿಲನಲ್ಲಿಯೂ ತನ್ನ ಮಹಿಮೆಯನ್ನು ಪ್ರದರ್ಶಿಸುತ್ತದೆ."

ಪೌರಾಣಿಕ ಕಲ್ಪನೆಯಿಂದ ಹುಟ್ಟಿದ ದೈವಗಳು ಅನೇಕ ಇವೆ. ಪ್ರಧಾನವಾಗಿ ಅವುಗಳ ಮಹಿಮೆಯನ್ನು ಬೇರೆ ಬೇರೆ ಸ್ಥಳಗಳಲ್ಲಿ ಅವು ತೋರಿಸುತ್ತವೆ. ಅಂತಹ ಭೂತವು ಮುಖ್ಯವಾಗಿ ನೆಲೆಯೂರುವ ಸ್ಥಳದ ಹೆಸರನ್ನು ಅದು ಪಡೆಯುತ್ತದೆ. ಈ ಪಾಡ್ದನದಲ್ಲಿ 'ಮೂರು' ಮತ್ತು ಗುಂಡಿರು' ಎಂಬ ಎರಡು ಊರುಗಳಲ್ಲಿ ಈ ಭೂತ ನೆಲೆಯೂರುವ ಕಾರಣ 'ಮಾರಾ ಗುಂಡಿರು' ದೈವ ಎಂದಾಗಿ ಅದೇ ಕ್ರಮೇಣ 'ಮಾರಾವಾಂಡಿ ದೈವ' ಎಂದಾಗಿರಬೇಕು. ಮಹಿಮೆಯನ್ನು ಪ್ರಸರಣದ ರೂಪದಲ್ಲಿ ಹೇಳುವಲ್ಲಿ ಈ ಪಾಡ್ದನವು ಇದೇ ರೀತಿಯ ಪಾಡ್ದನಗಳ ಹಾಗೆ ಇದೆ. ಆದರೆ ಈ ಪಾಡ್ದನದಲ್ಲಿ ಇತರ ಭೂತಗಳಾದ ಮೈಸಂದಾಯ, ಪೆರಿಂಜಮಾರಿನ ದೈವ, ಬೈದರ್ಕಳ ಭೂತಗಳು ಮುಂತಾದ ಭೂತಗಳು ಪಾತ್ರಗಳಾಗಿ ಬರುತ್ತವೆ. ಈ ಭೂತಗಳ ನಡುವೆ ನಡೆಯುವ ಜಗಳ, ಒಪ್ಪಂದ, ಬಲಿಷ್ಠರಿಗೆ ಕೆಳಗಿನವರು ಅಧೀನರಾಗುವುದು–ಮುಂತಾದ ವಿಚಾರಗಳು ವಿಶಿಷ್ಟವಾಗಿವೆ. ಪಾಡ್ದನದ ಕೊನೆಯಲ್ಲಿ ಬರುವ ಮಾತು ಈ ಭೂತಗಳ ಪರಿವಾರದಲ್ಲಿ ಅವುಗಳ ನಿರ್ದೇಶನ ಮಾಡುತ್ತದೆ–"ಮುದ್ದಾಡಿಯಲ್ಲಿ ಮಾರಾವಾಂಡಿ ಭೂತ ಅರಸು, ಮೈಸಂದಾಯ - ಪುರೋಹಿತ. ಪೆರಿಂಜಮಾರು ದೈವ ಪ್ರಧಾನಿ. ಬೈದರ್ಕಗಳು ಮತ್ತು ಇತರ ಭೂತಗಳು ಚತುರಂಗ ಸೈನ್ಯವಾಗಿ ಆ ಊರನ್ನು ರಕ್ಷಿಸುತ್ತಿರುವರು ಎಂಬ ಪ್ರತೀತಿ ಬಂತು."

ಮಾರಾವಾಂಡಿ ಭೂತಕ್ಕೆ ಸಲ್ಲಿಸುವ ಕಾಣಿಕೆಯ ವಿವರಗಳು ಈ ಪಾಡ್ದನದಲ್ಲಿ ಇವೆ–ಮಂಚ, ದೀಪದ ಮಲ್ಲಿ, ಕಂಚಿನ ದೀವಟಿಗೆ, ಆನೆ ಪಲ್ಲಕ್ಕಿ, ಪಕ್ಕೆ, ನಿಶಾನೆ, ಛತ್ರ, ಹುಲಿಯ ಪ್ರತಿಬಿಂಬ ಇತ್ಯಾದಿ. ಮಂಚವನ್ನು

ಕೊಡುವುದೂ ಈ ಭೂತಕ್ಕೆ ಎಲ್ಲ ಕಡೆಗಳಲ್ಲಿಯೂ ಕಾಣಿಸುತ್ತದೆ. ಈ ಭೂತವು ತಾನು ಉಳಿದವರಿಗಿಂತ ಶ್ರೇಷ್ಠ ಎಂಬ ಭಾವನೆಯನ್ನು ಅನೇಕ ಬಾರಿ ಹೇಳುತ್ತದೆ. ಮುದ್ದಾಡಿಯಲ್ಲಿ ಅದು ಹೇಳುವ ಮಾತು–'ತನಗೊಬ್ಬನಿಗೇ ಬಲಿ ಕೊಟ್ಟರೆ ಸಾಕು, ಉಳಿದ ಭೂತಗಳಿಗೆ ಕೇವಲ. "ಪರ್ವ ಸಂಕ್ರಾಂತಿ" ಆರಾಧನೆ ಸಾಕು. ಈ ಭೂತದ ಮಹಿಮೆಯನ್ನು ಹೇಳುವಾಗಲೂ ಸಂಕಟವನ್ನು ತಂದು ಹಾಕುವುದರ ಜೊತೆಗೆ ಇನ್ನೂ ಕೆಲವು ವಿಶೇಷಗಳಿವೆ. ಅದು ವೇಣೂರಿನಲ್ಲಿ ಕಂಬಳದ ಕೋಣಗಳನ್ನು, ಮನುಷ್ಯರನ್ನು ಮಾಯ ಮಾಡಿ ಕಲ್ಲು ಮಾಡು ತ್ತದೆ. ಅರಮನೆಯಲ್ಲಿ ಕಳುವಾದ ಬೆಳ್ಳಿಯ ಬಟ್ಟಲು ಬಂಗಾರದ ಜಡೆಗಳನ್ನು ಪತ್ತೆ ಹಚ್ಚುತ್ತದೆ. ಮುಟ್ಟಾದ ಜತ್ತಿಯ ಅಜಿಲೆತ್ತಿಯು ಕಾರಾಜೆಗೆ ಹೋದುದಕ್ಕಾಗಿ ಅವಳ ಕತ್ತನ್ನು ಹಿಂದಕ್ಕೆ ತಿರುಗಿಸಿಬಿಡುತ್ತದೆ. ಮಾರಾ ವಾಂಡಿ ಭೂತದ ಮಹಿಮೆಯನ್ನು ಸಾರುವ ಪ್ರಸರಣದ ಸ್ಥಳಗಳು :

ಮೈಸೂರು — ಮಾರ ಗುತ್ತು — ಕಾರಾಜೆ ಗುಡ್ಡೆ — ಜಂತೋಡಿ ಗುತ್ತು — ಪದ್ಯರೊಟ್ಟು — ವೇಣೂರು — ಮಾರ ಗುತ್ತು — ಮುದ್ದಾಡಿ.

## ೭. ಲೆಕ್ಕೆಸಿರಿ (ರಕ್ತೇಶ್ವರಿ)

ದುರ್ಗೆ ಅಥವಾ ಚಾಮುಂಡಿಯ ತಾಮಸ ಸ್ವರೂಪವು ಭೂತದ ರೂಪವಾಗಿ ಇರುವವುಗಳಲ್ಲಿ 'ಲೆಕ್ಕೆಸಿರಿ' ಮುಖ್ಯವಾದುದು. 'ರಕ್ತೇಶ್ವರಿ' ಎಂಬುದು 'ಲೆಕ್ಕೆಸಿರಿ' ಯಾಗಿ ಆದಿ ಮೂಲ ದೈವ ಎನ್ನುವ ಭಾವನೆಯಿಂದ ಆರಾಧನೆಯನ್ನು ಪಡೆಯುತ್ತದೆ. ಎಷ್ಟೋ ದೇವಾಲಯಗಳ ಮುಂದೆ ಕಲ್ಲಿನ ಸಂಕೇತದಿಂದ, ಸ್ತೂಪಾಕೃತಿಯ ಸಂಕೇತದಿಂದ, ಈ ದೈವದ ಸ್ಥಾನ ನಿರ್ದೇಶಿತವಾಗಿದೆ, ಜುಮಾದಿ, ಪಿಲಿ ಚಾಮುಂಡಿ, ಉಳ್ಳಾಲ್ತಿ ಮೊದಲಾದ ಶಕ್ತಿದೇವತೆಗಳ ಹಾಗೆಯೇ ಲೆಕ್ಕೆಸಿರಿ ಭೂತವೂ ಇದೆ. ಲೆಕ್ಕೆಸಿರಿಯ ಸ್ಥಾನ (ಗುಡಿ) ಗಳು ತುಳುನಾಡಿನ ಎಲ್ಲ ಕಡೆಗಳಲ್ಲಿಯೂ ಸಿಗುತ್ತವೆ. ಲೆಕ್ಕೆಸಿರಿಯ ಕಲ್ಲಿಗೆ ಹಾಲು ಎರೆದು ಜಾನುವಾರುಗಳ ರಕ್ಷಣೆಗಾಗಿ ಅದರ ಸಹಾಯ ವನ್ನು ಯಾಚಿಸುತ್ತಾರೆ. ಲೆಕ್ಕೆಸಿರಿಯ ನೇಮದಲ್ಲಿ ಬೆಂಕಿಯಿಂದ ತುಂಬಿದ ಬಹಳ ದೊಡ್ಡದಾದ ದೀವಟಿಗೆ ಯನ್ನು ಎಳೆದು ಅದರಲ್ಲಿ ತನ್ನ ಶಕ್ತಿಯನ್ನು ಪ್ರದರ್ಶಿಸುವುದು ಒಂದು ವೈಶಿಷ್ಟ್ಯ. ಎಳನೀರುಗಳ ಸೇವನೆಯು ಈ ಭೂತದ ನೇಮದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಆಗುತ್ತದೆ. ತೆಂಗಿನ ಮರಗಳ ರಕ್ಷಣೆಯನ್ನು ಅದು ಮಾಡು ತ್ತದೆ ಎನ್ನುವುದು ಈ ಪದ್ಧತಿಗೆ ಕಾರಣ. ಆದ್ದರಿಂದಲೇ ಈ ಭೂತದ ಜನಪ್ರಿಯತೆಯು ಒಂದು ಗಾದೆಯ ರೂಪದಲ್ಲಿ, 'ಉರಳೆ' ನ ರೂಪದಲ್ಲಿ ತುಳುವಿನಲ್ಲಿ ಈ ರೀತಿ ಬಂದಿದೆ : "ಎಂಕೊಂಜಿ ಭೂತ ಉಂಡು ಲೆಕ್ಕೆಸಿರಿ, ಯಾನ್ ಮಳ್ತಿನ ಮಾತಲಾವಕ್ಕೇ ಸರಿ' (ನನಗೊಂದು ಭೂತವಿದೆ ರಕ್ತೇಶ್ವರಿ, ನಾನು ಮಾಡಿದೆಲ್ಲವೂ ಅದಕ್ಕೇ ಸರಿ).

ಲೆಕ್ಕೆಸಿರಿ ಭೂತದ ಉಗಮವನ್ನೇ ಹೇಳುವ ಪಾಡ್ದನ ಸಿಗುವುದಿಲ್ಲ. ಆದರೆ ಈ ಭೂತದ ಮಹಿಮೆ ಯನ್ನು ಸಾಗುವ ಪಾಡ್ದನಗಳು ಇವೆ. ಅಂತಹ ಒಂದು ಪಾಡ್ದನವು ಈ ರೀತಿ ಇದೆ.

### ಯೆದ್ದೋಡಿ ಕೇತು ಮರಕಾಲನ ಪಾಡ್ದನದ ಕನ್ನಡ ರೂಪ

"ಕೇತು ಮರಕಾಲನ ಊರಾದ ಯೆದ್ದೋಡಿ ಅಂದರೆ ಒಡೆಯೂರು ಅಥವಾ ಉದ್ಯಾವರ. ಇವನ ತಾಯಿ ಕಾಡ್ದಿ, ತಂದೆ ಬೂದ ಮರಕಾಲ. ಇವನಿಗೆ ಮೂರು ಜನ ತಂಗಿಯರು, ಅವರ ಹೆಸರು ಚೀಂಕ್ರು, ಕರಿಯಂದು, ಸೊನ್ನು. ಒಬ್ಬ ಅಣ್ಣನ ಹೆಸರು ಮುಂದರ. ಇವರು ಒಟ್ಟಾಗಿ ವಿಮಾನು ಮತ್ತು ಸಂಬಾರ ಜೀನಸಿನ ವ್ಯಾಪಾರ

ಮಾಡುತ್ತಿದ್ದರು. ಪಾಂಡಿಯೆಂಬ ಹಡಗುಗಳನ್ನು ಕಟ್ಟಿಸಿದರು. ಕಡೆಗೆ ಪಡಾವು ಕಟ್ಟಿಸಿ ಪರವೂರಿನ ವ್ಯಾಪಾರ ಮಾಡಬೇಕೆಂದು ಆಲೋಚಿಸಿ, ಒಡನಾಡಿಗಳನ್ನು ಕೂಡಿಕೊಂಡು ಪಡಾವಿಗೆ ಬೇಕಾದ ಮರತರಲಿಕ್ಕೆ ದೊಡ್ಡಕಣ ಜಾರು ಬ್ರಹ್ಮಸ್ಥಾನಕ್ಕೆ ಹೋದರು. ಅಲ್ಲಿ ಬಂದ ವಿಚಾರವನ್ನು ಗುತ್ತಿನವರಿಗೆ ತಿಳಿಸಿದರು. ಆಗ ಗುತ್ತಿನವರು ನೀವು ಜಾತಿ ಬ್ಯಾರಿಗಳಾದರೆ ಅಂಗಣಕ್ಕೆ ಇಳಿದು ದೇವರ ಸನ್ನಿಧಿಗೆ ಬರಬಹುದು, ಜಾತಿ ಕೆಟ್ಟ ಬ್ಯಾರಿಗಳಾದರೆ ಕೆಳಗೆ ಇಳಿಯಬಾರದು ಎಂದು ಹೇಳಿದರು. ನಾವು ಜಾತಿ ಕೆಟ್ಟ ಬ್ಯಾರಿಗಳಲ್ಲ. ಜಾತಿ, ನೀತಿ ಸರಿಯಾಗಿ ಉಳ್ಳ ವ್ಯಾಪಾರಿಗಳು ಎಂದು ಹೇಳಿ ದೇವರಿಗೆ ಕಾಣಿಕೆ ಒಪ್ಪಿಸಿದರು. ಅನಂತರ ತಮಗೆ ಬೇಕಾದ ಮರಗಳನ್ನು ಕಡಿದು "ಪಡಾವು" ಕಟ್ಟಿ ಆದ ನಂತರ ಅವರು ನಂಬಿಕೊಂಡು ಬಂದ ಲೆಕ್ಕೆಸಿರಿ ಭೂತಕ್ಕೆ ಬಲಿಪೂಜೆಗಳನ್ನು ನೆರವೇರಿಸಿ ಹಡಗನ್ನು ಸಮುದ್ರಕ್ಕೆ ಇಳಿಸಿದರು. ಆಗ ಲೆಕ್ಕೆಸಿರಿ ದೈವವು ಮುದರನ ಮೈಮೇಲೆ ಆವೇಶ ಬಂದು, "ಕೇತು ಪಾಂಡಿಯೇ ನೀನೇನೂ ಹೆದರಬೇಡ. ನೀನು ಎಲ್ಲಿ ಹೋದರೂ ನಾನು ಅಲ್ಲಿಗೆ ಬಂದು ನಿನ್ನನ್ನು ನಿನ್ನ ಹಡಗುಗಳನ್ನು ರಕ್ಷಣೆ ಮಾಡುತ್ತೇನೆ" ಎಂದು ಹೇಳಿತು. ಹಾಗೆ ಅವರು ಹತ್ತು ಪಾಂಡಿಗಳನ್ನು ಒಂದು ಪಡಾವು ಎಂಬ ದೊಡ್ಡ ಹಡಗನ್ನು ಗಾಳಿ ನೋಡಿ ಬಿಟ್ಟರು. ಹಡಗು ಗಾಳಿ ಬೀಸಿದ ಹಾಗೆ ಹೋಗುತ್ತಾ ಇತ್ತು. ಕೆಲವು ತಿಂಗಳುಗಳ ಮೇಲೆ ಇವರಿಗೆ ದಿಕ್ಕೇ ತಿಳಿಯಲಿಲ್ಲ. ಭೂಮಿಯೂ ಕಾಣಸಿಗಲಿಲ್ಲ. ಒಂದು ದಿವಸ ಬಲವಾದ ಬಿರುಗಾಳಿ ಎದ್ದು ಸಮುದ್ರವು ಅಲ್ಲೋಲ ಕಲ್ಲೋಲವಾಗಿ ಹಡಗುಗಳೆಲ್ಲವೂ ಮುಳುಗುವಂತೆ ತೋರಿತು. ಆಗ ಇವರು ನಾಗ ಬ್ರಹ್ಮನನ್ನು ಲೆಕ್ಕೆಸಿರಿ ದೈವವನ್ನು ಪ್ರಾರ್ಥನೆ ಮಾಡಿಕೊಂಡರು.

ಆಗ ಬಿರುಗಾಳಿ ಕಡಿಮೆಯಾಯಿತು. ಪಡಾವು ಪಾಂಡಿಗಳು ಗಾಳಿಗೆ ಹೋಗಿ ಸಮುದ್ರ ಮಧ್ಯದಲ್ಲಿರುವ ಒಂದು ಕುದುರಿಗೆ ತಾಗಿದವು. ಆಗ ಅವರಿಗೆ ಸಂತೋಷವಾಯಿತು. ಅದರಿಂದ ಕೆಲವರು ಕುದುರಿಗೆ ಇಳಿದರು. ಕೇತು ಪಾಂಡಿಯು ಕುದುರು ಹತ್ತಿ ಸುತ್ತಲೂ ನೋಡಿದನು. ನಿರ್ಜನವಾದ ಅಲ್ಲಿ ಕಲ್ಲು ಗುಂಡ್ಡಗಳಿದ್ದವು. ಸ್ವಲ್ಪ ದೂರ ಹೋಗಿ ಒಂದು ಗುಡ್ಡವನ್ನು ಹತ್ತಿದನು. ಆ ಗುಡ್ಡದ ಬದಿಯಲ್ಲಿ ಕಲ್ಲಿನ ಒಂದು ಬಲವಾದ ಕೋಟೆಯನ್ನು ಕಂಡನು. ಆ ಕೋಟೆಯೊಳಗಿಂದ ಮನುಷ್ಯರು ಮಾತಾಡುವ ಸ್ವರದಂತೆ ಕೇಳಿತು. ಸುತ್ತಲೂ ತಿರುಗಿ ನೋಡಿದನು. ಆ ಕೋಟೆಗೆ ಬಾಗಿಲು ಇದ್ದ ಕುರುಹು ಸಹಾ ಕಾಣಲಿಲ್ಲ. ಆಗ ಪಾಂಡಿಯು ಕೋಟೆಯ ಗೋಡೆಯನ್ನು ಹತ್ತಿದನು. ಒಳಗೆ ಕೆಲವು ಹೆಂಗಸರು ಇದ್ದರು. ಅವರು ಇವನಲ್ಲಿ ಕೆಳಗೆ ಇಳಿದು ತಮ್ಮ ಕಡೆಗೆ ಬರುವಂತೆ ಏನೇನೋ ಹೇಳಿದರು. ಇವನಿಗೆ ಅವರ ಮಾತು ಒಂದೂ ತಿಳಿಯಲಿಲ್ಲ. ಕಡೆಗೆ ಕೈಯಿಂದ ಕರೆದರು. ಆದರೆ ಇವನಿಗೆ ಹೆದರಿಕೆಯಾಯಿತು. ಆಗ ಅವನು ಜತೆಯವರನ್ನು ಕರೆದು ಹಗ್ಗ ತರುವಂತೆ ಹೇಳಿದನು. ಅವರೆಲ್ಲರೂ ಬಂದ ಮೇಲೆ ಹಗ್ಗದ ಸಹಾಯದಿಂದ ಕೋಟೆಯ ಒಳಗೆ ಇಳಿದನು. ಆಗ ಅಲ್ಲಿದ್ದ ಹನ್ನೆರಡು ಹುಡುಗಿಯರು ಇವನ ಕಾಲು ಹಿಡಿದು ಕೂಗಿ ಹೇಳಿದರು. ಇವನಿಗೆ ಹೆದರಿಗೆ ಜಾಸ್ತಿಯಾಗಿ ದೇವರನ್ನೂ ಲೆಕ್ಕೆಸಿರಿಯನ್ನೂ ಪ್ರಾರ್ಥನೆ ಮಾಡಿದನು. ಆಗ ಸತ್ಯದೇವತೆಯು ಆ ಹುಡುಗಿಯರಲ್ಲಿ ಒಬ್ಬಳ ಮೇಲೆ ಆವೇಶವಾಗಿ ತುಳುವಿನಿಂದಲೇ "ಇಲ್ಲಿರುವ ರತ್ನಾಭರಣ ಸಕಲ ಸಂಪತ್ತುಗಳನ್ನೂ ಈ ಹುಡುಗಿಯರನೂ ಕರಕೊಂಡು ಹೋಗು. ಇವರು ರಕ್ಕಸನಿಂದ ಅಪಹರಿಸಲ್ಪಟ್ಟ ರಾಜಕನ್ನಿಕೆಯರು" ಎಂದು ಹೇಳಿಸಿತು. ಆ ಹುಡುಗಿಯು ಕೋಟೆಯ ಗುಪ್ತ ಬಾಗಿಲನ್ನು ತೆರೆದು ಅಲ್ಲಿರುವ ಹಸುರು ಶಿಲೆ, ಬಿಳಿ ಶಿಲೆ, ರತ್ನಾಭರಣಗಳ ಪೆಟ್ಟಿಗೆಗಳನ್ನು ಎತ್ತಿ ಎತ್ತಿ ಅವನ ಕೈಯಲ್ಲಿ ಕೊಟ್ಟು ಹಡಗುಗಳಿಗೆ ತುಂಬಿಸಿರಿ ಎಂದು ಹೇಳಿದಳು. ಅದರಂತೆ ಸಕಲ ಸೊತ್ತುಗಳನ್ನೂ ಆ ಹುಡುಗಿಯರನ್ನೂ ಹಡಗಿಗೆ ಕರಕೊಂಡು ಹೋದರು. ಪುನಃ ಹುಡುಗಿಗೆ ಆವೇಶ ಬಂದು "ಪಾಂಡಿಯೇ ಈ ಹುಡುಗಿಯನ್ನು ಈ ದಿನ ರಾತ್ರಿ ರಕ್ಕಸನು ಮದುವೆ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿ ತನ್ನ ಬಂಧುಗಳಿಗೆ ಹೇಳಿಕೊಡಲಿಕ್ಕೆ ಹೋಗಿರುತ್ತಾನೆ. ಹುಡುಗಿಯರು ಮದುವೆಗೆ ಒಪ್ಪದಿದ್ದರೆ ಕೂಡಿದ ರಕ್ಕಸರು ಕೊಂದು ತಿನ್ನಬೇಕೆಂದಿದ್ದರು. ಆದುದರಿಂದ ಗಾಳಿಯನ್ನು ತರುತ್ತೇನೆ. ಹಡಗನ್ನು ಬಿಡಿರಿ" ಎಂದಳು.

ಆ ಕೂಡಲೇ ಗಾಳಿ ಬೀಸಿತು. ಹಾಯಿಗಳನ್ನು ಬಿಡಿಸಿ ಹಡಗುಗಳನ್ನು ಬಿಟ್ಟರು. ಈ ಹಡಗುಗಳು ಸಮುದ್ರದಲ್ಲಿ ಎಲ್ಲಿಗೋ ಹೋದವು. ಕಡೆಗೆ ಆಕಾಶದಲ್ಲಿ ಅಬ್ಬಗೆದಾರಗೆ ಎಂಬ ನಕ್ಷತ್ರಗಳು ಗೋಚರಿಸಿದವು. ಆಮೇಲೆ ತಮ್ಮ ಊರಿನ ದಾರಿಗೆ ಸರಿಯಾಗಿ ಹಡಗುಗಳನ್ನು ತಿರುಗಿಸಿದರು. ಆ ಹಡಗುಗಳು "ಅರಗಡಿಯಿಂದ ಒಳನುಗ್ಗಿ ಅಂಗರನ ಕಟ್ಟೆಗೆ ಬಂದವು. ಹಡಗುಗಳು ಹಿಂತಿರುಗಿ ಬರುವಾಗ ಆರು ತಿಂಗಳು ಕಳೆದವು. ಆಗ ಹುಡುಗಿ ಒಬ್ಬಳ ಮೇಲೆ ಭೂತ ಆವೇಶ ಬಂದು" ನಿನಗೆ ಈಗ ದೊಡ್ಡ ಗಂಡಾಂತರ ಬರುತ್ತದೆ. ನೀನು ಹೆದರಬೇಡ. ಈ ಸೊತ್ತುಗಳಿಗೂ ನಮ್ಮ ಗಣಗಳಿಗೂ ಸರಿಯಾದ ಬಲಿ ಆಹಾರ ಕೊಟ್ಟು ಇದರಲ್ಲಿರುವ ರಸ ಮಾಯಣದ ಕೊಪ್ಪರಿಗೆಯನ್ನು ನಿನಗೆ ಬೇಕಾದ ಹಾಗೆ ಉಪಯೋಗಿಸಿ, ಉಳಿದುದನ್ನು ನಮ್ಮ ಅಪ್ಪಣೆಯಾಗುವ ಹಾಗೆ ಮಾಡಬೇಕು" ಎಂದಿತು. ಹಡಗು ಹೊಳೆಯೊಳಗೆ ಬಂದ ಕೂಡಲೇ ಉಕ್ಕು-ಡಕಾಯುವ ಅಂಗರನೆಂಬ ಅಧಿಕಾರಿಯು ಹಡಗುಗಳನ್ನು ವಿಚಾರಿಸಿ ಅಲ್ಲಿಯ ಪೆರ್ಗಡೆಗೆ ತಿಳಿಸಿದನು. ಪೆರ್ಗಡೆಯು ಬಂದು ಹಡಗುಗಳನ್ನೂ ಅವುಗಳಲ್ಲಿರುವ ಸೊತ್ತುಗಳನ್ನೂ ನೋಡಿ ಪಾಂಡಿಯನ್ನು ಕರೆದು ಮಾತಾಡಿ ತನ್ನ ಅರಮನೆಗೆ ಕರೆದುಕೊಂಡು ಹೋಗಿ ಆವನನ್ನು ಸೆರೆಯಲ್ಲಿಟ್ಟು ಹಡಗಿನವರನ್ನೂ ಹುಡುಗಿಯರನ್ನೂ ಕರೆಸಿ ಅವರೆಲ್ಲರನ್ನೂ ಸೆರೆಮನೆಯಲ್ಲಿಟ್ಟು ಹಡಗಿನ ಸಕಲ ಸೊತ್ತುಗಳನ್ನು ಅರಮನೆಗೆ ಸಾಗಿಸಿದನು. ಹುಡುಗಿಯರನ್ನು ಪೆರ್ಗಡೆಯು ಮದುವೆ ಮಾಡಿ ಕೊಳ್ಳುವುದಾಗಿ ಹೇಳಿದನು. ಹುಡುಗಿಯರು ಕೂಗಿದರು. ಆಗ ಕೇತು ಪಾಂಡಿಯು ಲೆಕ್ಕೆಸಿರಿಯನ್ನು ಪ್ರಾರ್ಥನೆ ಮಾಡಿಕೊಂಡನು. ಆಗ ಪೆರ್ಗಡೆಯ ಆನೆಯ ಮೈಮೇಲೆ ಲೆಕ್ಕೆಸಿರಿ ಭೂತವು ಆವೇಶ ಬಂದು ಪೆರ್ಗಡೆಯನು ಎತ್ತಿ ಕಾಲ ಅಡಿಗೆ ಹಾಕಿ ತುಳಿದು ಕೊಂದು ಹಾಕಿತು. ಸೆರೆಮನೆಯ ಬಾಗಿಲು ಒಡೆದು ಕೇತು ಪಾಂಡಿಯನ್ನು ಎತ್ತಿಕೊಂಡು ಬಂದು ಪೆರ್ಗಡೆಯ ಗದ್ದುಗೆಯಲ್ಲಿ ಕೂತುಕೊಳ್ಳಿಸಿತು. ಆಮೇಲೆ ಪಾಂಡಿಯು ಊರಿಗೆ ಅರಸ ನಾದನು. ಪೆರ್ಗಡೆಯ ಅಧಿಕಾರವು ಅವನಿಗೆ ಸಿಕ್ಕಿತು. ತನ್ನ ಮದುವೆಗೆ ದಿನ ನಿಶ್ಚಯಮಾಡಿ ಎಲ್ಲಾ ಜನರಿಗೆ ತಿಳಿಸಿ ಕುಲದೇವಿಯಾದ ಲೆಕ್ಕೆಸಿರಿಗೆ ಬಲಿ, ನೇಮ, ಮಂಡಲ ಸೇವೆಗಳನ್ನು ಕೊಟ್ಟು ಈ ಹುಡುಗಿಯರನ್ನು ಒಂದೇ ದಿವಸ ಲಗ್ನವಾದನು. ಹಾಗೆ ಲಗ್ನವಾದ ಸ್ಥಳವು ಈಗ ಕಲ್ಯಾಣ ಪುರವೆಂದು ಕರೆಯಲ್ಪಡುತ್ತದೆ.

ಈ ಪಾಡ್ದನದಲ್ಲಿ ಲೆಕ್ಕೆಸಿರಿ ಭೂತದ ಮಹಿಮೆಯನ್ನು ತಿಳಿಸಲು ಎದ್ದೋಡಿ ಕೇತುಮರಕಾಲನ ಕತೆಯನ್ನು ಬಳಸಿಕೊಳ್ಳಲಾಗಿದೆ. ಈ ಪಾಡ್ದನದ ವಸ್ತು ಸ್ವಲ್ಪಮಟ್ಟಿಗೆ ಬೊಬ್ಬರ್ಯ ಪಾಡ್ದನದ ವಸ್ತುವನ್ನು ಹೋಲು ತ್ತದೆ. ಹಡಗಿನಲ್ಲಿ ಹೋಗಿ ವ್ಯಾಪಾರ ಮಾಡುವುದು, ಹಡಗಿನ ಮರಗಳನ್ನು ಕಡಿಯುವ ಮೊದಲು ಬ್ರಹ್ಮ ಸ್ಥಾನಕ್ಕೆ ಹೋಗಿ ಪ್ರಾರ್ಥನೆ ಮಾಡುವುದು ಬೊಬ್ಬರ್ಯ ಪಾಡ್ದನದ ಹಾಗೆಯೇ ಇದೆ. ಹಡಗನ್ನು ನೀರಿಗೆ ಇಳಿಸುವಾಗ ಲೆಕ್ಕೆಸಿರಿ ಭೂತವನ್ನು ನಂಬುವುದು, ಅದಕ್ಕೆ ಬಲಿಕೊಡುವುದು ಈ ಪದ್ಧತಿಯು ಆ ಸಂಪ್ರದಾಯ ವನ್ನು ತಿಳಿಸುತ್ತದೆ. ಮುಂದಿನ ಘಟನೆಗಳೆಲ್ಲ ಕಷ್ಟಕಾಲದಲ್ಲಿ ಲೆಕ್ಕೆಸಿರಿ ಭೂತದ ಸಹಾಯ ಹೇಗೆ ಅಗತ್ಯ ಎನ್ನುವ ದೃಷ್ಟಿಯಿಂದ ವಿವರವಾಗಿ ಬಂದಿವೆ. ಜನಪದ ಕತೆಗಳ ಪ್ರಭಾವ ಇಲ್ಲಿನ ಘಟನೆಗಳ ಸ್ವರೂಪದಲ್ಲಿ ಇದೆ.

ಲೆಕ್ಕೆಸಿರಿ ಭೂತದ ಮಹಿಮೆಯನ್ನು ಹೇಳುವ ಇನ್ನೊಂದು ಪಾಡ್ದನ "ಬಾಣ ಸೇನಪ್ಪರಿಗೆ" ಸಂಬಂಧಿಸಿದ ಪಾಡ್ದನ, ಬಾಣ ಸೇನಪ್ಪರು ತಂದೆತಾಯಿಯನ್ನು ಕಳೆದುಕೊಂಡ ಬಳಿಕ ಉತ್ತರದ ಗಂಗೆಗೆ ಪ್ರಯಾಣ ಹೊರ ಡುವುದು, ದಾರಿಯಲ್ಲಿ ಅವರಿಗೆ ಹೊಳೆಯನ್ನು ದಾಟುವಲ್ಲಿ ಲೆಕ್ಕೆಸಿರಿ ಭೂತವು ಭೇಟಿಯಾಗುವುದು, ಈ ಲೆಕ್ಕೆ ಸಿರಿ ಭೂತವು ಸೇನಪ್ಪರಲ್ಲಿ – 'ಈರ್ ಉಪ್ಪಿರಾಜ್ಯೊಗು ಎಂಕೆ ಬರೊಡುಂದು ಮನಸ್ ಉಂಡಿಯೆ, ಈರ್ ಎಂಕೆ ನಾನೊ ಮಾನೊ ಅವಾರೊ ನನ ಯೆಂಕಿ ಕೊರೊಡುಂದೆ' (ನೀವಿರುವ ರಾಜ್ಯಕ್ಕೆ ನನಗೆ ಬರಬೇಕೆಂದು ಮನಸ್ಸಾಗಿದೆ, ನೀವು ನನಗೆ ಸ್ಥಾನ, ಮಾನ, ಬಲಿ ಎಲ್ಲವನ್ನು ಕೊಡಬೇಕು). ಈ ರೀತಿ ಸೇನಪ್ಪರು ಲೆಕ್ಕೆಸಿರಿ ಭೂತವನ್ನು ಕರೆದುಕೊಂಡು ಬಂದು ಸ್ಥಾನ ಕಟ್ಟಿಸಿ, ನಂಬಿ, ಉತ್ಸವ ಮಾಡಿಸುತ್ತಾರೆ. ಮುಂದೆ ಮಾಸೂರಿನಿಂದ

ವೇಣೂರಿಗೆ, ವೇಣೂರಿನಿಂದ ಕುಡುಮ (ಧರ್ಮಸ್ಥಳ) ಕ್ಕೆ ಅಲ್ಲಿಂದ ಬೇರೆ ಬೇರೆ ಕಡೆಗಳಿಗಾಗಿ ಮಣೇಲ ಪಾಡಿ ಬೈದ್ಯನಲ್ಲಿಗೆ, ಉಳ್ಳಾಲ ಚಾವಡಿಗೆ, ಬೊಳ್ಮ ಬೊಳಿಯಂಗಳಿಗೆ ಲೆಕ್ಕೆಸಿರಿ ಸಂಚಾರ ಮಾಡುತ್ತದೆ.

ಲೆಕ್ಕೆಸಿರಿಯು ಈ ಪಾಡ್ದನವು ಅದರ ಮಹಿಮೆಯನ್ನು ಪ್ರಸರಣದ ಮೂಲಕ ಹೇಳುವ ಪಾಡ್ದನ. ಈ ಪಾಡ್ದನದಲ್ಲಿ ಒಂದು ಕಡೆ ಬರುವ ಮಾತು ಲೆಕ್ಕೆಸಿರಿಯ ಸ್ವರೂಪವನ್ನು ತಿಳಿಸುತ್ತದೆ'ಉಳ್ಳಾಯಿ ಕೊರ್ನಗ ದೇವರೆ ಪರಮೇಸ್ತ್ರೀಯಮ್ಮ, ಪಿದಾಯಿ ಕೊರ್ನಗ ಲೆಕ್ಕೆಸಿರಿ ಭೂತ" (ಒಳಗೆ ಕೊಡುವಾಗ ದೇವರು ಪರಮೇಶ್ವರಿ ಯಮ್ಮ, ಹೊರಗೆ ಕೊಡುವಾಗ ಲೆಕ್ಕೆಸಿರಿ ಭೂತ). ಅಂದರೆ ಲೆಕ್ಕೆಸಿರಿ ಭೂತವು ಪರಮೇಶ್ವರಿಯ ಒಂದು ಅಂಶ ಎನ್ನುವ ವಿಚಾರ ಗೊತ್ತಾಗುತ್ತದೆ. ಈ ಭೂತಕ್ಕೆ ಅರ್ಪಣೆ ಕೊಡುವಾಗಲೂ ಬೆಳ್ಳಿಯ ಕಡ್ತಳೆ, ಕೈಮಣೆಗಳು ಮುಖ್ಯವಾಗಿವೆ.

**ರಾಜದೈವ ಮತ್ತು ಅಂತಹ ಇತರ ದೈವಗಳ ಪಾಡ್ದನಗಳು**

ಅನೇಕ ಭೂತಗಳ ಪಾಡ್ದನಗಳನ್ನು ನೋಡಿದರೆ ಆ ಭೂತಗಳ ಹುಟ್ಟಿನ ಬಗ್ಗೆ ಯಾವುದೇ ಸೂಚನೆಯು ಸಿಗುವುದಿಲ್ಲ. ಈಗ ಸಿಕ್ಕುವ ಇಂತಹ ಭೂತಗಳ ಎಲ್ಲ ಪಾಡ್ದನಗಳು ಅವುಗಳ ಮಹಿಮೆಯನ್ನು ಸಾರುವ ಪ್ರಸರಣ ರೂಪದ ಪಾಡ್ದನಗಳು. ಇವುಗಳಲ್ಲಿ ಹೆಚ್ಚಿನ ಭೂತಗಳು ಗಟ್ಟದ ಮೇಲಿನಿಂದ ಇಳಿದು ತುಳುನಾಡಿನಲ್ಲಿ ಸಂಚಾರ ಮಾಡಿ ಬೇರೆ ಬೇರೆ ಕಡೆಗಳಲ್ಲಿ ತಮ್ಮ ಸಾಹಸವನ್ನು, ಮಹಿಮೆಯನ್ನು ಪ್ರಕಟಿಸಿ ಆರಾಧನೆಯನ್ನು ಪಡೆಯುತ್ತವೆ. ತೋಡಕುಕ್ಕಿನಾರ್, ಅತ್ತಾವರ ದೈಯಂಗೊಳು, ಮೂಡದಾಯ, ಶಿರಾಡಿಭೂತ, ಕಿನ್ನಿಮಾನಿ-ಪೂಮಾನಿ, ಕನಪಾಡಿತ್ತಾಯ, ಮಗ್ರಂದಾಯ, ಜಾರಂತಾಯ, ಕನ್ನಲ್ಲಾಯ, ಪೋಡಿಲ್‌ತ್ತಾಯ, ಕೊಡಮಣಿತ್ತಾಯ ಮುಂತಾದ ಭೂತಗಳನ್ನು ಈ ವರ್ಗಕ್ಕೆ ಸೇರಿಸಬಹುದು. ನಾವು ಈಗಾಗಲೇ ನೋಡಿರುವ ಮಂಡತ್ತಾಯ ಅಥವಾ ಮುಂಡಿಪಾಡಿತ್ತಾಯನನ್ನು ಈ ವರ್ಗಕ್ಕೆ ಸೇರಿಸಬಹುದು. ಇವುಗಳಲ್ಲಿ ಕೆಲವು ಭೂತಗಳು ಗಟ್ಟದಿಂದ ತುಳುನಾಡಿಗೆ ಇಳಿದು ಬರುವುದು ಸ್ಪಷ್ಟವಾಗಿದೆ. ಇನ್ನೂ ಕೆಲವು ಭೂತಗಳ ಪಾಡ್ದನಗಳಲ್ಲಿ ತುಳುನಾಡಿನ ಯಾವುದೋ ಒಂದು ಸ್ಥಳದಿಂದ ಭೂತವು ಹೊರಡುವುದನ್ನು ಕಾಣುತ್ತೇವೆ. ಗಂಗೆಗೆ ಹೋದ ವ್ಯಕ್ತಿಗಳ ಜೊತೆಗೆ ಕೆಲವು ಭೂತಗಳು ಬರುವ ಕ್ರಮವು ಇದೆ. ಪ್ರಧಾನವಾಗಿ ಈ ವರ್ಗದ ಭೂತಗಳ ಹೆಸರುಗಳು ಅವು ಹೆಚ್ಚು ಪ್ರಸಿದ್ಧವಾಗಿ ನೆಲೆವೂರಿದ ಸ್ಥಳದ ಹೆಸರಿನಿಂದ ಉತ್ಪನ್ನವಾದವು. ಉದಾ: ಕನಪಾಡಿ—ಕನಪಾಡಿತ್ತಾಯ. ಕೊಡಮಾಣಿ—ಕೊಡೆಮಾಣಿತ್ತಾಯ. ಮಗರಾಣಿ—ಮಗ್ರಂತ್ತಾಯ, ಮುಂಡಿಪಾಡಿ—ಮುಂಡಿಪಾಡಿತ್ತಾಯ. ಓಡಿಲ್—ಓಡಿಲೆತ್ತಾಯ. ಕಣ್ಣಿಲ್ ಅಥವಾ ಕಣ್ಣಲ್—ಕನ್ನಲ್‌ತ್ತಾಯ. ತೋಡಕುಕ್ಕು—ತೋಡಕುಕ್ಕಿನಾರ್. ಅತ್ತಾವರ—ಅತ್ತಾವರ ಧೈಯಂಗೊಳು ಇತ್ಯಾದಿ.

ಈ ರೀತಿ ಒಂದು ಪ್ರಸಿದ್ಧವಾದ ಸ್ಥಳದಲ್ಲಿ ನೆಲೆವೂರಿ ಆ ಊರಿನ ಹೆಸರಿಗೆ "ತ್ತಾಯ" (-ಯವನು) ಅಥವಾ 'ಆರ್' (-ಅವರು) ಮುಂತಾಗಿ ಪ್ರತ್ಯಯವನ್ನು ಜೋಡಿಸಿ ಹೆಸರುಗಳನ್ನು ಪಡೆದ ಭೂತಗಳು ಸಾಮಾನ್ಯವಾಗಿ ಒಂದೇ ರೀತಿಯ ಗುಣಗಳನ್ನು ತೋರಿಸುತ್ತವೆ. ಮಹಿಮೆಯನ್ನು ಪ್ರಕಟಿಸುವ ರೂಪದ ಪ್ರಸರಣದ ಸ್ಥಳಗಳ ಹೆಸರುಗಳ ವ್ಯತ್ಯಾಸವನ್ನು ಬಿಟ್ಟರೆ ಸಾಮಾನ್ಯವಾಗಿ ಒಂದೇ ಮಾದರಿಯಲ್ಲಿ ಇವೆ. ಆದ್ದರಿಂದಲೇ ಕೆಲವೊಂದು ಬಾರಿ ಒಂದೇ ಭೂತವು ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ಹೆಸರುಗಳಲ್ಲಿ ಕಾಣಿಸಿಕೊಳ್ಳುತ್ತದೆ. ಉದಾ :- ಕನಪಾಡಿತ್ತಾಯ ಮತ್ತು ಮಗ್ರಂದಾಯ ಭೂತಗಳು ಒಂದೇ ಆದರೂ ಊರುಗಳ ಹೆಸರುಗಳಿಂದಾಗಿ ಬೇರೆ ಬೇರೆ ಕಡೆ ಆ ಈ ಬೇರೆ ಬೇರೆ ಹೆಸರುಗಳಲ್ಲಿ ಸಿಗುತ್ತವೆ.

ಇವುಗಳಲ್ಲಿ ಅನೇಕ ಭೂತಗಳನ್ನು ರಾಜ ದೈವಗಳು ಎನ್ನುವುದು ಇದೆ. ಪಾಡ್ದನಗಳಲ್ಲಿಯೂ ಆ ಮಾತು ಬರುತ್ತದೆ. ಕೊಡಮಣಿತ್ತಾಯ, ಅತ್ತಾವರ ದೈಯಂಗೊಳ, ಕಿನ್ನಿಮಾಣಿ—ಪೂಮಾಣಿ, ತೋಡಕುಕ್ಕಿನಾರ್

ಮುಂತಾದ ಭೂತಗಳನ್ನು ರಾಜ ದೈವವೆಂದು, ಧರ್ಮ ಅರಸು ದೈವವೆಂದು ಹೇಳಲಾಗಿದೆ.

ಈ ಭೂತಗಳ ಪಾಡ್ದನಗಳಲ್ಲಿ ಕೆಲವೊಮ್ಮೆ ಪೌರಾಣಿಕ ಸ್ವರೂಪದ ಭೂತಗಳ ಕ್ರಮಂ ಕಾಣಿಸುತ್ತದೆ. ಇನ್ನೂ ಕೆಲವೊಮ್ಮೆ ಮನುಷ್ಯರು ಯಾವುದೇ ಅಕಾಲ ಮರಣವಿಲ್ಲದೆ ತಾವಾಗಿಯೇ ಭೂತಗಳಾಗಿ ಗಟ್ಟವಿಳಿದು ಬರುವ ರೀತಿಯೂ ಇದೆ. ಒಂದು ಭೂತದ ಪಾಡ್ದನದಲ್ಲಿ ಈ ವರ್ಗದ ಇನ್ನೊಂದು ಭೂತ ಬರುವುದು ಉಂಟು. ಅವುಗಳು ಅನೇಕ ಬಾರಿ ಸ್ನೇಹದ ರೂಪದಲ್ಲಿ ಒಗ್ಗಟ್ಟಿನಿಂದ ತಮ್ಮ ಆರಾಧನೆಯನ್ನು ಪಡೆದು ಕೊಳ್ಳುತ್ತವೆ. ಅಂತಹ ಕೆಲವು ಭೂತಗಳ ಪಾಡ್ದನಗಳನ್ನು ಅಧ್ಯಯನ ಮಾಡಬಹುದು.

## 1. ತೋಡ ಕುಕ್ಕಿನಾರ್

'ತೋಡ ಕುಕ್ಕಿನಾರ್' ಭೂತವನ್ನು 'ತೋಡಕ್ಕಿನಾರ್' ಭೂತವೆಂದೂ ಧರ್ಮ ಅರಸು ಭೂತವೆಂದೂ ವೈದ್ಯನಾಥ ಸ್ವಾಮಿ ದೈವವೆಂವೂ ಅಜ್ಜೇರ ಎಂದೂ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಕಣಂದೂರಿನ ತೋಡಕುಕ್ಕಿನ ಬದಿಯಲ್ಲಿ (ಹೊಳೆಯ ಬದಿಯ ಮಾವಿನ ಮರದ ಸಮೀಪ) ಈ ದೈವ ಅವತರಿಸಿದ ಕಾರಣ ಅದಕ್ಕೆ 'ತೋಡ ಕುಕ್ಕಿನಾರ್' ಎಂದು ಕರೆಯುತ್ತಾರೆ. ಮಂಗಳೂರಿನಿಂದ ದಕ್ಷಿಣಕ್ಕಿರುವ ಉಳ್ಳಾಲದಿಂದ ಪೂರ್ವಕ್ಕೆ ಸುಮಾರು 10 ಮೈಲು ದೂರದಲ್ಲಿ ಈ ಪಾಡ್ದನದ ಸ್ಥಳವಾದ ಕಣಂದೂರು ಇದೆ. ಇಂದಿಗೂ ಅಲ್ಲಿನ ಗುಡಿಯಲ್ಲಿ ಈಗಲೂ ಈ ಭೂತದ ಆರಾಧನೆ ವಂಶಪಾರಂಪರ್ಯವಾಗಿ 'ಪೊಯ್ಯತ್ತಾಯ' ಎನ್ನುವವರಿಂದ ನಡೆದುಕೊಂಡು ಬಂದಿದೆ. ನಾಥ ಪಂಥದ ಪ್ರಭಾವ ಈ ತೋಡ ಕುಕ್ಕಿನಾರ್ ದೈವದ ಪಾಡ್ದನದಲ್ಲಿ ಕಾಣಿಸುತ್ತದೆ. ಈ ಭೂತಕ್ಕೆ 'ವೈದ್ಯನಾಥ ಸ್ವಾಮಿ' ಎಂದು ಹೆಸರು ಇರುವುದು ಈ ದೃಷ್ಟಿಯಿಂದ ಗಮನಾರ್ಹ. ಈ ಭೂತವನ್ನು "ರಾಜದೈವ" ಎಂದು ಕರೆಯುತ್ತಾರೆ. ಅದು ಈಶ್ವರನ ಅಂಶದ್ದು ಎನ್ನುವ ಕಲ್ಪನೆ ಇದೆ. ಈ ಭೂತಕ್ಕೆ ಜಾತ್ರೆಯ ಸಮಯದಲ್ಲಾಗಲೀ ನಿತ್ಯ ದಿನಗಳಲ್ಲಾಗಲೀ ಪ್ರಾಣಿ ಬಲಿ ಇಲ್ಲ, ಬೇರೆ ದೈವಗಳಿಗೆ ಕೊಡುವಂತೆ ಆಹಾರವು ಇಲ್ಲ. ಕಣಂದೂರಿನ ಈ ಭೂತದ ಉತ್ಸವವು ಪ್ರತಿ ವರ್ಷವು 5 ದಿನ ನಡೆಯುತ್ತದೆ. 4ನೆಯ ದಿನ 'ಐವೆರ ಬಂಟ್ರೆ' ನೇಮೊ ಅಂದರೆ ಭೂತದ 5 ಜನ ಬಂಟರುಗಳ ಉತ್ಸವ ಮತ್ತು 5ನೆಯ ದಿನ ಪಿಲಿಚಾಮುಂಡಿ ಭೂತದ ನೇಮ ನಡೆಯುತ್ತದೆ. ಉತ್ಸವದ ಆರಂಭದ ದಿನ ಕಂಜಿಲು ಹರಕೆ ಎಂಬ ವಿಶೇಷವಾದ ಹರಕೆ ಇದೆ. ಎರಡನೆಯ ದಿನ ತೋಡ ಕುಕ್ಕಿನಾರ್ ಭೂತದ ಜೊತೆಗೆ ಬಂಟ ಜಾವದೆ, ದುರ್ಗಾಲ್ಲಾಯ ಮತ್ತು ಉಳ್ಳಾಲ್ತಿ ಭೂತಗಳಿಗೂ ನೇಮ ನಡೆಯುತ್ತದೆ, ನಾಲ್ಕನೆಯ ದಿನ ದುರ್ಗಲ್ಲಾಯ ಮಲೆರಾಯ, ಜುಮಾದಿ, ಬಂಟ, ಪಿಲಿಚಾಮುಂಡಿ ಮುಂತಾದ ಪರಿವಾರ ಭೂತಗಳ ನೇಮ ನಡೆಯುತ್ತದೆ.

ತೋಡ ಕುಕ್ಕಿನಾರ್ ಭೂತದ ಪಾಡ್ದನದ ಮುಖ್ಯವಾದ ಮೂರು ಪಾಠಗಳು ದೊರೆಯುತ್ತವೆ.

$T_1$ 1. ತೊಡಕಿನಾರ್—ಸಂ. A. Manner ಪಾಡ್ದನೊಳು—1886.

$T_2$ 2. ತೊಡಕಿನಾರ್ (ಕಣಂದೂರು ದೈಯಂಗೊಳು)—ಸಂ. ಗಣಪತಿರಾವ್ ಐಗಳೆ—ತುಳು ಪಾಡ್ದನೊಳು : 1924.

$T_3$ 3. ತೋಡ ಕುಕ್ಕಿನಾರ್ ಪಾಡ್ದನ—ಸಂ. ರಸಿಕ ಪುತ್ತಿಗೆ—1967.

ಈ ಪಾಡ್ದನಗಳ ಒಂದು ಪಾಠದ ಮೂಲಕ ಹೋಲಿಸಿ ನೋಡಬಹುದು.

## ತೋಡಕುಕ್ಕಿನಾರ್ ಪಾಡ್ದನದ ಕನ್ನಡ ರೂಪಾಂತರ

'ಕೀಳ್‌ಕಂಚಿ ಮತ್ತು ಮೇಲ್‌ಕಂಚಿ ಎಂಬೆರಡು ಊರುಗಳಿದ್ದವು. ಇವಲ್ಲದೆ ಕಂಚಿಕಡಂಗ ಎಂಬಲ್ಲಿಯೂ ಒಂದು ಅರಮನೆ ಇತ್ತು. ಅಲ್ಲಿ ಕತ್ತಿನಷ್ಟು ಉದ್ದವಾದ ಮಲ್ಲಿಗೆ ಹೂ ಮತ್ತು ನೆಟ್ಟ ಸಂಪಿಗೆ ಹೂವಿನಲ್ಲಿ ಧರ್ಮ ಅರಸು ಎಂಬುವವರು ಜನಿಸಿದರು. ಅವರಿಗೆ ಏಳು ವರ್ಷವಾಗುವಾಗಲೇ ಗಡ್ಡಬಂತು. ಚೌಲಕ್ಕಾಗಿ ಗಟ್ಟದ ಮೇಲಿನ ಈಜಾನಗರವೆಂಬಲ್ಲಿಂದ ಬಿನ್ನಾಡಿಕಾರ ಎಂಬ ನಾಯಿಂದನನ್ನು ಕರೆಸಲು ಕೆಲಸದವರು ಹೇಳಿದರು.

ತೆಂಗಿನ ಮರದ ಗರಿ ತರಿಸಿ ಬೆಳ್ಳಿಗೆ ಮೂಡು ಮುಖ ಮಾಡಿ ಅದರಲ್ಲಿ, "ಮಾಡಿದ ಊಟದಲ್ಲಿ ಉಟ್ಟ ಬಟ್ಟೆಯಲ್ಲಿ" ಕ್ಷೌರಿಕನು ಬರಬೇಕೆಂದು ಓಲೆ ಬರೆಸಿದರು. ಅವರ ಸೇವಕನು ಕ್ಷೌರಿಕನ ಕೈಯಲ್ಲಿ ಕೊಂಡುಹೋಗಿ ಇತ್ತೊಡನೆ ಅವನು ಕ್ಷೌರಕತ್ತಿ, ಕನ್ನಡಿ ಕತ್ತರಿ ಮುಂತಾದುವನ್ನು ಪೆಟ್ಟಿಗೆಯಲ್ಲಿ ಹಾಕಿ ಸೇವಕನೊಡನೆ ಅರಮನೆಗೆ ಬಂದು ಧರ್ಮಅರಸುಗಳಿಗೆ ಕೈಮುಗಿದ. ಅವನು ಬಂದದ್ದು ಒಳ್ಳೆಯದಾಯಿತೆಂದು ಅವರು ಹೇಳಿ ತನ್ನ ಗಡ್ಡವನ್ನು ತೆಗೆಯಲು ಹೇಳಿದರು.

ಅರಮನೆ ಚಾವಡಿಯ ಮಧ್ಯದಲ್ಲಿ ನಾಲ್ಕು ಕಾಲಿನ ಮೇಜಿನಂಥ "ಮುಕ್ಕಾಲಿಗೆ" ಇಡಿಸಿ, ಎಡಬಲಗಳಲ್ಲಿ ದೀಪ ಉರಿಸಿದರು. ಎಲೆಯಲ್ಲಿ ಒಂದು ಸೇರು ಅಕ್ಕಿ ಮತ್ತು ಒಂದು ತೆಂಗಿನ ಕಾಯಿಯನ್ನು ಇರಿಸಿದರು. ಗಂಟೆ ಬಾರಿಸಿ, ಶಂಖ ಊದಿಸಿದರು. ಚಾಮರ ಬೀಸಲು ಆಜ್ಞಾಪಿಸಿ ಅರ್ಧ ಉಡುಪು ಉಟ್ಟು, ಮುಕ್ಕಾಲಿಗೆಯಲ್ಲಿ ಕುಳಿತರು. ಮುತ್ತಿನ ಆರತಕ್ಷತೆ ಹಾಕಿದ ಮೇಲೆ ಕ್ಷೌರಿಕನು ಅವರ ತಲೆಗೂದಲನ್ನು ಕತ್ತರಿಸಿ ಶೃಂಗಾರ ಮಾಡಿದ.

ಕ್ಷೌರಿಕ ಮುಟ್ಟಿದ ದೋಷ ಪರಿಹಾರಕ್ಕೆ ಸ್ನಾನ ಮಾಡಲು ಒಂದು ಕೆರೆಯ ಹತ್ತಿರ ನಾಲ್ಕು ಕೈಗಳಿಂದ ಭಾಂಡೆಯನ್ನು ಇರಿಸಿ, ಅದರಲ್ಲಿ ತಣ್ಣೀರು ತುಂಬಿಸಿ ಹನ್ನೆರಡು ಕಟ್ಟು ಕಟ್ಟಿಗೆಯಿಂದ ಅದನ್ನು ಬಿಸಿ ಮಾಡಿಸಿದರು. ಸಾವಿರ ತಂಬಿಗೆ ಬಿಸಿ ನೀರನ್ನು ಅರಸರ ತಲೆಗೆ ಸುರಿದ ನಂತರ ಸಾವಿರ ತಂಬಿಗೆ ತಣ್ಣೀರನ್ನು ಸುರಿದರು. ಆ ಬಳಿಕ ಕಾಪೂರ ಕರಿಪಟ್ಟೆ, ಬೋಳೂರ ಬಿಳಿಪಟ್ಟೆ, ಮದುರೆ ಪಟ್ಟೆ, ಉಸಿರಿಗೆ ಹಾರಿ ಹೋಗುವ 'ಪಾಲಿ' ಪಟ್ಟೆ, ಕಣ್ಣೀರಿನಲ್ಲಿ ಒದ್ದೆಯಾಗುವ ಪಟ್ಟೆ, ಉಗುರಿನೆಡೆಯಲ್ಲಿ ಅಡಗುವ ಪಟ್ಟೆ ವಸ್ತ್ರಗಳನ್ನು ತಂದು ಅವರ ಮೈ ಒರಸಿದರು.

ಏಳು ಪೆಟ್ಟಿಗೆಗಳಿಂದ ವಸ್ತ್ರವನ್ನೂ ಏಳು ಪೆಟ್ಟಿಗೆಗಳಿಂದ ಆಭರಣಗಳನ್ನೂ ಸುಗಂಧವನ್ನೂ ತರಿಸಿ "ಮುಕ್ಕಾಲಿ" ಯಲ್ಲಿ ಅರಸು ಕುಳಿತರು. ಕುತ್ತಿಗೆಗೆ ಪದಕವನ್ನು, ಸೊಂಟಕ್ಕೆ ಡಾಬುವನ್ನು, ಕಿವಿಗೆ ಮುತ್ತಿನ

ಚಾಕುಳಿಯನ್ನೂ ಬೆರಳಿಗೆ ಸೂರ್ಯ ಮುದ್ರೆಯ ಉಂಗರವನ್ನೂ ಕುತ್ತಿಗೆಗೆ ಚಕ್ರಸರ, ಕೈಗೆ ದಂಡ ಇತ್ಯಾದಿಗಳನ್ನು ಧರಿಸಿ ಶೃಂಗರಿಸಿಕೊಂಡರು. ಆಮೇಲೆ ಗಟ್ಟದ ಕೆಳಗಿನ ತುಳು ರಾಜ್ಯದ ತುಳು ಜನರನ್ನು ನೋಡಬೇಕೆಂದರು. ಗಟ್ಟದಿಂದ ಇಳಿಯುವುದೆಲ್ಲಿ ಎಂದು ಕೇಳಿದಾಗ ಬಂಡಾಡಿಯ ಸೋಮನಾಥ ದೇವರೂ ಶಿರಾಡಿಯ ಚಿಕ್ಕರಾಯ ದೇವರೂ ಅವರು ಹೋಗಕೂಡದೆಂದರು. ಆಗ ಎತ್ತುಗಳ ವ್ಯಾಪಾರದ ಸೆಟ್ಟಿಗಾರನ ಚೆನ್ನಮಂಗಳ ಚೆಲುವರಾಯ ಎನ್ನುವ ಎತ್ತಿನ ಮೇಲೆ ಕುಳಿತು, ನಾಲ್ಕು ಸಾವಿರ ಎತ್ತುಗಳೊಡನೆ ಸುಬ್ರಾಯ ದೇವರಲ್ಲಿಗೆ ಬಂದು ಪೂಜೆ ಮಾಡಿ ಅಲ್ಲಿನ ಏಳು ದಿನದ ಜಾತ್ರೆಯನ್ನು ನೋಡಿ ಕುಮಾರಧಾರೆ ನದಿ ದಾಟಿದರು. ಮುಂದೆ ಇಂಗ್ಲೀಕದ ಕೋಟೆ, ಕೇಪಾಡಿ ಗಟ್ಟಗಳ ಮೂಲಕ ವಿಟ್ಲಕ್ಕೆ ಬಂದು ಪಂಚಲಿಂಗ ದೇವರನ್ನು ಕಂಡರು. ಅಲ್ಲಿಂದ ಬಸವನಗುಡಿ, ಕಡಂಬ, ಸಾಲೆತ್ತೂರು ದೇವಸ್ಥಾನಗಳಿಗೆ ಹೋಗಿ ಮುದುಂಗರ ಗೋಳಿ ಎಂಬಲ್ಲಿ ರಾತ್ರಿಯನ್ನು ಕಳೆದರು. ಮುಂದೆ ಧರ್ಮದ ಬಾವಿಯ ಬಯಲಿಗೆ ಹೋದರು. ಇದು ಕಣಂದೂರ ಪೊಯ್ಯದಾರ್ ಎಂಬವರಿಗೆ ತಿಳಿಯಿತು.

ಅವರು ತಮ್ಮ ಹಿರಿಯರು ಆನೆ ಕುದರೆಯನ್ನು ಕಟ್ಟಿ ಆಳಿದವರು; ತಾನು ಎತ್ತುಗಳನ್ನಾದರೂ ಕಟ್ಟಬೇಕು ಎಂದು ಹೊರಟು, ಧರ್ಮದ ಬಾವಿಯ ಸಮೀಪದ ಬಯಲಿನ ಬಳಿ ಬಂದರು. ಆ ನಾಲ್ಕು ಸಾವಿರ ಎತ್ತುಗಳಲ್ಲಿ ಯಾವುದೂ ಅವರಿಗೆ ಮೆಚ್ಚಿಗೆಯಾಗದೆ ಚೆನ್ನಮಂಗಳ ಚೆಲುವರಾಯ ಎಂಬ ಎತ್ತನ್ನು ಖರೀದಿ ಮಾಡಿದರು. ಅದನ್ನು ಮಾವಿನ ಮರಕ್ಕೆ ಕಟ್ಟಿ ನೀರಿಗಿಳಿದು ಜಪಕ್ಕೆ ಕುಳಿತರು. ಅಲ್ಲಿಂದ ಹಿಂದಿರುಗುವಾಗ ಎತ್ತು ಇರಲಿಲ್ಲ. ಜ್ಯೋತಿಷ್ಯದಲ್ಲಿ ನೋಡುವಾಗ ಅದು ಭೂತ ಕುಳಿತ ಎತ್ತಾದ್ದರಿಂದ ಭೂತದ ಪ್ರಭಾವದಿಂದ ಮಾಯವಾಯಿತೆಂದು ತೋರಿತು. ಭೂತದ ಆವೇಶ ಬಂದ ನಂಚಿ ಬೈದ್ಯನೆಂಬುವನು ನಡುಗಿ ಹೆಸರುಗಳನ್ನು ಕರೆದ. ತನ್ನ ನಿಮಿತ್ತ ಕಣಂದೂರು ರಾಜ್ಯದಲ್ಲಿ ಒಂದು ಸ್ಥಾನ ಕಟ್ಟಿಸಬೇಕೆಂದೂ ತಾನು ಎತ್ತನ್ನು ತೋರಿಸಿಕೊಡುವೆನೆಂದೂ ಭೂತ ಅವನ ಮೂಲಕ ಹೇಳಿತು. ಮಾಯವಾದ ಎತ್ತು ಹಿಂತಿರುಗಿತು. ಭೂತವೊಂದರ ಸ್ಥಾನ ಕಟ್ಟಿಸಿ ಅದರ ಆರಾಧನೆ ನಡೆಸಿದರು.

ಆದರೆ ಮೂರು ಪಕ್ಕದ ಜನರು ಬಂದಾಗ ಭೂತವು ಆ ಸ್ಥಾನ ಕಟ್ಟಿದುದು ಚೆನ್ನಾಗಿಲ್ಲವೆಂದೂ ತನಗೆ ಬೇರೊಂದು ಸ್ಥಾನವನ್ನು ಊರವರೊಡನೆ ಸೇರಿ ಕಟ್ಟಿಸಬೇಕೆಂದೂ ಕೇಳಿಕೊಂಡಿತು. ಹಾಗೆಯೇ ಉಳಕುಂಜಿ ಎಂಬ ಬಯಲು ಜಾಗದಲ್ಲಿ ಸ್ಥಾನ ಕಟ್ಟಿಸಿ ಜಾತ್ರೆ ಮಾಡಿಸಿದರು. ವರ್ಕಾಡಿ, ವಿಟ್ಲಸೀಮೆ ಮತ್ತು ಮರಕುಡೆವರೆಗಿನ ಜನ ಅದಕ್ಕೆ ಬಂದರು.

ಕೆಲವು ವರ್ಷಗಳ ನಂತರ ತೊಡಕಿನಾರ್ ಭೂತವು ಪಡುಗಡಲಲ್ಲಿ ಸಮುದ್ರಕ್ಕೆ ಹೋಗುವುದೆಂದು ತಿಳಿದ ಉಳ್ಳಾಳ್ತಿ ಭೂತಗಳು ತಾವು ಬರುವೆವೆಂದರು. ತೊಡಕಿನಾರ್ ಭೂತವು ಪಲ್ಲಕ್ಕಿ ತರಿಸಿ ಉಳ್ಳಾಳ್ತಿಯನ್ನು ಅದರಲ್ಲಿ ಕುಳ್ಳಿರಿಸಿ ತಾನು ಚೆನ್ನಮಂಗಳ ಎತ್ತಿನ ಮೇಲೆ ಕುಳಿತಿತ್ತು. ರಾತ್ರಿ ಅದು ಹೊರಡುವಾಗ ಪಿಲಿಚಂಡಿ ಜುಮಾದಿ, ದುರ್ಗಲಯೆ, ವರ್ಕಾಡಿ, ಮಿತ್ತ ಮುಗೆರಯೆ ಭೂತಗಳು ಅದರೊಡನೆ ಹೋಗಿ ಉಳ್ಳಾಲದಲ್ಲಿ ಸಮುದ್ರ ಸ್ನಾನ ಮಾಡಿದರು. ಅಲ್ಲಿಂದ ಉಳಿಯಕ್ಕೆ ಬಂದು ಅಲ್ಲಿ ಕೇಪಳದ ಮರದ ಬಳಿ ಪಲ್ಲಕ್ಕಿಯನ್ನು ಇಳಿಸಿದರು. ಅದು ತಂಪಾದ ಸ್ಥಳವಾದುದರಿಂದ ಅಲ್ಲಿ ಬಂದು ಸ್ಥಾನ ಕಟ್ಟಿಸಬೇಕೆಂದು ತೊಡಕಿನಾರ್ ಉಳ್ಳಾಳ್ತಿ ಭೂತಕ್ಕೆ ಹೇಳಿತು. ಅಲ್ಲದೆ ಅಲ್ಲಿನ ಎಂಟುಮಂದಿ ಒಕ್ಕಲುಗಳಿಗೆ ಆಜ್ಞಾಪಿಸಿತು. ಅವರು ಕಟ್ಟಿಸಿ ಅಲ್ಲಿ ಎರಡು ಭೂತಗಳ ಜತೆಯಾಯಿತು. ಉಳ್ಳಾಳ್ತಿ ತನ್ನ ತಂಗಿ ಎಂದು ತೊಡಕಿನಾರ್ ಭೂತ ಹೇಳಿತು. ಅಲ್ಲದೆ ತನಗೆ ಬೇರೆ ಸ್ಥಾನವನ್ನು ಎಂಟು ರೈತರ ಮೂಲಕ ಕಟ್ಟಿಸಿ, ತಾನು ಪ್ರತ್ಯೇಕವಾಗಿರುತ್ತೇನೆಂದಿತು. ಹಾಗೆಯೇ ಅದಕ್ಕೆ ಪಶ್ಚಿಮ ದಿಕ್ಕಿನಲ್ಲಿ ಬೇರೆ ಸ್ಥಾನವನ್ನು ಕಟ್ಟಿಸಲಾಯಿತು.

ಈ ಪಾಡ್ದನದಲ್ಲಿ ಧರ್ಮ ಅರಸು ಆರಂಭದಿಂದಲೇ ಸ್ವಲ್ಪ ಅಲೌಕಿಕವಾಗಿ ಕಾಣಿಸಿಕೊಳ್ಳುತ್ತಾನೆ. ಮುಂದೆ ಅವನು ಗಟ್ಟದಿಂದ ಇಳಿದು ಕೆಳಗೆ ತುಳು ರಾಜ್ಯಕ್ಕೆ ಬರುತ್ತಾನೆ. ಧರ್ಮ ಅರಸು ಚಿನ್ನ ಮಂಗಲ ಚೆಲುವರಾಯ ಎಂಬ ಎತ್ತಿನ ಮೇಲೆ ಕುಳಿತು ತುಳುನಾಡಿನಲ್ಲಿ ಸಂಚರಿಸಿ ಕಣಂದೂರಿನಲ್ಲಿಗೆ ಬಂದಮೇಲೆ ಎತ್ತಿಗೆ ಸಂಬಂಧಿಸಿದಂತೆ ಪವಾಡಗಳು ನಡೆಯುತ್ತದೆ. ಜ್ಯೋತಿಷ್ಯದಲ್ಲಿ ಅದು ಭೂತ ಕುಳಿತ ಎತ್ತು ಎಂದು ಗೊತ್ತಾಗುತ್ತದೆ. ಅಂದರೆ ಧರ್ಮ ಅರಸು ಭೂತವೆಂದು ಇಲ್ಲಿ ಸ್ಪಷ್ಟವಾಗುತ್ತದೆ. ಮುಂದಿನ ವಿವರಣೆ ಈ ಭೂತದ ಮಹಿಮೆ ಮತ್ತು ಪ್ರಸರಣಕ್ಕೆ ಸಂಬಂಧಿಸಿದೆ. ಸಾಂಸ್ಕೃತಿಕವಾಗಿ ಕ್ಷೌರದ ವಿಧಾನ ಬಳಿಕದ ಸ್ನಾನದ ವಿಧಾನ, ಮೈ ಒರೆಸುವ ಬಟ್ಟೆಯ ವಿವರಗಳು ಸಿಗುತ್ತವೆ.

**ತೋಡಕುಕ್ಕಿನಾರ್ ದೈವದ ಮಹಿಮೆಯನ್ನು ಸಾರುವ ಪ್ರಸರಣ ಸ್ಥಳಗಳು**

$T_1$ :—ಗಟ್ಟದಿಂದ ತುಳುನಾಡಿಗೆ ಇಳಿಯುವುದು.

ಕುಕ್ಕೆ ಸುಬ್ರಾಯ ದೇವಸ್ಥಾನ—ಕುಮಾರಧಾರೆ—ಮತ್ಸ್ಯತೀರ್ಥ—ಇಂಗ್ಲೀಕದ ಕೋಟೆ—ಕೇಪಾಡಿ ಗಟ್ಟ—ಇಟ್ಟೆಲ್ (ವಿಟ್ಲ) (ಪಂಚಲಿಂಗೇಶ್ವರ ದೇವಸ್ಥಾನ—ಇಟ್ಟೆಲ್ ಬಾಕಿಮಾರ್) (ವಿಟ್ಲದ ಬಾಕಿಮಾರು ಗದ್ದೆ)—ಬಸವಗುಡಿ—ಕಡಂಬಿದ ದೇವಸ್ಥಾನ—ಸಾಲೆತ್ತೂರು ದೇವಸ್ಥಾನ ಮುದುಂಗರ ಗೋಳಿ—ಯೆರು ಪಾಳ್ಯ—ಧರ್ಮದ ಉಗ್ಗೆಲ್ (ಬಾವಿ)ಉಕಣಂದೂರು—ಉಳ್ಳಾಲ—ಉಳಿಯ,

$T_2$ :—ಕುಕ್ಕೆ ಸುಬ್ರಾಯ ದೇವಸ್ಥಾನ—ಹೊನ್ನ ಸೀರ್ತ (ತೀರ್ಥ)—ಕುಮಾರಧಾರೆ—ಮಚ್ಚ ಸೀರ್ತ (ಮತ್ಸ್ಯತೀರ್ಥ)—ಇಂಗೀಕದ ಕೋಟೆ—ಪಲಯಂದ ಮುಗೆರೆ—ಕೊಡಿಪಾಡಿ ದೇವಸ್ಥಾನ—ಇಟ್ಟೆಲೆ (ವಿಟ್ಲ) (ಸಂತೆದ ಕಂಡೊ, ತೇರಬೀದಿ)—ಬಸವ ಗುಡಿ—ಕೊಳಲಂದ ಕೆದು (ಕೆರೆ)—ಕೊಡಂಗಾಯಿ ಸಾರೆ (ಹೊಳೆ)—ಕಾಪು—ಮುಂಡೆ ಮಜಲೆ—ಕುಡ್ತ ಮುಗೇರು—ಸಾಲೆತ್ತೂರು—ಕಟ್ಟತಳದ ಅಂಗಡಿ—ಬ್ಯಾರಿ ಕಟ್ಟಿದ ಪಳ್ಳಿ—ಸಾರ ಬೀದಿ ಕಂಡೊ (ಗದ್ದೆ)—ನಡಿಮಾರ್—ತಾಳು ಪೇರಡ್ಕದ ಗುಂತ್ತು—ದುರ್ಗಾಲಯ—ಮುದುಂಗಾರ್ ಗೋಳಿ—ಮಾಲಾಚೆದಣಿ—ಪೂಪಾಡಿ ಕಲ್ಲೆ—ಧರ್ಮಪಟ್ಟು—ಕಣಂದೂರು—ಒಳಕುಂಜ.

## 2. ಅತ್ತಾವರ ದೈಯೊಂಗುಳು

'ಅತ್ತಾವರ ದೈಯೊಂಗುಳು ಪಾಡ್ದನವು ಬಹುಮಟ್ಟಿಗೆ 'ತೋಡಕುಕ್ಕಿನಾರ್ ಪಾಡ್ದನ'ವನ್ನು ಹೋಲುತ್ತದೆ. ಇಲ್ಲಿ ಅಣ್ಣತಮ್ಮಂದಿರಿಬ್ಬರು ಗಟ್ಟ ಇಳಿದು ತುಳು ಜನರನ್ನು ನೋಡಲು ತುಳುನಾಡಿಗೆ ಬರುತ್ತಾರೆ. ತೋಡಕುಕ್ಕಿನಾರ್ ಪಾಡ್ದನದಂತೆಯೇ ಆರಂಭದಲ್ಲಿ ಕ್ಷೌರ, ಬಳಿಕದ ಸ್ನಾನ ಮುಂತಾದ ವಿವರಣೆ ಇದೆ. ಅಲ್ಲಿನಂತೆಯೇ ಇಲ್ಲಿ ಅಣ್ಣ ತಮ್ಮಂದಿರು ಇಬ್ಬರೂ ದೈವಗಳಾಗಿಯೇ ತುಳುನಾಡಿಗೆ ಇಳಿಯುತ್ತಾರೆ. ಇವರನ್ನು 'ರಾಜ ದೈವಗಳು' ಎಂದು ಕರೆಯಲಾಗಿದೆ. ಬೇರೆ ಕೆಲವು ಪಾಠಗಳಲ್ಲಿ ಇವರ ಹೆಸರುಗಳು 'ಘಂಟಾಕರ್ಣ' ಮತ್ತು 'ಗಜಕರ್ಣ' ಎಂದು ಇದೆ. ಆದರೆ Manner ಅವರ ಸಂಪಾದನೆಯ 'ಅತ್ತಾವರ ದೈಯಂಗುಳು' ಪಾಡ್ದನದ ಪಾಠದಲ್ಲಿ ಆ ಹೆಸರುಗಳು ಇಲ್ಲ. ಅಣ್ಣ ತಮ್ಮ ದೈವಗಳು ಎಂದು ಆರಂಭದಲ್ಲಿ ಇರುತ್ತದೆ. ಕೊನೆಗೆ ಅತ್ತಾವರದಲ್ಲಿ ನೆಲಸಿದ ಮೇಲೆ ಅವರು "ಅತ್ತಾವರ ದೈವಗಳು" ಎಂದು ಕರೆಸಿಕೊಳ್ಳುತ್ತಾರೆ. ಈ ಪಾಡ್ದನದಲ್ಲಿ ಅಣ್ಣ ತಮ್ಮಂದಿರಿಬ್ಬರು ಮೊದಲು ಗಟ್ಟದಿಂದ ಇಳಿದು ವೇಣೂರಿನವರೆಗೆ ಒಟ್ಟಿಗೆ ಬರುತ್ತಾರೆ. ಅಲ್ಲಿ ತಮ್ಮ ನಿದ್ರಿಸಿದ್ದಾಗ ಅಣ್ಣ ಅವನನ್ನು ಬಿಟ್ಟು ಬೇರೆ ಬೇರೆ ಊರುಗಳಿಗೆ ಹೋಗಿ ತನ್ನ ಮಹಿಮೆಯನ್ನು ಪ್ರದರ್ಶಿಸಿ ಆರಾಧನೆಯನ್ನು ಪಡೆದುಕೊಂಡು ಕೊನೆಗೆ ಉದ್ಯಾವರಕ್ಕೆ (ಕಾಸರಗೋಡು ತಾಲೂಕಿನ) ಬಂದು

ನೆಲೆಸುತ್ತಾನೆ. ತಮ್ಮನು ಎಚ್ಚರವಾದ ಮೇಲೆ ಅಣ್ಣನನ್ನು ಹುಡುಕುತ್ತಾ ಬೇರೆ ಬೇರೆ ಊರುಗಳಲ್ಲಿ ಸಂಚರಿಸಿ ಕೊನೆಗೆ ಉದ್ಯಾವರಕ್ಕೆ ಬರುತ್ತಾನೆ. ಅಲ್ಲಿಂದ ಅವರಿಬ್ಬರೂ ಜಪ್ಪುವಿಗೆ ಬಂದು ಅತ್ತಾವರದಲ್ಲಿ ನೆಲೆಸುತ್ತಾರೆ.

**ಅತ್ತಾವರ ದೈವಗಳ ಮಹಿಮೆಯನ್ನು ಸಾರುವ ಪ್ರಸರಣದ ಸ್ಥಳಗಳು**

ಗಟ್ಟದಿಂದ ತುಳುನಾಡಿಗೆ ಇಳಿಯುವುದು.

ಕುಕ್ಕೆ ಸುಬ್ರಾಯ ದೇವಸ್ಥಾನ—ಕುಮಾರಧಾರೆ—ಮತ್ಸ್ಯತೀರ್ಥ—ಇಂಗ್ಲೀಕದ ಕೋಟೆ—ಬಾಲಾಯ ಮುಗೇರೆ—ಕೋಡಿಪಾಡಿ ದೇವಸ್ಥಾನ—ಕೇಪಾಡಿ ಗಟ್ಟ—ಯೇಣೂರು—ಬರೆತಿಮಾರೆ.

**ಅಣ್ಣದೈವ:** ಯೇಣೂರು ಬರೆತಿಮಾರೆ—ಕುಂಬಳೆ—ಮಂಜೇಶ್ವರ—ಕನ್ನೆಸಿರಿ ಕಟ್ಟೆ (ಕಣ್ಣತೀರ್ಥ) ಉದ್ಯಾವರ.

**ತಮ್ಮದೈವ :** ಯೇಣೂರು ಬರೆತಿಮಾರೆ—ಕೊಟ್ಟರಿ— ಮುಗೆನಾಡು ಸೀಮೆ—ಪಾಣ್ಯೂರು ಸುದೆ (ಪಾಣೇರ ಹೊಳೆ)—ಬಂಟ್ವಾಳ ಪೇಟೆ—ಕಣ್ಣೂರು ಮಾಗಣೆ—ಮಂಗ್ಳೂರು—ಆಳಕೆಯ ಕಟ್ಟೆ—ಮುಂಗಾರೆ ಕರಿಯ (ಕಡವು)—ಸೋಮೇಶ್ವರ—ಉದ್ಯಾವರ—ಕನ್ನೆಸಿರ ಕಟ್ಟೆ (ಕಣ್ಣತೀರ್ಥ).

**ಪದ್ಮಸೆಟ್ಟಾಳ್:** ಜಪ್ಪು—ಉದ್ಯಾವರ—ಜಪ್ಪು—ಅತ್ತಾವರ.

ಈ ಪಾಡ್ದನದಲ್ಲಿ ಬೊಬ್ಬರ್ಯ, ಕಾಳಭೈರವ ಎಂಬ ಭೂತಗಳು ಕಾಣಿಸುತ್ತವೆ. ಕಾಳಭೈರವನು ಮೊದಲು 'ತಮ್ಮ ಭೂತ'ಕ್ಕೆ ಸಹಾಯಕನಾಗಿ, ನಂತರ 'ಅಣ್ಣ–ತಮ್ಮ ಭೂತ'ಗಳಿಗೆ ಸಹಾಯಕನಾಗಿ ಕೆಲಸ ಮಾಡುತ್ತಾನೆ. 'ಬೊಬ್ಬರ್ಯ' ಭೂತವು 'ಅಣ್ಣ ಭೂತ'ಕ್ಕೆ ಆರಂಭದಲ್ಲಿ ಅಡಿ ಮಾಡಿದರೂ ನಂತರ ಅವರ ಜೊತೆಗೆ ಸೇರುತ್ತದೆ. ಇಲ್ಲಿ ಭೂತಗಳ ಮಹಿಮೆಯ ವಿವರಣೆಗಳಿಗಿಂತ ಸಂಚಾರದ ಕ್ರಮಗಳು ಹೆಚ್ಚು ಬಂದಿವೆ.

### 3. ಕನಪಾಡಿತಾಯ

ಕನಪಾಡಿತಾಯ ಭೂತವು ಗಟ್ಟದ ಮೇಲಿಂದ ತುಳುನಾಡಿಗೆ ಇಳಿದು ಬಂದ ಭೂತ. ಅದರ ಪಾಡ್ದನದಲ್ಲಿಯೂ ಆ ಭೂತದ ಮಹಿಮೆಯನ್ನು ಪ್ರಕಟಿಸುವ ಪ್ರಸರಣದ ಸ್ವರೂಪ ಇದೆ. ಕನಪಾಡಿತಾಯ ಭೂತವು ಪಂಜಿಪಾಡಿ ಬರ್ಕೆಯ ಒಬ್ಬ ಕಾಮರಾಯಿ ಎಂಬ ಭಟ್ಟನ ಕುಲದೇವತೆಯಾಗಿ ನೆಲಸುವುದು, ಆಮೇಲೆ ಭಟ್ಟನಿಗೂ ಸಹೋದರರಿಗೂ ಜಗಳವಾದಗ ಭಟ್ಟನ ಜೊತೆಗೆ ಊರುಗಳನ್ನು ಸಂಚರಿಸುವುದು—ಈ ವಿವರಗಳು ಪಾಡ್ದನದಲ್ಲಿ ಇವೆ. "ಕನಪಾಡಿತಾಯ' ಭೂತಕ್ಕೆ 'ಕನಪಾಡಿ'ಯಲ್ಲಿ ಸ್ಥಾನವನ್ನು ಊರವರು ಕಟ್ಟಿಸುವ ವಿಚಾರ ಬರುವುದು ಪಾಡ್ದನದ ಕೊನೆಯಲ್ಲಿ. ಆ ಕಾರಣದಿಂದಲೇ ಅದಕ್ಕೆ ಆ ಹೆಸರು ಬಂದಿರಬೇಕು. ಆದರೂ ಅದಕ್ಕೆ ಮೊದಲೇ ಪಾಡ್ದನದ ಉದ್ದಕ್ಕೂ ಆ ಭೂತವನ್ನು ಕನಪಾಡಿತ್ತಾಯ ಭೂತ ಎಂದು ಕರೆಯುವುದನ್ನು ನೋಡಬಹುದು. ಇಲ್ಲಿಯೂ ಭೂತದ ಮಹಿಮೆ ಬೇರೆ ಬೇರೆ ರೀತಿಗಳಲ್ಲಿ ವ್ಯಕ್ತವಾಗಿದೆ. ಭೂತಕ್ಕೆ ಸಾಧಾರಣವಾದ ಆಹಾರಗಳಿಂದ ತೃಪ್ತಿ ಆಗುವುದಿಲ್ಲ ಎಂಬ ವಿಚಾರವು ಪಾಡ್ದನದ ಕೊನೆಯಲ್ಲಿ ಬರುತ್ತದೆ.

## 4 ಮಗ್ರುಂದಾಯ

ಮಂಗ್ರುಂದಾಯ ಭೂತದ ಪಾಡ್ದನವನ್ನು ನೋಡಿದಾಗ ಅದು ಕನಪಾಡಿತಾಯ ಭೂತದ ಇನ್ನೊಂದು ಹೆಸರು ಎನ್ನುವುದು ಗೊತ್ತಾಗುತ್ತದೆ. ಈ ಪಾಡ್ದನದಲ್ಲಿ ಕನಪಾಡಿತ್ತಾಯ ಭೂತದ ಹಿಂದಿನ ಪಾಡ್ದನದ ವಸ್ತುವೇ ಸಣ್ಣ ಪುಟ್ಟ ವ್ಯತ್ಯಾಸಗಳ ಮೂಲಕ ಸಿಗುತ್ತದೆ. ಇಲ್ಲಿ ಆ ಭೂತವನ್ನು ಒಂದು ಬಾರಿ ಕನಪಾಡಿತ್ತಾಯ ಎಂದು ಇನ್ನೊಂದು ಬಾರಿ ಮಗ್ರುಂದಾಯ ಎಂದು ಕರೆಯುತ್ತಾರೆ.

**ಕನಪಾಡಿತಾಯ**

"ಕನಪಾಡಿತಾಯ ಭೂತವು ಗಟ್ಟದ ಕೆಳಗೆ ಇಳಿಯುತ್ತಿತ್ತು. ಅದರ ಆರ್ಭಟ ನಾಲ್ಕು ಲೋಕಗಳಲ್ಲೂ ಕೇಳಿಸಿತು. ಅದರ ಕೂಗು ಮೂರು ಲೋಕಗಳಲ್ಲೂ ಪ್ರತಿ-ಧ್ವನಿಸಿತು.

ಅದ ಏಣೆಕಲ್ಲಿನ ಬಲ್ಲಾಳರನ್ನು ಕಂಡಿತು. ಆಮೇಲೆ ನಂತಿಕಲ್ಲಿನ ಬಲ್ಲಾಳರನ್ನು ನೋಡಿತು. ಮಾನವ ಕೋಟಿಯ ಸಂಕಷ್ಟಗಳನ್ನು ನಿವಾರಣೆ ಮಾಡಿ, ಜೀವದಾನ ಮಾಡಬಲ್ಲಂಥ ಶಕ್ತಿಯುಳ್ಳ ಭೂತವೆಂದು ಅದು ಹೆಸರು ಪಡೆಯಿತು.

ಪಂಜಿಪಾಡಿ ಬರ್ಕೆಗೆ ಅದು ಬಂತು. ಅಲ್ಲಿ ಒಬ್ಬ ತಾಯಿಗೆ ನಾಲ್ಕು ಮಕ್ಕಳಿದ್ದರು. ಅವರನ್ನು ಅದು ಕಂಡಿತು. ಕಾಮರಾಯಿ ಎಂಬ ಗ್ರಾಮದಲ್ಲಿ ಒಬ್ಬ ಭಟ್ಟನಿದ್ದ. ಅವನು ಆ ಗ್ರಾಮದ ಮುಖ್ಯಸ್ಥನಾಗಿದ್ದ. ಕನಪಾಡಿತಾಯ ಭೂತವು ಅವನ ಕುಲದೇವತೆಯಾಗಿ ನೆಲೆಸಿತು.

ಒಂದು ಬೇಸಿಗೆ ಕಾಲದಲ್ಲಿ ಅಣ್ಣ ತಮ್ಮಂದಿರಿಗೆ ಜಗಳವಾಯಿತು.

"ನಾ ಹೋಗುತ್ತೇನೆ" ಎಂದಿತು ಭೂತ ಭಟ್ಟನೊಡನೆ. 'ನೀನು ನನ್ನ ಅಣ್ಣನಾಗು. ನಾನು ನಿನಗೆ ತಮ್ಮನಾಗುತ್ತೇನೆ. ನಾವಿಬ್ಬರೂ ಮಂಗಳೂರಿನ ಒಡೆಯರ ಮನೆಗೆ ಹೋಗೋಣ.'

ಅವರಿಬ್ಬರು ಬಿಳಿ ಕುದುರೆಗಳ ಮೇಲೆ ಕುಳಿತರು. ಬಿಳಿ ಛತ್ರಿಗಳನ್ನು ಹಿಡಿದರು. ಪಂಜಿಪಾಡಿ ಬರ್ಕೆಯನ್ನು ದಾಟಿ ಅಡ್ಡದ ಗುಡ್ಡೆಯನ್ನು ಇಳಿದರು. ಮುಂದೆ ಮೊಗರನಾಡು ಸಾರ ಸೀಮೆಯನ್ನು ಅವರು ತಲುಪಿದರು. ಅಲ್ಲಿಂದ ಅವರು ಪಾಣೆ ಮಂಗಳೂರಿನ ಹೊಯಿಗೆಯನ್ನು ದಾಟಿ ಬಂಟವಾಳದ ಉದ್ಯಾನಕ್ಕೆ ಬಂದರು, ಆಮೇಲೆ ಮಜಬೀಡು ಎಂಬ ಜಾಗೆಯ ಮಾರ್ಗವಾಗಿ ವರದೇಶ್ವರ ದೇವಸ್ಥಾನ ಮತ್ತು ಗುಂಡಿ ಚಾವಡಿಗಳನ್ನು ಹಾದು ಹೋದರು. ಆಮೇಲೆ ವಾಜ ಬೀಡು ಎಂಬ ಊರಿನ ಮಾರ್ಗವಾಗಿ ಗುಜ್ಜರಕೆರೆ ಎಂಬ ಹಳ್ಳಿಯನ್ನು ದಾಟಿ ಮಂಗಳೂರನ್ನು ತಲುಪಿದರು.

ಮಂಗಳೂರಿನ ಕರ್ತರು ಅವರನ್ನು ನೋಡಿದರು.

"ನೀವೆಲ್ಲಿಂದ ಬಂದಿರಿ ?" ಎಂದು ಭಟ್ಟನೊಡನೆ ಒಡೆಯರು ಪ್ರಶ್ನಿಸಿದರು. "ಎಲ್ಲಿಗೆ ಹೊರಟಿರುವಿರಿ?"

"ಪಂಜಿಪಾಡಿಯ ಬರ್ಕೆಯಲ್ಲಿ ಒಬ್ಬ ತಾಯಿಗೆ ನಾವು ನಾಲ್ವರು ಮಕ್ಕಳಿದ್ದೇವೆ. ನಾವು ಜಗಳಾಡಿದೆವು. ಆದ್ದರಿಂದ ನನ್ನ ಕಣ್ಣಿಗೆ ಕಾಣದಂತೆ ಮಾಡುವ ಕಿವಿಗೆ ಕೇಳದಂತೆ ಮಾಡುವಂಥ ಊರಿಗೆ ಹೊರಟಿದ್ದೇನೆ.

"ಛೇ ಛೇ" ಎಂದರು ಒಡೆಯರು. "ಕಣ್ಣು ಕಾಣದಂಥ ಮತ್ತು ಕಿವಿ ಕೇಳದಂಥ ಊರಿಗೆ ಹೋಗಬೇಡಿ.

ನಾನು ನಿಮಗೆ ಉಳವೂರು ಎಂಬಲ್ಲಿ ಇರಲು ಜಾಗ್ಗ(ಕೊಡುತ್ತೇನೆ. ಅಲ್ಲಿ ವಾಸವಾಗಿ ಭಟ್ಟನು ಉಳವೂರಿನ ಅರಮನೆಯನ್ನು ಸ್ವೀಕರಿಸಿದ. ಅವನದನ್ನು ದುರಸ್ತಿ ಮಾಡಿ ಅದರಲ್ಲಿ ವಾಸಿಸತೊಡಗಿದ.

ಒಂದು ದಿನ ರಾತ್ರಿ ಅವನು ಅಳತೊಡಗಿದ. ಅಲ್ಲಿಯ ಏಕಾಂತ ಅವನಿಗೆ ತಡೆಯಲಿಲ್ಲ.

'ನನ್ನ ಅರಮನೆಯಲ್ಲಿ ಹೆಣ್ಣು ಇಲ್ಲ, ಹಟ್ಟಿಯಲ್ಲಿ ಎಮ್ಮೆ ಮತ್ತು ಕರು ಇಲ್ಲ' ಎಂದು ಕಣ್ಣೀರಿಟ್ಟ. 'ನೀನೇಕೆ ಹೀಗೆ ಅಳುತ್ತಿ ?' ಎಂದಿತು ಕನಪಾಡಿತಾಯ ಭೂತ. 'ನಿನ್ನ ಅರಮನೆಗೆ ನಾನೊಂದು ಹೆಣ್ಣನ್ನು ತರುತ್ತೇನೆ.

ಕನಪಾಡಿಯ ಭೂತವು ಪಂಜಿಪಾಡಿ ಬರ್ಕೆಗೆ ಹೋಯಿತು. ಪಳ್ಳಿ ಮತ್ತು ಕುನ್ಯಾರಪಾಡಿ ಎಂಬ ಊರುಗಳ ಇಬ್ಬರು ಕರ್ತರು ಅದಕ್ಕೆ ಕಾಣ ಸಿಕ್ಕಿದರು. ಅವರಿಬ್ಬರನ್ನು ಅದು ನೇತ್ರಾವತಿ ನದಿಗೆ ದೂಡಿ ಬಿಟ್ಟಿತು. ಆಮೇಲೆ ಉಪ್ಪಿನಂಗಡಿಯಲ್ಲಿ ಹೊಳೆಯನ್ನು ದಾಟಿ ನಂದಾವರಕ್ಕೆ ಬಂತು. ಅಲ್ಲಿ ಹೊಳೆ ದಾಟಿ ಸಾಂಜಿ ಎಂಬಲ್ಲಿಗೆ ಹೋಗಿ ಅಲ್ಲಿಯೂ ಹೊಳೆಯನ್ನು ದಾಟಿ, ತೂಬೆಯಲ್ಲಿ ಪೇಜಾವರ ಸ್ವಾಮಿಯ ಮಠದತ್ತ ಹೊಯಿತು.

ಅಲ್ಲಿ ಸಂಧ್ಯಾವಂದನೆಗೆಂದು ಸಾಂದಿ ಎಂಬಲ್ಲಿಗೆ ಹೋದಾಗ ನದಿಯ ಇಳಿತ ಭರಗಳಿಗೆ ಅನುಗುಣವಾಗಿ ನೀರ ಮೇಲೆ ತೇಲುತ್ತಿದ್ದ ಪ್ರಾಪ್ತ ವಯಸ್ಸಿನ ಹುಡುಗಿಯೊಬ್ಬಳು ಅದಕ್ಕೆ ಕಾಣಸಿಕ್ಕಿದಳು.

'ಈ ಹುಡುಗಿ ಮನುಷ್ಯರಿಗೆ ಹುಟ್ಟಿದವಳಲ್ಲ. ದೇವರೇ ಈಕೆಯನ್ನು ಇಲ್ಲಿಗೆ ಕಳಿಸಿರಬೇಕು' ಎಂದು ಭೂತ ಹೇಳಿಕೊಂಡಿತು. ಕೂಡಲೇ ಉಳವೂರಿನ ಭಟ್ಟನನ್ನು ಅಲ್ಲಿಗೆ ತರಿಸಿತು.

"ನನ್ನ ಸೊಸೆಯೇ, ನೀ ಬಂದಿಯಾ ?" ಎಂದು ಭಟ್ಟನು ಹುಡುಗಿಯನ್ನು ಕಂಡು ನುಡಿದ.

ಆಕೆಯ ಕೈ ಹಿಡಿದುಕೊಂಡು ಉಳವೂರು ಅರಮನೆಗೆ ಹೋದ. ಮುಂದಿನ ವರ್ಷ ಆಕೆಯನ್ನು ಕುಂಬಳೆಯ ಒಡೆಯನಿಗೆ ಮದುವೆ ಮಾಡಿಸಿದ. ಆದರೆ ಆಕೆ ಮದುವೆಯಾಗಿ ಕುಂಬಳೆಗೆ ಹೋಗುವಾಗ ಕನಪಾಡಿಯ ಭೂತವು ಆಕೆಯನ್ನು ಹಿಂಬಾಲಿಸಿತು.

ಅಲ್ಲಿ ಒಂದು ಚಿಕ್ಕ ಮಗುವಿನ ಮತ್ತು ಕರುವಿನ ದೇಹಗಳನ್ನು ಪ್ರವೇಶಿಸಿ ಕರುವನ್ನು ಕೊಂದಿತು. ಕುಂಬಳೆಯ ಒಡೆಯರಿಗೆ ಇದರಿಂದ ಸೋಜಿಗವಾಗಿ ಜೊಯಿಸರನ್ನು ಕರೆದು ಪ್ರಶ್ನೆ ಕೇಳಿದರು.

ಜೋಯಿಸರೆಂದರು : "ನಿಮ್ಮ ಹೆಂಡತಿಯೊಡನೆ ಒಂದು ಭೂತವು ಬಂದಿದೆ. ಅದಕ್ಕೆ ಆಹಾರ ಮತ್ತು ಬಲಿ ಕೊಡಬೇಕು".

"ಅದರ ಆಹಾರ ಮತ್ತು ಬಲಿಗೆ ಏನೇನು ಪದಾರ್ಥ ಬೇಕು. ಅವನ್ನೆಲ್ಲ ಹೇಳಿ" ಎಂದು ಒಡೆಯರು ನುಡಿದರು.

ಏಳು ಸೇರು ಅಕ್ಕಿಯ ಅನ್ನದ ಉಂಡೆಗಳು, ಹದಿನಾರು ದೊಂದಿಗಳು. ಒಂದು ಸಾವಿರ ಸೇರು ಅರಳು, ಒಂದು ಸಾವಿರ ಸೇರು ಅವಲಕ್ಕಿ, ನೂರಿಪ್ಪತ್ತು ಎಳನೀರು, ಹನ್ನೆರಡು ತಾಳೆ ಬೆಲ್ಲದ ತುಂಡುಗಳು ಮತ್ತು ಹನ್ನೆರಡು ಕುತ್ತಿ ತುಪ್ಪ, ಇವಿಷ್ಟು ಅದಕ್ಕೆ ಬೇಕು ಎಂದು ಜೋಯಿಸರು ಹೇಳಿದರು.

ಪಂಬದ ಎಂಬ ವರ್ಗದ ರೆಚ್ಚೆ ಎಂಬುವನು ಭೂತದ ವೇಷವನ್ನು ಜಾತ್ರೆಯ ಕಾಲದಲ್ಲಿ ಹಾಕಿದ. ಆಹಾರವನ್ನು ತರಲು ಅವನು ಸನ್ನೆ ಮಾಡಿದ. ಎಲ್ಲ ಆಹಾರ ವಸ್ತುಗಳನ್ನು ತಂದು ಅವನಿಗೆ ಅರ್ಪಿಸಿದರು. ಅವನ್ನೆಲ್ಲ

ತಿಂದಾದ ಬಳಿಕ ಅವನು ತನ್ನ ಹೊಟ್ಟೆಯನ್ನು ತೋರಿಸಿ ತನಗೆ ತೃಪ್ತಿಯಾಗಲಿಲ್ಲವೆಂದ. ಒಡೆಯರೆಂದರು : "ನಿನಗೆ ನಾನು ಅಷ್ಟು ಆಹಾರ ಅರ್ಪಿಸಿದ್ದೇನೆ. ಆದರೂ ನಿನ್ನ ಹೊಟ್ಟೆ ತುಂಬಲಿಲ್ಲ ; ನೀನೆಲ್ಲಿಂದ ಬಂದೆಯೋ ಅಲ್ಲಿಗೆ ಹಿಂತಿರುಗು."

"ಆದೀತು" ಎಂದು ಪಂಬದನ ಮೂಲಕ ಭೂತ ಹೇಳಿತು. ಭೂತವು ಅಲ್ಲಿಂದ ಹಿಂತಿರುಗಿ ಬಂದು ಕನಪಾಡಿಯಲ್ಲಿ ಸ್ಥಾನವನ್ನು ಊರವರಿಂದ ಕಟ್ಟಿಸಿಕೊಂಡಿತು. ಪೆರಿಯೋಡಿನಲ್ಲಿ ಅದಕ್ಕೊಂದು ಬೀಡು ಕಟ್ಟಿಸಿದರು.

**ಕನಪಾಡಿತ್ತಾಯ ಭೂತದ ಮಹಿಮೆಯನ್ನು ಸಾರುವ ಪ್ರಸರಣ ಸ್ಥಳಗಳು**

ಗಟ್ಟದಿಂದ ಇಳಿಯುವುದು.

ಎಣೆಕಲ್ಲು—ಸಾಂತಿಕಲ್ಲು—ಪಂಟಿಪಾಡಿ ಬರ್ಕೆ—ಅಡ್ಡಣದ ಗುಡ್ಡೆ—ಮೊಗೆರ್ನಾಡು ಸಾರ ಸೀಮೆ—ಪಾಣೆಮೊಗೇರ — ಬಂಟ್ವಾಳ—ಐಂದಾಳಪಟ್ಟ — ಅಂಬಡಾಡಿ — ಪಿಲಿಪಂಜರ — ತುಂಬೆ-ಉಳವೂರು — ವರದೇಶ್ವರ ದೇವಸ್ಥಾನ—ಮಜಬೀಡು—ಗುಜ್ಜೆರ ಕೆದು (ಕೆರೆ)—ಮಂಗಳೂರು—ಉಳವೂರು—ಪಂಚಿಪಾಡಿ ಬರ್ಕೆ—ಉಪ್ಪಿನಂಗಡಿ—ನಂದಾವರ—ನಂಜ ಕಡವು—ತುಂಬೆಯ ಮಠ (ಪೇಜಾವರ ಸ್ವಾಮಿಯದ್ದು)—ಉಳವೂರು—ಕುಂಬಳೆ—ಕನಪಾಡಿ—ಪೆರಿಯೋಡಿ.

**ಮಗ್ರಂದಾಯ ಭೂತದ ಪಾಡ್ದನದಲ್ಲಿ**

ಪಂಜಿವಾಡಿ ಬರ್ಕೆ — ಮಾಯಿಯ ಹೊಳೆ — ಅಡ್ಡಂದ ಪದವು — ಮುಗೆರ್ನಾಡೆ ಸೀಮೆ — ಪಾಣೆಮೊಗೇರ್—ಅಂಬಡಾಡಿ ಐಂದಾಳಪಟ್ಟ—ಏರ್ಮದ ಗೋಳಿ—ಪಿಲಿಪಂಜರ—ಕಲ್ಲೆಮಜಲ್ ಕಲ್ಕಾರ್—ನುಗ್ರ ಕಂಬಳ—ಪೆರ್ಯೊಡಿ ದೇವಸ್ಥಾನ—ತುಂಬೆ-ಉಳವೂರು—ವರದೇಶ್ವರ ದೇವಸ್ಥಾನ—ಅಡ್ಯಾರ್ ಮಾಗಣೆ—ಗುಡ್ಡೆದ ಚಾವಡಿ—ಗುಜ್ಜರ ಕೇದು (ಕೆರೆ)—ಕದ್ರಿ ಮುಂಗ್ಲೂರು—ಉಳವೂರು—ಕನಪಾಡಿ—ಅರ್ಕುಳ—ಗುಮ್ಮಾಡ್‌ದುರ್ಗ ಮಂಜುನಾಥ ದೇವಸ್ಥಾನ—ಯೆಯ್ಯಾಡಿ—ಮುಂಗ್ಲೂರು (ಕಾಳಮ್ಮ ದೇವರು).

## 5. ಜಾರಂತಾಯ

ಜಾರಂತಾಯ ಭೂತದ ಪಾಡ್ದನಗಳಲ್ಲಿ ಆ ಭೂತದ ಮಹಿಮೆಯನ್ನು ಪ್ರಸರಣದ ರೂಪದಲ್ಲಿ ಹೇಳಲಾಗಿದೆ. ಪಾಡ್ದನದ ಒಂದು ಪಾಠದಲ್ಲಿ ಬಾರೆಬೈಲಿನ ಭಟ್ಟರು ಕೋಣಗಳನ್ನು ಖರೀದಿಸಲು ಬುದ್ಯೊಟ್ಟಿಗೆ ಹೋಗುವುದು, ಅಲ್ಲಿ ಜಾರಂತಾಯ ಭೂತವನ್ನು ಪ್ರಾರ್ಥಿಸುವುದು, ಕೋಣದ ವ್ಯವಹಾರದಲ್ಲಿ ಸಹಾಯ ಮಾಡಿದ ಜಾರಂತಾಯನನ್ನು ಭಟ್ಟನು ಪೂಜಿಸುವುದು, ಆಮೇಲೆ ಜಾರಂತಾಯ ಭೂತವು ಅಲ್ಲಿಂದ ಬೇರೆ ಬೇರೆ ಕಡೆ ಸಂಚರಿಸಿ ತನ್ನ ಮಹಿಮೆಯನ್ನು ಪ್ರದರ್ಶಿಸುವುದು. ಆ ಮೂಲಕ ಆರಾಧನೆಯನ್ನು ಪಡೆಯುವುದು—ಈ ಸಂಗತಿಗಳು ಬರುತ್ತವೆ,

ಜಾರಂತಾಯ ಭೂತದ ಇನ್ನೊಂದು ಪಾಡ್ದನದಲ್ಲಿ ಭೂತವು ಅತ್ರೇಲು ಕಡವು ಎಂಬಲ್ಲಿ ಬಿಳಿ ಕುದುರೆಯ ಮೇಲೆ ಸವಾರಿ ಮಾಡುತ್ತಾ ಬರುವುದು, ದೋಣಿಯವನು ಅದನ್ನು ದಾಟಿಸುವಾಗ ಭೂತವು ತನ್ನ ಮಹಿಮೆಯಿಂದ ಅವನನ್ನು ಕೊಲ್ಲುವುದು, ಅವನ ಒಡೆಯನಿಗೂ ತನ್ನ ಮಹಿಮೆಯನ್ನು ತೋರಿಸಿ ಗುಡಿಕಟ್ಟಿಸಿಕೊಂಡು ಆರಾಧನೆ ನಡೆಯುವುದು—ಈ ವಿಚಾರ ಬರುತ್ತದೆ. ಜಾರಂತಾಯ ಭೂತದ ಆರಾಧನೆ ಮತ್ತು ನೆಲೆಯನ್ನು ಹೊಂದಿಕೊಂಡು ಸ್ಥಾನದ ಜಾರಂತಾಯ, ಕೊಟ್ಟಿಗೆಯ ಜಾರಂತಾಯ ಮತ್ತು ಚಾವಡಿಯ ಜಾರಂತಾಯ ಎನ್ನುವ ಹೆಸರುಗಳ ವಿಚಾರವು ಇಲ್ಲಿ ಸಿಗುತ್ತದೆ.

### ಜಾರಂತಾಯ ಭೂತದ ಮಹಿಮೆಯನ್ನು ಸಾರುವ ಪ್ರಸರಣ

ಬುದ್ಯೊಟ್ಟು—ಪೊಯ್ಯೆ—ನೀರ್‌ಮಾರ್ಗದ ಮನಿಯಾಲ್—ಸೈರ—ಅಡ್ಡನದಪದವು—ಕದ್ರಿ ಮಂಜುನಾಥ ದೇವಸ್ಥಾನ—ಶರಾವು ದೇವಸ್ಥಾನ—ಆಳಕೆಯ ಬ್ರಹ್ಮಸ್ಥಾನ—ಬೋಳೂರು.

### ಜಾರಂತಾಯ ಭೂತದ ಎರಡು ಪಾಡ್ದನಗಳ ಕನ್ನಡ ರೂಪಾಂತರ

1. "ಬಾರೆಬೈಲು ಎಂಬಲ್ಲಿ ಒಬ್ಬಭಟ್ಟನಿದ್ದ. ದೇರೆಬೈಲು ಎಂಬಲ್ಲಿ ಒಬ್ಬ ಮಾಂತ್ರಿಕನಿದ್ದ. ಇಬ್ಬರೂ ಬೇಸಾಯ ಮಾಡುತ್ತಿದ್ದರು. ಇವರೊಡನೆ ಇನ್ನು ನಾಲ್ಕು ಮಂದಿ ಭಟ್ಟರಿದ್ದರು. ಅವರೆಲ್ಲರಿಗೆ ಒಂದು ಹೊಲವಿತ್ತು.

ಅವರೊಡನೆ ಬೀಜ ಹಾಕಲು ಸಾಕಷ್ಟು ಭತ್ತವಿತ್ತು. ಆದರೆ ಉಳಲು ಕೋಣಗಳಿರಲಿಲ್ಲ. ಬುಳೇರಿ ಬುಡ್ಯೊಟ್ಟು ಎಂಬಲ್ಲಿಗೆ ಒಬ್ಬನು ನಾಲ್ಕು ಸಾವಿರ ಕೋಣಗಳನ್ನು ವ್ಯಾಪಾರಕ್ಕಾಗಿ ತಂದಿದ್ದ. ಈ ಸುದ್ದಿ ಭಟ್ಟರಿಗೆ ಸಿಕ್ಕಿತು.

ಅವರು ಒಟ್ಟಾಗಿ ಪೊಯ್ಯೆ ಎಂಬಲ್ಲಿಗೆ ಹೋದರು. ಅಲ್ಲಿಂದ ನೀರ್ ಮಾರ್ಗದ ಒಂದು ಮನೆಗೆ ನಡೆದರು. ಮುಂದೆ ಬುಳೇರಿ ಬುದ್ಯೊಟ್ಟು ಊರನ್ನು ತಲುಪಿದರು. ಅಲ್ಲಿ ಕೋಣಗಳನ್ನೆಲ್ಲ ಪರಿಶೀಲಿಸಿದರು.

ಎರಡು ಕೋಣಗಳನ್ನು ಆರಿಸಿ. ಅವುಗಳ ಒಡೆಯನೊಡನೆ ಅವುಗಳ ಬೆಲೆಯೇನೆಂದು ವಿಚಾರಿಸಿದರು.

"ಹಿಂದಿನ ಕಾಲುಗಳಿಗೆ ಒಂದು ಸಾವಿರ ನಾಣ್ಯ. ಮುಂದಿನ ಕಾಲುಗಳಿಗೆ ಒಂದು ಸಾವಿರ ನಾಣ್ಯ" ಎಂದು ಅವನು ಉತ್ತರಿಸಿದನು.

ಅವರು ಆಗ ಜಾರಂತಾಯ ಭೂತವನ್ನು ಪ್ರಾರ್ಥಿಸಿದರು: "ನೀನು ಈ ಕೋಣಗಳನ್ನು ಖರೀದಿ ಮಾಡುವಂತೆ ನಮ್ಮ ಮನ ಒಲಿಸಿದರೆ ನಿನ್ನನ್ನು ನಮ್ಮ ಕುಟುಂಬದ ಭೂತವನ್ನಾಗಿ ಪೂಜಿಸುತ್ತೇವೆ. ನಿನ್ನನ್ನು ನಮ್ಮ ದೇವರ ಬಲಭಾಗದಲ್ಲಿಡುತ್ತೇವೆ. ಸುಖಕಾಲದಲ್ಲಿಯೂ ದುಃಖಕಾಲದಲ್ಲಿಯೂ ನಿನ್ನನ್ನು ನಾವು ಮರೆಯುವುದಿಲ್ಲ."

ಭೂತವು ಈ ವ್ಯವಹಾರದಲ್ಲಿ ಅವರ ಮನಸ್ಸನ್ನು ಒಲಿಸಿಕೊಟ್ಟಿತು. ವ್ಯಾಪಾರವಾಯಿತು, ಅವರು ಎತ್ತುಗಳನ್ನು ಮಯ್ಯದಲ್ಲಿದ್ದ ತಮ್ಮ ಮನೆಗೆ ಪೊಯ್ಯೆ ಮತ್ತು ನೀರೆಮಾರ್ಗಗಳ ದಾರಿಯಾಗಿ ಕೊಂಡು ಹೋದರು.

ಅವರು ಭೂತವನ್ನು ಒಂದೆರಡು ವರ್ಷ ಭಜಿಸಿದರು. ಆಗ ಕ್ಷಾಮ ಬಂತು. ಆಗ ಜಾರಂತಾಯ ಭೂತವು ತನ್ನ ಸ್ಥಾನದಲ್ಲಿ ಒಂದು ಖಡ್ಗವನ್ನು ಇರಬೇಕೆಂದಿತು. ಹಾಗೆಯೇ ಖಡ್ಗವನ್ನು ತಯಾರಿಸಿ ಅದರ ಸ್ಥಾನದಲ್ಲಿ ಇಟ್ಟರು.

ಜಾರಂತಾಯ ಭೂತವು ಆಮೇಲೆ ಮನಿಯಾಲೆ ಎಂಬಲ್ಲಿದ್ದ ಒಂದು ಸ್ಥಾನವನ್ನು ಪ್ರವೇಶಿಸಿತು. ಅಲ್ಲಿ ಧ್ವಜಾರೋಹಣವಾಗಿ ತನ್ನನ್ನು ಬಂಡಿಯಲ್ಲಿ ಎಳೆಯಬೇಕೆಂದಿತು. ಪೊಯ್ಯೆ, ನೀರೆಮಾರ್ಗ ಮತ್ತು ಮನಿಯಾಲೆಗಳಲ್ಲಿದ್ದ ಸ್ಥಾನಗಳಿಂದ ಹೊರಟು ಅದು ಸೈರ ಎಂಬಲ್ಲಿಗೆ ಹೋಯಿತು. ಅಲ್ಲಿ ವಂಜಾರೆ ಎಂಬಲ್ಲಿನ ಸ್ಥಾನವನ್ನು ತನಗೆ ಬಿಟ್ಟುಕೊಡಬೇಕೆಂದಿತು.

ಸೈರದ ಮೂರು ಭೂತ ಎಂದು ಅದಕ್ಕೆ ಅಲ್ಲಿ ಹೆಸರು ಬಂತು. ಅಲ್ಲಿಂದ ಮುಂದೆ ಗುಡ್ಡೆ ಹತ್ತಿ ಕದ್ರಿ ಮಂಜುನಾಥ ದೇವರ ದರ್ಶನ ಮಾಡಿತು. ಅಲಕೆಯ ಬ್ರಹ್ಮದೇವರನ್ನು ಇತರ ಹದಿನಾಲ್ಕು ಭೂತಗಳನ್ನು ಸಂದರ್ಶಿಸಿತು. ಆಮೇಲೆ ಕರಿಯಾನೆ ಮತ್ತು ಬೊಳಿಯಾನೆ ಎಂಬ ಎರಡು ಮಠಗಳನ್ನು ಸ್ವಾಧೀನಪಡಿಸಿಕೊಂಡಿತು. ಅಲ್ಲಿ ಕಾವಲುಗಾರನನ್ನು ನೇಮಿಸಿತು. ದೇವುಬೈದ್ಯ ಎಂಬವನಿಗೆ ಅಲ್ಲಿ ಕಷ್ಟ ಬಂತು.

"ಇದೇನಾಯಿತು ?" ಎಂದು ಊರವರೊಡನೆ ಪ್ರಶ್ನೆ ಕೇಳಿದರು. "ನಿಮಗೆ ಬಂದ ಕಂಟಕವು ನಿವಾರಣೆಯಾಗಬೇಕಾದರೆ ನನಗೆ ಮಠದ ಅರ್ಧ ಜಮೀನನ್ನು ಬಿಟ್ಟುಕೊಡಬೇಕು" ಎಂದು ಅದು ಪ್ರಶ್ನೆಯಲ್ಲಿ ತೋರಿಸಿಕೊಟ್ಟಿತು.

ಹಾಗೆಯೆ ಮಠದ ಅರ್ಧ ಜಮೀನನ್ನು ಜಾರಂತಾಯನಿಗೆ ಬಿಟ್ಟುಕೊಟ್ಟರು. ದೇವುಬೈದ್ಯನಿಗೆ ಒದಗಿದ ಸಂಕಟ ಪರಿಹಾರವಾಯಿತು. ಅವನು ಬೋಳೂರಿನಲ್ಲಿ ಅದಕ್ಕೆ ಒಂದು ಸ್ಥಾನವನ್ನು ಕಟ್ಟಿಸಿದ. ತನಗೆ ಒಂದು ಖಡ್ಗ ಬೇಕೆಂದು ಕೇಳಿತು. ಅದನ್ನು ತಯಾರಿಸಿ ಕೊಟ್ಟ. ಆಮೇಲೆ ನೂರಾರು ಕುಟುಂಬಗಳ ರಕ್ಷಕನೆಂಬ ಬಿರುದನ್ನು ಅದು ಪಡೆಯಿತು."

II. "ಒಂದು ಮಂಗಳವಾರ ಮಧ್ಯಾಹ್ನ ಜಾರಂತಾಯ ಭೂತವು ಅತ್ರೇಲು ಕಡಪು ಎಂಬಲ್ಲಿಗೆ ಬಿಳಿ ಕುದುರೆಯ ಮೇಲೆ ಸವಾರಿ ಮಾಡುತ್ತ ಬಿಳಿ ಛತ್ರವನ್ನು ಹಿಡಿದುಕೊಂಡು ಬಂತು. ಕಡವಿನ ದೋಣಿ ನಡೆಸುವವನನ್ನು ಕರೆದು ದೋಣಿ ಬಿಡಲು ಆಜ್ಞಾಪಿಸಿತು.

"ದೋಣಿ ನನ್ನದಲ್ಲ'' ಎಂದನವನು. ನನಗೆ ಇದರಿಂದ ಏನೂ ಸಿಗುವುದಿಲ್ಲ. ಇದು ಚರ್ಮಣ ಕೋಟೆ ಬಾಲೆ ಎಂಬವರದ್ದು. ಅವರು ಮಂಗಳವಾರ ಮತ್ತು ಆದಿತ್ಯವಾರ ಇದರಲ್ಲಿ ನದಿ ದಾಟುತ್ತಾರೆ.

''ಅದರಲ್ಲೇನು ನಾನು ನಿನಗೆ ಯೋಗ್ಯವಾದ ಮಜೂರಿ ಕೊಡುತ್ತೇನೆ. ದೋಣಿಯನ್ನು ತಾ'' ಎಂದಿತು ಭೂತ.

ದೋಣಿಯವನು ದೋಣಿಯನ್ನು ಹಾಗೆಯೇ ತಂದ. "ಕುಳೂರು ಮತ್ತು ಮೂಲ್ಕಿಗಳಲ್ಲಿ ಎಳನೀರು ತೆಂಗಿನ ಗರಿಗಳಿಗೆ ವಿಪರೀತ ಕ್ರಯ ಹೆಚ್ಚಿದೆ. ಆದ್ದರಿಂದ ಎಳನೀರು ಮತ್ತು ಹಾಲು ಇರುವ ಒಂದು ಗ್ರಾಮಕ್ಕೆ ನಾನು ಹೋಗುತ್ತೇನೆ" ಭೂತವೆಂದಿತು.

ಭೂತ ದೋಣಿಯನ್ನು ಹತ್ತಿತು. ದೋಣಿ ಮುಂದೆ ಹೋಯಿತು. ಆದರೆ ಹೊಳೆಯ ಮಧ್ಯಕ್ಕೆ ಅದು ಬಂದಾಗ ಅದು ತಿರ್‍ರನೆ ತಿರುಗತೊಡಗಿತು. ದೋಣಿ ನಡೆಸುವವನನ್ನು ಜಾರಂತಾಯ ಭೂತವು ಕೊಂದಿತು.

ಮಯಿಂದೆ ಕೋಟೆ ಬಾಲೆ ಬಿರ್ಮಣ, ಅವನ ಮಗ ಮತ್ತು ಅವನ ಒಂದು ಕರುವಿನ ದೇಹಗಳಲ್ಲಿ ಅದು ಪ್ರವೇಶಿಸಿತು.

ಕೋಟೆ ಬಾಲೆ ಬಿರ್ಮಣರಿಗೆ ಆಶ್ಚರ್ಯವಾಯಿತು. ಅವನು ಮಯ್ಯ ಎಂಬ ಬ್ರಾಹ್ಮಣನನ್ನು ಕರೆಸಿ ಪ್ರಶ್ನೆ ಕೇಳಿದ. ಜಾರಂತಾಯ ಎಂಬ ಭೂತವು ದಕ್ಷಿಣದಿಂದ ಗ್ರಾಮಕ್ಕೆ ಬಂದಿದೆ ಎಂದು ಪ್ರಶ್ನೆಯಲ್ಲಿ ತೋರಿ ಬಂತು. ಜಾರಂತಾಯನಿಗೆ ಒಂದು ಎಮ್ಮೆ 888 ಮತ್ತು ಅದರ ಕರುವನ್ನು ಆಹುತಿ ನೀಡಲಾಯಿತು.

ಜಾರಂತಾಯ ಗುಡಿಗೆ ಕಾವಲನ್ನಿಟ್ಟರು. ಜಾರಂತಾಯನಿಗೆ ಆಗ ಮೂರು ಹೆಸರುಗಳು ಬಂದವು : ಸ್ಥಾನದ ಜಾರಂತಾಯ, ಕೊಟ್ಟಿಗೆಯ ಜಾರಂತಾಯ ಮತ್ತು ಚಾವಡಿಯ ಜಾರಂತಾಯ ಎಂದು. ಗರುಡನ ಚಿತ್ರವುಳ್ಳ ಧ್ವಜವನ್ನು ವಿಷ್ಣುವಿನ ಪ್ರೀತ್ಯರ್ಥವಾಗಿ ಅಲ್ಲಿ ವಿರಚಿಸಿದರು. ಭಾರಿ ಭೋಜನ, ದೀಪೋತ್ಸವಗಳು ನಡೆದುವು. ಹೀಗೆ ಜಾರಂತಾಯ ಭೂತವು ಅಲ್ಲಿ ನೆಲೆ ನಿಂತಿತು.

## 6. ಕೊಡಮಣಿತಾಯ

ಕೊಡಮಣಿತಾಯ ಭೂತವನ್ನು ರಾಜದೈವವೆಂದು ಕರೆಯುತ್ತಾರೆ. ಇತರ ದೈವ, ಪೆರಿಂಜಗುತ್ತಿನದೈವ, ಧರ್ಮ ಅರಸು ಭೂತ ಎನ್ನುವ ಹೆಸರುಗಳು ಈ ಭೂತಕ್ಕೆ ಬಳಕೆಯಾಗಿವೆ. ಈ ಭೂತದ ವಾಹನವು ಹುಲಿ. 'ಕೊಡಮಣಿ' ಎನ್ನುವ ಊರಿನ ಹೆಸರಿನಿಂದ ಕೊಡಮಣಿತಾಯ ಎನ್ನುವ ಭೂತದ ಹೆಸರು ಬಂದಿದೆ. ಕೊಡಮಣಿತಾಯ ಭೂತದ ನೇಮದ ವೇಳೆಗೆ ಮರದಿಂದ ಮಾಡಿದ ಹುಲಿಯ ಮೇಲೆ ಭೂತದ ವೇಷ ಹಾಕಿದವನು ಕುಳಿತುಕೊಳ್ಳುತ್ತಾನೆ. ಕೆಲವೊಮ್ಮೆ ಇದರ ನೇಮದೊಡನೆ 'ಮೈಸಂದಾಯ','ಮೊರಮಾಲೆದಾಯ' ಮುಂತಾದ ಭೂತಗಳ ನೇಮವು ನಡೆಯುತ್ತದೆ. ಪಾಡ್ದನಗಳಲ್ಲಿ ಈ ಭೂತ ಹಿಂಸಾ ಪ್ರವೃತ್ತಿಯದ್ದು ಎಂದು ಇದ್ದರೂ ಇವರ ಆರಾಧನೆಯಲ್ಲಿ ಎಳನೀರು, ಭತ್ತದ ಅರಳು, ಅವಲಕ್ಕಿ, ಬಾಳೆಹಣ್ಣುಗಳೇ ಮುಖ್ಯವಾದ ಆಹಾರ. ಈ ಕೊಡಮಣಿತಾಯ ಭೂತವನ್ನು ನಂಬುವುದರಿಂದ ಊರಿನ ಬೆಳೆ ಚೆನ್ನಾಗಿ ಆಗುವುದೆಂದೂ ಹುಲಿ ಮುಂತಾದ ಕಾಡುಪ್ರಾಣಿಗಳಿಂದ ಕೃಷಿಕರಿಗೆ ಆಗುವ ತೊಂದರೆ ನಿವಾರಣೆ ಆಗುವುದೆಂದು ನಂಬಿಕೆ ಇದೆ. ಹುಲಿಯನ್ನು ವಾಹನವನ್ನಾಗಿ ಈ ಭೂತಕ್ಕೆ ಇಟ್ಟುಕೊಂಡಿರುವುದು ಈ ದೃಷ್ಟಿಯಿಂದ ಇರಬೇಕು. ಹುಲಿ ಎಂಬ ಪ್ರಾಣಿಯನ್ನು ಕುಲದೇವತೆಯನ್ನಾಗಿ ನಂಬಿಕೊಂಡ ಸಮಾಜದಲ್ಲಿ ಕ್ರಮೇಣ ಅದರ ಜೊತೆಗೆ ಭೂತದ ಕಲ್ಪನೆಯೂ ಬಂದಿರಬಹುದು. ಈ ದೃಷ್ಟಿಯಿಂದ ಪಿಲಿಚಾಮುಂಡಿ ಭೂತ ಮತ್ತು ಕೊಡಮಣಿತ್ತಾಯ ಭೂತಗಳು ಸಮಾನವಾಗುತ್ತವೆ.

ಕೊಡಮಣಿತಾಯ ಭೂತದ ಪಾಡ್ದನಗಳಲ್ಲಿ ಅದರ ಉಗಮದ ಬಗ್ಗೆ ಏನೂ ಸಿಗುವುದಿಲ್ಲ. ಹೆಚ್ಚಿನ ಪಾಡ್ದನಗಳು ಆ ಭೂತದ ಮಹಿಮೆಯನ್ನು ಕೆಲವು ಘಟನೆಯ ಮೂಲಕ ಪ್ರಕಟಿಸುತ್ತವೆ.

ಕೊಡಮಣಿತಾಯ ಭೂತದ ಒಂದು ಪಾಡ್ದನದಲ್ಲಿ ಎಕ್ಕಾರಿನ ದುಗ್ಗಣ್ಣಕಾವ ಮತ್ತು ತಿಮ್ಮ ಅತಿಕಾರಿ ಎಂಬವರು ಕೋಳಿ ಜೂಜಿಗಾಗಿ ಹುಂಜಗಳನ್ನು ಕೊಳ್ಳುವುದು, ಸಾಕುವುದಕ್ಕಾಗಿ ಎತ್ತುಗಳನ್ನು ಕೊಂಡು ಕೊಳ್ಳುವುದು ಬರುತ್ತದೆ. ಎತ್ತಿಗೆ ಮತ್ತು ಹುಂಜಕ್ಕೆ ಭೂತದ ಆವೇಶ ಬರುತ್ತದೆ. ಅದು ಕೊಡಮಣಿತಾಯ ಭೂತದ ಉಪದ್ರ ಎಂದು ಗೊತ್ತಾದಾಗ ಅದಕ್ಕೆ ಗುಡಿಯನ್ನು ಕಟ್ಟಿಸುತ್ತಾರೆ. ಅದೇ ರೀತಿ ಪೆರಿಂಜದಲ್ಲಿ

ಮರದ ಹಣ್ಣು ಹಂಪಲುಗಳನ್ನು ಬೀಳಿಸಿ ತನ್ನ ಮಹಿಮೆಯಿಂದ ಗುಡಿಯನ್ನು ಅರಮನೆಯನ್ನು ಕಟ್ಟಿಸಿಕೊಂಡು ಅಲ್ಲಿ ನೆಲೆಯಾಗುತ್ತದೆ.

ಕೊಡಮಣಿತ್ತಾಯ ಭೂತದ ಇನ್ನೊಂದು ಪಾಡ್ದನದಲ್ಲಿ ಇರುವೈಲ್ ದೇವಸ್ಥಾನದಲ್ಲಿ ಔತಣವನ್ನು ಕೇಳಿ, ಇರಂದಾಲ್ ಪಟ್ಟಣದಲ್ಲಿ ಆಹುತಿ ಪಡೆದು ಸ್ಥಾನವನ್ನು ಕಟ್ಟಿಸಿಕೊಳ್ಳುತ್ತದೆ. ಅಲ್ಲಿ ಕೆಮ್ಮಲಾಜೆ ಬೆಟ್ಟು, ಮಿಜಾರು ಗುತ್ತು ಮತ್ತು ಇರಂದಾಲ್‌ಗಳ ಆಶ್ರಯದಾತನೆಂಬಂತೆ ಭರವಸೆ ಕೊಡುತ್ತದೆ.

ಈ ಎರಡು ಪಾಡ್ದನಗಳಲ್ಲಿಯೂ ಸ್ವಲ್ಪಮಟ್ಟಿಗೆ ಪ್ರಸರಣವು, ಜೊತೆಗೆ ಮಹಿಮೆಯನ್ನು ಸಮರ್ಥಿಸುವ ಘಟನೆಗಳು ಸಿಗುತ್ತವೆ.

## 7. ಕಣ್ಣಲ್ಲಾಯ

ಕಣ್ಣಲ್ಲಾಯ ಭೂತದ ಪಾಡ್ದನದಲ್ಲಿ ಅದರ ಮಹಿಮೆಯನ್ನು ತಿಳಿಸುವ ಒಂದು ಘಟನೆ ಇದೆ. ಪ್ರಸರಣದ ವಿಚಾರ ಇಲ್ಲ. ಶೆಟ್ಟಿಗಳಿಗೆ ಆಹಾರ ಕೊಡದೆ ಅದರ ಜಾತಿ ಕೇಳಿ ನೀರು ಕೊಟ್ಟ 'ಸಮಿನಂದೆಡಿ' ಎಬುವಳನ್ನು ಕಣ್ಣಲ್ಲಾಯ ಭೂತವು ಮಾಯ ಮಾಡುತ್ತದೆ. ತನ್ನ ಮಂತಕ್ಕೆ ಹೋಗುವುದು. ಈ ಪಾಡ್ದನದಲ್ಲಿ ಈ ಘಟನೆಯನ್ನು ಹೇಳುವ ಕೊನೆಯ ಒಂದು ಸಾಲು ಬಿಟ್ಟರೆ ಬೇರೆ ಎಲ್ಲಿಯೂ ಕಣ್ಣಲ್ಲಾಯ ಭೂತದ ವಿಚಾರ ಬರುವುದಿಲ್ಲ. ಇದರಲ್ಲಿ ಗುರು ಸರಪೊಳಿಯ ನಾಲ್ವರು ಮಕ್ಕಳು ಶೆಟ್ಟಿಯವರು ವಿದ್ಯಾಭ್ಯಾಸ ಮಾಡಿದ ಕ್ರಮವನ್ನು ಹಂತ ಹಂತವಾಗಿ ವಿವರಿಸಲಾಗಿದೆ. ಅವರು ಸಮುದ್ರದ ಬದಿಯಲ್ಲಿ ಅಂಗಡಿಗಳನ್ನು ನಿರ್ಮಿಸಿ ಜೀನಸಿನ ವ್ಯಾಪಾರ ಮಾಡಿದ ವಿಚಾರ ಬರುತ್ತದೆ. ಕೊನೆಯಲ್ಲಿ ಅವರು ಎತ್ತಿನ ವ್ಯಾಪಾರ ಮಾಡುತ್ತಾರೆ. ('ಪಾಡ್ದನಗಳಲ್ಲಿ ವ್ಯಕ್ತವಾಗುವ ತುಳುನಾಡಿನ ಸಂಸ್ಕೃತಿ' ಎನ್ನುವ ಅಧ್ಯಾಯದಲ್ಲಿ ಇದನ್ನು ವಿವರವಾಗಿ ಕೊಡಲಾಗಿದೆ).

## 8. ಪೋಡಿಲ್ತಾಯ

ಪೋಡಿಲ್ತಾಯ ಭೂತದ ಪಾಡ್ದನದಲ್ಲಿ ಆ ಭೂತವು ಗಂಗೆಗೆ ಹೋದ ಬಾಲುಸೇನವನ ಜೊತೆಗೆ ಅಲ್ಲಿಂದ ಬರುವುದು. ಬಂದು ಬಾಲಸೇನನ 'ಇದಕಜೆ ಮರ್ಗಲ್ ಬೂಡು'ವಿನಲ್ಲಿ ನೆಲೆಸುವುದು–ಈ ಸಂಗತಿಗಳು ಬರುತ್ತವೆ. ಅದರ ಮಹಿಮೆಯನ್ನು ಸೂಚಿಸುವ ಸಂದರ್ಭ ಬಾಲುಸೇನವನ ಮಕ್ಕಳಿಗೆ ಸಂಬಂಧಿಸಿದ್ದು. ''ಬಾಲುಸೇನವನು ಪೋಡಿಲ್ತಾಯ ಭೂತದ ಔತಣಕ್ಕಾಗಿ ಕೊತ್ತಂಬರಿ ಬೀಜ ಹಾಕುತ್ತಾನೆ. ಅದು ಸರಿಯಾಗಿ ಬೆಳೆಯುವಾಗ ಅದನ್ನು ಕಾಯುವುದಕ್ಕೆ ತನ್ನ ಮೂವರು ಹೆಣ್ಣು ಮಕ್ಕಳಾದ ಒಪ್ಪೊಟ್ಟಿ, ಕಿನ್ನಂತೆ ಮತ್ತು ಸರಸ್ವತಿ ಎಂಬವಗನ್ನು ನೇಮಿಸುತ್ತಾನೆ. ಒಂದು ದಿನ ಅವರು ನೋಡುವಾಗ ಒಂದು ಕೊತ್ತಂಬರಿಯ ಸಸಿಯಲ್ಲಿ ಕಾಣುವುದಿಲ್ಲ. ಯಾರು ತೆಗೆದದ್ದು ಎಂದು ಮಕ್ಕಳಲ್ಲಿ ಬಾಲುಸೇನವನು ವಿಚಾರಿಸುತ್ತಾನೆ. ಅವರು ತಮಗೇನೂ ಗೊತ್ತಿಲ್ಲ ಎನ್ನುತ್ತಾರೆ. ಆಗ ಬಾಲುಸೇನವನು ''ನಿಮಗೆ ಯಾರಿಗೂ ಗೊತ್ತಿಲ್ಲವೋ ಹಾಗಾದರೆ ಪೋಡಿಲ್ತಾಯ ಭೂತವು ನೋಡಿಕೊಳ್ಳಲಿ'' ಎನ್ನುತ್ತಾನೆ. ಮರುದಿನ ಪೋಡಿಲ್ತಾಯ ಭೂತವು ಒಪ್ಪೊಟ್ಟಿ,

ಕಿನ್ನಂತೆಯನ್ನು ಕೊಲ್ಲುತ್ತದೆ. ಅಲ್ಲಿ ಸರಸ್ವತಿ ಬಹಳ ದುಃಖಿಸುತ್ತಾಳೆ. ಬಾಲುಸೇನವನು ಭೂತದಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತಾನೆ—'ಒಂದು ವೇಳೆ ಕೊತ್ತಂಬರಿಯನ್ನು ಕದ್ದಿದ್ದರೂ ಈ ಇನ್ನೊಂದು ಮಗಳನ್ನು ಕೊಲ್ಲಬೇಡ. ಅವಳು ಈಗ ಇಡೀ ಕುಟುಂಬಕ್ಕೆ ಮುದ್ದಿನ ಹಾಗೆ ಇರುವವಳು. 'ಅವನು ಭೂತಕ್ಕೆ ಅರಮನೆಯಂತಹ ಸ್ಥಾನವನ್ನು ಕಟ್ಟಿಸುತ್ತಾನೆ. ಮತ್ತು ಬೇರೆ ಬೇರೆ ಅರ್ಪಣೆಗಳನ್ನು ಕೊಡುತ್ತಾನೆ—ಕುರಿ, ಕೋಳಿ, ಎಳನೀರು ಇತ್ಯಾದಿ. ಭೂತವು ಅಲ್ಲಿಯೇ ನೆಲೆಸುತ್ತದೆ."

ಈ ಪಾಡ್ದನದ ಆರಂಭದ ಭಾಗದಲ್ಲಿ ಏಕಸಾಲ್ಯರೆ ಮತ್ತು ಗೊಲ್ಲರಮ್ಮ ದೆಯಾರ್ ಅವರ ಮಗ ಬಾಲುಸೇನವನು ತಂದೆ ತಾಯಿಯನ್ನು ಚಿಕ್ಕವಯಸ್ಸಿನಲ್ಲಿ ಕಳೆದುಕೊಂಡು ಆಮೇಲೆ ಗಂಗೆಗೆ ಪ್ರಯಾಣ ಮಾಡುವ ಚಿತ್ರಣವಿದೆ. ಗಂಗೆಯಲ್ಲಿ ಜಗಮುಂಟಮೆಯಲ್ಲಿ ಈತನಿಗೆ ಪೋಡಿಲ್‌ತ್ತಾಯ ಭೂತವು ಸಿಕ್ಕಿ ಇವನ ಜೊತೆಗೆ ಬರುತ್ತದೆ. ಈರೀತಿ ಚಿಕ್ಕವಯಸ್ಸಿನಲ್ಲಿ ತಂದೆ ತಾಯಿಯನ್ನು ಕಳೆದುಕೊಳ್ಳುವುದು, ಗಂಗೆಗೆ ಪ್ರಯಾಣ ಮಾಡುವುದು ಬರುವಾಗ ಯಾವುದಾದರೊಂದು ಭೂತವು ತುಳುನಾಡಿಗೆ ಆಗಮಿಸುವುದು—ಈ ಕಥಾತಂತ್ರ ಕೆಲವು ಪಾಡ್ದನಗಳಲ್ಲಿ ಸಿಗುವುದು. 'ಪೋಡಿಲ್' ಅಂದರೆ ಓಡು+ಇಲ್=ಹಂಚಿನ ಮನೆ. ಇಲ್ಲಿ "ಪೋಡಿಲ್ತಾಯ" ಎಂದರೆ ಹಂಚಿನ ಮನೆಯವನು ಎಂದು ಅರ್ಥವಾಗುತ್ತದೆ. ಬಹುಶಃ ಭೂತದ ಸ್ಥಾನವೊಂದು ಮೊದಲ ಬಾರಿಗೆ ಹಂಚಿ ನಿಂದ ಕಟ್ಟಲ್ಪಟ್ಟಾಗ ಈ "ಪೋಡಿಲ್ತಾಯ" ಎಂಬ ಹೆಸರು ಬಂದಿರಬಹುದು.

## 9. ಕಿನ್ನಿಮಾಣಿ—ಪೂಮಾಣಿ

'ಕಿನ್ನಿಮಾಣಿ—ಪೂಮಾಣಿ' ಭೂತಗಳನ್ನು ರಾಜದೈವಗಳು ಎನ್ನುವ ವೃತ್ತಾಂತ ಇದೆ. ಬಹುಮಟ್ಟಿಗೆ ಅತ್ತಾವರ ದೈವಗಳ ಸ್ವರೂಪವೇ ಈ ರಾಜ ದೈವಗಳಲ್ಲೂ ಇದೆ. ಇವುಗಳನ್ನು ರಾಮ ಲಕ್ಷ್ಮಣ ಎಂದು ಕೆಲವರು ಭಾವಿಸಿದರೆ, ಇನ್ನು ಕೆಲವರು 'ಧೂಮಾವತಿ ದೈವ' ಮತ್ತು 'ದುರ್ಗೆ' ಎಂದು ಭಾವಿಸುತ್ತಾರೆ. ಕಾಸರಗೋಡು ತಾಲೂಕಿನ ಕುಂಬಳೆ ಸೀಮೆಯ ಪೈಕ, ಅಂಬಲಡ್ಕ, ಬೆದ್ರಡ್ಕ ಮತ್ತು ಪುತ್ತಿಗೆಗಳಲ್ಲಿ ಈ ಅಣ್ಣ ತಮ್ಮ ದೈವಗಳಾದ ಕಿನ್ನಿಮಾಣಿ ಮತ್ತು ಪೂಮಾಣಿಗಳ ಪ್ರಸಿದ್ಧ ಸ್ಥಾನ (ಗುಡಿ) ಇದೆ. ಈ ರಾಜದೈವಗಳ ವಾಹನ ಕುದರೆ ಮತ್ತು ಕಾಡು ಹಂದಿ. ಈ ಸ್ಥಳಗಳಲ್ಲಿ ಅವುಗಳ ಉತ್ಸವಗಳು ವಿಶೇಷವಾಗಿ ದೊರೆಯುತ್ತವೆ. ಈ ಕಿನ್ನಿಮಾಣಿ—ಪೂಮಾಣಿಗಳು ಪರಾಕ್ರಮಿಗಳೆಂದು ಬಿಲ್ಲುಗಳನ್ನು ಆಯುಧವನ್ನಾಗಿ ಬಳಸುತ್ತಿದ್ದರೆಂದು ಪಾಡ್ದನ ಹೇಳುತ್ತದೆ.

## 10. ಪೊಸ ಮಹಾರಾಯೆ

'ಪೊಸ ಮಹಾರಾಯೆ' ಎಂಬ ಹೆಸರಿನ ಭೂತದ ಪಾಡ್ದನವೊಂದು ಸಿಗುತ್ತದೆ. ಭೂತವೊಂದು ಹೊಸತು ಎಂದಾಗ ತಮಗೆ ಪರಿಚಿತವಿರುವ ಭೂತಗಳಿಂದ ಭಿನ್ನ ಎನ್ನುವ ದೃಷ್ಟಿಯಲ್ಲಿ ಅದನ್ನು ಪ್ರತ್ಯೇಕಿಸಲು "ಪೊಸ ಮಹಾರಾಯೆ" (ಹೊಸ ಮಹಾರಾಯ) ಎಂದು ಕರೆದಿರಬಹುದು. ಆ ಪಾಡ್ದನದಲ್ಲಿ "ಪೊಸ ಮಹಾರಾಯೆ" ಭೂತದ ಮಹಿಮೆಯನ್ನು ಪ್ರಸರಣದ ರೀತಿಯಲ್ಲಿ ಸಂಕ್ಷಿಪ್ತವಾಗಿ ಹೇಳುತ್ತಾ ಹೋಗಲಾಗಿದೆ. ಎಲ್ಲಾ ಕಡೆಗಳಲ್ಲಿಯೂ ನೇಮವನ್ನು ಪಡೆದು ಮುಂದುವರಿಯುತ್ತಾ ಹೋಗುವ ರೀತಿ ಈ ಪಾಡ್ದನದಲ್ಲಿದೆ.





ಪಾಡ್ದನದ ಕೊನೆಯಲ್ಲಿ ಪೊಸ ಮಹಾರಾಯೆ ಭೂತದ ಮಹಿಮೆಯನ್ನು ಘಟನೆಯೊಂದರ ಮೂಲಕ ಸ್ವಲ್ಪ ವಿವರವಾಗಿ ಕೊಡಲಾಗಿದೆ. ಹೆಣ್ಣುಗಳನ್ನು "ಪೊಸ ಮಹಾರಾಯೆ" ಮಾಯಕ ಮಾಡುತ್ತಾನೆ. ಕಾರಣ ಅವರು ದೈವದ ಸ್ಥಳಕ್ಕೆ ಹೋದದ್ದು. ಕೊನೆಗೆ ಭೂತವು ಇರುವೈಲಿನ ಪರಮೇಶ್ವರಿಯ ಬಲಭಾಗದಲ್ಲಿ ಸ್ಥಾಪನೆಯಾಗುತ್ತದೆ. ಹೆಸರು "ಪೊಸ ಮಹಾರಾಯೆ" ಎಂದು ಇದ್ದರೂ ಪಾಡ್ದನದ ರೀತಿ ಹಿಂದಿನವುಗಳ ಹಾಗೇ ಇದೆ.

## ಪೌರಾಣಿಕ ವ್ಯಕ್ತಿಗಳುಳ್ಳ ಪಾಡ್ದನಗಳು

ಶಿಷ್ಟ ಪುರಾಣಗಳಲ್ಲಿ ಬರುವ ಪಾತ್ರಗಳಾದ ರಾಮ, ಸೀತೆ, ನಾರಾಯಣ, ಶ್ರೀಕೃಷ್ಣ, ಗಂಗೆ, ಬಲಿ, ವಾಮನ, ವೀರಭದ್ರ, ಗಣಪತಿ ಮುಂತಾದ ವ್ಯಕ್ತಿಗಳು ತುಳು ಜನಪದ ಸಾಹಿತ್ಯದಲ್ಲಿ ಪಾಡ್ದನಗಳಲ್ಲಿಯೂ ಕಾಣಿಸಿಕೊಳ್ಳುತ್ತಾರೆ. ಇಂತಹ ಪೌರಾಣಿಕ ವ್ಯಕ್ತಿಗಳಿಗೆ ಸಂಬಂಧಿಸಿದ ಪಾಡ್ದನಗಳನ್ನು ಇಲ್ಲಿ ನೋಡಬಹುದು. ಕಥಾ ವಸ್ತುವಿನಲ್ಲಿ ಅನೇಕ ಬದಲಾವಣೆಗಳನ್ನು ಜನಪದ ಕವಿಗಳು ಮಾಡಿಕೊಂಡಿರುವುದಕ್ಕೆ ಇಂತಹ ಪಾಡ್ದನ ಸಾಕ್ಷಿಗಳಾಗಿವೆ. ತುಳುನಾಡಿನ ಜನಪದ ಪರಿಸರದಲ್ಲಿ ಈ ಪೌರಾಣಿಕ ವ್ಯಕ್ತಿಗಳು ವ್ಯವಹರಿಸುವುದರಿಂದ ಸಹಜವಾಗಿಯೇ ಆ ಪಾತ್ರಗಳು ಹೆಚ್ಚು ವಾಸ್ತವಿಕವಾಗಿರುತ್ತವೆ. ವೈದಿಕ ಸಂಸ್ಕೃತಿಯ ಪ್ರಭಾವದಿಂದ ತುಳು ಜಾನಪದದಲ್ಲಿ ಇಂತಹ ಪಾಡ್ದನಗಳು ಹುಟ್ಟಿಕೊಂಡಿರಬಹುದಾದರೂ ಜನಪದದ ಅನೇಕ ಸ್ವತಂತ್ರ ಕಲ್ಪನೆಗಳ ರೀತಿಯನ್ನು ಈ ಪಾಡ್ದನಗಳಲ್ಲಿ ಪರಿಚಯ ಮಾಡಿಕೊಳ್ಳಬಹುದು. ಶ್ರೀ ಕೃಷ್ಣನಿಗೆ ಸಂಬಂಧಿಸಿದ ಪಾಡ್ದನಗಳು 'ಬಾಲಕೃಷ್ಣ', 'ಶ್ರೀಕೃಷ್ಣ ದೇವರೆ ಅರ್ಯಗಿಳಿ', 'ಗಂಗಮ್ಮ-ಸತ್ಯಮ್ಮ' ಮುಂತಾದವು. 'ಸಿರಿ ಸೀತಾಮು ದೆಯ್ಯಾರೆ' ಪಾಡ್ದನವು ಸೀತಾ ಸ್ವಯಂವರದ ಪ್ರಸಂಗವನ್ನು ಹೇಳುವ ಪಾಡ್ದನ. ಪೌರಾಣಿಕ ಪಾಡ್ದನಗಳಲ್ಲಿ ತುಳುನಾಡಿನಲ್ಲಿ ಬಹು ಜನಪ್ರಿಯವಾಗಿರುವ ಪಾಡ್ದನವೆಂದರೆ ಆಚರಣೆಯ ದೃಷ್ಟಿಯಿಂದಲೂ ಮುಖ್ಯವಾಗಿರುವ 'ಬಲೀಂದ್ರ'ನ ಪಾಡ್ದಾನ. ಹಾಗೆಯೇ ಸೂರ್ಯ ಚಂದ್ರರನ್ನು ಕುರಿತ ಪಾಡ್ದನ, ಗಣಪತಿಯ ಪಾಡ್ದನ ಮುಂತಾದವು ಇವೆ.

### 1. ಶ್ರೀ ಕೃಷ್ಣನನ್ನು ಕುರಿತ ಪಾಡ್ದನಗಳು.

ಮುಖ್ಯವಾಗಿ ಮೂರು ಪಾಡ್ದನಗಳು ಶ್ರೀಕೃಷ್ಣನನ್ನು ಕುರಿತು ಇವೆ. 1. 'ಬಾಲಕೃಷ್ಣ 2. ಶ್ರೀ ಕೃಷ್ಣ ದೇವೆರೆ ಆರ್ಯಗಿಳಿ. 3. ಗಂಗಮ್ಮ—ಸತ್ಯಮ್ಮ.

(i) **ಬಾಲಕೃಷ್ಣ :—** ಕಷ್ಣನ ಬಗೆಗಿನ ಒಂದು ಚಿಕ್ಕ ಪಾಡ್ದನ 'ಬಾಲಕೃಷ್ಣ' ಕೃಷ್ಣನ ರಸಿಕತೆಯನ್ನು, ಹೆಣ್ಣುಗಳ ಮೋಹವನ್ನು ಸ್ವಾರಸ್ಯವಾಗಿ ಹೇಳುವ ಕತೆ. ನಂದಗೋಕುಲದ ಅರಮನೆಯಲ್ಲಿ ಗೋಪಿಯಮ್ಮ ಮಗುವನ್ನು ಅಂದರೆ ಕೃಷ್ಣನನ್ನು ಹಡೆದು ಮಲಗಿದ್ದಾಗ ಅದನ್ನು ನೋಡಲು ಏಳುಜನ ಗೊಲ್ಲ ಹೆಣ್ಣುಗಳು ಬರುತ್ತಾರೆ. ಸುಂದರವಾದ ಮಗುವನ್ನು ಕೈಯಲ್ಲಿ ತೆಗೆದುಕೊಂಡು ಒಬ್ಬರಿಂದ ಒಬ್ಬರಿಗೆ ದಾಟಿಸುತ್ತಾರೆ. ಆಗಲೇ ಅಷ್ಟು ಚಿಕ್ಕ ಮಗು ಕೃಷ್ಣನು ಹುಡುಗಿಯರಿಗೆ ತುಂಟೆ ಮಾಡಿದನಂತೆ, ಅವನ ರಸಿಕತೆಯನ್ನು ರಮ್ಯವಾಗಿ ಹೀಗೆ ಹೇಳಲಾಗಿದೆ—'ಪೊಣ್ಣುಳೆ ಪೋನೆ ತೂಂಡು ಬಾರೆ, ಕಿಸ್ಕ ತೆಲ್ತೆಂಡ್. ಕೈಟ್ ಪತ್ತೆಂಡ, ಕಾಜಿ ನುರ್ತೆಂಡೆ. ಮಿರೆಟ್ಟಿ ಪತದ್ ಮಿಾಸೆ ತಿರೆಗಾಂಡೆ, ಬಾಲೆ ಬಾಲೇದ್ ಪಂಡೆರ್ ಗೋಪಿಯಮ್ಮ, ಇರೆನ ಮಗ

ಬಾಲೆ ಮೋದು ಮದನ ಗೋಪಾಲೆ" (ಹೆಣ್ಣುಗಳ ಮುಖ ನೋಡಿತು ಮಗು. ಕಿಸಕ್ಕನೆ ನಕ್ಕಿತು. ಕೈಯಲ್ಲಿ ಹಿಡಿಯಿತು, ಬಳೆ ಹುಡಿ ಮಾಡಿತು. ಮೊಲೆಯನ್ನು ಹಿಡಿಯಿತು ; ಮಗು ಮೀಸೆ ತಿರುಗಿಸಿತು. ಮಗು, ಮಗು ಎಂದು ಹೇಳಿದಿರಿ ಗೋಪಿಯಮ್ಮ. ನಿಮ್ಮ ಮಗ ಮಗು ಹೋಗಿ ಮದನ ಗೋಪಾಲ) ಇನ್ನೊಂದು ಸಂದರ್ಭದಲ್ಲಿ ಇದೇ ಕೃಷ್ಣ ಗೋಪಿಯರು ಸ್ನಾನ ಮಾಡಲು ಕೆರೆಗೆ ಹೋದಾಗ ಅವರ ಸೀರೆ ಕುಪ್ಪಸವನ್ನು ತೆಗೆದುಕೊಂಡು ಹೋಗಿ ಮರದ ಮೇಲೆ ಇಡುತ್ತಾನೆ. ತನ್ನನ್ನು ಮಾವನ ಮಗ ಎಂದು ಒಪ್ಪಿಕೊಂಡ ಮೇಲೆ ಸೀರೆ ಕುಪ್ಪಸವನ್ನು ಅವರಿಗೆ ವಾಪಸು ಕೊಡುತ್ತಾನೆ. ಕೃಷ್ಣನನ್ನು ಕುರಿತ ಈ ಪಾಡ್ದನವು ಸಾಮಾನ್ಯವಾಗಿ ಜನಪ್ರಿಯವಾಗಿರುವ ಕೃಷ್ಣನ ಬಾಲಲೀಲೆಯ ಎರಡು ಪ್ರಸಂಗಗಳನ್ನು ಸುಂದರವಾಗಿ ತಿಳಿಸುತ್ತದೆ.

ಕೃಷ್ಣನಿಗೆ ಸಂಬಧಿಸಿದ ಎರಡು ಪಾಡ್ದನಗಳಾದ 'ಗಂಗಮ್ಮ-ಸತ್ಯಮ್ಮ' ಮತ್ತು 'ಶ್ರೀಕೃಷ್ಣ ದೇವೆರೆ ಅರ್ಯಗಿಳಿ' ಇವುಗಳು ಸಮಾನವಾದ ಕಥಾವಸ್ತು ಉಳ್ಳವುಗಳು. ಇವುಗಳಲ್ಲಿ ಕೆಲವು ಸಣ್ಣ ಪುಟ್ಟ ವ್ಯತ್ಯಾಸ ಗಳಿವೆ. ವಸ್ತುವಿನ ದೃಷ್ಟಿಯಿಂದ ಕೃಷ್ಣನಿಗೆ ಸಂಬಂಧಿಸಿದಂತೆ ಸ್ವತಂತ್ರವಾದ ಕತೆಯನ್ನು ಹೇಳಲಾಗಿದೆ. ಜನಪದ ಕವಿಯ ಕಲ್ಪನೆಯಲ್ಲಿ ಶಿಷ್ಟ ಪುರಾಣಗಳ ಕೃಷ್ಣನಿಗಿಂತ ಭಿನ್ನವಾಗಿ ಇಲ್ಲಿ ಕೃಷ್ಣನ ಚಿತ್ರಣವಿದೆ. ಅದರ ಮುಖ್ಯ ಕಥೆ ಈ ರೀತಿ ಇದೆ :

"ಶ್ರೀಕೃಷ್ಣ ದೇವರು ಬೇಸರ ಕಳೆಯಲು ಸಾವಿರದ ಒಂದು ಗಿಳಿಗಳನ್ನು ಸೃಷ್ಟಿಸುತ್ತಾರೆ. ಅವುಗಳನ್ನು ಸತ್ಯಭಾಮೆಯ ಜೊತೆಯಲ್ಲಿ ಸಾಕುತ್ತಾರೆ. ಆ ಗಿಳಿಗಳು ದೊಡ್ಡವಾದಾಗ ಸ್ವತಂತ್ರವಾಗಿ ಹೊರಗೆ ಹೋಗು ತ್ತವೆ. ಅವು ಆಹಾರವನ್ನು ಹುಡುಕುತ್ತಾ ಏಳು ಕಡಲಿನ ಆಚೆ ಇರುವ ಗಂಗಮ್ಮನ ತೋಟಕ್ಕೆ ಹೋಗುತ್ತವೆ. ಆ ಗಿಳಿಗಳು ಕೃಷ್ಣದೇವರ ಗಿಳಿಗಳು ಎಂದು ಗಂಗಮ್ಮನಿಗೆ ಗೊತ್ತಾಗುತ್ತದೆ. ಅವಳು ಕೃಷ್ಣದೇವರನ್ನು ಕಪಟಿ, ಕಳ್ಳ ಮುಂತಾಗಿ ದೂರಿ ಗಿಳಿಗಳಿಗೆ ಶಿಕ್ಷೆ ಕೊಡುತ್ತಾಳೆ. ಆ ಗಿಳಿಗಳು ಅಲ್ಲಿಂದ ಕೃಷ್ಣ ದೇವರಲ್ಲಿಗೆ ಬಂದು, ದೂರು ಕೊಡುತ್ತವೆ. ಕೃಷ್ಣದೇವರು ಕಪಟ ವೇಷದಲ್ಲಿ ಗಂಗಮ್ಮನಲ್ಲಿಗೆ ಬಂದು ಅವಳನ್ನು ತನ್ನವಳನ್ನಾಗಿ ಮಾಡಿಕೊಳ್ಳುತ್ತಾರೆ."

ಮೇಲಿನ ಪಾಡ್ದನದಲ್ಲಿ ಕೃಷ್ಣನು ಗಿಳಿಗಳನ್ನು ಸಾಕುವುದು, ಅವು ಏಳು ಕಡಲುಗಳ ಆಚೆ ಗಂಗಮ್ಮನ ಹೂವಿನ ತೋಟಕ್ಕೆ ಹೋಗುವುದು–ಈ ಕಲ್ಪನೆಗೆ ಜನಪದ ಕತೆಗಳು ಪ್ರಭಾವವನ್ನು ಬೀರಿವೆ ಎನ್ನುವುದು ಸ್ಪಷ್ಟ. ಅಲೌಕಿಕ ಕಲ್ಪನೆಗಳು ಅನೇಕ ಸಿಗುತ್ತವೆ. ಬಂಗಾರದ ಕೊಕ್ಕು, ಬೆಳ್ಳಿಯ ರೆಕ್ಕೆ, ಕಬ್ಬಿಣದ ಕೈಕಾಲು ಗಳುಳ್ಳ ಗಿಳಿಗಳು ಎಂದು ವರ್ಣಿಸಲಾಗಿದೆ.

ಗಂಗಮ್ಮನಲ್ಲಿ ಕೃಷ್ಣನು ಹೆಣ್ಣಿನ ವೇಷದಲ್ಲಿ ಹೋಗುತ್ತಾನೆ. ದ್ವಾರಕೆಯಲ್ಲಿ ಸತ್ಯಮ್ಮನ ಚಾಕರಿಯವಳು, ಕಸ ಗುಡಿಸುತ್ತೇನೆ, ಮುಸುರೆ ತೊಳೆಯುತ್ತೇನೆ, ಹೇನು ತೆಗೆಯುತ್ತೇನೆ ಎಂದು ಅವಳಲ್ಲಿ ಹೇಳುತ್ತಾನೆ. ಬಳಿಕ ಗಂಗಮ್ಮಳ ತಲೆಬಾಚಿ ಹೇನು ತೆಗೆಯುತ್ತಾನೆ. ಹೆಣ್ಣು ವೇಷದ ಕೃಷ್ಣನ ತೊಡೆಯಲ್ಲಿ ಮಲಗಿ ನಿದ್ರಿಸಿದ ಗಂಗಮ್ಮ ಎಚ್ಚರವಾಗಿ ನೋಡಿದಾಗ ಹೆಣ್ಣಿನ ಬದಲು ಅಲ್ಲಿ ಕೃಷ್ಣ ಇರುತ್ತಾನೆ. ಕೃಷ್ಣನ ಮಾಯಾಗುಣವನ್ನು ಇಲ್ಲಿ ವರ್ಣಿಸಲಾಗಿದೆ. ಗಂಗಮ್ಮ ಎಷ್ಟು ಕಾಡಿದರೂ ಕೇಳದೆ ಒಂದು ಅಡಿಕೆಯನ್ನು ಎರಡು ಹೋಳುಮಾಡಿ ಅದರ ನಡುವೆ ಅವಳನ್ನು ಇಟ್ಟು ಹಿಡಿದುಕೊಂಡು ಬರುತ್ತಾನೆ. ಈ ರೀತಿ ಅಡಿಕೆಯ ಹೋಳಿನ ನಡುವಿನಲ್ಲಿ ಕೃಷ್ಣನು ಗಂಗಮ್ಮಳನ್ನು ತರುವ ರೀತಿಯು ಭೂತಗಳ ಪಾಡ್ದನದಲ್ಲಿ ಭೂತವನ್ನು ತರುವ ರೀತಿಯನ್ನು ಹೋಲುತ್ತದೆ. ಆ ಪ್ರಭಾವ ಇಲ್ಲಿ ಬಿದ್ದಿರಬಹುದು. ಜನಪದ ಕತೆಯ ಪ್ರಭಾವ ದಟ್ಟವಾಗಿರುವ ಪಾಡ್ದನ ಎಂದು ಗೊತ್ತಾಗುತ್ತದೆ.

## 2. ಸಿರಿಸೇತಾಮು ದೆಯ್ಯಾರೆ

ಪೌರಾಣಿಕ ಪಾಡ್ದನಗಳಲ್ಲಿ ಮೂಲ ವಸ್ತುವಿಗಿಂತ ಭಿನ್ನವಾಗಿ ಸ್ವಂತಂತ್ರ ಕಲ್ಪನೆ ಇರುವ ಒಂದು ಪಾಡ್ದನ 'ಸಿರಿಸೀತಾಮು ದೆಯ್ಯಾರ'. ಸೀತಮ್ಮ ದೇವಿಯುವರು ಎಂಬುದೇ 'ಸೀತಾಮು ದೆಯ್ಯಾರೆ' ಎಂದು ಆಗಿರಬೇಕು. ಈ ಪಾಡ್ದನವು ರಾಮಾಯಣದ ಸೀತಾ ಸ್ವಯಂವರಕ್ಕೆ ಸಂಬಂಧಿಸಿದ್ದು. ಜನಪದ ಕವಿಯು ಅನೇಕ ಹೊಸ ಕಲ್ಪನೆಗಳನ್ನು ಈ ಪ್ರಸಂಗದಲ್ಲಿ ನೋಡಬಹುದು.

ಅಲೌಕಿಕ ಘಟನೆಗಳ ನಡುವೆಯೂ ಜನಪದ ಪರಿಸರ ಮತ್ತು ಆ ಸಂಸ್ಕೃತಿಯ ವ್ಯಕ್ತಿಗಳು ಕಾಣಿಸಿ ಕೊಳ್ಳುತ್ತಾರೆ.

### ಈ ಪಾಡ್ದನದ ಕನ್ನಡ ಸಾರಾಂಶ

"ಒಬ್ಬ ಮೇರಕಲ ಗಂಡಸು ಗಂಗೆಯಲ್ಲಿ ದೇವದಾರು ಮರದ ಪೆಟ್ಟಿಗೆಯನ್ನು ಕಾಣುತ್ತಾನೆ. ಅದನ್ನು ತಂದು ಜನಕರಾಯ ಮುನಿಸ್ವಾಮಿಗೆ ಕೊಡುತ್ತಾನೆ. ಅವನು ಆ ಪೆಟ್ಟಿಗೆಯನ್ನು ಒಡೆದು ನೋಡುವಾಗ ಅದರಲ್ಲಿ ಒಂದು ಸುಂದರವಾದ ಹೆಣ್ಣು ಮಗು ಇರುತ್ತದೆ. ಅವನು ಅದಕ್ಕೆ ಸಿರಿಸೀತಾಮು ದೆಯ್ಯಾರೆ ಎಂದು ನಾಮಕರಣ ಮಾಡಿ ಸಾಕುತ್ತಾನೆ. ಹೀಗಿರುವಾಗ ಒಂದು ದಿವಸ ಜನಕರಾಯ ಮುನಿಸ್ವಾಮಿಯ ಪೂಜೆಗೆ ಗರುಡ ಪಕ್ಷಿ ತೊಂದರೆ ಕೊಡುತ್ತದೆ. ಆಗ ಜನಕರಾಯ ಮುನಿಸ್ವಾಮಿಯು ಒಂದು ಡಂಗುರ ಸಾರುತ್ತಾನೆ. ಏನೆಂದರೆ—'ಈ ಗರುಡ ಪಕ್ಷಿಯ ರೆಕ್ಕೆಯನ್ನು ಯಾರು ತುಂಡು ಮಾಡುತ್ತಾನೋ ಅವನಿಗೆ ನನ್ನ ಮೊಮ್ಮಗಳು ಸಿರಿ ಸೀತಾಮು ದೆಯ್ಯಾರಳನ್ನು ಧರ್ಮಧಾರೆ ಎರೆದು ಕೊಡುತ್ತೇನೆ.' ಈ ಸುದ್ದಿಯನ್ನು ಕೇಳಿ ದಿಕ್ಕುದಿಕ್ಕುಗಳಿಂದಲೂ ರಾಜರು ಓಡಿಕೊಂಡು ಬರುತ್ತಾರೆ. ಆದರೆ ಯಾರಿಗೂ ಆ ಗರುಡನ ರೆಕ್ಕೆಯನ್ನು ಕತ್ತರಿಸಲು ಆಗುವುದಿಲ್ಲ. ಅಷ್ಟಾಗುವಾಗ ಅಲ್ಲಿಗೆ ಲಂಕೆಯ ರಾಜ ರಾವಣ ಬರುತ್ತಾನೆ. ಅವನು ಆ ಪಕ್ಷಿಯನ್ನು ಕೊಲ್ಲಲು ಎಂದು ಮುಂದೆ ಹೋದಾಗ ಅದು ಅವನ ರೆಟ್ಟೆಗೆ ಬಂದು ಚುಚ್ಚುತ್ತದೆ. ಅಷ್ಟು ಹೊತ್ತಿಗೆ ಅಯೋಧ್ಯಾಪುರದಿಂದ ಲಕ್ಷ್ಮಣ ಅಲ್ಲಿಗೆ ಬರುತ್ತಾನೆ. ದೂರದಿಂದ ಬರುತ್ತಿರುವ ಲಕ್ಷ್ಮಣನನ್ನು ಏಳು ಮಾಳಿಗೆಯ ಮೇಲೆ ನಿಂತು ನೋಡಿದ ಸೀತೆ ಬಹಳ ಸಂತೋಷದಲ್ಲಿ ಮುಗುಳು ನಗುತ್ತಾಳೆ. ಲಕ್ಷ್ಮಣನು ಬಂದು ಬಿಲ್ಲು ಬಾಣ ಹಿಡಿದು ಪಕ್ಷಿಯ ಬಲ ರೆಕ್ಕೆಗೆ ಬಾಣ ಬಿಡುತ್ತಾನೆ. ಆಗ ಹಕ್ಕಿಯ ರೆಕ್ಕೆ ತುಂಡಾಗಿ ಅದು ಕೆಳಗೆ ಬೀಳುತ್ತದೆ. ಆಗ ಜನಕರಾಯ ಮುನಿಸ್ವಾಮಿಯು, 'ಮಗು ಲಕ್ಷ್ಮಣ, ನಿನಗೆ ಸಿರಿಸೀತಾಮು ದೇವಿಯನ್ನು ಧರ್ಮಧಾರೆ ಮಾಡಿಕೊಡುತ್ತೇನೆ' ಎನ್ನುತ್ತಾನೆ. ಆಗ ಲಕ್ಷ್ಮಣ ಹೇಳುತ್ತಾನೆ' 'ಸ್ವಾಮಿ ನಾನು ಮದುವೆ ಆಗುವುದಿಲ್ಲ. ನನ್ನ ಅಣ್ಣ ಇದ್ದಾರೆ ಸಿರಿರಾಮು ದೇವರು. ಅವರನ್ನು ಕಳುಹಿಸುತ್ತೇನೆ ಎನ್ನುತ್ತಾನೆ. ಅದೇ ರೀತಿ ಅಯೋಧ್ಯೆಗೆ ಬಂದು ಅಣ್ಣನಿಗೆ ವರ್ತಮಾನ ಹೇಳಿ ರಾಮುನನ್ನು ಕರೆದುಕೊಂಡು ಬಂದು "ಸಿರಿಸೀತಾಮು" ಜೊತೆಗೆ ಮದುವೆ ಮಾಡಿಸುತ್ತಾನೆ.

ಸೀತಾ ಸ್ವಯಂವರದ ಈ ಪಾಡ್ದನದಲ್ಲಿ ವಿಶಿಷ್ಟವಾಗಿರುವ ಅಂಶಗಳು : (1) ಮರಕಲ ಗಂಡಸಿಗೆ, ಮಗುವಾಗಿದ್ದ ಸೀತೆ ಸಿಕ್ಕಿ ಅದನ್ನು ಆತ ಜನಕ ಮುನಿಗೆ ಕೊಡುವುದು. ತುಳುನಾಡಿನ ಮರಕಲ ಸಮಾಜದ ಕಲ್ಪನೆ ಇದ್ದ ಕವಿ ಪುರಾಣದ ವಸ್ತುವಿಗೆ ಈ ಅಂಶವನ್ನು ಸೇರಿಸಬಹುದು. (2) ತನ್ನ ಪೂಜೆಗೆ ಹಾನಿ ಮಾಡುವ

ಗರುಡನ ರೆಕ್ಕೆಯನ್ನು ಕತ್ತರಿಸುವ ಪಣವನ್ನು ಸೀತೆಯ ವಿವಾಹಕ್ಕೆ ಜನಕಸ್ವಾಮಿ ಇಡುತ್ತಾನೆ. ಪುರಾಣದ ಶಿವ ಧನುಸ್ಸಿನ ಪ್ರಸಂಗಕ್ಕಿಂತ ಇದು ಭಿನ್ನವಾಗಿದೆ ಮತ್ತು ಜನಪದೀಯವಾಗಿದೆ. (3) ಇಲ್ಲಿ ಪಣವನ್ನು ಗೆಲ್ಲು ವಾತ ಲಕ್ಷ್ಮಣ. ಪುರಾಣಗಳಂತೆ ರಾಮ ಅಲ್ಲ. ಆದರೂ ಲಕ್ಷ್ಮಣನು ಸೀತೆಯನ್ನು ತಾನು ವಿವಾಹ ಆಗದೆ ಅಣ್ಣ ರಾಮನಿಗೆ ವಿವಾಹ ಮಾಡಿಸುತ್ತಾನೆ. ಲಕ್ಷ್ಮಣನ ಶೌರ್ಯ, ತ್ಯಾಗ ಮನೋಭಾವ, ಸಹೋದರ ಪ್ರೇಮ ಇವು ಗಳನ್ನು ತಿಳಿಸುವ ದೃಷ್ಟಿಯಿಂದ ಈ ಬದಲಾವಣೆ ಆಗಿರಬಹುದು.

## 3. ಬಲೀಂದ್ರ ಪಾಡ್ದನ

ಪುರಾಣದ ಬಲಿ ಚಕ್ರವರ್ತಿಯ ಕತೆಯನ್ನು ಅಂದರೆ ವಾಮನನು ಅವನಲ್ಲಿ ಮೂರು ಪಾದಗಳಷ್ಟು ಭೂಮಿಯನ್ನು ಕೇಳುವುದು, ಅದನ್ನು ಬಲಿ ಕೊಡುವುದು—ಈ ಪ್ರಸಂಗ ತುಳುಪಾಡ್ದನ ಒಂದರ ರೂಪದಲ್ಲಿ ಅನೇಕ ವೈಶಿಷ್ಟ್ಯಗಳ ಜೊತೆಗೆ ಸಿಗುತ್ತದೆ. ಈ ಪಾಡ್ದನವು ಜನಪ್ರಿಯವಾಗುವುದಕ್ಕೆ ಪುರಾಣದ ವಸ್ತುವನ್ನು ಒಳಗೊಂಡಿರುವುದು ಅಷ್ಟೇ ಕಾರಣವಲ್ಲ. ತುಳುನಾಡಿನ ಒಂದು ಪ್ರಸಿದ್ಧ ಹಬ್ಬವಾದ ದೀಪಾವಳಿ ಹಬ್ಬದ ಸಮಯದಲ್ಲಿ ಒಂದು ದಿನ ಬಲೀಂದ್ರನ ಪೂಜೆ ಮಾಡುತ್ತಾರೆ. ಆಗ ಬಲೀಂದ್ರನ ಪಾಡ್ದನವನ್ನು ಹಾಡು ತ್ತಾರೆ. ಈ ದೃಷ್ಟಿಯಿಂದ ಬಲೀಂದ್ರ ಪಾಡ್ದನವು ಆಚರಣೆಯ ಸಂದರ್ಭಕ್ಕೆ ಸಂಬಂಧಿಸಿದ್ದು. ಮುಖ್ಯವಾಗಿ ಈ ಹಬ್ಬವು ತುಳುನಾಡಿನ ಮುಖ್ಯ ಕಸುಬಾದ ಭತ್ತದ ಬೇಸಾಯಕ್ಕೆ ಸಂಬಂಧವನ್ನು ಸೂಚಿಸುತ್ತದೆ. ಈ ದೀಪಾ ವಳಿ ಹಬ್ಬದ ದಿನ ಕೋಲುಗಳಿಗೆ ಬಟ್ಟೆಯನ್ನು ಸುತ್ತಿ ಚೆಂದೊಳಿಗೆಯ ಹೂ, ಕುಡ್ಕ ಪಂರ್ದೆದ ಹೂ, ಚೆನ್ನ ಬೂರ್ದ ಪೂ, ಕೇಪುಲ (ಕಿಸಕಾರ) ಪೂ ಮುಂತಾದ ಹೂಗಳನ್ನು ಕೊಯ್ದಿಡುತ್ತಾರೆ. ಒಂದು ಬುಟ್ಟಿಯಲ್ಲಿ ಹುಡಿ ಅವಲಕ್ಕಿ, ತೆಂಗಿನಕಾಯಿಯ ಹೋಳು ಇವುಗಳನ್ನು ಬೆರಕೆ ಮಾಡಿ ಇಟ್ಟಿರುತ್ತಾರೆ. ದನಕರುಗಳನ್ನು ತೊಳೆದು ನಿರ್ಮಲಮಾಡಿ, ಕತ್ತಲೆ ಆದಮೇಲೆ ಅವುಗಳನ್ನು ಒಂದೊಂದನ್ನೇ ಹಿಡಿದುಕೊಂಡು, ತಾವು ಬೇಸಾಯ ಮಾಡುವ ಗದ್ದೆಯ ಬದಿಯಲ್ಲಿಯೇ ಹೋಗಿ, ಗದ್ದೆಯಲ್ಲ ಬೆಂಕಿಕೊಳ್ಳಿ ಇರುವ ಕೋಲನ್ನು ನೆಟ್ಟು, ಅದಕ್ಕೆ ಹೂ, ವೀಳ್ಯ ದೆಲೆ, ಅಡಿಕೆ, ಅವಲಕ್ಕಿ, ತೆಂಗಿನಕಾಯಿ ಎಲ್ಲ ಹಾಕಿ—'ಆಟದ ಅಮಾಸ್ಯೆ, ಸೋನೊ ಬರ್ಪಿ ಸಂಕ್ರಾಂತಿ, ಬೊಂತೆ ಳ್‌ಡೆ ಮೂಜಿ ದಿನತ ಕೊಡಿ ಪರ್ಬೊಗು ಬಲ್ಲಾ ಕಲ್ಕಿ ಬಲಿಯೇಂದ್ರ' (ಆಷಾಡದ ಅಮಾವಾಸ್ಯೆ, ಶ್ರಾವಣ ಬರುವ ನಂತರದ ಸಂಕ್ರಮಣ ಕಳೆದು, ಪುಯಿಂತೆರೆ ತಿಂಗಳಿನಲ್ಲಿ ಮೂರು ದಿನದ ಕೋಡಿ ಹಬ್ಬಕೆ ಬಾ ಕಲ್ಕಿ ಬಲಿಯೇಂದ್ರ) ಎಂದೂ ಬಟ್ಟಿಗೆ ಕೂ ಹೇಳಿ ಹಿಂದೆ ಬರುತ್ತಾರೆ. ಮನೆಯ ಮುಂದೆ ಬಲಕಿಮರವನ್ನು ನೆಟ್ಟು ಅದರ ತುದಿಯಲ್ಲಿ ಹಣತೆಯನ್ನು ಹಚ್ಚಿ ಅದನ್ನು ಪೂಜಿಸುತ್ತಾರೆ. ಇದನ್ನು ಬಲೀಂದ್ರ ಮರ ಎಂದು ಕರೆ ಯುತ್ತಾರೆ. ಈರೀತಿ ಪೂಜೆ ಮಾಡುವಾಗ ಬಲೀಂದ್ರನ ಪಾಡ್ದನವನ್ನು ಹೇಳುತ್ತಾರೆ.

ಬಲೀಂದ್ರ ಪಾಡ್ದನವು (ಸಂ: ನಂದೊಳಿಗೆ ಶೀನಪ್ಪ ಹೆಗ್ಗಡೆ: ತುಳುವಾಲ ಬಲಿಯೇಂದ್ರೆ) ಮೂರು ಸಂಧಿ ಗಳುಳ್ಳ ಒಂದು ಚಿಕ್ಕ ಖಂಡಕಾವ್ಯದಂತೆ ಇದೆ. ವಿಷ್ಣುವು ವಾಮನನ ಅವತಾರವೆತ್ತಿ ಬಂದು ಬಲಿ ಚಕ್ರವರ್ತಿ ಯಿಂದ ಮೂರು ಹೆಜ್ಜೆ ಭೂಮಿಯನ್ನು ದಾನಪಡೆಯುವ ವಸ್ತು ಈ ಪಾಡ್ದನದಲ್ಲಿಯೂ ಹಾಗೆಯೇ ಇದೆ. ಆದರೆ ಪಾಡ್ದನದ ಘಟನೆಗಳು ವರ್ಣನೆಗಳು ಕಾವ್ಯಾತ್ಮಕವಾಗಿದ್ದು ಹೆಚ್ಚು ವಾಸ್ತವಿಕ ರೀತಿಯಲ್ಲಿ ತುಳುನಾಡಿನ ಪರಿಸರವನ್ನು ಪರಿಚಯಿಸುತ್ತವೆ. ಇಲ್ಲಿ 'ಭೂಮಿ ಪುತ್ರ ಬಲಿಯೇಂದ್ರೆ' (ಭೂಮಿ ಪುತ್ರ ಬಲಿಯೇಂದ್ರ) ಎನ್ನುವ ಮಾತು ಗಮನಾರ್ಹ. ಅವನು ಭೂಮಿಯ ಒಡೆಯನು ಎನ್ನದೆ ಭೂಮಿಯ ಮಗನು ಎನ್ನುವಾಗ ಅವನ ಬೇಸಾಯದ ಕಲ್ಪನೆ ಸಿಗುತ್ತದೆ. ಪಾಡ್ದನದ ವರ್ಣನೆಗಳು ಕಾವ್ಯಾತ್ಮಕವಾಗಿವೆ. ಕಾಲ್ಪನಿಕವಾಗಿಯೂ ಅನೇಕ

20

ಬಾರಿ ಇವೆ. ಸಾಂಸ್ಕೃತಿಕವಾಗಿ ಬಲಿಯೇಂದ್ರನ ಬೇಸಾಯದ ಕೆಲಸಗಳ ಪ್ರಸ್ತಾಪವಿದೆ. ವಾಮನನನ್ನು 'ಮೂಜಿ ಅಚ್ಚರದ ಮಾಣಿ' (ಮೂರು ಅಕ್ಷರದ ಹುಡುಗ) ಎಂದು ಕರೆದಿದೆ. ತಾನು ಕೇಳುವ ಮೂರು ಹೆಜ್ಜೆ ಭೂಮಿಗಳಿಂದ ಏನೇನು ಮಾಡುತ್ತೀಸೆ ಎನ್ನುವಾಗ ಅವನು ಹೇಳುವ ಉತ್ತರವು ತುಳುನಾಡಿನ ಬೇಸಾಯ, ಕ್ರೀಡೆಗಳು, ಭೂತಾರಾಧನೆ ಮುಂತಾದುವುಗಳ ಸಮಗ್ರ ಪರಿಚಯವನ್ನು ಕೊಡುತ್ತದೆ. '(ಪಾಡ್ದನಗಳಲ್ಲಿ ವ್ಯಕ್ತವಾಗುವ ತುಳುನಾಡಿನ ಸಂಸ್ಕೃತಿ' ಎನ್ನುವ ಭಾಗದಲ್ಲಿ ಈ ವಿವರಣೆಯನ್ನು ಕೊಡಲಾಗಿದೆ). ತುಳುಭಾಷೆಯ ಸಾಹಿತ್ಯದ ದೃಷ್ಟಿಯಿಂದ ಈ ಪಾಡ್ದನ ಸತ್ವಪೂರ್ಣವಾಗಿದೆ. ನಾರಾಯಣ ದೇವರು "ಭೂಮಿಪುತ್ರನಲ್ಲಿ ನೀನು ಹಿಂದಕ್ಕೆ ನಿನ್ನ ರಾಜ್ಯಕ್ಕೆ ಯಾವಾಗ ಬರಬಹುದು" ಎಂದು ಹೇಳುವ ಮಾತುಗಳು ಅಸಂಭಾವ್ಯತೆಯನ್ನು ಶಕ್ತ ಹೋಲಿಕೆಗಳ ಮೂಲಕ ತುಳು ಭಾಷೆಯಲ್ಲಿ ಹೇಗೆ ಅಭಿವ್ಯಕ್ತಿಸಬಹುದು ಎನ್ನುವುದಕ್ಕೆ ಉತ್ತಮ ನಿದರ್ಶನ—"ಓ ಭೂಮಿ ಪುತ್ರ ಬಲಿಯೇಂದ್ರಾ ಮನಸ್ಸ್ ಬೇಸೆ ಮಲ್ತೊನಡಾ. ಈ ಅಂಡಾ ಕರ್ಗಲ್ಲ್ ಕಾಯಿ ಆನಗಾ, ಬೊರ್ಗಲೆ ಪೂ ಪೋನಗಾ, ಉಪ್ಪು ಕಪ್ಪುರಾನಗಾ, ಜಾಲ್ ಪಾದೆ ಆನಗಾ, ಉರ್ದು ಮದ್ದೋಳಿ ಆನಗಾ, ಗೊಡ್ಡೆರ್ಮ ಗೋಣೆ ಆನಗಾ, ಎರು ದಡ್ಡೆ ಆನಗಾ, ತುಂಬೆದಡಿಟ ಕೂಟ ಆನಗಾ, ನೆಕ್ಕಿದಡಿಟ ಆಟೊ ಆನಗಾ, ದೆಂಬೆಲಿಗ್ ಪಾಪು ಪಾಡ್ನಗಾ, ಅಳೆಟ್ ಬೊಲ್ನೈ ಮುರ್ಕುನಗಾ, ಗುರುಗುಂಜಿದ ಕಲೆ ಮಾಜಿನಗಾ, ಮಜಲಕ್ಕಿ ಮೈದೆಪ್ಪುನಗಾ, ಕೊಟ್ರುಂಞಿ ಕೊಡಿ ಜಾನಗಾ, ನಿನ ರಾಜ್ಯೊಗು ಈ ಬತ್‌ದ್ ನಿನ ರಾಜ್ಯ ಮಾಡೊಡು ಅರತ್ತಾನ ಆಳಿಯೊಂದು ಸುಖಸಂತೋ ನೋಡುಪ್ಪುಲಾ ಬಲಿಯೇಂದ್ರಾ (ಎಲೈ ಭೂಮಿ ಪುತ್ರ ಬಲಿಯೇಂದ್ರನೇ, ನೀನು ಮನಸ್ಸಿಗೆ ಬೇಸರ ಮಾಡಿಕೊಳ್ಳಬೇಡ. ಕರಿಕಲ್ಲು ಕಾಯಿ ಆದಾಗ, ಬಿಳಿ ಕಲ್ಲು ಹೂ ಚಿಗುರಿದ ಉಪ್ಪು ಕರ್ಪೂರವಾದಾಗ, ಅಂಗಳ ಹಾಸುಕಲ್ಲು ಆದಾಗ ಉದ್ದು (ಧಾನ್ಯ) ಮದ್ದಳೆ ಆದಾಗ, ತುಂಬೆಗಿಡದ ಅಡಿಯಲ್ಲಿ ಕೂಟ ಸೇರಿದಾಗ, ನೆಕ್ಕಿಗಿಡದ ಅಡಿಯಲ್ಲಿ ಬಯಲಾಟವಾದಾಗ, ದೆಂಬೆಲಿಗೆ ದಾಟುಮರ ಹಾಕಿದಾಗ, ಮಜ್ಜಿಗೆಯಲ್ಲಿ ಬೆಣ್ಣೆ ಮುಳುಗಿದಾಗ, ಗುಲುಗಂಜಿಯ ಕಲೆಮಾಸಿ ಹೋದಾಗ, ಹಳದಿ ಅಕ್ಕಿ ಮೈ ತೆಗೆದಾಗ, ಮರಕುಟ್ಟಿಗ ಹಕ್ಕಿ ತನ್ನ ತಲೆಯಮೇಲಿನ ಜುಟ್ಟನ್ನು ಕೆಳಗೆ ಇಳಿಸಿದಾಗ ನಿನ್ನ ರಾಜ್ಯಕ್ಕೆ ನೀನು ಬಂದು ನಿನ್ನ ರುಜ್ಯವಾಡದಲ್ಲಿ ಅರಮನೆಯನ್ನು ಆಳಿಕೊಂಡು ಸುಖಸಂತೋಷದಲ್ಲಿ ಇರು ಬಲಿಯೇಂದ್ರ).

ಶಿಷ್ಟ ರಚನೆಯ ಕುರುಡು ಈ ಪಾಡ್ದನದಲ್ಲಿ ಕಾಣಿಸುತ್ತದೆ. ತುಳು ಭಾಷೆ, ಸಾಹಿತ್ಯಗಳನ್ನು 'ಸಮರ್ಪಕವಾಗಿ ಬಳಸಿಕೊಂಡ ಹೆಚ್ಚು ಸಂಘಟಿತವಾದ ರಚನೆ ಈ ಪಾಡ್ದನದಲ್ಲಿ ಇದೆ.

## 4. ಅಸುರೆತಿ ಬಂಗಾರ

ಪುರಾಣಗಳ ವೀರಭದ್ರ ಲೌಕಿಕ ವ್ಯಕ್ತಿಯಾದ ಅಸುರೆತಿ ಬಂಗಾರವನ್ನು ಪ್ರೇಮಿಸುವ ಪ್ರಸಂಗ ಈ ಪಾಡ್ದನದಲ್ಲಿ ಇದೆ. ಲೌಕಿಕ ಪಾತ್ರ ಪರಿಸರಗಳ ಮೂಲಕ ಜನಪದ ವಾತಾವರಣ ಒಂದನ್ನು ವೀರಭದ್ರ ದೇವರ ಮತ್ತು 'ನಾರಾಯಣ ಬಂಗೇರರು'ಎಂಬ ಹೆಸರಿನ ನಾರಾಯಣ ದೇವರ ಪಾತ್ರಗಳ ಜೊತೆಗೆ ಕೊಡುವ ಒಂದು ವಿಶಿಷ್ಟ ರಚನೆ ಇಲ್ಲಿ ಕಾಣಿಸುತ್ತದೆ. ಇಲ್ಲಿನ ಅಸುರೆತಿ ಬಂಗಾರ ಹಳ್ಳಿಯ ಹೆಣ್ಣುಮಕ್ಕಳಂತೆ ದನಕರುಗಳನ್ನು ಮೇಯಿಸುತ್ತಾಳೆ. ಭಾರತ ಕತೆಯನ್ನು ಓದುತ್ತಾಳೆ. ವೀರಭದ್ರ ಅವಳು ಒಂಟಿಯಾಗಿರುವಾಗ ಅವಳನ್ನು ಭೇಟಿಯಾಗಿ ಪ್ರೇಮಯಾಚನೆ ಮಾಡುತ್ತಾನೆ. ಹಳ್ಳಿಯ ಗಂಡಸಿನಂತೆ ನೇರವಾಗಿ, ನಯಗಾರಿಕೆಯನ್ನು ಬಿಟ್ಟು ಅವಳನ್ನು ಮಾತನಾಡಿಸುತ್ತಾನೆ. ಹಾಗೆಯೇ ಅವಳನ್ನು ಹೆದರಿಸುತ್ತಾನೆ—"ಯೆಂಕೆ ಅಡ್‌ಜಾಂಡ, ಎನ್ನಡಪ್ಪೊ

ಇತೆಜಾಂಡ, ಕಾಡಸೊಪ್ಪು ತಿನ್ಪಾವೆ, ತೊಡನೀರ್ ಪರ್ಪಾನೆ," (ನೀನು ನನ್ನನ್ನು ಮದುವೆಯಾಗದಿದ್ದರೆ, ನನ್ನ ಜೊತೆಗೆ ಇರದಿದ್ದರೆ, ನಿನಗೆ ಕಾಡಸೊಪ್ಪು ತಿನ್ನಿಸುತ್ತೇನೆ. ತೋಡ ನೀರು ಕುಡಿಸುತ್ತೇನೆ). ಬಂಗಾರವು ಇದಕ್ಕಾಗಿ ದುಃಖಿಸುವುದು, ನಾರಾಯಣ ಬಂಗೇರರಲ್ಲಿಗೆ ಹೋಗಿ ದೂರಿಡುವುದು, ವೀರಭದ್ರ ದೇವರು ಮತ್ತು ನಾರಾಯಣ ಬಂಗೇರರ ಯುದ್ಧದ ಸನ್ನಾಹ, ಕೊನೆಗೆ ವೀರಭದ್ರ ಮತ್ತು ಬಂಗೇರುವಿನ ವಿವಾಹ–ಈ ರೀತಿ ಜನಪದ ಕತೆಯೊಂದರ ಮಾದರಿಯಲ್ಲಿ ಈ ಪಾಡ್ದನದ ರಚನೆ ಇದೆ. ನಾರಾಯಣ ಬಂಗೇರರ ಮನೆಯನ್ನು ಪ್ರವೇಶಿಸಲು ಏಳು ಬಾಗಿಲುಗಳಿವೆ. ಏಳು ಬಾಗಿಲುಗಳಿಗೆ ಏಳು ಕಾವಲುಗಳಿವೆ. ನಾಯಿ, ಹುಲಿ, ಕರಡಿ, ಏಳು ಹೆಡೆಯ ಸರ್ಪ, ಸಂಕಪಾಲ ಹಾವು, ಗೊಂಬೆಗಳು ಮತ್ತು ಹೆಂಗಸರು. ಜನಪದ ಕತೆಗಳ ಆಶಯಗಳು ಮತ್ತು ವಿವರಗಳು ಇಲ್ಲಿ ಸಿಗುತ್ತವೆ. ಆ ಎಲ್ಲ ಅಡ್ಡಿಗಳನ್ನು ವೀರಭದ್ರ ದಾಟಿಕೊಂಡು ಹೋಗುವ ರೀತಿಯೂ ಜನಪದ ಕತೆಯ ರೀತಿಯಲ್ಲಿಯೇ ಇದೆ. ಈ ಪಾಡ್ದನವು ಅದ್ಭುತ ಕತೆಯ ಪದ್ಯರೂಪದಂತೆ ಭಾಸವಾಗುತ್ತದೆ.

### 5. 'ಸೂರ್ಯ-ಚಂದ್ರ' ಪಾಡ್ದನ

'ಸೂರ್ಯ ಚಂದ್ರ' ಪಾಡ್ದನದಲ್ಲಿ ಸೂರ್ಯನು ಹೊಲತಿಯೊಬ್ಬಳೊಡನೆ ಲೈಂಗಿಕ ಸಂಪರ್ಕ ಪಡೆದುದರಿಂದ ಲೋಕದಲ್ಲಿ ಅನಾಹುತಗಳಾದ್ದುದನ್ನು ವಿವರಿಸಲಾಗಿದೆ. ಅಸ್ಪೃಶ್ಯತೆಯನ್ನು ಸಮರ್ಥಿಸಲು ಯಾರೋ ಮುಂಡಿವಂತರು ಪೌರಾಣಿಕ ಪಾತ್ರಗಳ ಮೂಲಕ ಈ ಪಾಡ್ದನವನ್ನು ರಚಿಸಿರಬೇಕು.

### ಲೌಕಿಕ ವಸ್ತುವುಳ್ಳ ಪಾಡ್ದನಗಳು

ತುಳು ಪಾಡ್ದನಗಳಲ್ಲಿ ಲೌಕಿಕ ವಸ್ತುವುಳ್ಳ ಪಾಡ್ದನಗಳು ಅಲೌಕಿಕ ವಸ್ತುವುಳ್ಳ ಪಾಡ್ದನಗಳಿಗೆ ಹೋಲಿಸಿದಾಗ ಸಂಖ್ಯೆಯ ದೃಷ್ಟಿಯಿಂದ ಕಡಿಮೆ ಸಿಗುತ್ತವೆ. ಭೂತಾರಾಧನೆಯಂತಹ ಆಚರಣೆಗಾಗಲೀ ಬಲೀಂದ್ರ ಪೂಜೆಯಂತಹ ಆರಾಧನೆಗಾಗಲೀ ಸಂಬಂಧಿಸದೆ ಬರೇ ಲೌಕಿಕ ಕತೆಯೊಂದನ್ನು ಹೇಳುವ ಕಾರಣ ಜನಪದರ ಅಭಿರುಚಿಗೆ ಅಷ್ಟೇನೂ ಹಿಡಿಸದ ಕಾರಣ ಜನಪ್ರಿಯವಲ್ಲದೆ ಇದ್ದಿರಬಹುದು. ತುಳು ಜನಪದ ಸಾಹಿತ್ಯದ ಬಗ್ಗೆಯಂತೂ ಭೂತಗಳಿಗೆ ಸಂಬಂಧಿಸಿದ ಮತ್ತು ಆ ರೀತಿಯ ಅಲೌಕಿಕ ವಸ್ತುವುಳ್ಳ ಪಾಡ್ದನಗಳ ಜನಪ್ರಿಯತೆಯ ಮುಂದೆ ಉಳಿಯಲಾರದೆ ಲೌಕಿಕ ಪಾಡ್ದನಗಳು ಕಣ್ಮರೆಯಾಗಿರಬಹುದು. ಆದರೂ ಅನೇಕ ವೈಶಿಷ್ಟ್ಯಗಳಿರುವ ಸುಂದರವಾದ ಲೌಕಿಕ ಪಾಡ್ದನಗಳು ದೊರೆಯುತ್ತವೆ. ಪರತಿಮಂಗಣೆ, ಅಣ್ಣೋಡಿ ಕುಮಾರಬೊಳಿಯ ಕಿನ್ನಿಗೆ, ಬಾಲ್‌ತಂಗಡಿ, ಪುತ್ತಕ್ಕ, ಅಮಸರಂದ ಮೆನ್ನೋಡಿ, ಮತ್ತಾಡಿಬಳ್ಳು, ಒನ್ನಮ್ಮ ಜೇವು, ಬಾಲೆ ಕಿನ್ನಾಮು, ವಜ್ರಂದ ಕುಮಾರ ಮುಂತಾದ ಅನೇಕ ಪಾಡ್ದನಗಳು ಲೌಕಿಕ ವಸ್ತುವುಳ್ಳ ಪಾಡ್ದನಗಳು. ಇವುಗಳಲ್ಲಿ ಕೆಲವು ದುರಂತ ವಸ್ತುವುಳ್ಳವು. ಇನ್ನು ಕೆಲವು ಜನನದ ಕತೆಗಳಂತೆ ಸುಖಾಂತ ವಸ್ತು ಉಳ್ಳವುಗಳು. ಕನ್ನಡ ಜನಪದ ಸಾಹಿತ್ಯದ ದುರಂತ ಕಥನ ಕವನಗಳ ರೀತಿಯ ಪಾಡ್ದನಗಳು ಸಿಗುತ್ತವೆ. ಹೆಣ್ಣುಗಳು ಪ್ರಧಾನವಾಗಿರುವ ಪಾಡ್ದನಗಳು ಹೆಚ್ಚಾಗಿ ದುರಂತ ಕಥನಕವನಗಳಾಗಿರುವುದು ಗಮನಕ್ಕೆ ಬರುತ್ತದೆ. ಇಂತಹ ಕೆಲವು ದುರಂತ ಕಥನ ಕವನಗಳನ್ನು ಮೊದಲು ನೋಡಬಹುದು.

## 1. ಒನ್ನಮ್ಮ ಜೇವು

ಒನ್ನಮ್ಮ ಜೇವು ಪಾಡ್ದನವು ದುರಂತ ವಸ್ತುವುಳ್ಳ ಒಂದು ಕಥನ ಕವನ. Ballad ನ ಹೆಚ್ಚಿನ ಲಕ್ಷಣಗಳನ್ನು ಈ ಪಾಡ್ದನದಲ್ಲಿ ನೋಡಬಹುದು. ಮಾಲಿಂಗ ಶೆಟ್ಟಿಯ ಹೆಂಡತಿ 'ಒನ್ನಮ್ಮ ಜೇವು' ಮಾಲಿಂಗ ಸೆಟ್ಟಿಗೆ ಒಂದು ಬಾರಿ ದಂಡಿಗೆ ಅಂದರೆ ಯುದ್ಧಕ್ಕೆ ಕರೆ ಬರುತ್ತದೆ. ಅವನು ಯುದ್ಧಕ್ಕೆ ಹೋಗುವಾಗ ತನ್ನ ತಾಯಿಯಲ್ಲಿ ಒನ್ನಮ್ಮಳನ್ನು ಜಾಗ್ರತೆಯಾಗಿ ನೋಡಿಕೊಳ್ಳಲು ಹೇಳಿಹೋಗುತ್ತಾನೆ. ಈ ವರ್ತಮಾನ ಸಿಕ್ಕಿದ ಊರಿನ ಶ್ರೀಮಂತರಾದ ಪುತ್ತೂರಿನ ಜಾಗಣಂತೋಡರು ಮಡಿವಾಳಗಿತ್ತಿ ಅಬ್ಬಗಳ ಸಹಾಯದಿಂದ ಒನ್ನಮಳನ್ನು ಪಡೆಯಲು ಸಂಚು ಮಾಡುತ್ತಾರೆ. ಅದಕ್ಕಾಗಿ ಅಬ್ಬಕ್ಕಳಿಗೆ ಒಂದು ಕಳಸೆಯಲ್ಲಿ ಹಿಡಿಯುವಷ್ಟು ರೂಪಾಯಿ ಕೊಡುತ್ತಾರೆ. ಅವಳು ಒನ್ನಮ್ಮಳಲ್ಲಿಗೆ ಬಂದು ಒನಮ್ಮಳಿಗೆ ಡೊಂಬರಾಟ, ಸೂಳೆಗಳ ಆಟ ಮುಂತಾದ ಮನೋರಂಜನೆಗಳ ಆಕರ್ಷಣೆ ತೋರಿಸಿ ಅವಳನ್ನು ಜಾಗಣಂತೋಡರಲ್ಲಿ ಕರೆದುಕೊಂಡು ಬರುತ್ತಾಳೆ. ಅಲ್ಲಿ ಒನ್ನಮ್ಮ ಅವರ ಮನೆಯಲ್ಲಿ ಬಂಧಿಯಾಗುತ್ತಾಳೆ. ಮಾಲಿಂಗ ಶೆಟ್ಟಿ ದಂಡು ಸಾಧಿಸಿ ಬರುವಾಗ ಮನೆಯಲ್ಲಿ ಹೆಂಡತಿ ಇಲ್ಲದ್ದನ್ನು ಕಂಡು ತಾಯಿಯಲ್ಲಿ ವಿಚಾರಿಸಿದಾಗ ಅಬ್ಬಗಳು ಅವಳನ್ನು ಜಾಗಣಂತೋಡರಲ್ಲಿಗೆ ಕರೆದುಕೊಂಡು ಹೋದ ಸಂಗತಿ ತಿಳಿಯುತ್ತದೆ. ಮಾಲಿಂಗ ಶೆಟ್ಟಿಯು ಉಪಾಯದಿಂದ ಬಳೆ ಮಾರುವವನ ವೇಷಹಾಕಿಕೊಂಡು ಜಾಗಣಂತೋಡರಲ್ಲಿಗೆ ಬರುತ್ತಾನೆ. ಬಳೆ ಇಡುವ ನೆಪದಲ್ಲಿ ಒನ್ನಮ್ಮಳನ್ನು ಭೇಟಿಯಾಗಿ, ಚಂದ್ರಾಯುಧದಿಂದ ಜಾಗಣಂತೋಡರನ್ನು ಕತ್ತರಿಸುತ್ತಾನೆ. ಅಲ್ಲಿಂದ ಒನ್ನಮ್ಮಳನ್ನು ಮಡಿವಾಳಗಿತ್ತಿ ಅಬ್ಬಕ್ಕನಲ್ಲಿಗೆ ಕರೆದುಕೊಂಡು ಬಂದು ಅಬ್ಬಕ್ಕಳನ್ನು ಚಂದ್ರಾಯುಧದಿಂದ ಕತ್ತರಿಸುತ್ತಾನೆ. ಮತ್ತೆ ಮನೆಗೆ ಬಂದು, ತಾಯಿಯನ್ನೂ ಒನ್ನಮ್ಮಳನ್ನೂ ಕತ್ತರಿಸಿ ಹಾಕುತ್ತಾನೆ.

ಈ ಒನ್ನಮ್ಮ ಜೇವು ಪಾಡ್ದನದಲ್ಲಿ ದುರಂತ ವಸ್ತುವುಳ್ಳ ಕತೆಯಿದೆ. ಮದುವೆಯಾದ ಹೆಣ್ಣನ್ನು ಮೋಸದಿಂದ ಅಪಹರಿಸುವ ಪ್ರಸಂಗ ಇದೆ. ಈರೀತಿ ಹೆಣ್ಣನ್ನು ಅಪಹರಿಸುವಲ್ಲಿ ಇನ್ನೊಬ್ಬಳು ಹೆಣ್ಣು—ಇಲ್ಲಿ ಮಡಿವಾಳಗಿತ್ತಿ ಅಬ್ಬಗ—ಸಹಾಯಕವಾಗುವ ಜಾನಪದ ತಂತ್ರವನ್ನು ಕಾಣಬಹುದು. ಕನ್ನಡ ಜಾನಪದದಲ್ಲಿಯೂ ಈ ತಂತ್ರ ಸಂಗ್ಯಾಬಾಳ್ಯಾ ಕಥನಗಳಲ್ಲಿ ಸಿಗುತ್ತದೆ. ಈ ರೀತಿ ಅಪಹರಣಕ್ಕೆ ಒಳಗಾಗುವ ಹೆಣ್ಣು ಮುಖ್ಯವಾಗಿ ಆಕರ್ಷಣೆ ಪಡೆಯುವುದು ಲೌಕಿಕವಾದ ಯಾವುದೋ ಒಂದು ಮನೋರಂಜನೆಗಾಗಿ. ಈ ಪಾಡ್ದನದಲ್ಲಿ ಮಡಿವಾಳಗಿತ್ತಿ ಅಬ್ಬಕ್ಕಳು ಒನ್ನಮ್ಮಳನ್ನು ಕರೆಯುವಾಗ ಅವಳಿಗೆ 'ಡೊಂಬೆರೆ ಆಟ, ಗುರ್ಬಿಗುಳೆ ಕಾಳ್ಯ, ಸೂಳೆಳೊ ಆಟ' ಎಂಬ ಮನೋರಂಜನೆಯ ಆಕರ್ಷಣೆಯನ್ನು ಒಡ್ಡುತ್ತಾಳೆ. ಇಲ್ಲಿ ಡೊಂಬರಾಟ ಎನ್ನುವುದು ಹೆಚ್ಚು ಪರಿಚಿತವಾಗಿರುವ ಬಯಲು ಅಥವಾ ಬೀದಿಗಳಲ್ಲಿ ಡೊಂಬರ ಪ್ರದರ್ಶಿಸುವ ಕೌಶಲ್ಯದ ಮತ್ತು ಸಾಹಸದ ಆಟಗಳು. ಸೂಳೆಳೊ ಆಟ (ಸೂಳೆಗಳ ಆಟ) ಅಂದರೆ ವೇಶ್ಯಾ ಹೆಣ್ಣುಗಳ ನರ್ತನ ರೂಪದ ಮನೋರಂಜನೆ ಇರಬಹುದು. ಗುರ್ಬಿಳೆ ಕಾಳ್ಯೊ ಎನ್ನುವ ಮಾತು ಸ್ಪಷ್ಟವಾಗುವುದಿಲ್ಲ. ಗುರ್ಬಿ ಅಂದರೆ ಗುಬ್ಬಚ್ಚಿ ಹಕ್ಕಿ. ಕಾಳ್ಯ ಅಂದರೆ ಕಾರಿ ಅಂದರೆ ಗೂಡು ಎನ್ನುವ ಅರ್ಥ ಇದೆ ಆದ್ದರಿಂದ ಗುಬ್ಬಚ್ಚಿಗಳ ಗೂಡು ಎನ್ನುವ ಅರ್ಥ ಇದ್ದಿರಬಹುದು. ಗುಬ್ಬಚ್ಚಿಗಳ ಗೂಡಿನಲ್ಲಿ ಇರುವ ಮೊಟ್ಟೆಯನ್ನೋ ಅಥವಾ ಮರಿ ಹಕ್ಕಿಗಳನ್ನೋ ನೋಡ್ವುದು ಒಂದು ಕೂತೂಹಲದ ಸಂಗತಿ ಈ ಪಾಡ್ದನದಲ್ಲಿ ಬರುವ ಇನ್ನೊಂದು ಅಂಶ ಅಂದರೆ ಮಾಲಿಂಗ ಶೆಟ್ಟಿಯು 'ದಂಡು ಸಾಧಿಸಲು ಹೋಗುವುದು' ಅಂದರೆ ಯುದ್ಧಕ್ಕೆ ಹೋಗುವುದು. ಈರೀತಿ ಗಂಡುಸೊಬ್ಬನು ಮನೆಯಿಂದ ಹೊರಗೆ ಹೋಗಲು ಕಾರಣವನ್ನ ಕೊಡುವಾಗ 'ದಂಡು ಸಾಧಿಸಲು ಎಂದು ತುಳು ಜನಪದ ಕತೆಗಳಲ್ಲಿ ಹೆಚ್ಚಾಗಿ ಬರುತ್ತದೆ. ಅದೇ ಮಾದರಿಯ ಲೌಕಿಕ ವಸ್ತುವುಳ್ಳ ಪಾಡ್ದನಗಳಲ್ಲಿಯೂ ಈ ರೀತಿ ದಂಡು

ಸಾಧಿಸಲು ಹೋಗುವ ವಿಚಾರವಿದೆ. ಅದೇ ರೀತಿ ಈ ಪಾಡ್ದನದಲ್ಲಿ ಕೊನೆಗೆ ಮಹಾಲಿಂಗ ಶೆಟ್ಟಿಯು 'ಚಂದ್ರಾಯುಧ' ದಿಂದ ಜಾಗಣಂತೋಡಾರ, ಅಬ್ಬಕ್ಕ, ಒನ್ನಮ್ಮ ಮತ್ತು ತನ್ನ ತಾಯಿಯನ್ನು ಕೊಲ್ಲುತ್ತಾನೆ. ಈರೀತಿ ಚಂದ್ರಾಯುಧದಿಂದ ತಪ್ಪುಮಾಡಿದ ವ್ಯಕ್ತಿಗಳನ್ನು ಗಂಡುಸೊಬ್ಬನು ಕತ್ತರಿಸಿ ಕೊಲ್ಲುವ ಸಂಗತಿ ತುಳು ಜನಪದ ಕತೆಗಳಲ್ಲಿಯೂ ಹೆಚ್ಚಾಗಿ ಬರುತ್ತದೆ. ಈ ದೃಷ್ಟಿಯಿಂದಲೂ ತುಳು ಜನಪದ ಕತೆಗಳ ಸ್ವರೂಪಕ್ಕೂ ಈ ಪಾಡ್ದನದ ಸ್ವರೂಪಕ್ಕೂ ಬಹಳ ಸಾಮ್ಯ ಇದೆ. ಬಳೆ ಮಾರುತ್ತಾ ಮಹಾಲಿಂಗ ಶೆಟ್ಟಿಯು ಮನೆಮನೆಗೆ ಹೋಗುವುದು, ಹೆಂಗಸರಿಗೆ ಬಳೆ ತೊಡಿಸುವುದು ಇದು ತುಳುನಾಡಿನಲ್ಲಿ ಇತ್ತೀಚೆಗಿನವರೆಗೂ ಪ್ರಚಲಿತವಾಗಿರುವ ಒಂದು ಪದ್ಧತಿಯನ್ನು ತಿಳಸುತ್ತದೆ.

ಈ ಪಾಡ್ದನದಲ್ಲಿ Ballad ನ ಲಕ್ಷಣ ಬಹಳ ಸಮರ್ಪಕವಾಗಿ ಕಾಣಿಸಿಕೊಂಡಿದೆ. ಸಂಭಾಷಣೆಗಳ ಮೂಲಕ ನಾಟಕೀಯತೆ ಕಥನದ ಉದ್ದಕ್ಕೂ ವ್ಯಾಪಿಸಿದೆ. ಘಟನೆಯಿಂದ ಘಟನೆಗೆ ಕ್ರಿಯೆ ಹಾರುತ್ತಾ ಹೋಗುತ್ತದೆ. ಕಡಿಮೆ ವಿವರಣೆಗಳಲ್ಲಿ ಕ್ರಿಯೆ ಶಕ್ತವಾಗಿ ಮುಂದುವರಿಯುವ ತಂತ್ರ ಈ ಪಾಡ್ದನದಲ್ಲಿ ಇದೆ.

'ಜೇವು' ಅಂದರೆ 'ಹೆಣ್ಣು' ಎಂದು ಅರ್ಥ. 'ಹೊನ್ನಮ್ಮ' ಎನ್ನುವ ಹೆಸರು ರೂಢಿಯಲ್ಲಿ 'ಒನ್ನಮ್ಮ' ಎಂದು ಆಗುತ್ತದೆ. ಒನ್ನಮ್ಮ, ಅಬ್ಬಗ ಇವು ಸಾಮಾನ್ಯವಾಗಿ ತುಳು ನಾಡಿನಲ್ಲಿ ಕಾಣಿಸುವ ಹೆಸರುಗಳು.

## 2. ಅಣ್ಣೋಳ್ಕ ಕೋವರಿ —ಬೊಳ್ಳೈಲ್ಲ ಕಿನ್ನಗೆ

ಈ ಪಾಡ್ದನವು ಪ್ರಭಾವವಾಗಿ ಜನಪದಕತೆಯ ಮಾದರಿಯಲ್ಲಿ ಇದ್ದು, ಆದರೆ ಕೊನೆಗೆ ದುರಂತ ಸ್ವರೂಪವನ್ನು ಪಡೆಯುವ ವಸ್ತುವನ್ನು ಒಳಗೊಂಡಿದೆ. ಎರೆಮಾಲು ಬೀಡಿನ ಬೈಂಕಿ ಆಳ್ವನೆಂಬವನು ಕುಳ್ಮಾರದ ರಾಣಿಯನ್ನು ಮದುವೆಯಾಗಿದ್ದ. ಅವರಿಗೆ ಬಹಳ ಕಾಲದವರೆಗೆ ಮಕ್ಕಳಾಗಿಲ್ಲ. ಕೊನೆಗೆ ದೈವದೇವರಿಗೆ ಹರಕೆ ಹೇಳಿದ ಮೇಲೆ ಒಂದು ಮಗು ಹುಟ್ಟಿತು. ಅದೇ ವೇಳೆಗೆ ಬೈಂಕಿ ಆಳ್ವನ ಸೋದರಳಿಯ ಅಣ್ಣೋಡಿ ಕುಮಾರ ಬೇಟೆಗೆ ಬಂದವನು ಮಾವನಲ್ಲಿಗೆ ಬಂದು ಮಗುವನ್ನು ನೋಡಿ ಸಂತೋಷಪಟ್ಟನು. ಆ ಮಗುವಿಗೆ ತನ್ನ ಮುದ್ರೆಯುಂಗುರವನ್ನು ಕೊಟ್ಟು ಅತ್ತೆ ಮಾವರಲ್ಲಿ 'ನನಗೆ ಈ ಮಗುವನ್ನು ಮದುವೆ ಮಾಡಿಕೊಡಬೇಕು' ಎಂದನು. ಆಗ ಅತ್ತೆಯು 'ದೇವರು ಈ ತೊಟ್ಟಿಲಿನ ಕೂಸನ್ನು ಕಾಪಾಡಿದರೆ ನಿನಗೆ ಕೊಡುವುದಕ್ಕೆ ಆಕ್ಷೇಪವಿಲ್ಲ' ಎಂದಳು. ಆರೀತಿ ಮಾತುಕೊಟ್ಟ ಮೇಲೆ ಅಣ್ಣೋಡಿ ಕುಮಾರನು ಆ ಮಗುವಿಗೆ ಬೊಳ್ಳಕಿನ್ನಗ ಎಂದು ಹೆಸರು ಇಟ್ಟು ತನ್ನ ಮನೆಗೆ ಬಂದನು. ಕಿನ್ನಗ ಬೆಳೆಯುತ್ತಾ ಬಂದಾಗ ಅಣ್ಣೋಡಿ ಕುಮಾರನೇ ತನ್ನ ಗಂಡ ಎಂದು ಭಾವಿಸಿಕೊಂಡು, ಅವನ ಚಿತ್ರವನ್ನು ತನ್ನ ಚಿತ್ರದ ಜೊತೆಗೆ ಇಟ್ಟು ಆಡುತ್ತಿದ್ದಳು. ಅಣ್ಣೋಡಿ ಕುಮಾರನಿಗೆ ಕಿನ್ನಿದಾರು ಎಂಬ ವೇಶ್ಯೆಯ ಸಹವಾಸ ಇತ್ತು. ಅವಳಿಗಾಗಿ ಪ್ರತ್ಯೇಕ ಮನೆ, ಸ್ನಾನಕ್ಕೆ ಕೆರೆ ಮುಂತಾದುವನ್ನು ಮಾಡಿಸಿ ಕೊಟ್ಟಿದ್ದನು. ಕ್ರಮೇಣ ಬೊಳ್ಳ ಕಿನ್ನಗ ಪ್ರಾಯಕ್ಕೆ ಬಂದಾಗ ಅಣ್ಣೋಡಿ ಕುಮಾರನಿಗೆ 'ಒಸಗೆ' ಹೇಳಿ ಕಳುಹಿಸಿದರು. ಆದರೆ ಈ ವರ್ತಮಾನ ಗೊತ್ತಾದ ಕನ್ನಿದಾರು ಊರಿನ ಗುತ್ತಿನವರನ್ನು ಕರೆಸಿ ನೀವು ಹೋಗಿ ಹೆಣ್ಣು ನೋಡಿ ಬಂದವರು ಆ ಹುಡುಗಿಗೆ ಒಂದು ಕಣ್ಣು ಇಲ್ಲವೆಂದು ಹೇಳಿ, ಅಣ್ಣೋಡಿ ಕುಮಾರನೊಡನೆ ಅವಳ ಮದುವೆ ಆಗದಂತೆ ನೋಡಿಕೊಳ್ಳಬೇಕು ಎಂದು ಅವರಿಗೆ ಕೈತುಂಬಾ ಹಣಕೊಟ್ಟು ಅಡ್ಡಬಿದ್ದು ಬೇಡಿಕೊಂಡಳು. ಗುತ್ತಿನವರು ಅದೇರೀತಿ ಮಾಡಿದರು. ತನ್ನ ಮದುವೆಗೆ ಸಿದ್ಧತೆಗಳೆಲ್ಲ ಆಗಿ ಅಣ್ಣೋಡಿ ಕುಮಾರನ ದಿಬ್ಬಣ ಬಾರದ ಕಾರಣ ದುಃಖಗೊಂಡ ಕಿನ್ನಗ ತನ್ನ ಚಿತ್ರವೊಂದನ್ನು ಮಾಡಿ ಅದನ್ನು ಅಣ್ಣೋಡಿ ಕುಮಾರನಿಗೆ ಕಳುಹಿಸಿಕೊಟ್ಟಳು. ದಾರಿಯಲ್ಲಿ ಕಿನ್ನಿದಾರುವು ಈ ಚಿತ್ರವನ್ನು ತೆಗದುಕೊಂಡು

ಅದರ ಒಂದು ಕಣ್ಣಿಗೆ ಸುಣ್ಣದ ಬೊಟ್ಟನ್ನು ಹಾಕಿ ಕಳುಹಿಸಿದಳು. ಆ ಚಿತ್ರವನ್ನು ನೋಡಿದ ಅಣ್ಣೋಡಿ ಕುಮಾರನು ಸಿಟ್ಟಿನಿಂದ ಅದನ್ನು ತೆಗೆದು ಎಸೆದನು. ಈರೀತಿ ಅಣ್ಣೋಡಿ ಕುಮಾರನು ಕಿನ್ಯಗಳನ್ನು ತಿರಸ್ಕರಿಸಿದಾಗ ಅವಳ ಮದುವೆಯನ್ನು ಉದ್ಯಾವರದ ಅರಸರೊಡನೆ ಮಾಡಲು ಸಿದ್ಧತೆ ಮಾಡಿದರು. ಕಿನ್ಯಗಳ ಮನಸ್ಸಿಗೆ ವಿರುದ್ಧವಾಗಿ ಅವಳ ಮದುವೆಯು ನಡೆದುಹೋಯಿತು. ಗಂಡನ ಮನೆಗೆ ಹೋಗುವಾಗ ದಾರಿಯಲ್ಲಿ ಅಣ್ಣೋಡಿ ಕುಮಾರನ ಮತ್ತು ಅವಳ ಭೇಟಿಯಾಗಿ ನಿಜ ಸಂಗತಿ ತಿಳಿಯಿತು. ಬಹಳವಾಗಿ ದುಃಖಿಸಿದ ಇಬ್ಬರೂ ಮುಂದಿನ ಸಿದ್ಧತೆಗಳಿಗೆ ಸಂಚುಮಾಡಿದರು. ಕಿನ್ನಿದಾರುವಿನ ಮೋಸಕ್ಕಾಗಿ ಅವಳನ್ನು ಬೆಂಕಿಹಾಕಿ ಸುಟ್ಟ ಅಣ್ಣೋಡಿ ಕುಮಾರನು ಮುದುಕನ ವೇಷಹಾಕಿ ಉದ್ಯಾವರದ ಅರಮನೆಗೆ ಬಂದನು. ಅಲ್ಲಿ ವಿಷಪೂರಿತ ದೋಸೆಯನ್ನು ಮಾಡಿದ ಕಿನ್ಯಗ ಅದನ್ನು ತಾನೂ ತಿಂದು ಅಣ್ಣೋಡಿ ಕುಮಾರನಿಗೂ ಕೊಡುತ್ತಾಳೆ. ಅವರಿಬ್ಬರ ದುರಂತ ಮರಣದ ಮೂಲಕ ಈ ಪಾಡ್ದನ ಅಂತ್ಯವಾಗುತ್ತದೆ.

ಈ ಪಾಡ್ದನದ ಇನ್ನೊಂದು ಪಾಠದಲ್ಲಿ 'ಅಣ್ಣೋಡಿ ಕುಮಾರ' ನನ್ನು 'ಅನ್ನೊಲ್ಲ ಕೋವರಿ' ಎಂದೂ 'ಕಿನ್ಯಗಳನ್ನು' 'ಬೊಳ್ಳೊಲ್ಲ ಕಿನ್ಯಗ' ಎಂದೂ ಕರೆಯಲಾಗಿದೆ. ಮುಖ್ಯ ಕಥಾವಸ್ತು ಅದೇ ರೀತಿ ಇದ್ದರೂ ಘಟನೆಗಳಲ್ಲಿ ಅನೇಕ ವ್ಯತ್ಯಾಸವಿದೆ. ಸಾಂಸ್ಕೃತಿಕವಾದ ಕೆಲವು ವಿಶೇಷ ಸಂಗತಿಗಳು ಇಲ್ಲಿ ಇವೆ. ತೊಟ್ಟಿಲಲ್ಲಿದ್ದ ಮಗುವನ್ನು ಕಂಡು ಅನ್ನೊಲ್ಲ ಕೋವರಿಯು 'ಉಂಡು ಎಂಕೆತ್ತಿ ಪೂವಯೇ ಮಾಮಿ, ಬದಲೊರಿ ಮುಡಿಪ್ಯರೆ ಬಲ್ಲಿ' (ಇದು ನನಗಾಗಿ ಇರುವ ಹೂ ಅತ್ತೆಯೇ, ಇದನ್ನು ಬೇರೆಯವರು ಮುಡಿಯಬಾರದು) ಎಂದು ಹೇಳುತ್ತಾನೆ. ಇಲ್ಲಿ ಕಿನ್ಯಗಳ ಚಿತ್ರವನ್ನು ನೋಡಿದವಳು ಐತಾಗೆ ಎನ್ನುವ ಹೆಣ್ಣು. ಅವಳು ಅನ್ನೊಲ್ಲ ಕೋವರಿಯ ಸಲ್ಲಾಪದ ಹೆಣ್ಣು. ಈ ಐತಾಗೆ ಇಲ್ಲಿ ಚಿತ್ರದ ಕಣ್ಣಿಗೆ ಸುಣ್ಣದ ಬೊಟ್ಟನ್ನು ಇಟ್ಟು ವಿರೂಪಗೊಳಿಸುತ್ತಾಳೆ. ಈ ಪಾಡ್ದನದಲ್ಲಿ ಕಿನ್ಯಗೆಯನ್ನು ಮದುವೆಯಾಗುವವನು ಮಜಲೋಡಿ ದೊರೆ. ಇಲ್ಲಿ ಅನ್ನೊಲ್ಲ ಕೋವರಿಯು ಬ್ರಾಹ್ಮಣ ವೇಷದಲ್ಲಿ ಭಿಕ್ಷೆ ಬೇಡುತ್ತಾ ಕಿನ್ಯಗೆ ಇದ್ದಲ್ಲಿ ಬರುತ್ತಾನೆ. ಅವರಿಬ್ಬರೂ ಸಾಯುವ ಸಂದರ್ಭ ಇಲ್ಲಿ ಹಿಂದಿನ ಪಾಡ್ದನಕ್ಕಿಂತ ಬೇರೆಯಾಗಿದೆ. ಬ್ರಾಹ್ಮಣನಾಗಿ ಬಂದ ಅಣ್ಣೋಡಿ ಕುಮಾರನ ಪ್ರಾಣ ಹೊರಟು ಹೋದಾಗ ಅದಕ್ಕೆ ಸಿದ್ಧಪಡಿಸಿದ ಗಂಧದ ಮರದ ಚಿತೆಯಲ್ಲಿ ಕಿನ್ಯಗೆಯು ಬಿದ್ದು ತನ್ನ ಪ್ರಾಣವನ್ನು ಕಳೆದುಕೊಳ್ಳುತ್ತಾಳೆ.

ಈ ಪಾಡ್ದನವು ಬಾಲ್ಯವಿವಾಹದ ಕಲ್ಪನೆ ಉಳ್ಳ, ಅದು ಪ್ರೇಮವಿವಾಹದ ಮಟ್ಟಕ್ಕೆ ಮುಟ್ಟುವ ಮತ್ತು ಆ ವಿವಾಹಕ್ಕೆ ಉಂಟಾಗುವ ಅನಿರೀಕ್ಷಿತ ಅಡ್ಡಿಗಳಿಂದಾಗಿ ಕೊನೆಗೆ ಗಂಡು ಹೆಣ್ಣು ದುರಂತ ಸಾವನ್ನಪ್ಪುವ ಕತೆ. ಗಂಡಿನಲ್ಲಿಗೆ ಹೆಣ್ಣಿನ ಚಿತ್ರಪಟವನ್ನು ಕಳಿಸುವುದು, ಆ ಗಂಡಿಗೆ ಒಂದು ವೇಶ್ಯಾ ಹೆಣ್ಣಿನ ಸಂಪರ್ಕ ಇರುವುದು, ಅವಳ ಸಂಚಿನಿಂದಾಗಿ ಚಿತ್ರಪಟದಲ್ಲಿ ಅಂಗ ಊನ ಕಾಣಿಸಿಕೊಳ್ಳುವುದು, ಇದರಿಂದ ಗಂಡು ಚಿತ್ರಪಟದ ಹೆಣ್ಣನ್ನು ನಿರಾಕರಿಸುವುದು—ಈ ತಂತ್ರ ಜನಪದ ಕತೆಗಳಲ್ಲಿ ಸಿಗುತ್ತದೆ. ತುಳುವಿನ ಒಂದು ಜನಪದ ಕತೆಯಲ್ಲಿಯೂ ಇಂತಹದೇ ಒಂದು ಪ್ರಸಂಗ ಬರುತ್ತದೆ. ಅಮರ ಪ್ರೇಮದ ದುರಂತವನ್ನು ಸಾರುವುದಕ್ಕೆ ಇಂತಹ ಕಥಾವಸ್ತುಗಳು ಜನಪದ ಕಥನ ಸಾಹಿತ್ಯದಲ್ಲಿ (Folk Narrative) ಹೆಚ್ಚಾಗಿ ಸಿಗುತ್ತವೆ. ಈ ಪಾಡ್ದನದ ಎರಡನೇ ಪಾಠದಲ್ಲಿ ಆರಂಭದ ಅರ್ಧ ಭಾಗಕ್ಕಿಂತಲೂ ಹೆಚ್ಚು ಕಿನ್ಯಗಳ ಜನನ ಪೂರ್ವದ ವೃತ್ತಾಂತವಿದೆ, ಕಿನ್ಯಗಳ ತಾಯಿ ಹೆರುವ ಪೂರ್ವದ ಸಂಸ್ಕಾರಗಳು ಮಡಿವಾಳಗಿತ್ತಿ ಅಬ್ಬಗಳಿಂದ ನಡೆಯುತ್ತವೆ. ಈ ವಿವರ ಸಾಂಸ್ಕೃತಿಕವಾಗಿ ಬಹಳ ಮುಖ್ಯವಾದದ್ದು. ಕಥನ ಕ್ರಿಯೆಯನ್ನು ವೇಗವಾಗಿ ಕೊಂಡುಹೋಗುವ ತಂತ್ರ ಈ ಪಾಡ್ದನದಲ್ಲಿಯೂ ಇದೆ. ಸಂಭಾಷಣೆಗಳು ಹೆಚ್ಚು ಇದ್ದು ನಾಟಕೀಯತೆ ಮುಖ್ಯವಾಗಿದೆ. ಪಾಡ್ದನದ ಪಾತ್ರಗಳು ಮತ್ತು ಪರಿಸರ ಅರಸು ಮನೆತನಗಳಿಗೆ ಸಂಬಂಧಿಸಿದ್ದು. ಚಾವಡಿ,ಓಲೆ, ದಂಡಿಗೆ, ಅರಮನೆ, ಬೆಳ್ಳಿಯ ಹರಿವಾಣ, ಗಂಧದ ಚಿತೆ—ಈ ಸಂಸ್ಕೃತಿ ಪಾಡ್ದನದ ವಾತವರಣವನ್ನು ವೈಭವಯುತ ಲೌಕಿಕ ಸ್ವರೂಪದ್ದಾಗಿ ಮಾಡಿದೆ.

## 3. ಪರತಿ ಮಂಗಣೆ

"ಪರತಿ ಮಂಗಣೆ" ಪಾಡ್ದನವನ್ನು 'ಬೊಟ್ಟಿಪಾಡಿ ಬಲ್ಲಾಳರೆ ಸಂಧಿ' ಎಂದೂ ಕರೆಯುತ್ತಾರೆ. ಇದನ್ನೇ ಹೋಲುವ ಚಿಕ್ಕದಾದ 'ಮಾನಿಗ ಪಾಡ್ದನ'ವೂ ಇದೆ. ವಸ್ತು ಮತ ಶೈಲಿಯ ದೃಷ್ಟಿಯಿಂದ ಈವರೆಗಿನ ಪಾಡ್ದನಗಳಿಗಿಂತ ಹೆಚ್ಚು ಭಿನ್ನವಾಗಿದೆ. ಹಿಂದಿನ ಪಾಡ್ದನಗಳಲ್ಲಿ ಗಂಡಿನಿಂದ ಕೊಲೆಯಾಗಿ ಅಥವಾ ಅಮರ ಪ್ರೇಮಕ್ಕಾಗಿ ಹೆಣ್ಣಿನ ಸಾವಿನ ದುರಂತ ಕಾಣಿಸಿಕೊಂಡರೆ ಈ ಪಾಡ್ದನದಲ್ಲಿ ಅಸಹಾಯಕ ಹೆಣ್ಣೊಬ್ಬಳು ಶ್ರೀಮಂತ ಬಲ್ಲಾಳನೊಬ್ಬನನ್ನು ಎದುರು ಹಾಕಿಕೊಳ್ಳಲಾರದೆ, ಅಪಾಯದಿಂದ ಅವನ ಸಂಪತ್ತೆಲ್ಲವನ್ನು ಬೆಂಕಿಯಲ್ಲಿ ಹಾಕಿಸಿ ಕೊನೆಗೆ ತಾನು ಬೆಂಕಿಗೆ ಹಾರಿ ಪ್ರಾಣವನ್ನು ಕಳೆದುಕೊಳ್ಳುತ್ತಾಳೆ. ಭೂತ ಕಟ್ಟುವ ಪರವನ ಹೆಂಡತಿ ಪರತಿ ಮಂಗಣೆಯ ರೂಪಕ್ಕೆ ಮರುಳಾಗಿ ಅವಳನ್ನು ಪಡೆಯಲಿಕ್ಕಾಗಿ ಪರವನನ್ನು ಕೊಂದು ಅವಳಿಗಾಗಿಯೇ ತನ್ನ ಸರ್ವಸ್ವವನ್ನು ಬೆಂಕಿಗೆ ಹಾಕಿ ಕೊನೆಗೆ ಅವಳು ಬೆಂಕಿಗೆ ಹಾರಿದಾಗ, ತಾನೂ ಬೆಂಕಿಯಲ್ಲಿ ತನ್ನ ಪ್ರಾಣವನ್ನು ಕಳದುಕೊಳ್ಳುತ್ತಾನೆ ಬೊಟ್ಟಿಪ್ಪಾಡಿ ಬಲ್ಲಾಳ. ಆದ್ದರಿಂದ ಇದು ಪರತಿ ಮಂಗಣೆಯ ದುರಂತದಷ್ಟೇ ಬೊಟ್ಟಿಪ್ಪಾಡಿ ಬಲ್ಲಾಳನ ದುರಂತವೂ ಹೌದು. ಅದಕ್ಕಾಗಿಯೇ ಈ ಪಾಡ್ದನವನ್ನು 'ಪರತಿ ಮಂಗಣೆ' ಸಂಧಿಯೆಂದೂ, 'ಬೊಟ್ಟಿಪ್ಪಾಡಿ ಬಲ್ಲಾಳ' ಸಂಧಿ ಎಂದೂ ಕರೆಯುತ್ತಾರೆ.

ಬೊಟ್ಟಿಪ್ಪಾಡಿ ಬಲ್ಲಾಳನು ಗದ್ದೆಗೆ ನೀರು ಕಟ್ಟಲು ಬಂದವನು ಹಲಸಿನ ಮರದ ಕಟ್ಟೆಯಲ್ಲಿ ಎಳೆ ಬಿಸಿಲು ಕಾಯಿಸುತ್ತಿರುವ ಪರತಿ (ಹೊಲತಿ-ಪರವನ ಹೆಂಡತಿ)ಯನ್ನು ನೋಡುತ್ತಾನೆ. ಅವಳ ಸೌಂದರ್ಯಕ್ಕೆ ಮಾರು ಹೋಗಿ ಬಲ್ಲಾಳನು ಮೂರ್ಛೆ ತಪ್ಪುತ್ತಾನೆ. ಪರತಿಯೇ ಬಂದು ಅವನನ್ನು ನೀರು ಚಿಮುಕಿಸಿ ಎಚ್ಚೆಸುತ್ತಾಳೆ. ಪರತಿಯ ಮೇಲೆ ಈ ರೀತಿ ಮೋಹಗೊಂಡ ಬಲ್ಲಾಳನು ಅವಳನ್ನು ರಮಿಸಲು ಬೇರೆ ಬೇರೆ ಪ್ರಯತ್ನಗಳನ್ನು ಮಾಡುತ್ತಾನೆ.

### 'ಪರತಿ ಮಂಗಣೆ' ಪಾಡ್ದನದ ಕನ್ನಡ ರೂಪಾಂತರ

ಬಲ್ಲಾಳನು ಹಠವನ್ನು ಮಾಡುತ್ತಾನೆ. 'ಪರತಿ ಮಂಗಣೆ, ನೀನು ನಾನು ಕೊಟ್ಟ ಎಲೆ ಅಡಿಕೆ ತಿನ್ನುವುದಿಲ್ಲವಾದರೆ ನಾನು ಇನ್ನು ಇಲ್ಲಿ ಕುಳಿತುಕೊಳ್ಳುವುದಿಲ್ಲ ಎಂದು ಬಲ್ಲಾಳನು ಹೇಳುತ್ತಾನೆ. ಆಗ ಪರತಿ ಮಂಗಣೆಯು "ನನ್ನ ಗಂಡ ಎಲೆ ಅಡಿಕೆ ತರಬೇಕು, ನಾನು ತಿನ್ನಬೇಕು" ಎನ್ನುತ್ತಾಳೆ. ಅಷ್ಟು ಮಾತನ್ನು ಕೇಳಿದಾಗ ಬಲ್ಲಾಳ ದಡಕ್ಕನೆ ಎದ್ದನು. ಕೋಪದಲ್ಲಿ ಕಣ್ಣು ಕೆರಳಿಸಿ ಅಂಗಳದಲ್ಲಿ ನಿಂತನು. 'ಮಂಗಳವಾರ ಸಿಂಗಬಾಳೆಯಗೊನೆ ಕಡಿಯಲಿದೆ. ಜುಮಾದಿ ಭೂತಕ್ಕೆ ನೇಮ ಕೊಡಲು ಗೊನೆ ಕಡಿಯಲಿಕ್ಕಿದೆ. ನಿನ್ನ ಗಂಡ ಪರವ ಬಂದರೆ ನೀನು ಹೇಳಬೇಕು ಎಂದು ಹೇಳಿದನು. ಪರವ ಬಂದಾಗ ಪರತಿ ಈ ವಿಚಾರ ತಿಳಿಸಿದಳು. ಈ ಪರವ ಮೈಂದನು ಕೊಟ್ಟಿಗೆಗೆ ಬಂದು ಹಾಳೆಯಕಟ್ಟನ್ನು ಹಾಕಿದನು. ನೀರು ತರುವ ಮಂಗಣೆಯು ಕಣ್ಣಿನಲ್ಲಿ ಕಡು ದುಃಖ ತೆಗೆಯುತ್ತಾಳೆ. ಇದು ಯಾಕೆ ಇವತ್ತು ಈ ರೀತಿ . ವಿಶೇಷವಾಗಿ ದುಃಖಿಸುತ್ತೀ ಎಂದು ಪರವಮೈಂದನು ಅವಳಲ್ಲಿ ಕೇಳಿದನು. 'ಇವತ್ತು ಯಾಕೆ ಅಳುವುದೆಂದರೆ ಚಿಕ್ಕ ವಯಸ್ಸಿನಲ್ಲಿ ನಾನು ನಿಮ್ಮ ಕೈಹಿಡಿದೆ. ಇವತ್ತಿನ ದಿನ ನಮಗೆ ಮರಣ ಬರುತ್ತದೆ. ಬಲ್ಲಾಳರಲ್ಲಿ ನೇಮವಿದೆ ಎಂದು ಕೇಳಿದಿರಲ್ಲಾ. ನಾವು ನಮ್ಮ ತಂದೆ ತಾಯಿಯವರಲ್ಲಿಗೆ ಹೋಗಿ ಬರಬೇಕು

ಎನ್ನುತ್ತಾಳೆ ಪರತಿ ಮಂಗಣೆ. ಹಾಗೆಯೇ ಪರವ ಮೈಂದ ಮತ್ತು ಪರತಿ ಮಂಗಣೆ ಅವಳ ತಂದೆ ತಾಯಿಯ ನಾಡಿಗೆ ಬರುತ್ತಾರೆ. ಅವಳನ್ನು ತಾಯಿ ಕೇಳುತ್ತಾಳೆ-'ಇಷ್ಟರವರೆಗೆ ಬಾರದವಳು ಇವತ್ತು ಏನು ಬಂದಿ ? ಆಗ ಪರತಿಯು "ಬೊಟ್ಟಿಪ್ಪಾಡಿ ಬಲ್ಲಾಳರ ಬೀಡಿನಲ್ಲಿ ಹೊಸ ಭೂತಕ್ಕೆ ನೇಮಕ್ಕಾಗಿ ಬಾಳೆಗೊನೆ ಕಡಿದಿದ್ದಾರೆ. ಅದಕ್ಕೆ ನಾವು ಹೋಗಬೇಕಾಗಿದೆ. ಅದಕ್ಕಿಂತ ಮೊದಲು ನಿಮ್ಮನ್ನು ನೋಡಿಬಿಡುತ್ತೇನೆ ಎಂದು ಪೂರ್ವದಿಂದ ಪಶ್ಚಿಮಕ್ಕೆ ಬಂದಿದ್ದೇನೆ." ಮಗಳಿಗೆ ತಾಯಿ ಕಪ್ಪು ಹೆಂಟೆಯನ್ನು ಕೊಂದು ಅಕ್ಕಿಯ ಅಡ್ಯೆಯನ್ನು ಮಾಡಿ ಸನ್ಮಾನ ಮಾಡುತ್ತಾಳೆ. ತಂದೆ ತಾಯಿಯ ಕಾಲುಹಿಡಿದು ನಮಸ್ಕರಿಸಿ, ಅವರು ಹಿಂದಕ್ಕೆ ಬರುತ್ತಾರೆ. ಮನೆಗೆ ಬಂದು ಭೂತದ ಆಭರಣಗಳ ಪೆಟ್ಟಿಗೆಯನ್ನು ಹೊತ್ತುಕೊಂಡು ಬೊಟ್ಟಿಪ್ಪಾಡಿ ಬಲ್ಲಾಳರಲ್ಲಿಗೆ ಬರುತ್ತಾರೆ. ಇವರನ್ನು ನೋಡಿ ಬಲ್ಲಾಳರು ಮುಗುಳು ನಗುತ್ತಾನೆ. ಅವರಿಗೆ ಕುಳಿತುಕೊಳ್ಳಲು ಚಾಪೆ ಕೊಡುತ್ತಾನೆ. "ಏನು ನೋಡುತ್ತೀಯಾ ಪರತಿ ಮಂಗಣೆ, ನಾನು ಈಗ ಭೂತದ ಅಣಿಯನ್ನು ಕಟ್ಟುತ್ತೇನೆ. ನೀನು ಹೂವನ್ನು ಕೊಯ್ದುಕೊಂಡು ಬಾ" ಎನ್ನುತ್ತಾನೆ ಪರವ ಮೈಂದ. ಅವನು ಹಾಳೆಯಲ್ಲಿ ಅಣಿ ಕಟ್ಟುತ್ತಾನೆ. ಪರತಿಯು ಕೇಪುಳು ಅಂದರೆ ಕಿಸಗಾರ ಹೂವನ್ನು ಕೊಯ್ದು ಬರುತ್ತಾಳೆ. ಪರವನ ಹತ್ತಿರ ಕುಳಿತು ಕೊಂಡು ಹೂವಿನ ಮಾಲೆ ಕಟ್ಟುತ್ತಾಳೆ. "ಏನು ನೋಡುತ್ತೀರಿ ಬಲ್ಲಾಳರೇ, ವೇಳೆ ಹೋಗುತ್ತಿದೆ. ಹೊತ್ತು ಆಗುತ್ತಿದೆ. ಭೂತದ ವೇಷ ಹಾಕಲು ಎಣ್ಣೆ ಹಿಡಿಯಬೇಕು, ವಿಾಯಲು ಹೋಗಬೇಕು" ಎಂದು ಕೇಳುತ್ತಾನೆ-ಪರವ. ಅದೇ ರೀತಿ ಬೊಟ್ಟಿಪ್ಪಾಡಿ ಬಲ್ಲಾಳನು ಕಂಚಿನ ದೀಪವನ್ನು ಇಟ್ಟು ಗಿಂಡಿಯಲ್ಲಿ ಎಣ್ಣೆ ಇಟ್ಟು ತುದಿಯಲ್ಲಿ ವೀಳ್ಯವನ್ನು ತಂದು ಪರವನಿಗೆ ಭೂತದ ಎಣ್ಣೆಯನ್ನು ಕೊಡುತ್ತಾನೆ. ಅವನು 'ಸ್ವಾಮಿ ದೇವರೇ' ಎಂದು ಕೈಮುಗಿದು ಆಪೋಶನ ಮಾಡುತ್ತಾನೆ. ಪಾದಕ್ಕೆ ಮೂರು ಹನಿ ಎಣ್ಣೆಯನ್ನು ಮುಟ್ಟಿಸು ತ್ತಾನೆ. ನೆತ್ತಿಗೆ ಮೂರು ಹನಿ ಎಣ್ಣೆಯನ್ನು ತಾಗಿಸುತ್ತಾನೆ. ಎಣ್ಣೆಯಗಿಂಡಿಯನ್ನು ಪರತಿಯಲ್ಲಿ ಕೊಡುತ್ತಾನೆ. ಸ್ನಾನ ಮಾಡಿಕೊಂಡು ಬರುತ್ತಾನೆ ಪರವ ಮೈಂದ. ಆಮೇಲೆ ಅರದಾಳ ಅಂದರೆ ಮುಖಕ್ಕೆ ಹಳದಿ ಬಣ್ಣವನ್ನು ಹಚ್ಚುವುದಕ್ಕೆ ಕುಳಿತು ಕೊಳ್ಳುತ್ತಾನೆ. ಅರದಾಳವನ್ನು ಮುಖಕ್ಕೆ ಹಚ್ಚಿದ ಮೇಲೆ ಎದ್ದು ನಿಂತು ಗಗ್ಗರವನ್ನು ಕಾಲಿಗೆ ಇಡುತ್ತಾನೆ, ಮೈಗೆ ಅಣಿಯನ್ನು ಕಟ್ಟುತ್ತಾನೆ. ಪರತಿ ಮಂಗಣೆ ತೆಂಬರೆ ಬಾರಿಸುತ್ತಾಳೆ. ಭೂತದ ವೇಷದಲ್ಲಿ ಪರವ ಮೈಂದ ಎದ್ದು ನಿಲ್ಲುತ್ತಾನೆ. ಆಗ ಬೊಟ್ಟಿಪ್ಪಾಡಿ ಬಲ್ಲಾಳನಿಗೆ ಮುಗುಳುನಗು ಬರುತ್ತದೆ. ಭೂತದ ವೇಷಹಾಕಿದ ಪರವ ಮೈಂದನು ಕುಣಿಯುತ್ತಾ ಕುಣಿಯುತ್ತಾ ಬರುವಾಗ ಬಲ್ಲಾಳನು ಗಿಳಿ ಬಾಗಿಲಿನಲ್ಲಿ ಜೋಡು ನಳಿಗೆಯ ಕೋವಿಯನ್ನು ಇಟ್ಟು, ಗುಂಡು ಹೊಡೆದು ಪರವನನ್ನು ಕೊಲ್ಲುತ್ತಾನೆ. ಆಗ ಪರತಿಮಂಗಣೆ ಬೊಬ್ಬೆ ಹಾಕುತ್ತಾಳೆ-'ಅಯ್ಯಯ್ಯಾ ಬಲ್ಲಾಳರೇ, ನನ್ನ ಗಂಡನನ್ನು ಕೊಂದಿರಲ್ಲ' ಎನ್ನುತ್ತಾಳೆ. ಆಗ ಬಲ್ಲಾಳನು 'ಪರತಿಮಂಗಣೆ, ನಿನ್ನ ಗಂಡನು ಸತ್ತರೂ ನನಗೆ ಇರುವ ಸಾವಿರ ಮುಡಿಯ ಅಕ್ಕಿಯ ಆಸ್ತಿ ನಿನಗೆ ಕೊಡುತ್ತೇನೆ, ಹೆದರಬೇಡ" ಎನ್ನುತ್ತಾನೆ. ಆಗ ಪರತಿ ಮಂಗಣೆಯು 'ಬಲ್ಲಾಳರೆ- ನೀವೇನೂ ಹೆದರಬೇಡಿ. ನಾವು ಇವನ ಚಿತೆಯನ್ನು ಬಾಕಿತಿಮಾರುಗದ್ದೆಯಲ್ಲಿ ಸಿದ್ಧಮಾಡುವ' ಎನ್ನುತ್ತಾಳೆ. 'ಮಾವಿನ ಮತ್ತು ಹಲಸಿನ ಮರಗಳನ್ನು ಕಡಿದು ಚಿತೆಯನ್ನು ಮಾಡಬೇಕು. ಎನ್ನುತ್ತಾಳೆ. ಅದೇರೀತಿ ಚಿತೆಯನ್ನು ಸಿದ್ಧಮಾಡುತ್ತಾನೆ ಬಲ್ಲಾಳ. ಆಗ ಪರತಿ ಮಂಗಣೆ ಬಲ್ಲಾಳನಲ್ಲಿ "ಬಿಸಿನೀರು ಕಾಯಿಸಿರಿ. ನನ್ನ ಗಂಡನನ್ನ ವಿಾಯಿಸಬೇಕು" ಎನ್ನುತ್ತಾಳೆ. ಬಲ್ಲಾಳನು ಬಿಸಿನೀರು ಕಾಯಿಸು ತ್ತಾನೆ. ಆಗ ಪರತಿ ಮಂಗಣೆ ಬಲ್ಲಾಳರೆ ನನ್ನ ಗಂಡನ ತಲೆಯ ಬದಿಯಲ್ಲಿ ನಾನು ಹಿಡಿಯುತ್ತಾನೆ, ಕಾಲಿನ ಬದಿಯಲ್ಲಿ ನೀವು ಹಿಡಿಯಿರಿ' ಸ್ನಾನ ಮಾಡಿಸುವ ಎನ್ನುತ್ತಾಳೆ. ಹಾಗೆಯೇ ಹಿಡಿದು ಸ್ನಾನಮಾಡಿಸುತ್ತಾರೆ. ಆಗ ಪರತಿಮಂಗಣೆ "ಬಲ್ಲಾಳರೆ ನಿಮ್ಮ ಪೆಟ್ಟಿಗೆಯ ಬಾಯಿ ತೆರೆಯಿರಿ. ನೀವು ಉಡುವ ಪಟ್ಟೆವಸ್ತ್ರವನು ತನ್ನಿರಿ. ನೀವು ಕಟ್ಟುವ ರುಮಾಲನ್ನು ತನ್ನಿರಿ, ನಿಮ್ಮ ಬೆಳ್ಳಿಕಟ್ಟಿನ ಚೂರಿ, ಬೆಳ್ಳಿ ಕಟ್ಟಿನ ಬೆತ್ತಗಳನ್ನು ತನ್ನಿರಿ, ಇವುಗಳನ್ನೆಲ್ಲಾ ನನ್ನ ಪರವನ ಕೈಯಲ್ಲಿ ಇಡಿರಿ' ಬಲ್ಲಾಳನು ಓಡುತ್ತಾ ಬೀಳುತ್ತಾ ಹೋಗಿ ಅವುಗಳನ್ನೆಲ್ಲಾ ತಂದನು. ಪರವನ ಹೆಣಕ್ಕೆ ಪಟ್ಟೆಯ ವಸ್ತ್ರವನ್ನು ಉಡಿಸಿ, ಮುಂಡಾಸನ್ನು ಕಟ್ಟಿದನು. 'ಇನ್ನು ಏನು ನೋಡು

ತ್ತೀಯು ಪರತಿ ಮಂಗಣೆ" ಎಂದು ಕೇಳುತ್ತಾನೆ ಬಲ್ಲಾಳ. 'ಚಿತೆಗೆ ನಿಮ್ಮ ಅಟ್ಟದಲ್ಲಿರುವ ಒಣ ತೆಂಗಿನಕಾಯಿಯನ್ನು ಹಾಕಬೇಕು' ಎನ್ನುತ್ತಾಳೆ ಪರತಿ ಮಂಗಣೆ. ಓಡುತ್ತಾ ಬೀಳುತ್ತಾ ಹೋದ ಬಲ್ಲಾಳನು ಒಣ ತೆಂಗಿನ ಕಾಯಿಯನ್ನು ತಂದು ಚಿತೆಗೆ ಹಾಕುತ್ತಾನೆ. "ಇಷ್ಟೆಲ್ಲ ಆಯಿತಲ್ಲ ಪರತಿ ಮಂಗಣೆ, ಇನ್ನು ಹಣವನ್ನು ಚಿತೆಯಲ್ಲಿ ಕೊಂಡುಹೋಗಿ ಇಡುವ" ಎನ್ನುತ್ತಾನೆ ಬಲ್ಲಾಳ. ಆಗ ಪರತಿ ಮಂಗಣೆ–"ನಿಮ್ಮ ಹೆಂಡತಿ ಅಲಂಕರಿಸುವ ಸೀರೆ, ರವಕೆ, ಕರಿಮಣಿ, ಮೂಗುತಿ ಇವುಗಳನ್ನೆಲ್ಲ ತನ್ನಿರಿ, ಇವುಗಳಿಂದ ನಾನು ಅಲಂಕಾರ ಮಾಡಿಕೊಳ್ಳಬೇಕು. ನನ್ನ ಪರವನಿಗೆ ಅಲಂಕಾರವಾದ ಹಾಗೆ ನನಗೂ ಆಗಬೇಕು" ಎಂದು ಬಲ್ಲಾಳನಲ್ಲಿ ಹೇಳುತ್ತಾಳೆ. ಬಲ್ಲಾಳನು ಓಡುತ್ತಾ ಬೀಳುತ್ತಾ ಹೋಗಿ ತನ್ನ ಹೆಂಡತಿಯ ಅಲಂಕಾರದ ಸ್ವತ್ತುಗಳನ್ನೆಲ್ಲಾ ತಂದು ಪರತಿಗೆ ಕೊಡುತ್ತಾನೆ. ಅವುಗಳಿಂದ ಪರತಿ ಮಂಗಣೆ ದುಃಖದ ಅಲಂಕಾರವನ್ನು ಮಾಡಿಕೊಳ್ಳುತ್ತಾಳೆ. 'ಇನ್ನು' ಏನು ನೋಡುವುದು ಪರತಿ ಮಂಗಣೆ, ಹಣವನ್ನು ಕೊಂಡು ಹೋಗುವ ಎನ್ನುತ್ತಾನೆ ಬಲ್ಲಾಳ. ಪರತಿ ಮಡಿಲಿನಲ್ಲಿ ಬೆಂಕಿಪೆಟ್ಟಿಗೆಯನ್ನು ಇಟ್ಟುಕೊಂಡಳು. 'ಕಾಲಿನಲ್ಲಿ ನೀವು ಹಿಡಿಯಿರಿ, ತಲೆಯಲ್ಲಿ ನಾನು ಹಿಡಿಯುತ್ತೇನೆ' ಎನ್ನುತ್ತಾಳೆ ಬಲ್ಲಾಳನಲ್ಲಿ. ಹಾಗೆಯೇ ಕೊಂಡು ಹೋಗಿ ಚಿತೆಗೆ ಮೂರು ಸುತ್ತು ಬಂದು ಪರವಮ್ಲೇದನ ಹಣವನ್ನು ಚಿತೆಯ ಮೇಲೆ ಇಡುತ್ತಾರೆ. ಪರತಿ ಮಂಗಣೆ ಚಿತೆಗೆ ಮೂರು ಸುತ್ತು ಬಂದಳು. ಬೆಂಕಿಕಡ್ಡಿ ಗೀರಿ ಚಿತೆಗೆ ಬೆಂಕಿ ಕೊಟ್ಟಳು, ಅದು ಪೂರ್ತಿ ಬೆಂಕಿ ಹಿಡಿದು ಉರಿಯಲು ತೊಡಗಿದಾಗ, 'ನನ್ನ ಗಂಡ ಹೋದರಲ್ಲ, ಇನ್ನು ನಾನೇಕೆ ಇರಬೇಕು?' ಎಂದು ಹೇಳಿ ಚಿತೆಯ ಬೆಂಕಿಗೆ ದಬಕ್ಕನೆ ಹಾರಿದಳು. ಅಷ್ಟರಲ್ಲಿ ಬೊಟ್ಟಿಪಾಡಿ ಬಲ್ಲಾಳನು ಕೊನೆಗೂ ಪರತಿ ಮಂಗಣೆ ತನಗೆ ಸಿಕ್ಕಲಿಲ್ಲವಲ್ಲ ಎಂದು ಬೆಂಕಿಯಲ್ಲಿ ಅವಳ ಸೌಂದರ್ಯವನ್ನು ನೋಡಿ ತಾನು ಚಿತೆಯ ಬೆಂಕಿಗೆ ಹಾರಿದನು.

ಭೂತ ಕಟ್ಟುವ ಪರವನೊಬ್ಬನ ಹೆಂಡತಿ ಅಂದರೆ ಪರತಿಯನ್ನು ಕಂಡು ಮೋಹಿಸಿದ ಬೊಟ್ಟಿಪಾಡಿ ಬಲ್ಲಾಳನು ಅವಳನ್ನು ಪಡೆಯುವುದಕ್ಕಾಗಿ ಭೂತ ಕಟ್ಟಿದ ಅವಳ ಗಂಡನನ್ನು ಗುಂಡಿಕ್ಕಿ ಕೊಲ್ಲುತ್ತಾನೆ. ಅವನ ಈ ವಂಚನೆಗೆ ಪ್ರತಿಯಾಗಿ ಪರತಿ ಮಂಗಣೆಯು ಅವನನ್ನು ಒಲಿದಂತೆ ನಟಿಸಿ ಅವನ ಎಲ್ಲ ಸಂಪತ್ತುಗಳನ್ನು ಬೆಂಕಿಗೆ ಹಾಕಿಸಿ, ಕೊನೆಗೆ ತಾನು ಬೆಂಕಿಗೆ ಹಾರಿ ಪ್ರತಿವಂಚನೆ ಮಾಡುತ್ತಾಳೆ. ತಾನು ಮೋಹಿಸಿದ ಹೆಣ್ಣು, ಸಂಪತ್ತು ಎಲ್ಲವನ್ನೂ ಕಳೆದುಕೊಂಡ ಬಲ್ಲಾಳನು ಬೆಂಕಿಗೆ ಹಾರಿ ಪ್ರಾಣ ಕಳೆದುಕೊಳ್ಳುವ ಮೂರನೆಯ ಮರಣದಿಂದ ಈ ದುರಂತ ವಸ್ತುಉಳ್ಳ ಪಾಡ್ದನ ಮುಕ್ತಾಯವಾಗುತ್ತದೆ. ತಂತ್ರದ ದೃಷ್ಟಿಯಿಂದ ಬಹಳ ವಿಶೇಷ ಗುಣವನ್ನು ಇಲ್ಲಿ ಗಮನಿಸಬಹುದು. ಹೊಲತಿ ಹೆಣ್ಣೊಬ್ಬಳು ಪ್ರತಿಷ್ಠಿತ ಬಲ್ಲಾಳನೊಬ್ಬನ ವಿರುದ್ಧ, ಅವನ ಕಾಮುಕ ದೃಷ್ಟಿಯನ್ನು ಎದುರಿಸಲಾರದೆ ಉಪಾಯದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗದೆ ಸಾವನ್ನಪ್ಪುತ್ತಾಳೆ. ಮಾನ ಕಾಪಾಡುವುದಕ್ಕಾಗಿ ಹೆಣ್ಣೊಬ್ಬಳು ಆತ್ಮಹತ್ಯೆ ಮಾಡಿಕೊಳ್ಳುವ ಘಟನೆಗಳು ಕಥನ ಕವನಗಳಲ್ಲಿ ಬೇಕಾದಷ್ಟು ಸಿಗುತ್ತವೆ. ಆದರೆ ತಾನು ಸಾಯುವ ಮೊದಲು ಅದಕ್ಕೆ ಕಾರಣನಾದ ಮತ್ತು ತನ್ನ ಗಂಡನ ಸಾವಿಗೆ ಕಾರಣನಾದ ವ್ಯಕ್ತಿಯೊಬ್ಬನನ್ನು ಜೀವದಲ್ಲಿ ಉಳಿದರೂ ನಿರ್ಗತಿಕನನ್ನಾಗಿ ಮಾಡಿ ಸಾಯಿಸಬೇಕು ಎನ್ನುವ ಛಲ ಪರತಿ ಮಂಗಣೆಯ ವೈಶಿಷ್ಟ್ಯ. ಗಂಡನ ಮೇಲೆ ಅಪಾರವಾದ ಪ್ರೇಮ ಅವಳಿಗಿತ್ತು ಎನ್ನುವುದು, ಗಂಡನಲ್ಲದೆ ಬೇರೆ ಯಾರಿಂದಲೂ ಎಲೆ ಅಡಿಕೆ ತೆಗೆದುಕೊಳ್ಳಲಾರೆ ಎಂದು ಬಲ್ಲಾಳನಲ್ಲಿ ಹೇಳುವಲ್ಲಿ ಮತ್ತು ಅನಂತರ ಸಂದರ್ಭಗಳಲ್ಲಿ ವ್ಯಕ್ತವಾಗುತ್ತದೆ. ತನ್ನ ಗಂಡನನ್ನು ಕೊಲ್ಲುವುದಕ್ಕಾಗಿಯೇ ಭೂತದ ನೇಮದ ನೆಪವನ್ನು ಬಲ್ಲಾಳರು ಹೇಳಿರುವುದು ಎಂದು ಪರತಿಮಂಗಣೆಗೆ ಗೊತ್ತಿರುತ್ತದೆ. ಬಲ್ಲಾಳ ಹೋದ ಮೇಲೆ ಗಂಡನ ಹತ್ತಿರ ಕುಳಿತು ದುಃಖಿಸುವಾಗ, ಭೂತ ಕಟ್ಟಲು ಹೋಗುವ ಮೊದಲು ತಂದೆತಾಯಿಯರ ಬಳಿಗೆ ಹೋಗಿ ಬೀಳ್ಕೊಂಡು ಬರುವಾಗ, ಈ ಅಂಶ ಸ್ಪಷ್ಟವಾಗುತ್ತದೆ. ಈ ದೃಷ್ಟಿಯಿಂದ ತನ್ನ ಗಂಡನ ಮರಣದ ಬಳಿಕ ತಾನು ಏನು ಮಾಡಬೇಕು ಎನ್ನುವುದನ್ನು ಪರತಿ ಮಂಗಣೆ ಮೊದಲೇ ನಿಶ್ಚಯ ಮಾಡಿಕೊಂಡಿದ್ದಳು ಎನ್ನುವುದು ಗೊತ್ತಾಗುತ್ತದೆ. ಗಂಡನನ್ನು ಕೊಂದ ಕೂಡಲೇ ಒಮ್ಮೆ ಬೊಬ್ಬಿಟ್ಟರೂ ಮುಂದೆ ಬಲ್ಲಾಳನಲ್ಲಿ ಹೆದರಬೇಡಿ ಎಂದು ಹೇಳಿ

ಅವನನ್ನು ಬಲಿ ಹಾಕುವ ಅವಳ ಈ ಸಿದ್ಧತೆಯು ಪರಿಚಯವಾಗುತ್ತದೆ. ಬೊಟ್ಟಿಪ್ಪಾಡಿ ಬಲ್ಲಾಳನು ತನ್ನ ಕಾಮುಕತನದಿಂದ ತನ್ನ ದುರಂತಕ್ಕೆ ಅಷ್ಟೇ ಅಲ್ಲ, ಇಬ್ಬರು ಬಡವ ಪರವ ಪರತಿಯರ ಸಾವಿಗೂ ಕಾರಣನಾಗು ತ್ತಾನೆ. ಅವನ ಹೆಣ್ಣಿನ ಮೋಹ ಎಷ್ಟು ಇತ್ತು ಎನ್ನುವುದನ್ನು ಪಾಡ್ದನದ ಉತ್ತರಾರ್ಧದಲ್ಲಿ ಸಮರ್ಪಕವಾಗಿ ಚಿತ್ರಿಸಲಾಗಿದೆ. ಪರವನನ್ನು ಕೊಂದಬಳಿಕ ಅವನ ಸಂಸ್ಕಾರಕ್ಕಾಗಿ ಪರತಿ ಮಂಗಣೆ ಏನು ಕೇಳಿದರೂ ಅದನ್ನು ತಡಮಾಡದೆ ಓಡುತ್ತಾ ಬೀಳುತ್ತಾ ಹೋಗಿ ಬಲ್ಲಾಳ ತಂದು ಕೊಡುತ್ತಿದ್ದನಂತೆ. ತನ್ನ ಹೆಂಡತಿಯ ಸೀರೆ, ರವಕೆ, ಕರಿಮಣಿ, ಮೂಗುತಿಗಳನ್ನು ಕೂಡಾ ಪರತಿಗೆ ತಂದುಕೊಟ್ಟ ಎನ್ನುವಲ್ಲಿ ಅವನ ಈ ನಡತೆಯ ಪರಾ ಕಾಷ್ಠೆಯನ್ನು ನೋಡಬಹುದು. ಆದರೆ ಇವುಗಳಿಂದ ಪರತಿ ಮಂಗಣೆ ಮಾಡಿಕೊಂಡ ಅಲಂಕಾರ ದುಃಖದ ಅಲಂಕಾರ (ದು:ಖೊಐತ್ರೊ). ಈ 'ದುಃಖೊ ಐತ್ರೊ' ಎನ್ನುವುದು ಸಾಮಾನ್ಯವಾಗಿ ವ್ಯಕ್ತಿಯೊಬ್ಬರು ತೀರಿ ಕೊಂಡಾಗ ಸಂಬಂಧಿಕರು ಮಾಡುವ ಅಲಂಕಾರ. ಹೆಣದ ತಲೆಯ ಹತ್ತಿರ ಪರತಿ ಹಿಡಿದು, ಕಾಲಿನ ಹತ್ತಿರ ಬಲ್ಲಾಳ ಹಿಡಿಯುವ ಸಂದರ್ಭ ಬಹಳ ಮಾರ್ಮಿಕವಾಗಿದೆ. ಬಲ್ಲಾಳನ ನೈತಿಕ ಅಧೋಗತಿಯನ್ನು ಇದು ಸೂಚಿಸುತ್ತದೆ.

ಸಾಂಸ್ಕೃತಿಕವಾಗಿ 'ಪರವರು' ಅಂದರೆ ಭೂತಕಟ್ಟುವ ಹೊಲೆಯರ ಒಂದು ವರ್ಗದವರು ಇಲ್ಲಿ ಕಾಣಿಸುತ್ತಾರೆ. ಭೂತ ಕಟ್ಟುವ ಕ್ರಮದ ವಿವರಣೆ ಇಲ್ಲಿ ಸಿಗುತ್ತದೆ. ಹಾಳೆಯಿಂದ ಅಣಿ ಸಿದ್ಧಮಾಡುವುದು, ಕೇಪುಳ ಹೂವಿನಿಂದ ಮಾಲೆ ಮಾಡುವುದು, ಭೂತ ಕಟ್ಟುವ ಮೊದಲು ಒಡೆಯನಿಂದ ಬೂಳ್ಯ (ವೀಳ್ಯ)ತೆಗೆದು ಕೊಂಡು ಸ್ನಾನಕ್ಕೆ ಹೋಗುವುದು, ಮುಖಕ್ಕೆ ಅರದಾಳ ಹಚ್ಚುವುದು, ಕಾಲಿಗೆ ಗಗ್ಗರ ಕಟ್ಟುವುದು, ಅಣಿ ಕಟ್ಟುವುದು, ಪರತಿ ತೆಂಬರೆ ಬಾರಿಸುವುದು ಮುಂತಾದ ವಿವರಗಳು ಹಂತ ಹಂತವಾಗಿ ಇಲ್ಲಿ ಬಂದಿವೆ. ಭೂತದ ಆರಾಧನೆಗೆ ಸಂಬಂಧಿಸಿದ ವಿವರಗಳು ಇಷ್ಟು ಇದ್ದರೂ ಇದು ಲೌಕಿಕ ವಸ್ತುವುಳ್ಳ ಪಾಡ್ದನ.

ರಚನೆಯ ದೃಷ್ಟಿಯಿಂದ ಈ ಪಾಡ್ದನವು ಉಳಿದ ಎಲ್ಲ ಪಾಡ್ದನಕ್ಕಿಂತ ಭಿನ್ನವಾಗಿದೆ. ಇಲ್ಲಿ ಉಳಿದವು ಗಳಿಗಿಂತ ಹೆಚ್ಚು ನಿಯತವಾದ "ಲಯ" ಕಾಣಿಸುತ್ತದೆ. ಸುಮಾರಾಗಿ ಸಮಾನ ದೀರ್ಘತೆ ಇರುವ ಸಾಲುಗಳು (ವಾಕ್ಯಗಳು) ಒಂದರ ಬಳಿಕ ಒಂದಾಗಿ ಬರುತ್ತವೆ. ಪದ್ಯದ ಲಯ ಛಂದಸ್ಸು ಹೆಚ್ಚು ಸಮರ್ಪಕವಾಗಿ ಈ ಪಾಡ್ದನದಲ್ಲಿ ಸಿಗುತ್ತದೆ. ಸಾಮಾನ್ಯವಾಗಿ ವಿಷ್ಣುಗಣದ ನಾಲ್ಕು ಗಣಗಳು ಪ್ರತೀಸಾಲಿನಲ್ಲಿ ಸಾಧಾರಣವಾಗಿ ಸಿಗುತ್ತವೆ. ಹೆಚ್ಚಿನ ಪಾಡ್ದನಗಳಂತೆ ಉದ್ದಕ್ಕೆ ಗದ್ಯದಂತೆ ಹೇಳಿಕೊಂಡು ಹೋಗುವ ಶೈಲಿ ಇಲ್ಲ. ಬದಲಾಗಿ ಪದ್ಯರೂಪದಲ್ಲಿ ಲಯಬದ್ಧವಾದ ತುಂಡು ತುಂಡು ಸಾಲುಗಳಿವೆ. ಭಾಷೆಯ ದೃಷ್ಟಿಯಿಂದಲೂ ಭೂತದ ಪಾಡ್ದನಕಿಂತ ಭಿನ್ನವಾಗಿ ಹೆಚ್ಚು ಸಹಜವಾದ ಭಾಷಾ ಸ್ವರೂಪವಿದೆ. ಈ ಪಾಡ್ದನವನ್ನು ನೇಜಿ ತೆಗೆಯುವಾಗ ಹಾಡುತ್ತಾರೆ.

ಈ ಪಾಡ್ದನದ ರಚನೆಯಲ್ಲಿ Ballad ನ ಗುಣಗಳು ಚೆನ್ನಾಗಿ ಕಾಣಿಸುತ್ತವೆ. ಕಥೆಯು ಕ್ರಿಯೆ ಸಂಭಾಷ ಣೆಗಳ ಮೂಲಕ ನಾಟಕೀಯವಾಗಿ ಘಟನೆಯಿಂದ ಘಟನೆಗೆ ಜಿಗಿಯುತ್ತಾ ಹೋಗುವುದನ್ನು ಕಾಣಬಹುದು. Ballad ಗೆ ಇರುವ ಪುನರಾವರ್ತನೆಯ ಗುಣವು ಇಲ್ಲಿ ಆಕರ್ಷಕವಾದ ರೀತಿಯಲ್ಲಿ ಸಿಗುತ್ತದೆ. ಒಂದು ಪ್ರಶ್ನೆ ಅದಕ್ಕೆ ಒಂದು ಉತ್ತರ. ಪ್ರಶ್ನೆಯಲ್ಲಿ ಕಾಣಿಸುವ ಕೆಲವು ಪದಗಳು ಉತ್ತರದಲ್ಲಿಯೂ ಕಾಣಿಸುತ್ತವೆ. ಪರವ ಮತ್ತು ಪರತಿಯರ ಸಂಭಾಷಣೆ, ಬಲ್ಲಾಳ ಮತ್ತು ಪರತಿಯರ ಸಂಭಾಷಣೆಗಳನ್ನು ಈ ದೃಷ್ಟಿಯಲ್ಲಿ ಗಮನಿಸಬಹುದು.

ಸಾಮಾಜಿಕವಾಗಿ ಈ ಪಾಡ್ದನವು ಸಮಾಜದ ತೀರ ಕೆಳಗಿನ ವರ್ಗವಾದ ಹೊಲೆಯರ ಬದುಕಿನ ವಿಷಮತೆ ಯನ್ನು ತಿಳಿಸುತ್ತದೆ. ಬಲ್ಲಾಳರಂತಹ ಪ್ರತಿಷ್ಠಿತ ಒಡೆಯರು ತಮ್ಮ ವೈಯಕ್ತಿಕ ಆಸೆಗಳ ಈಡೇರಿಕೆಗಾಗಿ ಹೇಗೆ

ಬತ ಹೊಲೆಯರನ್ನು ಗುಂಡಿಕ್ಕಿ ಕೊಂದು ಬಲಿ ತೆಗೆಯುತ್ತಾರೆ ಎನ್ನುವುದು ಇಲ್ಲಿ ಗೊತ್ತಾಗುತ್ತದೆ. ವಾಸ್ತವಿಕ ವಾಗಿ ನಡೆದಿರಬಹುದಾದ ಇಂತಹ ಒಂದು ಘಟನೆಯನ್ನು ಹೊಲೆಯ ವರ್ಗದವನೊಬ್ಬನು ಪಾಡ್ದನದ ರೂಪಕ್ಕೆ ತಿರುಗಿಸಿರಬಹುದು. ಈ ಪಾಡ್ದನದ ಭಾಷೆಯು ಹೊಲೆಯರು ಆಡುವ ತುಳು ಭಾಷೆಯನ್ನು ಹೋಲುತ್ತದೆ. ಪರವ ಮತ್ತು ಪರತಿಯರ ಮಾತು ಕತೆಗಳು ತೀರ ಸಹಜವಾಗಿ ಆ ವರ್ಗದವರು ಮಾತನಾಡುವಂತೆಯೇ ಇವೆ. ಬೊಟ್ಟಿಪ್ಪಾಡಿ ಬಲ್ಲಾಳನನ್ನು ಪಾಡ್ದನದ ಉದ್ದಕ್ಕೂ ಬೊಟ್ಟಿಪ್ಪಾಡಿ ಬಲ್ಲಾಳರು ಎಂದು. ಬಹುವಚನದಲ್ಲಿ ಹೊಲೆಯನೊಬ್ಬನು ಬಲ್ಲಾಳನನ್ನು ಕಲ್ಪಿಸುವ ರೀತಿಯಲ್ಲಿ ಸಂಬೋಧಿಸಲಾಗಿದೆ. ಈರೀತಿ ವಸ್ತು, ಶೈಲಿ, ತಂತ್ರ, ಸಂಸ್ಕೃತಿ, ಸಾಮಾಜಿಕ ಅಂಶ—ಈ ದೃಷ್ಟಿಗಳಿಂದ 'ಪರತಿ ಮಂಗಣೆ' ಬಹಳ ಮುಖ್ಯವಾದ ಒಂದು ಪಾಡ್ದನ.

## 4. ಮತ್ತಾಡಿ ಬಳ್ಳು

"ಪರತಿ ಮಂಗಣೆ" ಪಾಡ್ದನವು ಕಾಮುಕನೊಬ್ಬನ ಕಾರಣದಿಂದ ಆತನ ಮತ್ತು ಇತರ ಇಬ್ಬರು ಬಡ ಪಾಯಿಗಳ ದುರಂತವನ್ನು ಚಿತ್ರಿಸಿದರೆ, "ಮತ್ತಾಡಿ ಬಳ್ಳು" ಪಾಡ್ದನವು ಕಾಮುಕನೊಬ್ಬನ ದುರಂತವನ್ನು ಚಿತ್ರಿಸುತ್ತದೆ. ಹೆಣ್ಣಿಗೆ ಮರುಳಾದ ಒಬ್ಬ ಗಂಡಸು ಆ ಹೆಣ್ಣಿನ ಜಾಣತನದ ತಂತ್ರದಿಂದ ದುರಂತಕ್ಕೆ ಈಡಾಗುವುದು ಈ ಪಾಡ್ದನದ ವಸ್ತು. 'ಮತ್ತಾಡಿ ಬಳ್ಳು' ಮೀನಿಗೆ ಗಾಳ ಹಾಕಲು ಬಂದವನು ನೀರು ಕೊಂಡು ಹೋಗಲು ಬಂದ 'ಕಳಲೆದಿ' ಹೆಣ್ಣಿಗೆ ಗಾಳ ಹಾಕಲು ನೋಡುತ್ತಾನೆ. ಅವನ ಕಾಮುಕತನವನ್ನು ಕಂಡ ಆ ಹೆಣ್ಣು ಇವನನ್ನು ವಂಚನೆಯ ಬಲೆಗೆ ಬೀಳಿಸುತ್ತಾಳೆ. 'ಕಳಲೆದಿ' ಯು ನೀರಿಗೆ ಇಳಿಯುವಾಗ ಸೀರೆಯನ್ನು ಎತ್ತಿಕೊಂಡು ಇಳಿಯುತ್ತಾಳೆ. ಆಗ ಮತ್ತಾಡಿಬಳ್ಳುವಿನ ಸ್ವಭಾವವನ್ನು ಪಾಡ್ದನದಲ್ಲಿ ಚೆನ್ನಾಗಿ ಹೇಳಲಾಗಿದೆ—"ಓರೆ ಕಣ್ಣಿಡ್ ತೂಯೆ 'ಮತ್ತಾಡಿ ಬಳ್ಳು' ಮದುರು ತೆಲಿತ್ತೊಂಡೆ. ಮರ್ಲೆನಲಿಕೆನಲಿತೊಂಡೆ" (ಓರೆಕಣ್ಣಿನಲ್ಲಿ ನೋಡಿದ ಮತ್ತಾಡಿ ಬಳ್ಳು ಮುಗುಳು ನಕ್ಕ, ಹುಚ್ಚು ಕುಣಿತ ಕುಣಿದ). ಇವನ ಕಾಮುಕತನವನ್ನು ಆ ಹೆಣ್ಣು ಇವನನ್ನು ಶಿಕ್ಷಿಸುವುದಕ್ಕಾಗಿ ಇವನ ಉದ್ರೇಕವನ್ನು ಇನ್ನೂ ಹೆಚ್ಚಿಸುತ್ತಾಳೆ. ಏನು ಕಾರಣದಿಂದ ನೀನು ನನ್ನನ್ನು ನೋಡಿ ಮರುಳಾಗಿದ್ದಿ ಎಂದು ಕೇಳುತ್ತಾಳೆ. ಆಗ ಮತ್ತಾಡಿಬಳ್ಳು ಹೇಳುವ ಮಾತುಗಳು ಅವನ ಕಾಮುಕ ಪ್ರವೃತ್ತಿಯ ಅತಿಶಯವನ್ನು ಹೇಳುತ್ತವೆ—"ಈ ತುಡೆನೆ ತೂನಗ ಮನೆ ಮರ್ಲೆಂಡುಯೇ, ಮೋನೆ ತೂನಗ ಮೈ ಮರ್ಲೆಂಡುಯೇ, ಅಚಲ ಅಪುಂಡು, ಎಂಕೆ ಚಂಚಲ ಆಪುಂಡು, ಈರೆನ ಕಳಲೆರೆ ಓಡೆಗೆ ಪೋತೆರ್" (ಈ ತೊಡೆಯನ್ನು ನೋಡಿದಾಗ ಮನಸ್ಸು ಹುಚ್ಚಾಗುತ್ತದೆ. ಮುಖ ನೋಡಿದಾಗ ಮೈ ಮರುಳಾಗುತ್ತದೆ. ಅಚಲ ವಾಗಿರುವುದು ನನಗೆ ಚಂಚಲವಾಗುತ್ತದೆ. ನಿಮ್ಮ ಗಂಡ ಎಲ್ಲಿಗೆ ಹೋಗಿದ್ದಾರೆ?) "ಬಳ್ಳು"ವಿನ ಲೈಂಗಿಕ ಆಸೆಗೆ ಪಾಠ ಕಲಿಸಲು ಕಳೆಲೆದಿ ಅವನನ್ನು ಒಲಿಸಿದಂತೆ ನಟಿಸಿ ಮನೆಗೆ ಕರೆದುಕೊಂಡು ಬರುತ್ತಾಳೆ. ಅವಳ ಮನೆಗೆ ಬಂದ 'ಮತ್ತಾಡಿಬಳ್ಳು'ವು ಅಲ್ಲಿ ಕಳಲೆದಿಯ ಗಂಡ 'ಐತಮುಗೇರ' ಇಲ್ಲವೆಂದು ತಿಳಿದು ಸಂತೋಷದಿಂದ ಚಾಪೆಯಲ್ಲಿ ಹೊರಳಾಡುತ್ತಾನೆ. ಆದರೆ ಮೊದಲೇ ಬಳ್ಳುವಿನ ಈ ಕಾಮುಕ ಸ್ವಭಾವವನ್ನು ತಿಳಿದುಕೊಂಡ' ಕಳಲೆದಿಯ ಗಂಡನು ಬಳ್ಳುವನ್ನು ಶಿಕ್ಷಿಸಲು ಮನೆಯ ಅಟ್ಟದಲ್ಲಿ ಬಿಲ್ಲುಬಾಣ ಹಿಡಿದುಕೊಂಡು ಸಿದ್ಧನಾಗಿರುತ್ತಾನೆ. ಅವನು ಅಟ್ಟದ ಮೇಲಿನಿಂದ ಬಳ್ಳುವಿಗೆ ಬಾಣ ಪ್ರಯೋಗಮಾಡಿದ ರೀತಿಯನ್ನು ಪಾಡ್ದನದಲ್ಲಿ ಹೀಗೆ ಹೇಳಲಾಗಿದೆ—"ಅತೆ ಪೊರ್ತುಗು ರಪಕ್ಕ ದೀಯೆನೆ, ಬಿರುಪಗರಿ ಬುಡಿಯೆನೆ ಐತ ಮುಗೇರೆ" (ಅಷ್ಟರಲ್ಲಿ ರಪಕ್ಕ ಎಂದು ಇಟ್ಟನಲ್ಲ, ಬಿಲ್ಲುಬಾಣ ಬಿಟ್ಟನಲ್ಲಿ ಐತಮುಗೇರ). ಬಳ್ಳುವಿನ ಕರುಳು ಹೊರಗೆ ಬಂದು ಅವನು ಹೊರಳುವಾಗ ಐತ ಮುಗೇರ ತಮಾಷೆ ಮಾಡುತ್ತಾನೆ. ಮನೆಗೆ ಬಂದ ಬಳ್ಳುವು ಕರುಳು ಕಳಚಿ ಬಿದ್ದು

ಸಾಯುತ್ತಾನೆ. ಹಾಸ್ಯ, ವ್ಯಂಗ್ಯದ ರೀತಿಯಲ್ಲಿ ಆರಂಭವಾಗಿ ಮುಂದುವರಿದ ಪಾಡ್ದನವು ಬಳ್ಳುವಿನ ದುರಂತದಲ್ಲಿ ಕೊನೆಯಾಗುತ್ತದೆ. ಪರಸ್ತ್ರೀಯನ್ನು ಮೋಹಿಸಿದವನಿಗೆ ದುರಂತ ಖಂಡಿತ ಎನ್ನುವ ನೀತಿ ಮಾತನ್ನು ಕತೆಯೊಂದರ ಮೂಲಕ ಪಾಡ್ದನದಲ್ಲಿ ಹೇಳಲಾಗಿದೆ. ಇಂತಹ ಹೆಣ್ಣನ್ನು ಮೋಹಿಸಿದ ಕಾಮುಕನಿಗೆ ಆ ಹೆಣ್ಣೇ ಅಪಾಯದಿಂದ ಶಿಕ್ಷೆಕೊಡುವ ತಂತ್ರವನ್ನು ಇಲ್ಲಿ ಕಾಣಬಹುದು. ಈ ದೃಷ್ಟಿಯಿಂದ ಪಾಡ್ದನದ ಆಶಯವು 'ಪರತಿ ಮಂಗಣೆ' ಪಾಡ್ದನದ ಆಶಯಕ್ಕೆ ಸಮಾನವಾಗಿದೆ. ಆದರೆ ಅಲ್ಲಿ ಹೊಲತಿ ಹೆಣ್ಣೊಬ್ಬಳನ್ನು ಮೇಲುವರ್ಗದ ಬಲ್ಲಾಳನು ಕಾಮಿಸುತ್ತಾನೆ. ಇಲ್ಲಿ ದೊರೆಯ ವರ್ಗದ ಮುಗೇರ ಹೆಣ್ಣೊಬ್ಬಳನ್ನು ಹೊಲೆಯ ವರ್ಗದವನೇ ಆದ ತರುಣ ಬಳ್ಳುವು ಕಾಮಿಸುತ್ತಾನೆ. ಇಲ್ಲಿ ವರ್ಗ ಅಂತರದ ಸಂಘರ್ಷವೇನೂ ಇರದೆ, ಮನುಷ್ಯನ ವೈಯಕ್ತಿಕವಾದ ಮೂಲಭೂತ ಕಾಮಭಾವನೆಯ ಅಭಿವ್ಯಕ್ತಿ ಇದೆ. ಮುಗೇರ ಗಂಡು 'ಐತ' ಬಿಲ್ಲು ಬಾಣಗಳ ಮೂಲಕ 'ಬಳ್ಳು'ವನ್ನು ಕೆಡಹುತ್ತಾನೆ. ಮುಗೇರರು ಬಿಲ್ಲು ಬಾಣ ಹಿಡಿದ ವರ್ಗ ಎಂಬುದು "ಕೋಟಿ-ಚೆನ್ನಯ್ಯ" ಮುಂತಾದ ಪಾಡ್ದನಗಳಲ್ಲಿಯೂ ಸಿಗುತ್ತದೆ. ಅಂದರೆ ಆ ಕಾಲದ ಯುದ್ಧ ಪ್ರವೀಣ ಯೋಧ ಜನಾಂಗ ಆಗಿರಬಹುದು. ಭಾಷೆ, ಶೈಲಿಯ ದೃಷ್ಟಿಯಿಂದ ವ್ಯಂಗ್ಯವನ್ನು ಚೆನ್ನಾಗಿ ಈ ಪಾಡ್ದನ ದುಡಿಸಿಕೊಂಡಿದೆ. 'ರಪಕ್ಕ ದೀಯೆನೆ' (ರಪಕ್ಕ ಇಟ್ಟನಲ್ಲ) ಎನ್ನುವಲ್ಲಿ 'ರಪಕ್ಕ' ಎನ್ನುವ ಅನುಕರಣ ಪದ, 'ದೀಯೆನೆ' (ಇಟ್ಟನಲ್ಲ) ಎನ್ನುವ ಪದಕ್ಕೆ ತುಳುಬಾಷೆಯಲ್ಲಿರುವ ವ್ಯಂಗ್ಯದ ಅರ್ಥ ಗಮನಾರ್ಹ. ನೀರಿನಲ್ಲಿ ಹೆಣ್ಣನ್ನು ನೋಡಿ ಕಾಮುಕನು ಕಾಮಿಸುವುದು, ಕೊನೆಗೆ ಬಲಿಯಾಗುವುದು–ಈ ದೃಷ್ಟಿಯಿಂದ ಈ ಪಾಡ್ದನವು ಆಲಿಭೂತದ ಪಾಡ್ದನವನ್ನು ಹೋಲುತ್ತದೆ.

## 5. ಬಾಲೆ ಚಂದ್ರಮು

ತಾಯಿಯ ಹರಕೆಯ ಕಾರಣವಾಗಿ ನೀರಿನ ಕಟ್ಟಡ (ಅಣೆಕಟ್ಟಿನ) ಹೊಂಡಕ್ಕೆ ಬೀಳಬೇಕಾದ ಹೆಣ್ಣೊಬ್ಬಳ ದುರಂತ ಕತೆಯ ಪಾಡ್ದನ 'ಬಾಲೆ ಚಂದ್ರಮು' ಭೂತಾರಾಧನೆಯ ಪಾಡ್ದನಗಳಲ್ಲಿ ಕಾಣಿಸುವಂತೆಯೇ ಹೇಳಿದ ಹರಕೆಯನ್ನು ತೀರಿಸಬೇಕಾದ ಅಗತ್ಯ ಮತ್ತು ಆದರಿಂದ ಆಗುವ ದುರಂತ ಈ ಪಾಡ್ದನದಲ್ಲಿ ಸಿಗುತ್ತದೆ. ಇದರ ಮುಖ್ಯ ಕಥಾರೂಪ ಈ ರೀತಿ ಇದೆ :

"ಸೂರಪ್ಪ ಮತ್ತು ದೇಯಿ ಮಾಡೆದಿ ಎಂಬ ದಂಪತಿಗಳಿಗೆ ಹದಿನಾರು ಮಂದಿ ಗಂಡು ಮಕ್ಕಳು. ಹೆಣ್ಣು ಮಗು ಆಗಬೇಕೆಂದು ದೇಯಿ ಮಾಡೆದಿ ಸೂರಲಾ ಕಟ್ಟಕ್ಕೆ (ನೀರಿನ ಚಿಕ್ಕ ಅಣೆಕಟ್ಟು) ಹೋದವಳು ಮಿಾನುಗಳಿಗೆ ಮಡಿಲಿನಿಂದ ಬೆಳ್ತಿಗೆ ಅಕ್ಕಿ ಹಾಕುತ್ತಾ ದೇವರಿಗೆ ಹರಕೆ ಹೇಳುತ್ತಾಳೆ ; 'ನನ್ನ ಗರ್ಭದಲ್ಲಿ ಹೆಣ್ಣು ಮಗು ಹುಟ್ಟಿದರೆ ಕಟ್ಟದ ಹೊಂಡಕ್ಕೆ ಅವಳನ್ನು ಹಾಕಿ ಮುಚ್ಚುತ್ತೇನೆ. ಗಂಡು ಮಗು ಹುಟ್ಟಿದರೆ ಕಟ್ಟಕ್ಕೆ ಮಣ್ಣು ಹೊರಿಸುತ್ತೇನೆ.' ದೇಯಿ ಮಾಡೆದಿ ಗರ್ಭ ಧರಿಸಿ ಹೆಣ್ಣು ಮಗು ಒಂದನ್ನು ಹೆರುತ್ತಾಳೆ. ಅದಕ್ಕೆ 'ಬಾಲೆ ಚಂದ್ರಮು'ಎಂದು ಹೆಸರಿಡುತ್ತಾಳೆ. ಒಂದು ದಿನ ಸೂರಪ್ಪನು ಮಗುವಿನ ಹುಟ್ಟಿದ ಲಕ್ಷಣ ಕೇಳಲು ಬಲ್ಮೆಯವರ (ಜ್ಯೋತಿಷ್ಯದವರು) ಬಳಿಗೆ ಹೋಗುತ್ತಾನೆ. ಅಲ್ಲಿ ಬಲ್ಮೆಯವರು ಮಗುವಿನ ಲಕ್ಷಣ ಹೇಳುವಾಗ ದೇಯಿ ಮಾಡೆದಿ ಕಟ್ಟದ ಬಳಿ ಹೇಳಿದ ಹರಕೆಯ ವಿಚಾರವನ್ನು ತಿಳಿಸುತ್ತಾರೆ. ತನ್ನ ಹೆಣ್ಣು ಮಗುವನ್ನು ಬಲಿಕೊಡಬೇಕಲ್ಲಾ ಎನ್ನುವ ದುಃಖದಿಂದ ಮನೆಗೆ ಬಂದ ಸೂರಪ್ಪನು ಹೆಂಡತಿಯಲ್ಲಿ ಈ ವಿಚಾರ ತಿಳಿಸುತ್ತಾನೆ. ತನ್ನ ಹರಕೆಯ ವಿಚಾರವನ್ನು ಮರತಿದ್ದ ದೇಯಿ ಮಾಡೆದಿ ಅದು ನೆನಪಾದಾಗ ಬಹಳ ದುಃಖಿಸುತ್ತಾಳೆ. 'ಬಾಲೆ ಚಂದ್ರಮು' ಕಟ್ಟದ ಹೊಂಡಕ್ಕೆ ಬಲಿಯಾಗಲು ಸಂತೋಷದಿಂದ ಒಪ್ಪಿಕೊಳ್ಳುತ್ತಾಳೆ. ಅಲಂಕಾರ ಮಾಡಿಕೊಂಡು ಹೊರಟ 'ಬಾಲೆ ಚಂದ್ರಮು' ತಾಯಿ ತಂದೆ ಅಣ್ಣಂದಿರ ಕಾಲುಹಿಡಿದು ಊರಿನವರಿಗೆ

ಕೈಮುಗಿದು ದೇವರನ್ನು ಸ್ಮರಿಸಿ, ಊರಿನ ಏಳಿಗೆಗಾಗಿ ಬಹಳ ಸಂತೋಷದಿಂದ ಕಟ್ಟದ ಹೊಂಡಕ್ಕೆ ಅಡ್ಡ ನಿಲ್ಲುತ್ತಾಳೆ. ಹೊಂಡವೇನೋ ಮುಚ್ಚುತ್ತದೆ. ಆದರೆ ಸೂರಪ್ಪ, ದೇಯಿ ಮಾಡೆದಿಗೆ ಹದಿನಾರು ಗಂಡು ಮಕ್ಕಳು ಮಾತ್ರ ಉಳಿಯುತ್ತಾರೆ."

ಈ ಪಾಡ್ದನ ಬಹುಮಟ್ಟಿಗೆ 'ಕೆರೆಗೆ ಹಾರ' ಎಂಬ ಜನಪ್ರಿಯ ಕಥನ ಕವನದ ಆಶಯವನ್ನು ಹೋಲುತ್ತದೆ. 'ಬಾಲೆ ಚಂದ್ರಮು' ಕಟ್ಟದ ಗುಂಡಿಯಲ್ಲಿ ಅಡ್ಡನಿಂತು ಊರಿನವರಿಗೆ ಸಹಾಯ ಮಾಡಿದಳು ಎನ್ನುವ ಮಾತು ಇದೆ. ಅಂದರೆ ಕಟ್ಟವನ್ನು ಮುಚ್ಚಿ ಅದರಲ್ಲಿ ನೀರು ನಿಲ್ಲುವಂತೆ ಮಾಡುವುದರ ಮೂಲಕ ಊರಿನ ಜನರಿಗೆ ಬೇಕಷ್ಟು ನೀರಿನ ಆಸರೆಯನ್ನು ಕೊಟ್ಟಿರಬಹುದು. ಈ ರೀತಿ ಸಾರ್ವಜನಿಕ ಹಿತಕ್ಕಾಗಿ ಹೆಣ್ಣೊಬ್ಬಳು ಬಲಿಯಾಗುವ ತ್ಯಾಗಸ್ವರೂಪದ ವಸ್ತು ಈ ಪಾಡ್ದನದಲ್ಲಿ ಇದೆ. ಆದರೆ ಈ ರೀತಿ ಬಲಿಯಾಗಲು ಅವಳ ತಾಯಿಯ ಹರಕೆ ಕಾರಣ. ಅಂದರೆ ತಾಯಿಯ ಹರಕೆಯು ಈಡೇರಿಕೆಗಾಗಿ ಅವಳ ಪ್ರಾಣ ತ್ಯಾಗವನ್ನು ಮಾಡಬೇಕಾಗುತ್ತದೆ ಎಂದು ಹೇಳಿರುವುದು 'ಕೆರೆಗೆ ಹಾರ' ಕಥನ ಕವನದಿಂದ 'ಬಾಲೆ ಚಂದ್ರಾಮು' ಪಾಡ್ದನವನ್ನು ಪ್ರತ್ಯೇಕಿಸುತ್ತದೆ.

ಸಾಂಸ್ಕೃತಿಕವಾಗಿಯೂ ಈ ಪಾಡ್ದನದಲ್ಲಿ ತುಳುನಾಡಿನ ಕೆಲವು ವೈಶಿಷ್ಟ್ಯಗಳು ಕಾಣಿಸುತ್ತವೆ. ಗರ್ಭಿಣಿ ಹೆಂಗಸು ನೀರಿನಲ್ಲಿರುವ ಮೀನುಗಳಿಗೆ ಬೆಳ್ತಿಗೆ ಅಕ್ಕಿಯನ್ನು ಚೆಲ್ಲುವುದು, ಆ ಅಕ್ಕಿಯು ಮೀನುಗಳ ಹೊಟ್ಟೆಯಲ್ಲಿ ಸೇರಿದಂತೆಯೇ ತನ್ನ ಹೊಟ್ಟೆಯಲ್ಲಿ ಸುಂದರವಾದ ಮಗು ಒಂದು ಬೆಳೆಯುವುದು-ಈ ನಂಬಿಕೆಯು ದೇಯಿ ಮಾಡೆದಿಯ ಸಂದರ್ಭದಲ್ಲಿ ಸಿಗುತ್ತದೆ. ಗರ್ಭಿಣಿ ಹೆಣ್ಣು ಹೆರುವ ಸಂದರ್ಭದ ಚಿತ್ರಣವು ಇಲ್ಲಿ ಇದೆ. "ನೇಲೆದ ಬಳ್ಳಿ ನೇಲ್ಯೆರೆ ವಾಡಿಯೆರ್" (ನೇತಾಡಲು ನೇತು ಹಗ್ಗವನ್ನು ಹಾಕಿದರು). ಗರ್ಭಿಣಿ ಹೆಂಗಸು ಹೆರುವ ವೇಳೆಗೆ ವಿಪರೀತವಾದ ನೋವನ್ನು ಅನುಭವಿಸುತ್ತಿರುವಾಗ, ಅದರಿಂದ ಹೊರಳಾಡುತ್ತಿರುವಾಗ ತಲೆಯ ಮೇಲ್ಗಡೆ ನೇತು ಹಾಕಿದ ಹಗ್ಗವನ್ನು ಎರಡು ಕೈಗಳಿಂದ ಗಟ್ಟಿಯಾಗಿ ಹಿಡಿದುಕೊಳ್ಳುತ್ತಾಳೆ. ಮಗುವಿಗೆ ಹೆಸರು ಇಡುವಾಗಲೂ "ಬಾಲೆ ಪುಣ್ಣಮೆದ ಚಂದ್ರಲೆಕ್ಕನೆ ಮಲ್ಲೆ ಆಪೊಡುಂದು" (ಮಗು ಹುಣ್ಣಿಮೆಯ ಚಂದ್ರನಂತೆ ಪ್ರವರ್ಧಮಾನವಾಗಿ ಬೆಳೆಯಬೇಕೆಂದು) 'ಬಾಲೆ ಚಂದ್ರಾಮು' ಎಂದು ಹೆಸರಿಡುತ್ತಾರೆ.

**ಸುಖಾಂತ ವಸ್ತುವುಳ್ಳ ಪಾಡ್ದನಗಳು**

ಲೌಕಿಕ ವಸ್ತುವುಳ್ಳ ಸುಖಾಂತ ಪಾಡ್ದನಗಳಲ್ಲಿ ಸುಖಾಂತ ವಸ್ತುವುಳ್ಳ ಪಾಡ್ದನಗಳು ಸಾಕಷ್ಟು ಸಂಖ್ಯೆಯಲ್ಲಿ ಸಿಗುತ್ತವೆ. ಇಂತಹ ಪಾಡ್ದನಗಳು ವಸ್ತು, ರಚನೆ, ತಂತ್ರ ಇವುಗಳ ದೃಷ್ಟಿಯಿಂದ ಸಂಪೂರ್ಣವಾಗಿ ಜನಪದ ಕತೆಗಳ (Floktale) ಮಾದರಿಗಳನ್ನು ಹೋಲುತ್ತವೆ. ಹೆಚ್ಚಾಗಿ ಜನಪದ ಕತೆಗಳಲ್ಲಿ ರಮ್ಯಕತೆಗಳು ಅದ್ಭುತ ಕತೆಗಳು ಈ ವರ್ಗದವುಗಳನ್ನು ಇಲ್ಲಿ ಕಾಣಬಹುದು. ಇವುಗಳ ರೂಪ (Form) ಪದ್ಯ ರೂಪದಲ್ಲಿದೆ ಎನ್ನುವುದರಿಂದ ಇವುಗಳು ಕಥನ ಕವನದ ವ್ಯಾಪ್ತಿಗೆ ಬರುತ್ತವೆ. ಆದರೆ ವಸ್ತುವಿನ ದೃಷ್ಟಿಯಿಂದ ಇವು ಜನಪದ ಕತೆಗಳು ತುಳುವಿನಲ್ಲಿ ಸಿಗುತ್ತವೆ. ಆದ್ದರಿಂದ ಇಂತಹ ಪಾಡ್ದನಗಳನ್ನು ಜನಪದ ಕತೆಗಳ ಪದ್ಯರೂಪವೆಂದೂ ಕರೆಯಬಹುದು. ಕೆಲವೊಂದು ಬಾರಿ ಇಂತಹ ಲೌಕಿಕ ಪಾಡ್ದನಗಳಿಗೆ ಅಲೌಕಿಕ ಪರಿಸರದ ಕೆಲವು ಸಂಗತಿಗಳು ಸೇರ್ಪಡೆಯಾಗಿರುವುದು ಉಂಟು. ಆದರೆ ಈ ಲೌಕಿಕ ಸಂಗತಿಗಳು ಲೌಕಿಕ ವಾತಾವರಣಕ್ಕೆ ಸಂಬಂಧಪಡುತ್ತವೆ. ಇಂತಹ ಲೌಕಿಕ ಪಾಡ್ದನಗಳಲ್ಲಿ, ತುಳುನಾಡಿನ ಅರಸು ವಂಶಗಳ, ಬಲ್ಲಾಳರ ಬೀಡುಗಳ ಸಂಸ್ಕೃತಿ ಹೆಚ್ಚು ಸ್ಪಷ್ಟವಾಗಿ ದೊರೆಯುತ್ತದೆ. ಜನಪದ ಕತೆಗಳಲ್ಲಿ ಹೆಚ್ಚಾಗಿ ಯಾವನೋ ಒಬ್ಬ ವ್ಯಕ್ತಿ, ಯಾವುದೋ ಒಂದು ಪರಿಸರ ಎಂಬ ಅನಾಮಧೇಯತ್ವವಿದ್ದರೆ, ಕೆಲವುಇಲ್ಲಿನ ಪಾಡ್ದನಗಳಲ್ಲಿ ನಿರ್ದಿಷ್ಟವಾದ ಒಂದು ಅರಸನ

ಅರಮನೆ, ನಿರ್ದಿಷ್ಟವಾದ ಬಲ್ಲಾಳನ ಒಂದು ಬೀಡು ಎನ್ನುವ ರೀತಿಯಲ್ಲಿ ಪಾಡ್ದನವನ್ನು ಹೆಚ್ಚು ಸ್ಥಳೀಯಗೊಳಿಸಿದ ಕ್ರಮ ಕಾಣಿಸುತ್ತದೆ.

## 6. ಬಾಲೆ ಕಿನ್ಯಾಮು

ಬಾಲೆ ಕಿನ್ಯಾಮು ಪಾಡ್ದನದಲ್ಲಿ ಹೆಣ್ಣೊಬ್ಬಳಿಗೆ ಅತ್ತೆಯಿಂದ ಬರುವ ಸಂಕಷ್ಟಗಳು, ಅವಳು ಅದೃಷ್ಟದಿಂದ ಶ್ರೀಮಂತನನ್ನು ಮದುವೆಯಾಗುವುದು-ಈ ರೀತಿಯ ಜನಪದ ಕತೆಯ ಸ್ವರೂಪವಿದೆ.

### 'ಬಾಲೆ ಕಿನ್ಯಾಮು' ಪಾಡ್ದನದ ಸಂಕ್ಷಿಪ್ತ ಕನ್ನಡ ರೂಪ

"ಎಣೆಲಾಜೆ ಬೀಡಿನಲ್ಲಿ 'ಎಲ್ಯ ಬಾರಿ ಅರಸು' ಎನ್ನುವವನು ಇದ್ದನು. ಅವನ ಪತ್ನಿ 'ದಾರಮು' ಅವರ ಸೊಸೆ 'ಬಾಲೆ ಕಿನ್ಯಾಮು'. ಒಂದು ಬಾರಿ 'ಎಲ್ಯಬಾರಿ ಅರಸು'ವಿಗೆ ದಂಡು ಕಾಣಿಸಿತು. ಅಂದರೆ ಯುದ್ಧಕ್ಕೆ ಕರೆ ಬಂತು. ಅವನು ಯುದ್ಧಕ್ಕೆ ಹೊರಟು ನಿಂತಾಗ ಹೆಂಡತಿಯನ್ನು ಕರೆದು ಹೇಳಿದನು : 'ನನ್ನ ಪ್ರೀತಿಯ ಸೊಸೆ ಬಾಲೆ ಕಿನ್ಯಾಮುವನ್ನು ನಾನು ಬರುವವರೆಗೆ ಬಹಳ ಪ್ರೀತಿಯಿಂದ ನೋಡಿಕೊಂಡಿರಬೇಕು. ಅವಳನ್ನು ಬುಟ್ಟಿಕೊಟ್ಟು ಹುಲ್ಲು ತರಲು ಕಳುಹಿಸಬೇಡ. 'ತೊಟ್ಟೆ' ಕೊಟ್ಟು ತರಗೆರೆ ತರಲು ಕಳುಹಿಸಬೇಡ. ಅರಸು ದಂಡಿಗೆ ಹೋದಾಗ ಅವನ ಪತ್ನಿ 'ದಾರಮು' ಸೊಸೆ ಕಿನ್ಯಾಮುವನ್ನು ಗುಡ್ಡೆಗೆ ತರಗೆಲೆ ತರಲು ಕಳುಹಿಸಿದಳು. ಆ ಹುಡುಗಿ ಕತ್ತಲೆಯ ವೇಳೆಗೆ ಕಾಡಿನಲ್ಲಿ ಕಣ್ಣೀರು ಸುರಿಸುತ್ತಾ ತರಗೆಲೆ ರಾಶಿಮಾಡಿ ತುಂಬುತ್ತಿದ್ದಳು. ಅಷ್ಟು ಹೊತ್ತಿಗೆ 'ಬೂಡು ಪೋಯಿ ಬೂಡಿನ ಬಲ್ಲಾಳ' ಆ ದಾರಿಯಾಗಿ ಬರುತ್ತಾನೆ. ಅವನು 'ಬಾಲೆ ಕಿನ್ಯಾಮು'ವನ್ನು ಕಂಡು ಕನಿಕರದಿಂದ ಅವಳನ್ನು ದಂಡಿಗೆಯಲ್ಲಿ ಕುಳ್ಳಿರಿಸಿ ತನ್ನ ಬೀದಿಗೆ ಕರೆತರುತ್ತಾನೆ. ಈ ಕಡೆ ದಂಡು ಸಾಧಿಸಲು ಹೋದ ಎಲ್ಯಬಾರಿ ಅರಸು ಊರಿಗೆ ಹಿಂದಿರುಗುವಾಗ ದಾರಿಯಲ್ಲಿ ಹೂವಿನ ಮಾಲೆ ಮಾರುವ ಅಜ್ಜಿಯೊಬ್ಬಳು ಸಿಕ್ಕುತ್ತಾಳೆ. ತನ್ನ ಸೊಸೆ 'ಬಾಲೆ ಕಿನ್ಯಾಮುವಿಗೆ ಮಲ್ಲಿಗೆ ಹೂವಿನ ಒಂದು ಮಾಲೆಯನ್ನು ಕಟ್ಟಿಕೊಡು' ಎನ್ನುತ್ತಾನೆ ಅರಸ. ಆಗ ಅಜ್ಜಿಯು 'ನಿನ್ನ ಸೊಸೆಯು ಬಲ್ಲಾಳನ ಬೀಡಿನಲ್ಲಿದ್ದಾಳೆ' ಎಂದು ವರ್ತಮಾನ ತಿಳಿಸುತ್ತಾಳೆ. ಅರಸನು ಬಲ್ಲಾಳನಲ್ಲಿಗೆ ಬಂದಾಗ ಬಾಲೆ ಕಿನ್ಯಾಮುವನ್ನು ದಾರುಮುವು ಕಾಡಿನಲ್ಲಿ ಬಿಟ್ಟಿದ್ದು, ಅವಳನ್ನು ಪ್ರೀತಿಯಿಂದ ಬಲ್ಲಾಳನು ಕರೆದುಕೊಂಡು ಬಂದದ್ದು ಗೊತ್ತಾಗುತ್ತದೆ. ಕಿನ್ಯಾಮುವನ್ನು ಬಲ್ಲಾಳನ ಬೀಡಿನಲ್ಲಿಯೇ ನಿಲ್ಲಲು ಹೇಳಿದ ಅರಸು ನೇರವಾಗಿ ತನ್ನ ಬೀಡಿಗೆ ಬರುತ್ತಾನೆ. ಪತ್ನಿಯಲ್ಲಿ 'ಬಾಲೆ ಕಿನ್ಯಾಮು' ಎಲ್ಲಿ ಎಂದು ಕೇಳುತ್ತಾನೆ. ಆಗ ಅವಳು 'ಹೆಣ್ಣು ಸೊಕ್ಕಿದರೆ ಮನೆಯಲ್ಲಿ ನಿಲ್ಲುವುದಿಲ್ಲ, ಕಪ್ಪೆ ಸೊಕ್ಕಿದರೆ ಹಳ್ಳದಲ್ಲಿ ನಿಲ್ಲುವುದಿಲ್ಲ' ಎಂದು ಹೇಳಿ 'ಬಾಲೆ ಕಿನ್ಯಾಮು ಅಹಂಕಾರದಿಂದ ಮನೆಬಿಟ್ಟು ಹೊರಟು ಹೋಗಿದ್ದಾಳೆ' ಎನ್ನುತ್ತಾಳೆ. ನಿಜ ವರ್ತಮಾನ ಗೊತ್ತಿದ್ದ ಅರಸನು ಚಂದ್ರಾಯುಧವನ್ನು ತೆಗೆದುಕೊಂಡು ಹೆಂಡತಿಯ ತಲೆಯನ್ನು ಕಡಿದು ಹಾಕುತ್ತಾನೆ. ತನ್ನ ಸೊಸೆ 'ಬಾಲೆ ಕಿನ್ಯಾಮುವನ್ನು ಬೂಡು ಪೋಯಿ ಬೂಡಿ'ನ ಬಲ್ಲಾಳನಿಗೆ ಮದುವೆ ಮಾಡಿಕೊಡುತ್ತಾನೆ. ತಾನು ಆ ಬಲ್ಲಾಳನ ಸೊಸೆ 'ಬಾಲೆ ದುಗ್ಗಾಮು'ವನ್ನು ಮದುವೆಯಾಗುತ್ತಾನೆ. ಬಾಲೆ ಕಿನ್ಯಾಮುವು ಬೂಡು ಪೋಯಿ ಬಲ್ಲಾಳನ ಬೀಡಿನಲ್ಲಿ ಬಹಳ ಸುಖ ಸಂಪತ್ತಿನಲ್ಲಿ ಬದುಕುತ್ತಾ ಇರುತ್ತಾಳೆ".

ಜನಪದ ರಮ್ಯಕತೆಯೊಂದರ ಮಾದರಿಯಲ್ಲಿಯೇ ಇರುವುದು ಈ ಬಾಲೆ ಕಿನ್ಯಾಮು ಪಾಡ್ದನ, 'ಕೆಟ್ಟ ಅತ್ತೆ, ಅವಳು ಸೊಸೆಗೆ ಕಷ್ಟಗಳನ್ನು ಕೊಡುವುದು, ಆಗ ಅವಳಿಗೆ ರಾಜಕುಮಾರ ಅಥವಾ ಶ್ರೀಮಂತನೊಬ್ಬನು

ಸಹಾಯ ಮಾಡುವುದು, ಅವನ ಜೊತೆಗೆ ಆ ಹುಡುಗಿಯ ವಿವಾಹವಾಗುವುದು, ನನ್ನ ಹೆಂಡತಿಯು ತನ್ನ ಮುದ್ದಿನ ಸೊಸೆ ಕಷ್ಟಕೊಟ್ಟ ವಿಚಾರ ಗೊತ್ತಾದಾಗ ಅವಳನ್ನು ಆತ ಕೊಲ್ಲುವುದು-ಜನಪದ ಕತೆಯ ಈ ಆಶಯಗಳು ಈ ಪಾಡ್ದನದಲ್ಲಿ ಅದೇ ರೀತಿಯಲ್ಲಿ ಬರುತ್ತವೆ. ಪಾಡ್ದನದ ರಚನೆ ಮತ್ತು ಅದರಲ್ಲಿ ಬರುವ ಘಟನೆಗಳ ಅನುಕ್ರಮಣಿಕೆ ಕೂಡಾ ರಮ್ಯ ಜನಪದ ಕತೆಯೊಂದರ ಸ್ವರೂಪದಲ್ಲಿಯೇ ಇದೆ. ಕೆಟ್ಟವಳನ್ನು ಕೊಲ್ಲುವ ಚಂದ್ರಾಯುಧವು ತುಳು ಮತ್ತು ಕನ್ನಡ ಜನಪದ ಕತೆಗಳಲ್ಲಿ ಕಾಣಿಸುವ ಚಂದ್ರಾಯುಧವೇ ಆಗಿದೆ.

ಈ ಕಥಾವಸ್ತುವಿನ ಪಾತ್ರಗಳು ಮತ್ತು ಪರಿಸರ ತುಳುನಾಡಿಗೆ ವಿಶಿಷ್ಟವಾದುದು, ಎಣೆಲಜೆ ಬೂಡು, ಅದಕ್ಕೊಬ್ಬ ಅರಸ, ಬೂಡು ಪೋಯಿ ಬೂಡು, ಅದಕ್ಕೊಬ್ಬ ಬಲ್ಲಾಳ, ಅರಸ ದಂಡು ಸಾಧಿಸಲು ಹೋಗುವುದು, ಅರಸ ಮತ್ತು ಬಲ್ಲಾಳ ದಂಡಿಗೆಯಲ್ಲಿ ಪ್ರಯಾಣ ಮಾಡುವುದು-ಈ ಎಲ್ಲ ವಿವರಗಳು ತುಳು ನಾಡಿನ ಸ್ಥಳೀಯ ತುಂಡರಸರ, ಬೂಡುಗಳ ಬಲ್ಲಾಳರ ಮಾದರಿಯನ್ನು ಕೊಡುವುದರ ಮೂಲಕ ನಿರ್ದಿಷ್ಟ ವ್ಯಕ್ತಿ ಸ್ವರೂಪವಿಲ್ಲದ ಜನಪದ ಕತೆಯ ಕಥಾಹಂದರವನ್ನು (Skeleton) ತುಳುನಾಡಿನ ಪರಿಸರದಲ್ಲಿ ತುಂಬಿ ಹೆಚ್ಚು ಸ್ಥಳೀಯ ಸ್ವರೂಪದ ಪಾಡ್ದನವನ್ನಾಗಿ ಮಾರ್ಪಡಿಸಿದೆ. ಬಲ್ಲಾಳನ ಸೊಸೆಯನ್ನು ಅರಸನು ಮದುವೆಯಾಗುವುದು, ಅರಸನ ಸೊಸೆಯನ್ನು ಬಲ್ಲಾಳ ಮದುವೆಯಾಗುವುದು-ಈ ಮದುವೆಯ ಕ್ರಮವು 'ವಿನಿಮಯ ವಿವಾಹ'ದ (Marriage of Exchange) ರೀತಿಯಲ್ಲಿ ಇವೆ. ತುಳುವಿನಲ್ಲಿ ಇದಕ್ಕೆ 'ಚಾಟು ಪದ್ಧತಿ' ಎಂದು ಕರೆಯುತ್ತಾರೆ.

## 7. ವಜ್ರಂದ ಕುಮಾರ

ಜನಪದ ಕತೆಯ ಮಾದರಿಯ, ಅನಾಥ ಬಾಲಕನೊಬ್ಬನು ಅದೃಷ್ಟದಿಂದ ಅರಸನಾಗುವ ವಸ್ತುವುಳ್ಳ ಪಾಡ್ದನ 'ವಜ್ರಂದ ಕುಮಾರ',

### 'ವಜ್ರಂದ ಕುಮಾರ' ಪಾಡ್ದನದ ಸಂಕ್ಷಿಪ್ತ ಕನ್ನಡ ರೂಪ

"ಕಾಂತಾವರದ ಬೀಡಿನಲ್ಲಿ ಇದ್ದಾಳೆ ಕಾಂತುಳ್ಳ ಕಬೇದಿಯಾ. ಅವಳಿಗೆ ನಾಲ್ಕು ಜನ ಅಣ್ಣಂದಿರು. ತಂದೆ ತಾಯಿಗಳನ್ನು ಕಳೆದುಕೊಂಡು ಅವರು ಅನಾಥರಾದರು. 'ಕಾಂತುಳ್ಳ ಕಬೇದಿ' ಸತ್ಯದಿಂದ ಗರ್ಭಿಣಿಯಾಗುತ್ತಾಳೆ. ಗಂಡನಿಲ್ಲದ ಹೆಣ್ಣು ಗರ್ಭಿಣಿಯಾದುದನ್ನು ಕಂಡು ಊರವರು ಹಾಸ್ಯ ಮಾಡುತ್ತಾರೆ ಎಂದು ಭಾವಿಸಿ ಅಣ್ಣಂದಿರು ತಂಗಿಯೊಡನೆ ಊರು ಬಿಟ್ಟು ದೇಶಾಂತರ ಹೋದ ಅವರು ಬಂಗಾಡಿ ಬೀಡನ್ನು ತಲುಪಿದಾಗ ಕಾಂತುಳ್ಳ ಕಬೇದಿಗೆ ಬಾಯಾರಿಕೆ ಆಗುತ್ತದೆ. ನೀರು ತರಲು ಎಂದು ಹೋದ ಅಣ್ಣಂದಿರನ್ನು ಕಳ್ಳರು ಎಂದು ಭಾವಿಸಿದ ಬಂಗಾಡಿಯ ಬಂಗರಾಜನು ಅವರನ್ನು ಬಂಧಿಸಿ ಸೆರೆಮನೆಗೆ ಹಾಕುತ್ತಾನೆ. ಈ ವರ್ತಮಾನ ಗೊತ್ತಾಗಿ ಅವರನ್ನು ಸೆರೆಮನೆಯಲ್ಲಿ ಕಂಡು ದುಃಖಗೊಂಡ ಕಬೇದಿ ಮುಂದಕ್ಕೆ ಹೋದಾಗ ಅವಳಿಗೆ ಹೆರಿಗೆಯ ನೋವು ಕಾಣಿಸಿಕೊಂಡು ಒಂದು ಗಂಡು ಮಗುವನ್ನು ಹೆರುತ್ತಾಳೆ. ಅವಳು ಆ ಮಗುವನ್ನು ಕುತ್ತಿಗೆಯವರೆಗೆ ಹೊಂಡದಲ್ಲಿ ಇಟ್ಟು ಮಣ್ಣು ಮುಚ್ಚಿದಳು. 'ಮಗನೇ- ನೀನು ವಜ್ರಂದ ಕುಮಾರ, ವಜ್ರದ ಆಯುಷ್ಯದಲ್ಲಿ ಬದುಕು, ವಜ್ರದ ಪಟ್ಟವನ್ನು ಪಡೆದು ಆಳು' ಎಂದು ವರವನ್ನು ಕೊಟ್ಟಳು. ಹೀಗೆಂದು ಹೇಳಿದ ಕಬೇದಿ ಮುಂದೆ ಹೋಗಿ ಕಾಡಿನಲ್ಲಿ ದಡ್ಡಲ ಎಲೆಯನ್ನು ಹೊದ್ದುಕೊಂಡು ಕುಳಿತಳು. ಈ ಅನಾಥ ಮಗುವನ್ನು ನೋಡಿದ ಹುಡುಗನೊಬ್ಬನು ಅದನ್ನು ಮಣ್ಣಿನಿಂದ ಹೊರತೆಗೆದು ತನ್ನ ಅಜ್ಜಿಗೆ ತಂದುಕೊಡುತ್ತಾನೆ. ಅಜ್ಜಿ

ಅವನನ್ನು ಬಹಳ ಪ್ರೀತಿಯಿಂದ ಸಾಕುತ್ತಾ ಇರುತ್ತಾಳೆ. ಮಗು ಸಿಕ್ಕಿದ ಮೇಲೆ ಅಜ್ಜಿಯ ಸೌಭಾಗ್ಯ ಹೆಚ್ಚುತ್ತಾ ಬರುತ್ತದೆ. ಅಷ್ಟರಲ್ಲಿ ಚೌಟರ ಅರಮನೆಯಲ್ಲಿ ಚೌಟ ಅರಸ ತೀರಿ ಹೋದ ಮೇಲೆ ಪಟ್ಟದ ಉತ್ತಾರಾಧಿಕಾರಿ ಯಾರು ಎನ್ನುವ ಸಮಸ್ಯೆ ಬರುತ್ತದೆ. ಅದಕ್ಕಾಗಿ ಪಟ್ಟದ ಆನೆಯಲ್ಲಿ ಹೂವಿನ ಮಾಲೆಯನ್ನು ಕೊಟ್ಟು 'ಅದು ಯಾರ ಕೊರಳಿಗೆ ಹಾರವನ್ನು ಹಾಕುತ್ತದೆಯೋ ಅವರಿಗೆ ಅರಸರ ಪಟ್ಟ ಸಿಗುತ್ತದೆ' ಎಂದು ಡಂಗುರ ಸಾರುತ್ತಾರೆ. ಅರಸರ ಆಯ್ಕೆಗಾಗಿ ಸೊಂಡಿಲಿನಲ್ಲಿ ಹಾರವನ್ನು ಹಿಡಿದುಕೊಂಡು ಬಂದ ಪಟ್ಟದ ಆನೆ ಬೀದಿಯಲ್ಲಿ ಅದನ್ನು ನೋಡಲು ಬಂದ ಹುಡುಗ ವಜ್ರಂದ ಕುಮಾರನಿಗೆ ಹಾರವನ್ನು ಹಾಕುತ್ತದೆ. ಅವನನ್ನು ಶೃಂಗಾರಮಾಡಿ ಅರಸರ ಪಟ್ಟದಲ್ಲಿ ಕುಳ್ಳಿರಿಸುತ್ತಾರೆ. ವಜ್ರಂದಕುಮಾರನು ವಜ್ರದ ಪಟ್ಟದಲ್ಲಿ ಕುಳಿತು ಕೊಳ್ಳುತ್ತಾನೆ. ಮರುದಿನ ಈ ವಜ್ರಂದ ಅರಸು ಪರಿವಾರ ಸಹಿತ ಬೇಟೆಯಾಡಲು ವಜ್ರದ ದಂಡಿಗೆಯಲ್ಲಿ ಕುಳಿತುಕೊಂಡು ಕಾಡಿಗೆ ಹೋಗುತ್ತಾನೆ. ಕಾಡಿನಲ್ಲಿ ಆತ ತನ್ನ ತಾಯಿ ಕಬೇದಿಯನ್ನು ಭೇಟಿಯಾಗುತ್ತಾನೆ. ಅವಳನ್ನು ದಂಡಿಗೆಯಲ್ಲಿ ಅರಮನೆಗೆ ಕರೆದುಕೊಂಡು ಬರುತ್ತಾನೆ. ಹಾಗೆಯೇ ತನ್ನ ತಾಯಿಯ ನಾಲ್ಕು ಮಂದಿ ಅಣ್ಣಂದಿರು ಸೆರೆಮನೆಯಲ್ಲಿದ್ದ ಬಂಡಾಡಿಗೆ ಹೋಗಿ ಬಂದ ಅರಸರ ಜೊತೆಗೆ ಯುದ್ಧಮಾಡಿ ಅವರನ್ನು ಬಿಡಿಸಿಕೊಂಡು ಬರುತ್ತಾನೆ. ಒಬ್ಬಳು ತಾಯಿ, ನಾಲ್ಕು ಮಂದಿ ಮಾವಂದಿರು, ಒಂದು ಅಜ್ಜಿ, ಒಬ್ಬ ಮರಕಲ ಹುಡುಗ–ಇವರೆಲ್ಲರೂ ಒಟ್ಟಿಗೆ ವಜ್ರದ ಅರಮನೆಯಲ್ಲಿ ಇರುತ್ತಾರೆ. ವಜ್ರಂದ ಕುಮಾರನು ವಜ್ರಂದ ಪಟ್ಟದಲ್ಲಿ ಊರಿನ ಪ್ರಜೆಗಳನ್ನು ಬಹಳ ಪ್ರೀತಿಯಿಂದ ಆಳುತ್ತಾ ಇರುತ್ತಾನೆ."

ಪಟ್ಟಕ್ಕೆ ವಾರಸುದಾರರು ಆಗಬೇಕಾಗಿರುವ ಊರಿನಲ್ಲಿ ಆನೆಯು ಹಾರ 'ಹಾಕುವುದರ ಮೂಲಕ ಅನಾಥ ಹುಡುಗನೊಬ್ಬನು ಅನಿರೀಕ್ಷಿತವಾಗಿ ಅರಸನಾಗುವುದು' ಎಂಬ ಜನಪದ ಆಶಯವು ಕನ್ನಡದ ಮತ್ತು ಇತರ ಭಾಷೆಗಳ ಜನಪದ ಕತೆಗಳಲ್ಲಿ ಇದೆ. ಕನ್ನಡದ 'ತಿರುಕನ ಕನಸು' ಎನ್ನುವ ಪದ್ಯ ಈ ಆಶಯವನ್ನೇ ಆಧರಿಸಿ ರಚನೆಯಾಗಿರುವುದು. ಕಡು ಬಡವನು ಶ್ರೀಮಂತನಾಗುವುದು, ಅನಾಥನು ಅರಸನಾಗುವುದು ಇಂತಹ ಅದೃಷ್ಟದ ಆಟವನ್ನು ಜನಪದರು ಅನೇಕ ಜನಪದ ಕತೆಗಳಲ್ಲಿ ಮುಖ್ಯ ಆಶಯವನ್ನಾಗಿ ಬಳಸಿಕೊಂಡಿದ್ದಾರೆ. ಅದು ಇಲ್ಲಿ ಕೂಡಾ ಕಾಣುತ್ತದೆ. ಅದಕ್ಕೆ ಪೂರಕವಾಗಿ ಕೆಲವು ಘಟನೆಗಳು ಪಾಡ್ದನದಲ್ಲಿ ನಡೆಯುತ್ತವೆ. ಕಾಂತುಳ್ಳ ಕಬೇದಿಯು ಅಪ್ಪ ಅಮ್ಮನನ್ನು ಮೊದಲು ಕಳೆದುಕೊಳ್ಳುವುದು, ಅನಂತರ ಅಣ್ಣಂದಿರನ್ನು ಕಳೆದುಕೊಳ್ಳುದು–ಈ ರೀತಿ ನಿರಾಶ್ರಿತಳಾಗಿ ಅನಾಥೆಯಾಗಿ ಇರುವಾಗಲೇ ಮಗುವನ್ನು ಹಡೆದ ಕಾರಣ ಅದನ್ನು ಬಿಟ್ಟು ಬಿಡುವುದು, ಈ ಮಗು ಹುಡುಗನೊಬ್ಬನ ಮೂಲಕ ಅಜ್ಜಿ ಅದನ್ನು ಬಿಟ್ಟು ಬಿಡುವುದು. ಈ ಮಗ ಹುಡುಗನೊಬ್ಬನ ಮೂಲಕ ಅಜ್ಜಿಗೆ ಸಿಗುವುದು, ಅಜ್ಜಿ ಅದನ್ನು ಸಾಕುವುದು ಈ ಘಟನೆಗಳು ಮತ್ತು ಅಲ್ಲಿನ ಆಶಯಗಳು ಹೆಚ್ಚು ಜನಪ್ರಿಯವಾಗಿರುವ ಜನಪದ ಆಶಯಗಳು.

ಈ ಪಾಡ್ದನದಲ್ಲಿ ಸ್ಥಳೀಯವಾಗಿ ವಿಶಿಷ್ಟವಾಗಿರುವುದು–ತುಳುನಾಡಿನ ಎರಡು ಅರಸು ಮನೆತನಗಳಾದ ಬಂಗಾಡಿಯ ಬಂಗರು ಮತ್ತು ಚೌಟ ಅರಸು ಮನೆತನಗಳ ಉಲ್ಲೇಖ. ಬಂಗಾಡಿ ಬೀಡಿನಲ್ಲಿ ಬಂಗ ಅರಸನು ಕಬೇದಿಯ ಅಣ್ಣಂದಿರನ್ನು ಕಳ್ಳರೆಂದು ತಿಳಿದು ಸೆರೆಮನೆಗೆ ಹಾಕುತ್ತಾನೆ. ಉತ್ತರಾಧಿಕಾರಿಗಳಿಲ್ಲದ ಚೌಟ ಅರಸರ ಪಟ್ಟಕ್ಕೆ ವಜ್ರಕುಮಾರ ಅರಸನಾಗುತ್ತಾನೆ. ಮುಂದೆ ಕಬೇದಿಯ ಅಣ್ಣಂದಿರನ್ನು ಬಿಡಿಸಲೋಸುಗ ಈ ಚೌಟ ಅರಸನಿಗೆ ಮತ್ತು ಬಂಗ ಅರಸರಿಗೆ ಯುದ್ಧವಾಗುತ್ತದೆ. ಚೌಟರಿಗೂ ಬಂಗರಿಗೂ ಯುದ್ಧಗಳಾಗುತ್ತಿದ್ದದ್ದು ಸಾಮಾನ್ಯ ಸಂಗತಿ. ಆದರೆ ಇಲ್ಲಿ ಅಂತಹ ಒಂದು ಸಂಗತಿಗೆ ಮತ್ತು ಅದಕ್ಕೆ ಸಂಬಂಧಿಸಿದ ಎರಡು ಸ್ಥಳೀಯ ಅರಸು ಮನೆತನಗಳಿಗೆ ಸಾರ್ವತ್ರಿಕ ಜನಪದ ಆಶಯವುಳ್ಳ ಕತೆಯೊಂದರಲ್ಲಿ ಘಟನೆಯ ಮತ್ತು ಸ್ಥಾನಗಳನ್ನು ಕಲ್ಪಿಸಲಾಗಿದೆ. ಬಾಲೆ ಕಿನ್ಯಾಮು ಪಾಡ್ದನದಂತೆಯೇ ಈ ಸ್ಥಳೀಯ ಪರಿಸರದ ಕಾರಣದಿಂದ 'ವಜ್ರಂದ ಕುಮಾರ' ಪಾಡ್ದನವು ಸಾಮಾನ್ಯ ಜನಪದ ಕತೆಗಿಂತ ಭಿನ್ನವಾಗಿ ಸ್ಥಳೀಯ ಸಂಸ್ಕೃತಿಯ ಆವರಣಕ್ಕೆ ಬದ್ಧವಾಗುತ್ತದೆ, ಪಾಡ್ದನದಲ್ಲಿ ಸಾಮಾನ್ಯವಾಗಿ ಸಿಗುವ ಇನ್ನೊಂದು ವಿಶಿಷ್ಟ ಆಶಯ ಈ ಪಾಡ್ದನದಲ್ಲಿಯೂ

ಇವೆ : ಇಲ್ಲಿ ಕಬೇಡಿಯು ಸತ್ಯದಿಂದ ಗರ್ಭಿಣಿಯಾಗು 'ಸಿರಿಗಳ ಪಾಡ್ದನ' ಮುಂತಾದುವುಗಳಲ್ಲಿ ಈ ವಿಚಾರ ಸಿಗುತ್ತದೆ. ತುಳು ಜನಪದ ಕಥನಗಳಿಗೆ ಹೆಚ್ಚು ಹೆಚ್ಚು ವಿಶಿಷ್ಟವಾಗಿರುವ ಆಶಯ ಎಂದು ಇದನ್ನು ಭಾವಿಸಬಹುದು.

## 8. ಬಾಲೆತಂಗಡಿ–ಪುತ್ತಕ್ಕ

'ಬಾಲೆ ತಂಗಡಿ' ಮತ್ತು 'ಪುತ್ತಕ್ಕ' ಪಾಡ್ದನಗಳು ಒಂದೇ ವಸ್ತುವನ್ನು ಉಳ್ಳವುಗಳು. ಏಳೆಂಟು ವಾಕ್ಯಗಳ 'ಬಾಲೆ ತಂಗಡಿ' ಪಾಡ್ದನವು ವಿಸ್ತಾರವಾಗಿ ಪುತ್ತಕ್ಕ ಪಾಡ್ದನದಲ್ಲಿ ಸೇರುತ್ತದೆ. ಈ ಪಾಡ್ದನವು ಸುದೀರ್ಘವಾಗಿದೆ ; ಸಂಪೂರ್ಣವಾಗಿ ಜನಪದ ಅದ್ಭುತ ಕತೆಯೊಂದನ್ನು ಯಥಾವತ್ತಾಗಿ ಹೋಲುತ್ತದೆ. ಜನಪದ ಅದ್ಭುತ ಕತೆಗೆ ಇರುವ ಎಲ್ಲಾ ಆಶಯಗಳು ಈ ಪಾಡ್ದನದಲ್ಲಿ ಇವೆ. ವಿಶೇಷವೆಂದರೆ ಪುತ್ತಕ್ಕ ಪಾಡ್ದನದ ಗದ್ಯರೂಪದಂತೆ ಇರುವ ತುಳು ಜನಪದ ಕತೆಯೊಂದು ನನ್ನ ಸಂಗ್ರಹದಲ್ಲಿ ಸಿಕ್ಕಿದೆ. ಅದನ್ನು 'ವಜ್ರಂದ ಕುಮಾರ ಕತೆ' ಎಂದು ಕರೆಯುತ್ತಾರೆ. ಏಳುಮಂದಿ ಅಣ್ಣಂದಿರ ಪ್ರೀತಿಯ ಒಬ್ಬಳೇ ತಂಗಿ. ಅವಳ ಕೂದಲಿಗೆ ಮುತ್ತು ಪೋಣಿಸಲು ಅವರು ಏಳು ಕಡಲಿನಾಚೆ ಹೋಗುವುದು, ಅವರು ಹೋದ ಮೇಲೆ ಏಳು ಮಂದಿ ಅತ್ತಿಗೆಯರು ಅವಳಿಗೆ ಕಷ್ಟ ಕೊಡುವುದು, ಕತ್ತಿಯಿಲ್ಲದೆ ಸೊಪ್ಪು ತರುವ, ಒನಕೆ ಇಲ್ಲದೆ ಭತ್ತ ಕುಟ್ಟುವ, ಹಗ್ಗವಿಲ್ಲದೆ ತೂತುಕೊಡದಲ್ಲಿ ನೀರು ತರುವ–ಮುಂತಾದ ಅಸಾಧ್ಯ ಕೆಲಸಗಳನ್ನು (Task) ಹೇರುವುದು, ಅವಳಿಗೆ ಕಪ್ಪೆ, ಹಾವು ಮುಂತಾದ ಪ್ರಾಣಿಗಳು ಸಹಾಯಕವಾಗುವುದು–ಇಲ್ಲಿಯವರೆಗಿನ ಕತೆ ತುಳುವಿನ ವಜ್ರಂದ ಕುಮಾರ ಕತೆಯು ಹಾಗೆಯೇ ಇದೆ. ಮುಂದಿನ ಘಟನೆಯ ಭಾಗವು ತುಳುವಿನ ಇನ್ನೊಂದು ಜನಪದ ಕತೆಯಲ್ಲಿ ಸಿಗುತ್ತದೆ. 'ಪುತ್ತಕ್ಕ'ನನ್ನು ಹುಲಿತಿಂದು ಕಿರುಬೆರಳನ್ನು ಬಿಟ್ಟುಹೋಗುವುದು. ಆ ಕಿರುಬೆರಳನ್ನು ಕೊಂಡುಹೋಗಿ ಮನೆಯಲ್ಲಿಡುವುದು, ಆಜ್ಜಿ ಇಲ್ಲದಿರುವಾಗ ಕಿರುಬೆರಳು ಪುತ್ತಕ್ಕಳ ರೂಪಾಂತರ ಹೊಂದಿ ಅಡುಗೆ ಮಾಡುವುದು–ಈ ಘಟನೆಗಳು ಪ್ರತ್ಯೇಕವಾಗಿ ತುಳು ಜನಪದ ಕತೆಯೊಂದರ ಮುಖ್ಯ ಭಾಗವಾಗಿವೆ. ಪಾಡ್ದನದ ಕೊನೆಯಲ್ಲಿ ಅಣ್ಣಂದಿರ ಮತ್ತು ತಂಗಿಯ ಭೇಟಿಯಾಗುತ್ತದೆ. ಅಣ್ಣಂದಿರು ತಮ್ಮ ಏಳು ಮಂದಿ ಹೆಂಡತಿಯರನ್ನು ಕೊಲ್ಲುತ್ತಾರೆ. ತಂಗಿಯ ಜೊತೆಗೆ ಸುಖವಾಗಿ ಇರುತ್ತಾರೆ. ಈ ಭಾಗ ಮತ್ತೆ ಪೂರ್ವಾರ್ಧದ ಹೋಲಿಕೆ ಇರುವ 'ವಜ್ರಂದ ಕುಮಾರ' ತುಳು ಜನಪದ ಕತೆಯ ಅಂತ್ಯದ ಹಾಗೇ ಇದೆ. ಈ ಪಾಡ್ದನದ ಕಥನ ರೂಪವನ್ನು ನೋಡಿದಾಗ ಸಂಪೂರ್ಣವಾಗಿ ಜನಪದ ಕತೆಯ ಮಾದರಿಯಲ್ಲಿದ್ದು ಎರಡು ತುಳು ಜನಪದ ಕತೆಗಳ ಅರ್ಧ ಅರ್ಧ ಭಾಗಗಳು ಮಿಶ್ರಿತವಾಗಿ ಹುಟ್ಟಿಕೊಂಡ ಸಂಕೀರ್ಣ ಕತೆ ಎಂದು ಭಾವಿಸಬಹುದು–ಈ ಕಥನ ಪಾಡ್ದನಗಳ ಶೈಲಿಯಲ್ಲಿ ಪದ್ಯಾತ್ಮಕವಾಗಿದೆ ಎನ್ನುವುದು ಮಾತ್ರ ಇದನ್ನು ಕಥನ ಕವನದ ವಿಭಾಗಕ್ಕೆ ಸೇರಿಸಲು ಕಾರಣ.

## 9. ಅಮುಸರಂದ ಮೆನ್ನೋಡಿ

ಜನಪದ ಕತೆಯ ಕೆಲವು ಅಲೌಕಿಕ, ಅದ್ಭುತ, ಅಂಶಗಳನ್ನು ಒಳಗೊಂಡು, ಲೌಕಿಕ ವಾತಾವರಣವನ್ನು ಇಟ್ಟುಕೊಂಡು ರಚನೆಯಾದ ಪಾಡ್ದನ 'ಅಮುಸರಂದ ಮೆನ್ನೋಡಿ.' ಅನೇಕ ಜಾನಪದ ಅಂಶಗಳ

ಬೆರಕೆಯಂತೆ ತೋರುವ ಈ ದೀರ್ಘವಾದ ಪಾಡ್ದನ–ಪ್ರಾಣಿಗಳು, ಮನುಷ್ಯರು, ದೇವರು, ಬಲ್ಲಾಳರು ಮುಂತಾದ ಅನೇಕ ಭೂಮಿಕೆಗಳ ಪಾತ್ರಗಳನ್ನು ಒಂದುಗೂಡಿಸುತ್ತದೆ. ಬೇರೆ ಬೇರೆ ಮೂಲ ಕಥನಗಳನ್ನು ಕಾಲಕ್ರಮೇಣ ಒಂದುಗೂಡಿಸಿದ ಒಂದು ಸಂಕೀರ್ಣ ರಚನೆಯಂತೆ ಈ ಪಾಡ್ದನ ಕಾಣಿಸುತ್ತದೆ.

ದನ ಮತ್ತು ಕರುವಿನ ಕತೆಯಿಂದ ಆರಂಭವಾಗಿ ಆ ಪ್ರಾಣಿಗಳು ಮನುಷ್ಯರಾಗಿ ಬೇರೆ ಬೇರೆ ಸಾಧನೆ ಗಳನ್ನು ಮಾಡುವ ಘಟನೆಗಳಿಂದ ಈ ಪಾಡ್ದನ ಮುಕ್ತಾಯವಾಗುತ್ತದೆ. 'ಅಮಸರಂದ ಮೆನ್ನೋಡಿ' ಒಂದು ನೂರು ಮುಡಿ ಬೆಟ್ಟುಗದ್ದೆ, ನೂರು ಮುಡಿ ಬೈಲು ಗದ್ದೆ ಉಳ್ಳ ಬೇಸಾಯಗಾರ ಆವನ ಹಟ್ಟಿಯಲ್ಲಿ ಇರುವ ದನ ನಂದೇದಿ. ಒಂದು ದಿನ ಮೆನ್ನೋಡಿಯ ತಾಯಿ ಮರ್ದೆದಿಯು ಈ ದನದ ಹಾಲು ಕರೆಯುವಾಗ ದನವು ಚೆಂಬಿನ ಹಾಲನ್ನು ಕೆಳಕ್ಕೆ ಬೀಳಿಸುತ್ತದೆ. ಸಿಟ್ಟುಗೊಂಡ ಮರ್ದೆದಿ 'ನಂದೇದಿ' ದನದ ಬೆನ್ನಿಗೆ ಚೆಂಬಿನಿಂದ ಒಂದು ಪೆಟ್ಟು ಕೊಡುತ್ತಾಳೆ. ಇದರಿಂದ ಸಿಟ್ಟುಗೊಂಡ ನಂದೇದಿಯು ತನ್ನ ಕರು 'ಗೋವು ಮಾರು ಗೋಪಾಲ'ನನ್ನು ಬಿಡಿಸಿಕೊಂಡು ಕಣ್ಣೀರು ಹಾಕುತ್ತಾ ಕಾಡಿಗೆ ಬರುತ್ತದೆ. ಕಾಡಿನಲ್ಲಿ ಬೆಂಕಿಯ ನಡುವೆ ಸಿಕ್ಕಿಕೊಂಡು ಅಪಾಯದಲ್ಲಿದ್ದ ಒಂದು ಹುಲಿಯ ಮರಿಯನ್ನು ನೋಡುತ್ತಾರೆ. 'ಗೋವುಮಾರು ಗೋಪಾಲ'ನ ಒತ್ತಾಯದಿಂದ ನಂದೇದಿಯು ಹುಲಿಯ ಮರಿಯನ್ನು ಬೆಂಕಿಯಿಂದ ಪಾರುಮಾಡುತ್ತದೆ. ಆ ಹುಲಿ ಮರಿಯ ಹೆಸರು 'ಉಲ್ಲಿಮಾರು ಗೋಪಾಲ'. ತನ್ನ ಪ್ರಾಣವನ್ನು ಉಳಿಸಿದ ದನ ಮತ್ತು ಕರುವನ್ನು ಸ್ಮರಿಸಿಕೊಂಡು 'ನಿಮಗೇನೂ ತೊಂದರೆ ಕೊಡುವುದಿಲ್ಲ'ವೆಂದು ಹೇಳಿ, ಅವರನ್ನು ತನ್ನ ಪಂಜರಕ್ಕೆ ಕರೆದುಕೊಂಡು ಹೋಗು ತ್ತದೆ. ಆದರೆ ಹುಲಿ ಮರಿಯ ತಾಯಿ ಹುಲಿಯು ನಂದೇದಿ ದನವನ್ನು ಕೊಂದು, ಅದರ ರಕ್ತವನ್ನು ಕುಡಿಯು ತ್ತದೆ. ಆದರೆ ಈ ವಿಚಾರವು ಉಲ್ಲಿಮಾರು ಗೋಪಾಲನಿಗೆ ಗೊತ್ತಾಗದಂತೆ 'ತಾಯಿ ಹುಲಿ' ನಟಿಸುತ್ತದೆ. ಆದರೆ ಹುಲಿಮರಿಗೆ ತನ್ನ ತಾಯಿಯ ಕೆಟ್ಟ ಕೃತ್ಯವು ಗೊತ್ತಾದಾಗ ತಾಯಿ ಹುಲಿಯನ್ನೇ ಕೊಂದು ಹಾಕುತ್ತದೆ. ಕರುಣರಸಭರಿತವಾಗಿ ಗೋವುಮಾರು ಗೋಪಾಲನಲ್ಲಿ ಉಲ್ಲಿಮಾರು ಗೋಪಾಲ ಈ ರೀತಿ ಹೇಳುತ್ತದೆ– 'ನಿಕ್ಕ್ ಅಪ್ಪೆ ಇಜ್ಜಿ ಗೋಪಾಲ, ಎಂಕೆಲಾ ಅಪ್ಪೆ ಇಜ್ಜಿ, ನಿಕ್ಕ್‌ಲಾ ಮಿಲೆ ಇಜ್ಜಿ ಗೋಪಾಲ ಯೆಂಕ್ ಲಾ ಇಜ್ಜಿ. ನಮೊ ಗುಡ್ಡೆಗ್ ಪೋಯಿ ಗೋಪಾಲ. ಪನಿಪಜಿರ್ ಮೇಯೊಂದ್ ಒಸರ್‌ನೀರ್ ಪರೊಂದ್ ನಮೊ ಉಪ್ಪುಗ' (ನಿನಗೂ ತಾಯಿ ಇಲ್ಲ ಗೋಪಾಲ ; ನನಗೂ ತಾಯಿ ಇಲ್ಲ. ನಿನಗೂ ಮೊಲೆ ಹಾಲಿಲ್ಲ ಗೋಪಾಲ; ನನಗೂ ಮೊಲೆ ಹಾಲಿಲ್ಲ. ನಾವು ಗುಡ್ಡಕ್ಕೆ ಹೋಗುವ ಗೋಪಾಲ, ಎಳೆ ಹುಲ್ಲು ಮೇಯುತ್ತಾ ಒರತೆಯ, ನೀರು ಕುಡಿಯುತ್ತಾ ಈ ರೀತಿ ಅವುಗಳೆರಡೂ ಅನ್ಯೋನ್ಯವಾಗಿದ್ದಾಗ 'ನಾರಾಯಣ ದೇವರು ಮತ್ತು ಅವು ಗಳನ್ನು ನೋಡಿ ಆಶ್ಚರ್ಯಪಡುತ್ತಾರೆ. ಅವುಗಳೆರಡನ್ನೂ ಹನ್ನೆರಡು ವರ್ಷದ ಎರಡು ಗಂಡು ಮಕ್ಕಳನ್ನಾಗಿ ಮಾರ್ಪಡಿಸುತ್ತಾರೆ. ಆಮೇಲೆ ಇನ್ನೊಂದು ಘಟನೆ ಬರುತ್ತದೆ. 'ಪರಿಮಳ ಬಲ್ಲಾಳ'ನ ಊರಿನಲ್ಲಿ ಒಂದು ಹುಲಿ ಬಹಳ ತೊಂದರೆ ಕೊಡುತ್ತಾ ಇರುತ್ತದೆ. 'ಆ ಹುಲಿಯನ್ನು ಯಾರು ಕೊಲ್ಲುತ್ತಾರೆಯೋ ಅವರಿಗೆ ತನ್ನ ಎರಡು ಹೆಣ್ಣು ಮಕ್ಕಳನ್ನು ಮದುವೆ ಮಾಡಿ ಕೊಡುತ್ತೇನೆ'. ಎಂದು ಬಲ್ಲಾಳನು ಡಂಗುರ ಸಾರುತ್ತಾನೆ. ನಾರಾಯಣ ದೇವರಿಂದ ಹುಡುಗರಾಗಿ ಪರಿವರ್ತನೆಗೊಂಡ ಇಬ್ಬರು ಹುಡುಗರು ಹುಲಿಯನ್ನು ದಾರಿಯಲ್ಲಿ ಕೊಂದುಹಾಕುತ್ತಾರೆ. ಅಲ್ಲಿಂದ ಒಬ್ಬಳು ಅಜ್ಜಿಯ ಮನೆಗೆ ಬರುತ್ತಾರೆ. ಅಷ್ಟರಲ್ಲಿ ರಾಜನ ಊರಿನ ಮಡಿವಾಳ ನೊಬ್ಬನು ಹುಲಿಯ ಹೆಣಕ್ಕೆ ತನ್ನ ಚೂರಿಯನ್ನು ತಾಗಿಸಿ ರಾಜನಲ್ಲಿಗೆ ಬಂದು ತಾನು ಹುಲಿ ಕೊಂದವನು ಎಂದು ಹೇಳುತ್ತಾನೆ. ಅಷ್ಟರಲ್ಲಿ ಹುಲಿ ಕೊಂದ ಹುಡುಗರು ಅಲ್ಲಿಗೆ ಬರುತ್ತಾರೆ. ಸತ್ಯಸಂಗತಿ ಅಲ್ಲಿ ಗೊತ್ತಾಗುತ್ತದೆ. ಹುಲಿ ಕೊಂದವನೆಂದು ಹೇಳಲು ಹೋಗುವ ಅವಸರದಲ್ಲಿ ತನ್ನ ಮಡಿ ಬಟ್ಟೆಯ ಗಂಟನ್ನೂ ಬಟ್ಟೆಹೊರುವ ಮುದಿ ಎತ್ತನ್ನೂ ಕಳೆದುಕೊಂಡ ಮಡಿವಾಳನ ಹಾಸ್ಯ ಚಿತ್ರಣದೊಂದಿಗೆ ಪಾಡ್ದನ ಮುಕ್ತಾಯವಾಗುತ್ತದೆ.

ಹುಲಿಯ ಮರಿ ಮತ್ತು ದನದ ಕರುಗಳ ಆತ್ಮೀಯ ಸಂಬಂಧ–ಇದನ್ನು ವಿವರಿಸುವ ಮೊದಲನೆಯ ಭಾಗದ ಒಂದು ಕತೆ, ನಾರಾಯಣನಿಂದ ಮನುಷ್ಯರಾಗಿ ರೂಪಾಂತರ ಹೊಂದಿ ಹುಲಿ ಕೊಲ್ಲುವ ಸಾಹಸವನ್ನು ಮಾಡಿ

ಹೆಣ್ಣುಗಳನ್ನು ಮದುವೆಯಾಗುವ ಎರಡನೇ ಭಾಗದ ಕತೆ—ಈ ರೀತಿ ಎರಡು ಕತೆಗಳ ಸೇರುವಿಕೆಯು ಸಂಕೀರ್ಣ ಕತೆಯ ಸ್ವರೂಪದಲ್ಲಿದೆ. ಎರಡನೇ ಭಾಗದ ಕತೆ ಸಂಪೂರ್ಣವಾಗಿ ಜನಪದ ಕತೆಯ ಮಾದರಿಯದ್ದು. ಹುಲಿಯನ್ನು ಕೊಲ್ಲುವ ಸಾಹಸದ ಪಣ, ಅದನ್ನು ಗೆದ್ದರೆ ಹೆಣ್ಣು ದಕ್ಕುವುದು, ಸಾಹಸಿಯು ಮಾಡಿದ ಕೆಲಸವನ್ನು ಇನ್ನೊಬ್ಬನು ತನ್ನದು ಎಂದು ಹೇಳುವುದು, ಕೊನೆಗೆ ನಿಜ ಸಂಗತಿ ಬಯಲಾಗುವುದು—ಈ ಆಶಯಗಳು ಜನಪದ ಕತೆಯಲ್ಲಿ ಸಿಗುವವುಗಳು.

ಪ್ರಾಣಿಗಳ ನಡುವಿನ ಸಂಬಂಧವನ್ನು ಹೇಳುವ ಪಾಡ್ದನದ ಮೊದಲನೆಯ ಭಾಗ ವಿಶಿಷ್ಟವಾಗಿದೆ. ಮನುಷ್ಯರ ಗುಣಸ್ವಭಾವಗಳನ್ನು ಪ್ರಾಣಿಗಳ ಪಾತ್ರಗಳ ಮೂಲಕ ಪ್ರತಿನಿಧೀಕರಿಸುವ ದೃಷ್ಟಿ ಇಲ್ಲಿ ಗೋಚರವಾಗುತ್ತದೆ. ತನ್ನನ್ನು ಕಾಪಾಡಿದ ದನಕರುಗಳ ಬಗ್ಗೆ ಹುಲಿಯ ಮರಿಗೆ ಇರುವ ಪ್ರೀತಿ, ಆದರೆ ಹುಲಿಯ ತಾಯಿಗೆ ಅಂತಹ ಯಾವುದೇ ಭಾವನೆ ಇಲ್ಲದೆ ತನ್ನ ಸಹಜ ಕ್ರೋಧ ಗುಣವನ್ನು ತೋರಿಸುವುದು—ಈ ಸಂದರ್ಭದಲ್ಲಿ ಮಕ್ಕಳಲ್ಲಿ ಇರುವ ಮುಗ್ಧ ಸ್ವಭಾವವನ್ನೂ ಹಿರಿಯರ ಸ್ವಾರ್ಥ ಬುದ್ಧಿಯನ್ನೂ ವ್ಯಂಗ್ಯವಾಗಿ ಸಾರಲಾಗಿದೆ. ಅನಾಥವಾದ ದನಕರು ಮತ್ತು ಹುಲಿಯ ಮರಿಗಳ ಚಿತ್ರಣದಲ್ಲಿ ಕರುಣರಸದ ಸಮರ್ಥ ಅಭಿವ್ಯಕ್ತಿ ಇದೆ. ನಾರಾಯಣ ದೇವರು ಈ ಪಾಡ್ದನದಲ್ಲಿ ಬರುವುದರ ಮೂಲಕ ಅದ್ಭುತ ರಮ್ಯ ಗುಣವುಳ್ಳ ಕತೆಗೆ ಮಾಂತ್ರಿಕ ಕತೆಯ ಸ್ಪರ್ಶವನ್ನು ಕೊಡಲಾಗಿದೆ. ಜನಪದ ಕತೆಗಳಲ್ಲಿ ಕಾಣಸಿದ ಎರಡು ವಿಭಿನ್ನ ಘಟನೆಗಳ ವಿಚಿತ್ರ ಸಂಯೋಗವನ್ನು 'ಅಮುಸರಂದ ಮೆಂನ್ನೋಡಿ' ಪಾಡ್ದನದಲ್ಲಿ ಕಲ್ಪಿಸಲಾಗಿದೆ.

## 10. ಗಿಲ್ಲು–ಬಿಲ್ಲು

ಗಿಲ್ಲು–ಬಿಲ್ಲು ಪಾಡ್ದನದ ವಸ್ತು ದುರಂತವಾದರೂ ಪ್ರಾಣಿ ಮತ್ತು ಮನುಷ್ಯರ ಸಂಬಂಧದ ಚಿತ್ರಣವಿರುವುದರಿಂದ ಅದನ್ನು ಇಲ್ಲಿ ಕೊಡಲಾಗಿದೆ. ಇಲ್ಲಿ ಗಿಲ್ಲು ಎಂಬುವಳು ಒಂದು ಹೆಣ್ಣು; ಬಿಲ್ಲು ಎಂಬುದು ಅವಳ ನೆಚ್ಚಿನ ನಾಯಿ. ಇಂತಹ ಗಿಲ್ಲು ಹುಡುಗಿ ಒಂದು ಬಾರಿ ಅನಾಹುತಕ್ಕೆ ಒಳಗಾಗುತ್ತಾಳೆ. ಅಂದರೆ, ಗಂಡಸಿನ ಆಸೆಗೆ ಬಲಿಯಾಗುತ್ತಾಳೆ. ಅವಳ ದುರಂತವನ್ನು ಕಂಡು ಬಿಲ್ಲು ನಾಯಿಯು ಸ್ವಾಮಿ ಭಕ್ತಿಯಿಂದ ಪ್ರಾಣತ್ಯಾಗ ಮಾಡುತ್ತದೆ. ಮನುಷ್ಯ ಮತ್ತು ಪ್ರಾಣಿಗಳ ಆತ್ಮೀಯ ಸಂಬಂಧವನ್ನು ಕೊಡುತ್ತದೆ ಈ ಪಾಡ್ದನ.

ಈ ರೀತಿ ಲೌಕಿಕ ವಸ್ತುವುಳ್ಳ ಪಾಡ್ದನಗಳು ತಮ್ಮ ವಸ್ತು ವೈವಿಧ್ಯದಿಂದ ಜನಪ್ರಿಯವಾಗಿವೆ. ಗಂಡಿನ ಅಥವಾ ಹೆಣ್ಣಿನ ದುರಂತವನ್ನು ಹೇಳುವ, ಕೆಲವೊಮ್ಮೆ ಕನ್ನಡದ ಜನಪದ ಕಥನ ಕವನಗಳನ್ನು ಹೋಲುವ ಪಾಡ್ದನಗಳು ಒಂದು ವರ್ಗವಾಗುತ್ತವೆ. ಇವುಗಳ ಜನಪದ ಕತೆಗಳ ಆಶಯವನ್ನು ಕೆಲವೊಮ್ಮೆ ಇಟ್ಟುಕೊಂಡಿದ್ದರೂ ವಸ್ತು ನಿರೂಪಣೆ ಮತ್ತು ಶೈಲಿಯ ದೃಷ್ಟಿಯಿಂದ ಅಲೌಕಿಕ ಪಾಡ್ದನಗಳಿಗೆ ಹತ್ತಿರವಾಗಿವೆ. ಸುಖಾಂತ ವಸ್ತುವುಳ್ಳ ಪಾಡ್ದನಗಳು ಹೆಚ್ಚಾಗಿ ಜನಪದ ಕತೆಗಳ ಮಾದರಿಯಲ್ಲೇ ಇದ್ದು, ಕೆಲವೊಂದು ಬಾರಿ ಮಾತ್ರ ಸ್ವಲ್ಪ ವಿಶಿಷ್ಟತೆಯನ್ನು ತೋರಿಸುತ್ತವೆ. ಆದ್ದರಿಂದಲೇ ಇರಬೇಕು ಇಂತಹ ಪಾಡ್ದನಗಳು ಹೆಚ್ಚು ಜನಪ್ರಿಯವಾಗಿ ಕಾಣಿಸುತ್ತಿಲ್ಲ. ಇವುಗಳು ಮಾಡುವ ಕೆಲಸವನ್ನು ಜನಪದ ಕತೆಗಳು ಮಾಡುತ್ತಾ ಇರುವುದು ಇದಕ್ಕೆ ಕಾರಣವಾಗಿರಬೇಕು. ಸಾಂಸ್ಕೃತಿಕವಾಗಿಯೂ ಇವು ಬಹುಮಟ್ಟಿಗೆ ಜನರಿಗೆ ಹೆಚ್ಚು ಸಂಬಂಧಪಟ್ಟಿಲ್ಲ.

**ಪಾಡ್ದನಗಳಲ್ಲಿ ವ್ಯಕ್ತವಾಗುವ ತುಳುನಾಡಿನ ಸಂಸ್ಕೃತಿ**

ತುಳುನಾಡಿನ ಸಂಸ್ಕೃತಿಯು ಪಾಡ್ದನಗಳಲ್ಲಿ ವ್ಯಕ್ತವಾದಷ್ಟು ವಿವರವಾಗಿ ಮತ್ತು ಸಮರ್ಪಕವಾಗಿ ತುಳು ಜನಪದ ಸಾಹಿತ್ಯದ ಬೇರೆ ಯಾವ ಪ್ರಕಾರಗಳಲ್ಲಿಯೂ ಕಾಣಿಸುವುದಿಲ್ಲ. ಪಾಡ್ದನಗಳ ಸ್ವರೂಪ ಕಥನ ಕವನಗಳ ರೀತಿಯದ್ದು ಆಗಿರುವುದರಿಂದ ಮತ್ತು ಪಾಡ್ದನಗಳು ವಿಶೇಷವಾಗಿ ಭೂತಾರಾಧನೆಗೆ ಸಂಬಂಧ ಪಟ್ಟಿರುವುದರಿಂದ ತುಳುನಾಡಿನ ಸಂಸ್ಕೃತಿಯ ಸಮಗ್ರ ಚಿತ್ರಣವನ್ನು ಇಲ್ಲಿ ನೋಡಬಹುದು. ಅವುಗಳಲ್ಲಿ ಅನೇಕ ಅಂಶಗಳು ಇಂದಿಗೆ ಬದಲಾವಣೆಯನ್ನು ಪಡೆದಿವೆ. ಕೆಲವು ಕಣ್ಮರೆಯಾಗಿವೆ. ಇನ್ನು ಕೆಲವು ಬಹು ಮಟ್ಟಿಗೆ ಹಾಗೆಯೇ ಉಳಿದುಕೊಂಡು ಬಂದಿವೆ. ಪಾಡ್ದನಗಳ ರಚನೆಯ ಕಾಲವನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಬಹುಮಟ್ಟಿಗೆ 15, 16 ಮತ್ತು 17ನೇ ಶತಮಾನಕ್ಕೆ ಇವು ಸೇರಿದವುಗಳಾಗಿರುವುದರಿಂದ ಆ ಕಾಲದ ತುಳುನಾಡಿನ ಜನಜೀವನ ಚಿತ್ರಣವು ಈ ಪಾಡ್ದನಗಳಲ್ಲಿ ದೊರೆಯುತ್ತದೆ. ಪಾಡ್ದನಗಳು ಕಥನ ಕವನಗಳ ದೃಷ್ಟಿಯಿಂದ ಅನೇಕ ಕಾಲ್ಪನಿಕ ಅಂಶಗಳನ್ನು ಒಳಗೊಂಡಿದ್ದರೂ ವಿವರಗಳಲ್ಲಿ ಮತ್ತು ವರ್ಣನೆ ಗಳಲ್ಲಿ ಸಂಸ್ಕೃತಿಯ ಬೇರೆ ಬೇರೆ ಮುಖಗಳನ್ನು ಕೊಡುವಾಗ ತೀರ ವಾಸ್ತವಿಕವಾಗಿವೆ ಅನ್ನಿಸುತ್ತದೆ. ಇಂದಿಗೂ ಅಂತಹ ವಿಚಾರಗಳು ಕಾಣಿಸಿಕೊಳ್ಳುವುದು ಈ ಅಭಿಪ್ರಾಯಕ್ಕೆ ಪೋಷಕವಾಗಿದೆ. ಭೂತಗಳಿಗೆ ಸಂಬಂಧಿಸಿದ ಪಾಡ್ದನಗಳಲ್ಲಿ ಉಗಮಕ್ಕೆ ಸಂಬಂಧಪಟ್ಟ ಪಾಡ್ದನಗಳು ಸಂಸ್ಕೃತಿಯ ಬಗ್ಗೆ ಹೆಚ್ಚಿನ ವಿಚಾರಗಳನ್ನು ಏನನ್ನೂ ಹೇಳುವುದಿಲ್ಲ. ಏಕೆಂದರೆ ಬಹುಮಟ್ಟಿಗೆ ಅವು ಪೌರಾಣಿಕ ಚೌಕಟ್ಟಿನಲ್ಲಿ ಕಾಣಿಸಿಕೊಂಡು, ತುಳುನಾಡಿನ ವಾಸ್ತವಿಕ ನೆಲೆಗಟ್ಟಿನಿಂದ ದೂರವಾಗಿವೆ. ಆದರೆ ಭೂತಗಳ ಮಹಿಮೆ ಮತ್ತು ಪ್ರಸರಣಕ್ಕೆ ಸಂಬಂಧಿಸಿದ ಪಾಡ್ದನಗಳಲ್ಲಿ ತುಳುನಾಡಿನ ಸಂಸ್ಕೃತಿಯ ಚಿತ್ರಣಗಳು ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತವೆ. ಇಂತಹ ಪಾಡ್ದನಗಳು ಸಹಜವಾಗಿಯೇ ತುಳುನಾಡಿನ ಪರಿಸರದಲ್ಲಿ ಕ್ರಿಯಾತ್ಮವಾಗಿರುವುದು ಇದಕ್ಕೆ ಕಾರಣವಾಗಿದೆ. ಭೂತಗಳಿಗೆ ಸಂಬಂಧಿಸದ, ಆದರೆ ತುಳುನಾಡಿನಲ್ಲಿ ಜನಪ್ರಿಯವಾಗಿರುವ ಎರಡು ಪಾಡ್ದನಗಳಾದ 'ಕೋಟಿ ಚೆನ್ನಯ' ಮತ್ತು 'ಸಿರಿ'ಯ ಪಾಡ್ದನಗಳು ತುಳುನಾಡಿನ ಸಂಸ್ಕೃತಿಯ ಚಿತ್ರಣದ ದೃಷ್ಟಿಯಿಂದ ಬಹಳ ಮುಖ್ಯವಾಗಿವೆ. ಯಾವುದೇ ಭೂತಗಳ ಪಾಡ್ದನಗಳಲ್ಲಿ ಸಿಕ್ಕುವುದಕ್ಕಿಂತ ಅಧಿಕ ಪ್ರಮಾಣದಲ್ಲಿ ಈ ಎರಡು ಪಾಡ್ದನಗಳಲ್ಲಿ ಸಂಸ್ಕೃತಿಯ ವಿವರಗಳು ದೊರೆಯುತ್ತವೆ. ಈ ಎರಡು ಪಾಡ್ದನಗಳ ವಸ್ತು ತುಳುನಾಡಿನ ಎರಡು ಸಾಮಾಜಿಕ ಗುಂಪುಗಳಾದ ಬಿಲ್ಲವ ಮತ್ತು ಬಂಟರ ಸಮಾಜಗಳಿಗೆ ಸಂಬಂಧಪಟ್ಟಿರುವುದೂ ಈ ಎರಡು ಪಾಡ್ದನಗಳು ಘಟನಾ ಪರಂಪರೆಗಳಿಂದ ಕೂಡಿಕೊಂಡು ದೀರ್ಘವಾಗಿ ಬೆಳೆದು ಜನಪದ ಮಹಾಕಾವ್ಯಗಳ ಸ್ವರೂಪವನ್ನು ಪಡೆದಿರುವುದೂ ಇವಕ್ಕೆ ಕಾರಣವಾಗಿದೆ. ಪಾಡ್ದನಗಳಲ್ಲಿ ವ್ಯಕ್ತವಾಗುವ ತುಳುನಾಡಿನ ಸಂಸ್ಕೃತಿ ಯನ್ನು ಕೆಲವು ಪ್ರಮುಖ ಪಾಡ್ದನಗಳ ಸಹಾಯದಿಂದ ಅಭ್ಯಾಸ ಮಾಡಬಹುದು. ಅಧ್ಯಯನದ ದೃಷ್ಟಿಯಿಂದ ಸಂಸ್ಕೃತಿಯ ಬೇರೆ ಬೇರೆ ಅಂಶಗಳನ್ನು ಬೇರೆ ಬೇರೆಯಾಗಿ ಗಮನಿಸಲಾಗಿದೆ.

## 1. ತುಳುನಾಡಿನ ಬೇರೆ ಬೇರೆ ಜನಾಂಗಗಳು, ವೃತ್ತಿಕಾರರು

ತುಳುನಾಡಿನ ಪ್ರಾಚೀನವಾದ ಹೆಚ್ಚಿನ ಜನಾಂಗಗಳು ಒಂದೊಂದು ನಿರ್ದಿಷ್ಟ ಕಸುಬನ್ನು ಮಾಡುವ ಸಾಮಾಜಿಕ ಗುಂಪುಗಳಾಗಿ ಕಾಣಿಸಿಕೊಳ್ಳುತ್ತವೆ. ಮುಂದೆ ಇದೇ ಜನಾಂಗಗಳು ಜಾತಿಗಳ ರೂಪದಲ್ಲಿ ಕಾಣಿಸಿಕೊಳ್ಳುವುದನ್ನು ನೋಡಬಹುದು ಇಲ್ಲಿ ಹೆಚ್ಚಿನ ಗುಂಪುಗಳೆಲ್ಲ ಇಂದಿಗೂ ತುಳುನಾಡಿನ ಸಮಾಜದಲ್ಲಿ ಇರುವವುಗಳೇ ಆಗಿವೆ. ಆದರೆ ವೃತ್ತಿಗಳ ದೃಷ್ಟಿಯಿಂದ ಸಾಂಪ್ರದಾಯಿಕ ಸ್ವರೂಪ ಹೊರಟು

ಹೋಗಿ ಎಲ್ಲಾ ಆಧುನಿಕ ಸಮಾಜಗಳ ಹಾಗೆಯೇ ಜಾತಿ ಮತ್ತು ಕಸುಬುಗಳ ನಡುವೆ ಸ್ಪಷ್ಟವಾದ ಸಂಬಂಧ ಗೋಚರವಾಗುವುದಿಲ್ಲ.

## 1. ಬ್ರಾಹ್ಮಣರು

ಪಾಡ್ದನಗಳಲ್ಲಿ ಬ್ರಾಹ್ಮಣ ಸಮಾಜ ಧಾರ್ಮಿಕ ಕಸುಬಿಗೆ ಸಂಬಂಧಿಸಿದಂತೆ ಚಿತ್ರಿತವಾಗಿದೆ. ಭೂತಾರಾಧನೆಗೆ ಸಂಬಂಧಿಸಿದ ಭೂತದ ಮಹಿಮೆಯನ್ನು ಹೇಳುವ ಎಲ್ಲಾ ಪಾಡ್ದನಗಳಲ್ಲಿಯೂ ಬ್ರಾಹ್ಮಣರು 'ಬಲ್ಮೆ'ಯ (ನಿಮಿತ್ತ ನೋಡುವ) ಭಟ್ಟರಾಗಿ, ಪಂಚಾಂಗ ನೋಡುವ ಭಟ್ಟರಾಗಿ, ಪ್ರಶ್ನೆಯ ರೂಪದ ಭವಿಷ್ಯ ಹೇಳುವ ಭಟ್ಟರಾಗಿ ಭೂತದ ಸ್ಥಾನದ ನಿರ್ಮಾಣದಲ್ಲಿ ಎಲ್ಲಾ ಧಾರ್ಮಿಕ ವಿಧಿಗಳನ್ನು ನಡೆಸಿ ಕೊಡುವ ಆಚರಣೆಯ ಭಟ್ಟರಾಗಿ, ಕಂಡು ಬರುತ್ತಾರೆ. ಇವರಲ್ಲಿ 'ತಂತ್ರಿ' ಎನ್ನುವ ಹೆಸರಿನವರು ಇದ್ದಾರೆ. 'ಜಾರಂತಾಯ' ಪಾಡ್ದನದಲ್ಲಿ "ಬಾಲೆ ಪೈಲ್‌ತ ಬಟ್ಟೆರ್, ದೇರೆ ಬೈಲ್ ತಂತ್ರಿ" ಎನ್ನುವ ಮಾತು ಇದೆ. ಎಲ್ಲಿಯಾದರೂ ಒಂದು ಕಡೆ ಭೂತದ ಉಪದ್ರವ ಕಂಡುಬಂದಾಗ ಆ ಮನೆಯ ಯಜಮಾನನು ಬಲ್ಮೆಯ ಭಟ್ಟರಲ್ಲಿಗೆ ಬರುತ್ತಾನೆ. ಅವರು ಬಲ್ಮೆಯ ಮೂಲಕ ಅಥವಾ ಪಂಚಾಂಗ ನೋಡಿ 'ಅದು ಇಂತಹ ಭೂತದ ಉಪದ್ರ, ಅದಕ್ಕೆ ಸ್ಥಾನ ಕಟ್ಟಿಸಿ ಬಲಿ ನೇಮ ಕೊಡಬೇಕು' ಎಂದು ಹೇಳುತ್ತಾರೆ. ಪಂಜುರ್ಲಿ ಭೂತದ ಒಂದು ಪಾಡ್ದನದಲ್ಲಿ ಇಂತಹ ಒಬ್ಬ ಭಟ್ಟರ ಚಿತ್ರಣ ವಿವರವಾಗಿ ಬಂದಿದೆ.

ಬ್ರಾಹ್ಮಣರಿಗೆ ದೇವಸ್ಥಾನವು ಪೂಜೆಯ ಸ್ಥಳ ಎನ್ನುವುದು 'ಸಾರಾಲ ಜುಮಾದಿ'ಯ ಪಾಡ್ದನ, 'ಮುಡದೇರ್ ಕಾಳಭೈರವ' ಪಾಡ್ದನಗಳಲ್ಲಿ 'ಬ್ರಾಣಿ ಕಟ್ಟಾಯಿ ದೇವಸ್ಥಾನೋ' (ಬ್ರಾಹ್ಮಣ ಕಟ್ಟಿಸಿದ ದೇವಸ್ಥಾನ) ಎನ್ನುವ ಮಾತಿನ ಮೂಲಕ ವ್ಯಕ್ತವಾಗಿದೆ.

'ಕೋಟಿ ಚೆನ್ನಯ' ಪಾಡ್ದನದಲ್ಲಿ ಆಗಿನ ಕಾಲದ ಬ್ರಾಹ್ಮಣ ಸಮಾಜದ ಒಂದು ವಿಶಿಷ್ಟ ಪದ್ಧತಿಯು ಚಿತ್ರಿತವಾಗಿದೆ. ದೇಯಿ ಎಂಬ ಬ್ರಾಹ್ಮಣ ಹುಡುಗಿಯು ಮದುವೆಯಾಗುವ ಮೊದಲೇ ಮೈನೆರೆದುದಕ್ಕೆ ಅವಳ ಕಣ್ಣಿಗೆ ಬಟ್ಟೆ ಕಟ್ಟಿ ಕಾಡಿಗೆ ಬಿಡುತ್ತಾರೆ. ಅವಳನ್ನು ಸಾಯನ ಬೈದ್ಯ ಸಾಕುತ್ತಾನೆ. ಅವಳು ಕೋಟಿ ಚೆನ್ನಯರ ತಾಯಿಯಾಗುತ್ತಾಳೆ. ಬ್ರಾಹ್ಮಣರು ಹೊಲದ ಬೇಸಾಯವನ್ನು ಮಾಡುತ್ತಿದ್ದರು ಎನ್ನುವುದಕ್ಕೆ ಕೋಟಿ ಚೆನ್ನಯ ಪಾಡ್ದನದಲ್ಲಿ ಒಂದು ಆಧಾರ ದೊರೆಯುತ್ತದೆ. ಎಣ್ಮೂರಿನ ಬಲ್ಲಾಳನು ಕೋಟಿ ಚೆನ್ನಯರಲ್ಲಿ ನಿಮಗೆ ಎಂತಹ ಗದ್ದೆ ಬೇಕು ಎಂದು ಕೇಳುವಾಗ, "ಬಿರ್ಣ ಬೆರಂಪೊಳ್ಳಿ ಬೋಡಾ" (ಬ್ರಾಹ್ಮಣರು ಬೇಸಾಯ ಮಾಡುವ ಬೆರಂಪೊಳ್ಳಿ ಗದ್ದೆ ಬೇಕೆ ?) ಎಂದು ಕೇಳುತ್ತಾನೆ. ದೇವಾಲಯಗಳ ಪೂಜೆಯ ಕೆಲಸ ಮಾಡುವ ಬ್ರಾಹ್ಮಣರಿಗೆ ಉಂಬಳಿ ಬಿಡುವ ವಿಚಾರ ಸಿರಿಗಳ ಪಾಡ್ದನದಲ್ಲಿ ಬರುತ್ತದೆ.

## 2. ಬಂಟರು

ತುಳುನಾಡಿನ ಒಂದು ಪ್ರತಿಷ್ಠಿತ ಮನೆತನವಾದ ಬಂಟ ಸಮಾಜದ ಬಗ್ಗೆ ಸಮಗ್ರವಾಗಿ ಸಿರಿಯ ಪಾಡ್ದನವು ವಿವೇಚಿಸುತ್ತದೆ. ಕೋಟಿ ಚೆನ್ನಯ, ಸಾರಾಲ ಜುಮಾದಿ ಮುಂತಾದ ಪಾಡ್ದನಗಳಲ್ಲಿಯೂ ಬಂಟ ಸಮಾಜದ ಉಲ್ಲೇಖವನ್ನು ಕಾಣಬಹುದು. ಕೋಟಿ ಚೆನ್ನಯ ಪಾಡ್ದನದಲ್ಲಿ ಒಂದು ಕಡೆ 'ಬಂಟ ಮಗೆ ಬಾರಗೆ ಮೂಳೆ ಪೋಯೆನ' ಎನ್ನುವ ಮಾತು ಬರುತ್ತದೆ. ಬಂಟರನ್ನು 'ಬಾರಗರು' ಎಂದು ಕರೆಯುವ ರೂಢಿ ಇದೆ. ಭೂತದ ಉತ್ಸವಗಳಲ್ಲಿ ಅವರನ್ನು ಭೂತವು 'ಬಾರಗೆರೆ' ಎಂದು ಕರೆಯುತ್ತದೆ. ಈ 'ಬಾರಗ' ಎಂಬ ಶಬ್ದ ಬಾರ್+ಮಗ—ಬಾರ್ ಅಗ—ಬಾರಗ ಎಂದು ಆಗಿರಬೇಕು. ಇಲ್ಲಿ 'ಬಾರ್' ಅಂದರೆ 'ಭತ್ತ'

'ಮಗ' ಎಂದರೆ 'ಆ ವಂಶದವ' ಎಂಬ ಅರ್ಥ. ಅಂದರೆ 'ಛತ್ರದ ವಂಶದವರು' ಎಂದು ಆಗುತ್ತದೆ. ತುಳುನಾಡಿನಲ್ಲಿ ಬಂಟ ಸಮಾಜದವರು ಸಾಂಪ್ರದಾಯಿಕವಾಗಿ ಛತ್ರದ ಬೇಸಾಯವನ್ನು ಮಾಡುವವರು. ಆದ್ದರಿಂದ ಅವರಿಗೆ 'ಬಾರಗ' ಎಂಬ ಹೆಸರು ಬಂದಿರಬೇಕು. 'ಕೋಟಿ ಚೆನ್ನಯ' ಪಾಡ್ದನದಲ್ಲಿ ಎಣ್ಮೂರಿನ ಬಲ್ಲಾಳನು ಕೋಟಿ ಚೆನ್ನಯರಲ್ಲಿ 'ನಿಮಗೆ ಯಾವ ಗದ್ದೆ ಬೇಕು?' ಎಂದು ಕೇಳುವಾಗ "ವಕ್ಕೆಲಾಯ ಗುತ್ತು ಬರ್ಕೆ ಬೋಡಾ ?' (ಬಂಟರ ಬಾರಿಕೆ ಬೇಕೋ?) ಎನ್ನುತ್ತಾನೆ. ಇಲ್ಲಿ 'ಬಂಟ'ರಿಗೆ 'ಒಕ್ಕಲಾಯರು' ಎಂದು ಕರೆಯಲಾಗಿದೆ. 'ಒಕ್ಕೆಲಾಯ' ಎಂದರೆ 'ಒಕ್ಕಲಿಗ' ಅಂದರೆ ಬೇಸಾಯಗಾರ, ಕೃಷಿಕ ಎಂದು ಅರ್ಥ. 'ಸಾರಾಲ ಜುಮಾದಿ' ಪಾಡ್ದನದಲ್ಲಿ "ಅವುಳ್ ದುಗ್ಗ ಬಂಜಾರಿಂದ್ ಪೊರಿ ಒಕ್ಕೆಲ್ಮೆ" "ಕೋಚಾರಾಳ್, ತ್ಯಾಂಪಾರಾಳ್, ಅಕುಲೆ ಇಲ್ಲಡ್ ಬತ್ತ್‌ದ್ ಸಂಕಡ ಕೊನೊದ್ ಪಾಡಿಯೆ" (ಅಲ್ಲಿ ದುಗ್ಗ ಬಂಡಾರಿ ಎಂಬ ಬಂಟನಿದ್ದನು ಒಬ್ಬ" ಕೋಚಿ ರೈ ತ್ಯಾಂಪ ರೈ, ಅವರ ಮನೆಯಲ್ಲಿ ಬಂದು ಸಂಕಟ ತಂದು ಹಾಕಿದನು"). ಇಲ್ಲಿ 'ಒಕ್ಕಲ್‌ಮೆ' ಎನ್ನುವ ಪದ 'ಒಕ್ಕಲಿಗ' ಎನ್ನುವ ಅರ್ಥದಲ್ಲಿ 'ಬಂಟ'ರಿಗೆ ಅನ್ವಯವಾಗಿದೆ. ದುಗ್ಗ ಬಂಡಾರಿ ಎಂದು ಬಂಟನೊಬ್ಬನ ಹೆಸರು ಇರುವಾಗ, 'ಬಂಡಾರಿ' ಎನ್ನುವುದು 'ಬಂಟ' ಜಾತಿಯ ಒಂದು ಉಪನಾಮವಾಗಿ ಇಲ್ಲಿ ಕಾಣಿಸುತ್ತದೆ. ಹಾಗೆಯೇ ಮುಂದಿನ ವಾಕ್ಯದಲ್ಲಿ ಕೋಚರೈ, ತ್ಯಾಂಪರೈ ಎನ್ನುವ ಇಬ್ಬರು ಬಂಟರ ಹೆಸರುಗಳಲ್ಲಿ 'ರೈ' ಎನ್ನುವುದು ಬಂಟರ ಒಂದು ಉಪನಾಮವಾಗಿ ಕಾಣಿಸಿಕೊಳ್ಳುತ್ತದೆ. ಇಲ್ಲಿನ 'ಬಂಡಾರಿ' ಮತ್ತು 'ರೈ' ಎನ್ನುವ ಉಪನಾಮಗಳು ಬಂಟ ಸಮಾಜದಲ್ಲಿ ಇಂದಿಗೂ ಪ್ರಚಲಿತವಾಗಿವೆ.

'ಸಿರಿ'ಯ ಪಾಡ್ದನದಲ್ಲಿ ಬಂಟ ಸಮಾಜದ ಬೇರೆ ಬೇರೆ ವ್ಯಕ್ತಿಗಳು ಮತ್ತು ಅವರ ಅನೇಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಗತಿಗಳ ವಿವರಗಳು ಸಿಗುತ್ತವೆ. ಬಿರ್ಮು ಆಳ್ವ, ಕಾಂತ ಆಳ್ವ, ಶಂಕರ ಆಳ್ವ, ರೊಡ್ಸ್‌ರ ಆಳ್ವ, ಕಾಂತ ಪೂಂಜ, ಸಿರಿ, ಸೊನ್ನೆ, ಅಬ್ಬಗೆ-ದಾರಗೆ ಇಂತಹ ಬೇರೆ ಬೇರೆ ವ್ಯಕ್ತಿಗಳ ಮೂಲಕ ಆಗಿನ ಕಾಲದ ಬಂಟ ಸಮಾಜದ ಸ್ವರೂಪವನ್ನು ಕೊಡಲಾಗಿದೆ. ಆ ಸಮಾಜದ ಜನನ ಮರಣ, ಶ್ರಾದ್ಧ, ಸೀಮಂತ, ಮದುವೆ, ಋತುಸ್ನಾನ, ನ್ಯಾಯ ಪಂಚಾಯಿತಿ, ಮನೋರಂಜನೆ ಮೊದಲಾದ ವಿವರಗಳು ಇಲ್ಲಿ ವರ್ಣಿತವಾಗಿವೆ. ಆಳ್ವ, ಹೆಗ್ಗಡೆ, ಪೂಂಜ, ಮರ್ದ, ಮಾರ್ಲ, ಶೆಟ್ಟಿ ಮೊದಲಾದ ಬಂಟರ ಉಪನಾಮಗಳು ಇಲ್ಲಿ ದೊರೆಯುತ್ತವೆ. ಬಂಟರ ಬೀಡುಗಳಾದ ಗುತ್ತು, ಬಾಳಿಕೆ, ಪರಾರಿ, ಬಾವ-ಈ ವ್ಯವಸ್ಥೆಯ ವಿಚಾರವಿದೆ. ಬಂಟ ಸಮಾಜದ ಸ್ತ್ರೀ ಪ್ರಾಧಾನ್ಯ, ಅಳಿಯ ಸಂತಾನ ಪದ್ಧತಿ, ವಿವಾಹ ವಿಚ್ಛೇದನದ ಕ್ರಮ, ವರದಕ್ಷಿಣೆಯ ಸ್ವರೂಪ ಮುಂತಾದ ಅಂಶಗಳು ಪ್ರತಿಪಾದಿತವಾಗಿವೆ (ಸಿರಿಗಳ ಪಾಡ್ದನದಲ್ಲಿ ಸಂಸ್ಕೃತಿಯ ಬೇರೆ ಬೇರೆ ಅಂಗಗಳನ್ನು ಆಯಾಯ ಸಂದರ್ಭಗಳಲ್ಲಿ ವಿವರಿಸಲಾಗಿದೆ).

### 3. ಜೈನರು

ತುಳುನಾಡನ್ನು ಆಳಿದ ಸ್ಥಳೀಯ ಅರಸು ಮನೆತನಗಳು ಹೆಚ್ಚಿನವು ಜೈನ ಧರ್ಮದವು. ಕಾರ್ಕಳದ ಭೈರರಸರು, ಬಂಗರು, ಚೌಟರು, ಅಜಿಲರು ಮುಂತಾದ ಅನೇಕ ಜೈನ ತುಂಡರಸರು ಹದಿಮೂರನೇ ಶತಮಾನದಿಂದ ಸುಮಾರು ಹದಿನೇಳನೇ ಶತಮಾನದವರೆವಿಗೆ ತುಳುನಾಡನ್ನು ಕೆಲವು ಬಾರಿ ಸಾಮಂತರಾಗಿ, ಇನ್ನು ಕೆಲವು ಬಾರಿ ಸ್ವತಂತ್ರವಾಗಿ ಆಳಿದ್ದಾರೆ. ಬ್ರಿಟಿಷರ ಆಳ್ವಿಕೆಯಲ್ಲಿ ತುಳುನಾಡು ಸೇರಿಹೋದ ಮೇಲೆ ಜೈನ ಅರಸು ಮನೆತನದವರು ಬಲ್ಲಾಳರೆಂಬ ಹೆಸರಿನಲ್ಲಿ ಒಂದೊಂದು ಬೀಡನ್ನು ಆಳುತ್ತಿದ್ದರು. ಇಂತಹ ಬಲ್ಲಾಳರ ಬಗ್ಗೆ ಪಾಡ್ದನಗಳಲ್ಲಿ ಹೆಚ್ಚಾಗಿ ಉಲ್ಲೇಖಗಳು ದೊರೆಯುತ್ತವೆ. 'ಕೋಟಿ ಚೆನ್ನಯ ಪಾಡ್ದನ'ದಲ್ಲಿ ಪೆರ್ಮಲೆ, ಪಂಜ ಮತ್ತು ಎಣ್ಮೂರಿನ ಬಲ್ಲಾಳರು, 'ಪಂಜುರ್ಲಿ ಪಾಡ್ದನ'ದಲ್ಲಿ ಮರ್ದಾಲದ ಬಲ್ಲಾಳ, 'ಮಲಾರ ಪಂಜುರ್ಲಿ ಪಾಡ್ದನ'ದಲ್ಲಿ ಮಲಾರಿನ ಬಲ್ಲಾಳರು, ಜತ್ರಾದೆ ಬಾರಿ ಬಲ್ಲಾಳರು, ಜೇಂಗ್ರಿ ಕಾಪೊರಿ ಬಲ್ಲಾಳ, ಬಂಪಾಡ ಬಲ್ಲಾಳರು, 'ಅಂಬಡಾಡಿ ಪಂಜುರ್ಲಿ' ಪಾಡ್ದನದಲ್ಲಿ ಕೋಚಾಳ್ವ ಬಲ್ಲಾಳ, "ಬಾಲೆ ಕಿನ್ಯಾಮು

ಪಾಡ್ದನ"ದಲ್ಲಿ ಬರುವ ಬಲ್ಲಾಳ–ಇದೇ ರೀತಿ ಇನ್ನೂ ಅನೇಕ ಪಾಡ್ದನಗಳಲ್ಲಿ ಬೀಡನ್ನು ಆಳುವ ಬಲ್ಲಾಳರೆಂಬ ಜೈನ ತುಂಡರಸರು ಕಾಣಸಿಗುತ್ತಾರೆ. ಇಂದಿಗೂ ಜೈನರಲ್ಲಿ 'ಬಲ್ಲಾಳ' ಎನ್ನುವುದು ಹೆಸರಿನ ಕೊನೆಯಲ್ಲಿ ಒಂದು ಉಪನಾಮವಾಗಿ ಉಳಿದುಕೊಂಡು ಬಂದಿದೆ.

ತುಳುನಾಡಿನ ಜೈನ ಅರಸರಲ್ಲಿ ಹೆಚ್ಚು ವಿವರವಾಗಿ ಐತಿಹಾಸಿಕ ಸ್ವರೂಪದಲ್ಲಿ ಕಾಣಿಸಿಕೊಳ್ಳುವವರು ಎಂದರೆ ಕಲ್ಕುಡ-ಕಲ್ಲುರ್ಟಿ ಪಾಡ್ದನಗಳಲ್ಲಿ ಕಾರ್ಕಳದ ಭೈರರಸರು ಮತ್ತು ವೇಣೂರಿನ ಅಜಿಲರು. ಕಾರ್ಕಳದಲ್ಲಿ ಮತ್ತು ವೇಣೂರಿನಲ್ಲಿ ಗೊಮ್ಮಟ ಪ್ರತಿಮೆಗಳನ್ನು ಸ್ಥಾಪಿಸಿದ ಮತ್ತು ಇತರ ಅನೇಕ ಬಸದಿ ಮುಂತಾದ ಜೈನ ಶಿಲ್ಪ ರಚನೆಗಳನ್ನು ನಿರ್ಮಾಣ ಮಾಡಿದ ಎರಡು ಪ್ರಸಿದ್ಧ ಜೈನ ಅರಸು ಮನೆತನಗಳು ಇಲ್ಲಿ ವರ್ಣಿತವಾಗಿವೆ. ವಜ್ರಂದ ಕುಮಾರ ಪಾಡ್ದನದಲ್ಲಿ ಬಂಗಾಡಿಯ ಬಂಗರು ಮತ್ತು ಚೌಟರಸರ ಉಲ್ಲೇಖವಿದೆ. "ಮುಂಡದೇರ್ ಕಾಳಭೈರವ" ಪಾಡ್ದನದಲ್ಲಿ ಉಳ್ಳಾಲದ ಚೌಟರ ಹೆಸರು ಬರುತ್ತದೆ. ಕೋಟಿ ಚೆನ್ನಯ ಪಾಡ್ದನದಲ್ಲಿ ಒಂದು ಕಡೆ 'ಬಂಗೆರೆ ಬಲ್ ಸುಂಕೊ, ಮೂಳ್ಯೆರೆ ಮೂಳಿ ಸುಂಕೊ, ಚೌಟೆರೆ ಸರಪಡಿ ಗೆತ್ತೊಂದುಪ್ಪುಲ" ಎನ್ನುವ ಮಾತು ಬರುತ್ತದೆ. ಇದು ಮೂರು ಜೈನ ಅರಸು ಮನೆತನಗಳಾದ ಬಂಗರು ಮೂಲರು ಮತ್ತು ಚೌಟರ ಸುಂಕದ ಪದ್ಧತಿಯನ್ನು ಹೇಳುತ್ತದೆ.

ಜೈನರ ಧಾರ್ಮಿಕ ಸ್ಥಾನವಾದ ಬಸದಿಯ ಹೆಸರು ಪಾಡ್ದನಗಳಲ್ಲಿ ಅನೇಕ ಬಾರಿ ದೊರೆಯುತ್ತದೆ. 'ಸಾರಾಲ ಜುಮಾದಿ' ಪಾಡ್ದನದಲ್ಲಿ 'ಶೆಟ್ಟಿ ಕಟ್ಟಾಯಿ ಬಸ್ತಿ ಕಡತೆ' ಎಂದೂ 'ಮುಂಡದೇರ್ ಕಾಳಭೈರವ' ಪಾಡ್ದನಗಳಲ್ಲಿ 'ಶೆಟ್ಟಿಲು ಕಟ್ಟಿ ಬಸ್ತಿ ಕಡತೆರ್' ಎಂದೂ ಹೇಳಲಾಗಿದೆ. ಇಲ್ಲಿ ಬಸದಿಗಳನ್ನು ಕಟ್ಟಿಸಿದವರು ಶೆಟ್ಟಿಗಳು. ಈ 'ಶೆಟ್ಟಿ' ಎನ್ನುವುದು ಜೈನರಿಗೆ ಅನ್ವಯವಾಗುವ ಶಬ್ದ. ತುಳುನಾಡಿನಲ್ಲಿ ವ್ಯಾಪಾರ ಮಾಡುತ್ತಿದ್ದ ಜೈನಮತದವರನ್ನು 'ಜೈನ ಶೆಟ್ಟಿಗಳು' ಎಂದು ಕರೆಯುತ್ತಾರೆ. ಜೈನರಲ್ಲಿ ಈಗಲೂ ಶೆಟ್ಟಿ ಎಂಬ ಉಪನಾಮವು ರೂಢಿಯಲ್ಲಿದೆ.

ಕಲ್ಲುರ್ಟಿ ಪಾಡ್ದನದಲ್ಲಿ ಬೆಳಗೊಳದ ಬಲ್ಲಾಳನು "ಪೋಸೊದ ಪೇಳ್ಯಾಂಡ್" (ಪೋಸದ ವೇಳೆ ಯಾಯಿತು) ಎಂದು ಶಂಭುಕಲ್ಕುಡನಲ್ಲಿ ಹೇಳಿದನು. ಇಲ್ಲಿ 'ಪೋಸೊ' ಅಂದರೆ ಜೈನರ ಒಂದು ಧಾರ್ಮಿಕ ವಿಧಿ. ಅಂದರೆ, ಜೈನರು ಸಂಜೆಯ ಹೊತ್ತು ಸೂರ್ಯಾಸ್ತಮಾನವಾಗುವುದಕ್ಕೆ ಮೊದಲು ತಮ್ಮ ರಾತ್ರಿಯ ಊಟವನ್ನು ಮಾಡುವುದು ಪದ್ಧತಿ. ಇದಕ್ಕೆ 'ಪೋಸೊದ ಊಟ' ಎನ್ನುತ್ತಾರೆ.

## 4. ಬಿಲ್ಲವರು

ತುಳುನಾಡಿನ ಇನ್ನೊಂದು ಪ್ರಸಿದ್ಧ ಸಾಮಾಜಿಕ ವರ್ಗ ಎಂದರೆ 'ಬಿಲ್ಲವ'ರದು. ಬಿರುವ, ಬೈದ್ಯ ಪೂಜಾರಿ ಮೊದಲಾದ ಉಪನಾಮಗಳ ರೂಪದಲ್ಲಿ ಈ ಸಾಮಾಜಿಕ ವರ್ಗ ತುಳುನಾಡಿನಲ್ಲಿ ಕಾಣಿಸಿಕೊಳ್ಳುತ್ತದೆ. ಬಿರುವ (ಬಿಲ್ಲವ) ಎಂದರೆ ಬಿಲ್ಲಿನ ಮೂಲಕ ಬೇಟೆಯಾಡುವವ ಅಥವಾ ಯುದ್ಧ ಮಾಡುವವ ಎಂದು ಅರ್ಥ. ಬೈದ್ಯ ಎಂದರೆ ವೈದ್ಯ ಅಂದರೆ ಔಷಧ, ಮದ್ದುಗಳನ್ನು ಕೊಡುವಾತ. ಪೂಜಾರಿ ಎಂದರೆ ಭೂತದ ಉತ್ಸವಗಳಲ್ಲಿ ಪೂಜಾರಿ ಅಥವಾ ಅರ್ಚಕನಾಗಿ ಕೆಲಸ ಮಾಡುವಾತ. ಪಾಡ್ದನಗಳಲ್ಲಿ ಹೆಚ್ಚಾಗಿ ಬರುವ ಮತ್ತು ಬೈದ್ಯ ಎನ್ನುವ ಪದಗಳು ಸಿಗುತ್ತವೆ. ಆದರೆ ಹೆಚ್ಚಾಗಿ ಪಾಡ್ದನಗಳಲ್ಲಿ ಇವರ ಕಸುಬು ತಾಳೆ ಮರ ಗಳಿಂದ ಹೆಂಡ ಇಳಿಸುವುದು. ಕಳ್ಳು ತೆಗೆಯುವ ಈ ವೃತ್ತಿ ಬಿಲ್ಲವರ ಸಾಂಪ್ರದಾಯಿಕ ಕಸುಬಿನಂತೆ ನಡೆದು ಕೊಂಡು ಬಂದಿದೆ. ಆದರೂ ಇವರ ಬಿಲ್ಲು ವಿದ್ಯೆಯ ಮತ್ತು ವೈದ್ಯಕೀಯ ವಿದ್ಯೆಯ ಸ್ವರೂಪ ಪಾಡ್ದನಗಳಲ್ಲಿ ಕೆಲವೊಮ್ಮೆ ದೊರೆಯುತ್ತದೆ. ಒಂದು ಜನಪ್ರಿಯ ಪಾಡ್ದನವಾದ 'ಕೋಟಿ ಚೆನ್ನಯ'ದಲ್ಲಿ ಪ್ರಧಾನವಾಗಿ ಬಿಲ್ಲವ ವೀರರಾದ ಕೋಟಿ ಚೆನ್ನಯರ ಮೂಲಕ ಆ ಸಮಾಜದ ಸಮಗ್ರ ಚಿತ್ರಣವನ್ನು ಕೊಡಲಾಗಿದೆ.

ಪೆರ್ಮಲೆ ಬಲ್ಲಾಳನ ಕಾಲಿಗೆ ಮುಳ್ಳು ತಾಗಿದಾಗ ಅದಕ್ಕೆ ಮದ್ದು ಮಾಡಲು ಮೊದಲು ಬಿರ್ಮಣ ಬೈದ್ಯ ಬರುತ್ತಾನೆ. ಆಮೇಲೆ ಸಾಯನ ಬೈದ್ಯ ಮತ್ತು ಅವನ ತಂಗಿ ದೇಯಿ ಬೈದ್ಯತಿಯರಿಗೆ ಕರೆ ಹೋಗುತ್ತದೆ. ಇಲ್ಲಿ 'ಬೈದ್ಯ' ಎನ್ನುವ ಪದ ವೈದ್ಯ ಅಂದರೆ ಔಷಧ ಕೊಡುವವ, ಮದ್ದು ಕೊಡುವವ ಎನ್ನುವ ಅರ್ಥದಲ್ಲಿ ಬಂದಿದೆ. ಬಿಲ್ಲವರಲ್ಲಿ ಬೈದ್ಯ ಎನ್ನುವಂತಹ ಒಂದು ವರ್ಗ ಔಷಧ ಚಿಕಿತ್ಸೆಗಳನ್ನು ಮಾಡುತ್ತಿದ್ದರು. ಅದು ವೃತ್ತಿನಾಮದ ಹಾಗೆ ಕಾಣಿಸುತ್ತದೆ. ಆದರೆ ಅನೇಕ ಪಾಡ್ದನಗಳಲ್ಲಿ ಬೈದ್ಯ ಎನ್ನುವುದು ವೃತ್ತಿನಾಮವಾಗಿ ಬಳಕೆಯಾಗದೆ ಜಾತಿಸೂಚಕ ಪದವಾಗಿ ಪ್ರಯೋಗವಾಗಿದೆ. ಕೋಟಿ ಚೆನ್ನಯ ಪಾಡ್ದನದಲ್ಲಿ ಬುದ್ಯಂತನು ಕೋಟಿ ಚೆನ್ನಯರಲ್ಲಿ "ಸಾದೊಳಿಗೆ, ಬೀದೊಳಿಗ್ ಸಿಕ್ಕ್ ಬಿರುವೆರೆ ಅಣಗ್‌ಏರ್ ಕೊರುನಿ" (ಸಾಗುವಳಿ ಕೆಲಸ ನಿಮಗೆ ಬಿಲ್ಲವರ ಹುಡುಗರಿಗೆ ಯಾರು ಕೊಟ್ಟದ್ದು?) ಎಂದು ಕೇಳುತ್ತಾನೆ. ಇಲ್ಲಿ 'ಬಿರುವೆರ್' ಎನ್ನುವ ಪದ ಬಳಕೆಯಾಗಿದೆ. ಇದು ಇಲ್ಲಿ ಜಾತಿಸೂಚಕ ಪದವಾಗಿದೆ. ಬುದ್ಯಂತನ ಮಾತಿನ ಮೂಲಕ ಬಿಲ್ಲವರಿಗೆ ಸಾಂಪ್ರದಾಯಿಕವಾಗಿ ಬೇಸಾಯ ಮಾಡುವ ಉದ್ಯೋಗ ಇಲ್ಲ ಎಂದು ಗೊತ್ತಾಗುತ್ತದೆ.

ಕೋಟಿ ಚೆನ್ನಯ ಪಾಡ್ದನದಲ್ಲಿ ಕೋಟಿ ಚೆನ್ನಯರನ್ನು ಅನೇಕ ಕಡೆಗಳಲ್ಲಿ ಬಂಟೆಲ್ (ಬಂಟರು) ಎಂದು ಕರೆಯಲಾಗಿದೆ. ಬುದ್ಯಂತನ ಹೆಂಡತಿ ಕೋಟಿ ಚೆನ್ನಯರಿಗೆ ಹೇಳುವ ಮಾತು "ಬರಂದಿ ಬಂಟೆಲ್ ದಾನೆ ಬತ್ತರ್" ('ಬಾರದ ಬಂಟರು ಏನು ಬಂದಿರಿ') ಹಾಗೆ ಇನ್ನೊಂದು ಕಡೆ "ಬಂಟೆರೆ ತಿಗಲೆಡ್" (ಬಂಟರ ಎದೆಯಲ್ಲಿ) ಎನ್ನುವ ಮಾತು ಕೋಟಿ ಚೆನ್ನಯರ ಬಗ್ಗೆ ಬರುತ್ತದೆ. ಕೋಟಿ ಚೆನ್ನಯರ ಸಂಧಿಯನ್ನು ರೂಢಿಯಲ್ಲಿ 'ಬಂಟೆರೆ ಸಂಧಿ' ಎಂದು ಕರೆಯುತ್ತಾರೆ. ಈ ಎಲ್ಲಾ ಸಂದರ್ಭಗಳಲ್ಲಿಯೂ ಕೋಟಿ ಚೆನ್ನಯರನ್ನು ಬಂಟರು ಎಂದು ಕರೆದಿರುವುದು ಜಾತಿಯ ದೃಷ್ಟಿಯಿಂದ ಅಲ್ಲ. ಇಲ್ಲಿ ಬಂಟರು ಎನ್ನುವ ಪದ 'ವೀರರು', 'ಸಾಹಸಿಗಳು' ಎನ್ನುವ ಅರ್ಥದಲ್ಲಿ ಪ್ರಯೋಗವಾಗಿದೆಯೇ ಹೊರತು ಬಂಟರು ಎನ್ನುವ ಜಾತಿಯ ಅರ್ಥದಲ್ಲಿ ಅಲ್ಲ.

ಬೈದ್ಯ ಎನ್ನುವ ಪದ ಬಿಲ್ಲವರ ಜಾತಿ ಸೂಚಕವಾಗಿ ಅನೇಕ ಪಾಡ್ದನಗಳಲ್ಲಿ ಸಿಗುತ್ತದೆ. ಇಲ್ಲೆಲ್ಲ ತಾಳೆ ಮರದಿಂದ ಕಳ್ಳು ಇಳಿಸುವ ಉದ್ಯೋಗದವರಾಗಿ ಬೈದ್ಯರು ಚಿತ್ರಿತರಾಗಿದ್ದಾರೆ. ಭೂತಗಳ ಮಹಿಮೆಯನ್ನು ಸಾರುವ ಅನೇಕ ಪಾಡ್ದನಗಳಲ್ಲಿ ಹೆಂಡ ಇಳಿಸುವ ಬೈದರಿಗೆ ಉಪದ್ರ ಕೊಟ್ಟು ಆ ಮೂಲಕ ಸ್ಥಾನವನ್ನು ಕಟ್ಟಿಸಿಕೊಂಡು ಒಂದು ಕಡೆಯಲ್ಲಿ ನೆಲೆಯೂರುವ ರೀತಿಯನ್ನು ಕಾಣಬಹುದು. "ಕೊರಗ ತನಿಯ" ಪಾಡ್ದನದಲ್ಲಿ ಕಳ್ಳು ಮಾರುವ ಮರಕ್ಕೆ ಬೈದ್ಯದಿ, ಬೊಬ್ಬರ್ಯ ಪಾಡ್ದನದಲ್ಲಿ ಪೊಂಗದೇರ್ ಬೈದ್ಯ, ಜುಮಾದಿ ಭೂತದ ಪಾಡ್ದನದಲ್ಲಿ ಅಡೂರ ದೇರಬೈದ್ಯ, ಕೋಟಿ ಚೆನ್ನಯ ಪಾಡ್ದನದಲ್ಲಿ ಪೈಯ್ಯಬೈದ್ಯ ಮುಂತಾದವರನ್ನು ಕಾಣಬಹುದು.

## 5. ಮೊಗೇರರು

ತುಳುನಾಡಿನ ಮೊಗೇರರು ಅಥವಾ ಮೊಗವೀರರು ಸಾಂಪ್ರದಾಯಿಕವಾಗಿ ಮೀನುಗಾರಿಕೆಯ ಕಸುಬನ್ನು ಮಾಡುವವರು. "ಮಂಗಕಲ" ಎನ್ನುವ ಪದ ಕೂಡಾ ಸಾಮಾನ್ಯವಾಗಿ ಈಗ ಮೊಗವೀರ ಎಂಬ ಅರ್ಥದಲ್ಲಿ ಪ್ರಯೋಗವಾಗುತ್ತದೆ. "ಕೋಟಿ ಚೆನ್ನಯ" ಪಾಡ್ದನದಲ್ಲಿ ಒಂದು ಕಡೆ 'ಬಿರು ಪತ್ ಮುಗೆರೆ ಆಯೆ ಬರೊಡಾಂಡೆ' (ಬಿಲ್ಲು ಹಿಡಿದ ಮೊಗೇರ ಅವನು ಬರಬೇಕಾಯಿತು) ಎಂಬ ಮಾತು ಸಿಗುತ್ತದೆ. ಅಂದರೆ ಇವರು ಬಿಲ್ಲು ಹಿಡಿದು ಯುದ್ಧ ಮಾಡುವ ವೀರರು ಆಗಿದ್ದರು ಎಂದು ಭಾವಿಸಬಹುದು. ಇಂತಹ ವೀರರಿಗೆ "ಮೊಗವೀರ" ಎನ್ನುವ ಹೆಸರು ಸರಿಯಾಗಿ ಒಪ್ಪುತ್ತದೆ. ಪಂಜುರ್ಲಿ ಪಾಡ್ದನದಲ್ಲಿ ಬಲ್ಲಾಳರು ಮರಗಳನ್ನು ಸಾಗಿಸಲು ಮಂಗಕಲರನ್ನು ನೇಮಿಸುತ್ತಾರೆ. ಆಗ ಮಂಗಕಲರು ಹೇಳುವ ಮಾತು ಈ ರೀತಿ ಬರುತ್ತದೆ. "ಅಯ್ಯ, ಯೆಂಕುಳು

ಉಳ್ಳಾಯದ ಕಳು ಪಣ್ಬೆಲ್‌ನವು ಉಂಡಾ? ಯಂಕುಳು ಸಾಮಿ ಭೂಮಿಂಗ್ ಅಪಿಲೆಕ್ಕ ಉಪ್ಪುನಾಕುಳು, ಯೆಂಕುಳು ಅಂಚೆತ್ತಿ ದ್ರೋಹಿಳು ಅತ್ತೆ. ಅಂಚಿತ್ತಿನಾಕುಳು ಅತೆಂಡ ಅಂಚಿತ್ತಿ ಜಲಧಿ ಅಯಿ ಕಡೆಲ್‌ದ ಮಿತ್ತ್‌ದಿನೊಕು ರಡ್ಡ್ ಸರ್ತಿ ಪೋಡೊಡು ಪೋದು, ಆ ಮೀನುಳೆ ಕಣತ್‌ದ್ ಇಲ್ಲೆ ಇಲ್ಲುಳೆಗ್ ಕೊಂಡು ಪಾರ್‌ದ್ ಪೂರ್‌ದ್ ವೇಳೆಗೆಪ್ಪುನಾಕುಳು, ಈರೆಗ್ ಸುಳ್ಳು ಪಣಯು" (ಅಯ್ಯ ನಾವು ಒಡೆಯನಲ್ಲಿ ಸುಳ್ಳು ಹೇಳಲಿಕ್ಕೆ ಇದೆಯೇ? ನಾವು ದೇವರಿಗೆ ಮತ್ತು ಭೂಮಿಗೆ ಸರಿಯಾಗುವಂತೆ ಬದುಕುವವರು. ನಾವು ಅಂತಹ ದ್ರೋಹಿಗಳಲ್ಲ. ಅಂತಹವರಾಗಿದ್ದರೆ, ಅಂತಹ ದೊಡ್ಡ ಸಮುದ್ರದ ಮೇಲೆ ದಿನಕ್ಕೆ ಎರಡು ಬಾರಿ ದೋಣಿಯಲ್ಲಿ ಹೋಗಿ, ಅಲ್ಲಿಂದ ಮೀನುಗಳನ್ನು ತಂದು ಮನೆ ಮನೆಗೆ ತೆಗೆದುಕೊಂಡು ಓಡಾಡುತ್ತಾ ಮಾರಾಟಮಾಡಿ ಕಾಲ ಕಳೆಯುವವರು. ನಿಮ್ಮಲ್ಲಿ ಸುಳ್ಳು ಹೇಳಲಾರೆವು). ಮೇಲಿನ ಮಾತಿನಲ್ಲಿ ಮರಕಲರ ಸಾಂಪ್ರದಾಯಿಕ ಕಸುಬಾದ ಮೀನುಗಾರಿಕೆಯ ಚಿತ್ರಣ ದೊರೆಯುತ್ತದೆ. ಅಂತಹ ಮರಕಲರನ್ನೇ ಬಲ್ಲಾಳರು ಮರಗಳನ್ನು ಕಡಿಯಲು ಬಳಸಿರುವುದನ್ನು ನೋಡಿದರೆ 'ಮರಕಲ' ಎಂಬ ಶಬ್ದಕ್ಕೂ ಮರಗಳನ್ನು ಕಡಿಯುವ ಕೆಲಸಕ್ಕೂ ಸಂಬಂಧವಿದ್ದ ಹಾಗೆ ಕಾಣಿಸುತ್ತದೆ. 'ಮರಕಲ' ಎಂದರೆ 'ಮರಗಳನ್ನು ತೆಗೆ' ಅಥವಾ 'ಮರಗಳನ್ನು ಕಡಿಯು' ಎಂಬ ಅರ್ಥ ಆಗುತ್ತದೆ. ಕಡಲಿನಲ್ಲಿ ಮೀನು ಹಿಡಿಯುವ ಕಸುಬನ್ನು ಮಾಡುವ ಮರಕಲರು ತಮ್ಮ ದೋಣಿಗಳಿಗಾಗಿ ವಿಶಿಷ್ಟ ರೀತಿಯ ಮರಗಳನ್ನು ಕಡಿದು ಉಪಯೋಗಿಸುತ್ತಾರೆ. ಈ ರೀತಿ ಅವರ ಕಸುಬು ಮೀನುಗಾರಿಕೆಯಾಗಿದ್ದರೂ ಅದಕ್ಕೆ ಸಿದ್ಧತೆಗಾಗಿ ದೋಣಿಗಳ ಮರವನ್ನು ಕಡಿಯುವುದರಿಂದ 'ಮರಕಲ' ಎಂದು ಹೆಸರು ಬಂದಿರಬಹುದು.

'ಬೊಬ್ಬರ್ಯ'ನ ಪಾಡ್ದನದಲ್ಲಿ ಮರಕಲರು ದೋಣಿಯಲ್ಲಿ ವ್ಯಾಪಾರಕ್ಕೆ ಹೋಗುವ ವಿಚಾರ ಸಿಗುತ್ತದೆ. 'ಕೇತುಪಾಂಡಿ ಪಾಡ್ದನ'ದಲ್ಲಿ ಎದ್ರೋಡಿಕೇತು ಮರಕಲನು ಹಡಗು ಕಟ್ಟಿ ವ್ಯಾಪಾರ ಮಾಡುತ್ತಾನೆ. "ಕೇತು ಮರಕಲೆ ಪುಟ್ಟಿನಿ ಎದ್ರೋಡಿಡ್, ಬಳತಿನಿ ಉದ್ಯಾರೊಡು, ಅಪ್ಪೆ ಕಾಡ್‌ದಿ ಅಮ್ಮೆ ಬೂದ ಮರಕಲೆ" (ಕೇತು ಮರಕಲನು ಹುಟ್ಟಿದ್ದು ಎದ್ರೋಡಿಯಲ್ಲಿ, ಬೆಳೆದದ್ದು ಉದ್ಯಾವರದಲ್ಲಿ, ತಾಯಿ ಕಾಡ್‌ದಿ, ತಂದೆ ಬೂದ ಮರಕಲ). ವಜ್ರಂದಕುಮಾರ ಪಾಡ್ದನದಲ್ಲಿ ಒಬ್ಬ ಮರಕಲ ಹುಡುಗನು ವಜ್ರಂದಕುಮಾರನನ್ನು ಮಗುವಾಗಿದ್ದಾಗ ತಂದು ಅಜ್ಜಿಗೆ ಕೊಡುತ್ತಾನೆ.

## 6. ಆಚಾರಿ

ತುಳುನಾಡಿನಲ್ಲಿ 'ಆಚಾರಿ' ಎಂಬ ಹೆಸರು ಮೂಲತಃ ಕಸುಬಿಗೆ ಸಂಬಂಧಪಟ್ಟದ್ದು. ಇಲ್ಲಿ ಮರದ ಕೆಲಸ ಮಾಡುವವ, ಚಿನ್ನದ ಕೆಲಸ ಮಾಡುವವ, ಕಬ್ಬಿಣದ ಕೆಲಸ ಮಾಡುವವ—ಇವರೆಲ್ಲರನ್ನೂ ಸಾಮಾನ್ಯವಾಗಿ ಆಚಾರಿಗಳು ಎಂದೇ ಕರೆಯುತ್ತಾರೆ. 'ಕೋಟಿ ಚೆನ್ನಯ' ಪಾಡ್ದನದಲ್ಲಿ ನೇಗಿಲಿನ ಕೆಲಸ ಮಾಡುವ ಆಚಾರಿಯ ಬಗ್ಗೆ ವಿವರ ಇದೆ. 'ಪಂಜುರ್ಲಿ'ಯ ಒಂದು ಪಾಡ್ದನದಲ್ಲಿ 'ಆಚಾರಿ' ಎಂದರೆ ಮರ ಕಡಿಯುವವನು ಎನ್ನುವ ವೃತ್ತಿ ಎಂದು ಗೊತ್ತಾಗುತ್ತದೆ. 'ಬೊಬ್ಬರ್ಯ' ಪಾಡ್ದನದಲ್ಲಿ ಆಚಾರಿಯು 'ಮರದ ಕೆಲಸದವನು'. ಅವನು ಮರದಿಂದ ಹಡಗು ಮಾಡುತ್ತಾನೆ. ಅಲ್ಲಿ 'ಮಲೆನಾಡೇಚ್ಚವ' ಎನ್ನುವ ಪದ ದೊರೆಯುತ್ತದೆ. 'ಕಲ್ಲುರ್ಟಿ' ಪಾಡ್ದನದಲ್ಲಿ ಕೂಡ ಇದೇ ಶಬ್ದ ಸಿಗುತ್ತದೆ. ಅಲ್ಲಿ ಆಚಾರಿಗಳ ಬೇರೆ ಬೇರೆ ವೃತ್ತಿಗಳನ್ನು ಆಧರಿಸಿ ಅವರಿಗೆ ಬೇರೆ ಬೇರೆ ಹೆಸರುಗಳು ಇರುವುದನ್ನು ನೋಡಬಹುದು—"ಮರತ್ತ ಬೇಲೆ ಬೆಂದಿನಾಯೆ, ಮಲೆನಾಡೆಚ್ಚವ, ಕರ್ಬೊದ ಬೇಲೆ ಬೆಂದಿನಾಯೆ, ನುಡ್ತಲಚ್ಚವೆ, ಚೆಂಬುದ ಬೇಲೆ ಬೆಂದಿನಾಯೆ ಬೆಮ್ಮಟಗಾರೆ, ಬಂಗಾರ್‌ದ ಬೇಲೆ ಬೆಂದಿನಾಯೆ ಯಾರಣ್ಣೆ, ಕಲ್ಲ್‌ದ ಬೇಲೆ ಬೆಂದಿನಾಯೆ ಕಲ್ಕುಡೆ" (ಮರದ ಕೆಲಸ ಮಾಡಿದವನು ಮಲೆನಾಡೆಚ್ಚವ, ಕಬ್ಬಿಣದ ಕೆಲಸ ಮಾಡುವವನು ನುಡ್ತಲಚ್ಚವ, ಚೆಂಬಿನ ಕೆಲಸ ಮಾಡುವವನು ಜೆಮ್ಮಟಿಗಾರ, ಬಂಗಾರದ ಕೆಲಸ ಮಾಡುವವನು ಯಾರಣ್ಣ, ಕಲ್ಲಿನ ಕೆಲಸ ಮಾಡುವವನು ಕಲ್ಕುಡ). 'ಮಲೆನಾಡ ಎಚ್ಚವ'

ಎನ್ನುವ ಪದ ಮಲೆನಾಡ ಆಚಾರಿ ಎನ್ನುವುದರಿಂದ ಬಂದಿರಬಹುದು. ಮಲೆನಾಡ ಆಚಾರಿ—ಮಲೆನಾಡ ಅಚ್ಚುವ—ಮಲೆನಾಡ ಲಚ್ಚುವ—ಮಲೆನಾಡೆಚ್ಚುವ. 'ಕಂಜಿರ್ಲು' ಪಾಡ್ದನದಲ್ಲಿ ಬೆರ್ಮು ಆಚಾರಿ, ಇಸಕರ್ಮಿ ಆಚಾರಿ ಎನ್ನುವ ಮಾತು ಸಿಗುತ್ತದೆ. ಇಲ್ಲಿ 'ಆಚಾರಿ' ಎನ್ನುವ ಪದಪ್ರಯೋಗ ಆಗಿದೆ. 'ಇಸಕರ್ಮಿ' ಎನ್ನುವ ಪದ 'ವಿಶ್ವಕರ್ಮ' ಎನ್ನುವ ಪದದ ರೂಪಾಂತರ. ಆಚಾರಿ ಕೆಲಸದವನಿಗೆ ವಿಶ್ವಕರ್ಮನು ಕುಲದೇವತೆ ಮರದ, ಕಲ್ಲಿನ, ಚಿನ್ನದ, ಕಬ್ಬಿಣದ—ಮುಂತಾದ ಎಲ್ಲ ವೃತ್ತಿಯವರು ಆಚಾರಿ ವರ್ಗದ ಬೇರೆ ಬೇರೆ ಶಾಖೆಗಳಾಗುತ್ತಾರೆ.

ಈ ದೃಷ್ಟಿಯಿಂದ ಕಲ್ಲಿನ ಕೆಲಸ ಮಾಡುವ ಕಲ್ಕುಡನೇ ಪ್ರಧಾನಪಾತ್ರವಾಗಿರುವ ಕಲ್ಕುಡ—ಕಲ್ಲುರ್ಟಿ ಪಾಡ್ದನವು ಮಹತ್ವಪೂರ್ಣವಾಗಿದೆ. ಈಗಲೂ ಕಲ್ಲಿನ ಕೆಲಸ ಮಾಡುವವರನ್ನು ಕಲ್ಕುಡ ಮತ್ತು ಕಲ್ಲುರ್ಟಿ ಎಂದು ಕರೆಯುತ್ತಾರೆ.

## 7. ಮಡಿವಾಳ

'ಕೋಟಿ ಚೆನ್ನಯ' ಪಾಡ್ದನದಲ್ಲಿ ಕೋಟಿ ಚೆನ್ನಯರು ಒಬ್ಬ ಮಡಿವಾಳನನ್ನು ಭೇಟಿಯಾಗುತ್ತಾರೆ. 'ಅಮಸರಂದ ಮೇನ್ಯೋಡಿ' ಪಾಡ್ದನದಲ್ಲಿ "ಪರಬ ಮಡ್ಯೋಳೆ ಪರಬೋರಿಡ ಮಡಿತ ಕುಂಟುನು ಪತ್ತಾಪೊಂದು ಪೋನಗ ತೈದಿನ ಪಿಲಿ ಸಾಡಿದ್ ಬೂರ್ದುಂಡು. ಮಡಿ ದೆತ್ತ್, ತಾಡಿಗ್ ದಕ್ಕೆ" (ಮುದುಕ ಮಡಿವಾಳನು ಮುದಿ ಎತ್ತಿನ ಮೇಲೆ ಮಡಿ ಮಾಡಿದ ಬಟ್ಟೆಯನ್ನು ಹೊರಿಸಿಕೊಂಡು ಹೋಗುವಾಗ ಸತ್ತ ಹುಲಿ ದಾರಿಯಲ್ಲಿ ಬಿದ್ದಿದೆ. ಮಡಿ ಬಟ್ಟೆಯನ್ನು ತೆಗೆದನು, ದಾರಿಗೆ ಎಸೆದನು). ಈ ಮಾತಿನಲ್ಲಿ ತುಳುನಾಡಿನ ಮಡಿವಾಳರ ಮಡಿ ಮಾಡುವ ವೃತ್ತಿಯ ಸ್ವರೂಪವನ್ನು ಕಾಣಬಹುದು. 'ಅಣ್ಣೋಳ ಕೋವರಿಲ—ಬೊಳ್ಯೊಲ್ಲ ಕಿನ್ನಗೆಲ' ಪಾಡ್ದನದಲ್ಲಿ ಬರುವ ಮಡ್ಯೋಳ್ತಿ ಅಬ್ಬಗ (ಮಡಿವಾಳಗಿತ್ತಿ ಅಬ್ಬಗ) ಎಂಬುವಳು ಬಟ್ಟೆಗಳನ್ನು ಮಡಿ ಮಾಡುತ್ತಾಳೆ. ಅವಳು ಹೆಂಗುಸರ ಹೆರಿಗೆಗೆ ಸಂಬಂಧಿಸಿದ ಆಚರಣೆಗಳಲ್ಲಿ ಪ್ರಧಾನ ಪಾತ್ರವಹಿಸುತ್ತಾಳೆ.

## 8. ಕೊಟ್ಟಾರಿ

'ಕೋಟಿ ಚೆನ್ನಯ' ಪಾಡ್ದನದಲ್ಲಿ ಪಂಜದ ಕೇಮರ ಬಲ್ಲಾಳನು 'ತಾನ್ ಕುಳ್ಳಿಗದ್ದಿಗೆಡ್ ಜಾಲ ಕೊಟ್ಟಾರಿನ್ ಕುಳ್ಳಯೆರ್" (ತಾನು ಕುಳಿತುಕೊಳ್ಳುವ ಗದ್ದುಗೆಯಲ್ಲಿ ಅಂಗಳದ ಕೊಟ್ಟಾರಿಯನ್ನು ಕುಳಿತುಕೊಳ್ಳಿಸಿದರು). 'ಕೊಟ್ಟಾರಿ' ಎನ್ನುವುದು ಈಗ ಒಂದು ಜಾತಿ ಸೂಚಕ ಪದವಾಗಿ ಪ್ರಯೋಗವಾಗುತ್ತಿದೆ. ಆದರೆ ಮೊದಲು ಇದು ಒಂದು ವೃತ್ತಿಸೂಚಕ ಹೆಸರಾಗಿತ್ತು. ಅರಮನೆಗಳಲ್ಲಿ 'ಕೋಷ್ಟಕಾರ' ಎಂಬ ವೃತ್ತಿಯವರು ಅಂದರೆ ಉಗ್ರಾಣಗಳನ್ನು ನೋಡಿಕೊಳ್ಳುವವರು. ಈ 'ಕೋಷ್ಟಕಾರ' (Store keeper) ಎಂಬ ಪದವೇ 'ಕೊಟ್ಟಾರಿ' ಎಂದು ರೂಪಾಂತರವಾಗಿದೆ. ಜೈನರಲ್ಲಿಯೂ ಕೊಟ್ಟಾರಿ ಎನ್ನುವುದು ಒಂದು ಮನೆತನದ ಹೆಸರು.

## 9. ಕುಂಬಾರ

'ಕೋಟಿ ಚೆನ್ನಯ' ಪಾಡ್ದನದಲ್ಲಿ ಯುದ್ಧದ ಪ್ರಸಂಗದಲ್ಲಿ 'ಓಡಾರಿ' (ಕುಂಬಾರ) ಒಬ್ಬನು ಕೋಟಿಯ ಕೈಯಿಂದ ಖಡ್ಗವನ್ನು ಕೊಂಡು ಹೋಗುತ್ತಾನೆ. ಮಡಕೆ ಮಾಡುವ ವೃತ್ತಿಯವರಾದ ಕುಂಬಾರರು ಪಾಡ್ದನದ ಕಾಲದಲ್ಲಿ ಕಾಣಸಿಗುತ್ತಾರೆ.

## 10. ಹರಿಜನರು

ಹೊಲೆಯರ ಬೇರೆ ಬೇರೆ ಪಂಗಡಗಳ ವಿವರಣೆಗಳು ಪಾಡ್ದನಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಸಿಗುತ್ತವೆ. ಕೊರಗರು, ಪಂಬಡರು, ಬಾಕುಡರು, ಮನ್ಸರು ಮುಂತಾದ ಅನೇಕ ಹೊಲೆಯರ ವಿಚಾರಗಳು ಪಾಡ್ದನಗಳಲ್ಲಿ ಇವೆ. 'ಕೊರಗ ತನಿಯು' ಪಾಡ್ದನದಲ್ಲಿ ಹೊಲೆಯರ ಒಂದು ವರ್ಗವಾದ ಕೊರಗ ಜಾತಿಯ ಹುಡುಗ 'ತನಿಯು' ಎನ್ನುವವನ ವೃತ್ತಾಂತ ಇದೆ. ಅದೇ ಪಾಡ್ದನದಲ್ಲಿ 'ಕೊಪ್ಪಂದ ಕೊರಗೆ' ಅಂದರೆ 'ಕೊಪ್ಪದ 'ಕೊರಗರು' ಎಂಬ ಮಾತು ಬರುತ್ತದೆ. ಕೊರಗರ ವಾಸಸ್ಥಾನವನ್ನು ಈಗಲೂ 'ಕೊಪ್ಪ' ಎಂದು ಕರೆಯುತ್ತಾರೆ. 'ಕೊರಗ ತನಿಯು' ಪಾಡ್ದನದಲ್ಲಿ ಕೊರಗರ ಜಾತಿಯ ಕೆಲಸದ ಸ್ವರೂಪ ಗೊತ್ತಾಗುತ್ತದೆ–"ಯೇರ್‌ಯೆ ಅಪ್ಪೆರೆ ಎಂಕ್ ಒಂಜಿ ಪೀಂಪಿಲ್ ಕತ್ತಿ ಕೊರ್ಲೆಂದೆ, ಎನ್ನ ಕುಲಜನ್ಮದ ಬೇಲೆ ಬೆನೊಡು ಉಂದೆ. ಅಯನಂ ಅಪ್ಪೆ ಪಂಡಿ ಪರಕೆ ಕದ್ರಿದ ದೇವಸ್ಥಾನೊಗು ಸಾವಿರ ಕೈ ಕುಡುಪು ಪಣ್ತೆಂಡ್; ಅಯಿನ ಎಂಕ್ ಬೂಟೊಡುಂದು ಪಣ್ಪೆ. ಒಂಜಿ ಕತ್ತಿ ಮಲ್ಪಾದ್ ಚೆನ್ನಯ ಬೈದ್ಯೆ ಕೊರಿಯೆರ್. ಬಲ್ಲೆ ಬಲ್ಲೆ ಬೂರು ಕರಿತೊಂಡೆ. ಬೂರು ಪರ್ತ್‌ದ್ ಸಾವಿರ ಕೈಕುಡುಪು ಮಲ್ತೆನೇ" (ಯಾರಮ್ಮ ತಾಯೇ, ನನಗೊಂದು 'ಪೀಂಪಿಲಿ' ಕತ್ತಿಕೊಡಿ, ನನ್ನ ಕುಲಜನ್ಮದ ಕೆಲಸವನ್ನು ಮಾಡುತ್ತೇನೆ. ಅವನ ತಾಯಿ ಹೇಳಿದ ಹರಕೆ ಕದ್ರಿಯ ದೇವಸ್ಥಾನಕ್ಕೆ ಸಾವಿರ 'ಕೈ ಕುಡ್ಪು' ಎಂದು ಇದೆ. ಅದನ್ನು ನನಗೆ ತೀರಿಸಬೇಕು ಎಂದು ಹೇಳುತ್ತಾನೆ. ಒಂದು ಕತ್ತಿಯನ್ನು ಮಾಡಿಸಿ ಚೆನ್ನಯ ಬೈದ್ಯ ಕೊಡುತ್ತಾನೆ. ಬೀಳಲುಗಳ ರಾಶಿಯನ್ನು ಕಡಿಯುತ್ತಾನೆ. ಬೀಳಲುಗಳಿಂದ ಸಾವಿರ ಕೈ ಕುಡುಪು ಮಾಡುತ್ತಾನೆ). ಈ ಮಾತಿನಲ್ಲಿ ಕೊರಗರ ಕೈ ಕಸುಬಿನ ಒಂದು ವೃತ್ತಿಯ ಪರಿಚಯವಾಗುತ್ತದೆ, ಕೊರಗರು ಕಾಡಿನಲ್ಲಿರುವ ಬೀಳಲುಗಳನ್ನು ಕತ್ತರಿಸಿ ಅದರಿಂದ ಕೈ ಕುಡುಪಿನಂತಹ ಹೆಣಿಗೆಯ ವಸ್ತುಗಳನ್ನು ಬುಟ್ಟಿಗಳನ್ನು ತಯಾರಿಸುತ್ತಾರೆ. ಇದಕ್ಕಾಗಿ ಅವರು ಬಳಸುವ ಕತ್ತಿಯು ತೆಳ್ಳಗಾಗಿ ಡೊಂಕಾಗಿ ಇರುತ್ತದೆ. ಇದನ್ನು 'ಪೀಂಪಿಲಿ ಕತ್ತಿ' ಎನ್ನುತ್ತಾರೆ.

'ಕೋಟಿ ಚೆನ್ನಯ' ಪಾಡ್ದನದಲ್ಲಿ "ಈರೆದಿಂಡ್ ಪಚ್ಚಡೋ ಕೊಣೊದು ಮೂಲ ಮಾನ್ಯೆರೆಗ್ ಪಾಡ್ಲೆ" (ನಿಮ್ಮ ದಿಂಡು ಹಚ್ಚಡವನ್ನು ಕೊಂಡು ಹೋಗಿ ಮೂಲದ ಹೊಲೆಯರಿಗೆ ಹಾಕಿರಿ). ಪಂಜುರ್ಲಿಯ ಒಂದು ಪಾಡ್ದನದಲ್ಲಿಯೂ 'ಮೂಲದ ಮಾನ್ಯೆರ್' (ಮೂಲದ ಹೊಲೆಯರು) ಇವರ ಬಗ್ಗೆ ಕೆಲವು ಮಾತುಗಳು ಬರುತ್ತವೆ. "ಬೆನ್ಪಿನಾಕುಳು ಮೂಲದ ಮಾನ್ಯೆರ್‌ಲಾ ಮುಗಂತಾಕುಳುಲಾ ದಿನ ಕೂಲಿದಾಕುಳುಲಾ, ನುಪ್ಪುದಾಕುಳುಲಾ, ಗಂಜಿದಾಕುಳುಲಾ ಮಾತ ಬಿಣ್ಣೆರ್ ಬತ್ತೆರ್ (ಕೆಲಸ ಮಾಡುವವರು ಮೂಲದ ಹೊಲೆಯರು. ನಿಶ್ಚಿತ ಕೂಲಿಯವರು, ದಿನ ಕೂಲಿಯವರು, ಅನ್ನದವರು, ಗಂಜಿಯವರು ಎಲ್ಲಾ ನೆಂಟರೂ ಬಂದರು). "ಆ ಸಮಯೊಡು ಮೂಲದ ಮಾನ್ಯೆರ್ ಎರುಳೆಗೆಲಾ ಬೋರಿಳೆಗೆಲಾ ಪಜಿರ್ ಪಾಡಿಯೆರೆ ಕಿದೆಕ್ ಬತ್ತ್‌ದ್ ಬಲರ್ಕಂಜಿದ ಮರಯಿಳೆನ್ ದೂರೊಡು ಕಂಕನೆ ದೀದ್ ಯೆಡ್ಕೊಳಿಲಾ ಪಜಿರೆಲಾ ಮಾತಪಾಡ್ದ್ ತಿನೆರ್ ಸಮ ಮಳ್ತ್‌ದ್ ಪೋಯೆರ್" (ಆ ಸಮಯದಲ್ಲಿ ಮೂಲದ ಹೊಲೆಯರು ಕೋಣಗಳಿಗೂ ಹೋರಿಗಳಿಗೂ ಹುಲ್ಲನ್ನು ಹಾಕಲು, ಹಟ್ಟಿಗೆ ಬಂದು ಕಲಗಚ್ಚಿನ ಪಾತ್ರೆಗಳನ್ನು ದೂರದಲ್ಲಿ ಕವುಚಿ ಹಾಕಿ ಹುಲ್ಲನ್ನು ಹಾಕಿ ತಿನ್ನಲು ಸಾಕಷ್ಟು ಸಿದ್ಧ ಮಾಡಿಹೋದರು). "ಮನ್ಸೆರೆಗೆ ಕೊರಾಯಿಡ್ ನುಪ್ಪುಪಾಡುನೆ" (ಹೊಲೆಯರಿಗೆ ಕೊರಾಯಿಯಲ್ಲಿ ಅನ್ನ ಹಾಕುವುದು).

ಮೇಲಿನ ಮಾತುಗಳು ಹೊಲೆಯರ ಒಂದು ವರ್ಗವಾದ ಮೂಲದ ಹೊಲೆಯರ ಪರಿಸ್ಥಿತಿಯನ್ನು ತುಳುನಾಡಿನ ಪರಿಸರದಲ್ಲಿ ತಿಳಿಸುತ್ತವೆ. ಒಬ್ಬ ಯಜಮಾನನ ಕೈ ಕೆಳಗೆ ವಂಶಪಾರಂಪರ್ಯವಾಗಿ ಜೀತದಾಳುಗಳಂತೆ ದುಡಿಯುವ ಹೊಲೆಯರೇ ಮೂಲದ ಹೊಲೆಯರು. ಒಡೆಯನ ಮನೆಯಲ್ಲಿ ಜಾನುವಾರುಗಳಿಗೆ ಹುಲ್ಲು ಹಾಕುವುದು, ಕಲಗಚ್ಚು ಕುಡಿಸುವುದು ಮುಂತಾದ ಕೆಲಸಗಳನ್ನು ಅವರು ಮಾಡುತ್ತಾರೆ. ಅವರಿಗೆ ಅನ್ನವನ್ನು

ಗಂಜಿಯನ್ನು ಹಾಕುವುದು ಕೋರಾಯಿಯಲ್ಲಿ. ಅಂದರೆ ಅಗಲ ಬಾಯಿಯ ಮಣ್ಣಿನ ಪಾತ್ರೆಯಲ್ಲಿ. ಮೇಲೆ ಉದ್ಧರಿಸಿದ 'ಕೋಟಿ ಚೆನ್ನಯ'ಪಾಡ್ದನದ ಮಾತು ಮೂಲದ ಮಾನ್ಯೆರ (ಹೊಲೆಯರ) ಸ್ಥಿತಿ ಸಾಮಾಜಿಕ ದೃಷ್ಟಿಯಿಂದ ತೀರಾ ಕೀಳು ಆಗಿತ್ತು ಎನ್ನುವುದನ್ನು ತಿಳಿಸುತ್ತದೆ.

ಹರಿಜನರ ಇನ್ನೊಂದು ವರ್ಗದವರಾದ 'ಬಾಕುಡರ' ವಿಚಾರವು ಪಾಡ್ದನದಲ್ಲಿದೆ. 'ಕೋಟಿ ಚೆನ್ನಯ' ಪಾಡ್ದನದಲ್ಲಿ ಬಾಕುಡರ ಬಗ್ಗೆ ಉಲ್ಲೇಖ ದೊರೆಯುತ್ತದೆ. "ಕೊಪ್ಪಂದ ಕೊರಗೆರ್ ಓಣಿದ ಮುಗೇರೆರ್, ಬೈಲ ಬಾಕುಡೆರ್" (ಕೊಪ್ಪದ ಕೊರಗರು, ಓಣಿಯ ಮುಗೇರರು, ಬೈಲಿನ ಬಾಕುಡರು) "ಬೈಲ ಬಾಕುಡೆರ್, ಕೊಪ್ಪಂದ ಕೊರಗೆರ್ ಪಾರಿಯೆರ್" (ಬೈಲ ಬಾಕುಡರು, ಕೊಪ್ಪಂದ ಕೊರಗರು ಓಡಿದರು). ಕೊರಗರ ವಾಸಸ್ಥಾನ ಕೊಪ್ಪ ಆಗಿರುವಂತೆಯೇ ಬಾಕುಡರ ವಾಸಸ್ಥಾನ ಬೈಲು ಎಂದು ಗೊತ್ತಾಗುತ್ತದೆ.

## 11. ಇತರ ವೃತ್ತಿಕಾರರು

ಸಾರಾಲ ಜುಮಾದಿ ಪಾಡ್ದನದಲ್ಲಿ "ಶೆಟ್ಟಿ ಕಟ್ಟಾಯಿ ಬಸ್ತಿ ಕಡತೆ. ಬ್ರಾಹ್ಮಣೆ ಕಟ್ಟಾಯಿ ದೇವಸ್ಥಾನ ಕಡತೆ, ಕಂಚಿಕಾರ ಕೇರಿ ಕಡತೆ, ಚಮ್ಮುಕಾರ ಬೀದಿ ಕಡತೆ" (ಶೆಟ್ಟಿ ಕಟ್ಟಿಸಿದ ಬಸದಿ ದಾಟಿದನು, ಬ್ರಾಹ್ಮಣ ಕಟ್ಟಿಸಿದ ದೇವಸ್ಥಾನ ದಾಟಿದನು, ಕಂಚಿಕಾರರ ಕೇರಿಯನ್ನು ದಾಟಿದನು, ಸಮಗಾರರ ಬೀದಿಯನ್ನು ದಾಟಿದನು). ಇಲ್ಲಿ 'ಕಂಚಿಕಾರ ಮತ್ತು ಸಮಗಾರ' ಎನ್ನುವ ಇಬ್ಬರ ವೃತ್ತಿಕಾರರ ವಿಚಾರ ಬಂದಿದೆ. 'ಕಾಂಚಿಕಾರ ಕೇರಿ' ಎನ್ನುವುದು ತುಳುನಾಡಿನ ಶಾಸನಗಳಲ್ಲಿಯೂ ದೊರೆಯುತ್ತದೆ. ಕಂಚಿನ ಲೋಹದ ಕೆಲಸ ಮಾಡುವವರು 'ಕಂಚಿಗಾರರು' ಈ ವೃತ್ತಿಯವರಿಗೆ ಪ್ರತ್ಯೇಕವಾದ ಕೇರಿಗಳು ಇದ್ದವು. ಚರ್ಮದ ಕೆಲಸ ಮಾಡುವವರು 'ಸಮಗಾರರು'. ಈ ವೃತ್ತಿಯವರಿಗೆ ಪ್ರತ್ಯೇಕವಾದ ಬೀದಿಗಳು ಇದ್ದವು. 'ಮುಡದೆಲ್ ಕಾಳಭೈರವೆ' ಎಂಬ ಪಾಡ್ದನದಲ್ಲಿ ಕೂಡ 'ಕಂಚಿಗಾರ ಕೇರಿ ಕಡತ್ತೆರ್, ಮುಟ್ಟು ಕಟ್ಟು ಚಮುಗಾರ ಕೇರಿ ಕಡತ್ತೆರ್' (ಕಂಚಿಗಾರರ ಕೇರಿಯನ್ನು ದಾಟಿದರು, ಪಾದರಕ್ಷೆಗಳನ್ನು ಕಟ್ಟುವ ಸಮಗಾರರ ಕೇರಿಯನ್ನು ದಾಟಿದರು). ಇಲ್ಲಿ ಸಮಗಾರರು ಪಾದರಕ್ಷೆಗಳನ್ನು ತಯಾರಿಸುವವರು ಎಂದು ಸ್ಪಷ್ಟವಾಗಿ ಹೇಳಲಾಗಿದೆ.

'ಬಾಲೆ ಕಿನ್ನಿಮು' ಪಾಡ್ದನದಲ್ಲಿ ದಂಡಿಗೆ ಹೊರಡುವ 'ಬೋವಿ'ಗಳ ಹೆಸರು ದೊರೆಯುತ್ತದೆ.

'ತೋಡಕುಕ್ಕಿನಾರ್' ಪಾಡ್ದನದಲ್ಲಿ 'ಗಾಣದಾಕುಳು' (ಗಾಣದವರು) ಎನ್ನುವ ಮಾತು ಇದೆ. ಆ ಕಾಲದ ಗಾಣಿಗರ ಅಂದರೆ ಎಣ್ಣೆ ತೆಗೆವ ವೃತ್ತಿಯವರು ಇಲ್ಲಿ ಸಿಗುತ್ತಾರೆ.

'ಕೋಟಿ ಚೆನ್ನಯ' ಪಾಡ್ದನದಲ್ಲಿ 'ಗೋವಳ'ರ ಉಲ್ಲೇಖವಿದೆ–"ಗೋವು ಮೇಪಿ ಗೋವಳೆರ್ ಉಲ್ಲೆರ್" (ಗೋವುಗಳನ್ನು ಮೇಯಿಸುವ ಗೋವಳರು ಇದ್ದಾರೆ). ಆ ಗೋವಳರು ಕೋಟಿ ಚೆನ್ನಯರೊಂದಿಗೆ ಒಗಟಿಗೆ ಉತ್ತರ ಹೇಳುವ ಜಾಣರಾಗಿ ಕಾಣಿಸುತ್ತಾರೆ.

## 12. ಮುಸ್ಲಿಮರು

ತುಳುನಾಡಿನಲ್ಲಿ ಮುಸ್ಲಿಮರ ಸಂಪರ್ಕ ಪ್ರಧಾನವಾಗಿ ಆಗಿರುವುದು ವ್ಯಾಪಾರದ ದೃಷ್ಟಿಯಿಂದ. ಆ ಕಾರಣದಿಂದಲೇ ತುಳುನಾಡಿನ ಮುಸ್ಲಿಮರು ಸಾಮಾನ್ಯವಾಗಿ 'ವ್ಯಾಪಾರಿ' ಎಂಬ ಶಬ್ದದ ತದ್ಭವವಾದ 'ಬ್ಯಾರಿ' ಹೆಸರಿನಿಂದ ಕರೆಯಲ್ಪಡುತ್ತಾರೆ. ಪಾಡ್ದನಗಳಲ್ಲಿಯೂ ಮುಸ್ಲಿಮರು ಪ್ರಧಾನವಾಗಿ ವ್ಯಾಪಾರ

ವೃತ್ತಿಗೆ ಸುಂಬಂಧಿಸಿದಂತೆ ಇರುವುದರಿಂದ 'ಬ್ಯಾರಿಗಳು' ಎಂದೇ ಸ್ಥಾನವನ್ನು ಪಡೆದಿದ್ದಾರೆ. 'ಬೊಬ್ಬರ್ಯ' ಎಂಬ ಪಾಡ್ದನವು ಇಂತಹ ಮುಸ್ಲಿಂ (ಬ್ಯಾರಿ) ವ್ಯಾಪಾರಿಯೊಬ್ಬನು ಭೂತವಾದ ಕತೆಯನ್ನು ಒಳಗೊಂಡಿದೆ– "ಬೊಬ್ಬರ್ಯೆ ಆದಿ ದೀವು ಪುಟ್ಟಿನಿಗೋವೆಡ್ ಬಳತಿನಿ ಕೊಚ್ಚಿಡ್. ಅಪ್ಪೆ ಪಾತುಮ್ಮ ಅಮ್ಮೆ ಸುಲಿಕಲ್ಲ ಮುರವೆ ಬ್ಯಾರಿ" (ಬೊಬ್ಬರ್ಯ ಹುಟ್ಟಿದ್ದು ಗೋವೆಯಲ್ಲಿ, ಬೆಳೆದದ್ದು ಕೊಚ್ಚಿಯಲ್ಲಿ. ತಾಯಿ ಪಾತುಮ್ಮ, ತಂದೆ ಸುಲಿಕಲ್ಲ ಮುರವ ಬ್ಯಾರಿ). ಬೊಬ್ಬರ್ಯ ಪಾಡ್ದನದ ಇನ್ನೊಂದು ಪಾಠದ ಪ್ರಕಾರ ಈತನ ತಾಯಿ ಮೊದಲು ಜೈನ ಹೆಣ್ಣಾಗಿದ್ದಳೆಂದೂ ಅವಳ ಮೂಗಿನಲ್ಲಿ ಇರುತ್ತಿದ್ದ ವಿಷಸರ್ಪದಿಂದ ಅನೇಕ ಗಂಡಂದಿರು ಮರಣಗೊಂಡರೆಂದೂ ಕೊನೆಗೆ ಮುಸ್ಲಿಮನೊಬ್ಬ ಈಕೆಯನ್ನು ಮದುವೆಯಾಗಿ ಉಪಾಯದಿಂದ ಆ ಸರ್ಪವನ್ನು ಕೊಂದನೆಂದೂ ಹೇಳಲಾಗಿದೆ. 'ಕೊರತಿ' ಪಾಡ್ದನದಲ್ಲಿ ಮುಸ್ಲಿಂಬ್ಯಾರಿಯ ಬಗ್ಗೆ ವಿವರಗಳು ಸಿಗುತ್ತವೆ. "ಮಕ್ಕೆರೆ ಮಂಟಮೆಡ್ ಉಳ್ಳೆರ್ ಬ್ಯಾರಿರಾರ್ ಮಕ್ಕಿನ ಮಾಯಿನೆ ಬ್ಯಾರಿ. ಆರೆಡ ಮೂಲದ ಮಾನಿ ಉಳ್ಳ ಮಕ್ಕೆರೆ ತನಿಯ. ಅರೆಗ್ ಅರುವದಡ್ಪು ಏಳ್ ಜನ ಉಳ್ಳೇರ್. ಪಾಸದ ಪೊರ್ತು ಬತ್ತ್ಂಡ್ ಬ್ಯಾರಿಗ್. ಅರೆ ಮೂಲದ ಮಾನ್ಯಡ ಪನ್ಪುಂಡೆ ಬ್ಯಾರಿ ಕಂಬುಳದ ಕಟ್ಟಮಣಿ ಉಂಡು. ಪಾಸದ ಪೊರ್ತು ಬತ್ತ್ಂಡ್ ಆಯ್ಕ್ ಕೊಡಿಲ ಕಟ್ಪೊಡು ಎನ್ನಲ ಆರುವದಡ್ಪು ಬೊಂಡಲದೆಪ್ಪರ್. ಅಯಿಕಾತ್ರ ಕೊಡಿ ಕಟ್ಪೊಡು ಎಂದ್ ಪಂಡ್" (ಮಕ್ಕೆರೆ ಮಂಟಪದಲ್ಲಿ ಮಕ್ಕಿನ ಮಾಯಿನೆ ಬ್ಯಾರಿ ಎನ್ನುವವರು ಇದ್ದಾರೆ. ಅವರ ಮೂಲದ ಹೊಲೆಯ ಮಕ್ಕರೆ ತನಿಯ. ಆ ಬ್ಯಾರಿಗೆ ಏಳುಜನ ಅಳಿಯಂದಿರು. ಆ ಬ್ಯಾರಿಗೆ ಉಪವಾಸದ ಹೊತ್ತು ಬಂತು. ಆಗ ತಮ್ಮ ಮೂಲದ ಹೊಲೆಯನನ್ನು ಕರೆದು ಬ್ಯಾರಿ ಹೇಳುತ್ತಾರೆ– ಕುಂಬಳದ ಕಟ್ಟಪುಣಿ ಇದೆ. ಉಪವಾಸದ ಕಾಲ ಬಂತು. ಅಲ್ಲಿನ ತೆಂಗಿನಮರಗಳಲ್ಲಿ ಕೊಡಿ ಕಟ್ಟಬೇಕು. ಇಲ್ಲದಿದ್ದರೆ ನನ್ನ ಅಳಿಯಂದಿರು ಎಳನೀರು ತೆಗೆಯುತ್ತಾರೆ). ಇಲ್ಲಿ ಮಾಯಿನೆ ಬ್ಯಾರಿಯು ಪಾಡ್ದನದ ಉದ್ದಕ್ಕೂ ಒಂದು ಕತೆಯಲ್ಲಿ ಒಂದು ಪಾತ್ರವಾಗಿ ಕಾಣಿಸುತ್ತಾನೆ. ಭೂತಾರಾಧನೆಗೂ ಮುಸ್ಲಿಂ ಸಂಸ್ಕೃತಿಗೂ ನಿಕಟವಾದ ಸಂಬಂಧವನ್ನು ಇಂತಹ ಕೆಲವು ಪಾಡ್ದನಗಳು ತೋರಿಸಿಕೊಡುತ್ತವೆ. ತುಳುನಾಡಿನ ಭೂತಾರಾಧನೆಯ ಸಂಸ್ಕೃತಿಯಲ್ಲಿಯೂ ಮುಸ್ಲಿಮರು ಭಾಗವಹಿಸುವುದನ್ನು ಇಂದಿಗೂ ನೋಡಬಹುದು.

'ಬೊಬ್ಬರ್ಯ' ಭೂತದಂತೆಯೇ ಮುಸ್ಲಿಂ ವ್ಯಕ್ತಿಯೊಬ್ಬನು ಭೂತವಾಗಿ ಪರಿವರ್ತನೆಗೊಂಡ ಇನ್ನೊಂದು ಸಂದರ್ಭ ಅಲಿಚಾಮುಂಡಿ ಭೂತ. ಅಲಿಭೂತದ ಪಾಡ್ದನ ಹೇಳುವ ಹಾಗೆ–ಕುಂಬಳೆ ಸೀಮೆಯ 'ಆರಿಕ್ಕಾಡಿಯ' 'ಆಲ್ ಬ್ಯಾರಿ' ಎಂಬ ಮುಸ್ಲಿಂ ಮಂತ್ರವಾದಿಯೊಬ್ಬನ ವಿಪರೀತವಾದ ಹೆಣ್ಣಿನ ಹುಚ್ಚಿನಿಂದಾಗಿ ಕೊನೆಗೆ ಭೂತವೊಂದರ ಉಪಾಯದಿಂದ ಮಾಯವಾಗಿ 'ಅಲಿ ಚಾಮುಂಡಿ ಭೂತ'ವೆಂದು ಕರೆಸಿಕೊಳ್ಳುತ್ತಾನೆ. ಈ ರೀತಿ ಮುಸ್ಲಿಮರು ಭೂತವಾಗಿ ಪರಿವರ್ತನೆಗೊಂಡ ಬೊಬ್ಬರ್ಯ ಮತ್ತು 'ಅಲಿ ಚಾಮುಂಡಿ' ಈ ಎರಡು ಭೂತಗಳಿಗೂ ಅವುಗಳ ಉತ್ಸವದ ವೇಳೆ ಉಳಿದ ಭೂತಗಳಿಗಿಂತ ಭಿನ್ನವಾದ, ಮುಸ್ಲಿಂ ಸಂಸ್ಕೃತಿಯ ಪ್ರಭಾವವಿರುವ ಉಡಿಗೆ ತೊಡಿಗೆಗಳಿವೆ. ಬೊಬ್ಬರ್ಯನ ತಲೆಗೆ ಬೆಳ್ಳಿಯ ಉದ್ದವಾದ 'ಟೊಪ್ಪಿಗೆ' ಇದೆ. ಇದಕ್ಕೆ ಚಿನ್ನದ ಕಿರೀಟವಿರುತ್ತದೆ. ಎಡಗೈಯಲ್ಲಿ ಗಂಟೆ, ಬಲಗೈಯಲ್ಲಿ ಸುತ್ತಿಗೆ. ಸೊಂಟಕ್ಕೆ ಬೆಳ್ಳಿಯ ಉಡ್ಯಾಣ, ಮೊಣಕಾಲಿನವರೆಗೆ ಮಾತ್ರ ವಸ್ತ್ರ ಉಡಲಾಗಿದೆ. ಅಲಿ ಭೂತವು ಕೋಲದ ವೇಳೆಗೆ ಸಿಲ್ಕಿನ ಲುಂಗಿ ತೊಟ್ಟು, ಚಿನ್ನದ ಎತ್ತರದ ಟೊಪ್ಪಿಯನ್ನು ತಲೆಗೆ ಇಟ್ಟು ಅಲಂಕೃತವಾಗಿರುತ್ತದೆ.

ಮುಸ್ಲಿಮರ ಅಂದರೆ ಬ್ಯಾರಿಗಳ ಧಾರ್ಮಿಕ ಸ್ಥಾನವಾದ ಮಸೀದಿಯನ್ನು ತುಳುವಿನಲ್ಲಿ 'ಪಳ್ಳಿ' ಎನ್ನುತ್ತಾರೆ. ಇಂತಹ ಬ್ಯಾರಿಗಳ ಪಳ್ಳಿಯ ಪ್ರಸ್ತಾಪ 'ಕೋಟಿ ಚೆನ್ನಯ' ಪಾಡ್ದನದಲ್ಲಿ ಇದೆ.

'ಮುಂಡದಾಯೆ' ಪಾಡ್ದನದಲ್ಲಿ ಮುಸ್ಲಿಂ ವ್ಯಕ್ತಿಗಳು ಕತೆಯ ಪಾತ್ರಗಳಾಗಿ ಬರುತ್ತಾರೆ. ಇಲ್ಲಿ ಉದ್ಯಾವರದ ಕುಞಲ್, ಕುಟ್ಯಾಲ್ ಮತ್ತು ಪಾತುಮ್ಮ ಬ್ಯಾರಿದಿಯ ವಿಚಾರವಿದೆ. ಪಾತುಮ್ಮ ಬ್ಯಾರಿದಿಯು

ಮುಂತದಾಯಿ ಭೂತದ ನೇಮಕ್ಕೆ ಬೆಲ್ಲ ಕೊಡಲು ನಿರಾಕರಿಸಿದ ಕಾರಣ ಭೂತದ ಉಪದ್ರವದಿಂದ ನೀರಿನಲ್ಲಿ ಮುಳುಗಿ ಸಾಯುತ್ತಾಳೆ.

## 13. ಕ್ರೈಸ್ತರು

16ನೇ ಶತಮಾನದಲ್ಲಿ ತುಳುನಾಡಿಗೆ ಪೋರ್ಚುಗೀಸರ ಆಗಮನದ ಬಳಿಕ ಕ್ರೈಸ್ತ ಧರ್ಮವು ಇಲ್ಲಿ ನೆಲೆಯೂರುತ್ತದೆ. 'ತೋಡಕುಕ್ಕಿನಾರ್' ಪಾಡ್ದನದಲ್ಲಿ 'ಕ್ರಿಸ್ತನ್ಲಾಕುಳು' ಕ್ರೈಸ್ತರು ಎನ್ನುವ ಮಾತು ಬರುತ್ತದೆ. ತುಳುನಾಡಿನ ಸಮಾಜದಲ್ಲಿ ಕ್ರೈಸ್ತರೂ ಸೇರಿಹೋದ ಬಳಿಕದ ವಿಚಾರವನ್ನು ಇಂತಹ ಕಡೆಗಳಲ್ಲಿ ನೋಡಬಹುದು. ಕೋಟಿ ಚೆನ್ನಯ ಪಾಡ್ದನದಲ್ಲಿ "ಕುಡುಂಬ ಇಂಗ್ರೆಜಿಯೋ?" (ಕುಡುಂಬರ ಇಗರ್ಜಿಯೋ) ಎನ್ನುವ ಮಾತು ಬರುತ್ತದೆ. ಇಲ್ಲಿ 'ಕುಡುಂಬ' ಎಂದರೆ "ಕೊಂಕಣಿ ಮಾತನಾಡುವ ರೋಮನ್ ಕೆಥೊಲಿಕ್" ಎಂದು ಅರ್ಥ. ಅಂದರೆ ಕ್ರೈಸ್ತರ ಇಗರ್ಜಿಗಳ ಸ್ಥಾಪನೆ ಕೋಟಿ ಚೆನ್ನಯ ಪಾಡ್ದನದ ಕಾಲಕ್ಕಾಗಲೇ ಆಗಿರಬೇಕು.

## 2. ಬೇಸಾಯ–ಬೇಸಾಯದ ಸ್ವರೂಪ ಮತ್ತು ಕಾಲಗಳು

ತುಳುನಾಡಿನ ಪ್ರಧಾನ ಕಸುಬು ಬೇಸಾಯ. ಕೃಷಿಗೆ ಸಂಬಂಧಿಸಿದಂತೆ ಬೇರೆ ಬೇರೆ ಸಸ್ಯಗಳ ಬೆಳೆಗಳ ವಿಚಾರವನ್ನು ಇಲ್ಲಿನ ಜನಪದ ಸಾಹಿತ್ಯದಲ್ಲಿ ನೋಡಬಹುದು. ಆದರೆ ಈ ಬೇಸಾಯದಲ್ಲಿ ಪ್ರಧಾನವಾಗಿರುವುದು ಭತ್ತದ ಬೇಸಾಯ. ಆದ್ದರಿಂದ ಸಹಜವಾಗಿ ಪಾಡ್ದನಗಳು ಈ ವಿಚಾರವನ್ನು ತಿಳಿಸುತ್ತವೆ. 'ಕೋಟಿ ಚೆನ್ನಯ' ಪಾಡ್ದನದಲ್ಲಿ ಕೋಟಿಚೆನ್ನಯರು ಕುಂಬಳಗದ್ದೆಯಲ್ಲಿ ಬೇಸಾಯ ಮಾಡುತ್ತಾರೆ. "ಅಪಗಯೇಣೆಲ್ದ ಬುಳೆಸಳೆ ಯೆಳ್ಯೊಡು ಬೆನೊಡು ಅಂದ್‌ದ್, ಕಂಡದ ಕರಮೆದಿ ಕಡ್ತೆರ್, ಸೂಡುಟ್ಟುನು ದೀಯೆರ್, ಪಗ್ಗುಡು ಪದಿನೆಣ್ಮ ಪೋನಗ ನಾಲಿರು ಮಾದಾಯೆರ್, ಯೇಗೆಲ್ದ ಬುಳೆ ಬೆಂದರ್" (ಆಗ ಎಣೆಲ್‌ನ ಬೆಳೆಯನ್ನು ಸರಿಯಾದ ಕಾಲಕ್ಕೆ ಬೆಳೆಯಬೇಕು ಎಂದು ಗದ್ದೆಯ ಬದಿಯನ್ನು ಸರಿಮಾಡಿ ಸುಡು ಮಣ್ಣು ಇಟ್ಟರು. ಪಗ್ಗು ತಿಂಗಳದ ಹದಿನೆಂಟು ದಿನ ಆದಾಗ ನಾಲ್ಕೆತ್ತುಗಳನ್ನು ತಿರುಗಿಸಿದರು. ಎಣೆಲಿನ ಬೆಳೆಯನ್ನು ಬೆಳೆದರು). ಇಲ್ಲಿ ಭತ್ತದ ಬೇಸಾಯದ ಮೊದಲನೆಯ ಬೆಳೆಯಾದ 'ಎಣೆಲು' ಬೆಳೆಯ ಬಗ್ಗೆ ಹೇಳಲಾಗಿದೆ. ಗದ್ದೆಯ ಬದಿಯನ್ನು ಸರಿಮಾಡುವುದು, ಗದ್ದೆಗೆ ಫಲವತ್ತಿಗಾಗಿ ಸುಡುಮಣ್ಣು ಇಡುವುದು–ಬೇಸಾಯದ ಕೆಲಸಗಳು. ಪಗ್ಗು ಎನ್ನುವುದು ತುಳುವಿನ ತಿಂಗಳು. ಆ ತಿಂಗಳಿನಲ್ಲಿ ಹದಿನೆಂಟು ದಿನವಾದಾಗ ಉಳಲು ಆರಂಭಿಸುವುದು ತುಳುನಾಡಿನ ಪದ್ಧತಿ. ಈ ಆರಂಭದ ಉಳುವಿಕೆಯನ್ನು 'ನಾಲೆರು ಮಾದವುನೆ' (ನಾಲ್ಕೆತ್ತುಗಳನ್ನು ತಿರುಗಿಸುವುದು) ಎನ್ನುತ್ತಾರೆ.

'ಕೋಟಿ ಚೆನ್ನಯ' ಪಾಡ್ದನದಲ್ಲಿ ಕಂಬಳ ಗದ್ದೆಯನ್ನು 'ಕೋರುವಾಗ' ದಿನ ನೋಡುವ ಪದ್ಧತಿಯ ವಿಚಾರ ಬಂದಿದೆ. ಬುದ್ಯಂತನು ತನ್ನ ಕಂಬಳ ಗದ್ದೆಯನ್ನು ಕೋರುವುದಕ್ಕೆ ಬೀರ ಬಲ್ಯಾಯನಲ್ಲಿ ದಿನ ಕೇಳಲು ಹೋಗುತ್ತಾನೆ. ವಿಸ್ತಾರವಾದ ಗದ್ದೆಯನ್ನು ಕಂಬಳಗದ್ದೆ ಎಂದು ಕರೆಯುತ್ತಾರೆ. ಇಂತಹ ಗದ್ದೆಯನ್ನು ಚೆನ್ನಾಗಿ ಉತ್ತು ಬೀಜ ಹಾಕುವುದಕ್ಕೆ ಸಿದ್ಧಪಡಿಸುವ ಕ್ರಮಕ್ಕೆ ತುಳುವಿನಲ್ಲಿ 'ಕೋರುವುದು' ಎನ್ನುತ್ತಾರೆ. ಕಂಬಳ ಗದ್ದೆಯನ್ನು ಕೋರುವಾಗ ಹೆಚ್ಚು ಜೊತೆ ಎತ್ತುಗಳು ಆಳುಗಳು ಬೇಕಾಗುತ್ತವೆ. ಅದಕ್ಕಾಗಿ ನೆರೆಕರೆಯವರಿಂದ ಎತ್ತುಗಳ ಮತ್ತು ಜನಗಳ ಸಹಾಯವನ್ನು ಪಡೆಯುತ್ತಾರೆ. ಆ ರೀತಿ ಸಹಾಯ ಮಾಡಿದವರಿಗೆ

ಒಳ್ಳೆಯ ಊಟವನ್ನು ಕೊಡುವ ಪದ್ಧತಿ ಇದೆ. ಈ ವಿಚಾರ 'ಕೋಟಿ ಚೆನ್ನಯ' ಪಾಡ್ದನದಲ್ಲಿ ಸಿಗುತ್ತದೆ– "ಅಪಗ ಎರು ದೆಕ್ಕ್‌ಲೆ ಮಡಿದೀಲೆ ಅಂದೆರ್, ಉನ್ಪಿ ಜನಕ್ಕ್ ವಣಸ್ ಮಲ್ಪಾಯೆರ್ ಉಣಂದಿನಕಲೆಗ್ ಬೊಂಡ ಪಟ್ಟಾಯೆರ್" (ಆಗ 'ಎತ್ತುಗಳನ್ನು ತೊಳೆಯಿರಿ, ಅವುಗಳಿಗೆ ತಿನಿಸನ್ನು ಇಡಿರಿ' ಎಂದರು. ಉಣ್ಣುವ ಜನರಿಗೆ ಊಟ ಮಾಡಿಸಿದರು. ಉಣ್ಣದವರಿಗೆ ಎಳನೀರು ಹಂಚಿದರು). ಕಂಬಳದ ಗದ್ದೆಗಳಿಗೆ ಬೀಜವನ್ನು ವೈಭವಯುತವಾಗಿ ದಂಡಿಗೆಯಲ್ಲಿ ತರುವ ಕ್ರಮ ಇತ್ತು ಎನ್ನುವುದು ಕೋಟಿ-ಚೆನ್ನಯ ಪಾಡ್ದನದಲ್ಲಿ ಬುದ್ಯಂತನು ತನ್ನ ಕಂಬಳಕ್ಕೆ ದಂಡಿಗೆಯಿಲ್ಲಿ ಬೀಜ ತರುವ ಸಂದರ್ಭದಲ್ಲಿ ನೋಡಬಹುದು. ಬೇಸಾಯದ ಇತರ ಕ್ರಮಗಳು ಅಲ್ಲಿ ಕಾಣಿಸುತ್ತವೆ. ಕೋಟಿ-ಚೆನ್ನಯರು ಎಣ್ಮೂರಿನಲ್ಲಿ ಬೇಸಾಯ ಮಾಡುತ್ತಾರೆ- "ಎಂಕುಳ ಎಣೆಲ್‌ದ ಬುಳೆ ಸಲೆ ಅಪಗ ಬೆಂಬೊಯೆ. ಅಪಗ ಎಂಕುಳು ಕಂಡದ ಕೊಡಿಕ್ ಬೀಗೊ ಪೋಪಯೆ. ಅಪಗ ಚಿದೆತ ಅಸಿಗಾಸಿ ತೂನಾಗಂದೆರ್, ಕಾಡ್‌ಡಿತ್ತಿ ಕಾಡ್‌ಮೃಗೊ ತಿಂದ್‌ಕಳೆಯೋ" (ಆಗ ನಾವು ಎಣೆಲಿನ ಬೆಳೆಯನ್ನು ಮಾಡಿದೆವು.ಆಗ ನಾವು ಗದ್ದೆಯ ತುದಿಗೆ ಹೋದೆವು. ಬೀಜದ ಸ್ಥಿತಿಯನ್ನು ನೋಡಿದೆವು, ಕಾಡಿನಲ್ಲಿರುವ ಕಾಡು ಮೃಗಗಳು ಅವನ್ನು ತಿಂದುವು, ಹಾಳು ಮಾಡಿದವು). ಇಲ್ಲಿಯೂ ಎಣೆಲು ಬೆಳೆಯ ವಿಚಾರ ಇದೆ. ಇಂತಹ ಬೆಳೆಗಳಿಗೆ ಕಾಡು ಮೃಗಗಳ ಹಾವಳಿ ಇತ್ತು ಎನ್ನುವುದು ಗೊತ್ತಾಗುತ್ತದೆ.

'ಪೊಸ ಮಾಹಾರಾಯೆ ಪಾಡ್ದನ' ದಲ್ಲಿಯೂ 'ಕಂಬುಳ್ ಕೋರುವ' ವಿಚಾರ ಬರುತ್ತದೆ. 'ಪಿಲಿಚಾಮುಂಡಿ' 'ಪಾಡ್ದನದಲ್ಲಿ ಮಂಜು ಪೂಂಜನೆಂಬ ಬೇಸಾಯಗಾರನು 'ತುಂಬಿ ಜಾಲ್' ಎಂಬ ಗದ್ದೆಯನ್ನು ಪಡೆದು ಒಂದು ಬೆಳೆಯನ್ನು ಬೆಳೆಸುತ್ತಾನೆ.

'ಅಮುಸರಂದ ಮನ್ನೋಡಿ' ಪಾಡ್ದನದಲ್ಲಿ ಅಮುಸರಂದ ಮನ್ನೋಡಿಯು ಭತ್ತದ ಬೇಸಾಯ ಮಾಡುವವನು ಬೊಟ್ಟುಚು ಸೂತ್ತ ಮುಡಿಕಂಡ, ಬೈಲ್‌ಡ್ ಸೂತ್ತ ಮುಡಿಕಂಡ ಅಮುಸರಂದ ಮನ್ನೋಡಿಗ್. ಕೊಟ್ಟು ಪುಗೆಲೆಟ್ ದೀವೊಂದು, ಸೊರ್ಕಿ ನೀರನ್ ಸಿರ್ಕಾಯೆರ್. ಸಿರ್ಕಿ ನೀರ್‌ನ್ ಸೊರ್ಕಾಯೆರ್, ಸುರನೀರ್ ಕಡ್ತೊಂದುಲ್ಲೆ ಮನ್ನೋಡಿ" (ಬೆಟ್ಟಿನಲ್ಲಿ ನೂರು ಮುಡಿಗದ್ದೆ, ಬೈಲಿನಲ್ಲಿ ನೂರು ಮುಡಿಗದ್ದೆ ಅಮುಸರಂದ ಮನ್ನೋಡಿಗೆ ಹಾರೆಯನ್ನು ಹೆಗಲಿನಲ್ಲಿ ಇಟ್ಟುಕೊಂಡು ಹೆಚ್ಚಾದ ನೀರನ್ನು ಕಡಿಮೆ ಮಾಡುತ್ತಾರೆ. ಕಡಿಮೆಯಾದ ನೀರನ್ನು ಹೆಚ್ಚು ಮಾಡುತ್ತಾರೆ. ಮನ್ನೋಡಿ).

'ಸಿರಿ' ಪಾಡ್ದನದಲ್ಲಿ ಬಿರ್ಮು ಆಳ್ವನು ದೊಡ್ಡ ಬೇಸಾಯಗಾರ. ಆದರೆ ಮಕ್ಕಳಿಲ್ಲದ ಅವನು ಹೇಳುವ ಮಾತು ಈ ರೀತಿ ಇದೆ:-'ಎನ್ನ ಸಾವಿರ ಮುಡಿ ಅರಿತ ಹುಟ್ಟೋಳಿ ಎನಡ್‌ದೆ ಆದ್ ಎನಡ್‌ದೆ ಮೋಪಿನಲೆಕೊ ಅಂಡೆ' ( ಎನ್ನ ಸಾವಿರ ಅಕ್ಕಿಯ ಹುಟ್ಟುವಳಿ ನನ್ನಿಂದ ಆರಂಭವಾಗಿ ನನ್ನಿಂದಲೇ ಅಂತ್ಯವಾಗುವ ಸ್ಥಿತಿ ಆಯಿತಲ್ಲಾ) ಇಲ್ಲಿ ಸಾವಿರ ಮುಡಿ ಹುಟ್ಟುವಳಿಯ ಗದ್ದೆಯವನು ಎಂದರೆ ಬಹಳ ದೊಡ್ಡ ಬೇಸಾಯಗಾರ ಎಂದು ಅರ್ಥ.

ಪೌರಾಣಿಕ ವಸ್ತುವುಳ್ಳ ಬಲೀಂದ್ರ ಪಾಡ್ದನದಲ್ಲಿ ಬಲಿಚಕ್ರವರ್ತಿಯನ್ನು 'ಭೂಮಿ ಪುತ್ರ ಬಲಿಯೇಂದ್ರ' ಎಂದು ಕರೆಯಲಾಗಿದೆ. ಇಲ್ಲಿನ ವಿವರಗಳು ಬೇಸಾಯಕ್ಕೆ ಸಂಬಂಧಿಸಿದವು ಅನೇಕ ಸಿಗುತ್ತದೆ.

'ಮಲಾರ ಪಂಜುರ್ಲಿ' ಪಾಡ್ದನದಲ್ಲಿ ನೇರವಾಗಿ ಬೇಸಾಯದ ವಿಚಾರ ಅಲ್ಲವಾದರೂ ಬೇಸಾಯದ ಕಾಲಗಳ ಹೆಸರುಗಳಾದ 'ಮಾಯಿ, ಸುಗ್ಗಿ' ಅಂತಹ ತುಳು ತಿಂಗಳುಗಳ ಹೆಸರುಗಳು ಬರುತ್ತವೆ.

ತುಳುನಾಡಿನ ತರಕಾರಿಗಳ ವಿವರ 'ಕರ್ನಗೆ' ಪಾಡ್ದನದಲ್ಲಿ ದೊರೆಯುತ್ತದೆ. "ಮುದಿಪಲ್ಲ ಲತ್ತ್‌ಣಿ ಕೊಯ್ಕಳ್‌ದಾರಲ್ಲ ದಾರೆಪೀರೆ ಕೊಯ್ಕಳ್. ಬಟ್ಟಲ್ ಕೆಂಬುಡೆ ಕೊಯ್ಕರ್ ಗೋಡಾದ ಬದನೆ ಕೊಯ್ಕಳ್.

ಬಣ್ಣಲ್ಲ ಪಟ್ಟಾಲಯಿಕೊಯ್ಯಳ. ಚನಿಲ ಬಣ್ಣದ ಸೌತೆಕೊಯ್ಯೆಳ್ ಕೋಡುಲ್ಲ, ಬೇಂಡಾಯಿ ಕೊಯ್ಯೆಳ್" (ಮರೆಯಲ್ಲಿರುವ ಅಲಸಂಡೆಯನ್ನು ಕೊಯ್ದಳು, ಗೆರೆಗಳಿರುವ ದಾರ 'ಹೀರೆಕಾಯಿ'ಯನ್ನು ಕೊಯ್ದಳು. ಬಟ್ಟಲು ಗಾತ್ರದ ಚೀನಿಕಾಯಿಯನ್ನು ಕೊಯ್ದಳು. ಬದನೆ ಕೊಯ್ದಳು, ಬಣ್ಣ ಬಣ್ಣದ ಪಡುವಲ ಕಾಯಿಯನ್ನು ಕೊಯ್ದಳು. ಅಳಿಲಿನ ಬಣ್ಣದ ಸೌತೆಕಾಯಿಯನ್ನು ಕೊಯ್ದಳು. ಕೋಡು ಕೋಡಾಗಿರುವ ಬೆಂಡೆಕಾಯಿಯನ್ನು ಕೊಯ್ದಳು). ಇಲ್ಲಿ ತುಳುನಾಡಿನ ಜನಪ್ರಿಯ ತರಕಾರಿಗಳಾದ ಅಲಸಂಡೆ, ದಾರ ಹೀರೆಕಾಯಿ, ಚೀನಿಕಾಯಿ, ಬದನೆ, ಪಡುವಲ ಕಾಯಿ, ಸೌತೆಕಾಯಿ, ಬೆಂಡೆಕಾಯಿ—ಇವುಗಳ ಹೆಸರುಗಳು ಕಾಣಸಿಗುತ್ತವೆ. 'ಕರ್ನಗೆ' ಪಾಡ್ದನದ ಇನ್ನೊಂದು ಪಾಠದಲ್ಲಿ ಮಣೊಳಿ (ತೊಂಡೆಕಾಯಿ), 'ಬೆಕ್ಕರ್ಪೆ' (ಮುಳ್ಳು ಸೌತೆಕಾಯಿ), ಬೊಣ್ಣೊ ಕುಂಬುಡ (ಬೂದಿ ಕುಂಬಳ ಕಾಯಿ)— ಈ ತರಕಾರಿಗಳ ಹೆಸರು ಬರುತ್ತವೆ.

## 3. ವ್ಯಾಪಾರ

ಪ್ರಾಚೀನ ತುಳುನಾಡಿನ ವ್ಯಾಪಾರದ ಸ್ವರೂಪವನ್ನು ಅನೇಕ ಪಾಡ್ದನಗಳು ವಿವರಿಸುತ್ತವೆ. ಪಾಡ್ದನಗಳಲ್ಲಿ ಕಾಣಿಸುವ ಪ್ರಧಾನವಾದ ವ್ಯಾಪಾರಗಳು ಅಂದರೆ, ಕಡಲಿನಲ್ಲಿ ಹಡಗಿನ ಮೂಲಕ ಪರವೂರುಗಳಿಗೆ ಹೋಗಿ ಮಾಡುವ ವ್ಯಾಪಾರ, ಗಟ್ಟದ ಮೇಲಿನಿಂದ ಜಾನುವಾರುಗಳನ್ನು ತಂದು ಮಾಡುವ ವ್ಯಾಪಾರ. 'ಬೊಬ್ಬರ್ಯ' ಪಾಡ್ದನ, 'ಕೇತು ಪಾಂಡಿ' ಪಾಡ್ದನ, 'ಅತ್ತಾವರ ದೈಯೊಂಗುಳು' ಪಾಡ್ದನ–ಪ್ರಧಾನವಾಗಿ ಈ ಪಾಡ್ದನಗಳಲ್ಲಿ ಕಡಲಿನಲ್ಲಿ ಹಡಗಿನ ಮೂಲಕ ವ್ಯಾಪಾರ ಮಾಡುವ ಸಂಗತಿಯು ವರ್ಣಿತವಾಗಿದೆ.

'ಬೊಬ್ಬರ್ಯ' ಪಾಡ್ದನದಲ್ಲಿ ಬ್ಯಾರಿಗಳು ಕಡಲಿನ ಬದಿಯಲ್ಲಿ 'ಜೀನಸು' ಮುಂತಾದುವುಗಳ ವ್ಯಾಪಾರ ಮಾಡುತ್ತಾರೆ. "ಎಂಕುಳೆಗ್ ಪರ ಊರು ಜತ್ತ್‌ದ್ ಯೇರಸರೊ ಮಳ್ಪೊಡುಂದೆರ್. ಕಂಚಿ ಸಿದ್ದೆ ಕಂಚಿ ಬಳ್ಳಿ, ಬಳ್ಳ ಮಡಿ ಚೀರಾವು ಪುಗೆಲೆಡ್ ಪಾಡ್ಯೆರ್, ಸಾರಕಟ್ಟ್ ಬೆಲ್ಲ, ನೆಪ್ಪುದ ಪುರಿನೂಲು ಊರುಕೊಂಡುದು ಮಾರೊಡುಂದೆರ್, ಸಾರ್‌ಕಟ್ಟೆ ಬೆಲ್ಲ ನೆಪ್ಪುದ ಪುರಿನೂಲುಮಾತ ಸರಿಯಾಂಡ್, ಇಲ್ಲೆಗೊಂಜಿ ಗರು, ಇಲ್ಲೆಗೊಂಜಿ ಮಡಲ್ ಪತ್ತ್ಯೆರ್, ಕಡಲ ಬರಿಟ್ ಮಾಡಲ್, ಅಂಗಡಿ ಕಟ್ಟ್ಯೆರ್ ಸಿನೆ ಕೊಲುಡು ಪದಿನಾಜಿ ಬಾಕಿಲ್ ತೆರ್ತೆರ್, ಪಡಿನಾಜಿ ಬಾಕಿಲೆಡ್ ಪಡಿನಾಜಿ ಬೇರೊ ದೀಯೆರ್. ಸಾಮೆ, ಎಣ್ಣೆ ಗೋಧಿ, ಕಡಲೆ, ಕಿಂಕೆ, ರಾಗಿ, ಕಾಂಟ್ಯಡ್ ಪೊಡ್ದೊಳು, ಕೆಂಚಳ್ಳ ಬೊಂಡೊ, ತಿಪ್ಪಿಡ್ ಪೊಡಿ ಸುಣ್ಣೊ, ಮರಾಯಿಡ್ ಎಣ್ಣೆ, ಚರ್ಬುದ ಬಜ್ಜೆಯಿ, ಕುಡ್ಪುಡು ಗೋರಿ ಬಚ್ಚಿರೆ, ಮುಗಡೊರ ಸಾರಾಯಿ, ಒಂಜಿ ಬಾಕಿಲ್‌ಡ್ ಚೌಳಿತ ಬ್ಯಾರೊ, ಪೈಕ್‌ಡ್ ಪುಗ್ಗಿರೆ, ಬೆಲ್ಲದ ಬೇರೊ. ಈ ಏರ್‌ನಾರ್ ಮಳ್ತ್‌ದ್ ಕಾಯಿದ ಎಚ್ಚಿ ಕರಿಜ್ಜಿ. ಬಂಜಿದ ಪರಿಪಾಡ್ ಪೋಯಿಜಿ, ತುತ್ತ್‌ಡು ಮುನ್ನಿ ದೀಯಿಜಿ, ಮುಂಡು ಜಪ್ಪುಡುದು ತುತ್ತುಜಿ, ಕಾಲೊಗು ಐಯ್ವನೂದು ವರಾನೆ ಗಲಸುಜ್ಯೊ ಕೂಡು ಪಾಡು ಜ್ಯೊ" (ನಮಗೆ ಪರವೂರಿಗೆ ಇಳಿದು ವ್ಯಾಪಾರ ಮಾಡಬೇಕು ಎಂದರು. ಸಾವಿರಕಟ್ಟು ಬೆಲ್ಲ ಮತ್ತು ತೆಂಗಿನ ಹುರಿಹಗ್ಗ ಮಾರಬೇಕು ಎಂದರು. ಅವರು ತಮ್ಮ ಹೆಗಲಿನಲ್ಲಿ ಒಂದು ಚೀಲದಲ್ಲಿ, ಕಂಚಿನ ಬಳ್ಳವನ್ನು ಕಂಚಿನ ಪಾತ್ರವನ್ನು ಹಾಕಿಕೊಂಡರು, ನಾವು ಸಾವಿರ ಕಟ್ಟು ಬೆಲ್ಲ, ತೆಂಗಿನ ಹುರಿಹಗ್ಗ–ಇದನ್ನು ಮಾರಾಟ ಮಾಡಿದರು. ಪ್ರತಿಯೊಂದು ಮನೆಗೂ ಒಂದು ಬಿದಿರು ಮತ್ತು ಒಂದು ಮಡಲಿನ ತಟ್ಟೆಯನ್ನು ಪಡೆದರು. ಕಡಲಿನ ಬದಿಯಲ್ಲಿ ಮಡಲಿನ ಅಂಗಡಿಯನ್ನು ಕಟ್ಟಿದರು. ಅವರು ಆ ಅಂಗಡಿಯಲ್ಲಿ ಹದಿನಾರು ಬಾಗಿಲುಗಳನ್ನು ತೆಗೆದರು. ಹದಿನಾರು ಬಾಗಿಲಿನಲ್ಲಿ ಹದಿನಾರು ರೀತಿಯ ವ್ಯಾಪಾರಗಳನ್ನು ಮಾಡಿದರು. ಅವರು ವ್ಯಾಪಾರ ಮಾಡಿದ ಸಾಮಗ್ರಿಗಳೆಂದರೆ–ಸಾಮೆ, ಎಳ್ಳು, ಗೋಧಿ, ರೆಂಕೆ, ರಾಗಿ, ಒಂದು ಬುಟ್ಟಿಯಲ್ಲಿ ಅರಳು, ಕೆಂದಾಳಿ ಎಳನೀರು. ಗೆರಟೆಯಲ್ಲಿ ಹುಡಿಸುಣ್ಣ, ಎಣ್ಣೆ, ಅಡಿಕೆಗೊನೆ, ವೀಳ್ಯೆದೆಲೆ, ಕಳ್ಳು, ಬಟ್ಟೆ, ಹೊಗೆಸೊಪ್ಪು, ಬೆಲ್ಲ–ಈ ವ್ಯಾಪಾರ ಮಾಡಿಯೂ ಅವರಿಗೆ ಅಡಕೆ ಜಗಿಯುವ ಖರ್ಚು ಸಿಗಲಿಲ್ಲ. ಹೊಟ್ಟೆಗೆ ಸರಿಯಾಗಿ ದಕ್ಕಲಿಲ್ಲ). ಇಲ್ಲಿ ಬೇರೆ ಬೇರೆ ಧಾನ್ಯಗಳ, ಜೀನಸುಗಳ, ಬಟ್ಟೆ, ಕಳ್ಳು ಮುಂತಾದುವುಗಳ ವ್ಯಾಪಾರದ ವಿಚಾರ ದೊರೆಯುತ್ತದೆ.

ಮುಂದೆ ಅವರು 'ಪಡಾವುದ ಬೇರೊ' (ಹಡಗಿನಲ್ಲಿ ವ್ಯಾಪಾರ) ಮಾಡುತ್ತಾರೆ. ಹಡಗಿನ ವ್ಯಾಪಾರದ ವಿವರಗಳನ್ನು ಬೊಬ್ಬರ್ಯ ಪಾಡ್ದನದಲ್ಲಿ ಈ ರೀತಿ ಕೊಡಲಾಗಿದೆ. "ಊರು ಡಿತ್ತಿ ಅರಿಬಾರ್ ಪಡಾವುಗು ದಿಂಜಾಯೆರ್. ಅರಸ್ ಕೈತೆರ್, ಪೂಕಂಬೊ ನಿಡುಪಾಡ್ಯೆರ್, ಹಾಳಿತ್ತ ಬರಾವುಗು ತೂಯೆರ್, ಪಟ್ಟೆದ ಪಾಯಿ ಯೇತೆರ್, ಗಾಳಿತ್ತ ಬರಾವುಗು ನೀರದಿಂಜೆಲ್‌ಗ್ ಸರೂತ ತೆನಕಾಯಿ ರಾಜ್ಯೊಗು ಪೋಯೆರ್, ಮಕ್ಕೊಡ್ಕ್ ಕೋಟೆ, ಮಕಾಯಿಡುಯೇರೊ. ದೀಪುಡು ನಂಗಾಲ್, ಕೊಚ್ಚಿಡ್ ಯೇರೊನಾರೊ ಪೋದು, ವರುಸೊ ಲಜಿ ತಿಂಗೊಳಾಂಡ್, ಬತ್ ಬಂಗಾರ್, ಮುತ್ತು ಮಾಣಿಕ್ಯೊ, ವಜ್ರ ವೈಡೂರ್ಯ ಕೈ ಸೇರ್‌ಂಡ್' (ಊರಿನಲ್ಲಿದ್ದ ಅಕ್ಕಿ ಭತ್ತವನ್ನೆಲ್ಲಾ ಹಡಗಿಗೆ ತುಂಬಿಸಿದರು. ಹಡಗಿನ ಹಗ್ಗಗಳನ್ನು ಬಿಗಿ ಮಾಡಿದರು. ಹೂ ಕಂಬವನ್ನು ನೆಟ್ಟಗೆ ಮಾಡಿದರು. ಗಾಳಿಯ ದಿಕ್ಕನು ಗವನಿಸಿದರು. ಸಿಲ್ಕ್‌ನ ಹಾಯಿಯನ್ನು ಬಿಚ್ಚಿದರು. ಗಾಳಿಯ ರಭಸಕ್ಕೆ ನೇರವಾಗಿ ದಕ್ಷಿಣದ ದೇಶಗಳಿಗೆ ಪ್ರಯಾಣ ಮಾಡಿದರು. ಮಕ್ಕಾದಲ್ಲಿ, ಮಕಾಯಿಯಲ್ಲಿ ವ್ಯಾಪಾರ ಮಾಡಿದರು. ಮತ್ತೆ ಒಂದು ದ್ವೀಪದಲ್ಲಿ ಲಂಗರು ಹಾಕಿದರು. ಅನಂತರ ಕೊಚ್ಚಿಯಲ್ಲಿ ವ್ಯಾಪಾರ ಮಾಡಿದರು. . ಅವರು ಮನೆಯಿಂದ ಹೊರಟು ಒಂದು ವರ್ಷ ಆರು ತಿಂಗಳು ಆಯಿತು. ಬಂಗಾರ, ಮುತ್ತು, ಮಾಣಿಕ್ಯ, ವಜ್ರ, ವೈಡೂರ್ಯಗಳು ಅವರ ಕೈ ಸೇರಿದವು). ಮೇಲಿದ ವಾಕ್ಯಗಳಲ್ಲಿ ಆಗಿನ ಕಾಲದ ಹಡಗಿನ ಮೂಲಕದ ವಾಪಾರದ ಪರಿಚಯುವಾಗತ್ತದೆ. ಹಡಗಿನ ರಚನೆ, ದ್ವೀಪಗಳಲ್ಲಿ ಕರಾವಳಿಯ ಪಟ್ಟಣಗಳಲ್ಲಿ ಲಂಗರು ಹಾಕಿ ವ್ಯಾಪಾರ ಮಾಡಿ ಸಂಚರಿಸುವ ಪದ್ಧತಿ ಇಲ್ಲಿ ಕಾಣಿಸುತ್ತದೆ. ಇಂತಹ ವ್ಯಾಪಾರದಿಂದ ವಿಶೇಷ ಲಾಭವು ಆಗುತ್ತಿತ್ತು. ಎನ್ನುವುದು ಗೊತ್ತಾಗುತ್ತದೆ. ಇಲ್ಲಿ ಪ್ರಧಾನವಾಗಿ ಅಕ್ಕಿ ಮತ್ತು ಭತ್ತಗಳ ವ್ಯಾಪಾರವು ಹಡಗಿನ ಮೂಲಕ ಆಗುತ್ತಿದ್ದ ವಿಚಾರ ತಿಳಿಯತ್ತದೆ.

'ಕೇತು ಪಾಂಡಿ' ಪಾಡ್ದನದಲ್ಲಿ ಎದ್ರೋಡಿ ಕೇತು ಮರಕಲನು ಹಡಗು ಕಟ್ಟಿ ವ್ಯಾಪಾರಮಾಡುತ್ತಾನೆ. ಇಲ್ಲಿನ ವ್ಯಾಪಾರದ ವಿವರಗಳು ಸಾಮಾನ್ಯವಾಗಿ ಬೊಬ್ಬರ್ಯ ಪಾಡ್ದನವನ್ನೇ ಹೋಲುತ್ತವೆ.

'ಅತ್ತಾವರ ದೈಯುಂಗೊಳು' ಪಾಡ್ದನದಲ್ಲಿ ಹಡಗು ಕಟ್ಟುವ ಮತ್ತು ಹಡಗಿನ ಮೂಲಕ ವ್ಯಾಪಾರ ಮಾಡುವ ವಿಚಾರ ಬರುತ್ತದೆ,–"ಪಡಾವುದ (ಕಪ್ಪಲ್) ಬೇಲೆ ಮಳ್ಪಾಯೆರ್, ಪಟ್ಟೆದ ಪಾಯಿಗೋಪಾಯೇರ್, ಬೇರೊಸಾರೊ (ಮಾಲ್) ದೀಪಾಯೆರ್, ಪಲಾಯುನ ಆನೆ ಮಾರ್ಬಲ ಮಾತ ಕಪ್ಪಲ್‌ಡ್ ಪಾಡ್ಪಾಯರ್" (ಹಡಗಿನ ಕೆಲಸ ಮಾಡಿಸಿದರು. ಪಟ್ಟೆಯ ಹಾಯಿಯನ್ನು ಕಟ್ಟಿದರು. ಮುತ್ತಿನ ಕೂವೆ ಮರವನ್ನು ನೆಡಿಸಿದರು. ವ್ಯಾಪಾರದ ಸಾಮಾನನ್ನು ಇಟ್ಟರು. ಅಣ್ಣನ ಆನೆ ಮಾರ್ಬಲವನ್ನು ಎಲ್ಲ ಹಡಗಿಗೆ ಹಾಕಿಸಿದರು.)ಇಲ್ಲಿ ಹಡಗಿನ ವ್ಯಾಪಾರದ ಜೊತೆಗೆ ಹಡಗಿನ ರಚನೆಯ ಸ್ವರೂಪವನ್ನು ತಿಳಿದುಕೊಳ್ಳಬಹುದು.

'ಕನ್ನಲ್ಲಾಯಿ' ಪಾಡ್ದನದಲ್ಲಿ ಸಮುದ್ರದಲ್ಲಿ ಹಡಗಿನ ಮೂಲಕ ವ್ಯಾಪಾರ ಮಾಡುವ ವಿಚಾರ ವರ್ಣಿತವಾಗಿದೆ. ಗುರು ಸರಪ್ಪೋಳಿಯ ಮಕ್ಕಳಾದ ಶೆಟ್ಟಿಗಳು ಸಂಬಾರ ಜೀನಸು, ಗೋಧಿ. ಬೇಳೆ, ಅಕ್ಕಿ, ಸಾಮೆ, ಬಟ್ಟೆಗಳು ಮುಂತಾದ ವಸ್ತುಗಳ ವ್ಯಾಪಾರವನ್ನು ಮಾಡುತ್ತಾರೆ.

'ಪಂಜುರ್ಲಿ' ಯ ಒಂದು ಪಾಡ್ದನದಲ್ಲಿ ಶೆಟ್ಟಿಗಳು ಪಡಾವುದ ಬೇರೊ (ಹಡಗಿನ ವ್ಯಾಪಾರ) ಮಾಡುವ ಸಂಗತಿ ಇದೆ.

'ಕಾಂತುನೆಕ್ರಿ ಭೂತ' ಪಾಡ್ದನದಲ್ಲಿ ಪಣಂಬೂರಿಗೆ ಪಡಾವು (ಹಡಗು) ಬರುವ ಘಟನೆ ಇದೆ. ಈಗ ಹಡಗಿನ ದೊಡ್ಡ ಬಂದರವಾಗಿರುವ 'ಪಣಂಬೂರು' ಪ್ರಾಚೀನ ಕಾಲದಲ್ಲಿಯೇ ಚಿಕ್ಕ ಚಿಕ್ಕ ಹಡಗುಗಳು ತಂಗುತ್ತಿದ್ದ ಸ್ಥಳವಾಗಿರಬೇಕು.

ಪಾಡ್ದನಗಳಲ್ಲಿ ಕಾಣಿಸಿಕೊಳ್ಳುವ ಇನ್ನೊಂದು ಮುಖ್ಯ ವ್ಯಾಪಾರ ಎಂದರೆ, ಜಾನುವಾರುಗಳ ವ್ಯಾಪಾರ, ಗಟ್ಟದ ಮೇಲಿನಿಂದ ಕೋಣಗಳನ್ನೋ, ಎತ್ತುಗಳನ್ನೋ ತಳುನಾಡಿಗೆ ತಂದು ವ್ಯಾಪಾರ ಮಾಡುವ ರೀತಿಯನ್ನು

ಕೆಲವು ಪಾಡ್ದನಗಳಲ್ಲಿ ನೋಡಬಹುದು. ಇಂದಿಗೂ ತುಳುನಾಡಿನಲ್ಲಿ ಸುಬ್ರಹ್ಮಣ್ಯ ಮುಂತಾದ ಸ್ಥಳಗಳಲ್ಲಿ ವರ್ಷಕ್ಕೆ ಒಂದು ಬಾರಿ ನಡೆಯುವ ಜಾನುವಾರುಗಳ ಜಾತ್ರೆಗೆ, ಜಾನುವಾರುಗಳು ಬರುವುದು ಗಟ್ಟದ ಮೇಲಿನಿಂದಲೇ ಎನ್ನುವುದು ಮುಖ್ಯ ವಿಚಾರ.

'ಪಂಜುರ್ಲಿ' ಯ ಒಂದು ಪಾಡ್ದನದಲ್ಲಿ 'ಜಾರಂತಾಯ' ಪಾಡ್ದನದಲ್ಲಿ, 'ಕನ್ನಲ್ಲಾಯ' ಪಾಡ್ದನದಲ್ಲಿ ಮುಂತಾದ ಕಡೆ ಕೋಣಗಳ ಮತ್ತು ಎತ್ತುಗಳ ವ್ಯಾಪಾರದ ವಿವರಗಳು ದೊರೆಯುತ್ತವೆ. ಹೆಚ್ಚಾಗಿ ಈ ರೀತಿಯ ವ್ಯಾಪಾರವನ್ನು ಮಾಡುವವರು ಶೆಟ್ಟಿಗಳು (ಪಂಜುರ್ಲಿ ಪಾಡ್ದನ ಮತ್ತು ಕಲ್ಲಾಯ ಪಾಡ್ದನ). ಜಾರಂತಾಯ ಪಾಡ್ದನದಲ್ಲಿ ಭಟ್ಟರು ಕೋಣಗಳನ್ನು ಖರೀದಿಸುತ್ತಾರೆ.

'ಕನ್ನಲ್ಲಾಯ' ಪಾಡ್ದನದಲ್ಲಿ ಎಲ್ಲಪ್ಪ ಗೌಡ ಎನ್ನುವವನು ಎತ್ತುಗಳನ್ನು ಮಾರುತ್ತಾನೆ. ಶೆಟ್ಟಿಗಳು ಮುನ್ನೂರು ರೂಪಾಯಿಗಳನ್ನು ಕೊಟ್ಟು ಎತ್ತುಗಳನ್ನು ಕೊಂಡುಕೊಳ್ಳುತ್ತಾರೆ.

'ಕೋಟಿ—ಚೆನ್ನಯ' ಪಾಡ್ದನದಲ್ಲಿ 'ಕಾಯಿ ಮಾರುವ ಕಾಂತಕ್ಕ' ಳ ವಿಚಾರ ಬರುತ್ತದೆ. ಇಲ್ಲಿ ಕಾಯಿ ಮಾರುವುದು ಎಂದರೆ ಎಲೆ ಅಡಿಕೆ ಜಗಿಯುವ ಅಡಕೆ ಕಾಯಿ. ಇಂತಹ ಅಡಕೆ ಕಾಯಿಯನ್ನು ಮಾರುವ ಪದ್ಧತಿ ಇತ್ತು ಎಂದು ಗೊತ್ತಾಗುತ್ತದೆ.

'ಒನ್ನಮ್ಮ ಜೇವು' ಪಾಡ್ದನಲ್ಲಿ 'ಕಾಜಿ' ಅಂದರೆ ಬಳೆಯ ವ್ಯಾಪಾರದ ವಿವರಣೆ ಇದೆ. ಬಳೆಗಾರನು ಮನೆಮನೆಗೆ ಕೊಂಡು ಹೋಗಿ ಬಳೆ ಮಾರುವ ಪದ್ಧತಿಯನ್ನು ಇಲ್ಲಿ ಹೇಳಲಾಗಿದೆ.

### 4. ಸಾರಿಗೆ ಸಂಪರ್ಕ ಸಾಧನಗಳು

ತುಳುನಾಡಿನ ಸಾರಿಗೆ, ಸಂಚಾರದ ವಿಧಾನಗಳು ಮತ್ತು ಸಂಪರ್ಕದ ಸಾಧನಗಳು—ಇವುಗಳ ಬಗ್ಗೆ ಪಾಡ್ದನಗಳಲ್ಲಿ ಕೆಲವು ವಿವರಗಳು ದೊರೆಯುತ್ತವೆ.

ಅನೇಕ ಹೊಳೆಗಳು ಇರುವ ತುಳುನಾಡಿನಲ್ಲಿ ಸಂಚಾರಕ್ಕೆ ಇರುವ ಒಂದು ದೊಡ್ಡ ಸಮಸ್ಯೆ ಎಂದರೆ ಇಂತಹ ಹೊಳೆಗಳನ್ನು ದಾಟಿಕೊಂಡು ಹೋಗುವುದು. ಸೇತುವೆಗಳು ಇಲ್ಲದೆ ಇದ್ದ ಆ ಕಾಲದಲ್ಲಿ ಸಾರಿಗೆಯ ಸ್ವರೂಪ ಹೇಗಿತ್ತು ಎನ್ನುವುದನ್ನು ಸ್ವಲ್ಪ ಮಟ್ಟಿಗಾದರೂ ಈ ಪಾಡ್ದನಗಳಿಂದ ತಿಳಿದುಕೊಳ್ಳಬಹುದು. ಹೊಳೆಗಳಲ್ಲಿ ಆಳ ಕಡಿಮೆ ಇರುವ, ಸೆಳೆತ ಹೆಚ್ಚು ಇಲ್ಲದಿರುವ ಸ್ಥಳಗಳಲ್ಲಿ ಒಂದು ಬದಿಯಿಂದ ಇನ್ನೊಂದು ಬದಿಗೆ ಹೊಳೆಯನ್ನು ದಾಟುತ್ತಾರೆ. ಈ ರೀತಿಯ ದಾಟುವ ಸ್ಥಳಗಳಿಗೆ 'ಕಡಪು', 'ಕಡವು', 'ಕರಿಯ' (Ferry) ಎಂದು ಕರೆಯುತ್ತಾರೆ, ಪಾಡ್ದನಗಳಲ್ಲಿ ಇಂತಹ ಕರಿಯ ಅಥವಾ ಕಡಪುಗಳಲ್ಲಿ ಹೊಳೆಯನ್ನು ದಾಟುವ ವಿಚಾರ ಹೆಚ್ಚಾಗಿ ಸಿಗುತ್ತದೆ. ಕಲ್ಕುಡ, ಕಲ್ಲುರ್ಟಿ, ಜಾರಂತಾಯ, ಕನಪಾಡಿತ್ತಾಯ ಮುಂತಾದ ಅನೇಕ ಪಾಡ್ದನಗಳಲ್ಲಿ ಇಂತಹ ಕಡಪು ಅಥವಾ ಕರಿಯಗಳಲ್ಲಿ ಹೊಳೆದಾಟುವ ವಿಚಾರ ಇದೆ. ಕೆಲವೊಂದು ಬಾರಿ ಇಂತಹ ಕಡಪುಗಳು ಸ್ವಲ್ಪ ಆಳವಾಗಿದ್ದಾಗ ದೋಣಿಗಳ ಮೂಲಕ ಹೊಳೆಯನ್ನು ದಾಟುವ ವಿಚಾರ ಪಾಡ್ದನಗಳಲ್ಲಿ ಸಿಗುತ್ತದೆ. 'ಕಲ್ಲುರ್ಟಿ' ಪಾಡ್ದನದಲ್ಲಿ 'ಉಬಾರ ಕಡಪು' (ಉಪ್ಪಿನಂಗಡಿಯ ಕಡವು). ಇಲ್ಲಿ 'ಓಡ' ಅಂದರೆ ದೋಣಿಯ ಮೂಲಕ ಹೊಳೆಯನ್ನು ದಾಟುವ ವಿಚಾರವಿದೆ. ಈ ರೀತಿ 'ಓಡ' ಅಂದರೆ ದೋಣಿಯ ಮೂಲಕ ಹೊಳೆಯನ್ನು ದಾಟುವುದು 'ಸಿರಿ' ಪಾಡ್ದನ ಮುಂತಾದ ಇನ್ನೂ ಅನೇಕ ಪಾಡ್ದನಗಳಲ್ಲಿ ಬರುತ್ತದೆ.

ಕೆಲವೊಂದು ಬಾರಿ ಚಿಕ್ಕ 'ಕಣಿ' ಗಳನ್ನು ದಾಟಲು ವ್ಯವಸ್ಥೆ ಇತ್ತು ಎನ್ನುವುದು 'ಕೋಟಿ ಚೆನ್ನಯ' ಪಾಡ್ದನದ ಈ ಮಾತಿನಿಂದ ತಿಳಿಯುತ್ತದೆ. "ಬಾಳು ಪಾಂಪು ನೂಲ ಕೈತಾಂಗ್ ಎಂಕುಳು ದಾಂಟಿಯಾಯೆ" (ನಾವು ಹಗ್ಗದ ಸಂಕವನ್ನು ದಾಟಿದೆವು). ಇಲ್ಲಿ ದಾಟುವ ಸಾಧನವು ಮರದ್ದೋ ಅಥವಾ ಹಗ್ಗದ್ದೋ ಆಗಿರಬಹುದು. ಆದರೆ ಹಾಗೆ ದಾಟುವಾಗ ಸಮತೋಲನ ತಪ್ಪಿ ಕೆಳಗೆ ಬೀಳದಂತೆ ಆಸರೆಯಾಗಿ ಕೈಯಲ್ಲಿ ಹಿಡಿದುಕೊಳ್ಳುವ ಕೈತಾಂಗ ಹಗ್ಗದ್ದು ಎನ್ನುವುದು ಸ್ಪಷ್ಟವಾಗಿದೆ. ಈಗಲೂ ಹಳ್ಳಿಗಳಲ್ಲಿ ಇಂತಹ ರಚನೆಗಳು ಕಾಣಸಿಗುತ್ತವೆ.

ಪಾಡ್ದನಗಳಲ್ಲಿ ಕಾಣಿಸುವ ಇನ್ನೊಂದು ಮುಖ್ಯ ಸಂಗತಿ ಎಂದರೆ ಆಗಿನ ಕಾಲದ ಸಂಪರ್ಕ ವ್ಯವಸ್ಥೆ. ಒಂದು ಕಡೆಯಿಂದ ಇನ್ನೊಂದು ಕಡೆಗೆ ವರ್ತಮಾನವನ್ನು ಕಳುಹಿಸಲು ಓಲೆ ಬರೆಯುವ ಕ್ರಮವನ್ನು ಅನುಸರಿಸುತ್ತಿದ್ದರು–ಎನ್ನುವುದು ಅನೇಕ ಪಾಡ್ದನಗಳಲ್ಲಿ ತೋರಿ ಬರುವ ಅಂಶ. 'ಕೋಟಿ ಚೆನ್ನಯ' ಪಾಡ್ದನ, 'ಅತ್ತಾವರ ದೈಯಂಗೊಳ್' ಪಾಡ್ದನ, 'ಕಲ್ಕುಡ' ಪಾಡ್ದನ ಮುಂತಾದವುಗಳಲ್ಲಿ ಓಲೆಯ ಮೂಲಕ ವಾರ್ತೆಗಳನ್ನು ತಿಳಿಸುವ ವ್ಯವಸ್ಥೆಯನ್ನು ಹೇಳಲಾಗಿದೆ. ಸಾಮಾನ್ಯವಾಗಿ ಇಂತಹ ಸಂದರ್ಭಗಳಲ್ಲಿ ಓಲೆಗಳನ್ನು ಬರೆಯುವುದಕ್ಕೆ ಮೊದಲು ಆ ರೀತಿ ಬರೆಯಲು ಬಳಸುವ ಓಲೆಗಳನ್ನು ಸಿದ್ಧಪಡಿಸುವ ಕ್ರಮವನ್ನು ವಿವರಿಸಲಾಗಿದೆ : 'ಅತ್ತಾವರ ದೈಯಂಗೋಳು' ಮತ್ತು 'ಕೋಟಿ ಚೆನ್ನಯ' ಪಾಡ್ದನಗಳಲ್ಲಿ ಈ ರೀತಿ ಓಲೆ ಸಿದ್ಧ ಮಾಡುವ ಮತ್ತು ಕಳುಹಿಸುವ ವಿಧಾನಗಳ ವಿವರಗಳು ಸಿಗುತ್ತವೆ.

"ಉದ್ದೊದ ಬೊಟ್ಟುಗಳು ಕಡಪುಡ್ಯೆರ್, ಗುಜ್ಜರಿ ತಾರೆದ ಸಿರಿವೊಲಿ ತರ್ಪುಡಾಯೆರ್, ಮುಡಾಯಿದ ನೆಲಿದೊಂಬುಗು ಪಾಡಾಯಿರ್, ಪಡ್ಡಾಯಿದ ದೊಂಬುಗು ದೆಪ್ಪಾಯೆರ್, ಕಡೆ ಕೊಡಿ ವೊಲಿನ್ ಕತ್ತೆರಿಯೆರ್, ವೋಲೆ ಬರೆವಾಯೆರ್ ಕಿಲೆಸಿ ಮಗಕ್, ವೋಲೆಗ್ ಮಾನಿ, ಮಾನಿಗ್ ಸಂಬಳ ಕೊರ್ಪಾಯೆರ್, ವೋಲೆದ ಮಾನಿ ವೋಲ್ ದೆತ್ತೊಂದು ನಾಗಲೋಕದ ಅರಮನೆಕಡತ್. ಗಟ್ಟದ ಮಿತ್ತೆಡ್, ಅಯಿರೆ ನಾಡ್‌ಡ್ ಈ ಜಾನಗರೋಗು ಬತ್ತೆ, ಕಿಲೆಸಿ ಮಗ ಇಲ್ಲಡೆಗ್ ಬತ್ತೆ. ವೋಲೆ ಕೊಂಡುದು ಕಿಲೆಸಿ ಮಗ ಕೈಟ್ ಕೋರ್ಯೆ. ವೋಲೆ ಪೋದು ತೂನಗ ಅಡಿ ಉಣುಪುದು ತುತ್ತೂದಿ ಕುಂಟುಡು ಬರೋಡ್ ಆಂದ್‌ದ್ ಬರಿದ್‌ಂಡ್ ಐಟ್" (ಉದ್ದದ ಬೆಟ್ಟಗೆ ಕಳುಹಿಸಿದರು. ಗಿಡ್ಡವಾದ ತಾಳೆಮರದ ಎಳತಾದ ಗರಿಯನ್ನು ತರಿಸಿದರು. ಬೆಳಗಿನ ನಸುಬಿಸಿಲಿಗೆ ಹಾಕಿದರು. ಸಂಜೆಯ ಬಿಸಿಲಿಗೆ ತೆಗೆದರು. ಆ ತಾಳೆಗರಿಯ ತುದಿ ಬುಡಗಳನ್ನು ಕತ್ತರಿಸಿದರು. ವೋಲೆ ಬರೆಸಿದರು. ಕ್ಷೌರಿಕನ ವೃತ್ತಿಗೆ ವೋಲೆ ಕೊಂಡೊಯ್ಯಲು ಒಬ್ಬ ಆಳು. ಆ ಆಳಿಗೆ ಸಂಬಳ ಕೊಡಿಸಿದರು. ಆ ವೋಲೆಯ ಆಳು ವೋಲೆ ತೆಗೆದುಕೊಂಡು ನಾಗಲೋಕದ ಅರಮನೆಯನ್ನು ದಾಟಿದನು. ಗಟ್ಟದ ಮೇಲೆ ಆ ಕಡೆಯ ನಾಡಿಗೆ ವಿಜಯನಗರಕ್ಕೆ ಬಂದನು. ಕ್ಷೌರಿಕನ ಮನೆಗೆ ಬಂದನು. ವೋಲೆಯನ್ನು ಕ್ಷೌರಿಕನ ಕೈಯಲ್ಲಿ ಕೊಟ್ಟನು. ವೋಲೆಯನ್ನು ಓದಿ ನೋಡುವಾಗ ಅಟ್ಟ ಅನ್ನದಲ್ಲಿ ಉಟ್ಟ ಬಟ್ಟೆಯಲ್ಲಿ ಹೊರಟು ಬರಬೇಕು ಎಂದು ಅದರಲ್ಲಿ ಬರೆದಿತ್ತು.

'ಕೋಟಿ ಚೆನ್ನಯ್ಯ' ಪಾಡ್ದನದಲ್ಲಿ ಕೂಡ ಓಲೆಯನ್ನು ಸಿದ್ಧಪಡಿಸುವ ಮತ್ತು ಬರೆಯುವ ವಿಚಾರ ಬರುತ್ತದೆ. ಇಲ್ಲಿ ಸ್ವಲ್ಪ ವಿವರವಾಗಿ ಆ ಸಂಗತಿ ವರ್ಣಿತವಾಗಿದೆ. "ವೊಂಜಿ ವೋಲೆ ಬಲಿವೊಡಾಂಡ್‌ಯೇ, ವೋಲೆ ಬರೆವರೆ ಯೇರ್ ಇಂದ್ ಪಣ್ಬೆರ್‌ಯೇ, ವೋಲೆ ಬರೆವರೆ ನಾರಾಯಣ ರಂಗೋಜಿ, ನಾರಾಯಣ ರಂಗೋಜಿ ಸೇನವೆಯೇ, ಅಪಗ ಅಂಡಆರೆ ಕೈತಳೇ ಮಾನಿ ಸೇರ್‌ದೆರ್‌ಯೇ ಅಪಗಾಂಡ ನನಬೇಗೋಗಳಿಗೆ ಸಂಕೆಂಗ್ ಬರೊಡಾಂಡ್‌ಯೇ, ಅಪಗಾಂಡಾ ಬುದ್ಯಂತನ್‌ಲಾ ಬೊಟ್ಟುಗು ಕೂಡಾದರ್‌ಯೇ, ಬುಜ್ಜಿತಾರಿದ ಬೆಲ್ಲೊಳಿ ಕಡ್ಪಾದೆರ್‌ಯೇ, ನೇರಡೆದ ನೈಯಾ ದೊಂಬುಗು ಪಾಡ್‌ದೆರ್‌ಯೇ. ಬೈಯದ ಪನಿಯು ದೊಂಬುಗು ಮಡಿಪಾದೆರ್‌ಯೇ, ಅಪಗ ನಾರಾಯಣ ಸೇನಪೆರ್ ಚಾವಡಿಗ್ ಬೈದೆರ್‌ಯೇ, ಅಪಗ ದಾನೆ ಕಜ್ಜೊಗು ಈರ್ ಲೆಪ್ಪಾದೆರ್‌ಯೇ. ವೊಂಜಿ ವೋಲೆ ಬರೆವೊಡೆ ಸೇನವೆರೆಯೇ, ಮೂಜಿ ಕಾರಾನಂದಿ ಮುಂಕ್ಕೆಲೆಗೆಡ್

ಸೇನವೆರ್ ಕುಳ್ಳುದೆರ್‌ಯೇ, ಕಟ್ ಬೆರ್ಗ್ಲಾಳಿಕೊಂಡು ನೇನವೆರೆ ಯೆದುರು ಪಾಡ್‌ದೆರ್‌ಯೇ, ಕಟ್‌ಡ್‌ದ್ ವೊಂಜಿ ವೊಲ್ ದೆಯಿಂದೆರ್ ಆಡ್, ಕಡೆವೊಲಿ ಕತ್ತರಿಯೆರ್, ಕೊಡಿವೊಲ್ ಮುತ್ತೆರಿ ಯಿರ್‌ಯೇ ಬಾವೊಗು ವೊಂಜಿ ವೊಲ್ ಬರ್ತೆರ್‌ಯೇ ವೋಲೆಗ್ ಯೆಣ್ಣೆನೊ ಮಂಜಳೊ ಪೂಜೆದೆರ್‌ಯೇ ದಾನೆ ಲಕ್ಕೆರೊ ಬರೆವೊಡುಂಡಾದ್ ಬಲ್ಲಾಳೆಂದೆರ್‌ಯೇ, ಆಪಗ ಗಟ್ಟದ ವಿಂತ್ತ್‌ಗ್ ಈ – ಜಾನಗರೊಡ್ ಮೇಲ್ ನಾಡ್‌ಗ್‌ಯೇ, ಪಡ್‌ರಾಜ್ ಕಟ್ಟಿನಾಯಿ ಪದ್‌ರಾಡ್ ಬುಡನಾಯಿ ಕೊಂಡುಬರೊಡಾಂಡ್, ಇರುವ ಇರುವತ್ತ ನಾಲ್ ನಾಯೆಕುಳೆನ್ಯೆ ಉಣ್ತ್ ಉನ್ಬುಡು ಸುತ್ತುದಿ ಗಡಿಯೊಡು ಯೆಡುಂಬೂರ ಬಲ್ಲಾಳ್ ದೇರ್‌ನ ಕಾಡ್‌ಯೇ ಯೆಡುಂಬೂರು ಬಲ್ಲಾಳ್ ದೇರ್‌ನ ಕಾಡ್ ದೇರ್ ವೆರ್‌ಯೆ, ವೋಲೆ ಸೂಯಿಗಳೆಗೆಗ್ ಬರೊಡಾಂಡ್‌ಯೇ. ಆಪಗ ವೋಲೆ ಬರೆದ ವೋಲೆ ಕೊಂಡುಪೋವೆರ್ ಯೇರಉಳ್ಳೆರ್‌ಯೇ. ಅಪಗಾಂಡ ಊರಿಗಂದ ಬಗ್ಗಿ ಉಳ್ಳೆಯೇ, ಸಾದಿಗ್ ಸಂಬಳೊ ಆಯಗ್ ಕೊರಿಯೆರ್‌ಯೇ, ಇಲ್ಲಡೆಗ್ ಬಟ್ವಾಣಿ ಬೀಗೊ ಕೊರ್ತೆರ್‌ಯೇ, ಸೆರಂಗ್‌ಡ್ ವೋಲೆ ಆಪಗ ಕಟ್‌ದೆರ್‌ಯೇ" (ಒಂದು ಓಲೆಯನ್ನು ಬರೆಸಬೇಕಾಯಿತಲ್ಲ. 'ಓಲೆ ಬರೆಯಲು ಯಾರಿದ್ದಾರೆ' ಎಂದು ಕೇಳುತ್ತಾರೆ. 'ಓಲೆ ಬರೆಯಲು ನಾರಾಯಣ ರಂಗೋಜಿ, ನಾರಾಯಣ ರಂಗೋಜಿ ಸೇನವನು ಇದ್ದಾನೆ." 'ಹಾಗಾದರೆ ಅವನಲ್ಲಿಗೆ ಆಳನ್ನು ಕಳುಹಿಸಿರಿ. ಅವನು ಬೇಗನೆ ಗಳಿಗೆಯೊಳಗೆ ಬರಲಿ. ಹಾಗೆಯೆ ಸೇನವನು ಗಳಿಗೆಯಲ್ಲಿ ಬಂದನು. ಬುದ್ಯಂತನನ್ನು ದೆಟ್ಟಿನಲ್ಲಿ ಸೇರಿಸಿದ್ದಾರೆ. ಗಿಡ್ಡ ತಾಳೆಯಮರದ ಎಳತು ಗರಿಯನ್ನು ಕಡಿಸಿದರು. ಬೆಳಗ್ಗಿನ ನಸು ಬಿಸಿಲಿಗೆ ಹಾಕಿದರು. ಸಂಜೆಯ ಬಿಸಿಲಿಗೆ ತೆಗೆದರು. ನಾರಾಯಣ ಸೇನವರು ಚಾವಡಿಗೆ ಬಂದಿದ್ದಾರೆ. ಏನು ಕಾರ್ಯದಲ್ಲಿ ನನ್ನನ್ನು ಕರೆಸಿದಿರಿ' ಎಂದು ಕೇಳುತ್ತಾರೆ. 'ಒಂದು ಓಲೆ ಬರೆಯಬೇಕಾಗಿದೆಯಲ್ಲಾ ಸೇನವರೆ' ಮೂರು ಕಾಲಿನ ಮುಕ್ಕಲಿಗೆಯಲ್ಲಿ ಸೇನವರು ಕುಳಿತುಕೊಂಡರು. ಒಣಗಿಸಿದ ಓಲೆಗರಿಯ ಕಟ್ಟನ್ನು ಸೇನವರ ಮುಂದೆ ತಂದು ಹಾಕಿದರು. ಕಟ್ಟಿನಿಂದ ಒಂದು ಓಲೆಗರಿಯನ್ನು ಅವರು ತೆಗೆದರು. ಓಲೆಯ ಬುಡವನ್ನು ಕತ್ತರಿಸಿದರು. ಓಲೆಯ ತುದಿಯನ್ನು ಕತ್ತರಿಸಿದರು. ಆ ಓಲೆಯನ್ನು ಬಾಗಿಸಿ ಸರಿಮಾಡಿಸಿದರು. ಓಲೆಗೆ ಎಣ್ಣೆಯನ್ನೂ ಅರಿಸಿನವನ್ನೂ ಸವರಿದರು. 'ಏನು ಒಕ್ಕಣೆ ಬರೆಯಬೇಕು ಬಲ್ಲಾಳರೆ' ಎಂದು ಕೇಳಿದರು. ಆಗ ಬಲ್ಲಾಳರು 'ಗಟ್ಟದ ಮೇಲೆ ವಿಜಯನಗರಕ್ಕೆ ಮೇಲ್ನಾಡಿಗೆ ಪತ್ರ ಬರೆಯಬೇಕಾಗಿದೆ. ಅಲ್ಲಿಂದ ಹನ್ನೆರಡು ಕಟ್ಟಿ ಸಾಕಿದ ನಾಯಿ, ಹನ್ನೆರಡು ಬಿಟ್ಟು ಸಾಕಿದ ನಾಯಿಗಳನ್ನು ತರಬೇಕಾಗಿದೆ. ಇಪ್ಪತ್ತನಾಲ್ಕು ನಾಯಿಗಳನ್ನು ಉಂಡ ಅನ್ನದಲ್ಲಿ ಸುತ್ತಿದ ಸ್ಥಿತಿಯಲ್ಲಿ ಓಲೆ ಹೋದ ಗಳಿಗೆಯಲ್ಲಿ ಕರೆದುಕೊಂಡು ಬರಬೇಕು. ಎಣ್ಮೂರು ಬಲ್ಲಾಳನು ಕಾಡಿನ ಬೇಟೆ ಆಡಬೇಕಾಗಿದೆ. ಓಲೆಯನ್ನು ಬರೆದಾದ ಮೇಲೆ 'ಓಲೆಯನ್ನು ಕೊಂಡು ಹೋಗಲು ಯಾರಿದ್ದಾರೆ ?' ಎಂದು ಕೇಳಿದರು. ಆಗ ಊಳಿಗದ ಬಗ್ಗ' ಎನ್ನುವವನು ಇದ್ದಾನೆ. ದಾರಿಯ ಖರ್ಚಿಗೆ ಸಂಬಳ ಅವನಿಗೆ ಕೊಟ್ಟರು. ಮನೆಯ ಖರ್ಚಿಗೆ ಆಹಾರ ಸಾಮಗ್ರಿ ಕೊಟ್ಟರು. ಅವನ ಸೆರಗಿನಲ್ಲಿ ಓಲೆಯನ್ನು ಕಟ್ಟಿದರು."

ಮೇಲಿನ ವಿವರಣೆಯಲ್ಲಿ ಓಲೆಯನ್ನು ತಾಳೆ ಮರದಿಂದ ತಯಾರಿಸುವ ಕ್ರಮ ಬಹಳ ಸ್ಪಷ್ಟವಾಗಿ ನಿರೂಪಿತವಾಗಿದೆ. ಅರಸರ ಆಸ್ಥಾನಗಳಲ್ಲಿ ಅಥವಾ ಬಲ್ಲಾಳರ ಬೀಡುಗಳಲ್ಲಿ ಓಲೆಯನ್ನು ಬರೆಯುವ ಕರಣಿಕ ವೃತ್ತಿಯವರು ಇದ್ದರು. ಎಂದು ಗೊತ್ತಾಗುತ್ತದೆ. ಇಲ್ಲಿ ಕಾಣಿಸುವ ನಾರಾಯಣ ರಂಗೋಜಿ ಸೇನವನು ಇಂತಹ ಕರಣಿಕ, ಅಂದರೆ ಶ್ಯಾನುಭೋಗ, ಅಂದರೆ ಶ್ಯಾನುಭೋಗ ಅಂದರೆ ಸೇನವ ವೃತ್ತಿಯವನು ಆಗಿದ್ದಾನೆ.

ಸಿರಿಯ ಪಾಡ್ದನದಲ್ಲಿಯೂ ಓಲೆ ಬರೆಸುವ ವಿಚಾರ ಕೆಲವು ಕಡೆ ಬರುತ್ತದೆ. 'ಕೋಟಿ ಚೆನ್ನಯ' ಪಾಡ್ದನದಲ್ಲಿ ಬರುವ 'ರಂಗೋಜಿ ಸೇನವನೇ' ಇಲ್ಲಿಯೂ ತಾಳೆವೋಲೆಯ ಮೇಲೆ ಬರೆಯುವ ಲೆಕ್ಕಣಿಕಗಾರನಾಗಿ ಕಾಣಿಸುತ್ತಾನೆ.

'ಅತ್ತಾವರ ದೈಯಂಗೊಳು' ಪಾಡ್ದನದಲ್ಲಿ ಗಟ್ಟದ ಮೇಲಿನಿಂದ ಇಳಿಯುವಾಗ ಆನೆ ಮತ್ತು ಕುದುರೆಗಳನ್ನು ಸಾರಿಗೆಗೆ ಬಳಸಿಕೊಂಡ ಸಂಗತಿಯು ಬರುತ್ತದೆ. ಅಂದರೆ ಅರಸರು ಪ್ರಯಾಣಗಳಿಗೆ ಇಂತಹ ಪ್ರಾಣಿಗಳನ್ನು ಬಳಸುತ್ತಾ ಇದ್ದಿರಬಹುದು.

## 5. ವಿದ್ಯಾಭ್ಯಾಸ

ತುಳುನಾಡಿನ ಪ್ರಾಚೀನ ಸಮಾಜಗಳಲ್ಲಿ ವಿದ್ಯಾಭ್ಯಾಸದ ಕ್ರಮ ಹೇಗಿತ್ತು ಎನ್ನುವುದನ್ನು ಕೆಲವು ಪಾಡ್ದನಗಳಲ್ಲಿ ವಿವರಿಸಲಾಗಿದೆ. ಹುಡುಗರಿಗೆ ಅಕ್ಷರಾಭ್ಯಾಸವು ಹೊಯ್ಗೆಯಲ್ಲಿ ಆಗುತ್ತಿತ್ತು ಎನ್ನುವುದನ್ನು 'ಬೊಬ್ಬರ್ಯ' ಪಾಡ್ದನ, 'ಕನ್ನಲ್ಲಾಯಿ' ಪಾಡ್ದನ ಮುಂತಾದ ಕೆಲವು ಪಾಡ್ದನಗಳಲ್ಲಿ ನೋಡಬಹುದು. 'ಬೊಬ್ಬರ್ಯ' ಪಾಡ್ದನದಲ್ಲಿ ಮಕ್ಕಳು ಅಕ್ಷರಾಭ್ಯಾಸ ಕಲಿತ ಕ್ರಮವನ್ನು ಈ ರೀತಿ ಹೇಳಲಾಗಿದೆ.

"ಆಕುಳು ಮಲ್ಲಾಯೆರ್, ಬರವು ಕಲ್ಪೊಡೆಂದೆರ್. ಕಡಲ ಬರಿಟ್ ಸಣ್ಣಪೊಯ್ಯೆ ಸೆರೆ ಸೆರೆ ತರ್ಪುಡಾಯೆರ್, ಮುಡಾಯಿ ಸಿಸೆ ಮುಂಡುಡು ಪಾಡಿಯೆರ್, ಪೊಯ್ಯೆಡ್ ಬರೆಯೆರ್, ಬರವು ಅಂಡ್, ಪಾಲಾಯಿ ಪತ್ತಿಯೆರ್. ಉದ್ದಂದ ಬೊಟ್ಟುಡ್ದು ಗುಜ್ಜಳ್ಳ ಸರಿಪೊಲ್ ತರ್ಪುಡಿಯೆರ್, ಮುಡಾಯಿ ಮುಗಲ್ ದೊಂಬುಗು ಪಾಡಿಯೆರ್, ಪಡ್ಡಾಯಿ ಪಟ್ಟೆ ಮಣಿದೊಂಬುಗು ದೆಪ್ಪಾಯೆರ್. ಮುಗ್ರುಮು ದಿನತಾನಿ ಕಡಿಪೊಲ್ ಕತ್ತೆರಿಯೆರ್, ಕೊಡಿಪೊಲ್ ಮುತ್ತಿಯೆರ್, ಒಂಜಿ ಪೊಲ್ ಬಾ ಮೊಗು ಬರ್ಪಾಯೆರ್, ಐಪುಂಡಿ ಓಲೆ ಮುಪ್ಪುಂಡಿ ಗ್ರಂಥ ಪತ್ತಿಯೆರ್, ಓಲೆ ಪತ್ತ್‌ದ್ ಓದಿಯೆರ್, ಗ್ರಂಥ ಪತ್ತ್‌ದ್ ನಾಜ್ಯೆರ್, ಪೊಯ್ಯೆ ಪಲಾಯಿ ಓಲೆ ವಕ್ಕರ ಸಮ ಅಂಡ್."

(ಅವರು ಹುಡುಗರಾದರು. ಬರಹ ಕಲಿಯಬೇಕು ಎಂದರು. ಕಡಲಿನ ಬದಿಯಿಂದ ಸಣ್ಣದಾದ ಹೊಯ್ಗೆಯನ್ನು ಕೈತುಂಬಾ ತರಿಸಿದರು. ಅದನ್ನು ಪೂರ್ವದ ಜಗಲಿಯಲ್ಲಿ ಹಾಕಿದರು. ಅವರು ಹೊಯ್ಗೆಯಲ್ಲಿ ಬರೆದರು. ಅಕ್ಷರಾಭ್ಯಾಸ ಆಯಿತು. ಆಮೇಲೆ ಅವರು ಹಲಗೆಯನ್ನು ಹಿಡಿದರು. ಅವರು ಬೆಟ್ಟದಿಂದ ಗಿಡ್ಡದಾದ ತಾಳೆ ಮರದ ಎಳತಾದ ಓಲೆ ಗರಿಗಳನ್ನು ತರಿಸಿದರು. ಅದನ್ನು ಬೆಳಗ್ಗಿನ ಮೋಡದ ಬಿಸಿಲಿಗೆ ಹಾಕಿದರು. ಸಂಜೆಯ ಬಿಸಿಲಿಗೆ ತೆಗೆದರು. ಮರುದಿನ ಅದರ ಎರಡು ಬದಿಗಳನ್ನು ಕತ್ತರಿಸಿದರು. ಆ ಓಲೆಗಳನ್ನು ನಡುವಿನಲ್ಲಿ ಬಾಗಿಸಿ ಗ್ರಂಥದ ರೂಪಕ್ಕೆ ತಂದರು. ಇದರಿಂದ ಐದು ಮುಷ್ಟಿಯಷ್ಟು ಓಲೆ ಗರಿಗಳು ಮೂರು ಮುಷ್ಟಿಯಷ್ಟು ಗ್ರಂಥಗಳು ಆದವು, ಅವರು ಆ ಓಲೆಗಳಲ್ಲಿ ಸರಿಯಾಗಿ ಬರೆದರು ಮತ್ತು ಓದಿದರು. ಈ ರೀತಿ ಅವರ ವಿದ್ಯಾಭ್ಯಾಸ ಹೊಯ್ಗೆಯಲ್ಲಿ, ಹಲಗೆಯಲ್ಲಿ ಮತ್ತು ಓಲೆ ಗರಿಯ ಮೇಲೆ ಸರಿಯಾಗಿ ಆಯಿತು).

ಮೇಲಿನ ವಿವರಣೆಯಲ್ಲಿ ಆಗಿನ ಕಾಲದ ವಿದ್ಯಾಭ್ಯಾಸದ ಮೂರು ಹಂತಗಳಾದ ಹೊಯ್ಗೆಯ ಮೇಲಿನ, ಹಲಗೆಯ ಮೇಲಿನ, ಓಲೆ ಗರಿಯ ಮೇಲಿನ ಅಕ್ಷರಾಭ್ಯಾಸದ ವಿಚಾರ ತಿಳಿಯುತ್ತದೆ.

'ಕನ್ನಲ್ಲಾಯಿ' ಪಾಡ್ದನದಲ್ಲಿ ಗುರುಸರ ಪೊಳಿ ನಾಯಕನ ಮಕ್ಕಳು ಚಿಕ್ಕ ಹುಡುಗರಾಗಿದ್ದಾಗ ವಿದ್ಯಾಭ್ಯಾಸವನ್ನು ಆರಂಭಿಸುತ್ತಾರೆ. ಅವರ ತಂದೆಯು ಸಮುದ್ರದ ಬದಿಯಲ್ಲಿ ಒಂದು ಕಟ್ಟಡವನ್ನು ಕಟ್ಟಿಸುತ್ತಾನೆ. ಬರೆಯುವುದಕ್ಕಾಗಿ ಸ್ವಲ್ಪ ಹೊಯ್ಗೆಯನ್ನು ತರುತ್ತಾನೆ. ಒಂದು ಇಳಿಜಾರಾದ ಮೇಜನ್ನು ಅವರಿಗಾಗಿ ಇಡುತ್ತಾನೆ. ಆ ಮಕ್ಕಳು ಮೊದಲು ಹೊಯ್ಗೆಯಲ್ಲಿ ಬರೆಯುತ್ತಾರೆ. ಅವರು ಹಲಗೆಗಳಲ್ಲಿ ಬರೆಯುವ ಸ್ಥಿತಿಗೆ ಬಂದಾಗ ಅವರ ತಂದೆಯು ಅವರಿಗೆ ತಾಳೆಮರದ ಓಲೆ ಗರಿಗಳನ್ನು ತಂದು ಕೊಡುತ್ತಾನೆ. ಅವುಗಳನ್ನು ಬೆಳಗಿನ ಬಿಸಿಲಿನಲ್ಲಿ ಒಣಗಿಸಿ ಸಂಜೆಯ ಬಿಸಿಲಿನಲ್ಲಿ ರಾಶಿ ಮಾಡುತ್ತಾನೆ. ಆ ತಾಳೆ ಗರಿಗಳ ಎರಡೂ ಬದಿಯನ್ನು ಕತ್ತರಿಸಿ ಅವುಗಳ ಅಂಚುಗಳನ್ನು ಸರಿಪಡಿಸುತ್ತಾನೆ. ಆ ಓಲೆ ಗರಿಗಳ ಮೇಲೆ ಹುಳಿಯನ್ನು ಸವರುತ್ತಾನೆ. ಆ ಮಕ್ಕಳು ಅಂತಹ ತಾಳೆ ಗರಿಗಳ ಮೇಲೆ ಬರೆದು ಅದನ್ನು ಕಟ್ಟು ಮಾಡುತ್ತಾರೆ. ಆ ತಾಳೆ ಗರಿಗಳ ಕಟ್ಟನ್ನು ದಾರಿ ಬದಿಯ ಒಂದು ಮರಕ್ಕೆ ಕಟ್ಟುತ್ತಾರೆ. ಅವರು ಬಳಿಕ ಶಾಯಿಯನ್ನು ತೆಗೆದುಕೊಂಡು "ನಾವು ಇನ್ನು ಮೇಲೆ ಇಂಗ್ಲಿಷಿನಲ್ಲಿ ಬರೆಯುತ್ತೇವೆ" ಎನ್ನುತ್ತಾರೆ. ಅವರು ದಾಖಲೆ ಪತ್ರಗಳಲ್ಲಿ ವಿಶೇಷ ಬರವಣಿಗೆಗಳನ್ನು ಬರೆಯುತ್ತಾರೆ ಮತ್ತು ಅವುಗಳನ್ನು ಮನೆಯಲ್ಲಿ ಜೋಪಾನವಾಗಿ ಇಡುತ್ತಾರೆ.

ಮೇಲಿನ ವಿವರಗಳು ವಿದ್ಯಾಭ್ಯಾಸದ ಬೇರೆ ಬೇರೆ ಹಂತಗಳನ್ನು ತಿಳಿಸುತ್ತವೆ. ಹೊೖಗೆಯಲ್ಲಿ ಬರೆಯುವುದು ಅಕ್ಷರಾಭ್ಯಾಸದ ಬಹಳ ಪ್ರಾಚೀನ ಕ್ರಮ. ತಾಳೆ ಗರಿಯ ಓಲೆಯಲ್ಲಿ ಬರೆಯುವುದು ಅಕ್ಷರಾಭ್ಯಾಸದ ನಂತರದ ಬೆಳವಣಿಗೆ. ಆದರೆ ಮೇಲಿನ ಪಾಡ್ದನದಲ್ಲಿ ಬರೆಯುವುದಕ್ಕೆ ಶಾಯಿಯನ್ನು ಬಳಸುವುದು, ಇಂಗ್ಲಿಷಿನಲ್ಲಿ ಬರೆಯುವುದು, ದಾಖಲೆ ಪತ್ರಗಳಲ್ಲಿ ಬರೆಯುವುದು-ಈ ವಿವರಗಳು ಇಂಗ್ಲಿಷರು ತುಳುನಾಡಿಗೆ ಬಂದ ಮೇಲೆ ಅಂದರೆ 16ನೇ ಶತಮಾನದ ಬಳಿಕದ ವಿದ್ಯಾಭ್ಯಾಸದ ಸಂಸ್ಕೃತಿಯನ್ನು ತಿಳಿಸುತ್ತವೆ. ಅಕ್ಷರಾಭ್ಯಾಸದಲ್ಲಿ ಇದು ತೀರ ಆಧುನಿಕವಾದ ಹಂತ.

'ಸಿರಿಯ' ಪಾಡ್ದನದಲ್ಲಿ 'ಬರವಿನ ಸಾಲೆ' ಎಂಬ ಮಾತು ಬರುತ್ತದೆ. 'ಅಕ್ಕೆಸಿರಿ'ಯು ಓಲೆಯನ್ನು ಓದುವ ಪ್ರಸಂಗವಿದೆ. ಆದ್ದರಿಂದ ಹೆಣ್ಣು ಮಕ್ಕಳು ಓದುಬರಹ ಕಲಿಯುತ್ತಿದ್ದರೆಂದು ಊಹಿಸಬಹುದು. 'ಬರವಿನ ಸಾಲೆ' ಎಂಬುದು ಇಂತಹ ವಿದ್ಯಾಭ್ಯಾಸದ ಕೇಂದ್ರ ಆಗಿದ್ದಿರಬಹುದು.

ಹುಡುಗರ ವಿದ್ಯಾಭ್ಯಾಸದ ಹಂತ ಹಂತವಾದ ಚಿತ್ರಣವನ್ನು ಒಂದು ಪಾಡ್ದನದಲ್ಲಿ ಹೀಗೆ ಚಿತ್ರಿಸಲಾಗಿದೆ :

"ಸುದೆ ಬೊಳ್ಗ್‌ರೆಡ್ಡ್ ಸಣ್ಣಪೊಡಿ ಪೊಯ್ಯೆ ತರ್ಪುಡಯೆರ್. ಪಾದ್ರಾಡ್ ಬಳ್ಪಿ ಬರೆಯೆರ್. ಇರುವತ್ತನಾಲ್ ಮಗ್ಗಿ ಗುಣಿತೆರ್. ಬಾಯಿತಚ್ಚರೊ ಪೊಯ್ಯೆಂಡಾಡ್ ಪೊಯ್ಯತಚ್ಚರೊ ಬಾಯಿಗ್‌ಬತ್ತೆಂಡ್. ಪೊಯ್ಯಿತ ಬರವು ಬುಡ್ಯೆರ್. ಬಳಪುತ ಅಚ್ಚರೊ ಬಾಯಿಗಾಂಡ್. ಬಾಯಿತಚ್ಚರೊ ಬಳಪುಟು ಬತ್ತುಂಡ್. ಆಯಿನ ಬುಡ್ಯೆರ್, ಓಲೆ ಕಂಟಿಕೊಪತ್ಯೆರ್. ಬತ್ತಿ ಓಲೆಗ್ ಉತ್ತರೊ ಬರೆಯಿರ್" (ಹೊಳೆಯ ಬದಿಯಿಂದ ಸಣ್ಣ ಹುಡಿ ಮರಳು ತರಿಸಿದರು. ಹನ್ನೆರಡು ಬಳ್ಳಿ ಬರೆದರು. ಇಪ್ಪತ್ತನಾಲ್ಕು ಮಗ್ಗಿ ಗುಣಿಸಿದರು. ಬಾಯಿಯ ಅಕ್ಷರ ಹೊಯಿಗೆಯಲ್ಲಾಯಿತು. ಹೊಯಿಗೆಯ ಅಕ್ಷರ ಬಾಯಲ್ಲಾಯಿತು. ಹೊಯಿಗೆಯ ಬರವಣಿಗೆ ಬಿಟ್ಟರು. ಬಳಪದ ಅಕ್ಷರ ಹಿಡಿದರು. ಬಳಪದ ಅಕ್ಷರ ಬಾಯಿಗಾಯಿತು, ಬಾಯಿಯ ಅಕ್ಷರ ಬಳಪದಲ್ಲಿ ಬಂತು. ಅದನ್ನು ಬಿಟ್ಟರು. ಓಲೆ ಕಂಠ ಹಿಡಿದರು. ಬಂದ ಓಲೆಗೆ ಉತ್ತರ ಬರೆದರು).

ಮೇಲಿನ ವಿವರಣೆಯಲ್ಲಿ ಮರಳಿನಲ್ಲಿ ಅಕ್ಷರಾಭ್ಯಾಸ ಮಾಡುವುದರ ಜೊತೆಗೆ ಬಳಪದ ಬರವಣಿಗೆ, ಓಲೆಯ ಬರವಣಿಗೆಗಳ ವಿಚಾರವು ಬರುತ್ತದೆ. ಓಲೆ ಬರೆಯಲು ಕಂಠವನ್ನು ಬಳಸುತ್ತಿದ್ದರು ಎಂದು ಗೊತ್ತಾಗುತ್ತದೆ. ಆಗಿನ ವಿದ್ಯಾಭ್ಯಾಸದಲ್ಲಿ 24 ರ ವರೆಗೆ ಮಗ್ಗಿಯನ್ನು ಕಲಿಯುವ ಕ್ರಮ ಇತ್ತು ಎಂದು ತಿಳಿಯುತ್ತದೆ.

'ಕೋಡದಬ್ಬು' ಪಾಡ್ದನದಲ್ಲಿಯೂ ವಿದ್ಯಾಭ್ಯಾಸದ ವಿಚಾರ ಬರುತ್ತದೆ. ತಾಳೆಗರಿಯಲ್ಲಿ ಬರೆಯುವುದು ಇಲ್ಲಿಯೂ ಇದೆ. ತಾಳೆಗರಿಯ ಉದ್ದ ಒಂದು 'ಗೇಣು' ಇತ್ತು. ಮತ್ತು ಅದನ್ನು ಒಂದು ಮಾರಿನಷ್ಟು ಉದ್ದ ಓದಿದ ಎನ್ನುವ ಮಾತು ಬರುತ್ತದೆ. ಇಲ್ಲಿ 'ಗೇಣು' ಮತ್ತು 'ಮಾರು' – ಇವು ತುಳುನಾಡಿನ ಹಳ್ಳಿಗಳಲ್ಲಿ ಇರುವ ಎರಡು ಅಳತೆಯ ಮಾನಗಳು. ಒಂದು ಹಸ್ತವನ್ನು ಸಂಪೂರ್ಣವಾಗಿ ಅಗಲಿಸಿದಾಗ ಹೆಬ್ಬೆರಳಿನ ತುದಿಯಿಂದ ಕಿರುಬೆರಳಿನ ತುದಿಗೆ ಇರುವ ಅಂತರವನ್ನು ಒಂದು 'ಗೇಣು' ಎನ್ನುತ್ತಾರೆ. ಒಬ್ಬನ ಎರಡು ಕೈಗಳನ್ನು ಚಾಚಿದಾಗ ಅವೆರಡರ ಒಟ್ಟು ಉದ್ದ ಒಂದು ಮಾರು ಎನಿಸುತ್ತದೆ.

## 6. ವೇಷಭೂಷಣಗಳು

ಪಾಡ್ದನಗಳು ತುಳುನಾಡಿನ ಸಮಾಜಗಳ, ವ್ಯಕ್ತಿಗಳ ವೇಷಭೂಷಣಗಳ ವಿವರಗಳನ್ನು ಒದಗಿಸುತ್ತವೆ. ಮುಖ್ಯವಾಗಿ ಹೆಣ್ಣುಗಳ ಅಲಂಕಾರ, ವೇಷಭೂಷಣಗಳ ವರ್ಣನೆಗಳು ಹೆಚ್ಚು ಸಿಗುತ್ತವೆ. ಆಗಿನ ಕಾಲದ ಆಭರಣಗಳು, ವಸ್ತ್ರ ವಿಶೇಷಗಳು ಅಲಂಕಾರದ ವಿಧಾನಗಳು ಇಲ್ಲಿ ಸಿಗುತ್ತವೆ.

ಕಲ್ಲುರ್ಟಿ ಪಾಡ್ದನದಲ್ಲಿ ಕಲ್ಲುರ್ಟಿಯು ಅಲಂಕಾರವಾಗುವ ಕ್ರಮವನ್ನು ಹೀಗೆ ವರ್ಣಿಸಲಾಗಿದೆ: "ತರೆ ಬರ್ಜಿಯೋಲು ಕಟ್ಟ್ಯೊಳು, ಮುತ್ತ್‌ದ ಬಕ್ತರೆ ದೀಯೊಳು, ಕುರೆಳ್ ಪದಕ ದೀಯೊಳು. ಎಣ್ಣೆವೋಲೆ ಎಸಳ್ ಬುಗುಡಿ, ಮುಳ್ಳ್ಕೊಪ್ಪ ಬಣ್ಣಸರ ಇಡೆಕಾಚಿ ಚಲಕಿ. ಕಾರ್‌ಗ್ ಪಿಲ್ಲಿಮೆಂಟಿ, ಕಣ್ಣೆಗ್ ಕೋಲುಮೈ, ಕಪ್ಪು ಬೊಟ್ಟು ದೀಯೊಳು, ಜಾಗಿನ ಸೀರೆ ತುತ್ಯೊಳು, ಪಟ್ಟೆದ ರವಕೆ ಪಾಡ್ಯೊಳು, ಐತ ಸಿಂಗಾರ ಆಯೊಳು." (ತಲೆ ಬಾಚಿ ಕಟ್ಟಿದಳು, ಮುತ್ತಿನ ಬೈತಲೆ ಇಟ್ಟಳು, ಕೊರಳ ಪದಕವನ್ನು ಇಟ್ಟಳು. ಎಣ್ಣೆ ವೋಲೆ, ಎಸಳು ಬುಗುಡಿ, ಮುಳ್ಳುಕೊಪ್ಪು, ಬಣ್ಣಸರ, ಬಳೆ, ಚಲಕಿ, ಕಾಲಿನ ಪಿಲ್ಲಿಮೆಂಟಿ, ಕಣ್ಣಿಗೆ ಕಾಡಿಗೆ, ಕಪ್ಪುಬೊಟ್ಟು ಇಟ್ಟಳು, ಸೀರೆ ಉಟ್ಟಳು, ಪಟ್ಟೆಯ ರವಕೆ ಹಾಕಿದಳು, ಸಿಂಗಾರವಾದಳು).

ಇಲ್ಲಿ ಹೆಣ್ಣೊಬ್ಬಳ ಆಭರಣಗಳ ಪಟ್ಟಿಯನ್ನು ಕೊಡಲಾಗಿದೆ. ತಲೆಬಾಚಿ ಕಟ್ಟುವ, ಕಣ್ಣಿಗೆ ಕಾಡಿಗೆ ಹಚ್ಚುವ, ಪಟ್ಟೆ ಸೀರೆ, ರವಕೆ ತೊಟ್ಟುಕೊಳ್ಳುವ ಸಂಭ್ರಮದ ಅಲಂಕರಣವು ಇಲ್ಲಿನ ಹೆಂಗಸರ ವಿಶೇಷ ಸಂದರ್ಭಗಳ ಅಲಂಕಾರವನ್ನು ಚಿತ್ರವತ್ತಾಗಿ ಕೊಡುತ್ತದೆ.

'ಕೋಟಿ-ಚೆನ್ನಯ' ಪಾಡ್ದನದಲ್ಲಿ ಪೆರ್ಮಲೆ ಬಲ್ಲಾಳನು ದೇಯಿಗೆ ಕೊಡುವ ವಸ್ತ್ರ ಒಡವೆಗಳು ಈ ರೀತಿ ಇವೆ. "ಎಣ್ಣೆವೋಲೆ, ಯೆಸಳ್ ಬುಗುಡಿ, ಮುಳ್ಳ್‌ದ ಕೊಪ್ಪು, ಕುತ್ತಿನ ರವಕೆ, ಪಚ್ಚೆ ಕಲ್‌ದ ಮೂಂಕುತಿ".

'ಇರುವೆಲ್ ಸಿರಿಕುಲು' ಪಾಡ್ದನದಲ್ಲಿ ಇಂತಹದೇ ಅಲಂಕರಣದ ವರ್ಣನೆ ಹೀಗೆ ಬರುತ್ತದೆ: "ಬೋಡಾಯಿ ಬಂಗಾರ್ ಮಾತ ಉತ್ಪನ್ನ ಅಂಡ್, ತುತ್ಯೆರೆ ಪಟ್ಟೆದ ಉಡುಸೀರೆ, ಪಾಡಿಯೆರೆ ಪಟ್ಟೆದ ರವಕೆ, ಬಾರ್ಯೆರೆ ಬರ್‌ಚನೆ, ಪಾಡ್ಯೆರೆ ಎಣ್ಣೆ, ಕುಂಕುಮದ ಕರಡಿಗೆ, ಕಣ್ಣೆಗ್ ಮೈತ ಕರಡಿಗೆ ಮಾತಲ ಅಂಡ್" (ಬೇಕಾದ ಬಂಗಾರವೆಲ್ಲ ಉತ್ಪನ್ನವಾಯಿತು. ಉಡಲು ಪಟ್ಟೆಯ ಸೀರೆ, ಹಾಕಲು ಪಟ್ಟೆಯ ರವಕೆ, ತಲೆಬಾಚಲು ಬಾಚಣಿಗೆ, ತಲೆಗೆ ಹಾಕುವ ಎಣ್ಣೆಯ ಚಿಕ್ಕ ಪಾತ್ರೆ, ಕುಂಕುಮದ ಕರಡಿಗೆ, ಕಣ್ಣಿಗೆ ಹಾಕುವ ಕಾಡಿಗೆಯ ಕರಡಿಗೆ– ಎಲ್ಲವೂ ಆಯಿತು).

'ಸಿರಿಯ ಪಾಡ್ದನ'ದಲ್ಲಿ ಅಕ್ಕೆಸಿರಿ ಅನೇಕ ವರ್ಗದ ಹೆಂಗಸರಿಗೆ ತನ್ನ ಸೌಂದರ್ಯದ ಮತ್ತು ಅಲಂಕಾರದ ಒಂದೊಂದು ಅಂಶವನ್ನು ಅನುಗ್ರಹಿಸುತ್ತ ಹೋಗುವ ವರ್ಣನೆಯಲ್ಲಿ ಅಂದಿನ ಹೆಣ್ಣಿನ ಅಲಂಕಾರ ಮತ್ತು ಒಡವೆಗಳ ವಿಚಾರ ತಿಳಿಯುತ್ತದೆ. ಹೊರ ಹೊರಡುವಾಗ ಹೆಣ್ಣು 'ಗೆಜ್ಜೆ ಕತ್ತಿ' ಯನ್ನು ಹಿಡಿದು ಕೊಳ್ಳುವ ವಾಡಿಕೆ ಇತ್ತು. ಸೊನ್ನೆಗೆ ಮದುವೆ ನಿಶ್ಚಯವಾದಾಗ ಅಜ್ಜ ಅವಳಿಗೆ ಕೈತುಂಬಾ ಬಂಗಾರದ ಒಡವೆ ಗಳನ್ನು ಮಾಡಿಸಿದರು – ನೆತ್ತಿಗೆ ನೆತ್ತಿ ಬೈತಲೆ, ಜಡೆಗೊಂಡೆ, ವೊಂಕಿ ಪೈಜಾಣ, ಉರಿಗೆಜ್ಜೆ, ಸೊಂಟಪಟ್ಟಿ, ಒಂಕಿ, ಮುತ್ತಿನ ಬಳೆ, ಕಾಲಿಗೆ ಕಾಲುಂಗುರ, ಕೈಗೆ ಮುದ್ರೆ ಉಂಗುರ, ಕುತ್ತಿಗೆಗೆ ಚಕ್ರಸರ, ಚಂದ್ರಹಾರ, ಹವಳದ ಮಾಲೆ, ಮುತ್ತಿನ ಕಂಠಿ, ಪವನು ಸರ – ಇತ್ಯಾದಿ ಬಗೆ ಬಣ್ಣದ ಬಂಗಾರ ಮಾಡಿಸಿದರು.

ಗಂಡಸರ ಅಲಂಕಾರದ ಬಗ್ಗೆಯೂ ಪಾಡ್ದನದಲ್ಲಿ ಚಿತ್ರಣಗಳು ದೊರೆಯುತ್ತವೆ. 'ಅತ್ತಾವರ ದೈಯಂಗಳು' ಪಾಡ್ದನದಲ್ಲಿ ಅಣ್ಣತಮ್ಮಂದಿರಿಬ್ಬರೂ ಸಿಂಗಾರವಾದ ಬಗೆಯನ್ನು ಈ ರೀತಿ ವರ್ಣಿಸಲಾಗಿದೆ. "ಐತ ಸಿಂಗಾರೊ ಅಪ್ಪೊಚುಂದೆರ್, ಏಳ್ ಪೆಟ್ಟಿಗೆದ ಉಡಿಗೆರೆ ತರ್ಪುಡಾಯೆರ್, ಏಳ್ ಪೆಟ್ಟಿಗೆದ ಬಂಗಾರ್ ತರ್ಪುಡಾಯೆರ್. ಕುಪ್ಪಿದ ಪರಿಮಳೊ ತರ್ಪುಡಾಯೆರ್, ಕುರಳ್‌ಯೇರ್‌ಂಡ್ ಕುರಳ್‌ಪದಕೊ, ನಡುಕು ಯೇರ್‌ಂಡ್ ನಾಗ ಪೊಡ್ಯಾಣೊ, ಕೆಬಿಕ್ ಮುತ್ತು ಚಾಕೊಳಿ ಯೇರ್‌ಂಡ್, ಕೆಕ್ಕಿಲೆಗ್ ಸಕ್ರಸರೊ, ಬೆರಳ್‌ಗ್ ಸೂರ್ಯ ಮುತ್ತು ಮುದ್ರೆದ ಉಂಗಿಲ, ತೋಳುಗು ತೋಳುದಂಡೆ, ತೇಜೊಡ್ಡು ಪತ್ತಿಸವು ಕಾರ್‌ಮುಂಟ್ಟ್ ಬಂಗಾರ್‌ದ ಸಿಂಗಾರೊ ಆಯೆರ್" (ಅಲಂಕಾರವಾಗಬೇಕು ಎಂದು ಹೇಳಿದರು. ಏಳು ಪೆಟ್ಟಿಗೆಯ ಅಲಂಕಾರ

ವಸ್ತುಗಳನ್ನು ತರಿಸಿದರು. ಏಳು ಪೆಟ್ಟಿಗೆಯ ಬಂಗಾರವನ್ನು ತರಿಸಿದರು. ಪರಿಮಳದ ಬಾಟ್ಲಿಯನ್ನು (ಬಹುಶಃ ಸೆಂಟ್) ತರಿಸಿದರು, ಕೊರಳಿಗೆ ಕೊರಳ ಪದಕ, ಸೊಂಟಕ್ಕೆ ನಾಗ ಒಡ್ಯಾಣ, ಕಿವಿಗೆ ಮುತ್ತಿನ ಚೌಕುಳಿ, ಕೊರಳಿಗೆ ಸಕ್ರಸರ, ಬೆರಳಿಗೆ ಸೂರ್ಯ ಮುದ್ರೆಯ ಮುತ್ತಿನ ಉಂಗುರ, ತೋಳಿಗೆ ತೋಳಬಂದಿ ಧರಿಸಿದರು. ತಲೆಯಿಂದ ಕಾಲಿನವರೆಗೆ ಚಿನ್ನದ ಅಲಂಕಾರವಾಯಿತು).

'ತೋಡಕುಕ್ಕಿನಾರ್' ಪಾಡ್ದನದಲ್ಲಿಯೂ ಇದೇ ರೀತಿ ಗಂಡಸರ ಅಲಂಕಾರದ ವರ್ಣನೆ ಇದೆ. ಧರ್ಮ ಅರಸು ಅಲಂಕರಿಸಿದ ರೀತಿಯನ್ನು ಹೀಗೆ ಕೊಡಲಾಗಿದೆ : "ಎಂಕ್ ಐತಾವೊಡುಂಡೆರ್, ಐಕ್ ಏಳ್ ಪೆಟ್ಟಿಗೆದ ಕುಂಟು ಕೊಂಡುತ್ತೆರ್, ಏಳ್ ಪೆಟ್ಟಿಗೆದ ಬಂಗಾರ್ ಕೊಂಡತ್ತೆರ್, ಕುಪ್ಪಿಡಿತ್ತಿ ಪರಿಮಳ ಕೊಂಡುದು ಬತ್ತೆಂಡ್, ಧರ್ಮ ಅರಸುಳು ಪರೆಂಗಿ ಮಂಡಿಟ್ ಕುಳ್ಪೆರ್. ಕುರಳ್‌ಗ್ ಪದಕ ಪಿರ್‌ಂಡ್, ನಡುಕು ಡಾಬು ದೀಂಡ್, ಕೆಬಿಕ್ ಮುತ್ತುದ ಚೌಕುಳಿ ಯೇರ್‌ಂಡ್, ಬಿರೆಳ್‌ಗ್ ಸೂರ್ಯ ಮುತ್ತು ಮುದ್ರೆದ ಉಂಗಿಲ ಯೇರ್‌ಂಡ್ ಕೆಕ್ಕಿಲ್‌ಗ್ ಚಕ್ರಸರೊ ಪಾಡ್‌ಂದ್ ಕೈಕ್ ದಂಡೆ ದೀಂಡ್, ತರೆಡ್ದ್ ಕಾರ್ ಮುಟ್ಟ ಬಂಗಾರ್‌ಡ್ ಸಿಂಗಾರಾಂಡ್. (ನನಗೆ ಅಲಂಕಾರವಾಗಬೇಕು. ಅದಕ್ಕಾಗಿ ಏಳು ಪೆಟ್ಟಿಗೆಯಲ್ಲಿ ಬಟ್ಟೆ ತರಿಸಿದರು. ಏಳು ಪೆಟ್ಟಿಗೆಯಲ್ಲಿ ಚಿನ್ನ ತರಿಸಿದರು. ಬಾಟ್ಲಿಯಲ್ಲಿ ಪರಿಮಳ ತಂದರು. ಧರ್ಮ ಅರಸು ಪರಂಗಿ ಮಣೆಯಲ್ಲಿ ಅಂದರೆ ಕುರ್ಚಿಯಲ್ಲಿ ಕುಳಿತುಕೊಂಡರು. ಕೊರಳಿಗೆ ಪದಕವನ್ನು ಏರಿಸಿದರು. ಸೊಂಟಕ್ಕೆ ಡಾಬುವನ್ನು ಇಟ್ಟರು, ಕಿವಿಗೆ ಮುತ್ತಿನ ಚೌಕಳಿಯನ್ನು ಜೋಡಿಸಿದರು. ಬೆರಳಿಗೆ ಸೂರ್ಯಮುದ್ರೆಯ ಮುತ್ತಿನ ಉಂಗುರ ವನ್ನು ಇಟ್ಟರು. ಕೊರಳಿಗೆ ಸಕ್ರ ಸರವನ್ನು ಹಾಕಿದರು. ಕೈಗೆ. ಬಳೆಯನ್ನು ತೊಟ್ಟರು. ತಲೆಯಿಂದ ಕಾಲಿನವರೆಗೆ ಚಿನ್ನದಲ್ಲಿ ಸಿಂಗಾರವಾದರು.)

ಮೇಲಿನ ಎರಡು ವರ್ಣನೆಗಳು ತುಳುನಾಡಿನ ಅರಸರ ವೈಭವದ ಅಲಂಕಾರವನ್ನು ತಿಳಿಸುತ್ತವೆ.

ಆದರೆ ತುಳುನಾಡಿನ ಸಾಮಾನ್ಯ ಮನುಷ್ಯನ ವೇಷಭೂಷಣಗಳು ಬಹಳ ಸರಳವಾಗಿದ್ದವು. ಅಡಕೆಯ ಹಾಳೆಯಿಂದ ಮಾಡಿದ ಟೊಪ್ಪಿಗೆಯೇ ಅವರ ಶಿರೋಭೂಷಣವಾಗಿತ್ತು. (ಅಡಿಕೆ ಹಾಳೆಯ ಇಂತಹ ಶಿರೋ ಭೂಷಣವನ್ನು ತುಳುವಿನಲ್ಲಿ 'ಮುಟ್ಟಾಲೆ' ಎಂದು ಕರೆಯುತ್ತಾರೆ). 'ಬೊಬ್ಬರ್ಯ' ಪಾಡ್ದನದಲ್ಲಿ ಭೂತದ ಉಪದ್ರದಿಂದ ನೀರಿನಲ್ಲಿ ಮುಳುಗಿದ 'ಪೊಂಗದೇರ್ ಬೈದ್ಯ' ನ ಮುಟ್ಟಾಲೆಯು ನೀರಿನಲ್ಲಿ ತೇಲುತ್ತಿರುತ್ತದೆ. ಇಂತಹ ಅಡಿಕೆ ಹಾಳೆಯಿಂದ ತಯಾರಿಸಿದ ಶಿರೋಭೂಷಣವನ್ನು ಬಲ್ಲಾಳರಂತಹ ಶ್ರೀಮಂತರು ಧರಿಸು ತ್ತಿದ್ದರು ಎನ್ನುವುದು 'ಕೋಟಿ ಚೆನ್ನಯ' ಪಾಡ್ದನದಲ್ಲಿ ತಿಳಿದು ಬರುವ ಸಂಗತಿ. ಆದರೆ ಇಂತಹ ಅಲಂಕರಣವು ನವಿಲುಗರಿಗಳಿಂದ ಕೂಡಿಕೊಂಡು ವಿಶೇಷವಾಗಿತ್ತು ಎಂಬ ಮಾತು ಬರುತ್ತದೆ.

## 7. ಮನೋರಂಜನೆ

ತುಳುನಾಡಿನ ಮಂದಿ ಅನೇಕ ಕ್ರೀಡೆಗಳನ್ನು ಆಡುತ್ತಿದ್ದ ವಿಚಾರ ಪಾಡ್ದನದಲ್ಲಿ ದೊರೆಯುತ್ತದೆ. ಕೋಳಿ ಅಂಕ, ಕಂಬಳ, ಬೇಟೆ, ಪತ್ತಂಗಾಯಿ (ತಪ್ಪಂಗಾಯಿ), ಚನ್ನಮಣೆಯ ಆಟ ಚದುರಂಗದಾಟ, ಗೇರು ಬೀಜದ ಆಟ, ಪಲ್ಲೆ ಆಟ, ಅಂಬೋಡಿ, ಚೆಂಡಾಟ, ಕಲೆಂಜ ಆಟ__ಮುಂತಾದ ತುಳುನಾಡಿನ ಜನಪ್ರಿಯ ಕ್ರೀಡೆಗಳು ಪಾಡ್ದನಗಳಲ್ಲಿಯೂ ಸ್ಥಾನವನ್ನು ಪಡೆದಿವೆ.

'ಕೋಟಿ ಚೆನ್ನಯ' ಪಾಡ್ದನದಲ್ಲಿ ಕೋಟಿ ಚೆನ್ನಯರು ಬುದ್ಯಂತನ ಮಕ್ಕಳೊಡನೆ, ಗೇರು ಬೀಜದ ಆಟ ವನ್ನು ಆಡುತ್ತಾರೆ. ಈ ಸಂದರ್ಭದ ವಿವರಣೆ ಈ ರೀತಿ ಇದೆ : "ಬುದ್ಯಂತ ಬಾಲೆಲು ಯೆತ್ ಬಚ್ಚಿ ಗೊಬ್ಬು ವೆರ್, ಐನ್ ತೂದು ಈ ಬಾಲೆಲು ಬತ್ತೆರ್, ಆಪಗ ಸಾಯಿನ ಬೈದ್ಯ ಯೆತ್ ಬಚ್ಚಿ ಕೊರ್ಲ ಯೆಂಕುಳೆಗ್

ಗೊಬ್ಬುದ ಐತಲಾ ಕೊರ್ಲರ್ ಅಂದ್‌ದ್ ಪಂಡೆರ್. ಬಲ್ಲಾಳಿ ಕೊರ್ಯೆರ್- ಅಂಗಿ ಪೊಲ್ಪಾಯೆ. ಚಪ್ಪರ ಕೊಂಬು ಮಳ್ಪಾದ್ ಕೊರ್ಯೆರ್, ಮನದಾನಿ ಗೊಬ್ಬುಗು ಪೋಯಿರ್, ಅಪಗ ಬುದ್ಯಂತಾ ಬಾಲೆಲೇ ಯೆಂಕುಳ್ಳಾ ಗೊಬ್ಬುವೊ ಗೊಬ್ಬುನಗ ಮೊಕುಳೆನ ಅಕುಳು ಮಾತ ಗೆಂದಿಯೆರ್. ಅಣ್ಣಾನಿನ ಎತ್ತೆ ಕೊರ್ಲರ್ಯಾನ್ ಗೊಬ್ಬುವೆ ಅಂದ್‌ದ್ ಪಂಡೆ. ಅಣ್ಣ ಕೈಡ್ದ್ ಗೆತ್ತೊಂದು ಗೊಬ್ಬಿಯೆ. ಗೊಬ್ಬದು ಬುದ್ಯಂತ ಬಾಲೆಳೆನ್ ಮಾತ ಗೆಂದಿಯೆ. ಅಪಗ ಕಳಟ್ ಕಟ್‌ಕೊರೊಡಂಡೆರ್, ನಿಕುಳೇ ಕಟ್ಟ್ ಮಳ್ತ್‌ದರ್ ಕಳಟ್ ಕಟ್ಟ್ ಇಜಿಂದ್‌ದ್ ಯೆಂಕುಳು ಕೊರಯೊ ಅಂದ್‌ದ್ ಪಂಡ್‌ದ್ ಸರ್ತ್ ಇಲ್ಲಡೆಗ್ ಬತ್ತೆರ್. ಬುದ್ಯಂತ ಬಾಲೆಳು ಪೋದು ಬುದ್ಯಂತದ ಪಂಡೊ. ಬುದ್ಯಂತ ಬತ್ತೆ, ಈ ಬಾಲೆಲೆನ ಕೈಡ್ದ್ ಪೈತ್ತ್‌ದ್ ಪರ್ತೆದ್‌ಕೊಂಡುಪೋಯಿ (ಬುದ್ಯಂತನ ಮಕ್ಕಳು ಗೇರು ಬೀಜದಲ್ಲಿ ಆಟವಾಡುತ್ತಿದ್ದಾರೆ. ಅದನ್ನು ನೋಡಿ ಈ ಮಕ್ಕಳು ಬಂದರು. ಸಾಯನ ಬೈದ್ಯನಲ್ಲಿ ನಮಗೆ ಗೇರು ಬೀಜವನ್ನು ಕೊಡಿ ಎಂದರು ಮತ್ತು ಈ ಗೇರುಬೀಜದ ಆಟದ ಸಾಧನ ಗಳನ್ನು ಕೊಡಿ ಎಂದು ಹೇಳಿದರು. ಅವನು ಅವರಿಗೆ ಅವುಗಳನ್ನು ಕೊಟ್ಟನು. ಅಂಗಿ ಹೊಲಿಸಿ, ಚಪ್ಪರ ಕೊಂಬು ಮಾಡಿಸಿಕೊಟ್ಟರು. ಮರುದಿನ ಅವರು ಆಟಕ್ಕೆ ಹೋದರು. ಅಲ್ಲಿ ಬುದ್ಯಂತನ ಮಕ್ಕಳೇ ನಾವು ಆಡುತ್ತೇವೆ ಎಂದರು. ಗೇರುಬೀಜವನ್ನು ನಾವು ಇಡುತ್ತೇವೆ ಎಂದರು. ಆಮೇಲೆ ಹಾಗೆಯೆ ಗೇರುಬೀಜ ವನ್ನು ಇಡುವಾಗ ಆಟದ ಕಳದಲ್ಲಿ ಕಟ್ಟು ಇಲ್ಲ ಎಂದು ಹೇಳಿ ಆಡಿದರು. ಆಡಿದಾಗ ಕೋಟಿ ಚೆನ್ನಯರನ್ನು ಬುದ್ಯಂತನ ಮಕ್ಕಳು ಸೋಲಿಸಿದರು. ಆಗ ಚೆನ್ನಯ ಅಣ್ಣನ ಕೈಯಿಂದ ಗೇರುಬೀಜವನ್ನು ತೆಗೆದುಕೊಂಡು ತಾನು ಆಡಿ, ಆಟವನ್ನು ಗೆದ್ದನು. ಗೇರುಬೀಜವನ್ನು ಹಿಂದಕ್ಕೆ ಕೊಡುವ ಕಟ್ಟು ಇಲ್ಲವಾದ್ದರಿಂದ ನಾವು ಹಿಂದಕ್ಕೆ ಕೊಡುವುದಿಲ್ಲ ಎಂದು ಕೋಟಿ ಚೆನ್ನಯರು ಅವುಗಳನ್ನು ಮನೆಗೆ ತೆಗೆದು ಕೊಂಡು ಬಂದರು).

'ಮೈಸಂದಾಯ' ಪಾಡ್ದನದಲ್ಲಿ ಎರಡು ಜನಪದ ಆಟಗಳ ಹೆಸರು ಬರುತ್ತದೆ. 'ಪಲ್ಲೆದ ಗೊಬ್ಬುಡ' ಮೇಲೆ ಅತೆರ್, ಸಾರತ್ತೊಂಜಿ ಪಲ್ಲೆನ್ ಕೊಚ್ಚಿಯೆರ್, ಕರೆಂಜಿದ ಗೊಬ್ಬುಡು ಮೇಲೆ ಅತೆರ್, ಸಾರತೊಂಜಿ ಡರೆಂಜಿ ಕೊಚ್ಚಿಯೆರ್........

ಇಲ್ಲಿ ಪಲ್ಲೆಯ ಆಟ ಮತ್ತು ಕರೆಂಜಿಕಾಯಿಯ ಆಟ ಇವುಗಳ ಬಗ್ಗೆ ಹೇಳಲಾಗಿದೆ.

'ಜುಮಾದಿ' ಭೂತದ ಒಂದು ಪಾಡ್ದನದಲ್ಲಿ ತುಳುನಾಡಿನ ಕೆಲವು ಜನಪದ ಕ್ರೀಡೆಗಳ ಹೆಸರು ದೊರೆಯು ತ್ತದೆ. "ಪುರಾಲೆದ ಪರಮೆಸ್ರೀ ದೇವೆರೆಗ್ ಮುಪ್ಪ ದಿನೊತ ಆಯನ. ಎಳೆ ದಿನದ ಚೆಂಡಿದ ಬರೊ, ಮೂಜಿ ದಿನದ ಕೋರಿದಕಟ್ಟೋ, ಮುಪ್ಪ ದಿನದ ಬಜ್ಜೈದ ಅಂಬೋಡಿ, ಕೋರಿದ ದೂದು, ಮುಪ್ಪ ದಿನತ ಉಚ್ಚಯ, ಮುಪ್ಪ ದಿನತ ತುಡಾರ್" (ಪೊಳಲೆಯ ಪರಮೇಶ್ವರಿ ದೇವರಿಗೆ ಮೂವತ್ತು ದಿನದ ಆಯನ, ಏಳು ದಿನದ ಚೆಂಡಾಟ, ಮೂರು ದಿನದ ಕೋಳಿಯ ಕಟ್ಟ (ಕೋಳಿ ಅಂಕ), ದಿನದ ಅಡಕೆಯ ಅಂಬೋಡಿ, ಕೋಳಿಯ ಜೂಜು, ಮೂವತ್ತು ದಿನದ ಉತ್ಸವ, ಮೂವತ್ತು ದಿನದ ದೀಪೋತ್ಸವ).

ಪೊಳಲೆ ಎನ್ನುವ ಊರಿನಲ್ಲಿ ಪರಮೇಶ್ವರಿ ದೇವಸ್ಥಾನದಲ್ಲಿ ವರ್ಷಂಪ್ರತಿ ನಡೆಯುವ ಜಾತ್ರೆಯಲ್ಲಿ ಏಳು ದಿನದ ಕಾಲ್ಚೆಂಡಾಟವಿದೆ. ಎರಡು ಪಂಗಡಗಳ ನಡುವೆ ಪಂದ್ಯ ರೂಪದಲ್ಲಿ ನಡೆಯುವ ಈ ಚೆಂಡಾಟ ಬಹು ಮಟ್ಟಿಗೆ ಇವತ್ತಿನ 'ಫುಟ್ ಬಾಲ್' (Foot Ball) ಆಟವನ್ನು ಹೋಲುತ್ತದೆ.

ತುಳುನಾಡಿನ ಜನಪ್ರಿಯವಾದ ಒಂದು ಕ್ರೀಡೆ ಎಂದರೆ ಕೋಳಿಅಂಕ ಅಥವಾ ಕೋಳಿ ಜೂಜು. ಈ ಕೋಳಿ ಅಂಕದ ಬಗ್ಗೆ ಜುಮಾದಿ ಭೂತದ ಪಾಡ್ದನದಲ್ಲಿ ವಿಶೇಷವಾದ ಪ್ರಸ್ತಾಪ ಇದೆ. ಈ ಪಾಡ್ದನದಲ್ಲಿ ಪ್ರಮುಖ ವ್ಯಕ್ತಿಯಾದ ಆಡೂರಿನ ಬೇರೆ ಬೈದ್ಯನು ಪೊಳಲಿಯ ಕೋಳಿಅಂಕಕ್ಕೆ ಹೋಗುತ್ತಾನೆ. ಕೋಳಿ

ಅಂಕದಲ್ಲಿ ತನ್ನ ಕೋಳಿ ಗೆದ್ದರೆ ಜುಮಾದಿ ಭೂತಕ್ಕೆ ಕೋಳಿಯ ಔತಣ, ದೋಸೆ ಸಲ್ಲಿಸುತ್ತೇನೆ ಎಂದು ಹರಕೆ ಹೇಳುತ್ತಾನೆ. ದೇರೆಬೈದ್ಯನ ಕೋಳಿಗಳು ಕಾಳಗದಲ್ಲಿ ಗೆಲ್ಲುತ್ತವೆ. ಈ ಸಂದರ್ಭದಲ್ಲಿ ಕೃತ್ರಿಯ ಕತ್ತಿ ಬಾಳು) ಮತ್ತು ಕೃತ್ರಿಯ ನೂಲು ಇವುಗಳ ಮಾತು ಬರುತ್ತದೆ. ಕೋಳಿಗಳ ಕಾಲುಗಳಿಗೆ ಕತ್ತಿ ಕಟ್ಟಿ ಬಿಡುವ ವಿವರಣೆ ಇದೆ. ಕುಕ್ಕುಟ ಪಂಚಾಂಗದ ಕಲ್ಪನೆ ಇದೆ. ಕೋಳಿಅಂಕದ ಸಂದರ್ಭದಲ್ಲಿನ ದೃಶ್ಯಗಳು, ನಂಬಿಕೆಗಳು ಇಲ್ಲಿ ವಿವರವಾಗಿ ಸಿಗುತ್ತವೆ.

'ಅತ್ತಾವರ ದೈಯಂಗೊಳು', ಕೊಡುಮನ್‌ತ್ತಾಯ, ಸಿರಿಪಾಡ್ಡನ–ಮುಂತಾದ ಇನ್ನೂ ಅನೇಕ ಪಾಡ್ದನ ಗಳಲ್ಲಿ ಕೋಳಿ ಅಂಕದ ವಿಚಾರ ಬರುತ್ತದೆ.

ತುಳುನಾಡಿನ ಕಾಡುಗಳಲ್ಲಿ ಬೇಟೆಯಾಡುವ ಪದ್ಧತಿ ಇಲ್ಲಿನ ಜನರಿಗೆ ಮನೋರಂಜನೆಯ ಕ್ರೀಡೆಯೂ ಹೌದು. ಕಾಡು ಮೃಗಗಳಿಂದ ಮನುಷ್ಯರ ಮತ್ತು ಬೆಳೆಗಳ ಸಂರಕ್ಷಣೆಯ ಹೋರಾಟವೂ ಹೌದು. 'ಕೋಟಿ ಚೆನ್ನಯ ಪಾಡ್ದನ'ದಲ್ಲಿ ಬೇಟೆಯ ಘಟನೆಯು ವಿವರವಾಗಿ ಸಿಗುತ್ತದೆ. ಎಣ್ಮೂರು ಬೀಡಿನಲ್ಲಿ ಬೇಟೆಯಾಡ ಬೇಕೆಂದು 'ಕೋಟಿ ಚೆನ್ನಯ'ರಿಗೆ ಮನಸ್ಸಾದಾಗ ಗಟ್ಟದ ಮೇಲಿನಿಂದ ಬೇರೆ ನಾಯಿಗಳನ್ನು ಕರೆಸುತ್ತಾರೆ. ಬೇಟೆ ಯಾಡಲು ಜನಗಳನ್ನು ಒಟ್ಟು ಮಾಡುತ್ತಾರೆ. ಅದರ ಸಿದ್ಧತೆಯ ವರ್ಣನೆಯನ್ನು ಅಲ್ಲಿ ಹೀಗೆ ಹೇಳಲಾಗಿದೆ: ದೇರನ ಕಾಡ್ ದೇರಾವೊಡು ಇಂದ್ ಪಂಡೆರ್‌ಯೇ' ಜಯಿಪಾಗ ಮುರೊಗೊ ಜಯಿಪೊಡಂದೆರ್. ಅಪಗ ದೂರದಡೆಗ್ ಪೋಲೆಸಾಳಿ ಬಲೆಪಾಡೆರ್, ಮುಟ್ಟದಾಡೆಗ್ ಕಂಚಿನ ದಿಡುಂಬುಗು ಮಿಂಚಿನಿ ಸುಲಬಾರೊ ಪಾಡ್ದ್ ಬೊಟ್ಟಾದೆರ್, ನೆತ್ತಿಡ್ ತೌಲೆಕೊಂಡು ಪುಟ್ಟಿ ಅಣ್ಜೀವು, ಕೋಲು ಪತ್ತಿ ಕೋಲುಕಾರೆ ಆಯೆ ಬರೊಡಾಂಡ್' ಬೆಡಿಪತ್ ಬೆಡಿಗಾರೆ ಆಯೆ ಬರೊಡಾಂಡ್. ಬಿರುಪತ್ತಿ ಮುಗೆರೆ ಆಯೆ ಬರೊಡಾಂಡ್. ಯೆಡುಂಬೂರ, ಇನ್ನೂರ್ದಾಳ್ ಕೊಡಪಾಡಿ ಮುನ್ನೂದಾಳ್, ಯೆಡುಂಬೂರು ಚಾವಡಿಡ್ ಕೂಡೊಡಾಂಡ್‌ಯೇ. ಆಪಗಾಂಡಾ ಊರುತ್ತೊಮ್ಮೆರ್ ಕೂಡುದೆರ್‌ಯೆ" (ಅಟ್ಟದ ಕಾಡನ್ನು ಅಟ್ಟಬೇಕು, ಜಯಿಸದ ಮೃಗವನ್ನು ಜಯಿಸಬೇಕು. ದೂರದ ಸ್ಥಳಗಳಿಗೆ ವೋಲೆ ಬರೆಸಿದರು. ಹತ್ತಿರದ ಸ್ಥಳಗಳಿಗೆ ಕಂಚಿನ ದಿಡುಂಬುಗೆ ಮಿಂಚಿನ 'ಸುಲಬಾರ' ಹಾಕಿಹೊಡೆಸಿದರು. ತಲೆಯ ಮೇಲೆ ಜುಟ್ಟುಉಳ್ಳ ಗಂಡಸರು, ಕೋಲು ಹಿಡಿದ ಕೋಲುಗಾರರು ಬರಲಿ, ಕೋವಿ ಹಿಡಿದ ಕೋವಿಗಾರರು ಬರಲಿ. ಬಿಲ್ಲು ಹಿಡಿದ ಮುಗೇರರು ಬರಲಿ. ಎಣ್ಮೂರಿನ ಇನ್ನೂರು ಆಳು. ಕೊಡಪಾಡಿಯ ಮುನ್ನೂರು ಆಳು ಎಣ್ಮೂರು ಚಾವಡಿಯಲ್ಲಿ ಕೂಡಿದರು. ಊರಿನ ಮಂದಿಯೆಲ್ಲ ಒಟ್ಟಿ ಸೇರಿದರು).

ಬೇಟೆಯಾಡುವ ಕ್ರಮವನ್ನು ಕೋಟಿ ಚೆನ್ನಯ ಪಾಡ್ದನದಲ್ಲಿ ಈ ರೀತಿ ವರ್ಣಿಸಲಾಗಿದೆ.

"ಸುತ್ತಮುತ್ತ ಪಾಡ್‌ದೆರ್ ಮಲೆನಗೆಯೇ, ಒಲ್ಲೆಗ್ ಕಲ್ಲ್ ಬೊಳ್‌ಜಿಗೆ ಸಾಯಿ ವತ್ತ್‌ಡ್ ಉಂತುದೆರ್, ಕಾಡ್ ಜತ್ತೆರ್, ಕೊರೊ ಜೊಣುದು ತಪ್ಪುಡುದು ಕರ್ನಿ ಮುಟ್ಟಕಾಡ್ ದೇರಿಯೇರ್‌ಯೇ,' ಆಪಗ ದೇರ್‌ನಗ ಶಾಂಟಿಕಾರ್ ಉರೆಯೇ ಉಬುಳ್ಳ ಪಂಜಿ ಕಟ್ಟೈರ್, ಕುಡುಮೂಳು ಲಕ್ಕಿನಿದ್ದಿಯೇ ನನ ಪೋಪೊ ಮಲೆ ವೋವೊ ಕುಂಜೊದೇರು ಗಂದೆಯೇ, ಆಪಗಾಂಡಾ ಸೀಮುಳ್ಳ ಮಳೆ ದೇರೊಡಾಂಡ್‌ಯೇ, ಸುತ್ತುಮುತ್ತು ಪಾಡ್‌ದೆರ್ ಒಲ್ಲೆಗ್ ಕಲ್ಲೆಯೇ,ವೊಳ್ಳಿರಿಗ್ ನಾಯಿ ಪತ್ತದೆರ್‌ಯೇ. ತಪ್ಪುಡುದು ಕರ್ನಿ ಮುಟ್ಟದ ವಾದೆರ್‌ದೆರ್,ಪುಟ್ಯೆಕಣ್ಣಾ ಮುಗೆರ್‌ಗೆ ತಾಂಟಕಾರ ಉರೆಯೇ, ಉಬ್ಬುಳ್ ಪಂಜೀ ಕಟ್ಟರ ಕುದುಂಬೂಳು ಲಕ್ಕಜಿಗೆನೊಯೇ, ನಂಕ್ ಬೋಂಟೆಗ್ ಪೊರ್ತುಜ್ಜಿಂದ್ ಅಪಗ ಪಂಡೆರ್‌ಯೇ, ನನ ನವೆ ಊಪೋವೊ ಮರೆ ವೋವೊ ಕುಂಜೊ ದೇರುಗು ದೆರ್‌ಯೇ ಅನೆ ಕಲ್ಲಾ ವೊಡುದ ತುಪ್ಪೆ ಕಲ್ಲಾ ಮಧ್ಯಮೆ ದೇರುಗನೊ ಅಂದರ್, ತುಪ್ಪೆರಲ್ಲಾ ಮಧ್ಯಮಾನು ಸುತ್ತು ಮುತ್ತಯೇ, ಮಲ್ಲ ಮಲ್ಲ ಪರಿಟ್‌ಮ್ಲು ಮಲ್ಲಾಯೇ, ಮಲ್ಲ ಮಲ್ಲ ಬಂದೆರ್ ಉಂತುದೆರ್‌ಯೇ, ಅಪ ಗಾಂಡ ಆಳ್ ಉಡ್ದಾನ ಕಪ್ಪು ತೊಡುದುಂಡುಗೆಯೆಯೇ, ಆನೆಗ್ ಯೆಲ್ಯೆ ಕುದ್ರೆಗ್ ಮಲ್ಲೆ ಪಂಚಿತ್ತ ಗುಜ್ಜಾರೆ,

ಆಪಗಾಂಡ ದಡ್‌ಕ ಲಕ್ಕಿಯೆ ಗುರ್ಕ್ ಕೊರತೆಯೇ, ಅವುದಾನೆ ಕೋಟಿ ಬೈದ್ಯಾಯೆದ್ರು ಬತ್ತೆನಾಯೇ". (ಅವರು ಪೊದರುಗಳಿಗೆ ಕಲ್ಲುಗಳನ್ನು ಎಸೆದರು. ನಾಯಿಂಗಳನ್ನು ಸಂದು ಸಂದುಗಳಿಗೆ ನಿಲ್ಲಿಸಿದರು. ಅವರು ಕಾಡನ್ನು ಪ್ರವೇಶಿಸಿ ಬಹಳ ಕಾಲ ಬೇಟೆಯ ಕೆಲಸವನ್ನು ಮಾಡಿದರು. ಅದರೆ ಆ ರೀತಿ ಕಾಡನ್ನು ಅಟ್ಟಿದರೂ ಒಂದು ಜಿಂಕೆಯಾಗಲಿ ಅಥವಾ ಬೇರೆ ಯಾವುದೇ ಪ್ರಾಣಿಯಾಗಲೀ ಕಾಣಸಿಗಲಿಲ್ಲ. ಇನ್ನು ಯಾವ ಕಾಡನ್ನು ಬೇಟೆ ಯಾಡುವುದು ಎಂದರು. ಆಗ ಸೀಮುಲ್ಲ ಕಾಡನ್ನು ಬೇಟೆಯಾಡಲು ತೊಡಗಿದರು. ಸುತ್ತಮುತ್ತಲೂ ಪೊದರುಗಳಿಗೆ ಕಲ್ಲುಗಳನ್ನು ಎಸೆದರು. ನಾಯಿಗಳನ್ನು ಸಂದುಗಳಲ್ಲಿ ನಿಲ್ಲಿಸಿದರು. ಆದರೂ ಜಿಂಕೆಯಾಗಲೀ ಮೊಲವಾಗಲೀ ಅಥವಾ ಬೇರೆ ಯಾವುದೇ ಪ್ರಾಣಿಯಾಗಲೀ ಏಳಲಿಲ್ಲ. ಇನ್ನು ಯಾವ ಕಾಡನ್ನು ಬೇಟೆಯಾಡು ವುದು ಎಂದರು. ಅನೆಕಲ್ಲನ್ನೊ ಅಥವಾ ತುಪ್ಪೆ ಕಲ್ಲನ್ನೊ ಎಂದು ಕೇಳಿದರು. ತುಪ್ಪೆ ಕಲ್ಲಿನ ಸುತ್ತಲೂ ಕಾಡಿನ ದೊಡ್ಡ ದೊಡ್ಡ ದ್ವಾರಗಳಲ್ಲಿ ಬೇಟೆಯ ವೀರರು ನಿಂತುಕೊಂಡರು. ಪೊದರಿಗೆ ಕಲ್ಲು ಎಸೆದರು. ನಾಯಿ ಗಳನ್ನು ಬಿಟ್ಟರು. ಬೇಟೆಗೆ ಆರಂಭಿಸಿದರು. ಆಗ ಆನೆಗಿಂತ ಚಿಕ್ಕ, ಕುದುರೆಗಿಂತ ದೊಡ್ಡ ಕಪ್ಪು ಬಣ್ಣದ ಹಂದಿ ಯೊಂದು ಕಾಡಿನಿಂದ ಎದ್ದಿತ್ತು.)

'ಸಿರಿಯ' ಪಾಡ್ದನದಲ್ಲಿಯೂ ಬೇಟೆಯ ವಿಚಾರ ಬರುತ್ತದೆ.

'ಬೋಲಾಬಾರಿ ಕ್ಷತ್ರಿಯರು' ಮತ್ತು ಕೊಟ್ರಾಡಿ ಕೊಡ್ಸರಾಳ್ವನ ಬೇಟೆಯ ಕ್ರಮವನ್ನು ಹೆಚ್ಚಾಗಿ ವರ್ಣಿಸ ಲಾಗಿದೆ. ಬೇಟೆಗೆ ನಾಯಿಗಳನ್ನು ಉಪಯೋಗಿಸುತ್ತಿದ್ದರು ಎಂಬ ಮಾತು ಬರುತ್ತದೆ. ಬೇಟೆಯಾಡಲು ಹೋಗಬೇಕಾದ ಕಾಡಿಗೆ ನಿಶಾನಿ ಕಟ್ಟಿ ಕ್ರಮಬದ್ಧವಾಗಿ ಬೇಟೆಯನ್ನು ಆರಂಭಿಸುತ್ತಿದ್ದರು.

'ಸಿರಿಯ' ಪಾಡ್ದನದಲ್ಲಿ ಚದುರಂಗದ ಆಟದ ಪ್ರಸ್ತಾಪ ಬರುತ್ತದೆ.

'ಬೋಲಾಬಾರಿ ಕ್ಷತ್ರಿಯರು' ಕೊಟ್ರಾಡಿಯ ಕೊಡ್ಸರಾಳ್ವನನ್ನು ಒಂದು ಗೂಡಿಸಿದುದು ಅವರ ಚದು ರಂಗದ ಆಟದ ವಿಶೇಷ ಒಲವು. ಆ ಸ್ನೇಹವೇ 'ಬೋಲಾಬಾರಿ ಕ್ಷತ್ರಿಯರ' ಆಸರೆಯಲ್ಲಿದ್ದ ಅಕ್ಕೆಸಿರಿ ಕೊಡ್ಸ ರಾಳ್ವನ ಎರಡನೇ ಹೆಂಡತಿಯಾಗಲು ಕಾರಣವಾಗುತ್ತದೆ.

'ಸಿರಿಯ' ಪಾಡ್ದನದಲ್ಲಿ ಅಬ್ಬಗೆ—ದಾರಗೆ ಸಂಧಿಯಲ್ಲಿ ಚೆನ್ನೆಯಾಟದ ಪ್ರಸಂಗ ಬರುತ್ತದೆ. ಅಕ್ಕ ತಂಗಿಯರಾದ ಆಬ್ಬಗೆ-ದಾರಗೆಯರು ಚೆನ್ನೆಯಾಟವಾಡುವುದು. ಪರಸ್ಪರ ಜಗಳವಾಡಿಅ ಬ್ಬಗೆಯು ದಾರಗೆಯ ನೆತ್ತಿಗೆ ಚೆನ್ನೆ ಮಣೆಯಿಂದ ಹೊಡೆಯುತ್ತಾಳೆ. ಈ ಪ್ರಸಂಗ ಅವರಿಬ್ಬರ ಸಾವಿನ ದುರಂತಕ್ಕೆ ಕಾರಣವಾಗು ತ್ತದೆ. ಅಬ್ಬಗ—ದಾರಗೆಯರ ಚೆನ್ನೆಯಾಟವನ್ನು ಅಲ್ಲಿ ಹಂತ ಹಂತವಾಗಿ ವಿವರಿಸಲಾಗಿದೆ. ಕಲೆಂಬಿಯ ಮೇಲೆ ಇದ್ದ ಬಂಗಾರದ ಚೆನ್ನೆಮಣೆಯನ್ನು ಅದರಲ್ಲಿ ಇದ್ದ ಬೆಳ್ಳಿಯ ಕಾಯಿ ಕವಡೆಯನ್ನು ತರುವುದು, ಚಿಕ್ಕ ಚಾವಡಿಯ ಬಾಜಿರದ ಹಲಗೆಯ ಮೇಲೆ ಎದುರುಬದುರಾಗಿ ಕುಳಿತು ಕೊಳ್ಳುವುದು. ಮಣೆಯಲ್ಲಿ ಸರಿಕಾಯಿ ಹರಡಿ ಆಟಕ್ಕೆ ತೊಡಗುವುದು, ಮೊದಲನೆ ಆಟದಲ್ಲಿ ತಂಗಿ ದಾರಗ ಅಕ್ಕ ಅಬ್ಬಗಳನ್ನು ಸೋಲಿಸಿ 'ಪೊರಿ' ಕೊಡುವುದು, ಬ್ರಾಹ್ಮಣನ ಉತ್ತೇಜನದಿಂದ ಮತ್ತೆ ಮತ್ತೆ ಆಡುವುದು ಮತ್ತೂ ಅಬ್ಬಗಳೇ ಸೋಲುವುದು, ಸಿಟ್ಟಿನಿಂದ ಅಬ್ಬಗ ಬಂಗಾರದ ಮಣೆಯನ್ನು ಎತ್ತಿ ತಂಗಿ ದಾರಗಳ ನಡುನೆತ್ತಿಗೆ ಬೀಸಿ ಹೊಡೆಯುವುದು—ಈ ದೃಶ್ಯಗಳು ಚಿತ್ರವತ್ತಾಗಿ ವರ್ಣಿತವಾಗಿವೆ.

'ಒನ್ನಮ್ಮ ಜೇವು' ಪಾಡ್ದನದಲ್ಲಿ 'ಡೊಂಬಿರಾಟೊ, ಗುರ್ಬಿಗುಳಿಪಾಳ್ಯ, ಸೂಳೆಳೊ ಆಟ, ಅಪುಂಡು ಆಕ್ಕೆರೆ, ನಮಾತೂಯೆರೆ ಪೋಯಿ ಅಕ್ಕೆರೆ' (ಡೊಂಬರಾಟ, ಗುಬ್ಬಿಗಳ ಪಾಳ್ಯ, ಸೂಳೆಯರ ಆಟ ಆಗುತ್ತದೆ. ಅಕ್ಕ, ನಾವು ನೋಡಲು ಹೋಗುವ ಅಕ್ಕ). ಆಗಿನ ಕಾಲದ ದೊಂಬರಾಟ, ವೇಶ್ಯೆಯರ ಕುಣಿತ ಮುಂತಾದ ವುಗಳ ಬಗ್ಗೆ ಈ ರೀತಿ ಹೇಳಲಾಗಿದೆ.

## 8. ನಂಬಿಕೆಗಳು, ಪದ್ಧತಿಗಳು, ಆಚರಣೆಗಳು

ತುಳುನಾಡಿನ ಪ್ರಾಚೀನ ಸಮಾಜದಲ್ಲಿ ಪ್ರಚಲಿತವಾಗಿದ್ದ ನಂಬಿಕೆಗಳು, ಪದ್ಧತಿಗಳು, ಆಚರಣೆಗಳು ಮುಂತಾದುವುಗಳ ಸಮಗ್ರ ಚಿತ್ರಣದ ವಿವರಗಳು ಪಾಡ್ದನಗಳಲ್ಲಿ ಹೆಚ್ಚಾಗಿ ಬರುತ್ತವೆ. ಐತಿಹಾಸಿಕ ವಾಗಿ ತುಳುನಾಡಿನ ಸಾಂಸ್ಕೃತಿಕ ಸ್ವರೂಪವನ್ನು ಬಹಳ ಚೆನ್ನಾಗಿ ಇಲ್ಲಿ ಕಾಣಬಹುದು. ಇಂದು ಸಂಪೂರ್ಣ ಕಣ್ಮರೆಯಾದ ಅಂಶಗಳು ಇರುವಂತೆಯೇ, ಇಂದು ಅಲ್ಪ ಸ್ವಲ್ಪ ಕಂಡು ಬರುವ ಸಂಗತಿಗಳು ಪಾಡ್ದನಗಳಲ್ಲಿ ತುಂಬಿಕೊಂಡಿವೆ. ತುಳುನಾಡಿನ ಸಾಂಸ್ಕೃತಿಕ ಬದುಕನ್ನು ಈ ವಿಭಾಗದಲ್ಲಿ ಕಾಣಲು ಪಾಡ್ದನಗಳನ್ನು ಬಿಟ್ಟರೆ ಬೇರೆ ಯಾವುದೇ ಸಾಮಗ್ರಿಗಳು ಇಷ್ಟು ಸಮರ್ಪಕವಾಗುವುದಿಲ್ಲ. ಪಾಡ್ದನಗಳ ಸಾಂಸ್ಕೃತಿಕ ಮಹತ್ವ ಇರುವುದೇ ಇಂತಹ ಸಂದರ್ಭಗಳಲ್ಲಿ ಎನ್ನಬೇಕಾಗುತ್ತದೆ.

### ಅಡುಗೆ—ಊಟ—ತಿಂಡಿ

#### ಅಡುಗೆಯ ವಿಧಾನ

'ಕಂಬಿರ್ಲ್ಲ' ಪಾಡ್ದನದಲ್ಲಿ ಅಡುಗೆಯ ವಿಧಾನವನ್ನು ಹೀಗೆ ಹೇಳಲಾಗಿದೆ : "ಕಲ್ಲ್ ನಡಿಯೆರ್, ದಿಕ್ಕೆಲ್ ಗೋರುಪೆರ್, ಚೆಂಬಿನ ತಪ್ಪಲೆಡ್ ಅರಿ ಅರಕ್ಕಾಂಜಿ ದೆತ್ತೆರ್, ದಿಕ್ಕೆಲೆಡ್ ದೀಯೆರ್, ಉಣಪು ಮಲ್ತೆರ್. ತವುತೆ ಮೂರುದು ಕಜಿಪು ಮಲ್ತೆರ್, ಬಂಗಬಾರೆದ ಕೊಡಿ ತುಂಡು ಇರೆ ಕಣತ್ತೆರ್. ಕಂಚಿನ ಕೆರೆಕ್ಕ್ ಜಿತ್ತೆರ್, ಮುರುಂಕಿಯೆರ್. ಆಲ್ತ್ ಮಿತ್ತ್ ಬತ್ತೆರ್. ಮೂಡಾಯಿ ಮುಗಪಾಡ್ಯೆರ್. ಇರೆ ಪಾಡೆದ್ ಕುಳ್ಳಿಯೆರ್. ಇರೆಪಾಡಿ ದೋಸೋಗು ನೀರ್‌ದ ಪನಿ ರಟ್ಟಯೆರ್. ಉಣ್ಪುಲಾ ಕಜಿಪುಲಾ ಬಳಿಸ್ಯೆರ್" (ಕಲ್ಲು ನೆಟ್ಟರು. ಒಲೆಯನ್ನು ಸಿದ್ಧಮಾಡಿದರು. ಚೆಂಬಿನ ತಪ್ಪಲೆಯಲ್ಲಿ ಅಕ್ಕಿಯ ಕಲಗಚ್ಚು ತೆಗೆದರು. ಅದನ್ನು ಒಲೆಯ ಮೇಲೆ ಇಟ್ಟರು. ಅನ್ನ ಮಾಡಿದರು. ಸೌತೆಕಾಯಿಯನ್ನು ತುಂಡು ಮಾಡಿ ಪಲ್ಯ ಮಾಡಿದರು. ಬಂಗ ಬಾಳೆಯ ತುದಿಯ ತುಂಡು ಎಲೆಯನ್ನು ತಂದರು. ಕಂಚು ಕೆರೆಗೆ ಇಳಿದರು. ಮುಳುಗಿದರು. ಅಲ್ಲಿಂದ ಮೇಲೆ ಬಂದರು. ಪೂರ್ವ ದಿಕ್ಕಿಗೆ ಮುಖ ಮಾಡಿ ಎಲೆಹಾಕಿ ಕುಳಿತರು. ಎಲೆ ಹಾಕಿದ ದೋಷಕ್ಕೆ ನೀರಿನ ಹನಿಯನ್ನು ಹಾರಿಸಿದರು. ಅನ್ನವನ್ನು ಪಲ್ಯವನ್ನು, ಬಡಿಸಿದರು.)

#### ಊಟದ ವಿಧಾನ

ತುಳುನಾಡಿನ ಊಟದ ವಿಧಾನವು ಅನೇಕ ಪಾಡ್ದನಗಳಲ್ಲಿ ವಿವರವಾಗಿ ಸಿಗುತ್ತದೆ. 'ಕಲ್ಕುಡ-ಕಲ್ಲುರ್ಟಿ', 'ಕೋಟಿ ಚೆನ್ನಯ'. 'ಅಮಸರಂದ ಮೆನ್ಮೋಡಿ', 'ಸಿರಿ ಪಾಡ್ದನ' ಮುಂತಾದುವುಗಳಲ್ಲಿ ಈ ಚಿತ್ರಣ ಬಹಳ ಸ್ಪಷ್ಟವಾಗಿದೆ.

'ಕೋಟಿ-ಚೆನ್ನಯ' 'ಪಾಡ್ದನದಲ್ಲಿ–'ಅಪಗ ಬೊಳ್ಯರಿತ ಬೋನ ಬತ್ತ್‌ಂಡ್. ನೆಯಿ ಬಳಸ್‌ಂಡ್. ಅಳೆ ಕೊಟುದು ಐನೂದು ಬಗೆ, ಪುಳಿ ಕೂಟುದು ಮೂನ್ನೂದು ಬಗೆ, ಕಣಿಲೆ ಕಾಮಟೆದ ಉಪ್ಪಡ್, ನೆಯಿಟ್ ಉಂಡೆರ್, ಅಳೆಟ್ಟ್ ಕೈ ದೆಕ್ಕಿಯೆರ್, ಸೂಂಕು ಬತ್ತಿ ಉಜ್ಜಾಲ್‌ಡ್ ಕುಳ್ಳಿಯೆರ್, ಕಾಯಿ ತಿಂದೆರ್" (ಆಗ ಬಿಳಿ ಅಕ್ಕಿಯ ಅನ್ನ ಬಂತು. ತುಪ್ಪ ಬಡಿಸಿದರು. ಮಜ್ಜಿಗೆ ಸೇರಿಸಿ ಐನೂರು ಬಗೆ, ಸೇರಿಸಿ ಮುನ್ನೂರು ಬಗೆ, ಕಣಿಲೆ ಕಾಮಟೆಯ ಉಪ್ಪಿನಕಾಯಿ. ತುಪ್ಪದಲ್ಲಿ ಉಂಡರು, ಮಜ್ಜಿಗೆಯಲ್ಲಿ ಕೈ ತೊಳೆದರು. ತೂಗುವ ಉಯ್ಯಾಲೆಯಲ್ಲಿ ಕುಳಿತರು. ಕಾಯಿ ಅಡಕೆಯನ್ನು ತಿಂದರು).

'ಅಮಸರಂದ ಮೇನ್ನೋಡಿ ಪಾಡ್ದನ'ದಲ್ಲಿ ಬಡಕಾಯಿ ದಂಗಿನ ಬಂಗ ಬಾರೆದ ಕೊಡಿ ತುಂಡು ಇರೆ ಪಾಡ್ಯೆರ್. ಕಣಿಲೆ ಕಾಮಟೆ ಮರ್ದ್ ಮಾಪಲೊ, ಕಂಚಿಪುಳಿತ್ತ ಉಪ್ಪಡ್. ಬೊಲ್ಯರಿತ್ತ ನುಪ್ಪು, ತಾರಾಯಿ ಕೂಟುದು ಸಾಯಿರ ಬಗೆ, ಪುಲಿಕೂಟುದು ಮೂನ್ನೂರು ಬಗೆ, ಅಳಿ ಕೂಟುದು ಅಯಿನೂದು ಬಗೆ, ಕಚಿಪ್ಪು ಬಳಸಿಯೆರ್, ಅಂಗಯಿ ಮುರ್ಕುನೇಟ ಅಳಿ ಬಳಸಿಯೆರ್, ಎಣ್ಣೆನೆಯಿ ಬಳಸಿಯೆರ್" (ಉತ್ತರ ದಿಕ್ಕಿಗೆ ಬಾಗಿದ್ದ ಬಂಗಬಾಳೆಯ ತುದಿಯ ತುಂಡು ಎಲೆಯನ್ನು ಹಾಕಿದರು. ಕಣಿಲೆ (ಎಳತು ಬಿದಿರು) ಕಾಮಟೆ, ಮಾದಳ, ಕಂಚಿಹುಳಿ ಇವುಗಳ ಉಪ್ಪಿನಕಾಯಿ, ಬೆಳ್ತಿಗೆ ಅಕ್ಕಿಯ ಅನ್ನ, ತೆಂಗಿನಕಾಯಿ ಹಾಕಿ ಸಾವಿರ ಬಗೆ, ಹುಳಿ ಸೇರಿಸಿ ಮೂನ್ನೂರು ಬಗೆ, ಮಜ್ಜಿಗೆ ಸೇರಿಸಿ ಐನೂರು ಬಗೆ ಪದಾರ್ಥವನ್ನು ಬಡಿಸಿದರು. ಅಂಗೈ ಮುಳುಗುವಷ್ಟು ಮಜ್ಜಿಗೆ ಬಡಿಸಿದರು. ಎಣ್ಣೆ ತುಪ್ಪ, ಬಡಿಸಿದರು).

ಇನ್ನೊಂದು ಕಡೆಊಟದ ಸೊಗಸು ಈ ರೀತಿ ವರ್ಣಿತವಾಗಿದೆ : "ಮುತ್ತು ಬರಸಂದ ಉಣುಪು, ಕಾಜಿ ಬರವಂದ ಕಚಿಪ್ಪು, ಪಚ್ಚೆ ಬರನಂದ ಪಸಂಗರಿ, ನೀಲ ಬರನಂದ ನೆಯಿ, ಅಳಿಕೂಟುದು ಐನೂದು ಬಗೆ, ಪುಳಿ ಕೂಟುದು ಮುನ್ನೂದು ಬಗೆ, ಎಣ್ಣೆಲ್ಲ ಕಾಯೊದೆ, ಬಣ್ಣಲ್ಲ ಚಕ್ಕುಲಿ, ಪದೆಂಚಿದ ಪಾಯಸ, ಕಣಿಲೆ ಕಾಮಟೆ, ಮಾಪಳಂದ ಉಪ್ಪಡ್, ಆಂಗಯಿ ಮುರ್ಕಲ್ಲ ನೆಯಿ, ಮುಂಗಯಿ ಮುರ್ಕಲ್ಲ ಕೊಜಪ್ಪು, ಪೇರ್‌ಡ್ ಉಂಡೆರ್, ಅಳೆಟ್ಟ್ ಕೈ ದೆಕ್ಕಿಯೆರ್ (ಮುತ್ತು ಬಣ್ಣದ ಅನ್ನ, ಕಾಜಿ ಬಣ್ಣದ ಪಲ್ಯ, ಪಚ್ಚೆ ಬಣ್ಣದ ಪಸಂಗರಿ, ನೀಲ ಬಣ್ಣದ ತುಪ್ಪ, ಮಜ್ಜಿಗೆ ಸೇರಿಸಿ ಐನೂರು ಬಗೆ, ಹುಳಿ ಸೇರಿಸಿ ಮುನ್ನೂರು ಬಗೆ, ಎಣ್ಣೆಯ ಕಾಯೊಡೆ, ಬಣ್ಣದ ಚಕ್ಕುಲಿ, ಹೆಸರಿನ ಪಾಯಸ, ಎಳಬಿದಿರು, ಕಾಮಟೆ, ಮಾದಳದ ಉಪ್ಪಿನಕಾಯಿ, ಅಂಗೈ ಮುಳುಗು ವಷ್ಟು ತುಪ್ಪ, ಮುಂಗೈ ಮುಳುಗುವಷ್ಟು ಮೊಸರು, ಹಾಲಿನಲ್ಲಿ ಉಂಡರು, ಮಜ್ಜಿಗೆಯಲ್ಲಿ ಕೈ ತೊಳೆದರು).

ಮೇಲಿನ ವರ್ಣನೆಗಳನ್ನು ನೋಡಿದರೆ ಸಾಮಾನ್ಯವಾಗಿ ಅವು ಒಂದೇ ರೀತಿಯಲ್ಲಿ ಇವೆ. ಊಟದ ವೈಭವವನ್ನು ಹೇಳುವಾಗ ಇಂತಹ ಸಂದರ್ಭಗಳಲ್ಲಿ ಸ್ವಲ್ಪ ಅತಿಶಯೋಕ್ತಿಯು ಕಾಣಿಸಿದೆ.

### ಬುತ್ತಿ ಕಟ್ಟುವ ವಿಧಾನ

ಒಂದು ಊರಿನಿಂದ ಇನ್ನೊಂದು ಊರಿಗೆ ಪ್ರಯಾಣ ಮಾಡುವಾಗ ದಾರಿ ಖರ್ಚಿಗಾಗಿ ಬುತ್ತಿ ಕಟ್ಟುವ ಪದ್ಧತಿ ಕಲ್ಲುರ್ಟಿ ಪಾಡ್ದನದಲ್ಲಿ ಸಿಗುತ್ತದೆ. ಬೀರಕಲ್ಕುಡನು ಬೆಳಗೊಳಕ್ಕೆ ಹೋಗುವಾಗ "ತಾಡಿದ ಯೆದ್ದ ಪೊದಿಕ್ಕೆ ಕಟ್ಯೆ, ಮುಕ್ಕೊಂಡೆ ಸೆಯಿಟ್ ಮೂಜಿ ಅಚ್ಚ ಬೆಲ್ಲೊದು ಪೊದಿಕೆ ಕಟ್ಟಿಯೆ. ಪೇರ್‌ಡ್ ಪೆಯಿತ್ತಂಡ್, ಬೆಂಞನೊಡು ಪೊದಿಕೆ ಕಟ್ಟಿಯೆ" (ದಾರಿಯ ಖರ್ಚಿಗಾಗಿ ಬುತ್ತಿಯನ್ನು ಕಟ್ಟಿದನು. ಮೂರು ಕುಡ್ತೆ ತುಪ್ಪದಲ್ಲಿ ಮೂರು ಅಚ್ಚು ಬೆಲ್ಲದಲ್ಲಿ ಬುತ್ತಿ ಕಟ್ಟಿದನು. ಹಾಲಿನಲ್ಲಿ ಬಿಂದಿತು. ಮೊಸರಿನಲ್ಲಿ ಬುತ್ತಿ ಕಟ್ಟಿದನು).

ಅಣ್ಣನನ್ನು ಕಾಣಲು ಹೊರಟ ಕಲ್ಲುರ್ಟಿಯು ದಾರಿ ಖರ್ಚಿಗಾಗಿ ಬುತ್ತಿಕಟ್ಟಿ ಕೊಂಡೊಯ್ಯುವ ತಿಂಡಿಗಳು "ಮುಕ್ಕೊಂಡೆ ಸೆಯಿಟ್. ಮೂಜಚ್ಚ ಬೆಲ್ಲೊಡು ಪೊದಿಕೆ ಕಟ್ಯಳ್, ಪೇರ್‌ಡ್ ಬ್ಯೆಯಿತದ್ ಬೆಂಞನೊಡು ಪೊದಿಕೆ ಕಟ್ಯಳ್, ಅಪ್ಪದಡ್ಯೆ, ಆರ್ಯ ಕಜುಪು, ಮೂಡೆಟ್ ಪೊರಿ, ಅರಿಯಚ್ ನೆಯಿ ಈತ್ ಅಣ್ಣಗ್, ತನ್ಕ್ ಕಾಯಿಂಡ್ ರೊಟ್ಟಿ, ಉದಿಜಾಂಡೆ ಕಯಿಪು, ಮುಕ್ಕೊಂಡೆ ನೆಯಿ, ಮೂಜಚ್ಚಿ ಬೆಲ್ಲ ಇರೆಟ್ಟ್ ಪೊದಿಕೆ ಕಟ್ಯಳ್" (ಮೂರು ಕುಡ್ತೆ ತುಪ್ಪದಲ್ಲಿ ಮೂರು ತುಂಡು ಬೆಲ್ಲದಲ್ಲಿ ಬುತ್ತಿಯನ್ನು ಕಟ್ಟಿದಳು. ಹಾಲಿನಲ್ಲಿ ಬೇಯಿಸಿ ಮೊಸರಿನಲ್ಲಿ ಬುತ್ತಿ ಕಟ್ಟಿದಳು. ಅಪ್ಪದ ಅಡ್ಯೆ (ಅಕ್ಕಿಯ ತಿಂಡಿ) ಆರ್ಯಕಡುಪು

(ಬೆಲ್ಲದ ತಿಂಡಿ), ಮೂಡೆಯಲ್ಲಿ ಅರಳು, ಚಿಕ್ಕಪಾತ್ರೆಯಲ್ಲಿ ತುಪ್ಪ-ಇಷ್ಟು ಅಣ್ಣನಿಗೆ, ತನಗೆ-ಕಾಯಿಸಿದ ರೊಟ್ಟಿ ತರಕಾರಿ ಪಲ್ಯ, ಮೂರು ಕುಡ್ತೆ ತುಪ್ಪ, ಮೂರು ತುಂಡು ಬೆಲ್ಲ ಇದನ್ನು ಎಲೆಯಲ್ಲಿ ಬುತ್ತಿ ಕಟ್ಟಿದಳು.)

## ಕ್ಷೌರದ ವಿಧಾನ

ಪಾಡ್ದನಗಳಲ್ಲಿ ಪ್ರಮುಖ ವ್ಯಕ್ತಿಗಳ ಪ್ರಥಮ ಕ್ಷೌರ ವಿಶೇಷವಾಗಿ ಕಾಣಿಸಿಕೊಂಡಿದೆ. ವಿಧಿವತ್ತಾಗಿ ನಡೆಯುವ ಈ ಪ್ರಥಮ ಕ್ಷೌರದ ವಿವರಣೆಯನ್ನು 'ಕೋಟಿ ಚೆನ್ನಯ ಪಾಡ್ದನ', 'ಅತ್ತಾವರ ದೈಯಂಗೊಳು ಪಾಡ್ದನ', 'ತೋಡಕುಕ್ಕಿನಾರ್ ಪಾಡ್ದನ' ಮುಂತಾದ ಕೆಲವು ಪಾಡ್ದನಗಳು ಸುಮಾರಾಗಿ ಒಂದೇ ರೀತಿಯಲ್ಲಿ ತಿಳಿಸುತ್ತವೆ. ಇಂತಹ ಎಲ್ಲ ಸಂದರ್ಭಗಳಲ್ಲಿಯೂ ತುಳುನಾಡಿಗೆ ಕ್ಷೌರಿಕನು ಬರುವುದು ಘಟ್ಟದ ಮೇಲಿನ ಕನ್ನಡ ನಾಡಿನ ವಿಜಯನಗರದಿಂದ. ವಿಜಯನಗರ ಅರಸರ ತುಳುನಾಡಿನ ಆಳ್ವಿಕೆಯ ಕಾಲದಲ್ಲಿ ಅಂದರೆ 14, 15 ಮತ್ತು 16ನೇ ಶತಮಾನಗಳಲ್ಲಿ ಗಣ್ಯವ್ಯಕ್ತಿಗಳ ಪ್ರಥಮ ಕ್ಷೌರಕ್ಕೆ, ವಿಶೇಷ ಪರಿಣತಿವುಳ್ಳ ಕನ್ನಡ ನಾಡಿನ ಕ್ಷೌರಿಕರನ್ನು ವಿಜಯನಗರದಿಂದ ಕರಿಸುವ ಕ್ರಮ ಇದ್ದಿರಬಹುದು.

'ಕೋಟಿ-ಚೆನ್ನಯ' ಪಾಡ್ದನದಲ್ಲಿ ಕೋಟಿ-ಚೆನ್ನಯರ ಪ್ರಥಮ ಕ್ಷೌರದ ಸಂದರ್ಭದಲ್ಲಿ ಸಾಯನ ಬೈದ್ಯನು ಬಲ್ಲಾಳರಲ್ಲಿ ಹೋಗಿ-"ಈರ್ ತಾಂಕಾಯಿ ಬಾಲೆಳಿನ್ ಕಲಿ ಕಳೆಯೊಡು ಸಿರಿವೊಡ್ಡೊದು" (ನೀವು ಸಾಕಿದ ಮಕ್ಕಳ ಮುಖದ ಮೇಲಿರುವ ಕಲಿಯನ್ನು ಹೋಗಲಾಡಿಸಿ, ಲಕ್ಷ್ಮಿಯನ್ನು ಬರಮಾಡಿಸಬೇಕು,) ಎನ್ನುತ್ತಾನೆ. ಮುಖದಲ್ಲಿ ಮೂಡಿದ ಗಡ್ಡ-ಮೀಸೆಗಳನ್ನು 'ಕಲಿ' ಎಂದು ಭಾವಿಸುವ ನಂಬಿಕೆ, ಅಂದರೆ ಅದು ಶನಿಯಂತೆ ಕೆಟ್ಟದ್ದು ಎನ್ನುವ ನಂಬಿಕೆ, ಅದನ್ನು ತೆಗೆದರೆ ಕಲಿ ಹೊರಟು ಹೋಗಿ 'ಸಿರಿ' ಅಂದರೆ ಲಕ್ಷ್ಮಿ ನೆಲೆಸುತ್ತದೆ ಎನ್ನುವುದು ಈ ಸಂದರ್ಭದಲ್ಲಿ ಗೊತ್ತಾಗುತ್ತದೆ. ಈ ಪ್ರಥಮ ಕ್ಷೌರವನ್ನು ಆ ಕಾರಣದಿಂದಾಗಿ ಒಂದು ಧಾರ್ಮಿಕ ವಿಧಿಯಂತೆ ಆಚರಿಸುತ್ತಾರೆ. ಅದಕ್ಕಾಗಿಯೇ ಹೊರನಾಡಿನ ಪ್ರಸಿದ್ಧ ಕ್ಷೌರಿಕನನ್ನು ಈ ಕೆಲಸಕ್ಕೆ ಕರೆಸುವ ಪದ್ಧತಿ ಬಂದಿರಬಹುದು. ಏಕೆಂದರೆ ಇಂತಹ ಕ್ಷೌರಿಕನಿಗೆ ಗೌರವಪೂರ್ವಕವಾಗಿ ಓಲೆಯನ್ನು ಕಳುಹಿಸಿ ಅವನನ್ನು ಕರೆಸುವ ವಿಚಾರ ಪಾಡ್ದನಗಳಲ್ಲಿ ವಿವರವಾಗಿ ಸಿಗುತ್ತದೆ. ಇಂತಹ ಪ್ರಥಮ ಕ್ಷೌರದ ಸಂದರ್ಭದ ನಿಯಮಗಳು, ಕ್ಷೌರದ ಸಾಮಗ್ರಿಗಳು ಮುಂತಾದವುಗಳ ವಿವರಗಳು ಪಾಡ್ದನದಲ್ಲಿ ದೊರೆಯುತ್ತದೆ.

ಕ್ಷೌರಿಕನಿಗೆ ಸಾಯನ ಬೈದ್ಯನು ಬರೆದ ಓಲೆಯ ಒಕ್ಕಣೆ ಈ ರೀತಿ ಇದೆ : ಅಪಗ ಎಂಕುಳೆ ಹಿರಿಯ ಪಿರ್ಯಾಕುಳಿ ಕಾಲೊಡು ಬೇಲೆ ಬೆಂದಿನಾಯೆ. ಸಾಯನಬೈದ್ಯ ಇಲ್ಲಳ್ ಕಲಿ ಕಳೆವೊಡ್, ಸಿರಿ ವೊಡ್ಡೊಡು. ಐಶಾದ್ ಬೇಲೆದ ಮುತ್ತೆನೊ ಕೊಂಡು ಬರೊಡು. ಇಜೋ‌ರ್ಡು ಬಾಳ್, ಒಜೋರ್ಡು ಕತ್ತೆರಿ, ನೀರ್ ದೀಪಿ ಕಿನ್ನಿ ಬಟ್ಟಲ್, ಮೂಕುದ ಚಿಮುಟಿ, ಉಗುರು ನಾರಾಸ್, ಮುಕ ಜಲಕುನ ಕನ್ನಡ. ಬಲ್ಲಾಳೆ ಸಾಂಕಾಯಿ ಬಾಲೆಳಿಗ್ ಕಲಿ ಕಳೆವೊಡು, ಪ್ರೋಲೆ ತೂಯಿ ಗಳಿಗೆಗ್ ಉಣ್ತೆ ಉಣ್ಪುಡು ತುತ್ತಿದಿ ಗಡಿಯೊಡು. ಬೇಲೆದ ನಿರ್ಬಿ ಪತ್ತೊಣ್ದು ಪೋಯಿ ಮಾಸಿ ಪಿರಾವುಡ್ದು ಬರೊಡು." (ನಮ್ಮ ಹಿರಿಯರ ಕಾಲದಿಂದ ಈ ಕೆಲಸ ಮಾಡಿದವನು, ಸಾಯನ ಬೈದ್ಯನ ಮನೆಯಲ್ಲಿ ಕಲಿಯನ್ನು ಕಳೆಯಬೇಕು, ಲಕ್ಷ್ಮಿಯನ್ನು ಒಡ್ಡಬೇಕು. ಅದಕ್ಕಾಗಿ ಕೆಲಸದ ಸಾಮಗ್ರಿಗಳನ್ನು ತೆಗೆದುಕೊಂಡು ಬರಬೇಕು. ಎರಡು ಜೊತೆ ಬಾಳು, ಒಂದು ಜೊತೆ ಕತ್ತರಿ, ನೀರು ಇಡುವ ಚಿಕ್ಕ ಬಟ್ಟಲು, ಸಣ್ಣ ಚಿಮುಟಿಗಳು, ಮುಖ ನೋಡುವ ಕನ್ನಡಿ. ಬಲ್ಲಾಳ ಸಾಕಿದ ಮಕ್ಕಳಿಗೆ ಕಲಿ ಕಳೆಯಬೇಕು. ಓಲೆ ನೋಡಿದ ವೇಳೆಯಲ್ಲಿ ಉಂಡು ಅನ್ನದಲ್ಲಿ, ಉಟ್ಟ ಬಟ್ಟೆಯಲ್ಲಿ ಕೆಲಸದ ಸಾಮಗ್ರಿಯನ್ನು ಹಿಡಿದುಕೊಂಡು ಬಂದ ಆಳಿನ ಜೊತೆಗೆ ಬರಬೇಕು).

ಕೋಟಿ-ಚೆನ್ನಯರಿಗೆ 'ಒನ್ನಪ್ಪ ಬಂಡಾರಿ'ಯು ಮಾಡಿದ ಪ್ರಥಮ ಕ್ಷೌರದ ವಿಧಿ ವಿಧಾನಗಳನ್ನು ಆ ಪಾಡ್ದನದಲ್ಲಿ ಹೀಗೆ ವಿವರಿಸಲಾಗಿದೆ ; "ಬೇಲೆದ ನಿರ್ಬೆಪಣ್ಣಾ ಅಂದೆ, ಬಿನ್ ಕೌಳೆ ಬಚ್ಚಿರೆ, ಐನ್ ಬಜ್ಜೆಯಿ, ಮೂಜಿ ಕಣ್ಣ ತಾರಾಯಿ, ಪೊರ್ಲ ಬೊಳೆಂತರಿ, ಪೆತ್ತದ ಪೇರ್ ಅವೊಡುಂಡೆ, ಬೆಲೆದ ನಿರ್ಬಿ ಅಂಡ್. ಜಾತಿ ಸಂಗತೆರ್ ಕೂಡಿಯೆರ್. ಬಾಲೆ ಕಡ್ತ್‌ದ್ ಬಾಲೆ ಮಂಟಪೊಮಳ್ತೆರ್, ಕುಕ್ಕ್ ಕಡ್ತ್‌ದ್ ಸೋರಣೊ ದೀಯೆರ್. ಮಿತ್ತ್ ಕೊಡಿ ಪಾಡ್ಂಡ್, ತಿರ್ತ್ ದಾಳ್ಯ ಪಾಡ್ಂಡ್ ನಾಲ್ ಕಮ್ಮೊ ಪೊದ್ದಿಂಡ್, ಜಾತಿ ಸಂಗತೆರ್ ಕೂಡ್‌ದು ಬಲಿ ಬರ್ಪುಡಿಯೆರ್ ಕುಳ್ಳಾಯೆರ್. ಕುಳ್ಳಾದ್ ಸೇಸ ಅಪುಂಡು. ದುಂಬು ಕೆಲೆಸಿದೇಸ ಪಾಡಿಯೆ. ಸಾಯಿನ ಬೈದ್ಯೆಪಾಡಿಯೆ- ತಾಂಕಣ ಅಪ್ಪೆ ಸಾಯಿನ ಬೈದ್ಯದಿಪಾಡಿಯಾಳ್. ದತ್ತ ಕೆನ್ನಿ ಪತ್ತ್‌ದ್ ಬಲತ ಕೆನ್ನಿ ಬೇಲೆ ಮಳ್ಪೆ. ಯೆದುರು ಸೂರ್ಯ ಚಂದ್ರೆರೆ ಬೇಲೆ ಬಿಂದೆ. ಪಿರಾವುಡು ಭೀಮಾರ್ಜುನ ಬೇಲೆ ಬಿಂದೆ. ಕೋಟಿ ಬೈದ್ಯೆ ಬೇಲೆ ಆಂಡ್. ಕೈಟ್ ಪತ್ತೆದ್‌ಲಕ್ಕಾಯೆರ್. ಇಂಬ್ಯ ಮೆಗ್ಯಲ್ಲಾ ಪಕಲೊಟು ಆರತಿ, ಮುತ್ತುಡು ದೇಸೊ. ಮೆಗ್ಯಗ್‌ಲಾ ಎದುರುಟು ಸೂರ್ಯ ಚಂದ್ರೆರೆ ಬೇಲೆ ಮಳ್ತೆ. ಪಿರಾವುಡು ಭೀಮಾರ್ಜುನ ಬೇಲೆ ಮಳ್ತೆ. ಬೇಲೆಡ್ದ್ ಲಕ್ಕಾಯೆರ್." (ಕೆಲಸದ ಆಚರಣೆಗೆ ಬೇಕಾದ ಸಾಮಗ್ರಿಗಳನ್ನು ಹೇಳು ಎಂದನು, ಆಗ ಕ್ಷೌರಿಕನು ಐದು ಕವಳಿಗೆ ವೀಳ್ಯದೆಲೆ. ಐದು ಅಡಿಕೆ, ಮೂರು ಕಣ್ಣಿನ ಒಂದು ತೆಂಗಿನಕಾಯಿ, ಒಂದು ಸೇರು ಬೆಳ್ತಿಗೆ ಅಕ್ಕಿ, ದನದ ಹಾಲು ಇಷ್ಟು ಆಗಬೇಕು ಎಂದನು. ಈ ಸಾಮಗ್ರಿಗಳನ್ನೆಲ್ಲ ಒಟ್ಟು ಮಾಡಿದನು. ಜಾತಿಯವರು ಮತ್ತು ಆಪ್ತರು ಒಟ್ಟು ಸೇರಿದರು. ಬಾಳೆಯನ್ನು ಕಡಿದು ಬಾಳೆಯ ಮಂಟಪ ಮಾಡಿದರು. ಮಾವಿನ ಸೊಪ್ಪನ್ನು ಕಡಿದು ತೋರಣ ಮಾಡಿದರು. ಮೇಲ್ಭಾಗಕ್ಕೆ ಮುಚ್ಚಿಗೆ ಹಾಕಿದರು. ನೆಲಕ್ಕೆ ಜಮಖಾನೆ ಹಾಸಿದರು. ನಾಲ್ಕು ಕಂಬಗಳನ್ನು ಅಲಂಕರಿಸಿದರು. ಜಾತಿಯವರು ಆಪ್ತರು ಸೇರಿ ಕೋಟಿ ಚೆನ್ನಯರನ್ನು ಬಲಿ ಬರುವಂತೆ (ಸುತ್ತು ಬರುವಂತೆ) ಮಾಡಿದರು. ಆಮೇಲೆ ಅವನನ್ನು ಕುಳ್ಳಿರಿಸಿ ಅಕ್ಷತೆ (ಸೇಸೆ) ಮೊದಲು ಕ್ಷೌರಿಕನು ಸೇಸೆ (ಅಕ್ಷತೆ) ಹಾಕಿದನು. ಆಮೇಲೆ ಸಾಯನ ಬೈದ್ಯ ಮತ್ತು ಅವರ ಸಾಕು ತಾಯಿ ಸಾಯನ ಬೈದ್ಯೆದಿ ಸೇಸೆ ಹಾಕಿದರು, ಕ್ಷೌರಿಕನು ಕೋಟಿ ಚೆನ್ನಯರ ಕ್ಷೌರದ ಕೆಲಸವನ್ನು ಸುರು ಮಾಡಿದನು. ಎಡದ ಕೆನ್ನೆಯನ್ನು ಹಿಡಿದು ಬಲದ ಕೆನ್ನೆಯ ಕೆಲಸ ಮಾಡಿದನು. ಎದುರಿನಲ್ಲಿ ಸೂರ್ಯ ಚಂದ್ರರ ಕೆಲಸವನ್ನು ಮಾಡಿದನು. ಹಿಂಬದಿಯಲ್ಲಿ ಭೀಮ ಅರ್ಜುನರ ಕೆಲಸ ಮಾಡಿದನು. ಕೋಟಿ ಬೈದ್ಯನ ಕ್ಷೌರ ಮುಗಿಯಿತು. ಅವನ ಕೈ ಹಿಡಿದು ಎಬ್ಬಿಸಿದನು. ಇವನ ತಮ್ಮನಿಗೂ ಪಕಳದ ಆರತಿ, ಮುತ್ತಿನ ಸೇಸೆ ಆಗಿ, ಅವನಿಗೂ ಮುಂಭಾಗದಲ್ಲಿ ಸೂರ್ಯ, ಚಂದ್ರರ ಕೆಲಸ, ಹಿಂಭಾಗದಲ್ಲಿ ಭೀಮಾರ್ಜುನರ ಕೆಲಸವನ್ನು ಮಾಡಿದನು.

ಇಲ್ಲಿ ಪ್ರಥಮ ಕ್ಷೌರದ ಧಾರ್ಮಿಕ ವಿಧಿ ವಿಧಾನಗಳ ಜೊತೆಗೆ, ಈ ಕ್ಷೌರದ ವಿಶಿಷ್ಟ ರೀತಿಗಳನ್ನು ಹೇಳಲಾಗಿದೆ. ಎದೆಯ ಕೂದಲನ್ನು ಕತ್ತರಿಸಿ ಸೂರ್ಯ ಚಂದ್ರರ ಆಕಾರವನ್ನು ಬಿಡಿಸುವುದು, ಬೆನ್ನಿನಲ್ಲಿ ಭೀಮಾರ್ಜುನರ ಆಕಾರವನ್ನು ಬಿಡಿಸುವುದು ಇಂತಹ ಒಂದು ವಿಶೇಷ ರೀತಿ.

'ಅತ್ತಾವರ ದೈಯೊಂಗುಳು' ಪಾಡ್ದನದಲ್ಲಿಯೂ ಅಣ್ಣ ತಮ್ಮಂದಿರಿಗೆ ಪ್ರಥಮ ಕ್ಷೌರ ಮಾಡಿಸಲು ಘಟ್ಟದ ಮೇಲಿನ ವಿಜಯನಗರಕ್ಕೆ ಓಲೆಯ ಮೂಲಕ ಆಳು ಹೋಗಿ, ಆ ಕ್ಷೌರಿಕನು ಬರುತ್ತಾನೆ. ತನ್ನ ಕ್ಷೌರದ ಸಾಧನಗಳನ್ನು ಅವನು ತರುತ್ತಾನೆ–"ಬಾಳ್‌ಪಾಡಿ ಬೊಕ್ಕೊಣೊ ದೆತ್ತೆ, ಮುಗ ಸೂಸಿ ಕನ್ನಡಿ ಐಟ್‌ಪಾಡಿಯೆ; ಗಂಡುಕತ್ತೆರಿ ಪರೆಂಗಿಬಾಳ್ ಐಟ್ ಪಾಡಿಯೆ. ನೀರ್‌ದೀಪಿ ಬಟ್ಟಲ್ ಐಟ್ ಪಾಡಿಯೆ." (ಅವನು ತನ್ನ ಬಾಳು ಇರುವ ಪೆಟ್ಟಿಗೆಯನ್ನು ತೆರೆದನು. ಮುಖ ನೋಡುವ ಕನ್ನಡಿಯನ್ನು ಅದರಲ್ಲಿ ಹಾಕಿದನು. ಉರುಟಾದ ಕತ್ತರಿಯನ್ನು ವಿದೇಶಿ ಬಾಳನ್ನು (ಕತ್ತಿ) ಅದರಲ್ಲಿ ಹಾಕಿದನು. ನೀರು ಇರುವ ಬಟ್ಟಲನ್ನು ಅದರಲ್ಲಿ ಹಾಕಿದನು).

ಈ ಕ್ಷೌರಿಕನು ಬಳಸುವ ಸಾಧನಗಳಲ್ಲಿ ಆಧುನಿಕ ಕ್ಷೌರಿಕರ ಸಾಧನಗಳಾದ 'ಉರಟು ಕತ್ತರಿ' ಮತ್ತು 'ವಿದೇಶಿ ಬಾಳಂ' ಕಾಣಿಸುತ್ತದೆ. ಐರೋಪ್ಯರು ತುಳುನಾಡಿಗೆ ಬಂದ ಮೇಲೆ ಕ್ಷೌರದ ವಿಧಾನಗಳಲ್ಲಿಯೂ ಆ ಸಂಸ್ಕೃತಿಯ ಪ್ರಭಾವ ಆಗಿರುವುದನ್ನು ಈ ಸಾಧನಗಳಲ್ಲಿ ನೋಡಬಹುದು.

ಮುಂದೆ ಇದೇ ಪಾಡ್ದನದಲ್ಲಿ ಪ್ರಥಮ "ಕ್ಷೌರದ ವಿಧಿ ವಿಧಾನಗಳನ್ನು ವಿವರಿಸಲಾಗಿದೆ. ಚಾವಡಿದ ನಡುಟು ನಾಲ್ ಕಾರ್ ಪರೆಂಗಿ ಮುಕ್ಕಾಲಿಗೆ ದೀಪಾಯೆರ್ : ಎಡತ್ತ್ ಬಲತ್ತ್ ಜಗಣಜೋತಿನ್ಪಿ ತುಡಾರ್ ಪೊತ್ತಾಯೆರ್, ಒರ್ಲ ಅರಿ ಒಂಟಿ ತಾರಾಯಿ ಮುತೊರ್ಣ ದೀಯೆರ್, ಗೆಲ್ಲಂದ್ ಗಂಟೆ ಸೋಪಾಯೆರ್, ಬೂರಿ ಸಂಕ ಉದಾಯೆರ್, ಎಡ ಕುಂಚಲೊ ಬಲ ಕುಂಚಲೊ ಬೀಸಾಯೆರ್, ಕುಮಾರಯೆರ್ ಒರ್ವಾರೊಡು ಐತ್ತಾಯೆರ್, ಇರುವೆರೆಗೂ ಮುಂತ್ತುಡು ಬೀಸೊಪಾಡ್‌ಂಡ್, ಪಗಳೊಡು ಆರತಿ ಪೊತ್ತಾಯೆರ್, ದೇಸೆ ಆಂಡ್, ಕಿಲೆಸಿ ಮಗೆ ಬತ್ತ್, ನೀರ್ ದೀಪಿ ಬಟ್ಟಲ್‌ಡ್ ನೀರ್ ದೀಯೆ. ದತ್ತ ದಿಕ್ಕ್‌ಡೆ ಬತ್ತ್, ಬಲತ ಕೆನ್ನಿದ ಬೆಲೆ ಬೆಂದೆ. ಬಲತ್ತ ದಿಕ್ಕ್‌ಡ್ ಬತ್ತ್‌ಡ್ ದತ್ತ ದಿಕ್ಕ್‌ದ ಬೇಲೆ ಬೆಂದೆ. ಕಡೆತ್ತ ಮೀಸೆ ಕತ್ತೆರ್ಯೆ. ಪುರ್ಬುದಾರೆ ಪುಟ್ಟಾಯೆ. ತೆಗಲೆಡ್ ಸೂರ್ಯ ಚಂದ್ರ ಬೀಲೆ ಬೆಂದೆ- ಬೆರಿಟ್ಟ್ ಭೀಮರಕ್ಕನ ಬೇಲೆ ಬೆಂದೆ. ಕಾರ್ ಉಗುರು ಈಸ್ಯೆ, ಕೈತ ಉಗುರು ದೆತ್ತೆ. ಕಾರ್‌ಡ್ಡ್ ತಲೆಮುಟ್ಟ ಮೈ ಸಿಂಗಾರದ ಬೇಲೆ ಬಿಂದೆ," (ಚಾವಡಿಯ ನಡುವಿನಲ್ಲಿ ನಾಲ್ಕು ಕಾಲಿನ ವಿದೇಶಿ ಮುಕ್ಕಲಿಗೆ (ಕುರ್ಚಿ)ಯನ್ನು ಇಡಿಸಿದರು. ಎಡ ಬಲಗಳಲ್ಲಿ ಜಗಣ ಜ್ಯೋತಿ ದೀಪಗಳನ್ನು ಉರಿಸಿದರು. ಒಂದು ಸೇರು ಅಕ್ಕಿ, ಒಂದು ತೆಂಗಿನಕಾಯಿಯನ್ನು ಮುಹೂರ್ತಕ್ಕೆ ಎಂದು ಇಟ್ಟರು. ಗೆಲ್ಲೊಂದ ಗಂಟೆಯನ್ನು ಹೊಡೆಸಿದರು. ಭೂರಿ ಶಂಖವನ್ನು ಊದಿಸಿದರು. ಕುಮಾರರ ಎಡಬಲಗಳಲ್ಲಿ ಕುಂಚಗಳನ್ನು ಬೀಸಿದರು. ಕುಮಾರರು ಬಟ್ಟೆಯನ್ನು ಕಳಚಿ ಅಲ್ಲಿ ಕುಳಿತರು, ಅವರಿಗೆ ಮುತ್ತಿನ ಸೇಸೆ ಹಾಕಿದರು. ಪಕಳದ ಆರತಿ ಉರಿಸಿದರು. ಸೇಸೆ ಮುಗಿಯಿತು. ಕ್ಷೌರಿಕನು ಬಂದನು. ನೀರಿನ ಬಟ್ಟಲಿನಲ್ಲಿ ನೀರು ಇಟ್ಟನು. ಎಡದ ಬದಿಯಲ್ಲಿ ಬಂದನು. ಬಲದ ಕೆನ್ನೆಯ ಕೆಲಸ ಮಾಡಿದನು. ಬಲದ ಬದಿಯಲ್ಲಿ ಬಂದು, ಎಡದ ಕೆನ್ನೆಯ ಕೆಲಸ ಮಾಡಿದನು, ಕಡೆ ಮೀಸೆಯನ್ನು ಕತ್ತರಿಸಿದನು. ಹುಬ್ಬಿಗೆ ಧಾರೆ ಹುಟ್ಟಿಸಿದನು. ಎದೆಯಲ್ಲಿ ಸೂರ್ಯ ಚಂದ್ರರನ್ನು ಬಿಡಿಸಿದನು. ಬೆನ್ನಿನಲ್ಲಿ ಭೀಮ ರಕ್ಕಸ ಕೆಲಸ ಮಾಡಿದನು. ಕಾಲಿನ ಉಗುರನ್ನು ತೆಗೆದನು. ಕೈಯ ಉಗುರನ್ನು ತೆಗೆದನು. ಕಾಲಿನಿಂದ ತಲೆಯವರೆಗೆ ಮೈಸಿಂಗಾರದ ಕೆಲಸ ಮಾಡಿದನು.

'ತೋಡಕುಕ್ಕಿನಾರ್' ಪಾಡ್ದನದಲ್ಲಿಯೂ ಸುಮಾರಾಗಿ ಇದೇ ರೀತಿಯ ಕ್ಷೌರದ ವಿವರಣೆಗಳು ಸಿಗುತ್ತವೆ. ಧರ್ಮ ಅರಸುವಿನ ಪ್ರಥಮ ಕ್ಷೌರವು ವೈಭವಯುತವಾಗಿ ಈ ರೀತಿ ನಡೆಯುತ್ತದೆ,-"ಚಾವಡಿದ ನಡುಟು ನಾಲ್ ಕಾರ್‌ದ ಪರೆಂಗಿ ಮುಕ್ಕಲಿಗೆ ದೀಪಾಯೆರ್, ಎಡತ್ತ್ ಬಲತ್ತ್ ಜಗಣ ಜ್ಯೋತಿ ತುಡಾರ್ ಪೊತ್ತಾಯೆರ್ ಒರ್ಲ ಅರಿ, ಒಂಜಿ ತಾರಾಯಿ, ಐನ್ ಬಜ್ಜಿರೆ, ಒಂಜಿ ಪೊಗಡುಲ್ಲ ಬಜ್ಜೆಯಿ, ಒಂಜಿ ಪಣವು ದೇಪೆರೆ ಮೂರ್ತ ಕಾಣಿಕೆ ದಿಯೇರ್. ಧರ್ಮ ಅರಸುಳು ಐತ ಸಿಂಗಾರ ಅದ್ ಮೂಜಿ ಸುತ್ತು ಬರ್ಪೆರ್. ಗೆಲ್ಲಂದ ಗಂಟೆ ಸೋಪಾಯೆರ್. ಬೂರಿ ಸಂಕೋ ಉದಾಯೆರ್, ರಡ್ಡ್ ಕುಂಚಲೊ ಬೀಸಾಯೆರ್. ಥಾನ್ ಅಲೆವಾಸಿ ಐತಾಯೆರ್. ಕುಳ್ಯೆರ್ ಮುಕ್ಕಲಗೆಡ್. ಮುತ್ತುಡು ದೇಸೆ ಪಾಡ್‌ಂಡ್, ಪಕೊಳೊಡು ಆರತಿ ಆಂಡ್. ಕೆಲೆಸಿ ಮುಟ್ಟ ಬತ್ತೆ, ಎಡರಿಕ್ಕ್ ಬರುಪೆ, ಬಲಕೆನ್ನೆಗೆ ಪೇರ್ ಬಾಳ್ ಮುಹೂರ್ತೊಗಂದೀಯೆ. ಬಲದಿಕ್ಕಿಗ್ ಬರುಪೆ, ಎಡ ಕೆನ್ನೆಗ್ ನೀರ್‌ಬಾಳ್ ಏರಯೆ. ಕೆನ್ನಿ ಮಿತ್ತ್‌ದ ಪನ್ನೆದ ಬೇಲೆ ಬೆಂದರ್. ಪುರ್ಬುಧಾರೆ ಮೆಂಜಿ ಪುಟ್ಟಾಯಿ, ಕಡೆ ಮೀಸೆ ಕತ್ತೆರ್ದೆ, ಕೊಡಿ ಮೀಸೆ ಮುತ್ತೆರ್ದೆ. ಧರ್ಮ ಅರಸುನ ತಿಗಲೆಡ್ ಸೂರ್ಯ ಚಂದ್ರ ಬೇಲೆ ಬೆಂದೆ. ಬೆರಿಟ್ಟ್ ಭೀಮರಕ್ಕಸ ಬೇಲೆ ಬೆಂದೆ. ಕಾಲ್ ಉಗುರು ಬೈಸೆ. ಕೈತ ಉಗುರು ಮುಡಿತೆ. ಪಾದೊಡ್ಡು ಪತ್ತಿನ ತೇಜ ಮುಟ್ಟ ಮೈಸಿಂಗಾರದ ಬೇಲೆ ಬಿಂದೆ." (ಚಾವಡಿಯ ನಡುವಿನಲ್ಲಿ ನಾಲ್ಕು ಕಾಲಿನ ವಿದೇಶೀ ಮುಕ್ಕಲಿಗೆ (ಕುರ್ಚಿ) ಇಡಿಸಿದರು. ಎಡ ಬಲದಲ್ಲಿ ಜಗಣ ಜ್ಯೋತಿಯ ಸೊಡರು ಉರಿಸಿದರು. ಒಂದು

ಸೇರು ಅಕ್ಕಿ, ಒಂದು ತೆಂಗಿನಕಾಯಿ, ಐದು ವೀಳ್ಯದೆಲೆ, ಒಂದು ಅಡಿಕೆ, ಒಂದು ಪಾವಲಿಯನ್ನು ದೇವರಿಗೆ ಮುಹೂರ್ತದ ಕಾಣಿಕೆ ಇಟ್ಟರು. ಧರ್ಮ ಅರಸು ಅಲಂಕಾರವಾಗಿ ಮೂರು ಪ್ರದಕ್ಷಿಣೆ ಬಂದರು. ಗಂಟೆ ಹೊಡೆಸಿದರು, ಶಂಖ ಊದಿಸಿದರು. ಎರಡು ಚಾಮರಗಳನ್ನು ಬೀಸಿದರು. ತಾನು ಅರ್ಧಮೈಗೆ ಅಂದರೆ ಸೊಂಟದವರೆಗೆ ಅಲಂಕಾರವಾದರು. ಆಮೇಲೆ ಕುರ್ಚಿಯಲ್ಲಿ ಕುಳಿತರು, ಮುತ್ತಿನ ಸೇಸೆ ಹಾಕಿದರು. ಪಕಳವ ಆರತಿ ಎತ್ತಿದರು. ಕ್ಷೌರಿಕನು ಹತ್ತಿರ ಬಂದನು. ಎಡ ದಿಕ್ಕಿನಲ್ಲಿ ಬಂದು ಬಲ ಕೆನ್ನೆಗೆ ಹಾಲಿನಲ್ಲಿ ಅದ್ದಿ 'ಬಾಳಿನ ಮುಹೂರ್ತ'ವನ್ನು ಮಾಡಿದನು. ಬಲ ಬದಿಯಲ್ಲಿ ಬಂದು ಎಡ ಕೆನ್ನೆಗೆ ನೀರಿನಲ್ಲಿ ಅದ್ದಿದ ಬಾಳಿನ (ಕತ್ತಿಯ) ಕೆಲಸವನ್ನು ಮಾಡಿದನು. ಕೆನ್ನೆಯ ಮೇಲೆ ಇರುವ ಪನ್ನೆ ಕೂದಲಿನ ಕೆಲಸ ಮಾಡಿದನು. ಹುಬ್ಬಿನ ತುದಿಗೆ ಬಾಳಿನಲ್ಲಿ ಸರಿಮಾಡಿ ಮಿಂಚಿನ ಶೋಭೆಯನ್ನು ಕೊಟ್ಟನು. ಕಡೆ ಮೀಸೆಯನ್ನು ಕತ್ತರಿಸಿದನು. ತುದಿ ಮೀಸೆಯನ್ನು ಕಿರಿದು ಮಾಡಿದನು. ಧರ್ಮ ಅರಸುವಿನ ಎದೆಯಲ್ಲಿ ಸೂರ್ಯ ಚಂದ್ರರನ್ನು ಬಿಡಿಸಿದನು. ಬೆನ್ನಿನಲ್ಲಿ ಭೀಮರಕ್ಕಸರ ಕೆಲಸ ಮಾಡಿದನು. ಕಾಲಿನ ಉಗುರನ್ನು ನಯಗೊಳಿಸಿದನು. ಕೈಯ ಉಗುರನ್ನು ತೆಗೆದನು. ಪಾದದಿಂದ ತಲೆಯವರೆಗೆ ಮೈಸಿಂಗಾರದ ಕೆಲಸ ಮಾಡಿದನು).

ಇನ್ನೊಂದು ಕಡೆ ಕ್ಷೌರದ ವಿಧಾನವನ್ನು ವಿವರಿಸುವಾಗ ಮೇಲಿನ ವಿವರಣೆಗಳ ಜೊತೆಗೆ "ಮೈ ಕೈಯಿಟ್ ಪಲ್ಲಿ ಅರಣೆದ ಬೇಲೆ ಬೆಂದೆ" (ಹಲ್ಲಿ ಹಾವು ರಾಣಿಗಳ ಕೆಲಸವನ್ನು ಮಾಡಿದ ಅಂದರೆ ಆಕಾರವನ್ನು ಬಿಡಿಸಿದ ಎನ್ನುವ ಮಾತು ಬರುತ್ತದೆ).

## ಎಣ್ಣೆ ಸ್ನಾನದ ಕ್ರಮ

ಕ್ಷೌರವಾದ ಮೇಲೆ ಸಾಮಾನ್ಯವಾಗಿ ಬರುವ ಒಂದು ಮಾತು "ಕೆಲೆಸಿ ಮುಟ್ಟಿ ದೋಸೊಗು ದಾಸೆ ಮಲ್ಪೊಡು" (ಕ್ಷೌರಿಕ ಮುಟ್ಟಿದ ದೋಷಕ್ಕೆ ಏನು ಮಾಡಬೇಕು) ಕ್ಷೌರಿಕನನ್ನು ಮುಟ್ಟುವುದು ದೋಷ ಎನ್ನುವ ನಂಬಿಕೆ ಇಂತಹ ಕಡೆಗಳಲ್ಲಿ ಸ್ಪಷ್ಟವಾಗಿ ಕಾಣಿಸುತ್ತದೆ. ಅದಕ್ಕೆ ಪರಿಹಾರವನ್ನು ಹೇಳಲಾಗಿದೆ– 'ಎಣ್ಣೆಡ್ ಸುದ್ದೊ ನೀರ್‌ಡ್ ಜಳಕ ಅಪೊಡು' (ಎಣ್ಣೆಯಲ್ಲಿ ಶುದ್ಧ ನೀರಿನಲ್ಲಿ ಸ್ನಾನ ಮಾಡಬೇಕು). ಇಲ್ಲಿ ವಾಸ್ತವಿಕವಾಗಿ ಎಣ್ಣೆ ಹಚ್ಚಿ ಸ್ನಾನ ಮಾಡುವುದು ಕ್ಷೌರಿಕನನ್ನು ಮುಟ್ಟಿದ ಕಾರಣಕ್ಕಾಗಿ ಅಲ್ಲ; ಕ್ಷೌರ ಮಾಡಿದ ಕಾರಣಕ್ಕಾಗಿ. ತಲೆಯಲ್ಲಿ ಮತ್ತು ಮೈ ಮೇಲೆ ಕತ್ತರಿಸಿದ ಕೂದಲು ಇರುವುದರಿಂದ ಎಣ್ಣೆ ಹಾಕಿ ಸ್ನಾನ ಮಾಡುವುದು ತೀರ ಅಗತ್ಯ. ಆದರೆ ಅದಕ್ಕೆ ಕ್ಷೌರಿಕನನ್ನು ಮುಟ್ಟಿದ ದೋಷಕ್ಕಾಗಿ ಎನ್ನುವುದು ಅವಶ್ಯಕ ವಿಧಿಯೊಂದಕ್ಕೂ ಸಾಮಾಜಿಕ ವರ್ಗದ ಅಂತರವನ್ನು ವೃತ್ತಿ ಆಧಾರದ ಮೇಲೆ ರೂಪಿಸುವ ಸ್ವಭಾವ ಕಾರಣ ಎಂದು ಗೊತ್ತಾಗುತ್ತದೆ.

'ಅತ್ತಾವರ ದೈಯೊಂಗೊಳು' ಪಾಡ್ದನದಲ್ಲಿ ಕ್ಷೌರದ ಬಳಿಕದ ಎಣ್ಣೆ ಸ್ನಾನದ ವಿವರಣೆ ಈ ರೀತಿ ಬರುತ್ತದೆ : "ಎಣ್ಣೆ ಪೂಜಿ ಜಟ್ಟಿನ್ ಲೆತ್ತೆರ್ : ಎಣ್ಣೆ ನುರ್ತು ಪೂಜಾಯೆರ್, ತಾನ್ ಕಟ್ಟಿದಿ ಕೆರೆತಲ್ಪ ಬೊಳಿಯ ಕೇದಯಿದ ಮರತ ಮುದೆಲೆಡ್ ನಾಲ್ ಕೈತ್ತ ಕೊಪ್ಪರಿಗೆ ದೀಪಾಯೆರ್, ಸಾರಕಡ್ಯ ನೀರ್ ಮೈಪಾಯೆರ್, ಪಡ್‌ರಾಡ್ ಕಟ್ಟ ಕಾಕ್‌ಡ್ ಸಿಕೆಪಾಯೆರ್, ಸಾರಕಡ್ಯ ಬೆಂದ್ರ್‌ಟ್ ಬಿಪ್ಪ ಪೊತ್ತುಂಡು, ಸಾರ ಕಡ್ಯ ಚಂಡಿರ್ ಸಣತ್‌ಂಡ್, ಎಣ್ಣೆಡ್ ಸುದ್ದೊ ನೀರಾಡ್ ಜಲಕೊ ಆಯೆರ್" (ಎಣ್ಣೆ ತಿಕ್ಕುವ ಜಟ್ಟಿಯನ್ನು ಕರೆಸಿದರು. ಎಣ್ಣೆಯನ್ನು ತಿಕ್ಕಿ ಮೈಗೆ ಹಚ್ಚಿದರು. ತಾನು ಕಟ್ಟಿಸಿದ ಕೆರೆಯಲ್ಲಿ ಬಿಳಿಯ ಕೇದಗೆಯ ಮರದ ಬುಡದಲ್ಲಿ ನಾಲ್ಕು ಕೈಯ ಕೊಪ್ಪರಿಗೆಯನ್ನು ಇಡಿಸಿದರು. ಸಾವಿರ ಕೊಡ ನೀರು ಹೊಯ್ಯಿಸಿದರು. ಹನ್ನೆರಡು ಕಟ್ಟಿಗೆಯನ್ನು ಉರಿಸಿದರು. ಸಾವಿರ ಕೊಡ ಬಿಸಿನೀರಿಗೆ ಸಾವಿರ ಕೊಡ ತಣ್ಣೀರನ್ನು ಬೆರೆಸಿದರು. ಎಣ್ಣೆಯ ಮೈಯನ್ನು ಶುದ್ಧ ನೀರಿನಲ್ಲಿ ತೊಳೆದು ಸ್ನಾನ ಮಾಡಿದರು).

'ತೋಡಕುಕ್ಕಿನಾರ್ ಪಾಡ್ದನದಲ್ಲಿ' ಎಣ್ಣೆ ಸ್ನಾನದ ವಿವರ ಇನ್ನೂ ಹೆಚ್ಚು ಸಿಗುತ್ತದೆ–"ಅಜಿ ಪದ್‌ರಾಡ್ ಇರುವತ್ತನಾಲ್ ಕೈಗಾಣದ ಎಣ್ಣೆ ತರ್‌ಪಾಯೆರ್. ಎಣ್ಣೆಡ್ ಶುದ್ಧ ನೀರ್‌ಡ್ ಜಳಕ ಅವೋಡುಂದು ಪಂಡೆರ್, ನೆತ್ತಿಗ್ ನೆಯ್ಯೆಣ್ಣೆ, ಕಣ್ಣಿಗ್ ಸೆಲಿ ಎಣ್ಣೆ, ಮೂಂಕುಂಗು ನಚ್ಚಿದೆಣ್ಣೆ, ತಿಗಲೆಗ್ ಮಿಂಚೆಣ್ಣೆ, ಕೆಜಿಕ್ಕ್ ಕೀಲೆಣ್ಣೆ, ಸಂದ್‌ಗ್ ಸಂದ್‌ದೆಣ್ಣೆ, ಬೆರಿಕ್ಕ್ ಬೆಪ್ಪೆಣ್ಣೆ, ಉಗುರುಗು ಉರಿ ಎಣ್ಣೆ, ಪಾದೊಗು ಪನಿಯೆಣ್ಣೆ, ಪಾದೊಡ್ದು ಬತ್ತಿನ ತೇಜಮುಟ್ಟ, ಮೈಮುರಿಯಂಪ್ಪ ಎಣ್ಣೆಪಾಡಾಯೆರ್. ತಾನ್ ತೋಡಾಯಿ ಕೆರೆತಲ್ಪ ಏಳ್ ಕೈತ್ತ ಕೊಪ್ಪರಿಗೆಡ್ ಸಾವಿರ ಕಡ್ಯ ಬೆಂದ್ರೆಡ್ ಬೆಪ್ಪಾಯೆರ್, ಸಾವಿರ ಕಡ್ಯ ಚಂಡಿರ್‌ಡ್ ತಂಪಾಯೆರ್ ಎಣ್ಣೆ ಶುದ್ಧ ನೀರ್‌ಡ್ ಜಳಕ ಕರಿತೆರ್" (ಆರು ಹನ್ನೆರಡು ಇಪ್ಪತ್ತನಾಲ್ಕು ಕೈಗಾಣದ ಎಣ್ಣೆಯನ್ನು ತರಿಸಿದರು. ಎಣ್ಣೆಯನ್ನು ಹಚ್ಚಿ ಶುದ್ಧ ನೀರಿನಲ್ಲಿ ಸ್ನಾನವಾಗಬೇಕು ಎಂದು ಹೇಳಿದರು. ನೆತ್ತಿಗೆ ನೈಯೆಣ್ಣೆ, ಕಣ್ಣಿಗೆ ತಿಳಿ ಎಣ್ಣೆ, ಮೂಗಿಗೆ ನಶ್ಯದೆಣ್ಣೆ, ಎದೆಗೆ ಮಿಂಚೆಣ್ಣೆ, ಕಿವಿಗೆ ಕೀಲೆಣ್ಣೆ, ಸಂದಿಗೆ ಸಂದೆಣ್ಣೆ, ಬೆನ್ನಿಗೆ ಬಿಸಿ ಎಣ್ಣೆ, ಉಗುರಿಗೆ ಉರಿಎಣ್ಣೆ, ಪಾದಕ್ಕೆ ಜನಿಯೆಣ್ಣೆ–ಪಾದದಿಂದ ತಲೆಯವರೆಗೆ ಮೈಗೆಲ್ಲ ಎಣ್ಣೆ ತಿಕ್ಕಿದರು, ತಾನು ತೋಡಿಸಿದ ಕೆರೆಯ ಬಳಿ ಏಳು ಕೈಯ ಕೊಪ್ಪರಿಗೆಯಲ್ಲಿ ಸಾವಿರ ಕೊಡ ಬಿಸಿ ನೀರಿನಲ್ಲಿ ಮೈ ಬಿಸಿ ಮಾಡಿದರು. ಸಾವಿರ ಕೊಡ ತಣ್ಣೀರಿನಲ್ಲಿ ಮೈ ತಂಪು ಮಾಡಿದರು. ಈ ರೀತಿ ಎಣ್ಣೆ ಹಚ್ಚಿ ಶುದ್ಧ ನೀರಿನಲ್ಲಿ ಸ್ನಾನ ಮುಗಿಸಿದರು.)

ಕ್ಷೌರದ ಬಳಿಕ ಇಂತಹ ಸ್ನಾನವಾದ ಮೇಲೆ ಮೈಯನ್ನು ಒರೆಸಲು ತಂದ ಪಟ್ಟೆಯ ಬಟ್ಟೆಯ ವರ್ಣನೆ ಬಹಳ ಸ್ವಾರಸ್ಯಕರವಾಗಿದೆ. ಕಾವ್ಯಾತ್ಮಕವಾಗಿ ಬರುವ ಈ ಮಾತುಗಳಲ್ಲಿ ಕೆಲವೊಮ್ಮೆ ಕಾಲ್ಪನಿಕ ಅಂಶಗಳು ಸೇರಿರಬಹುದಾದರೂ ಆಗಿನ ಕಾಲದ ತುಳುನಾಡಿನಲ್ಲಿ ತಯಾರಿಸುತ್ತಿದ್ದ ಮತ್ತು ಉಪಯೋಗಿಸುತ್ತಿದ್ದ ಬಟ್ಟೆಗಳ ಪರಿಚಯವು ಇಲ್ಲಿ ಆಗುತ್ತದೆ.

'ಅತ್ತಾವರ ದೈಯಂಗುಳು', 'ತೋಡಕುಕ್ಕಿನಾರ್' ಪಾಡ್ದನದಲ್ಲಿ ಕ್ಷೌರದ ಬಳಿಕದ ಸ್ನಾನವಾದ ಮೇಲೆ ತಲೆ ಮೈ ಒರೆಸಲು ಉಪಯೋಗಿಸುವ ವಿವಿಧ ಬಟ್ಟೆಗಳ ವರ್ಣನೆಯನ್ನು ಸುಮಾರಾಗಿ ಒಂದೇ ರೀತಿಯಲ್ಲಿ ಕೊಡಲಾಗಿದೆ. ಆ ವಿವರಣೆ ಈ ರೀತಿ ಬರುತ್ತದೆ. "ಕಾಳೂರ ಕರಿಯ ಪಟ್ಟೆ, ಬೋಳೂರ ಬೊಳ್ಯ ಪಟ್ಟೆ, ಮದವೂರ ಮಂಜಳ್ ಪಟ್ಟೆ, ಮೂಂಕುದ ಸುಯಿಲ್‌ಗ್ ಮುನ್ನೂದು ಗಾವುದೊ ಪಾರಿ ಪಟ್ಟೆ, ಕಣ್ಣನೀರ್‌ಡ್ ನನೆಪುನ ಪಟ್ಟೆ. ಉಗುರುದ ನಾಲಿಡ್ ಬೆಂಗುನ ಪಟ್ಟೆ, ಸೋಪು ಕಂಬತಿ, ಇರ, ಮದುರೆ ಪಟ್ಟೆ" (ಕಾಳೂರ ಕರಿಯ ಪಟ್ಟೆ, ಬೋಳೂರ ಬಿಳಿಯ ಪಟ್ಟೆ, ಮದವೂರ ಹಳದಿ ಪಟ್ಟೆ, ಮೂಗಿನ ಉಸುರಿಗೆ ಮೂನ್ನೂರು ಗಾವುದ ಹಾರುವ ಪಟ್ಟೆ, ಕಣ್ಣನೀರಲ್ಲಿ ಒದ್ದೆಯಾಗುವ ಪಟ್ಟೆ, ಉಗುರಿನ ಎಡೆಯಲ್ಲಿ ಅಡಗುವ ಪಟ್ಟೆ, ಸೋಪು ಕಂಬತಿ (ಒಂದು ರೇಷ್ಮೆ ಬಟ್ಟೆಯ ಹೆಸರು) ಮಂದುರೆ ಪಟ್ಟೆ).

'ತೋಡಕುಕ್ಕಿನಾರ್' ಪಾಡ್ದನದಲ್ಲಿ 'ಕಾಪೂರ ಕರಿಯ ಪಟ್ಟೆ' ಎಂದಿದೆ. ವಿವಿಧ ಸ್ಥಳಗಳ ಬಟ್ಟೆಗಳ ವೈಶಿಷ್ಟ್ಯವನ್ನು ಇಲ್ಲಿ ಹೇಳಲಾಗಿದೆ.

ಕ್ಷೌರದ ಸಂದರ್ಭವನ್ನು ಬಿಟ್ಟು ಬೇರೆ ಸಂದರ್ಭಗಳಲ್ಲಿಯೂ ಎಣ್ಣೆ ಹಾಕುವ ವಿಧಾನದ ವಿವರಗಳು ಪಾಡ್ದನಗಳಲ್ಲಿ ದೊರೆಯುತ್ತವೆ. 'ಕರ್ನಗೆ' ಪಾಡ್ದನವಲ್ಲಿ 'ಮಾಪು ಪಂರ್ದೆರ್' ಎಣ್ಣೆ ಹಚ್ಚುವ ರೀತಿಯನ್ನು ಈ ರೀತಿ ಕೊಡಲಾಗಿದೆ. ಬಹುಮಟ್ಟಿಗೆ ಹಿಂದೆ ನೋಡಿದ ರೀತಿಯನ್ನು ಇದು ಹೋಲುತ್ತದೆ. "ನೆತ್ತಿಗ್ ನೆಯ್ಯೆಣ್ಣೆ ಪಾಡ್ಯೆರ್, ಬೆರಿಕ್ ಬಿಪ್ಪೆಣ್ಣೆ ಪಾಡ್ಯೆರ್, ಮೆಯಿಕ್ ಮೈಯ್ಯೆಣ್ಣೆ ಪೂಜಿಯೆರ್, ಉಗುರುಗು ಉರಿಯೆಣ್ಣೆ ಕೊರಿಯೆರ್, ಕೆಜಿಕ್ ಕೀಲೆಣ್ಣೆ ಕೊರಿಯೆರ್" (ನೆತ್ತಿಗೆ ನೆಯ್ಯೆಣ್ಣೆ ಹಾಕಿದರು. ಬೆನ್ನಿಗೆ ಬಿಸಿಎಣ್ಣೆ ಹಾಕಿದರು. ಮೈಯಿಗ್ ಮೈಯ್ಯೆಣ್ಣೆ ಹಚ್ಚಿದರು. ಉಗುರಿಗೆ ಉರಿಯೆಣ್ಣೆ ಕೊಟ್ಟರು. ಕಿವಿಗೆ ಕೀಲೆಣ್ಣೆ ಕೊಟ್ಟರು).

'ಕೋಟಿ–ಚೆನ್ನಯ' ಪಾಡ್ದನದಲ್ಲಿ ಕೋಟಿ ಚೆನ್ನಯರು ಹಂದಿಯನ್ನು ಕೊಂದ ದೋಷಕ್ಕೆ ಮೈಗೆ ಎಣ್ಣೆ ಹಾಕಿ ಸ್ನಾನ ಮಾಡುತ್ತಾರೆ. ಈ ಸಂದರ್ಭದ ವಿವರಣೆ ಹೀಗಿದೆ: "ಎಣ್ಣೆ ಪಾಡೊಡ್ ನಂಕ್ ಎಣ್ಣೆ ಗಟ್ಯೋಡು. ಎಣ್ಣೆದ ಮೂಲಕ ದೆಪ್ಪೆರೆ ದಾನೆ ಸಂದೆಗೋ ? ಉದ್ನ ಸಲಾಯಿ ಪದಂಗಿನ ಕೋಡುಯೇ. ಸೀಗೆ ಪಾಗೆ ಕೊಂಬಾಗೆ ಕೋಡಾಗೆ ಅವೊಡಂದೆರಾಯೆ. ಬೈಲ್ ಸಣ್ಣೊ ಬೊಟ್ಟುದ ತರೊಳೀ ಅವೊ ದಂದೆರ್ ಎಣ್ಣೆ ಗೆಟ್ಟೆರೆ ಯೇರ್ ಉಳ್ಳೆರ್ ಅಂದರೆ, ಎಣ್ಣೆ ಗಟ್ಯುಕಾರ ಮಗೆ ಮುಟ್ಟೆ ಸಿರ್ದಾಯೇ, ಒಂಜಿ ಕೊಂಡೆ ಎಣ್ಣೆ ಪಾಡ್ಯರ್ಡ ಕೊಂಡೆ ಯೆಣ್ಣೆ ದಪ್ಪುವೆಯೆ. ಕೈಗಾಣೊದೆಣ್ಣೆ, ಪೊಯಿಂಗಾಣೆದೆಣ್ಣೆ, ಯೆಣ್ಮೆದೆಣ್ಣೆ ತಾರಾಯಿ ದೆಣ್ಣೆ, ಅವೊಡಂದೆರ್. ಪಾರೆಣ್ಣೆನನ ಅಪೊಡೆಂದೆರ್. ಎಣ್ಣೆ ಎಣ್ಣೆದ ಸಂದೆಗೊ ಅತ್‌ಂಡ್‌ಗೆಯೇ. ಸಾರ ಕಂವೆಲ್ ಬೆಂದಿರ್, ಸಾರ ಕಂದೆಲ್ ಚಂಡಿರ್ ಅಪೊಡಂದೆರ್, ಎಣ್ಣೆ ಪಾಡುವೆ ಎಣ್ಣೆ ಗಟ್ಯುವೇ. ನೆತ್ತಿಗ್ ನೈಯಣ್ಣೆ ಅಯೆ ಪಾಡುವೇ. ಕೆಬಿಕ್ ಕೀಲ್‌ಯೆಣ್ಣೆ ಅಯೆ ಬುಡ್ಪೆಯೇ. ಸಂದ್‌ಗ್ ಬಿಂದೆಣ್ಣೆ ಅಯೆ ಬುಡ್ಪೆಯೇ. ಉಗುರುಗು ಉರಿಯೆಣ್ಣೆ ಅಯೆ ಬುಡ್ಪೆಗೇ. ಅವ್ಯೆ ಯೆಣ್ಣೆ ಪಾಡ್‌ದ್ ಯೆಣ್ಣೆ ಗಟ್ಟಿದ್" (ನಮಗೆ ಎಣ್ಣೆ ಹಾಕಬೇಕು. ಮೈಗೆ ಎಣ್ಣೆಯನ್ನು ತಿಕ್ಕಸಬೇಕು. ಎಣ್ಣೆ ಹಾಕಿ ತೆಗೆಯಲು ಯಾವ ಸಾಮಗ್ರಿಗಳು ಬೇಕು ಎಂದು ಕೇಳಿದರು. ಆಗ ಚೆನ್ನಯನು ಉದ್ದಿನ ಬೇಳೆ, ಹೆಸರಿನ ಕೋಡು, ಸೀಗೆ, ಬಾಗೆ, ಕೊಂಬಾಗೆಗಳ ಕೋಡು ಆಗಬೇಕು, ಬೈಲಿನ 'ಸನ್ಬು' ಸಸ್ಯ ಬೆಟ್ಟಿನ ತರೊಲೆ ಸೊಪ್ಪು (ಲೋಳೆಯಾಗುವ ಒಂದು ಜಾತಿಯ ಸೊಪ್ಪು) ಆಗಬೇಕು ಎಂದನು. ಎಣ್ಣೆ ಹಾಕಲು ಯಾರು ಇದ್ದಾರೆ ಎಂದು ಕೇಳಿದರು. ಎಣ್ಣೆ ಹಾಕಿ ತಿಕ್ಕಲು 'ಮುಟ್ಟೆಸಿರ್ದಾ' ಎನ್ನುವವನು ಇದ್ದಾನೆ. ಅವನು ಎಣ್ಣೆ ಹಾಕುವ ವೃತ್ತಿಯುವನ ಮಗ, ಅವನು ಒಂದು ಕುಡ್ತೆ ಎಣ್ಣೆಯನ್ನು ಮೈಗೆ ಹಾಕಿದರೆ ಅಷ್ಟೇ ಎಣ್ಣೆಯನ್ನು ಮೈಯಿಂದ ತೆಗೆದು ಕೊಡುತ್ತಾನೆ. ಅವನನ್ನು ಕೂಡಲೇ ಕರೆಸಿದರು, ಎಣ್ಣೆಯ ಬೇರೆ ಬೇರೆ ವಿಧಗಳ ಹೆಸರುಗಳನ್ನು ಕೇಳಿದರು. ಆಗ ಅವನು "ವೀರರೇ ಕೇಳಿದ್ದೀರಾ, ಕೈಗಾಣದ ಎಣ್ಣೆ ಗಾಣದ ಎಣ್ಣೆ, ಹ್ಯೊಗಾಣದ ಎಣ್ಣೆ (ಎತ್ತುಗಳಿಂದ ತಿರುಗಿಸುವ ಗಾಣ ಹ್ಯೊಗಾಣ), ಎಳ್ಳಿನ ಎಣ್ಣೆ, ತೆಂಗಿನ ಎಣ್ಣೆ ಆಗಬೇಕು ಎಂದನು. ಹರಳೆಣ್ಣೆ ಇನ್ನು ಆಗಬೇಕು ಎಂದನು. ಎಲ್ಲ ರೀತಿಯ ಎಣ್ಣೆಗಳು ಸಿದ್ಧವಾದವು. ಸಾವಿರ ಕೊಡ ಬಿಸಿನೀರು, ಸಾವಿರ ಕೊಡ ತಣ್ಣೀರು ಆಗಬೇಕು ಎಂದನು. ಅವರ ಮೈಗೆ ಎಣ್ಣೆ ಹಾಕುತ್ತಾನೆ. ಎಣ್ಣೆ ತಿಕ್ಕುತ್ತಾನೆ. ನೆತ್ತಿಗೆ ನೆಯ್ಯೆಣ್ಣೆ, ಕಿವಿಗೆ ಕೀಲೆಣ್ಣೆ ಬಿಡುತ್ತಾನೆ. ಸಂದಿಗೆ ಬಿಂದು ಎಣ್ಣೆ ಬಿಡುತ್ತಾನೆ. ಉಗುರಿಗೆ ಉರಿಯೆಣ್ಣೆ ಹಾಕುತ್ತಾನೆ. ಆ ಎಣ್ಣೆಗಳನ್ನು ಹಾಕಿದರು, ಎಣ್ಣೆಯನ್ನು ತಿಕ್ಕಿ ತೆಗೆದನು).

ವ್ಯಾಯಾಮ ಶಾಲೆಗಳಲ್ಲಿ ಜಟ್ಟಿಗಳು ಅಥವಾ ದೇಹದ ಬಲವನ್ನು ಕಾಪಾಡಿಕೊಳ್ಳಬೇಕಾದ ಯೋಧರು ಮೈಗೆ ಎಣ್ಣೆಯನ್ನು ತಿಕ್ಕಿಸಿ ಸ್ನಾಯುಗಳ ಬಲವನ್ನು ಹೆಚ್ಚಿಸಿಕೊಳ್ಳುತ್ತಿದ್ದರು ಎನ್ನುವುದನ್ನು ಮೇಲಿನ ವಿವರಣೆಯಿಂದ ಊಹಿಸಬಹುದು. ಈ ರೀತಿ ಮೈಗೆ ಎಣ್ಣೆಯನ್ನು ಹಾಕಿ ತಿಕ್ಕುವುದನ್ನೇ ವೃತ್ತಿಯನ್ನಾಗಿ ಮಾಡಿಕೊಂಡಿದ್ದ ಜನರು ಇದ್ದಿರಬಹುದು. ಇಲ್ಲಿ ಕಾಣಿಸಿದ 'ಮುಟ್ಟೆಸಿರ್ದಾನು' ಅಂತಹ ವೃತ್ತಿಯವನು ಎಂದು ಗೊತ್ತಾಗುತ್ತದೆ.

## ಹೆರಿಗೆಯ ವಿಧಾನ

ಕೋಟಿ ಚೆನ್ನಯ ಪಾಡ್ದನದಲ್ಲಿ ದೇಯಿ ಬೈದ್ಯೆದಿ ಕೋಟಿ ಚೆನ್ನಯರನ್ನು ಹೆರುವ ಸಂದರ್ಭದಲ್ಲಿ ಈ ರೀತಿಯ ಚಿತ್ರಣವನ್ನು ಕೊಡಲಾಗಿದೆ. "ಅತ್ ಪೊರ್ತುಗು ಬೇನೆ ತೋಜಿಂಡ್, ಕೆಮ್ಮಲೆತ ಬ್ರಮ್ಮೆರೆನ್ ನನೆತ್‌ದ್ ನೇಲ ಬಳ್ಳಿಪಾಡಿಯೆರ್. ಅಪಗ ದುಂಬು ಅಣ್ ಮಗನ್ ಪೆದ್ದಿಯಳ್, ಒಂಜಿ ಕೆಲ್ಲಾರೊಡ್ ರಡ್ಡ್ ಬಾಲೆಲೆನ್ ಬಿಜಾಳ್ಯಳ್, ಅಜಿ ಮೂಜಿ ಪೊರ್ಂಬ ದಿನತ್‌ಗ ಆಮೆ ಪೀಲೆ ದೆತ್ತೆರ್" (ಅಷ್ಟು ಹೊತ್ತಿಗೆ ನೋವು ಕಾಣಿಸಿತು. ಕೆಮ್ಮಲೆಯ ಬ್ರಹ್ಮರನ್ನು ನೆನೆದು ನೇತಾಡುವ ಹಗ್ಗವನ್ನು ಹಾಕಿದರು, ಮೊದಲ

ಗಂಡು ಮಗನನ್ನು ಹೆತ್ತಳು. ಒಂದು ಗರ್ಭದಿಂದ ಎರಡು ಮಕ್ಕಳನ್ನು ಪಡೆದಳು. ಆರು ಮೂರು ಅಂದರೆ ಒಂಬತ್ತು ದಿನವಾದಾಗ ಹೆರಿಗೆಯ ಶುದ್ಧಿಯನ್ನು ಮಾಡಿದರು). ಹೆರುವಾಗ ಸಹಾಯಕವಾಗಲು ತಲೆಯ ಮೇಲ್ಭಾಗದಲ್ಲಿ ಹಗ್ಗವನ್ನು ನೇತು ಹಾಕುವ ಕ್ರಮ ಇಲ್ಲಿ ಕಾಣಿಸುತ್ತದೆ. ಮಗು ಹುಟ್ಟಿ ಒಂಬತ್ತು ದಿನದಲ್ಲಿ 'ಅಮೆ' (ಹೆರಿಗೆಯ ಶುದ್ಧಿ)ಯನ್ನು ಮಾಡುವ ವಿಚಾರ ಇಲ್ಲಿ ಬಂದಿದೆ. ಇದು ಗಮನಾರ್ಹ ಸಂಗತಿ. ಯಾಕೆಂದರೆ ತುಳುನಾಡಿನಲ್ಲಿ ಈಗ ಹೆರಿಗೆಯಾಗಿ ಹೆಚ್ಚಾಗಿ 11 ಅಥವಾ 13 ದಿನದಲ್ಲಿ ಅಮೆ ಮಾಡುತ್ತಾರೆ.

'ಸಿರಿ'ಯ ಪಾಡ್ದನದಲ್ಲಿ ಎಳೆಯ ಮಗು ಮತ್ತು ಬಾಣಂತಿ ತವರು ಮನೆಯಿಂದ ಗಂಡನ ಮನೆಗೆ ಬಂದಾಗ ಅನ್ನದ ತಿಳಿನೀರಿನಲ್ಲಿ ಮಸಿಯನ್ನು ಹಾಕಿ. ತಾಯಿ ಮತ್ತು ಮಗುವನ್ನು ಸಿರಿಯ ಅತ್ತೆ ನಿವಾಳಿಸುತ್ತಾಳೆ.

## ಉತ್ತರ ಕ್ರಿಯೆಯ ವಿಧಾನ

ವ್ಯಕ್ತಿಗಳು ಸತ್ತಾಗ ಕ್ರಮಬದ್ಧವಾಗಿ ಉತ್ತರ ಕ್ರಿಯೆಯನ್ನು ಮತ್ತು ಶುದ್ಧಿಯನ್ನು ಮಾಡದಿದ್ದರೆ ಅವರಿಗೆ ಸದ್ಗತಿ ಇಲ್ಲ ಎನ್ನುವ ನಂಬಿಕೆ ಪಾಡ್ದನದಲ್ಲಿ ದೊರೆಯುತ್ತದೆ. 'ಕೋಟಿ-ಚೆನ್ನಯ' ಪಾಡ್ದನದಲ್ಲಿ ಕೋಟಿ ಚೆನ್ನಯರು ಸತ್ತ ಮೇಲೆ ಅವರಿಗೆ ಶುದ್ಧಿ ಮಾಡುವ ಕ್ರಿಯೆ ಆಗದೆ ಅವರು ಬ್ರಹ್ಮರ ಸ್ಥಾನ ಸೇರಲು ಆಗುವುದಿಲ್ಲ. 'ಸಿರಿ'ಯ ಪಾಡ್ದನದಲ್ಲಿ ಉತ್ತರಕ್ರಿಯೆಯನ್ನು ಮಾಡಿದವರು ಸತ್ತ ವ್ಯಕ್ತಿಯ ವಾರೀಸುದಾರರಾಗಿ ಆಸ್ತಿಪಾಸ್ತಿಗಳಿಗೆ ಹಕ್ಕುದಾರರಾಗುತ್ತಾರೆ ಎಂಬ ಪದ್ಧತಿಯು ಕಾಣಿಸುತ್ತದೆ. ಅಜ್ಜ ಬಿರ್ಮಾಳ್ವನ ಶವ ಸಂಸ್ಕಾರ, ಉತ್ತರಕ್ರಿಯೆಗಳನ್ನು ಸೂಡದ ಶಂಕರ ಆಳ್ವ ಮಾಡಲು ಸಿರಿಯು ಅವಕಾಶ ಕೊಡುವುದಿಲ್ಲ. ತಾನೇ ಶವವನ್ನು ಹೊತ್ತುಕೊಂಡು ಹೋಗಿ ಚಿತೆಗೆ ಏರಿಸುತ್ತಾಳೆ. ಶಂಕರ ಆಳ್ವನು ಚಿತೆಗೆ ಸ್ವಲ್ಪ ಗಂಧದ ಕಟ್ಟಿಗೆಯನ್ನು ಹಾಕಿ ತಾನು ಶವ ಸಂಸ್ಕಾರದಲ್ಲಿ ಪಾಲುಗೊಂಡಿದ್ದೇನೆಂದೂ ತನಗೂ ಬೀಡಿನ ಆಸ್ತಿಯಲ್ಲಿ ಪಾಲು ಸಿಗಬೇಕೆಂದೂ ಊರಿನ ಮುಖಂಡರ ಮುಂದೆ ವಾದಿಸುತ್ತಾನೆ.

'ಸಿರಿ'ಯ ಪಾಡ್ದನದಲ್ಲಿ "ಜಿಪೋ ಬುಡ್ದು ವೈಕುಂಟೊಗು ಪೋಯೆ, ಕಾಯ ಬುಡುದಾ ಕೈಲಾಸೊಗು ಪೋಯೆ" ಎನ್ನುವ ಮಾತು ಬರುತ್ತದೆ. ಸತ್ತ ಮೇಲೆ ವೈಕಂಠ ಅಥವಾ ಕೈಲಾಸಕ್ಕೆ ಹೋಗುವ ವೈದಿಕ ಕಲ್ಪನೆ ಇಂತಹ ಪಾಡ್ದನಗಳಲ್ಲಿಯೂ ಕಾಣಿಸಿಕೊಂಡಿದೆ.

## ಮದುವೆಯ ಕೆಲವು ವಿಧಿ ವಿಧಾನಗಳು

### ಮದುವೆಗೆ ಹೆಣ್ಣು ನಿಶ್ಚಯವಾಗುವ ಪದ್ಧತಿ

'ಮೈಸಂದಾಯ' ಪಾಡ್ದನದಲ್ಲಿ ಮದುವೆಗೆ ಹೆಣ್ಣು ನಿಶ್ಚಯಮಾಡುವಾಗಲಿನ ಪದ್ಧತಿ ವಿವರವಾಗಿ ವರ್ಣಿತವಾಗಿದೆ. ಸಾಂಪ್ರದಾಯಿಕ ನಿಶ್ಚಯ ಪದ್ಧತಿಯ ಸ್ವರೂಪವನ್ನು ಇಲ್ಲಿ ನೋಡಬಹುದು. "ಅತ್ ಪಾತ್‌ರ ಪಂಡಿನ ಮದ್ಮೊಗು ಪೊಣ್ಣಾಗ್ ಪಾತ್‌ರ ಕೊರ್ತೆರ್, ಐನ್ ಬಚ್ಚಿರೆ ಒಂಜಿ ಬಜ್ಜಿಯಿ ದೀಯೆರ್. ಪೂಳು ಬಚ್ಚಿರೆ ಪಗತೆರ್, ದೆಕ್ಕಾಯಿ ಮೂರ್ತ ತೀರ್ತೆರ್' ಮದ್ಮೆಗ್ ಆದಿಕುದಿ ದಿನಮನ ದೀಯೆರ್. ಬಾರೊಡು ಬಾರ ಗುರುವಾರ ದಿನೊಟು ವಾರಪು ದಿಬ್ಬಣ ಬರೊಡುಂದು ಪಂಡೆರ್. ಪಾತೆರ ಸಂಬೆಗ ತೀರ್ತೆರ್. ಬತ್ತಿ ಬಿನ್ನೆರ್ ವಣಸ್ ಮಲ್ತೆರ್. ಕಾಯಿ ತಿಂದೆರ್. ಎಂಕುಳುಗಳಿಗೆ ಸಂಕೆಗ್ ಪೋಪ ಪಂದೆರ್ ಪಿದಡಿಯೆರ್." "ಅಷ್ಟು ಮಾತಾಡುವ ಸಂದರ್ಭದಲ್ಲಿ ಹೆಣ್ಣಿಗೆ ಮಾತುಕೊಟ್ಟಿದ್ದಾರೆ, ಐದು ವೀಳ್ಯದೆಲೆ ಒಂದು

ಅಡಕೆ ಇಟ್ಟರು. ಅಡಕೆ ಹೋಳು ವೀಳ್ಯದೆಲೆಯನ್ನು ಬದಲಾಯಿಸಿಕೊಂಡರು. ನಿಶ್ಚಿತಾರ್ಥದ ಮುಹೂರ್ತವನ್ನು ಮುಗಿಸಿದರು. ಮದುವೆಗೆ ದಿನ ಮುಹೂರ್ತ ನಿಶ್ಚಯಮಾಡಿದರು. ವಾರದಲ್ಲಿ ಒಳ್ಳೆಯ ವಾರ ಗುರುವಾರದ ದಿನದಂದು ದಿಬ್ಬಣ ಬರಬೇಕು ಎಂದರು. ಮಾತುಕತೆ ಮುಗಿಸಿದರು. ಬಂದ ನೆಂಟರು ಊಟಮಾಡಿದರು, ಅಡಕೆ ಜಗಿದರು. ನಾವು ಈ ಗಳಿಗೆಯಲ್ಲಿ ಹೋಗುತ್ತೇವೆ ಎಂದರು. ಹೊರಟರು).

## ಮದುವೆಯ ಕ್ರಮ, ಪದ್ಧತಿಗಳು

'ಮೈಸಂದಾಯ' ಪಾಡ್ದನದಲ್ಲಿ ಮದುವೆಯ ಕ್ರಮಪದ್ಧತಿಗಳ ವಿವರಣೆಯು ಸಿಗುತ್ತದೆ. ಸಾಕಷ್ಟು ದೀರ್ಘವಾಗಿ ಇಲ್ಲಿ ಮದುವೆಯ ಕ್ರಮಗಳನ್ನು ಕೊಡಲಾಗಿದೆ. ಇಂದು ಸಾಕಷ್ಟು ಅಪೂರ್ವವಾಗಿರುವ ರೀತಿಗಳು ಆಗಿರುವುದರಿಂದ ಅದನ್ನು ಪೂರ್ಣವಾಗಿ ಇಲ್ಲಿ ಕೊಡಲಾಗಿದೆ.

ಅತ್ ಪಾತೆರೋ ಕೇಂಡೆರ್. ಬುಗೆರ್ ಸಾಲೂರ ಜಮ್ಮನಿಯೆರೆಗ್ ಮದ್ಮೆದ ಹೇಳಿಕೆ ಕೊರಿಯೆರ್, ಪಂಚೊಳಿ ಬಚ್ಚಿರೆಡ್ ದೊಂಪ ಪಾಡ್‌ದೇರ್, ಅಜ್ಜ ಬೆಲ್ಲೊಡು ದಿಕ್ಕೆಲ್ ಪಾಡ್‌ದೆರ್. ಚೋರಣ ಕಟ್ಟಿಯೆರ್. ದಾರೆದ ಮುಂಟವೆ ನಡು ಜಾಲೆಡ್ ಕಟ್ಟಿಯೆರ್. ಮೂರ್ತದ ಕಬೆ ಮೂರ್ತೊಗು ಪಾಡ್ಯೆರ್-ಕೂಡ್‌ನ ಸಭೆ ಕೂಡುಂಡು. ಸಬ್ದಂದ ಬೆಡಿ ಪಯಣಂದ ಕೊಂಬು ಕೇಣುಂಡು.

ಆತೆನ ಪೊರ್ತುಗು ಮಿತ್ತ್‌ಮಿರಿಲೋ ಕೊಡಿದ್ದ ಪೊಣ್ಣು ದಿಬ್ಬಣ ಬರ್ಪುಂಡು, ಪಿಜಿನ್ ದಾರೆ ಪತ್ತ್‌ನಂಗೆ. ದೊಂಪ ಪೊಗ್ಗುನಗ ಅಣಕಡೆದ್ದ್ ಎದುರುಗು ಆರತಿ ಕೊಂಡು ಬತ್ತೆರ್. ಕಾರ್‌ಗ್ ನೀರ್ ಕೊರಿಯೇರ್' ಮದ್ಮಲೆನ ಕೈಟ್ ಪತ್ತಿಯೆರ್. ಬಲತ ಕಾರ್ ಪಾಡುಪಯೆರ್, ಉಳಯಿ ಸೂತ್ರೊಗು ಪೊಗ್ಗಯೆರ್.

ವಣಸ್ ದುಂಬೊದಾಜ ದುಂಬಾಂಡ್ ಕೇಂಡೆರ್. ವಣಸ್‌ದುಂಬು ಅಪೊಡು ದಾರೆಪಿರವತ್ ಅವಡ್‌ಂಡ್ ಪಂಡೆರ್, ಜಾಲ್‌ಡ್ ಪಂತ್ಯ ಪಾಡ್ಯೆರ್, ಇರೆ ಪಾಡಿಯೇರ್, ಮುತ್ತಿ ವರಣಂದ ನುಪ್ಪು ಬಳಸಿಯೆರ್. ಕಾಜಿ ವರಣಂದ ಕಚಿಪು ಬಳಸಿಯೆರ್. ಆಯಿಕೊತ್ತಿ ಉಪ್ಪಡ್ ಬಳಸಿಯೆರ್. ಪಡೆಂಜಿದ ಪಾಯಸ ಬಳಸಿಯೆರ್, ಎಣ್ಣೆಲ್ಲ ಕಾಯೊದ್ದೆ, ಬಣ್ಣಲ್ಲ ಚಕ್ಕುಲಿ. ಲಾಡು, ಹೋಳಿಗೆ, ಬಳಸಿಯೆರ್. ವಣಸ್ ಬಲ್ ಮನೊ ಆತೆರ್. ಪೊತ್ತ ಪೊತ್ತ ಉಂಡೆರ್. ಬಗ ಬಗ ಬೆಗತ್ತೆರ್. ನಡತ್ ನಡಮಡೆ ನೆಡಿಯೆರ್. ಉಂಡಿನ ಮಡಕ್ಕ್ ಪೂಳು ಬಚ್ಚಿಳಿ ತೀದೆರ್.

ದಾರೆದ ಮೂರ್ತಗಳಿಗೆ ಅಪೊನು ಬತ್‌ಂಡ್. ಮದಿಮಾಯೆ ಮದಿಮಾಳೆನ್ ಆಯಿತ್ತ ಸಿಂಗಾರ ಮಲ್ತೆರ್. ದುಂಚಿನ ಪಾಸಡಿ ಪಿರದಿನ ಸಂಗೀತ ಎಡುರುಡು ಆರತಿ ಪತ್ತೆರ್ ಉಂತ್ಯೆರ್, ಪಾವಡೆಗ್ ಬಲಿ ಬರ್ಪಾಯೆರ್. ದಾರೆದ ಮಂಡಮೆಡ್ ಕುಳ್ಳಯೆರ್.

ಅಣಗ ಪೊಣ್ಣಗ ಕೈಮುಟ್ಟು ಕೈದಾರೆ, ಮೈ ಮುಟ್ಟು ಮೈ ದೇಸೆ ಅಂಟ್ ದಾರೆ ಮಂಟಮೆಡ್ದ್ ಲಕ್ಕಯೆರ್. ಪೊಣ್ಣು ಒಚ್ಚಿತ ತೊರಿಯೆರ್. ದೊಂಪ ಜಪುಡಯೆರ್. ಉಳಯಿ ಪೊಗ್ಗಯೆರ್. ಮಂಚೆಟ್ ಕುಳ್ಳಯೆರ್ ಕಬುಲ್ತಿ ಪೆತ್ತದ ಪೇರ್ ಕೊರ್ತೆರ್.

ಕೂಡಿಯೊಂಜಿ ಸಭೆ ಬಿರಿಯೋನು ಬೈದ್‌ಂಡ್. ಆನಿದದಿಸ ಪೊತುಂಡು, ಮುಗುರುಲ್ಲ ಮನದಿನೋಟು-ದಾರೆಯಾಯಿ ಮದ್‌ಮಾಳ್ ಪಿರ ಬರೋಡು ಅಂದ್‌ಂಜಿ ಮದಿಮುಟ್ಟು ಮದಿಮಾಳ್ ಅತಳೆ. ಸಾಲೂರ ಪೊಣ್ಣುಲೆನ್ ಲೆತ್ತೆರ್. ನಡುಜಾಲ್‌ಡ್ ಮಡಲ್ ಪಾಡ್‌ಪಾಯೆರ್. ಸಾಲ್‌ತೂರಿಡ್ ನೀರ್ ದೀಪಯೆರ್.

ಸಾಲ್ ಕಲಸ ಕಟ್ಟಿಯೆರ್. ಕೆರ್ಬೆದ ತಾರಾಯಿ ದೀಪಯೆರ್. ಪಾಡಿ ಮುಂಡಲೊಗು ಬಲಿ ಬರ್ಪಯೆರ್, ತಾರಾಯಿದ ಕೆರ್ಬಿಡ್ ಕುಳ್ಳಯೆರ್. ಸಾಲ್ ಪೊಣ್ಣುಲು ಸಾಲ್ ಕಲಸ ಪತ್ಯೆರ್, ತರೆಕ್ಕ್ ನೀರ್ ಪತ್ಯೆರ್.

ಮೂಜಿ ಕರಿಡ್ ನಾಲೆನ ದಿನೊಟು ಸುದ್ದಂದ ತುಳು ನೀರ್ ಮಿಾಯೆರ್. ಮೈಲೆ ಮಾತೆರ್, ಮಂಡಿ ತುತ್ತಿಯೆರ್. ತರೆ ಕಂಡುಂತ್ತೆರ್, ಪನಿದೂಳು ಪಾರಾಯೆರ್. ಉಳಯಿ ಸೂತ್ರೊಗು ಬತ್ತೆರ್. ತೆನ್ಕಾಯಿ ಕನ್ನಿಲ್ಲುಗ್ ಪೋಯೆರ್. ಕೊಟ್ಟುಲ್ಲ ಮನೆದೀದ್ ಕುಳ್ಳಿಯೆರ್. ಬಂಗ ಬಾರೆದ ಕೊಡಿಯಿರೆ ಪಾಡ್‌ದ್ ಉಂಡೆರ್. ಕಾಯಿ ತಿಂದೆರ್.' (ಅಷ್ಟು ಮಾತು ಕೇಳಿದರು. ಬಂಗರು, ನಾಲ್ಕು ಊರಿನ ಹಿರಿಯರಿಗೆ ಮದುವೆಯ ಹೇಳಿಕೆಯನ್ನು ಕೊಟ್ಟರು. ಪಂಜೋಳಿ ವೀಳ್ಯದೆಲೆಯಲ್ಲಿ ಚಪ್ಪರ ಹಾಕಿದರು. ಅಚ್ಚು ಬೆಲ್ಲದ ಓಲೆ ಹಾಕಿದರು, ತೋರಣ ಕಟ್ಟಿದರು. ಧಾರೆಯ ಮಂಟಪವನ್ನು ನಡು ಅಂಗಳದಲ್ಲಿ ಕಟ್ಟಿದರು. ಮುಹೂರ್ತದ ಕಂಬವನ್ನು ಮುಹೂರ್ತದಲ್ಲಿ ಹಾಕಿದರು. ಬಂದ ಸಭೆ ಕೂಡಿತು. ಗದ್ದಲದ ಸಿಡಿಮದ್ದು ಪ್ರಯಾಣದ ಕೊಂಬಿನ ಧ್ವನಿ ಕೇಳಿಸಿತು.

ಅಷ್ಟು ಹೊತ್ತಿಗೆ ಮೇಲಿನ ಮಿರಿ ಲೋಕದಿಂದ ಹೆಣ್ಣಿನ ದಿಬ್ಬಣ ಬಂದಿತು. ಅದು ನೋಡುವುದಕ್ಕೆ ಇರುವೆಯ ಸಾಲಿನಂತೆ ಕಾಣಿಸುತ್ತಿತ್ತು. ಅವರು ಚಪ್ಪರವನ್ನು ಪ್ರವೇಶ ಮಾಡುವಾಗ ಗಂಡಿನ ಕಡೆಯವರು ಎದುರಿಗೆ ಆರತಿ ತೆಗೆದುಕೊಂಡು ಬಂದರು. ಕಾಲಿಗೆ ನೀರುಕೊಟ್ಟರು. ಮದುಮಗಳ ಕೈಯಲ್ಲಿ ಹಿಡಿದರು. ಅವಳು ಬಲದ ಕಾಲದ ಒಳಗೆ ಇಡುವಂತೆ ಮಾಡಿದರು. ಒಳಗಿನ ಸೂತ್ರಕ್ಕೆ ಪ್ರವೇಶ ಮಾಡಿದರು.

ಊಟ ಮೊದಲೋ ಧಾರೆ ಮೊದಲೋ ಎಂದು ಕೇಳಿದರು. ಊಟ ಮೊದಲಾಗ ಬೇಕು, ಧಾರೆ ಅನಂತರ ಆಗಬೇಕು ಎಂದರು. ಅಂಗಳದಲ್ಲಿ ಪಂಕ್ತಿ ಹಾಕಿದರು, ಎಲೆ ಹಾಕಿದರು. ಮುತ್ತು ವರ್ಣದ ಅನ್ನ ಬಡಿಸಿದರು. ಕಾಚಿ ಬಣ್ಣದ ಪಲ್ಯ ಬಡಿಸಿದರು. ಅದರ ಜೊತೆಗೆ ಉಪ್ಪಿನಕಾಯಿ ಬಡಿಸಿದರು. ಹೆಸರಿನ ಪಾಯಸ ಬಡಿಸಿದರು. ಎಣ್ಣೆಯ ಕಾಯೊಡೆ, ಬಣ್ಣದ ಚಕ್ಕುಲಿ, ಲಾಡು, ಹೋಳಿಗೆ ಬಡಿಸಿದರು. ಊಟ ಭರ್ಜರಿಯಾಯಿತು. ಬಿಸಿ ಬಿಸಿ ಉಂಡರು, ಭಗ ಭಗ ಬೆವರಿದರು. ಹೋಗಿ ಎಂಜಲು ಕೈತೊಳೆದರು. ಉಂಡ ಮೇಲೆ ತಾಂಬೂಲ ತಿಂದರು.

ಧಾರೆಯ ಮುಹೂರ್ತದ ಗಳಿಗೆ ಆಗುತ್ತಾ ಬಂತು. ಮದುಮಗಳನ್ನು ಅಲಂಕಾರ ಮಾಡಿದರು. ಮುಂದಿನಿಂದ ಊಳಿಗದವರು, ಹಿಂದಿನಿಂದ ಸಂಗೀತ, ಎದುರಿನಲ್ಲಿ ಆರತಿ ಹಿಡಿದು ನಿಂತರು. ಪಾವಡೆಗೆ ಬಲಿ ಬಂದರು. ಧಾರೆಯ ಮಂಟಪದಲ್ಲಿ ಕುಳ್ಳಿರಿಸಿದರು.

ಗಂಡಿಗೆ ಹೆಣ್ಣಿನ ಕೈಮುಟ್ಟಿ ಕೈಧಾರೆ, ಮೈಮುಟ್ಟಿ ಮೈಸೇಸೆ ಆಯಿತು. ಧಾರೆಯ ಮಂಟಪದಿಂದ ಎಬ್ಬಿಸಿದರು. ಹೆಣ್ಣನ್ನು ಒಪ್ಪಿಸಿಕೊಟ್ಟರು. ಗಂಡು ಹೆಣ್ಣನ್ನು ಚಪ್ಪರಕ್ಕೆ ಇಳಿಸಿದರು. ಮತ್ತೆ ಒಳಗೆ ಹೊಗಿಸಿದರು. ಮಣೆಯಲ್ಲಿ ಕುಳ್ಳಿರಿಸಿದರು. ಕಪಿಲೆ ದನದ ಹಾಲು ಕೊಟ್ಟರು.

ಕೂಡಿದ ಸಭೆ ಚದರುತ್ತಾ ಬಂದಿದೆ, ಅವತ್ತಿನ ದಿನ ಕಳೆದಿದೆ. ಮರುದಿನ ಧಾರೆಯಾದ ಮದುಮಗಳು ಹಿಂದಕ್ಕೆ ಬರಬೇಕಾಗಿದೆ. ಅದರೆ ಅವಳು ಆವತ್ತು ಮೈನೆರೆದಿದ್ದಾಳೆ. ಆಗ ನಾಲ್ಕು ಊರಿನ ಹೆಣ್ಣುಗಳನ್ನು ಕರೆಸಿದರು. ನಡು ಅಂಗಳದಲ್ಲಿ ಮಡಲು ಹಾಕಿಸಿದರು. ನಾಲ್ಕು 'ತೂರಿ' (ಉದ್ದವಾದ ಕುತ್ತಿಗೆ ಇರುವ ಮಣ್ಣಿನ ಪಾತ್ರೆ) ಗಳಲ್ಲಿ ನೀರು ಇಡಿಸಿದರು. ನಾಲ್ಕು ಕಳಸೆಗಳನ್ನು ಕಟ್ಟಿದರು. ಗಂಟುಹಾಕಿದ ತೆಂಗಿನಕಾಯಿಯನ್ನು ಇಟ್ಟರು. ಹಾಕಿದ ಮಂಡಲಕ್ಕೆ ಪ್ರದಕ್ಷಿಣೆ ಬರಿಸಿದರು. ತೆಂಗಿನಕಾಯಿಯ ಗಂಟಿನ ಮೇಲೆ ಕುಳ್ಳಿರಿಸಿದರು. ನಾಲ್ಕು ಹೆಣ್ಣುಗಳು ನಾಲ್ಕು ಕಳಶಗಳನ್ನು ಹಿಡಿದರು. ಅವಳ ತಲೆಗೆ ನೀರು ಹೊಯ್ದರು. ಮೂರು ದಿನ ಕಳೆದು

ನಾಲ್ಕನೆಯ ದಿನ ಶುದ್ಧದ ತಂಳು ನೀರು (ತಿಳಿನೀರು) ಮಿಂಯಿಸಿದರು. ಮೈಲಿಗೆಯ ಬಟ್ಟೆಯನ್ನು ಕಳಚಿದರು. ಮಡಿ ಬಟ್ಟೆಯನ್ನು ಉಡಿಸಿದರು. ತಲೆಯನ್ನು ಕೊಡಹಿ ಕೂದಲಿನ ಹನಿಗಳನ್ನು ಹಾರಿಸಿದರು. ಒಳಗಿನ ಸೂತ್ರಕ್ಕೆ ಬಂದರು. ದಕ್ಷಿಣದ ಮನೆಗೆ ಹೋದರು. ಮಣೆಯಿಟ್ಟು ಕುಳಿತರು. ಬಂಗಬಾಳೆಯ ತುದಿಯೆಲೆ ಹಾಕಿ ಉಂಡರು. ಅಡಕೆ ತಿಂದರು).

**ಗರ್ಭಿಣಿ ಹೆಂಗಸಿಗೆ ಸಂಬಂಧಿಸಿದ ಆಚರಣೆಗಳು**

ಗರ್ಭಿಣಿ ಹೆಂಗಸು ನಡೆಸುವ ಕೆಲವು ಆಚರಣೆಗಳು 'ಅಣ್ಣೊಳ್ಳ ಕೋವರಿಲ-ಬೊಳ್ಳೊಲ್ಲ ಕಿನ್ಯಗೆಲ್ಲ' ಪಾಡ್ದನದಲ್ಲಿ ಈ ಗೀತಿ ಬರುತ್ತದೆ : "ಮೂಡಾಯಿ ಮುಂಕೊಪಾಡ್ತ್ ಉಂತ್ವೇರ್ ಪೊಣ್ಣುಂಜೋವು, ಸೂರ್ ನಮಸ್ಕಾರೊ ಮಲ್ತ್‌ದ್, ಮಂಚ್ಚೊಂಕ್ಲೆಗರಿ ಪಾಡ್ಯೆರ್, ಮಂಚ್ಚೊಂಕ್ಲೆ ಬಂಬಿಟ್ ಸಾವಿರೊ ಮಂಚ್ಚೊಂಕ್ಲಾ ಜರ್ಮೊ ಪಾಡ್, ಎನ್ನ ಬಂಜಿಬೆದಂಜಿ ನರಪುರಿ ಬಲ್ಮೈ ಪಾಣೆಂದ್ ಪಂಡ್‌ತ್, ಮಡ್ಯೊಗ್ಲೆ ಕಲ್ಲಗ್ ತಾರಾಯಿ ನರಿಪ್ಪೇರ್, ಅಣ್ಣ್‌ಗಡಿ ರಡ್ಡ್‌ಲ ಮಲಂಕಾನೆ ಬೂರ್‌ಂಡ್. ಎಡ್ಡೆ ಮೂರ್‌ತ್ತೊನಪ್ಪಾಳ್, ಪೊಣ್ಣ್‌ಗಡಿ ದೆತ್‌ದ್ ಪೊಣುಂಜೊನೆಗ್ ಕೊರ್ಪಾಳ್, ಅಣ್‌ಗಡಿ ದೆತ್‌ದ್ ಮಂಟ್ಟೆಡ್ ಕಟ್ಯಾಳ್; ಈರರಮನೆಗ್ ನನ ಪೋಲೇಂದ್ ಪನ್ಪಾಳ್ ಅಬ್ಬಗ." (ಪೂರ್ವಕ್ಕೆ ಮುಖ ಮಾಡಿ ನಿಲ್ಲುತ್ತಾರೆ ಹೆಂಗಸು. ಸೂರ್ಯ ನಮಸ್ಕಾರ ಮಾಡಿ ಮೀನುಗಳಿಗೆ ಅಕ್ಕಿ ಹಾಕಿದರು. ಮೀನುಗಳ ಹೊಟ್ಟೆಯಲ್ಲಿ ಸಾವಿರ ಮೀನುಗಳು ಜನ್ಮವೆತ್ತಿ, ತನ್ನ ಹೊಟ್ಟೆಯಲ್ಲಿ ಒಂದು ಮಗು ಜನ್ಮವೆತ್ತಲಿ ಎಂದು ಹೇಳಿ, ಮಡಿವಾಳ ಕಲ್ಲಿಗೆ ತೆಂಗಿನಕಾಯಿಯನ್ನು ಒಡೆದರು. ತೆಂಗಿನಕಾಯಿಯ ಗಂಡು ಭಾಗ ಮತ್ತು ಹೆಣ್ಣು ಭಾಗ ಎರಡೂ ಮೇಲ್ಮುಖವಾಗಿ ಬಿತ್ತು. ಒಳ್ಳೆಯ ಲಕ್ಷಣ ಎಂದು ಹೇಳಿದರು. ಹೆಣ್ಣು ಭಾಗವನ್ನು ತೆಗೆದು ಹೆಂಗಸಿಗೆ ಕೊಡುತ್ತಾಳೆ. ಗಂಡು ಭಾಗವನ್ನು ತೆಗೆದು ಮಡಿಲಿನಲ್ಲಿ ಕಟ್ಟಿದಳು. ನೀವು ಅರಮನೆಗೆ ಇನ್ನು ಹೋಗಿ ಎಂದು ಹೇಳಿದಳು ಅಬ್ಬಗ).

ಗರ್ಭಿಣಿ ಹೆಣ್ಣಿನ ಬಯಕೆಯ ವಿಧಾನವನ್ನು ಅದೇ ಪಾಡ್ದನದಲ್ಲಿ ವಿವರ ವಿವರವಾಗಿ ಈ ರೀತಿ ಕೊಡಲಾಗಿದೆ :

"ಕಂಬುರ್ಲಟು ಕಂಬಾಲ್ ಪಾಡ್ಪಾಯೆ, ಸುಣ್ಣೋಟು ಗಾರೇನೆ ಕೊರ್ಪಾಯೆ, ಬೆಲ್ಲೋಟು ದಿಕ್ಕೇಲ್ ಪಾಡ್ಪಾಯೆ, ಪಂಜೊಲೇಟ್ ಪನಿದೊಂಪೊ ಪಾಡಾಯೇ, ಮುಂಡೋಲೆಟ್, ನೆರಿಕೆ ಪತ್ತಾಯೆ. ಮುಂಡಿಕ್ಕು ಪೊಡಿಕ್ಕುತುಪ್ಪಾಡ್, ಕಣಿರೆ ಕಾವಟೆತುಪ್ಪಾಡ್, ಪಾಡ್ಪಾಯೆ ಅಣ್ಣೊಲ್ಲಾ ಕೋಪಾರಿ. ಗಂಧ ಸಾಲೆತ ಮುತ್ತು ವರ್ಣೊಂತ ಮುಗುರು ನುಪ್ಪು ಮಲ್ಪಾಯೆ. ಕಾಚಿವರ್ಣೊಂತ ಕಚಿಪು ಮಲ್ಪಾಯೆ, ಅಡ್ದೋಗ್ಯ ಮರ್ಪಾಯೆ, ಅಜಾತ್‌ನ ಮಲ್ಪಾಯೆ. ನೀ ಟೋಗು ಮುರ್ಪಾಯೆ, ಪುಳಿ ಕಚಿಪ್ಪು ಮಲ್ಪಾಯೆ, ಅಣ್ಣೊಲ್ಲಾ ಕೋವಾರಿ : ಅಂಗಾರೆ ಬಾರೊಂಕು, ಬೊಳ್ಳಿದ್ಯಪ್ಪು ಬೊಳ್ಳಿರಾಣಿಗೊ ಸೊರೆ ಉಂಕು, ಪೊಸಕೊಡಿಸುತ್ತ ಪೇರ್, ತುಳಸಿ ಕಟ್ಟೆಲ್, ಕೋರಿನ್ ಅರಿಪಾಡ್ದ್ ಬುಡ್ಪಾತೇರ್. ಕೂಡಿನ ಪೊಣ್ಣೊವು. ಕೊಡಿರೆ ತೊಟ್ಟು ಮಣಿ ದಿಡ್‌ತ್ ಪೊಣ್ಜೆಗ್, ಬಯಕೆ ಪಾಡ್ಯೆರಾ ಕೂಡಿನ ಪೋಣೆಂಜೋವು, ಒಂಟಿ ಪುಂಡಿ ಉನ್ಪೆರ್ ಪೊಣೆಂಜೊವು, ಸೊಂಟೊಗು ಕೈಪತ್ಪೇರ್, ಸೆಲ್ಯೊಲ್ಲ ವೋನೆಟ್ ಪುಲ್ಯೊಲ್ಲ ಬೇನೆ ಬರ್ತ್‌ಂಡ್, ಪಾಡ್‌ನ ಕಲ್ಲಾಡ್, ಪತ್ತನ ವೇಲೆಟ್, ಎದರ್ ಬಂಡಿಗ್ ಪಂಡ್‌ತ್ ಪರಕ್ಕೆ ಪುಂಡಿ ವಣವು ಒಪ್ಪವೊಂದು ಪಾಡೆರ್ ಕೂಡ್‌ನ ಪೊಣ್ಣುಂಜೋವು." (ಕಬ್ಬಿನಿಂದ ಕಂಬ ಹಾಕಿದರು. ಸುಣ್ಣದಲ್ಲಿ ಗಾರೆಯ ಕೆಲಸ ಮಾಡಿಸಿದರು. ಬೆಲ್ಲದ ಒಲೆಯನ್ನು ಹಾಕಿಸಿದರು. ಪಂಜೋಳಿ ಎಲೆಯಿಂದ ಚಪ್ಪರವನ್ನು ಹಾಕಿಸಿದರು. ಮುಂಡೋಳಿ ಎಲೆಯಿಂದ ಅಲಂಕಾರ ಮಾಡಿದರು. ಮಿಡಿಯ ಉಪ್ಪಿನಕಾಯಿ, ಕಣಿಲೆ ಕಾವಟೆಯಿಂದ ಉಪ್ಪಿನಕಾಯಿ

ಹಾಕಿಸಿದರು. ಅಣ್ಣೊಲ್ಲ ಕೋಪಾರಿಯು, ಗಂಧಸಾಲೆಯು ಮುತ್ತುವರ್ಣದ ಮೊಗ್ಗೆಯಂತಹ ಅನ್ನವನ್ನು ಮಾಡಿಸಿದನು. ಕಾಜಿ ವರ್ಣದ ಪಲ್ಯ ಮಾಡಿಸಿದನು. ತರಕಾರಿಯನ್ನು ಅಡ್ಡಕ್ಕೆ ತುಂಡು ಮಾಡಿ ಪಲ್ಯ ಮಾಡಿದನು. ನೀಟಕ್ಕೆ ತುಂಡುಮಾಡಿ ಹುಳಿ ಹಾಕಿದ ಪಲ್ಯ ಮಾಡಿದನು. ಮಂಗಳವಾರದ ದಿನ ಮುಂಜಾವದ ವೇಳೆ ಬೊಳ್ಳೆರಾಣಿಗೆ ತುಳಸಿ ಕಟ್ಟೆಯ ಬಳಿ ಕೋಳಿಯನ್ನು ಅಕ್ಕಿ ಹಾಕಿ ಬಿಟ್ಟಿದ್ದಾರೆ. ಕೂಡಿದ ಹೆಂಗಸರ ತುದಿ ಬಾಳೆ ಎಲೆಯನ್ನು ಮಣೆಯ ಮೇಲೆ ಇಟ್ಟು, ಅವಳಿಗೆ ಹೆಂಗಸರು ಬಯಕೆಯ ವಸ್ತುಗಳನ್ನು ಹಾಕಿದರು. ಒಂದು ಮುಷ್ಟಿ ಅನ್ನವನ್ನು ಉಣ್ಣುತ್ತಾರೆ. ಸೊಂಟಕ್ಕೆ ಕೈಹಿಡಿಯುತ್ತಾರೆ. ಅವಳಿಗೆ ನೋವು ಬರುತ್ತಿದೆ. ಕೂಡಿದ ಹೆಂಗಸರು ಮುಂದಿನ ರಥೋತ್ಸವಕ್ಕೆ ಹರಕೆ ಹೇಳಿ ಹಣವನ್ನು ಕಟ್ಟಿ ಇಟ್ಟರು).

ಸಿರಿಯ ಪಾಡ್ದನದಲ್ಲಿಯೂ ಋತು ಸ್ನಾನ, ಮದುವೆ, ಸೀಮಂತ ಮುಂತಾದ ಬದುಕಿನ ಬೇರೆ ಬೇರೆ ಹಂತಗಳಿಗೆ ಸಂಬಂಧಿಸಿದ ಆಚರಣೆಗಳು ಕಾಣಿಸಿಕೊಂಡಿವೆ.

### ವಿವಾಹ ವಿಚ್ಛೇದನದ ಕ್ರಮ

ಸಿರಿಯ ಪಾಡ್ದನದಲ್ಲಿ ವಿವಾಹ ವಿಚ್ಛೇದನದ ಪ್ರಸಂಗ ಬರುತ್ತದೆ. ಅದನ್ನು 'ಬರ' ಎಂದು ಕರೆಯುತ್ತಾರೆ. ಗಂಡಸು ಹೆಂಡತಿಯನ್ನು ಬಿಡುವುದಿದ್ದರೆ ಆತನೇ ಅವಳನ್ನು ತಂದು ತವರಿನಲ್ಲಿ ಬಿಡಬೇಕಾಗಿತ್ತು ಅಥವಾ ಹಿರಿಯರು ಬಂದು ಅವಳನ್ನು ಕರೆದುಕೊಂಡು ಹೋಗಬೇಕಾಗಿತ್ತು. ಈ ಸಂಬಂಧವು ಕಡಿಯುವುದನ್ನು ವಸ್ತ್ರವನ್ನು ಹರಿಯುವುದರ ಮೂಲಕ ಸೂಚಿಸುತ್ತಿದ್ದರು. ಅಕ್ಕೇಸಿರಿಯ ಎರಡನೆಯ ಗಂಡನಾದ ಕೊಟ್ರಾಡಿ ಕೊಡ್ಸರ ಆಳ್ವನ ಮೊದಲನೆಯ ಹೆಂಡತಿ ಸಾಮು ಆಳ್ವೆದಿ ತಾನೇ ತವರು ಮನೆಗೆ ಬಂದಾಗ ಅವಳ ವರ್ತನೆಯನ್ನು ಅವಳ ಅಣ್ಣ ಆಕ್ಷೇಪಿಸುತ್ತಾನೆ. ಆದರೆ ಆ ಸಂಬಂಧ ಅಲ್ಲಿ ಮುರಿಯುವುದಿಲ್ಲ. ಆದರೆ ಅಕ್ಕೇರಸು ಪೂಂಜೆದಿಯು ತನ್ನ ವ್ಯಭಿಚಾರಿ ಗಂಡನನ್ನು ತ್ಯಜಿಸುತ್ತಾಳೆ. ಅಷ್ಟೇ ಅಲ್ಲ ಬೇರೆ ಮದುವೆಯೂ ಆಗುತ್ತಾಳೆ. ಹಾಗಿದ್ದೂ ಅವಳಿಗೆ ಗರತಿಯ ಸ್ಥಾನ ಸಿಗುತ್ತದೆ. ಹೆಣ್ಣು ಗಂಡನ ವಿಚ್ಛೇದನ (ಬರ) ಹೇಳುವಾಗ ಆಕೆಗೆ 'ತಮೇರಿ' (ತವರಿನ ಹೊಣೆಗಾರರು) ಬೇಕಾಗುತ್ತದೆ. ಸಿರಿಯು ತನಗೆ ಯಾರೂ ಇಲ್ಲ ಎಂದು ಬೇಲಿಯ ಗೂಟವನ್ನು ಅದಕ್ಕಾಗಿ ಉಪಯೋಗಿಸಲು ಬಯಸುತ್ತಾಳೆ. ಆದರೆ ಮತ್ತೆ ಮಗನನ್ನು ತವರಿನ ಹೊಣೆಗಾರಿಕೆಯಾಗಿ ಒಡ್ಡುತ್ತಾಳೆ. ತನ್ನ ಗಂಡ ಕೊಟ್ಟ ವಸ್ತು ಒಡವೆಗಳನ್ನು ಅವನ ಮುಂದೆಯೇ ಎಸೆದು ಸಂಬಂಧವನ್ನು ಕಳಚಿ ನಡೆಯುತ್ತಾಳೆ.

### ಬಹಿಷ್ಕಾರ ಹಾಕುವ ಪದ್ಧತಿ

'ಪಂಜುರ್ಲಿ'ಯ ಒಂದು ಪಾಡ್ದನದಲ್ಲಿ ಬಹಿಷ್ಕಾರ ಹಾಕುವ ಪದ್ಧತಿಯ ವಿಚಾರ ಬರುತ್ತದೆ. ಅದನ್ನು 'ಪಡಾರ ಮಲ್ಪುನೆ' ಎಂದು ಕರೆಯಲಾಗಿದೆ. ಬಲ್ಲಾಳನು ತನ್ನ ಊರಿನ ಆಳುಗಳಿಗೆ ಹೇಳುವ ಮಾತು : "ಇಂದೆಕ್ ಯೇರಾಯೆ ಪೂರಿ ಬತ್ತ್‌ಜ್ಜೆನಾ ಆಯಗ್ ಪಚಾರ ಮುಳ್ಪುಂಡು; ಅಯೆ ಪಚಾರ ಕೊರುಜೆಂಡ ಅಯಗ್ ಸುಣ್ಣಲಾ ತೆಕ್ಕಿತೂಲಾ ಕೊರಂದಿಲೆಕ್ಕ ಯಾನ್ ಮಲ್ಪುವೆಂದ್ ಅಕುಳೆಗೆ ಮೋಡಿಗೆ ಪುಟ್ಟಾನಗ" (ಇದಕ್ಕೆ ಯಾವನು ಒಬ್ಬನು ಬರುವುದಿಲ್ಲವೋ ಅವನಿಗೆ ಬಹಿಷ್ಕಾರ ಹಾಕಲಾಗುವುದು. ಅವನು ಅದಕ್ಕೆ ಬದ್ಧನಾಗಿ ಇಲ್ಲದಿದ್ದರೆ ಅವನಿಗೆ ಊರಿನಲ್ಲಿ ಸುಣ್ಣವೂ ಬೆಂಕಿಯೂ ಯಾರೂ ಕೊಡದಂತೆ ನಾನು ಮಾಡುತ್ತೇನೆ ಎಂದು ಅವರಿಗೆ ಹೆದರಿಕೆ ಹುಟ್ಟಿಸಿದನು).

## ದಾನ ಕೇಳುವ ಕ್ರಮ

ದಾನವನ್ನು ಕೇಳುವ ಪದ್ಧತಿಯು ಒಂದು ವಿಶಿಷ್ಟ ಸ್ವರೂಪದಲ್ಲಿ ಇತ್ತು ಎನ್ನುವುದನ್ನು ಕೋಟಿ ಚೆನ್ನಯ ಪಾಡ್ದನದಲ್ಲಿ ಕೋಟಿ-ಚೆನ್ನಯರು ಪೆರ್ಮಲೆ ಬಲ್ಲಾಳನಲ್ಲಿ ತನಗೆ ಸಲ್ಲಬೇಕಾದ ಇನಾಮನ್ನು ಕೇಳುವ ರೀತಿಯನ್ನು ಸಾಯನ ಬೈದ್ಯನು ಅವರಿಗೆ ಹೇಳಿಕೊಡುವಲ್ಲಿ ನೋಡಬಹುದು-"ಪಾಲೆಗ್ ಪೋತಿ ಪಂಜೊಳಿ, ಕುಕ್ಕುಗು ಪೋತಿ ಮುಂಡೊಳ್ಳಿ, ಬಜ್ಜಿರೆಗೆತ್ತ್‌ದ್ ಕೌಳೆ ಪತ್ಲೆ, ಪಚ್ಚಡೆ ಸೆರಂಗ್‌ಡ್ ದೀಪೊನ್ಲೆ, ನಟ್ಟು ಸೇಜಿ ಪಾಲ್‌ನೆ ಕೇಣ್ಡೆ" (ಪಾಳೆ ಮರಕ್ಕೆ ಹೋದ ಪಂಚೋಳಿ ವೀಳ್ಯದೆಲೆ, ಮಾವಿನ ಮರಕ್ಕೆ ಹೋದ ಮುಂಡೊಳ್ಳಿ ವೀಳ್ಯದೆಲೆ ಇವನ್ನು ತೆಗೆದುಕೊಂಡು ಕವಳಿಗೆ ಹಾಗೆ ಹಿಡಿದು ನಿಮ್ಮ ಹಚ್ಚಡದ ಸೆರಗಿನಲ್ಲಿ ಇಟ್ಟು ಕೊಳ್ಳಿ. ನಿಮ್ಮ ತಾಯಿಗೆ ಮಾತುಕೊಟ್ಟ ಬಹುಮಾನವನ್ನು ಬಲ್ಲಾಳನಲ್ಲಿ ಕೇಳಿರಿ).

## ಬಹುಮಾನ ಕೊಡುವ ಕ್ರಮ

ಮೆಚ್ಚಿಗೆಯ ದ್ಯೋತಕವಾಗಿ ಕೊಡುವ ಬಹುಮಾನವನ್ನು ವಿಧಿವತ್ತಾಗಿ ಕೊಡುತ್ತಿದ್ದರು ಎನ್ನುವುದನ್ನೂ ಈ ರೀತಿ ಕೊಡುತ್ತಿದ್ದ ವಸ್ತುಗಳು ಯಾವುವು ಎನ್ನುವುದನ್ನೂ 'ಕಲ್ಕುಡ-ಕಲ್ಲುರ್ಟಿ' ಪಾಡ್ದನದಲ್ಲಿ ನೋಡಬಹುದು. ಬೆಳಗೊಳದ ಬಲ್ಲಾಳನು ಶಂಬು ಕಲ್ಕುಡನಿಗೆ ಕೊಡುವ ಇನಾಮು-"ಮಲಗೆರೆ ಮಂಚ, ಕುಳ್ಳೆರೆ ಕುರುಜಿ, ಪತ್ಯೆರ್ ಪಂಚದೀವಟಿಗೆ, ಬೀಪೆರ ಬಂದಿಕೋಲು, ಪುಗ್ಗೆಲ್ಲಿಂಜಿ ಪಚ್ಚಡೆ, ಬಾಯಿಂಜಿ ಬೂಳ್ಯ ಸೇಜಿ (ಇನಾಮು) ಕೊರಿಯೆರ್" (ಮಲಗಲು ಮಂಚ, ಕುಳಿತುಕೊಳ್ಳಲು ಕುರ್ಚಿ, ಹಿಡಿಯಲು ಪಂಚದೀವಟಿಗೆ, ನಡೆಯುವಾಗ, ಕೈಯಲ್ಲಿ ಹಿಡಿಯಲು ಬಂದಿಕೋಲು, ಹೆಗಲಿನವರೆಗೆ ಮುಚ್ಚುವಷ್ಟ ಬಟ್ಟೆಗಳು, ಬಾಯಿ ತುಂಬ ಜಗಿಯಲು ತಾಂಬೂಲ ಈ ಇನಾಮನ್ನು ಕೊಟ್ಟರು).

## ಔಷಧ ಮಾಡುವ ವಿಧಾನ

ಬೈದ್ಯರೆಂಬ ವರ್ಗದವರು ಆಗಿನ ಸಮಾಜದಲ್ಲಿ ಔಷಧೋಪಚಾರದ ಕೆಲಸವನ್ನು ಮಾಡುತ್ತಿದ್ದರು ಎನ್ನುವುದನ್ನು ಜಾತಿ ವೃತ್ತಿಗಳ ಅಧ್ಯಾಯದಲ್ಲಿ ನೋಡಲಾಗಿದೆ. 'ಕೋಟಿ-ಚೆನ್ನಯ' ಪಾಡ್ದನದಲ್ಲಿ ಪೆರ್ಮಲೆ ಬಲ್ಲಾಳನಿಗೆ ಮುಳ್ಳು ತಾಗಿದ ಕಾಲಿಗೆ ಔಷಧ ಮಾಡಲು ಬಂದ ದೇಯಿಯು ಮಾಡಿದ ಔಷಧೋಪಚಾರವನ್ನು ಈ ರೀತಿ ಕೊಡಲಾಗಿದೆ. "ಅಮ್ಮಣ್ಣ ಬೈದ್ಯೆ ದುಂಬು ಪೂಜಿದ ಮರ್ದ್‌ನ್ ಬಕ್ಕ್‌ದ್ ಗೆತ್ತ್ಳ್, ತಾನ್ ಬೀರ್ ಮರ್ದ್‌ನ್ ತರ್ತ್‌ದ್ ಪೂಜಿಯುಳ್, ಮಂತ್ರೊನು ಮಾನಾಯಳ್, ತಪ್ಪುಡು ಸನಿತಳ್" (ಅಮ್ಮಣ್ಣ ಬೈದ್ಯನು ಮೊದಲು ಸವರಿದ ಔಷಧವನ್ನು ತೆಗೆದರು. ತಾನು ಬೀರು ಮದ್ದನ್ನು ಅರೆದು ಸವರಿದಳು, ಮಂತ್ರವನ್ನು ಗುಣುಗುಣಿಸಿದಳು. ಸೊಪ್ಪಿನಲ್ಲಿ ಸವರಿ ತಂಪು ಮಾಡಿದಳು).

## ಹಳ್ಳಿಯ ಹೆಣ್ಣಿನ ಗೃಹಕೃತ್ಯಗಳು

ಹಳ್ಳಿಯ ಹೆಂಗಸೊಬ್ಬಳು ದೈನಂದಿನ ಮನೆ ಕೆಲಸಗಳ ವಿವರಣೆಯಲ್ಲಿ ತುಳುನಾಡಿನ ಸಮಾಜದ ಬಹಳ ಪ್ರಮುಖವಾದ ಚಿತ್ರಣವನ್ನು ನೋಡಬಹುದು. ಅಂತಹ ಒಂದು ವಿವರಣೆ 'ಕರ್ನಗೆ' ಪಾಡ್ದನದಲ್ಲಿ ಈ ರೀತಿ ಬರುತ್ತದೆ : "ಸೇರಡೆ ಕಾಂಡೆ ಲಕ್ಕಳ್ ಕರ್ನಗ ಪಾಡಿ ಪಾಸ್ ಮಡಿತ್ತಳ್. ಬಂಗಾರ್‌ದ

ವ್ಯೈಪ್ಪು ಪತ್ಯಳ್. ಚಾವಡಿ ನಡುವರ ಬೀಜ್‌ಯಳ್. ಚೆಂಬುದ ಕಡ್ಯ ದೆತ್ತೊಂದು ಕಟ್ಟಿನ ಗುವೆನಾಡೆ ಪೋಪಳ್. ಅಕಾಸಂದ ವಸೆಮರ ಪತ್ಯಳ್. ಪಾತಾಳಂದ ಪನಿನೀರ್‌ದೆತ್ತ್‌ಳ್. ಕೈಮೋಸೆ ದೆಕ್ಯಳ್. ನೀರ್‌ಕೊಂಡು ಬರುವಳ್. ಕಬುಲ್ತಿ ಪೆತ್ತ್‌ದ ಕೈತಡೆ ಬೊಳ್ಳಿನ ಸಿರಿಗಿಂಡೆ ಪತ್ತೊಂದು ಪೋಪಳ್. ಉಗುರುಡು ಸಿಗ್‌ರಂಜಿ ಪಾರಾಯಳ್. ಅಟ್ಟೊಗು ಇಟ್ಟೆಣೆಚ್ಚಿ ದೀತಾಳ್, ಮುಡಿಕ್ಕ್ ಮುನ್ನಾಳಿ ಪಾಡ್ಯಳ್. ಈಜಿ ಅರಿಯ ಬೊಳ್ಳ ಅರಿಯ ತೂಪಾಳ್. ಮುಡಿಡ್ದ್ ಮೂವಳ್ಳ ಅರಿ ದೊರ್ತಳ್ ಸರಲಪ್ಪ ಎಡ್ತ್ಯಳ್. ಎಡ್ತ್‌ದ್ ಪೊಡೆತ್ತ್‌ದ್ ಒರ್ಲರಿ ಮಳ್ತ್ಯಳ್. ಬವನದ ಕರಟ್ಟ್ ಪಾಡ್ಯಳ್, ಅಡಿಯೆರೆ ಕಲ್ಲ್ ಮೇಲಾರ ಅರ್ಕಂಜ್ ದೆತ್ತ್ಯಳ್. ಕಲ್ಲ್ ಬಾರ್‌ಪೆಜ್ಜ್‌ದ್ ನೀರ್ ವೈತ್ತ್‌ದ್ ದಿಕ್ಕೆಲ್‌ಡ್ ದೀಯೊಳ್. ಮೇಲಾರ ಬಾವಡೆ ಮುಚ್ಯಳ್. ಸೂ ಪೊತ್ತಾಯಳ್." (ಕರ್ನಗ ಮುಂಜಾನೆ ಎದ್ದಳು. ಮಲಗಿದ ಹಾಸಿಗೆಯನ್ನು ಮಡಿಸಿದಳು. ಚಿನ್ನದ ಹಿಡಿಸೂಡಿಯನ್ನು ಹಿಡಿದಳು. ಚಾವಡಿ ನಡುಮನೆಯನ್ನು ಗುಡಿಸಿದಳು. ಚೆಂಬಿನ ಕೊಡಪಾನ ತೆಗೆದುಕೊಂಡು, ಕಟ್ಟಿದ ಬಾವಿಯಲ್ಲಿಗೆ ಹೋದಳು. ಆಕಾಶದಷ್ಟು ಎತ್ತರದಲ್ಲಿದ್ದ ಹಸೆಮರವನ್ನು ಹಿಡಿದಳು. ಪಾತಾಳದಷ್ಟು ಆಳದಿಂದ ಹನಿ ನೀರನ್ನು ತೆಗೆದಳು. ಕೈಮುಖ ತೊಳೆದಳು. ನೀರು ತೆಗೆದುಕೊಂಡು ಬಂದಳು. ಕಪಿಲೆ ದನದ ಹತ್ತಿರ ಬೆಳ್ಳಿಯ ಸಿರಿಗಿಂಡೆಯನ್ನು ಹಿಡಿದುಕೊಂಡು ಹೋದಳು. ಉಗುರಿನಲ್ಲಿ ಸೆಗಣಿಯನ್ನು ಹರಡಿದಳು. ಅಟ್ಟಕ್ಕೆ ಏಣಿಯನ್ನು ಇಟ್ಟಳು. ಮುಡಿಗೆ ಮುನ್ನಾಳಿ (ಮುಡಿಯನ್ನು ತೂತು ಮಾಡಿ ಅಕ್ಕಿಯನ್ನು ಸ್ವಲ್ಪ ಹೊರತೆಗೆದು ನೋಡಲು ಅನುಕೂಲವಾದ ಕಬ್ಬಿಣದ ಒಂದು ಸಾಧನ) ಹಾಕಿದಳು. ಕಪ್ಪು ಅಕ್ಕಿಯೇ ಬಿಳಿ ಅಕ್ಕಿಯೇ ಎಂದು ನೋಡಿದಳು. ಮುಡಿಯಿಂದ ಮೂರು ಬಳ್ಳ ಅಕ್ಕಿಯನ್ನು ಸುರಿದಳು. ಅದನ್ನು ಸರಸರನೇ ಕುಟ್ಟಿದಳು. ಕುಟ್ಟಿ, ಕೇರಿ ಒಂದು ಬಳ್ಳ ಅಕ್ಕಿಯನ್ನು ಮಾಡಿದಳು. ಅಕ್ಕಿಯ ಮಡಕೆ ಯಲ್ಲಿ ಹಾಕಿದಳು. ಅಕ್ಕಿಯಲ್ಲಿದ್ದ ಕಲ್ಲು ತೆಗೆದಳು. ಕಲಗಚ್ಚು ತೆಗೆದಳು. ಕಲ್ಲು ಭತ್ತ ಹೆಕ್ಕಿ ನೀರು ಹೊಯ್ದು ಒಲೆಯ ಮೇಲೆ ಇಟ್ಟಳು. ಮೇಲೆ ಚಾವಡೆ (ಮುಚ್ಚಳ) ಮುಚ್ಚಿದಳು. ಒಲೆಯಲ್ಲಿ ಬೆಂಕಿ ಉರಿಸಿದಳು.

### ತುಳುನಾಡಿನ ಬೇಸಾಯಗಾಸನೊಬ್ಬನ ಬದುಕಿನ ರೀತಿ

ತುಳುನಾಡಿನ ಕೃಷಿಕ ಕುಟುಂಬದ ವ್ಯಕ್ತಿಯೊಬ್ಬನು ತನ್ನ ಭೂಮಿಯಲ್ಲಿ ಏನೆಲ್ಲಾ ಮಾಡಿಸುತ್ತಾನೆ ಎನ್ನುವುದನ್ನು 'ಬಲೀಂದ್ರ' ಪಾಡ್ದನದಲ್ಲಿ ಬಲೀಯೆಂದ್ರನಲ್ಲಿ ವಾಮನ ಕೇಳುವ ಮೂರು ಹೆಜ್ಜೆ ಜಾಗದ ದಾನದ ಸಂದರ್ಭದಲ್ಲಿ ಈ ರೀತಿ ವಿವರಿಸಲಾಗಿದೆ–"ಒಂಜಿ ಹೆಜ್ಜಾ ಜಾಗೆಡ್ ಇಲ್ಲ್‌ಕಿದೆ ಕಟ್ಟಾಪೊಡು, ಕೆದು ಗುಪ್ಪೆಲ್ ತೋಡಾಪೊಡು, ತಾರೆ ಬಾರೆ ದೀಪಾಪೊಡು, ಕೇನೆ ಕೆರೆಂಗ್ ಮಲ್ಪಾಪೊಡು, ಕಂಬುಳ ಕಟ್ಟ ಪುಣಿ ಕಟ್ಟಾದ್ ಪೂಕರೆ ಪಾಡಾಪೊಡು. ಬಂಟ ಬಲಿ ಬರ್ಪಾಪೊಡು. ಕೋದಿ ಕಂಬುಳ ಮಲ್ಪಾಪೊಡು. ಮಗೆತ್ತೊಂಜಿ ಮಟ್ಟು ಜಾಗೆಡ್ ದೇವರೆಗ್ ಗುಂಡಾ, ಬೂತೊಳಿಗ್ ಮಾಡಾ, ಬಿಮ್ಮೇರೆಗ್ ಸಾನ ಕಟ್ಟಾಪೊಡು. ಅಂಕ ಅಯನ ಮಳ್ಪಾಪೊಡು, ಬೊಕ್ಕೊಂಜಿ ಮುಟ್ಟು ಜಾಗೆಡ್ ಜಾತಿಗ್ ಜನಿಯಾರ, ನೀತಿಗ್ ನಿಲ್ಗಡೆ ಮಳ್ಪಾವೆ" (ಒಂದು ಹೆಜ್ಜೆ ಜಾಗದಲ್ಲಿ ಮನೆ ಹಟ್ಟಿ ಕಟ್ಟಿಸಬೇಕು, ಕೆರೆ ಬಾವಿ ತೋಡಿಸಬೇಕು, ತೆಂಗಿನಮರ ಬಾಳೆಗಿಡ ಇಡಿಸಬೇಕು, ಕೇನೆ ಗೆಣಸು ಮಾಡಿಸಬೇಕು, ಕಂಬಳ ಗದ್ದೆಯ ಕಟ್ಟಹುಣಿ ಕಟ್ಟಿಸಿ 'ಪೂಕಾರ್' ಹಾಕಿಸ ಬೇಕು. ಬಂಟಬಲಿ ಬರಿಸಬೇಕು, ಕೋಳಿ ಅಂಕ ಕಂಬಳ ಮಾಡಿಸಬೇಕು. ಇನ್ನೊಂದು ಹೆಜ್ಜೆ ಜಾಗದಲ್ಲಿ ದೇವರಿಗೆ ಗುಂಡ, ಭೂತಗಳಿಗೆ ಮಾಡ, ಬ್ರಹ್ಮರಿಗೆ ಸ್ಥಾನ ಕಟ್ಟಿಸಬೇಕು. ಅಂಕ ಯಾನ ಮಾಡಿಸಬೇಕು. ಮತ್ತೊಂದು ಹೆಜ್ಜೆಯಲ್ಲಿ ಜಾತಿಗೆ ಜನಿವಾರ, ನೀತಿ ನೀಲುಗಡೆ ಮಾಡಿಸುತ್ತೇನೆ).

ಮಾಟದ ವಿಧಾನ

ಹಳ್ಳಿಗಳಲ್ಲಿ ಮಾಟ ಮಾಡಿ ಇನ್ನೊಬ್ಬರಿಗೆ ಹಾನಿ ಮಾಡುವ ಕ್ರಮ ಇತ್ತು ಎನ್ನುವುದನ್ನು ಕೋಟಿ ಚೆನ್ನಯ್ಯ ಪಾಡ್ದನದಲ್ಲಿ ನೋಡಬಹುದು. ಬಿರ್ಮಣ್ಣ ಬೈದ್ಯನು ದೇಯಿ ಬೈದ್ಯೆದಿಯನ್ನು ಮಾಟ ಮಾಡಿಸಿ ಕೊಲ್ಲುತ್ತಾನೆ.

ತುಳುನಾಡಿನಲ್ಲಿ ದೀಪಾವಳಿ ಹಬ್ಬವನ್ನು ಆಚರಿಸುವ ವಿಧಾನ

ಬಲೀಂದ್ರ ಪಾಡ್ದನದಲ್ಲಿ ತುಳುನಾಡಿನ ದೀಪಾವಳಿಯ ಹಬ್ಬ (ಪರ್ಬೊ) ದ ವಿವರಣೆಯನ್ನು ಕೊಡಲಾಗಿದೆ. ಬಲೀಂದ್ರ ಪೂಜೆ ಮತ್ತು ದೀಪಾವಳಿ ಹಬ್ಬಗಳು ಒಟ್ಟಿಗೆ ಆಗುವುದರಿಂದ ಈ ವಿವರಣೆ ಹೆಚ್ಚು ಮುಖ್ಯವಾಗಿದೆ–'ಕಾಲಾದೀಡ್ದ್ ಕಾಲಾದಿಗ್ ವರ್ಸ ಪದ್‌ರಾಡ್ ತಿಂಗೊಳುಡು ಆಟಿದಮಾಸೆ, ಸೋಣಸಂಕ್ರಾಂದಿ, ಬೊಂತೇಲ್‌ದ ಕೊಡಿಪರ್ಬೊಗು ನಿಕ್ಲೆ ಬುಲೆಸಲೆ ಕಂಜಿ ಕೈಕಂಜಿ, ನುಗನಾಯೆರ್, ಕೊಟ್ಟುಗುದ್ದೊಲಿ, ತಡ್ಪೆ ಪುಡಾಯಿ, ಬೊಲ್ಲಿ ಬಂಗಾರ್, ಬದ್‌ಕು ಬಾಗ್ಯೊಲೆನ್ ಪೂಪಿಂಗಾರೊಡು ಸಿಂಗಾರ ಮಲ್ತ್‌ಡ್, ದೂಪ ದೀಪೊಡು ಜೋಕುಲು ಬಾಲೆಲೆನ್ ಲೆತ್‌ದ್ ಪೂಜೆ ಮಲ್ತ್‌ದ್, ತಾದಿ ಕಡ್ತ್‌ದ್ ಕಟ್ಟಪುಣಿ ಪೂಜೆದ್, ಇಲ್ ಇಲ್ ಪರ್ಬ ಕಂಡ ಕಂಡೊಂಡು ತುಡಾರ್, ಬಾಕಿಲೆಡ್ ಬಿಲೆಕಿ ಮರ ಸಾನಮಾನೊಲೆಡ್ ದೀಪೊಲಿದ ಕಮ್ಮ, ಏಳ್ನಿಲ್ ದೀಪೊಡು ಅಜಿ ದಿನತ ಬಲಿ ಮೂಜಿ ದಿನತ ಪೊಲಿ ಇಂದ್ ಬಲಿಯೇಂದ್ರಗ್ ಪೂಜೆ ಮಲ್ಪೊಡು ಇಂದ್‌ದ್ ಕಟ್ಟಪ್ಪಣೆ ಕೊರುದು ಪಂಡೆರ್‌ಜಾ ನಾರಾಯಣ ದೇವೆರ್' (ಕಾಲಾದಿಯಿಂದ ಕಾಲಾದಿಗೆ ವರ್ಷದ ಹನ್ನೆರಡು ತಿಂಗಳಿನಲ್ಲಿ ಆಷಾಡದ ಅಮಾವಾಸ್ಯೆ, ಶ್ರಾವಣದ ಸಂಕ್ರಮಣ, ಪುಯಿಂತೆಲ್‌ದ ತುಡಿ ಹಬ್ಬಕೆ ನಿಮ್ಮ ಬೆಳೆ ಭಾಗ್ಯ, ಜಾನುವಾರು, ನೊಗ ನೇಗಿಲು, ಹಾರೆ, ಗುದ್ದಲಿ, ಗೆರಸೆ ಬುಟ್ಟಿ, ಬೆಳ್ಳಿ ಬಂಗಾರ, ಬದುಕು ಭಾಗ್ಯಗಳನ್ನು ಸಿಂಗಾರದ ಹೂವಿನಲ್ಲಿ ಅಲಂಕರಿಸಿ, ಧೂಪ ದೀಪದಲ್ಲಿ ಮಕ್ಕಳು ಮರಿಗಳನ್ನು ಕರೆದು ಪೂಜೆ ಮಾಡಿ, ಕಟ್ಟಹುಣಿ ಸವರಿ, ಮನೆ ಮನೆಯಲ್ಲಿ ಹಬ್ಬ, ಹೊಲ ಹೊಲದಲ್ಲಿ ಸೊಡರು, ಬಾಗಿಲಿನಲ್ಲಿ ಬಿಲೆಕಿ ಮರ (ಬಲೀಂದ್ರ ಮರ), ಸ್ಥಾನಗಳಲ್ಲಿ ದೀಪಾವಳಿಯ ಕಂಬ, ಏಳು ನೆಲೆಯ ದೀಪದಲ್ಲಿ ಆರು ದಿನದ ಬಲಿ, ಮೂರು ದಿನದ ಹೊಲಿ ಎಂದು ಬಲಿಯೇಂದ್ರನಿಗೆ ಪೂಜೆಮಾಡಬೇಕು. ಹೀಗೆಂದು ನಾರಾಯಣ ದೇವರು ಕಟ್ಟಪ್ಪಣೆ ಕೊಟ್ಟು ಹೇಳಿದರು).

ಕೋಳಿಕಟ್ಟಕ್ಕೆ ಹೋಗುವ ಮತ್ತು ಕೋಳಿ ಕಟ್ಟುವ ವಿಧಾನ

ತುಳುನಾಡಿನ ಜನಪ್ರಿಯ ಕ್ರೀಡೆಗಳಲ್ಲಿ ಕೋಳಿ ಅಂಕ ಅಥವಾ ಕೋಳಿ ಕಟ್ಟ ಒಂದು. ಅಂತಹ ಕೋಳಿ ಕಟ್ಟಕ್ಕೆ ಹೋಗುವ ಮತ್ತು ಕೋಳಿ ಕಟ್ಟುವ ವಿಧಾನವನ್ನು "ಜುಮಾದಿ ಪಾಡ್ದನ" ದಲ್ಲಿ ಹಂತ ಹಂತವಾಗಿ ತಿಳಿಸಲಾಗಿದೆ. 'ಕೋರಿದ ಕಟ್ಟಗ್ ಪೋವೊಡುಂದು ಕೋರಿಗ್ ನೀರ್ ಬಾರ್ ದೀಪಯೇ. ತಾನ್ ಜೋತ್ರ ಪುತ್ತಿಯೆ. ಪುಳ್ಯ ಬಣ್ಣದ ತರೆತ್ರ ಕಟ್ಟಿಯೇ. ಕಾರ್‌ಗ್ ನೂರ್ಲರಿತ್ತ ಮಾಯಣ ಮುಟ್ಟು ಪಾಡೊಂಡೆ. ದೊಂಬುಗು ಕಲ್ಕುಡೆ ಪತ್ತೊಂಡೆ. ತನ್ನ ಜೇವು ಅರುವತ್ತೆರೆ ಕೈಟ್ಟ್ ಕಟ್ಟಿ ಕೋರಿನ್ ಬುಡದ್ ಕೊರಿಯೆ. ಕೋರಿಕಟ್ಟಿ ಬಾಳ್‌ದ ಸೂಡಿನ್ ಕೈಟ್ಟ್ ಪತ್ತೊಂಡೆ. ಅಡೂರ ದೇರಬೈದ್ಯೆ' (ಕೋಳಿಯ ಅಂಕಕ್ಕೆ ಹೋಗಬೇಕು ಎಂದು ಕೋಳಿಗೆ ನೀರು ಮತ್ತು ಭತ್ತವನ್ನು ಇಡಿಸಿದನು. ತಾನು ಧೋತ್ರ ಉಟ್ಟನು. ಕೆಂಪು ಬಣ್ಣದ ಮುಂಡಾಸನ್ನು ಕಟ್ಟಕೊಂಡನು. ಕಾಲಿಗೆ ಸುಂದರವಾದ ಮೆಟ್ಟನ್ನು ಹಾಕಿಕೊಂಡನು. ಬಿಸಲಿಗೆ ತಾಳೆಗರಿಯ ಕೊಡೆಯನ್ನು ಹಿಡಿದುಕೊಂಡನು. ತನ್ನ ಅಳಿಯಂದಿರ ಕೈಯಲ್ಲಿ ಕಟ್ಟದ ಕೋಳಿಗಳನ್ನು ಕೊಟ್ಟನು. ಈ ಅಡೂರ ದೇರಬೈದ್ಯನು ಕೋಳಿ ಕಟ್ಟಿದ ಬಾಳಿನ ಸೂಡಿಯನ್ನು (ಕತ್ತಿಯ ಚೀಲ) ಕೈಯಲ್ಲಿ ಹಿಡಿದುಕೊಂಡನು).

## ಮರ ಸಿಗಿಯುವ ಮತ್ತು ಲೆಕ್ಕ ಮಾಡುವ ವಿಧಾನ

ಪಂಜುರ್ಲಿಯ ಒಂದು ಪಾಡ್ದನದಲ್ಲಿ ಕಾಡಿನ ಮರವನ್ನು ಕಡಿದಾದ ಮೇಲೆ ಅವುಗಳನ್ನು ಬೇಕಾದ ಗಾತ್ರಕ್ಕೆ ಸಿಗಿಯುವ ಮತ್ತು ಆ ರೀತಿ ಸಿಗಿದ ಮರದ ತುಂಡುಗಳನ್ನು ಲೆಕ್ಕಮಾಡಿ ಸಿಗಿದವರಿಗೆ ಕೂಲಿ ಕೊಡುವ ವಿಧಾನ ಸಿಗುತ್ತದೆ. ಮರದ ಕಾರ್ಖಾನೆಗಳು ಇರುವ ಈ ಕಾಲದಲ್ಲಿಯೂ ಕೈಯಲ್ಲಿ ಗರಗಸದ ಮೂಲಕ ಮರ ಸಿಗಿಯುವ ಕ್ರಮ ಹಳ್ಳಿಗಳಲ್ಲಿ ರೂಢಿಯಲ್ಲಿದೆ. 'ಅಯ್ಯಾ ಬಲ್ಲಾಳೆರೇ, ಈರೆ ಮರಕುಳೆಡ್ ಯೆಂಕುಳು ದಾಲಾ ಅಂಗೈತಾಕುಳ್ಳ ಮರನ್ ಹಾಳ್ ಮಳ್ಪಂದೆ, ಸಜ್ಜಿ ಮಳ್ತ್‌ದ್ ಈತ್ ಕೊಂಟು ಕೋರೆದಂತಿ ಲೆಕ್ಕ ಸಾಪು ಮಳ್ತ್‌ದ್ ತಿಗ್ತ್‌ದ್ ಕೊರಿಯ. ನಿಕುಳೆ ಬಗೆನಾಕುಳು ಇತ್ತೆ ಲತ್ತ್‌ದ್ ಕೋಡಿ ಲೆಖ್ಖೊಕ್ಕು ಗೆತ್ತೊಣ್ಣ ಲೆಕ್ಕ ತೀರ್ಸಾ ಪೊಡು. ಯೆಂಕುಳಿಗೆ ಕೊರ್ಪಿ ಸೈನ್ ಕೊರೊಡು ಅಂದ್‌ದ್ ಪಣ್ಣಗ, ಆ ಬಲ್ಲಾಳ್ ಕ್ಷಣೊಟು ಲೆಕ್ಕದ ಕೋಲುಗೆತ್ತ್‌ದ್, ಪೂತ ಪಲಾಯಿಳೆನ್ ಅತ್ತ್‌ದ್ ಕೋಡಿ ಕೋಡಿ ಲೆಕ್ಕ ಮಳ್ತ್‌ದ್, ಈತ್ ಕೋಡಿಗ್ ಈತ್ ಈತ್ ವರನ್ ಅಂಡೆ ಅಂದ್‌ದ್ ಲೆಕ್ಕ ಪ್ರಕಾರ ಕೊರುಡು, ಅಕುಳೆಗ್ ಉಡಿಗೆರಲಾ ಕೊರುದು ಕಡಪುಡ್ದ' (ಅಯ್ಯಾ ಬಲ್ಲಾಳರೇ, ನಿಮ್ಮ ಮರಗಳಲ್ಲಿ ನಾವು ಅಂಗೈಯಷ್ಟು ಮರವನ್ನು ಹಾಳುಮಾಡದೆ ಸರಿಯಾಗಿ ಸ್ವಲ್ಪವೂ ಓರೆಕೋರೆಯಾಗದಂತೆ ಲೆಕ್ಕವನ್ನು ಸ್ವಚ್ಛಮಾಡಿ ಮರವನ್ನು ಸಿಗಿದು ಕೊಟ್ಟೆವು ನಿಮ್ಮ ಜನಗಳು ಈಗ ಈ ಮರವನ್ನು ಅಳೆದು 'ಕೋಡಿ' ಲೆಕ್ಕವನ್ನು ಮಾಡಿ ಲೆಕ್ಕವನ್ನು ತೀರಿಸಬೇಕು. ನಮಗೆ ಕೊಡುವುದನ್ನು ಕೊಡಬೇಕು ಎಂದು ಕೇಳಿದಾಗ, ಬಲ್ಲಾಳನು ಲೆಕ್ಕದ ಕೋಲನ್ನು ತೆಗೆದು, ಎಲ್ಲಾ ಹಲಗೆಗಳನ್ನು ಅಳೆದು ಕೋಡಿ ಕೋಡಿ ಲೆಕ್ಕ ಮಾಡಿ. ಇಷ್ಟು ಕೋಡಿಗೆ ಇಷ್ಟು ವರಹ ಎಂದು ಲೆಕ್ಕ ಮಾಡಿ ಹಣವನ್ನು ಕೊಟ್ಟು, ಅವರಿಗೆ ಉಡುಗೊರೆ ಕೊಟ್ಟು ಕಳುಹಿಸಿದನು.)

## ಹಡಗಿಗೆ ಮರವನ್ನು ಕಡಿಯುವಾಗಲಿನ ಪದ್ಧತಿಗಳು, ಆಚರಣೆಗಳು

'ಬೊಬ್ಬರ್ಯ' ಪಾಡ್ದನದಲ್ಲಿ ಹಡಗಿಗೆ ಮರ ಕಡಿಯುವಾಗ ಬ್ರಹ್ಮರಿಗೆ ಕೊಡುವ ಹರಕೆಯ ವಿಚಾರ ಇದೆ—'ಅಂಚಾಂಡ ಬಂಗಾರ್ದ ಕೋಕಾಯಿ ಮುತ್ತ್‌ದರೆಂಕೆ, ಬೊಳ್ಳಿದ ಕಾರ್ ಕೊರಿಯೆರ್, ಬೆರ್ಮೆರೆಗ್ ಗುಂಡ ಕಟ್ಟಾಯೆರ್' (ಬ್ರಹ್ಮರಿಗೆ ಚಿನ್ನದ ಕೊಕ್ಕು, ಮುತ್ತಿನ ರೆಕ್ಕೆ, ಬೆಳ್ಳಿಯ ಕಾಲು ಕೊಟ್ಟರು. ಅವರಿಗೆ ಗುಂಡ ಕಟ್ಟಿಸಿದರು.)

ಹಡಗಿಗೆ ಮರ ಕಡಿಯುವಾಗ ಮಾಡುವ ಆಚರಣೆಯ ಸ್ವರೂಪವು ಬೊಬ್ಬರ್ಯ ಪಾಡ್ದನದಲ್ಲಿ ಸಿಗುತ್ತದೆ —"ಮಲೆನಾಡ ಆಚಾರಿನ ಲೆಪ್ಪಾಯೆರ್. ಕಳವೆ ಕಡಿಲರಿ, ತುಂಬೆ ಸಾಳಿಪೂ ಮುತ್ತಾರ್ ಪತ್ತ್ಯೆರ್, ಮೂಜಿ ಸೇಸೆ ಪಾರಾಯೆರ್, ಆನೆ ಬರಕಂದ ಮರಕ್ಕ್ ಕುದುರೆ ಬರಕಂದ ಗಡಿ ಪಾರಾಯೆರ್ ಮರ ಬೂರ್ಪಾಯೆರ್." (ಮಲೆನಾಡ ಬಡಗಿಯನ್ನು ಕರೆಸಿದರು. ಕಳವೆಯ ಅಕ್ಕಿ ತುಂಬೆ ಹೂ ಮುಂತಾದ ಸಾಮಗ್ರಿಗಳನ್ನು ಹಿಡಿದರು, ಮೂರು ಬಾರಿ ಅಕ್ಷತೆಯನ್ನು ಹಾರಿಸಿದರು. ಆನೆಯಂತಹ ಮರಕ್ಕೆ ಕುದುರೆಯಂತಹ ಪೆಟ್ಟು ಹಾಕಿದರು. ಮರವನ್ನು ಬೀಳಿಸಿದರು).

## ಮಾದಕ ದ್ರವ್ಯಗಳು

ಕಳ್ಳು ಕುಡಿಯುವುದು ತುಳುನಾಡಿನಲ್ಲಿ ಬಹಳ ಸಾಮಾನ್ಯವಾದ ವಿಚಾರ. ಅದನ್ನು ಮಾದಕ ಪಾನೀಯ ಎನ್ನುವ ವರ್ಗಕ್ಕೆ ಸೇರಿಸದಷ್ಟು ಮಟ್ಟಿಗೆ ಅದು ಇಲ್ಲಿ ಜನಪ್ರಿಯವಾಗಿದೆ. ಪಾಡ್ದನಗಳಲ್ಲಿ ಕಳ್ಳು ತೆಗೆಯುವ ಮತ್ತು ಕಳ್ಳು ಕುಡಿಯುವ ವಿಚಾರ ಬರುತ್ತದೆ.

"ಕೋಟಿ ಚೆನ್ನಯ" ಪಾಡ್ದನದಲ್ಲಿ ಪಂಜದ ಬಲ್ಲಾಳನನ್ನು ಟೀಕಿಸುವಾಗ ಬರುವ ಮಾತು—"ಅಪೀಮು ತಿನ್ಪಿ ಬಲ್ಲಾಳ್ಗ್, ಬಂಗೀ ಮುಕ್ಕಿಲೆ ಬಲ್ಲಾಳಾರ್". (ಅವರು ಆಪೀಮು ತಿನ್ನುವ ಬಲ್ಲಾಳ, ಅವರು ಭಂಗಿ ಮುಕ್ಕುವ ಬಲ್ಲಾಳ) ಅಂದರೆ ಅಪೀಮು ಮತ್ತು ಭಂಗಿಗಳಂತಹ ಮಾದಕ ದ್ರವ್ಯಗಳ ಸೇವನೆ. ತುಳುನಾಡಿನಲ್ಲಿ ಇತ್ತು ಎನ್ನುವುದು ಗೊತ್ತಾಗುತ್ತದೆ.

## ಭೂತಾರಾಧನೆಗೆ ಸಂಬಂಧಿಸಿದ ನಂಬಿಕೆಗಳು, ಆಚರಣೆಗಳು

ಪಾಡ್ದನಗಳು ಪ್ರಧಾನವಾಗಿ ಭೂತಾರಾಧನೆಗೆ ಸಂಬಂಧಿಸಿದ ಕತೆಗಳಾದ್ದರಿಂದ ಸಹಜವಾಗಿ ಆ ಸಂಸ್ಕೃತಿಗೆ ಸಂಬಂಧಿಸಿದ ನಂಬಿಕೆಗಳು, ಪದ್ಧತಿಗಳು, ಆಚರಣೆಗಳು ಇಂತಹ ಪಾಡ್ದನಗಳಲ್ಲಿ ಹೆಚ್ಚಾಗಿ ದೊರೆಯುತ್ತವೆ. ಭೂತದ ಉಪದ್ರಕ್ಕಾಗಿ ಭೂತಗಳ ಬಗ್ಗೆ ನಿಮಿತ್ತ ಅಥವಾ ಬಲ್ಮೆ ಕೇಳುವುದು ತಮ್ಮ ಇಷ್ಟಾರ್ಥ ಕೈಗೂಡು ವುದಕ್ಕಾಗಿ ಭೂತಕ್ಕೆ ಹರಕೆ ಹೇಳುವುದು, ಭೂತಕ್ಕೆ ಸ್ಥಾನ ಮತ್ತು ಆಭರಣ ಮಾಡುವ ವಿಧಾನ, ಭೂತದ ಆರಾಧನೆಯಲ್ಲಿ ಅರ್ಪಣೆಯ ವಿಧಾನ, ಭೂತ ಹಿಡಿದದ್ದನ್ನು ಬಿಡಿಸುವ ವಿಧಾನ. ಭೂತವನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಕೊಂಡು ಹೋಗುವ ವಿಧಾನ, ಭೂತದ ಮಾಡದಲ್ಲಿ ಒಕ್ಕಲಾಗುವ ವಿಧಾನ, ಭೂತದ ಹೆಸರಿನಲ್ಲಿ ಸಸ್ಯಗಳಿಗೆ ಕೊಡಿ ಕಟ್ಟುವ ವಿಧಾನ—ಇಂತಹ ಹತ್ತು ಹಲವು ಸಂಗತಿಗಳು ಪಾಡ್ದನಗಳಲ್ಲಿ ವಿವರ ವಾಗಿ ಸಿಗುತ್ತವೆ. ಅವುಗಳನ್ನು ಸಂಕ್ಷಿಪ್ತವಾಗಿ ಮುಂದೆ ಗಮನಿಸಬಹುದು.

## ಭೂತಗಳ ಉಪದ್ರಕ್ಕೆ ಬಲಿಮೆಯಲ್ಲಿ ಕೇಳುವುದು ಅಥವಾ ನಿಮಿತ್ತ ಕೇಳುವುದು

ಯಾವುದಾದರೂ ಒಂದು ಕಡೆಯಲ್ಲಿ ಒಬ್ಬ ವ್ಯಕ್ತಿಗೋ ಅಥವಾ ಪ್ರಾಣಿಗಳಿಗೋ ಪೈರುಗಳಿಗೋ ಹಾನಿಯಾದರೆ ಆ ಬಗ್ಗೆ ಬಲಿಮೆ ನೋಡುವ ಬ್ರಾಹ್ಮಣರಲ್ಲಿ ವಿಚಾರಿಸುತ್ತಾರೆ. ಈ ಪ್ರಶ್ನೆ ಹೇಳುವ ಅಥವಾ ನಿಮಿತ್ತ ಹೇಳುವ ಅಥವಾ ಹೇಳುವಬಲಿಮೆ ಬ್ರಾಹ್ಮಣರು ತಮ್ಮ ವಿದ್ಯೆಯ ಮೂಲಕ ಅದು ಭೂತದ ಉಪದ್ರ ಎಂದು ತಿಳಿಸುತ್ತಾರೆ. ಪಂಜುರ್ಲಿ, ಸಾರಾಲ ಜುಮಾದಿ ಮುಂತಾದ ಅನೇಕ ಪಾಡ್ದನಗಳಲ್ಲಿ ಈ ರೀತಿ ಬಲ್ಮೆ ನೋಡುವ ಅಥವಾ ಪ್ರಶ್ನೆ ಕೇಳುವ ಕ್ರಮವನ್ನು ನೋಡಬಹುದು.

## ಭೂತಗಳಿಗೆ ಹರಕೆ ಹೇಳುವುದು

ತಮ್ಮ ಇಷ್ಟಾರ್ಥ ಕೈಗೂಡುವುದಕ್ಕಾಗಿ ಭೂತಕ್ಕೆ ಹರಕೆ ಹೇಳುವ ಕ್ರಮವು ಅನೇಕ ಪಾಡ್ದನಗಳಲ್ಲಿ ಸಿಗು ತ್ತದೆ, ಪಂಜುರ್ಲಿಯ ಒಂದು ಪಾಡ್ದನದಲ್ಲಿ ಕಲ್ಯಬೀಡಿನಲ್ಲಿ ಭೂತಕ್ಕೆ ನೇಮ ಕೊಡುತ್ತೇವೆ ಎಂದು ಹರಕೆ ಹೇಳುವ ಸಂದರ್ಭ ಬರುತ್ತದೆ.

## ಭೂತಕ್ಕೆ ಸ್ಥಾನ ಮತ್ತು ನಗ ಮಡುವ ವಿಧಾನ

ಪಂಜುರ್ಲಿಯ ಒಂದು ಪಾಡ್ದನದಲ್ಲಿ ಆ ಭೂತಕ್ಕೆ ಸ್ಥಾನವನ್ನು ಮತ್ತು ನಗವನ್ನು ಮಾಡುವ ವಿಚಾರ ವಾಗಿ ಕಾಣಿಸಿಕೊಂಡಿದೆ. ಆ ಭೂತಸ್ಥಾನದ ಒಕ್ಕಲಿಗೆ ಬೇಕಾದ ಸಾಮಗ್ರಿಗಳ ಪಟ್ಟಿಯನ್ನು ಒಂದು ಕಡೆ ಈ ರೀತಿ ಕೊಡುತ್ತಾರೆ—"ಪದ್‌ರಾಡ' ಸ್ವಸ್ತಿಗಗೆ ಪದ್‌ರಾಡ್ ಬಳ್ಳ ಅರಿ, ಪದಂರಾಡ್ ಸೂಡಿ ಬಚ್ಚಿರೆ, ನಲ್ಪತ್ತೆಣ್ಮ ಬಚ್ಚೆಯಿ, ಪದ್‌ರಾಡ್ ಪಾಳೆ ಪಿಂಗಾರ, ನಾಲ್ಪತ್ತೆಣ್ಮ ಬನ್ನಣಿಗೆ, ವೆಲತ್ತ ಕಣಕ್ಕ್ ಒಂಜಿ ಕಟ್ಟ, ಸೊಣ್ಪತ್ತಾಜಿ ಬೊಂಡ, ಸೊಣ್ಮತ್ತಾಜಿ ತಾರಾಯಿ, ನಾಲ್ಪತ್ತೆಣ್ಮ ಮುದ್ರೆಗ್, ನಾಲ್ಪತ್ತೆಣ್ಮ ಬಳ್ಳ ಅರಿ, ನಾಲ್ಪತ್ತೆಣ್ಮ ಬಳ್ಳ

ವಬಿಲ್, ನಾಲ್ಪತ್ರೆಣ್ಮ ಬಳ್ಳ ಪೊದ್ದೊಲು, ಸೊಣ್ಬತ್ತಾಜಿ ಸೇರ್ ಬೆಲ್ಲ, ಪದ್ರ್‌ಡ್ ಗೋಂಟು ತಾರಾಯಿ, ನೂದು ಬಾರೆದ ಇರೆ, ನೂದು ಬಾರೆದ ಪುರ್ದ್, ಪದ್‌ರಾಡ್ ರಂಕನೆಯಿ, ನಾಲ್ಪತ್ರೆಣ್ಮ ರಂಕ ಎಣ್ಣೆ, ಮೂಜಿ ಸೇರ್ ಬೊಳ್ಮ ನೆಯಿ, ಭೂತದ ಮಾನ್ಯೆ ಎಡ್ಡೆಂತಿನಾಯನ್ ಒರಿಯ ನ್ ಏರೆನ ಅಂಡ್ಲಾ ಮಳ್ಪೊಡು. ಸಯಿ, ಈತ್ ಸಣ್ಣಯೊಳು ಅವಡ್." (ಹನ್ನೆರಡು ಸ್ಪಸ್ತಿಗೆಗೆ ಹನ್ನೆರಡು ಬಳ್ಳ ಅಕ್ಕಿ. ಹನ್ನೆರಡು ಕಟ್ಟು ವೀಳ್ಯದೆಲೆ, ನಲ್ವತ್ತೆಂಟು ಅಡಕೆ, ಹನ್ನೆರಡು ಹಾಳೆ ಸಿಂಗಾರ (ಅಡಕೆ ಹೂ), ನಲ್ವತ್ತೆಂಟು ಜಾತಿಯ ಪಾಚಿಗಿಡಗಳು, ಒಂದು ಹೊರೆ ಹಲಸಿನ ಕಟ್ಟಿಗೆ. ತೊಂಬತ್ತಾರು ಎಳನೀರು. ತೊಂಬತ್ತಾರು ತೆಂಗಿನಕಾಯಿಗಳು, ನಲವತ್ತೆಂಟು ಮುದ್ರೆಗೆ ನಲವತ್ತೆಂಟು ಬಳ್ಳ ಅಕ್ಕಿ, ನಲ್ವತ್ತೆಂಟು ಬಳ್ಳ ಅವಲಕ್ಕಿ. ನಲ್ವತ್ತೆಂಟು ಬಳ್ಳಿ ಅರಳು, ತೊಂಬತ್ತಾರು ಸೇರು ಬೆಲ್ಲ. ಹನ್ನೆರಡು ಒಣ ಕೊಬ್ಬರಿ, ನೂರು ಬಾಳೆ ಎಲೆಯ ತುಂಡುಗಳು, ನೂರು ಬಾಳೆ ಹಣ್ಣುಗಳು, ಹನ್ನೆರಡು ಸೇರು ತುಪ್ಪ, ನಲ್ವತ್ತೆಂಟು ಸೇರು ಎಣ್ಣೆ. ಮೂರು ಸೇರು ಬೆಣ್ಣೆ. ಭೂತದ ಪಾತ್ರಿಯೊಬ್ಬನು ಒಳ್ಳೆಯವನನ್ನು ಯಾರಾನ್ನಾದರೂ ಮಾಡಬೇಕು—ಇಷ್ಟು ಸಿದ್ಧತೆಗಳು ಆಗಬೇಕು),

**ಭೂತವನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ತರುವ ವಿಧಾನ**

'ಪಿಲಿ ಚಾಮುಂಡಿ' ಪಾಡ್ದನದಲ್ಲಿ ಬಾಲೊಲಿಯವರು ಮಂಜು ಪೂಂಜನಿಗೆ ಪಿಲಿ ಚಾಮುಂಡಿ ಭೂತವನ್ನು ಕೊಡುತ್ತಾರೆ. ಅವರು ಪಂಚೋಳಿ ವೀಳ್ಯದೆಲೆಯನ್ನು ತರಿಸಿ ಅದರಲ್ಲಿ ಭೂತದ ಪ್ರತಿರೂಪವನ್ನು ಬರೆಸಿ ಪೂಂಜು ಪೂಂಜನ ಕೈಗಿತ್ತರು.

'ಪೊಸ ಭೂತ' (ಕಲ್ಕುಡ) ಪಾಡ್ದನದಲ್ಲಿ ಭೂತವನ್ನು ತರುವ ವಿಧಾನವನ್ನು ವಿವರವಾಗಿ ಹೇಳಲಾಗಿದೆ. ಇಲ್ಲಿ ಕಾಂತು ಮುಗುಲ್ಯನು ಭೂತವನ್ನು ತರುತ್ತಾನೆ—'ಬರ್ಕೆಗ್ ಅಪಿ ದೈವಕೊಂಡು ಬರೊಡು ಅಂದ್‌ದ್ ಗುರಿಕ್ ಮೇಲಾಯಿ ಕೇಸೆ ಕೆರೆಂಗ್, ಪಿತ್ತಲೆಗ್ ಮೇಲಾಯಿ ಪೊಬಾಲೆ ಕೈಲ್, ನಾಲ್ ಇಲ್ಲ್‌ಸರಕ್, ಪತ್ತಿಲ್ಲ ಸರಕ್. ಕಲ್ಲೆಂಜಿ ಬಟ್ಟೆರೆಗ್ ಸರಕ್ ಕಟ್ಟಾನೆ. ಪುದೆ ಕಟ್ಟಾದೆ ಕಾಂತು ಮುಗುಲ್ಯೆ, ಪೊಸ ಭೂತ ಕೊಂಪಾರೆ ಗಾದ್ ದುಂಬುಡುದು ಸರಕ್ ಪಿರುವುಡು ಸರಕ್ ತಾನ್ ಕಾಂತು ಮುಗುಲ್ಯೆ' (ಬಾಳಿಕೆಗೆ ಆಗುವ ದೈವವನ್ನು ತೆಗೆದುಕೊಂಡು ಬರಬೇಕು ಎಂದು ಕೇಸೆ, ಗೆಣಸು, ಹೂಬಾಳೆ ಗೊನೆ, ನಾಲ್ಕು ಮನೆಯ ಸರಕು, ಹತ್ತು ಮನೆಯ ಸರಕನ್ನು ಕಲೆಂಜಿ ಭಟ್ಟರಿಗಾಗಿ ಕಟ್ಟಿಸಿದ್ದಾನೆ. ಕಾಂತು ಮುಗುಲ್ಯನು ಈ ಹೊರೆಯನ್ನು ಕಟ್ಟಿಸಿ ಹೊಸ ಭೂತವನ್ನು ತರುವುದಕ್ಕೆ ಎಂದು ಮುಂದಿನಿಂದಲೂ ಸರಕು, ಹಿಂದಿನಿಂದಲೂ ಸರಕು ಮಧ್ಯೆ ತಾನು ಇದ್ದು ಭಟ್ಟರಲ್ಲಿಗೆ ಬಂದನು). 'ದೈವಕೊಂಡು ಪೊವೇರೆ ನಿರ್ದ ದಾನೆಂದೆ ಕಾಂತು ಮುಗುಲ್ಯೆ. ಪಾಲೆ ಪಂಜೊಲಿ, ಕುಕ್ಕು ಮುಂಡೋಳಿ, ಪೇರುಲ್ಲಾ ಅಡಕ್ಯಾಯಿ ಕಲ್ಲ್ ಸುಣ್ಣ, ಒಕ್ಕೊಂಡೆ ಪೂ, ಕಬೆತ್ತಿ ಪೆತ್ತದ ಪೇರ್, ಒರ್ಲ ಬೊಳ್ಯಂತರಿ ಅವೊಡುಂದೆ ದೈವಪತ್ತೆದ್ ಅಟ್ಟುನಿ ಎಂಚಾಂದೆ. ಬಜಾಣಿಪುನಿ ಎಂಚಾಂದೆ. ವಡ್ಯೋಳ ಮುಡಿ ಪಿಂಗಾರದ ಪುರ್ಪೊ ಅಪೊಂಡುಂದೆ' (ದೈವವನ್ನು ಕೊಂಡು ಹೋಗಲು ಸಾಮಗ್ರಿ ಏನು ಎಂದು ಕೇಳಿದನು ಕಾಂತು ಮುಗುಲ್ಯ. ಪಾಳೆ ಮರಕ್ಕೆ ಹಬ್ಬಿದ ಪಂಜೋಳಿ ವೀಳ್ಯದೆಲೆಯ ಬಳ್ಳಿ, ಮಾವಿನ ಮರಕ್ಕೆ ಹಬ್ಬಿದ ಮುಂಡೋಳಿ ವೀಳ್ಯದೆಲೆ ಬಳ್ಳಿ, ಅಡಕೆ, ಕಲ್ಲುಸುಣ್ಣ, ಒಂದು ಕುಡ್ತೆ ಹೂ, ಕಪಿಲೆ ದನದ ಹಾಲು, ಒಂದು ಬಳ್ಳ ಬೆಳ್ತಿಗೆ ಅಕ್ಕಿ ಆಗಬೇಕು ಎಂದರು. ದೈವವನ್ನು ಹಿಡಿದು ಅಟ್ಟುವುದು ಹೇಗೆ ಎಂದನು. ಮಡಿವಾಳ ಮಡಿ, ಸಿಂಗಾರದ ಹೂ ಆಗಬೇಕು ಎಂದರು).

**ಭೂತದ ಮಾಡದಲ್ಲಿ ಒಕ್ಕಲಾಗುವ ವಿಧಾನ**

'ಪೊಸ ಭೂತ' ಪಾಡ್ದನದಲ್ಲಿ ಭೂತದ ಮಾಡದಲ್ಲಿ ಭೂತ ಒಕ್ಕಲಾಗುವ ರೀತಿಯನ್ನು ಈ ರೀತಿ ಹೇಳಿದ್ದಾರೆ—ಮಾಡೊಡು ಒಕ್ಕೆಚಾವರೆ ಮಡ್ಯೊಳ್ತಿ ಅಬ್ಬಗ ಮಡಿ ಕೊಂಡು ಬರೊಡು, ಕಳಸಕೊಂಡು ಒಪಾತ್ರಿ

ಬಬ್ಬು ಕಳಸ ಕಟ್ಯೆರೆ, ಸುದ್ಧ ಮಳ್ಪೆರೆ ಬ್ರಾಣೆರೆ ಕಿನ್ನಮಾನಿ ಬರೊಡು ಅಂದೆರ್ .... (ಮಾಡದಲ್ಲಿ ಭೂತವು ಒಕ್ಕಲಾಗುವುದಕ್ಕೆ ಮಡಿವಾಳಗಿತ್ತಿ ಅಬ್ಬಗ, ಮಡಿ ತೆಗೆದುಕೊಂಡು ಬರಬೇಕು. ಕುಂಬಾರಗಿತ್ತಿ ಬಬ್ಬು ಕಳಸ ತೆಗೆದುಕೊಂಡು ಕಳಸ ಕಟ್ಟಲು ಬರಬೇಕು, ಶುದ್ಧ ಮಾಡಲು ಬ್ರಾಹ್ಮಣರ ಚಿಕ್ಕವಟು ಬರಬೇಕು ಎಂದು ಹೇಳಿದರು).

**ಭೂತಾರಾಧನೆಯಲ್ಲಿ ಅರ್ಪಣೆಯ ಒಂದು ವಿಧಾನ**

'ಓಡಿಲ್ತಾಯ' ಪಾಡ್ದನದಲ್ಲಿ ಭೂತದ ಅರ್ಪಣೆಯ ಒಂದು ವಿಧಾನವನ್ನು ಕಾಣಬಹುದು. ಸ್ಥಾನವನ್ನು ಕಟ್ಟಿಸಿ ಆದ ಮೇಲೆ ಒಂದು ಸಾವಿರ ಸೇರು ಅಕ್ಕಿಯ ಹುಡಿಯನ್ನು ಚೆಲ್ಲುತ್ತಾರೆ. ಸ್ಥಾನದ ದಕ್ಷಿಣ ಭಾಗದಲ್ಲಿ ಒಂದು ಬಾಳೆಯ ಗಿಡವನ್ನು ನೆಡುತ್ತಾರೆ. ಸಾವಿರ ಜನರಿಗೆ ಊಟ ಕೊಡುತ್ತಾರೆ. ಉತ್ತರ ಭಾಗದಲ್ಲಿ ಒಂದು ಅಡಿಕೆ ಮರವನ್ನು ನೆಡುತ್ತಾರೆ. ಅಡಿಕೆ ಮರದ ಒಂದು ಸಾವಿರ ದೀವಟಿಗೆಗಳಿಂದ ಔತಣವನ್ನು ನಡೆಸುತ್ತಾರೆ. ಕುರಿಗಳನ್ನು ಕೊಂದು ತಟ್ಟೆಯಲ್ಲಿ ಇಡುತ್ತಾರೆ. ಎಳನೀರನ್ನು ಅರ್ಪಿಸುತ್ತಾರೆ. ಕೋಳಿ ಗಳನ್ನು ಕೊಂದು ರಾಶಿ ಹಾಕುತ್ತಾರೆ. ಈ ರೀತಿ ಭೂತಕ್ಕೆ ತೃಪ್ತಿ ಆಗುವಷ್ಟು ಅರ್ಪಣೆ ಕೊಡುತ್ತಾರೆ.

**ಭೂತವು ಅಭಯಕೊಡುವಾಗ**

ಭೂತವು ಅಭಯ ಕೊಡುವಾಗ "ಶಿಂಗಾರದ ಪುರ್ಪಲ, ಪೂತ ಚೆಂಡೊ ಪದ್ಮ ಶೆಟ್ಟೆಯಾಲೆಗ್ ಕೊರಿ ಯೆರ್" (ಸಿಂಗಾರದ – ಅಡಕೆ ಹೂ – ಹೂವನ್ನು ಹೂವಿನ ಚೆಂಡನ್ನು, ಪದ್ಮ ಶೆಟ್ಟಿಯವರಿಗೆ ಕೊಟ್ಟರು). 'ಅತ್ತಾವರ ದೈಯಂಗೊಳು' ಪಾಡ್ದನದಲ್ಲಿ.

**ಭೂತದ ಹೆಸರಿನಲ್ಲಿ ಕೊಡಿ ಕಟ್ಟುವುದು**

ತೆಂಗು ಅಡಿಕೆಯಂತಹ ಮರಗಳಿಗೆ, ತರಕಾರಿ ಗಿಡಗಳಿಗೆ ಭೂತದ ಹೆಸರಿನಲ್ಲಿ 'ಕೊಡಿ' ಕಟ್ಟುವ ವಿಧಾನ ಇಂದಿಗೂ ತುಳುನಾಡಿನ ಹಳ್ಳಿಗಳಲ್ಲಿ ಕಾಣಸಿಗುತ್ತದೆ. ಈ ರೀತಿ 'ಕೊಡಿ' ಕಟ್ಟಿದ ಅಂದರೆ ಭೂತದ ಹೆಸರಿನಲ್ಲಿ ಮಂತ್ರಿಸಿ ಯಾವುದಾದರೊಂದು ಕುರುಹನ್ನು ಉಳ್ಳ ಮರಗಳಿಂದಾಗಲೀ ಅಥವಾ ತರಕಾರಿ ಗಿಡಗಳಿಂದಾಗಲೀ ಉತ್ಪನ್ನಗಳನ್ನು ಕದ್ದರೆ ಅಂತಹವರಿಗೆ ಭೂತವು ಕೆಡುಕನ್ನು ಮಾಡುತ್ತದೆ ಎನ್ನುವ ನಂಬಿಕೆ ಈ ಪದ್ಧತಿಯಲ್ಲಿ ಅಡಕವಾಗಿದೆ. 'ಕರ್ನಗೆ' ಪಾಡ್ದನದಲ್ಲಿ 'ಕೊರತಿ' ಪಾಡ್ದನದಲ್ಲಿ ಈ ರೀತಿ ತರಕಾರಿಗಳಿಗೆ, ಸಸ್ಯಗಳಿಗೆ ಭೂತದ ಹೆಸರಿನಲ್ಲಿ 'ಕೊಡಿ' ಕಟ್ಟುವ ಸಂಗತಿ ಮತ್ತು ವಿಧಾನ ವ್ಯಕ್ತವಾಗುತ್ತದೆ. ಅವುಗಳನು ಉಲ್ಲಂಘಿಸುವುದರಿಂದ ಹಾನಿ ಸಂಭವಿಸುತ್ತದೆ ಎನ್ನುವ ಅಂಶವು ಈ ಕಡೆಗಳಲ್ಲಿ ನಿರೂಪಿತವಾಗಿದೆ,

**ಭೂತ ಬಿಡಿಸುವ ವಿಧಾನ**

ವ್ಯಕ್ತಿಯೊಬ್ಬನ ಮೈಮೇಲೆ ಭೂತ ಬರುತ್ತದೆ. ಆಗ ಅಂತಹ ಭೂತವನ್ನು ಬಿಡಿಸುವುದಕ್ಕೆ ಹಳ್ಳಿಗಳಲ್ಲಿ ಕೆಲವು ವಿಶಿಷ್ಟ ವಿಧಾನಗಳು ಇರುತ್ತವೆ. ಅಂತಹ ಭೂತ ಬಿಡಿಸುವ ಒಂದು ವಿಧಾನವು 'ಕೊರತಿ' ಪಾಡ್ದನ ದಲ್ಲಿ ಕಾಣಿಸುತ್ತದೆ– "ಮುಣ್ಣೆದ ಮುದ್ದೆ ಕಡೆ ಪಾಯೆರ್, ಕಣ್ಣಿಗ್ ತೇತೆರ್, ಮುಣಿಕೆದ ಅಡರ್‌ಡ್ ಕೊರಿ ಯೆರ್, ನೆತ್ತಿಲಾ ಕೊಚ್ಚಿಯೆರ್, ನೆತ್ತೆರ್ ನುಪ್ಪು ತಿನ್ಪಾಯೆರ್, ಬಜಿಕುರೆದ ತಟ್ಟೆ ಕಟ್ಟಾಯೆರ್ ಐಟ್ಟೆ ಜೆಪ್ಪುಡಾ ಯೆರ್, ತಿಹಲೆಗ್ ಗುಂಡು ಕಲ್ ದೀಪಾದೆರ್, ಇಲ್‌ದ ಸುತ್ತ ಸುತ್ತ ಒಯ್‌ಪಾದೆರ್. ಭೂತ ಬಡುವನಾ, ಮಾನ್ಯ ಕೆರುವನ ಎಂದ್ ಕೇಂಡೆರ್ .... (ಮೆಣಸಿನ ಮುದ್ದೆ ಅರೆದರು, ಕಣ್ಣಿಗೆ ಹಾಕಿದರು, ಹುಣಸೆಯ ಬೆತ್ತದಲ್ಲಿ ಹೊಡೆದರು, ನೆತ್ತಿಯನ್ನು ಕೊಚ್ಚಿದರು. ರಕ್ತದ ಅನ್ನವನ್ನು ತಿನ್ನಿಸಿದರು, ತರಗೆಲೆಯ ತಟ್ಟೆ

ಯನ್ನು ಕಟ್ಟಿಸಿರು. ಅದರಲ್ಲಿ ಮಲಗಿಸಿದರು. ಎದೆಯ ಮೇಲೆ ಗುಂಡುಕಲ್ಲು ಇಟ್ಟರು. ಮನೆಯ ಸುತ್ತಲೂ ಎಳೆಸಿದರು. ಭೂತ ಬಿಡುತ್ತೀಯಾ. ಮನುಷ್ಯನನ್ನು ಕೊಲ್ಲುತ್ತೀಯಾ ಎಂದು ಕೇಳಿದರು).

ಇತರ ಕೆಲವು ನಂಬಿಕೆಗಳು, ಪದ್ಧತಿಗಳು

"ಕೋಟಿ – ಚೆನ್ನಯ್ಯ" ಪಾಡ್ದನದಲ್ಲಿ ಕೋಟಿ ಚೆನ್ನಯರು ಪೈಯ್ಯಬೈದ್ಯನಲ್ಲಿ "ಪೇರ್ ಪರಿ ಇಲ್ಲಡೆ ಡ್ದ್ ರ್ ಯೆಂಚರೆ ಅವಂದ್ .... (ಹಾಲು ಕುಡಿದ ಮನೆಗೆ ಎರಡು ಬಗೆಯಬಾರದು) ಎಂದು ಹೇಳುತ್ತಾರೆ. ಜನಪದ ಸಂಪ್ರದಾಯದಲ್ಲಿ ಸಾಮಾನ್ಯವಾಗಿ ಸಾರ್ವತ್ರಿಕವಾಗಿರುವ ಒಂದು ನಂಬಿಕೆ ಇಲ್ಲಿ ಸಿಗುತ್ತದೆ.

"ಕೋಟಿ – ಚೆನ್ನಯ" ಪಾಡ್ದನದಲ್ಲಿ ಕೋಟಿ ಚೆನ್ನಯರು ಮೂಲದ ಮಾನ್ಯರಲ್ಲಿ (ಹೊಲೆಯರಲ್ಲಿ) 'ಕಳಿತ್ತ ಮಂಜ ಮಲ್ಪುಳೆ' (ಕಳ್ಳಿನ ಮಂಜ ಮಾಡಿರಿ) ಎನ್ನುತ್ತಾರೆ. ಇಲ್ಲಿ 'ಮಂಜ" ಎನ್ನುವುದು ಹರಿಜನರಲ್ಲಿ ವಿಶಿಷ್ಟವಾಗಿರುವ, ದನಕರುಗಳ ರೋಗವನ್ನು ನಿವಾರಣೆ ಮಾಡುತ್ತದೆ ಎಂದು ಭಾವಿಸಿರುವ, ಕಳ್ಳು ಬಹಳ ಅಗತ್ಯವಾಗಿರುವ ಒಂದು ಮಾಂತ್ರಿಕ ವಿಧಾನ.

## 9. ಆರ್ಥಿಕ ವ್ಯವಸ್ಥೆ

ತುಳುನಾಡಿನ ಆರ್ಥಿಕ ವ್ಯವಸ್ಥೆಯ ಕೆಲವು ಸಂಗತಿಗಳು ಈಗಾಗಲೇ ನೋಡಿರುವ ವ್ಯಾಪಾರ, ಪದ್ಧತಿಗಳು, ಆಚರಣೆಗಳು, ಬೇಸಾಯ ಮುಂತಾದ ಅಧ್ಯಾಯಗಳಲ್ಲಿ ಬಂದಿವೆ. ಇಲ್ಲಿ ಪ್ರಧಾನವಾಗಿ ಪಾಡ್ದನಗಳಲ್ಲಿ ಕಾಣಿಸುವ ಸುಂಕದ ಪದ್ಧತಿ ಮತ್ತು ನಾಣ್ಯಗಳ ಸ್ವರೂಪವನ್ನು ನೋಡಬಹುದು.

"ಕೋಟಿ ಚೆನ್ನಯ" ಪಾಡ್ದನದಲ್ಲಿ ಸುಂಕದ ಕಟ್ಟೆ ಮತ್ತು ಅಲ್ಲಿಯೇ ಇರುವ ಸುಂಕದ ದೇರೆ–ಈ ವಿಷಯ ಬರುತ್ತದೆ. ಈ ಸುಂಕದ ದೇರೆಯು ಕೋಟಿ–ಚೆನ್ನಯರಲ್ಲಿ ಸುಂಕವನ್ನು ಕೇಳುತ್ತಾನೆ. ಇಲ್ಲಿ ಸುಂಕದ ದೇರೆಯು ಕೋಟಿ – ಚೆನ್ನಯರ ಕತ್ತಿಗೆ ಸುಂಕವನ್ನು ಕೇಳುತ್ತಾನೆ.

ಪಾಡ್ದನಗಳಲ್ಲಿ ಕಾಣಿಸುವ ನಾಣ್ಯಗಳಲ್ಲಿ ಹೆಚ್ಚಾಗಿರುವುದು 'ವರಾನ್' ಅಂದರೆ 'ವರಹ'. ಕೆಲವು ಪಾಡ್ದನಗಳಲ್ಲಿ 'ರೂಪಾಯಿ' ನಾಣ್ಯದ ವಿಚಾರವು ಬರುತ್ತದೆ. ಈ 'ವರಾನ್' ಅಥವಾ 'ವರಹ' ನಾಣ್ಯವು ತುಳುನಾಡಿನಲ್ಲಿ ಬಳಕೆಗೆ ಬಂದಿರುವುದು ವಿಜಯನಗರದ ಅರಸರ ಆಳ್ವಿಕೆಯ ಕಾಲದಲ್ಲಿ ಅಂದರೆ 14ನೇ ಶತಮಾನದಲ್ಲಿ. ರೂಪಾಯಿ ಪ್ರಯೋಗ ಬಂದಿರುವುದು, ಇಂಗ್ಲಿಷರ ಆಳ್ವಿಕೆಯಲ್ಲಿ ಅಂದರೆ 16ನೆಯ ಶತಮಾನದಲ್ಲಿ. ಹೆಚ್ಚಾಗಿ ಎತ್ತಿನ ಅಥವಾ ಕೋಣದ ವ್ಯಾಪಾರ ಮಾಡುವಾಗ 'ಸಾರ ವರಾನ್' (ಸಾವಿರ ವರಹ) ಎಂಬ ಹಣದ ಮೊತ್ತವನ್ನು ಹೇಳಲಾಗಿದೆ. 'ಪಂಜುರ್ಲಿ ಜಾರಂತಾಯ' ಮುಂತಾದ ಪಾಡ್ದನಗಳಲ್ಲಿ ಈ ಮಾತು ಬರುತ್ತದೆ. 'ಬೊಬ್ಬರ್ಯ' ಪಾಡ್ದನದಲ್ಲಿ "ಏಳ್ ಅಚ್ಚಿದ (ಏಳ್ ವರಾನ್‌ದ) ಎರ್ಮೆ ಪಾರೊಳು ಮಾರೊಡು" (ಏಳು ವರಹದ ಎಮ್ಮೆಯನ್ನು ಮಾರಬೇಕು). ಎಂಬ ಮಾತು ಬರುತ್ತದೆ. 'ಬೊಬ್ಬರ್ಯ' ಪಾಡ್ದನದಲ್ಲಿಯೇ ಬ್ರಹ್ಮರಿಗೆ ಅರ್ಪಣೆ ಮಾಡುವಾಗ 'ಕೊಂಡು ಪೋಯಿ 'ವರಾನ್' ಬೊಳ್ಳಿದ ಬಟ್ಟಲ್‌ಡ್ ಕೊರಿಯೆರ್, ವರಾನ್ ತೂದು ಬೆರ್ಮೆರೆಗ್ ಸಿತ್ತ ಸೆಲೆಂಡ್" (ಕೊಂಡುಹೋದ ವರಹವನ್ನು ಬೆಳ್ಳಿಯ ಬಟ್ಟಲಿನಲ್ಲಿ ಕೊಟ್ಟರು. ವರಹವನ್ನು ನೋಡಿ ಬ್ರಹ್ಮರಿಗೆ ಚಿತ್ತ ಶುದ್ಧಿಯಾಯಿತು).

"ಕೋಟಿ – ಚೆನ್ನಯ' ಪಾಡ್ದನದಲ್ಲಿ ಬಡ್ಡಿಯ ವಿಚಾರ ಬರುತ್ತದೆ. ಆದರೆ ಹಣಕ್ಕೆ ಬಡ್ಡಿಯನ್ನು ತೆಗೆದುಕೊಳ್ಳುತ್ತಾ ಇದ್ದ ಪದ್ಧತಿ ಇದಿರಬಹುದು. ಹಾಗೆಯೇ ಅಕ್ಕಿಗೆ ಸಾಲವಾಗಿ ತೆಗೆದುಕೊಂಡದ್ದನ್ನು ಹಿಂದಿರುಗಿಸುವಾಗ ಹೆಚ್ಚು ಕೊಡುವ 'ಪೊಲಿ' ಎನ್ನುವ ಪದ್ಧತಿಯ ಬಗ್ಗೆಯೂ ಅಲ್ಲಿಯೇ ಉಲ್ಲೇಖವಿದೆ. "ಅರಿ 'ಪೊಲಿ' ಪಾಡೊಂದು, ವರಾನ್ ಬಡ್ಡಿಗ್ ಕೊರೊಂದ್, ಸಂತೋಷ್‌ಡ್ ಉಪ್ಪುಲಾ ಅಂದೆರ್ .... (ಅಕ್ಕಿಯನ್ನು 'ಪೊಲಿ'ಗೆ ಕೊಟ್ಟುಕೊಂಡು, ವರಹವನ್ನು ಬಡ್ಡಿಗೆ ಕೊಟ್ಟುಕೊಂಡು ಸಂತೋಷದಲ್ಲಿ ಇರು ಎಂದರು) – ಇದು ಕೋಟಿ – ಚೆನ್ನಯರು ಕಾಯಿ ಮಾರುವ ಕಾಂತಕ್ಕಳಿಗೆ ಹೇಳುವುದು ('ಪೊಲಿ' ಶಬ್ದದ ವಿವರಣೆಯನ್ನು 'ಕಬಿತಗಳು' ಭಾಗದಲ್ಲಿ ಕೊಡಲಾಗಿದೆ).

## 10. ಮನೆ, ಬೀಡುಗಳ ಸ್ವರೂಪ

ತುಳುನಾಡಿನ ಬೇರೆ ಬೇರೆ ಅಂತಸ್ತುಗಳ ಮನೆಗಳ ವಿವರಗಳು ಪಾಡ್ದನದಲ್ಲಿ ಸಿಗುತ್ತವೆ. ಬಲ್ಲಾಳರ ದೊಡ್ಡ ಬೀಡುಗಳನ್ನು ಅರಮನೆಗಳೆಂದು ಕರೆಯುತ್ತಿದ್ದರು. ಕೋಟಿ–ಚೆನ್ನಯ ಮುಂತಾದ ಅನೇಕ ಪಾಡ್ದನಗಳಲ್ಲಿ ಇಂತಹ ಬಲ್ಲಾಳರ ಬೀಡು, ಅವರ ಚಾವಡಿ, ಅವರು ಕುಳಿತುಕೊಳ್ಳುವ ಗದ್ದಿಗೆ ಇವುಗಳ ವಿವರಗಳು ಬರುತ್ತವೆ. ಸಿರಿಯ ಪಾಡ್ದನದಲ್ಲಿ ಬರುವ ವಿವರಗಳ ಪ್ರಕಾರ ಸತ್ಯನಾಪುರದ ಅರಮನೆಯಲ್ಲಿ ಚಿಕ್ಕ ಚಾವಡಿ, ಚಿತ್ರ ಮಂಟಪ, ಗಾಳಿಗೋಪುರ, ಬರಹದ ಸಾಲೆ, 'ಏಳು ಅಂಕಣದ' ಯಮುಗುಂಡ, ತೂಗುಯ್ಯಾಲೆ ಮುಂತಾದವುಗಳು ಇದ್ದುವು.

'ಕೋಟಿ – ಚೆನ್ನಯ' ಪಾಡ್ದನದಲ್ಲಿ ಕೋಟಿ ಚೆನ್ನಯರನ್ನು ಪಂಜದ ಬಲ್ಲಾಳನು ಸೆರೆಯಲ್ಲಿ ಇಡುವ ಸ್ಥಳವಾದ 'ಮಂಡುಮಾಳಿಗೆ'ಯು ಕಲ್ಲಿನಿಂದ ಮಾಡಿದ್ದು. ಹೆಚ್ಚಿನ ಎಲ್ಲಾ ಮನೆಗಳ ಪಕ್ಕದಲ್ಲಿ ವಿಶ್ರಾಂತಿ ತೆಗೆದುಕೊಳ್ಳಲು ಪದ್ಮಕಟ್ಟೆಗಳು ಇದ್ದವು.

'ಕೋಟಿ – ಚೆನ್ನಯ' ಪಾಡ್ದನದಲ್ಲಿ ಬರುವ ಪೈಯ್ಯಬೈದ್ಯನ ಮನೆ ಮಧ್ಯಮವರ್ಗದ ಒಬ್ಬ ವೃತ್ತಿಕಾರನ ಮನೆಯ ಸ್ವರೂಪವನ್ನು ತೋರಿಸುತ್ತದೆ– "ಅಡ್ಡ ಕಟ್ಟಿದ್ ಗುಬ್ಬಿ ತಡಮೆ ಉಂಡು, ಮಾರಿಕಿದ್ ಮಾಳಿಗೆದ ಇಲ್ಲ್, ಗುವೆಲ್‌ಗ್ ಕೂಡಾಪನೆ, ಮನೋಲಿಗ್ ಜೋಡು ದೊಂಪ ಉಂಡು, ಗೆಂದತಾರೆ ಪದ್ಮಕಟ್ಟೆ ಉಂಡು, ಇಲ್ಲ ಎದುರು ಪನಿದೊಂಪ ಉಂಡು" (ಅಡ್ಡಕಟ್ಟಿದ ಮರದ ತಡಮೆ (ದಾಟುವಾಗ ಇರುವಂತಹ ಅಡ್ಡವಾದ ರಚನೆ) ಉಂಟು, ದೊಡ್ಡ ಹಟ್ಟಿ, ಮಾಳಿಗೆಯ ಮನೆ, ಬಾವಿಗೆ ಕೂಡಾ ಏತ, ತೊಂಡೆಕಾಯಿಗೆ ಜೋಡು ಚಪ್ಪರವಿದೆ. ಕೆಂದಾಳೆಯ ಪದ್ಮಕಟ್ಟೆ ಉಂಟು, ಮನೆಯ ಎದುರು ಚಪ್ಪರವಿದೆ).

'ಕೋಟಿ – ಚೆನ್ನಯ' ಪಾಡ್ದನದಲ್ಲ ಎಣ್ಮೂರು ಬೀಡಿನಲ್ಲಿ ಕೋಟಿ–ಚೆನ್ನಯರು ಕುಳಿತುಕೊಳ್ಳಲು ಇರುವ ಸೌಕರ್ಯದ ಬಗೆಗಿನ ಮಾತು. "ಕುಳ್ಳು" ಚಾಜಿರೊಗು ಹೂವಿನ ಸಂತೊಣೊ ಪಾರಾದೆರ್‌ಯೆ, ಪಾರಾಯಿ ಸಕ್ಕಣೊಡು ಎಂಕುಳು ಅಪಗ ಕುಳ್ಳುವಯೆ" (ಕುಳಿತುಕೊಳ್ಳುವ ಚಾಜಿರದಲ್ಲಿ ಹೂವಿನ ಚಾಪೆಯನ್ನು ಹಾಸಿದ್ದಾರೆ. ಅಂತಹ ಚಾಪೆಯಲ್ಲಿ ನಾವು ಕುಳಿತೆವು). ಇಲ್ಲಿ 'ಚಾದರ' ಎಂದರೆ ಮನೆಯ ಎದುರಿನ ಕೋಣೆಯಲ್ಲಿ ಅಂದರೆ ಚಾವಡಿಯಲ್ಲಿ ಕುಳಿತುಕೊಳ್ಳಲು ಇರುವ ನೆಲದಿಂದ ಸ್ವಲ್ಪ ಮೇಲೆ ಎತ್ತರವಾದ ದಿನ್ನೆಯಂತಹ ಸ್ಥಳ. ಇದರ ಮೇಲೆ ಸಾಮಾನ್ಯವಾಗಿ ಮರದ ಹಲಗೆಯನ್ನು ಹಾಸಿರುತ್ತಾರೆ. ಇಂತಹ ಹಲಗೆಗೆ

'ಬಾಜಿರ ಪಲಾಯಿ' ಎನ್ನುತ್ತಾರೆ. ವಿಶೇಷ ಅತಿಥಿಗಳು ಬಂದಾಗ ಈ ಬಾಜಿರ ಹಲಗೆಯ ಮೇಲೆ ವಿಶೇಷವಾದ ವಸ್ತ್ರಗಳನ್ನೋ ಚಾಪೆಗಳನ್ನೋ ಹಾಸುತ್ತಾರೆ.

## 11. ಅರಸು ಮನೆತನಗಳು

ಪಾಡ್ದನಗಳಲ್ಲಿ ಬರುವ ಕೆಲವು ಪಾತ್ರಗಳು ಐತಿಹಾಸಿಕ ವ್ಯಕ್ತಿಗಳು ಆಗಿರುತ್ತಾರೆ. ಕಲ್ಕುಡ–ಕಲ್ಲುರ್ಟಿ ಪಾಡ್ದನದಲ್ಲಿ ಕಾರ್ಕಳದ ಭೈರರಸರು ಮತ್ತು ವೇಣೂರಿನ ಅಜಿಲರು–ಈ ಎರಡು ಜೈನ ಅರಸುಮನೆತನಗಳು ನೇರವಾಗಿ ಭಾಗವಹಿಸುತ್ತವೆ. 'ಜುಮಾದಿ' ಭೂತದ ಒಂದು ಪಾಡ್ದನದಲ್ಲಿ ಅಜಿಲ ಮತ್ತು ಬಂಗರಸರ ಕಾಳಗ ಬರುತ್ತದೆ. ವೇಣೂರಿನ ತಿಮ್ಮಣ್ಣ ಅಜಿಲನ ಸೇನಾಪತಿ ದೇವು ಪೂಂಜ ಮತ್ತು ಬಂಗರಸನ ಸೇನಾಪತಿ ದುಗ್ಗಣ್ಣ ಕೊಂಡೆಯರ ನಡುವಿನ ಯುದ್ಧ ಪಾಡ್ದನದಲ್ಲಿ ಸಿಗುತ್ತದೆ. 'ವಜ್ರಂದಕುಮಾರ' ಪಾಡ್ದನದಲ್ಲಿ ಬಂಗಾಡಿಯ ಬಂಗರು ಮತ್ತು ಚೌಟರಸನ ಪ್ರಸ್ತಾಪವಿದೆ. "ಮಬಡದೇರ್ ಕಾಳಭೈರವೆ" ಪಾಡ್ದನದಲ್ಲಿ ಉಳ್ಳಾಲದ ಚೌಟರ ಪ್ರಸ್ತಾಪವಿದೆ. 'ಕೋಟಿ–ಚೆನ್ನಯ' ಪಾಡ್ದನದಲ್ಲಿ–"ಬಂಗೇರೆ ಬಲ್‌ಸುಂಕೊ, ಮೂಲ್ಯೆರೆ ಮೂಲೆ ಸುಂಕೊ, ಚೌಟರಸೆರೆ ಪಡಿ ದೆತ್ತೊಂದು ಉಪ್ಪುಲ" (ಬಂಗರ ಬಲು ಸುಂಕ, ಮೂಲರ ಮೂಲ ಸುಂಕ, ಚೌಟರಸರ ಪಡಿ ತೆಗೆದುಕೊಂಡು ಇರು). ಇಲ್ಲಿ ತುಳುನಾಡಿನ ಮೂರು ಜೈನ ಅರಸುಮನೆತನಗಳಾದ ಬಂಗರು, ಮೂಲರು ಮತ್ತು ಚೌಟರು–ಇವರ ಹೆಸರುಗಳು ಬರುತ್ತವೆ. ಮೂಲರು ಬೈಲಂಗಡಿಯಲ್ಲಿ ಇದ್ದ ಸಾಮಂತ ಅರಸರು.

ಪಾಡ್ದನಗಳಲ್ಲಿ ಹೆಚ್ಚಾಗಿ ಬರುವ ಅರಸರು ಎಂದರೆ ಬಲ್ಲಾಳರು. ಯಾವುದಾದರೂ ಒಂದು ಬೀಡಿನ ಒಡೆಯರಾಗಿ ಈ ಬಲ್ಲಾಳರು ಕಾಣಿಸಿಕೊಳ್ಳುತ್ತಾರೆ. ಈ ಬಲ್ಲಾಳರೆಲ್ಲ ಜೈನ ಸಾಮಂತ ಅರಸರ ಕೈಕೆಳಗೆ ಒಂದೊಂದು ಬೀಡುಗಳನ್ನು ನೋಡಿಕೊಳ್ಳುತ್ತಿದ್ದ ಒಡೆಯರಾಗಿ ಇದ್ದರು. ಇವರೆಲ್ಲರೂ ಜೈನ ಮನೆತನದವರು. ಇಂತಹ ಅನೇಕ ಬಲ್ಲಾಳರುಗಳ ಉಲ್ಲೇಖ ಅನೇಕ ಪಾಡ್ದನಗಳಲ್ಲಿ ದೊರೆಯುತ್ತದೆ. 'ಕೋಟಿ–ಚೆನ್ನಯ' ಪಾಡ್ದನದಲ್ಲಿ 'ಪೆರ್ಮಲೆ, ಪಂಜ ಮತ್ತು ಎಣ್ಮೂರು ಬೀಡುಗಳ ಬಲ್ಲಾಳರು, 'ಪಂಜುರ್ಲಿಯ' ಒಂದು ಪಾಡ್ದನದಲ್ಲಿ ಮರ್ದಾಳ ಬೀಡಿನ ಬಲ್ಲಾಳ, 'ಮಲಾರ ಪಂಜುರ್ಲಿ' ಪಾಡ್ದನದಲ್ಲಿ ಮಲಾರಿನ ಬಲ್ಲಾಳರು, ಜತ್ತಾಡೆ ಬಾರಿ ಬಲ್ಲಾಳರು, ಚಿಂಗ್ರ, ಕಾವೂರಿ ಬಲ್ಲಾಳರು, ಬಂಡಾಡಿ ಬಲ್ಲಾಳರು, "ಅಂಬಾಡಾಡಿ ಪಂಜುರ್ಲಿ" ಪಾಡ್ದನದಲ್ಲಿ ಕೊಡಾಳ್ವ ಬಲ್ಲಾಳ, 'ಬಾಲೆಕಿನ್ಯಾಮು' ಪಾಡ್ದನದಲ್ಲಿ ಬರುವ ಬಲ್ಲಾಳ–ಈ ರೀತಿ ಅನೇಕ ಬಲ್ಲಾಳರು ಸಿಗುತ್ತಾರೆ.

ಪಾಡ್ದನಗಳಲ್ಲಿ ಸಿಗುವ ಅರಸು ಮನೆತನಗಳಾದ ಬಂಗರು, ಚೌಟರು, ಭೈರರಸರು, ಅಜಿಲರು, ಮೂಲರು ಅಥವಾ ಯಾವುದಾದರೊಂದು ಬೀಡಿನ ಬಲ್ಲಾಳರು-ಇವರೆಲ್ಲರೂ ಜೈನ ಅರಸುಮನೆತನದವರು ಮತ್ತು ತುಳುನಾಡಿನವರೇ ಆಗಿದ್ದು, ಅನೇಕ ಬಾರಿ ಸಾಮಂತರಾಗಿ, ಕೆಲವು ಬಾರಿ ಸ್ವತಂತ್ರರಾಗಿ ತುಳುನಾಡನ್ನು ಆಳಿದವರು ಎಂಬುದು ಗಮನಾರ್ಹ ಸಂಗತಿ.

## 12. ಯುದ್ಧ

ಕೆಲವೊಂದು ಬಾರಿ ಪಾಡ್ದನದಲ್ಲಿ ಯುದ್ಧದ ಪ್ರಸ್ತಾಪಗಳು ಬರುತ್ತವೆ. ಆದರೆ ಯುದ್ಧದ ವಿವರಣೆಗಳು ಹೆಚ್ಚಾಗಿ ಸಿಗುವುದಿಲ್ಲ. 'ಕೋಟಿ-ಚೆನ್ನಯ' ಪಾಡ್ದನದ ಕೊನೆಯಲ್ಲಿ ನಡೆಯುವ ಯುದ್ಧದ ಸಂದರ್ಭದಲ್ಲಿ ಕೆಲವು ಸಂಗತಿಗಳು ತಿಳಿಯುತ್ತವೆ. ಚಕ್ರಬಾಣ, ಕಂಚಿನ ದಿಡುಂಬು, ಪಾರಿಗೆ, ಪಗಾರಿಗೆ ಮುಂತಾದ ಆಯುಧಗಳನ್ನು ಯುದ್ಧದಲ್ಲಿ ಬಳಸುತ್ತಿದ್ದರು ಎಂಬ ವಿಚಾರ ಅಲ್ಲಿ ಬರುತ್ತದೆ. ಯುದ್ಧ ಮಾಡುವ ಆಯುಧಗಳಲ್ಲಿ ಖಡ್ಗ (ಸುರಿಯ) ಪ್ರಧಾನವಾಗಿತ್ತು ಎಂದು ಗೊತ್ತಾಗುತ್ತದೆ. ಯುದ್ಧದ ವಿಚಾರವನ್ನು ತಿಳಿಸುವ ಯುದ್ಧ ಕಹಳೆಯ ಮಾತು ಬರುತ್ತದೆ. ಯುದ್ಧದ ಸ್ಥಳದ ವಿವರಣೆಯನ್ನು ಅಲ್ಲಿ ಕೊಡಲಾಗಿದೆ : "ಏಳ್ ಕಂಡ ಕೊಳಲೊಗು ಚೆನ್ನಯ ಬೈದ್ಯೆಯೆ ಎಲ್ಪ ಕಂಡ ಕೊಳಲೊಗು ಕೋಟಿ ಜತ್ತೆಯೆ, ಏಳ್‌ಕಂಡ ಕೊಳಲೊ ಚೆನ್ನಯೆ ಸಾರಿವೆ" (ಏಳು ಗದ್ದೆಗಳ ವಿಸ್ತಾರದ ರಣರಂಗಕ್ಕೆ ಚೆನ್ನಯನು ಬಂದಿದ್ದಾನೆ. ಎಪ್ಪತ್ತು ಗದ್ದೆಗಳ ವಿಸ್ತಾರದ ರಣರಂಗಕ್ಕೆ ಕೋಟಿಯು ಇಳಿದಿದ್ದಾನೆ. ಏಳು ಗದ್ದೆಯ ರಣರಂಗದ ಯುದ್ಧವನ್ನು ಚೆನ್ನಯನು ಸಾರಿದ್ದಾನೆ). ಈ ಯುದ್ಧ ಏಳು ರಾತ್ರಿ ಎಂಟು ಹಗಲು ನಡೆಯಿತು ಎಂದು ಹೇಳಲಾಗಿದೆ.

ಗರಡಿಗಳಲ್ಲಿ ಯುದ್ಧ ವಿದ್ಯೆಯ ತರಬೇತಿ ಆಗುತ್ತಿತ್ತು ಎನ್ನುವ ಸಂಗತಿಯೂ ಪಾಡ್ದನದಲ್ಲಿ ಇದೆ.

## 13. ಪ್ರಾಣಿಗಳು

ಪಾಡ್ದನಗಳಲ್ಲಿ ಆಗಿನ ಕಾಲದ ತುಳುನಾಡಿನ ಸಾಕುಪ್ರಾಣಿಗಳು ಮತ್ತು ಕಾಡು ಪ್ರಾಣಿಗಳ ವಿವರಗಳು ಸಿಗುತ್ತವೆ. ಅರಸರ ಮತ್ತು ಬಲ್ಲಾಳರ ಅರಮನೆಗಳಲ್ಲಿ ಆನೆಗಳು ಮತ್ತು ಕುದುರೆಗಳು ಇದ್ದುವು ಎನ್ನುವುದು ಅನೇಕ ಪಾಡ್ದನಗಳಲ್ಲಿ ಇದೆ. ಈ ಆನೆಗಳು ಮತ್ತು ಕುದುರೆಗಳು ಅರಸರ ಬಲ್ಲಾಳರ ಸವಾರಿಗೆ ಬಳಕೆಯಾಗುತ್ತಿದ್ದವು. 'ಕೋಟಿ-ಚೆನ್ನಯ' ಪಾಡ್ದನದಲ್ಲಿ ಬಲ್ಲಾಳರ ಪಟ್ಟದ ಆನೆಯ ವಿಚಾರವಿದೆ. ಎಣ್ಮೂರು ಬಲ್ಲಾಳನ ಅಳಿಯ ಕಂಕ್ಕ ಬಲ್ಲಾಳನು ಬೆಳ್ಳಿ ಕುದುರೆಯ ಮೇಲೆ ಕುಳಿತು ಪ್ರಯಾಣ ಮಾಡುತ್ತಾನೆ. "ಮುಡದೇರ್ ಕಾಳ ಭೈರವೆ" ಪಾಡ್ದನದಲ್ಲಿ ಉಳ್ಳಾಲದ ಚೌಟರಲ್ಲಿ ಆನೆಸಾಲೆಯಲ್ಲಿ ಆನೆಗಳನ್ನು ಕಟ್ಟಿ ಸಾಕುತ್ತಾರೆ. ಈ ಆನೆಗಳು ಮತ್ತು ಕುದುರೆಗಳು ಯುದ್ಧದಲ್ಲಿ ಬಳಕೆಯಾಗುತ್ತಿದ್ದವು. ಸಾಮಗ್ರಿಗಳ ಸಾಗಾಣಿಕೆಗೂ ಪ್ರಾಣಿಗಳನ್ನು ಬಳಸುತ್ತಾ ಇದ್ದ ಕ್ರಮವು ಪಾಡ್ದನಗಳಲ್ಲಿ ಸಿಗುತ್ತದೆ. ಆನೆ, ಕುದರೆ, ಎತ್ತು ಮತ್ತು ಒಂಟೆಗಳನ್ನು ಈ ಉದ್ದೇಶಕ್ಕೆ ಬಳಸುತ್ತಿದ್ದರು ಎನ್ನುವುದು ಪಾಡ್ದನಗಳಲ್ಲಿ ಬರುತ್ತದೆ.

ಹೆಚ್ಚಿನ ಪಾಡ್ದನದಲ್ಲಿ ಜಾನುವಾರುಗಳನ್ನು ಸಾಕುವ ಪಶುಪಾಲನೆಯ ವೃತ್ತಿ ನಿರೂಪಿತವಾಗಿದೆ. ಘಟ್ಟದ ಮೇಲಿನಿಂದ ಎತ್ತುಗಳನ್ನು ಅಥವಾ ಕೋಣಗಳನ್ನು ತಂದು ಮಾರಾಟ ಮಾಡುವ ಅಥವಾ ಸಾಕುವ ವಿಷಯ ಅನೇಕ ಪಾಡ್ದನಗಳಲ್ಲಿ ಇದೆ. ಜಾನುವಾರುಗಳನ್ನು ಮೇಯಿಸುವ ಗೋಪಾಲರು, ಮಕ್ಕಳು, 'ಕೋಟಿ-ಚೆನ್ನಯ' ಮತ್ತು 'ಪಂಜುರ್ಲಿ' ಪಾಡ್ದನಗಳಲ್ಲಿ ಬರುತ್ತಾರೆ.

# 14. ಧರ್ಮ

ಪಾಡ್ದನಗಳಲ್ಲಿ ತುಳುನಾಡಿನ ಧರ್ಮದ ಸ್ವರೂಪದ ಬೇರೆ ಬೇರೆ ಮುಖಗಳ ಪರಿಚಯವಾಗುತ್ತದೆ. ತುಳುನಾಡಿನ ಇತಿಹಾಸವನ್ನು ಅಭ್ಯಾಸ ಮಾಡಿದಾಗ ಇಲ್ಲಿ ಹೆಚ್ಚು ಪ್ರಾಚೀನವಾಗಿ ಇದ್ದದ್ದು ಶೈವ ಧರ್ಮ ಎಂದು ತಿಳಿಯುತ್ತದೆ. 12ನೇ ಶತಮಾನದ ಬಳಿಕ ಇಲ್ಲಿ ಜೈನ ಮತ್ತು ವೈಷ್ಣವ ಧರ್ಮಗಳು ಕಾಣಿಸಿಕೊಳ್ಳುತ್ತವೆ. ಆದರೆ ತುಳುನಾಡಿನ ಶಾಸನಗಳಲ್ಲಿ ವಿಶೇಷವಾಗಿ ಸ್ಥಾನವನ್ನೇ ಪಡೆಯದ ಭೂತಾರಾಧನೆಯು ಧರ್ಮ ಪಾಡ್ದನಗಳಲ್ಲಿ ಹಾಸುಹೊಕ್ಕಾಗಿ ಬಂದಿದೆ. ಹೆಚ್ಚಿನ ಪಾಡ್ದನಗಳ ಮೂಲದ್ರವ್ಯವೇ ಭೂತಾರಾಧನೆ. ಆದರೆ ಇಂತಹ ಭೂತಾರಾಧನೆಗಿಂತ ಪೂರ್ವದ, ಭೂತಾರಾಧನೆಗೆ ಮೂಲ ಸ್ವರೂಪದ, ತುಳುನಾಡಿನಲ್ಲಿ ವಿಶಿಷ್ಟವಾದ, ಒಂದು ಧಾರ್ಮಿಕ ಸ್ವರೂಪ ಪಾಡ್ದನಗಳಲ್ಲಿ ಕಾಣಿಸಿಕೊಂಡಿದೆ. ಅದು 'ಬ್ರಹ್ಮರ' ಆರಾಧನೆ. ತುಳುನಾಡಿನ ಕೆಲವೇ ಶಾಸನಗಳಲ್ಲಿ ಈ 'ಬ್ರಹ್ಮ' ದೇವರ ಉಲ್ಲೇಖ ಸಿಗುತ್ತದೆ. 1403ರ ಒಂದು ಶಾಸನದಲ್ಲಿ ಈ ಬ್ರಹ್ಮನ ಉಲ್ಲೇಖ ಮೊತ್ತ ಮೊದಲ ಬಾರಿ ಬರುತ್ತದೆ. ಉಡುಪಿ ತಾಲೂಕಿನ ಪೊಸಳದ ಶಾಸನ (ಕಾಲ-1432)ದಲ್ಲಿ ಬ್ರಹ್ಮನ ಉಲ್ಲೆಖವಿದೆ. ಅಮೇಲೆ 1459ರ 'ಹೆಡಕುದ್ದೇಡಿಯ ಶಾಸನ', 1458ರ ಬಾರಕೂರು ಶಾಸನ, 1482ರ ಉಪ್ಪುಂದದ ಶಾಸನ, 1544ರ 'ಅವಾರ್ಸೆ'ಯ ಶಾಸನಗಳಲ್ಲಿ ಬ್ರಹ್ಮರ ಆರಾಧನೆಯ ಉಲ್ಲೇಖಗಳು ಸಿಗುತ್ತವೆ

ತುಳುನಾಡಿನಲ್ಲಿ ಬ್ರಹ್ಮನ ಆರಾಧನೆಯ ಅನೇಕ ಗುಡಿಗಳು ಸಿಗುತ್ತವೆ. ಇವುಗಳನ್ನು 'ಬ್ರಹ್ಮಸ್ಥಾನ' ಅಥವಾ 'ಬ್ರಹ್ಮ ಆಲಡೆ' ಎಂದು ಕರೆಯುತ್ತಾರೆ. ಇಲ್ಲಿಯ ಬ್ರಹ್ಮನು ಪುರಾಣಗಳ ಬ್ರಹ್ಮನಿಗಿಂತ ಭಿನ್ನ. ತುಳುನಾಡಿನ ಒಂದು ಬ್ರಹ್ಮಸ್ಥಾನದಲ್ಲಿ ಐವರು ದೈವಗಳ ಗುಂಪು ಇದೆ. ಬ್ರಹ್ಮ, ಕ್ಷೇತ್ರಪಾಲ, ರಕ್ತೇಶ್ವರಿ, ನಂದಿಗೋಣ ಮತ್ತು ನಾಗ. ಈ ಗುಂಪಿಗೆ ಬ್ರಹ್ಮನು ಒಡೆಯ. ಈ ಬ್ರಹ್ಮನು ಭೂತಗಳ ಒಡೆಯನೆಂದು ಪಾಡ್ದನಗಳಲ್ಲಿ ಕಾಣಿಸಿಕೊಂಡಿದ್ದಾನೆ. ಅದಕ್ಕಾಗಿ ಇವನನ್ನು 'ಭೂತ ಬ್ರಹ್ಮ' ಎಂದು ಕರೆಯುತ್ತಾರೆ. 'ಕೋಟಿ-ಚೆನ್ನಯರ' ಪಾಡ್ದನದಲ್ಲಿಯೂ ಅವರ ಕುಲದೈವ 'ಕೆಮ್ಮಲೆಯ ಬ್ರಹ್ಮ' ಪಡುಬಿದ್ರೆ, ಕನತ್ತಾರು, ಅನಂತಾಡಿ, ಸಾನಾಡಿ ಮುಂತಾದ ಕಡೆಗಳಲ್ಲಿ ಪ್ರಸಿದ್ಧವಾದ ಬ್ರಹ್ಮಸ್ಥಾನಗಳಿವೆ. ಕೆಲವೊಂದು ಬಾರಿ ದೇವಸ್ಥಾನಗಳ ಪಕ್ಕದಲ್ಲಿಯೇ ಇಂತಹ ಬ್ರಹ್ಮಸ್ಥಾನಗಳನ್ನು ನಿರ್ಮಿಸಲಾಗಿದೆ. ಹೆಚ್ಚಾಗಿ ಶೈವ ದೇವಸ್ಥಾನ ಗಳಿಗೂ ಇಂತಹ ಬ್ರಹ್ಮ ಸ್ಥಾನಗಳಿಗೂ ಹತ್ತಿರದ ಸಂಬಂಧ ಕಾಣಿಸುತ್ತದೆ.

ತುಳುನಾಡಿನ ಈ ಬ್ರಹ್ಮ (ಬೆರ್ಮೆರ್)ನ ಮೂರ್ತಿಯು ಒಂದು ವಿಶಿಷ್ಟ ಸ್ವರೂಪದ್ದು ಆಗಿದೆ. ಕುದುರೆಯ ಮೇಲೆ ಕುಳಿತುಕೊಂಡು ಕೈಯಲ್ಲಿ ಒಂದು ಖಡ್ಗವನ್ನು ಹಿಡಿದುಕೊಂಡ ಒಬ್ಬ ಯೋಧನ ಹಾಗೆ ಈ ಬ್ರಹ್ಮನನ್ನು ಕೆತ್ತಲಾಗಿದೆ. ಜೈನ ಧರ್ಮದವರು ತಮ್ಮ ದೇವರ ಪಟ್ಟಿಯಲ್ಲಿ ಒಬ್ಬ ಬ್ರಹ್ಮನನ್ನು ಸೇರಿಸಿ ದ್ದಾರೆ. ಹನ್ನೆರಡನೇ ಶತಮಾನದ ಬಳಿಕ ತುಳುನಾಡಿನಲ್ಲಿ ಜೈನ ಸಾಮಂತರಸರು ಆಳಲು ತೊಡಗುತ್ತಾರೆ. ಅವರು ವೀರರೂ ಪರಾಕ್ರಮಿಗಳೂ ಆಗಿದ್ದರು. ಈ ದೃಷ್ಟಿಯಿಂದ ಯೋಧ ವೇಷದ ಬ್ರಹ್ಮನ ಮೂರ್ತಿಯು ಜೈನ ಅರಸರ ಪ್ರಭಾವದಿಂದ ತುಳುನಾಡಿನಲ್ಲಿ ಕಾಣಿಸಿಕೊಂಡಿತೇ ಎನ್ನುವ ಊಹೆಯನ್ನು ಮಾಡಬಹುದು. ತುಳು ನಾಡಿನಸಂಸ್ಕೃತಿಯಲ್ಲಿ 'ನಾಗ ಬ್ರಹ್ಮ' ಎನ್ನುವ ಮಾತು ಬರುತ್ತದೆ. ಪಾಡ್ದನಗಳಲ್ಲಿಯೂ ಈ ಮಾತು ಪ್ರಯೋಗವಾಗಿದೆ. ಇಲ್ಲಿ ನಾಗ ಮತ್ತು ಬ್ರಹ್ಮರ ವಿಚಿತ್ರವಾದ ಒಂದು ಸಂಯೋಗವನ್ನು ಕಾಣಬಹುದು. ಇಂತಹ

ನಾಗಬ್ರಹ್ಮನ ಪ್ರತಿಮೆಗಳು ದೊರೆಯುತ್ತವೆ. ಒಂದು ರೀತಿಯ ಪ್ರತಿಮೆಯ ಪ್ರಕಾರ ಕುಳಿತು ಕೊಂಡ ಭಂಗಿಯ ಮನುಷ್ಯನ ಆಕಾರದ ಸುತ್ತ ಸರ್ಪಗಳು ಅರ್ಧವರ್ತುಲಾಕಾರವಾಗಿ ಅಲಂಕಾರವಾಗಿ ಕಾಣಿಸುತ್ತವೆ. ಅದರ ಇನ್ನೊಂದು ರೂಪದ ಪ್ರತಿಮೆಯಲ್ಲಿ ಒಂದು ಕೈಯಲ್ಲಿ ಒಂದು ಕೋಲು ಇದೆ. ಇನ್ನೊಂದು ರೂಪದ ಪ್ರತಿಮೆಯಲ್ಲಿ ಅರ್ಧ ಸರ್ಪ ಅರ್ಧ ಮನುಷ್ಯ ದೇಹದ ಆಕಾರವಿದೆ. ಬ್ರಹ್ಮನ ಬೇರೆ ಬೇರೆ ರೂಪದ ಪ್ರತಿಮೆಗಳು ದೊರೆಯುತ್ತವೆ.

ಪಾಡ್ದನಗಳಲ್ಲಿ ಇಂತಹ ಬ್ರಹ್ಮರ ಶಕ್ತಿ ಮತ್ತು ಆರಾಧನೆಯ ವಿಚಾರ ಬೇರೆ ಬೇರೆ ಸಂದರ್ಭಗಳಲ್ಲಿ ಸಿಗುತ್ತದೆ. "ಕೋಟಿ – ಚೆನ್ನಯ" ಪಾಡ್ದನದಲ್ಲಿ ಕೋಟಿ ಚೆನ್ನಯರು ಪಂಜದ ಸೆರೆಮನೆಯಲ್ಲಿ ಸಿಕ್ಕಿಬಿದ್ದಾಗ ಬ್ರಹ್ಮರನ್ನು ಧ್ಯಾನಿಸಿ ಅಲ್ಲಿಂದ ಪಾರಾಗುತ್ತಾರೆ. ಕೋಟಿ–ಚೆನ್ನಯರು ಪಂಜದಿಂದ ಎಣ್ಮೂರಿಗೆ ಹೋಗು ವಾಗ ಬ್ರಹ್ಮರ ಸ್ಥಾನವನ್ನು ನೋಡಿ ಅಲ್ಲಿಗೆ ಹರಕೆ ಒಪ್ಪಿಸಲು ಹೋಗುತ್ತಾರೆ. ಅಲ್ಲಿನ ಬ್ರಹ್ಮರ ಸ್ವರೂಪ ವನ್ನು ಪಾಡ್ದನದಲ್ಲಿ ಈ ರೀತಿ ಹೇಳಲಾಗಿದೆ : "ಬೊಳ್ಳಿ ಕುದ್ರೆಡ್ ಬೊಳ್ಳಿದ ಸತ್ತಿಗೆ ಪತ್ತೊಂದು ಅರ್ ಪಯಣೊ ಆಯೆರ್‌ಯೇ. ಎಡತ್ತ್ ಎಡಸಾವಿರೊ ಕರ್ನಗೆನೋ, ಬಲತ್ತ್ ಬಲಸಾವಿರೊ ಕರ್ನಗೆನೊಯೇ. ಬಲತ್ತ್ ಬಡೆಟ್ ಬೊಳ್ಳಿಸಂಕ ಮಾಲೇ ಎಡತ್ತೆ ಬಜೆಟ್ಟೆ ಕರ್ಯ ಸಂಕ ಮಾಲೇ. ಒಕ್ಕೊಡು ಒಟಿಂಗಾ ದೇವೆರ್‌ಯೇ. ತರೆಕ್ಕ್ ಚಕ್ರಪಾಣೊ. ಎದೆಟ್ ಬಾಸಿಂಗಾ ದೇವೆರಾರೆಗ್‌ಯೇ" (ಬೆಳ್ಳಿ ಕುದುರೆಯಲ್ಲಿ ಬೆಳ್ಳಿ ಛತ್ರ ಹಿಡಿದುಕೊಂಡು ಅವರು ಪಯಣ ಹೊರಟರು, ಬಲಭುಜದಲ್ಲಿ ಬಿಳಿ ಶಂಖದ ಮಾಲೆಯಿತ್ತು, ಎಡಭುಜ ದಲ್ಲಿ ಕಪ್ಪುಶಂಕದ ಮಾಲೆಯಿತ್ತು. ತಲೆಗೆ ಲೋಹದ ಟೊಪ್ಪಿಗೆಯಿತ್ತು. ಎದೆಯನ್ನು ಗುರಾಣಿ ಮುಚ್ಚಿತ್ತು).

ಇಲ್ಲಿ ಚಿತ್ರಿತವಾಗಿರುವ ಬ್ರಹ್ಮನ ಆಕಾರ ಸಾಮಾನ್ಯವಾಗಿ ಬ್ರಹ್ಮಸ್ಥಾನಗಳಲ್ಲಿ ಕಾಣಸಿಗುವ ಬ್ರಹ್ಮನ ಆಕಾರವನ್ನು ಹೋಲುತ್ತದೆ.

'ಬೊಬ್ಬರ್ಯ' ಪಾಡ್ದನದಲ್ಲಿ ವ್ಯಾಪಾರಕ್ಕಾಗಿ ಹಡಗಿನಲ್ಲಿ ಹೊರಡುವುದಕ್ಕೆ ಮೊದಲು ಬ್ರಹ್ಮನಆರಾಧನೆ ಮಾಡುವುದು ಕಂಡು ಬರುತ್ತದೆ. 'ಬ್ರಹ್ಮನಿಗೆ ಕಾಣಿಕೆ ಕೊಡುವುದು' ಎಂಬ ಮಾತು ಬಂದಾಗ ಬೆಳ್ಳಿಯ ಬಟ್ಟಲಿನಲ್ಲಿ ವರಹವನ್ನು ಕೊಡುವ ಸಂಗತಿಯನ್ನು ಹೇಳಲಾಗಿದೆ. ಹಾಗೆಯೆ ಚಿನ್ನದ ಕೊಕ್ಕು, ಮುತ್ತಿನ ರೆಕ್ಕೆ, ಬೆಳ್ಳಿಯ ಕಾಲನ್ನು ಹರಕೆಯಾಗಿ ಅರ್ಪಿಸುವ ಮತ್ತು ಬ್ರಹ್ಮರಿಗೆ ಗುಂಡ (ಸ್ಥಾನ) ಕಟ್ಟಿಸುವ ಘಟನೆ ಇದೆ.

'ಸಿರಿ'ಯ ಪಾಡ್ದನದಲ್ಲಿ ಬ್ರಹ್ಮನ ಪ್ರಸ್ತಾಪ ಅನೇಕ ಕಡೆ ಬರುತ್ತದೆ. ನಾಗಬ್ರಹ್ಮದೇವನು ಬಿರ್ಮ ಆಳ್ವನಿಗೆ ಕೊಡುವ ಸೂಚನೆಗಳು, ಸೊನ್ನೆ ಗುರುವರ್ಮಾಲರಿಗೆ ಕೊಡುವ ಸೂಚನೆಗಳು ಬಹಳ ಮುಖ್ಯವಾಗಿವೆ. ಬ್ರಹ್ಮನ ಅಲಡೆಯನ್ನು ಮರೆತುದರಿಂದ ನಿಸ್ಸಂತತಿಯಾಗುವುದು. ಅದನ್ನು ಜೀರ್ಣೋದ್ಧಾರ ಮಾಡಿದ ಬಳಿಕ ಸಿರಿ ಹುಟ್ಟುವುದು, ಆ ಪಾಡ್ದನದಲ್ಲಿ ಬಹಳ ಮುಖ್ಯವಾದ ಅಂಶ. ಬ್ರಹ್ಮಸ್ಥಾನದ ಅನೇಕ ಪವಾಡಗಳು ಈ ಪಾಡ್ದನದಲ್ಲಿ ಇವೆ. ಬ್ರಹ್ಮಸ್ಥಾನ ಅಥವಾ ಅಲಡೆಯ ನಿರ್ಮಾಣ, ಅದಕ್ಕಾಗಿ ಬಿರ್ಮಾಳ್ವ ಹನ್ನೆರಡು ಮುಡಿ ಗದ್ದೆ ಉಂಬಳಿ ಬಿಡುವುದು– ಮುಂತಾದ ಸಂಗತಿಗಳು ಬರುತ್ತವೆ.

### ದೇವಸ್ಥಾನಗಳು - ದೈವಸ್ಥಾನಗಳು

ಪಾಡ್ದನಗಳಲ್ಲಿ ತುಳುನಾಡಿನ ಪ್ರಸಿದ್ಧವಾದ ಅನೇಕ ಶೈವ ಮತ್ತು ವೈಷ್ಣವ ದೇವಾಲಯಗಳ ಹೆಸರು ಗಳು ಬರುತ್ತವೆ. ಹಾಗೆಯೇ ಅನೇಕ ಭೂತಗಳ, ಭೂತಸ್ಥಾನಗಳ ಹೆಸರುಗಳು ಬರುತ್ತವೆ, ಹಾಗೆಯೇ

ಅನೇಕ ಭೂತಗಳ, ಭೂತಸ್ಥಾನಗಳ ಹೆಸರುಗಳು ಬರುತ್ತವೆ. ಹೆಚ್ಚಾಗಿ ಇಂತಹ ದೇವಸ್ಥಾನ ಮತ್ತು ಭೂತಸ್ಥಾನಗಳ ಹೆಸರುಗಳು ಪಾಡ್ದನಗಳಲ್ಲಿ ಪುನರಾವರ್ತನೆಯನ್ನು ಪಡೆಯುತ್ತವೆ. ಸಾಂಸ್ಕೃತಿಕವಾಗಿ ಒಂದು ಐತಿಹಾಸಿಕ ನೆಲೆಯಲ್ಲಿ ಇಲ್ಲಿನ ದೇವಸ್ಥಾನಗಳ ಮತ್ತು ಭೂತಸ್ಥಾನಗಳ ಹೆಸರುಗಳ ಉಲ್ಲೇಖಗಳ ದೃಷ್ಟಿಯಿಂದ ಅವುಗಳಲ್ಲಿ ಕೆಲವನ್ನು ಪಟ್ಟಿ ಮಾಡುತ್ತಾ ಹೋಗಬಹುದು.

**ಪಂಜುರ್ಲಿ ಭೂತದ ಬೇರೆಬೇರೆ ಪಾಡ್ದನಗಳು**

ಕುಕ್ಕೆ ಸುಬ್ರಹ್ಮಣ್ಯ ದೇವಸ್ಥಾನ, ಕದ್ರಿ ಮಂಜುನಾಥ ದೇವಸ್ಥಾನ, ಧರ್ಮಸ್ಥಳದ ಮಂಜುನಾಥ ದೇವಸ್ಥಾನ, ಕಾಂತಾವರದ ಕಾಂತೇಶ್ವರ ದೇವಸ್ಥಾನ, ಕಾಪು ಜನಾರ್ಧನ ದೇವಸ್ಥಾನ, ಉದ್ಯಾವರದ ವಿನಾಯಕ ದೇವಸ್ಥಾನ, ಕೇಪಾಡಿ ದೇವಸ್ಥಾನ.

**ಅತ್ತಾವರ ದೈಯುಂಗೊಳು**

ಕುಕ್ಕೆ ಸುಬ್ರಹ್ಮಣ್ಯ ದೇವಸ್ಥಾನ, ಕೊಡಿಪಾಡಿ ದೇವಸ್ಥಾನ.

**ತೋಡಕುಕ್ಕಿನಾರ್**

ಕುಕ್ಕೆ ಸುಬ್ರಾಯ ದೇವಸ್ಥಾನ, ವಿಟ್ಲ ಪಂಚಲಿಂಗೇಶ್ವರ ದೇವಸ್ಥಾನ, ಕಡಂಬಿ ದೇವಸ್ಥಾನ, ಸಾಲೆತ್ತೂರು ದೇವಸ್ಥಾನ, ಕೊಡಿಪಾಡಿ ದೇವಸ್ಥಾನ.

**ಜುಮಾದಿ ಪಾಡ್ದನ**

ಅಮುಣಂಜದ ಆದಿ ಬೊಟ್ಟು ಬ್ರಹ್ಮ, ಪೊಳಲಿಯ ಪರಮೇಶ್ವರಿ ದೇವಸ್ಥಾನ, ಮೊಳೂರಿನ ಮುಂಡಿತ್ತಾಯಸ್ಥಾನ, ಬಲ್ಲಮಲೆಯ ಅಮೃತೇಶ್ವರ ದೇವಸ್ಥಾನ, ಸಂಪಿಂಜೆಯ ಆದಿನಾಥ ದೇವಸ್ಥಾನ.

**ಸಾರಾಲ ಜುಮಾದಿ**

ಸಾರದ ಬೆಳಿಯೂರು ದೇವಸ್ಥಾನ, ಕಂದೆಲ್ ಗುಂಡದ ರಕ್ತೇಶ್ವರಿ ದೇವಸ್ಥಾನ, ಮುಗೇರ್‌ನಾಡ್ ಸೀಮೆಯ ಆರು ದೈವಗಳು, ಇಬ್ಬರು ದೇವರು, ಪಣಂಬೂರಿನ ದೇವಸ್ಥಾನ, ನಂದಾವರದ ದೇವಸ್ಥಾನ, ಪರಂಗಿಪೇಟೆಯ ಪರಮೇಶ್ವರ ದೇವಸ್ಥಾನ.

**ಜಾರಂತಾಯ**

ಕದ್ರಿಯ ಮಂಜುನಾಥ ದೇವಸ್ಥಾನ, ಶರವು ದೇವಸ್ಥಾನ, ಅಳಕೆಯ ಬ್ರಹ್ಮದೇವ.

**ಕಾಂತು ನೆಕ್ರಿ ಭೂತ**

ಕದ್ರಿಯ ಮಂಜುನಾಥ ದೇವಸ್ಥಾನ, ಶರವು ದೇವಸ್ಥಾನ, ಅಳಕೆಯ ದೇವರು.

ಮುಗ್ರುಂದಾಯ

ಪೆರಿಯೋಡಿ ದೇವಸ್ಥಾನ, ವರದೇಶ್ವರ ದೇವಸ್ಥಾನ (ಅಡ್ಯಾರಿನ ಸಮೀಪ), ಕದ್ರಿ ಮಂಜುನಾಥ ದೇವಸ್ಥಾನ, ಮಂಗಳೂರು ಪೇಟೆಯ ಕಾಳಮ್ಮ ದೇವರ ದೇವಸ್ಥಾನ, ಯೆಯ್ಯಾಡಿ ಜಾರಂತಾಯ ಸ್ಥಾನ.

## 15. ಸ್ಥಳಗಳ ಹೆಸರುಗಳು

ಪಾಡ್ದನಗಳಲ್ಲಿ ತುಳುನಾಡಿನ ಬೇರೆ ಬೇರೆ ಸ್ಥಳಗಳ ಹೆಸರುಗಳು ಅಧಿಕಸಂಖ್ಯೆಯಲ್ಲಿ ದೊರೆಯುತ್ತವೆ. ಯಾವುದಾದರೊಂದು ಭೂತದ ಮಹಿಮೆಯನ್ನು ಸಾರುವ ಪ್ರಸರಣದ ಪಾಡ್ದನಗಳಲ್ಲಿ ಸಹಜವಾಗಿಯೇ ಬೇರೆ ಬೇರೆ ಊರುಗಳ ಹೆಸರುಗಳು ಬರುತ್ತವೆ. ಭೂತಗಳಿಗೆ ಸಂಬಂಧಪಡದ ಪಾಡ್ದನಗಳಲ್ಲಿಯೂ ಕಥೆಯ ಪಾತ್ರಗಳ ಸಂಚಾರಗಳ ಮೂಲಕ ಬೇರೆ ಬೇರೆ ಸ್ಥಳದ ಹೆಸರುಗಳು ಕಾಣಿಸಿಕೊಳ್ಳುತ್ತವೆ. ಭೂತಗಳ ಪ್ರಸರಣಕ್ಕೆ ಸಂಬಂಧಿಸಿದ ಇಂತಹ ಸ್ಥಳಗಳ ಹೆಸರುಗಳ ರೇಖಾಚಿತ್ರವನ್ನು (Map) ಹಿಂದಿನ ಅಧ್ಯಾಯದಲ್ಲಿ ಮಾಡಿ ತೋರಿಸಿದೆ. ಆದರೆ ಆ ರೀತಿ ಮಾಡಲು ಸಾಧ್ಯವಾಗದ ಇನ್ನೂ ಅನೇಕ ಪಾಡ್ದನಗಳಲ್ಲಿ ಕಂಡುಬರುವ ಸ್ಥಳಗಳ ಹೆಸರುಗಳನ್ನು ಕೆಳಗೆ ಪಟ್ಟಿಮಾಡಿ ಕೊಡಲಾಗಿದೆ. ಪಾಡ್ದನಗಳಲ್ಲಿ ಅವು ಸಿಗುವ ರೂಪದಲ್ಲಿಯೇ ಅದನ್ನು ಇಲ್ಲಿ ಕೊಡಲಾಗಿದೆ. ಏಕೆಂದರೆ ಈ ಸ್ವರೂಪ ತುಳುನಾಡಿನ ಸ್ಥಳನಾಮಗಳ ಅಧ್ಯಯನ ಮಾಡುವಲ್ಲಿ ಹೆಚ್ಚು ಸಹಾಯವಾಗಬಹುದು.

ಜುಮಾದಿ ಪಾಡ್ದನ

ಮುಗೆರ್‌ನಾಡ್ ಸಾರ ಸೀಮೆ, ಬಂಟ್ವಾಳ, ಅಂಬಡಾಡಿ, ಪಂಚನಡ್ಕದಗೋಳಿ, ಬೆಂಇನ ಪದವು, ಅಮುಂಣಂಜ ಪೊಯ್ಯೆ, ಪೊಡಿಕರಗೋಳಿ, ಪುರಾಳ್, ಅಡ್ಡನದ ತುದೆ, ಇಟ್ಟೆಯಿ, ಕಾಳಿ ಬೋಳೂರು, ಮೂಳೂರು, ಸಾಲೆದ ಕರಿಯ, ಬಲ್ಲಮಲೆ, ಪಡುಆಡಿ, ಪಾಳತಿಕಟ್ಟೆ, ದೋಣಂಜ ಕಲ್ಲ ಮುಗೆರ್, ಸಂಪೆಂಜದ ಬೂಡು.

ಸಾರಾಳ ಜುಮಾದಿ

ಸಾರದ ಬೆಳಿಪೂರು, ಕಂದೆಲ್‌ಗುಂಡ, ಮುಗೆರ್‌ನಾಡ್ ಸೀಮೆ, ಬಾರ್ದಲದ ಬೂಡು, ಮೆಂಟಮೆದ ಗೋಳಿ, ಅಡ್ಡದ ಪಾದೆ, ಇರಂದ ಬೊಟ್ಟು ಚಾವಡಿ, ಅಲಂಗಾರ, ಪಾಣೆಮುಗೆರ್, ಪುಳಿಂಕೆದಿಮಾರ್, ಅಂಬಡಾಡಿ (ಮಂಟಮೆದ ಗೋಳಿ) ಕುದಿಗ್ರಾಮ ಮಾಗಣೆ, ಪರಾರಿದ ಗುತ್ತು, ತುಂಬಿ, ತೂಜೆರ್ (ಅರ್ಕುಳ), ಪರೆಂಗಿ ಪೇಂಟೆ, ಸೋಮನಾಥ ಕಟ್ಟೆ, ಅಡ್ಯಾರ್ ಗುತ್ತು, ಕಣ್ಣೂರ ಬೂಡು, ಜಪ್ಪು, ಕಾಣಿ ಕರಿಯ (ನಂಪ್ಪಮಾರ್ ಗುತ್ತು), ಅತ್ತಾವರ.

ಜಾರಂತಾಯೆ

ಬಾರೆಬೈಲ್, ದೇರೆಬೈಲ್, ಪೊಯ್ಯೆ, ನೀರ್‌ಮಾರ್ಗ, ಬುದ್ಯೊಟ್ಟು, ಅಡ್ಡನದ ಪದಾವು, ಕದ್ರಿ, ತರಾವು, ಅಳಕೆ, ಪೋಳೂರು.

ಕಾಂತು ನೆಕ್ರಿ ಭೂತ

ಪಣಂಬೂರು ಅಡ್ಡನದ ತುದೆ, ಪಿರಿಯ ಮ್ಯೆಯ್ಯರ ಗುಡ್ಡೆ, ಮಂಜುನಾಥ ದೇವಸ್ಥಾನ, ತರಾವು ದೇವಸ್ಥಾನ, ಅಳಕೆ ಬ್ರಹ್ಮಸ್ಥಾನ.

ಮಂಗ್ರದಾಯ

ಪಂಜಿಪಾಡಿ ಬರ್ಕೆ, ಮಾಯಿದ ಮಕೆ (ತುದೆ). ಅಡ್ಡದ ಪದಾವು, ಮುಗೆರ್ನಾಡ್ ಸೀಮೆ, ಪಾಣೆಮುಗೆರ್ ಪೊಯ್ಯೆ, ಅಂಬಡಾಡಿ, ಐಂದಾಳ ಪಟ್ಟೊ, ಯೇರ್ಯದ ಗೋಳಿ, ಪಿಲಿ ಪಂಜರೊ, ಕಲ್ಲ್‌ಮಜಲ್‌ಕಲ್ಯಾರ್, ನುಂಗ್ರ ಕಂಬಳ, ಪೆರ್ಯೊಡಿ, ತುಂಬಿ ಉಳವೂರು, ಕೀಲಡಿ ಬನ್ನಾಕುಳೆ ಬರ್ಕೆ, ವರದೇಶ್ವರ ದೇವೆರೆಸ್ಥಳ, ಅಡ್ಯಾರ ಮಾಗಣೆ, ಗುಡ್ಡೆದ ಚಾವಡಿ, ಗುಜ್ಜರಕೆದು, ಮಂಗಳೂರು ಸಂಸ್ಥಾನ, ಕುಡಿಗ್ರಾಮ ಮಾಗಣೆ, ಉಳವೂರ ಅರಮನೆ, ಅರ್ಕುಳ ಬೀಡು, ಕೆದ್ರಿ, ಎಯ್ಯಾಡಿ, ಮಂಗಳೂರು ಪೇಟೆ.

ಪೊಸ ಮಹರಾಯೆ

ನೇಲಗುತ್ತು, ಕುರೆದಾಳ್ ಬರಿಕೆ, ಕುಯಿಲ ಬರಿಕೆ, ಮುಳಿ ಬೊಟ್ಟು ಗುತ್ತು, ಬೆಳ್ದೆದ ಗುತ್ತು, ಪೊಸ ಇಲ್ಲಾಳ್, ನೂಯಿದ ಗುತ್ತು, ಪರಾರಿದ ಗುತ್ತು, ಹಿರ್ತಪಂಜ, ಮಿತ್ತ ಪಂಜ, ಮಿತ್ತ ಪರ್ಕೆ, ನಡುಪಂಜ, ಹಿರ್ತಪರ್ಕೆ, ಗಾಣದ ಕೊಟ್ಯ, ಅಳ್ಕೆ ಬೈಲ್, ಗುರಿಕಂಡ.

ಮುಡದೇರ್ ಕಾಳಭೈರವೆ

ಮುಗೆರ್ನಾಡ್, ಬಾರ್ದಲಬೂಡು, ಅಡ್ಡಲಪಾದೆ, ನರಿಕೊಂಬು, ಇರ್ಂದ ಬೊಟ್ಟು, ಪಾಣ್ಯೂರು, ಪಾಣ್ಯೂರು ತುದೆ, ನಂದನ ಬಿತ್ತ್ಲ್, ಪುಳಿಂಕೆಮಾರ್. ಅಂಬನಾಡಿ ಪರಕೋಟೆ, ಅಂಬಡಾಡಿ ನಂದೆರೆ ಬೊಟ್ಟು ಬೂಡು, ಕುದಿಗ್ರಾಮ ಮಾಗಣೆ, ಪೆರಿಪೊಡಿ ದೇವಸ್ಥಾನ, ತುಂಬ್ಯ, ತುಜೆರ್ (ಸುಜೇರ್), ಕೀರೊಡಿ ಬನ್ನಾಕುಳೆ ಬರ್ಕೆ, ವರದೇಶ್ವರ ದೇವಸ್ಥಾನ, ಅರ್ಕುಳ ಹೊಳಿ, ಅಡ್ಯಾರ್ ಮಾಗಣೆ. ಮ್ಯೆಕಣತಾರ್, ಕಣ್ಣೂರ ಬೂಡು, ಗಾಣದ ಬೊಟ್ಟು, ನಂತೂರು ಕರಿಬೊಟ್ಟು, ಕಟ್ಟಳೆ ಪೂವೆದಿ ಕೆದು (ಬಜಾಲಪ್), ಬಜಾಲ್ ಕರಿಯ, ಪರಿಯಾಳದ ಸಾರಸೀಮೆ, ಪೂವಾಡಿ ಕಲ್ಲ್, ಬೊಳ್ಮ, ಇರಂದಳೆ ಪಟ್ಟೊ, ಮೂಳಾರ್‌ದ ಗುತ್ತು, ಮೂಳಾರ್‌ದ ಕಂಬುಳ, ಕಲ್ಲಡಪದಾವು, ಮ್ಯೆರ್ ಮುಡ್ಯರ್, ಕೋಟೆಕಾರ್, ಕೊಟ್ಟಾರ (ಸೋಮೇಶ್ವರದ ಹತ್ತಿರ) ಉಳ್ಳಾಲ, ಮಂಗಾರ ಕರಿಯ, ಮಂಗಳ ದೇವಸ್ಥಾನ (ಮಂಗಳದೇವಿ ದೇವಸ್ಥಾನ) ಪಾಂಡೇಶ್ವರ, ಪಚ್ಚೆನಾಡಿ ನೀರ್ ಬರ್ಕೆ, ಅತ್ತಾವರ.

ಪಿಲಿಚಾಮುಂಡಿ

ತುಂಬಿ ಜಾಲ್, ಅಡ್ಡಂದ ಗುಡ್ಡೆ, ಮಿಜಾರಿನ ಇರ್ಂದಾಲ್ ಪಟ್ಟ, ಕುಂಡಡಾವು ಮುರ, ಬೊಳ್ಳಿಬೆಟ್ಟು, ಪೆರಾರ್ ಬೆಟ್ಟು, ವಸಾರಿ ಬೆಟ್ಟು, ಬೊಳ್ಳಿಮಾರ್‌ಗುತ್ತು, ಮುಕ್ಕೋಡಿವಳ ಕುಡ.

ವಜ್ರಂದ ಕುಮಾರ

ಕಾಂತಾರ (ಕಾಂತಾವರ) ಬಂಗಾಡಿ ಬೂಡು.

ಕೊಡಮಣ್‌ತ್ತಾಯು

ಎಕ್ಕಾರು, ಎಕ್ಕಾರ ಪರಾರ, ಇರುವೈಲ್, ನಾಡ್ಯೊಡಿ, ತಂಗಾಡಿ ಬರ್ಕೆ, ಪಂಜ, ಬೋಳಿಲ್. ಇರಂದೆಲ್, ಕುಕ್ಕಿ ಕಟ್ಟೆ, ಕೆವ್ರಾಜಿ, ಕೆಮ್ಮಲೀಜೆ ಬೆಟ್ಟು, ಪುಂಜಾರ್ ಗುತ್ತು.

ಕನಪಾಡಿತ್ತಾಯು

ಪೇಟೆಕಲ್ಲ್, ಸಂತಿಕಲ್ಲು, ಪಂಜಿಪಾಡಿ ಬರ್ಕೆ, ಪುಂಗೆರ್‌ನಾಡು, ಸಾರಪೇಮೆ, ಪಾಣೆ ಮಂಗೇರ್, ಬಂಟ್ವಾಳ, ಪುಂದಾಳ ಪಟ್ಟ, ಅಂಬಡಾಡಿ, ಕಿಲಿಪಂಜೇರ್, ತುಂಬೆ, ಮಜಬೀಡು ಗುಜ್ಜರಕೆರೆ, ಮಂಗಳೂರು, ಉಳ್ಳಾಪೂರು, ಪಳ್ಳಿ, ಕುನ್ಮಾರಪಾಡಿ, ನೇತ್ರಾವತಿ ಹೊಳೆ, ಉಬಾರ್, ನಂದಾವರ, ಪಂಜ, ಸಂದಿ, ಕುಂಬಳೆ, ಕನಪಾಡಿ, ಪೆರಿಯೊಡಿ.

ಮುಂಡಿಪಾಡಿತ್ತಾಯು

ಕೋಟೆಕಾರ್–ಕೊಂಡಾಣ, ಸಿಯೋರ ಗುತ್ತು, ಕೊಲ್ಲಿಬೆಟ್ಟು, ಎಡರ್ಗರು.

ಪ್ರೋಡಿಲ್‌ತ್ತಾಯು

ಇದಕ್ಕಜೆ, ವಾರ್ಗಲ್

# ಪಾಡ್ದನಗಳ ಕಾಲ

ಜನಪದ ಸಾಹಿತ್ಯದ ಒಂದು ಭಾಗವಾದ ಪಾಡ್ದನಗಳ ಕಾಲನಿರ್ಣಯ ಖಚಿತವಾಗಿ ಕಷ್ಟದ ವಿಷಯ ಆದರೆ ಈ ಪಾಡ್ದನಗಳು ಹೆಚ್ಚಾಗಿ ಆರಾಧನೆಗೊಳ್ಳುವ ಭೂತಗಳ ವಸ್ತುವನ್ನು ಒಳಗೊಂಡಿರುವುದರಿಂದ ಮತ್ತು ಇಂತಹ ಪಾಡ್ದನಗಳಲ್ಲಿ ದೊರೆಯುವ ಕೆಲವು ಐತಿಹಾಸಿಕ ಸಂಗತಿಗಳ ಆಧಾರದಿಂದ ಸ್ಥೂಲವಾಗಿ ಪಾಡ್ದನಗಳ ಕಾಲನಿರ್ಣಯವನ್ನು ಮಾಡಬಹುದು. ಭಾಷೆಯ ದೃಷ್ಟಿಯಿಂದ ಮತ್ತು ಸಂಸ್ಕೃತಿಯ ಸ್ವರೂಪದ ದೃಷ್ಟಿಯಿಂದ ಪಾಡ್ದನಗಳ ಕಾಲನಿರ್ಣಯ ಮಾಡಲು ಸಾಧ್ಯವಾಗುವುದಿಲ್ಲ. ಏಕೆಂದರೆ ತುಳು ಭಾಷೆಯು ಗ್ರಂಥಸ್ಥವಾಗಿ ಕೃತಿಗಳಲ್ಲಿ ಆಗಲೀ ಶಾಸನಗಳಲ್ಲಾಗಲೀ ೧೯ನೇ ಶತಮಾನದ ಅಂತ್ಯದವರೆಗೆ ಎಲ್ಲಿಯೂ ಬಳಕೆಯಾಗಿಲ್ಲ. ಸಾಂಸ್ಕೃತಿಕವಾಗಿ ತುಳುನಾಡಿನ ಶಾಸನಗಳಲ್ಲಿ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಸಂಗತಿಗಳು ಕಾಣಿಸಿಕೊಂಡಿದ್ದರೂ ಪಾಡ್ದನಗಳಲ್ಲಿ ಕಂಡುಬರುವ ಜನಪದ ಸಂಸ್ಕೃತಿ ಅಲ್ಲಿ ವಿಶೇಷವಾಗಿ ತೋರುವುದಿಲ್ಲ. ಪಾಡ್ದನಗಳ ಕಾಲನಿರ್ಣಯಕ್ಕೆ ಹೆಚ್ಚು ಸಹಾಯಕವಾಗುವ ಸಾಮಗ್ರಿಗಳು :

1. ಭೂತಗಳ ಉಲ್ಲೇಖವಿರುವ ತುಳುನಾಡಿನ ಶಾಸನಗಳು.
2. ಐತಿಹಾಸಿಕ ವ್ಯಕ್ತಿಗಳ ಮತ್ತು ಘಟನೆಗಳ (ತುಳುನಾಡಿನ ರಾಜಮನೆತನದ) ಸ್ಪಷ್ಟವಾದ ಉಲ್ಲೇಖಗಳು.
3. ಐತಿಹಾಸಿಕ ಸ್ಥಳಗಳ ರಚನೆಗಳ ಉಲ್ಲೇಖಗಳು.
4. ಸ್ಥೂಲವಾಗಿ ಕಾಲನಿರ್ಣಯಕ್ಕೆ ಸಹಾಯಕವಾಗಬಲ್ಲ ಸಂಸ್ಕೃತಿಯ ಬೇರೆ ಬೇರೆ ಅಂಶಗಳು.

## 1. ಭೂತರಾಧನೆಯ ಉಲ್ಲೇಖವಿರುವ ತುಳುನಾಡಿನ ಶಾಸನಗಳು

ಕಾರ್ಕಳ ತಾಲ್ಲೂಕಿನ ಕಾಂತಾವರದ ಕಾಂತೇಶ್ವರ ದೇವಸ್ಥಾನದ ಒಂದು ಶಾಸನದಲ್ಲಿ (ಕಾಲ 1379) 'ದೈವ' ಎನ್ನುವ ಪದ ಬರುತ್ತದೆ. ಇಲ್ಲಿ 'ದೈವ' ಎಂದರೆ ತುಳುನಾಡಿನಲ್ಲಿ ರೂಢಿಯಲ್ಲಿ ಹೇಳುವ ಅರ್ಥ 'ಭೂತ' ಎಂದು.

ಉಡುಪಿ ತಾಲ್ಲೂಕಿನ ಕಾಪುವಿನ ಶಾಸನವು 'ನಂದಳಿಕೆ ದೈವಗಳ' ಪ್ರಸ್ತಾಪವನ್ನು ಮಾಡಿದೆ (ಕಾಲ-1499). ಇಲ್ಲಿ ನಂದಳಿಕೆ ದೈವಗಳು ಎಂದರೆ ಪ್ರಸಿದ್ಧರಾದ 'ಅಬ್ಬಗೆ' ಮತ್ತು 'ದಾರಗೆ'. ಇದು ಸ್ಪಷ್ಟವಾಗಿ ಕಾಲವನ್ನು ಹೇಳಿರುವ ಭೂತಗಳ ಪ್ರಸ್ತಾಪವಿರುವ ಮೊತ್ತಮೊದಲನೆಯ ಶಾಸನ. ಈ ಶಾಸನದಿಂದ ಅಬ್ಬಗೆ ದಾರಗೆಯರ ಅಂದರೆ ನಂದಳಿಕೆ ದೈವಗಳ ಪಾಡ್ದನದ ವಸ್ತು ಕ್ರಿ. ಶ. 1499 ಕ್ಕಿಂತ ಹಿಂದಿನದು ಎಂದು ಗೊತ್ತಾಗುತ್ತದೆ. ಆದ್ದರಿಂದ 'ಸಿರಿ'ಯ ಪಾಡ್ದನವು ಈ ಕಾಲಕ್ಕಿಂತ ಸ್ವಲ್ಪ ಹಿಂದೆ ರಚನೆಯಾಗಿರಬಹುದು. ಉದ್ಯಾವರದ ಒಂದು ಶಾಸನವು (ಕಾಲ : ಸುಮಾರು 16ನೇ ಶತಮಾನ) ಕಾರ್ಕಳ ತಾಲ್ಲೂಕಿನ ನಂದಳಿಕೆಯ ದೈವಗಳು ಮತ್ತು ಆ ದೈವಗಳಿಗೆ ಅರ್ಪಿಸುವ ಬಲಿಪೂಜೆಯ ಬಗ್ಗೆ ಹೇಳುತ್ತದೆ. ಇದೇ ಶಾಸನದಲ್ಲಿ ನಿಂಜಕೋರಿ ದೈವಗಳ ಪ್ರಸ್ತಾಪವಿದೆ.

ಕುಂದಾಪುರ ತಾಲ್ಲೂಕಿನ ಬಸರೂರಿನ ಒಂದು ಶಾಸನದಲ್ಲಿ 'ಬೊಬ್ಬರ್ಯ' ಭೂತದ ಉಲ್ಲೇಖವಿದೆ. ಈ ಶಾಸನದ ಕಾಲ ಕ್ರಿ. ಶ. 1546. ಬಾರಕೂಡಿನ ಒಂದು ಶಾಸನದಲ್ಲಿಯೂ 'ಬೊಬ್ಬರ್ಯ (ಬೊಬ್ಬರಿಗ) ಭೂತದ ಉಲ್ಲೇಖವಿದೆ. ಈ ಶಾಸನದ ಕಾಲ ಕ್ರಿ. ಶ. 1566. ಈ ಎರಡು ಶಾಸನಗಳ ಆಧಾರದಿಂದ ಬೊಬ್ಬರ್ಯ ಭೂತದ ಕಾಲವನ್ನು ಕ್ರಿ. ಶ. 1546 ಕ್ಕಿಂತ ಸ್ವಲ್ಪ ಹಿಂದೆ ಎಂದು ಭಾವಿಸಬಹುದು.

ಕ್ರಿ. ಶ. 1673 ರಲ್ಲಿ ಕರಾವಳಿ ಕರ್ನಾಟಕದಲ್ಲಿ ಪ್ರವಾಸ ಮಾಡಿದ Dr. Frjer ನು ತಾನು ಅಲ್ಲಿ ಭೇಟಿಯಾದ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡ ವ್ಯಕ್ತಿಗಳ ಬಗ್ಗೆ ಹೇಳುತ್ತಾ "Who had not been converted were mervellously conversant with the devil" ಎನ್ನುತ್ತಾನೆ. ಅವನು ಬಹುಶ ಈ ಪ್ರದೇಶದ 'ಭೂತಾರಾಧನೆ'ಯ ಬಗ್ಗೆ ಈ ಮಾತನ್ನು ಆಡಿರಬೇಕು,

## 2. ತುಳುನಾಡಿನ ಐತಿಹಾಸಿಕ ವ್ಯಕ್ತಿಗಳ ಮತ್ತು ಘಟನೆಗಳ ಸ್ಪಷ್ಟವಾದ ಉಲ್ಲೇಖಗಳು

ತುಳುನಾಡಿನ ರಾಜಕೀಯ ಇತಿಹಾಸದ ಒಂದು ಘಟನೆಯ ಸ್ಪಷ್ಟವಾದ ಉಲ್ಲೇಖವಿರುವ ಪಾಡ್ದನಗಳು 'ಕಲ್ಕುಡ – ಕಲ್ಲುರ್ಟಿ' ಭೂತಗಳಿಗೆ ಸಂಬಂಧಿಸಿದ ಪಾಡ್ದನಗಳು. ಆದರೆ ಈ ಪಾಡ್ದನದಲ್ಲಿ ಅನೇಕ ಕಾಲ್ಪನಿಕ ಅಂಶಗಳು ಸೇರಿಕೊಂಡಿರುವುದರಿಂದ ಕಾಲದ ಅಂತರಗಳನ್ನು ಸಂಪೂರ್ಣ ಕಡೆಗಣಿಸಿದಂತೆ ಕಾಣುತ್ತದೆ. 'ಕಲ್ಕುಡ – ಕಲ್ಲುರ್ಟಿ' ಭೂತಗಳ ಪಾಡ್ದನದಲ್ಲಿ ತಂದೆ ಶಂಬುಕಲ್ಕುಡನು ಬೇಲೂರು, ಶ್ರವಣಬೆಳಗೊಳದಲ್ಲಿ ಶಿಲ್ಪದ ಬೇರೆ ಬೇರೆ ಕೆಲಸಗಳನ್ನು ಮಾಡಿದ ವಿಚಾರ ವ್ಯಕ್ತವಾಗಿದೆ. ಅವನು ಬೆಳಗೊಳದಲ್ಲಿ ಗೊಮ್ಮಟನ ಪ್ರತಿಮೆಯನ್ನು ಸ್ಥಾಪಿಸಿದ ವಿಚಾರ ಬರುತ್ತದೆ. ಅವನ ಮಗ ಬೀರಕಲ್ಕುಡನು ಬೇಲೂರು, ಬೆಳಗೊಳಗಳಿಗೆ ಹೋಗಿ ತಂದೆಯ ಶಿಲ್ಪಕೃತಿಗಳಲ್ಲಿ ದೋಷವನ್ನು ಕಂಡು ಹಿಡಿಯುವುದು, ತಂದೆ ಆತ್ಮಹತ್ಯೆ ಮಾಡಿಕೊಂಡ ಮೇಲೆ ಆ ಸ್ಥಳಗಳಲ್ಲಿ ಕೆಲವು ಶಿಲ್ಪಕೃತಿಗಳನ್ನು ಮಾಡಿ ಹೆಸರು ಪಡೆಯುವುದು – ಈ ವಿಚಾರ ಬರುತ್ತದೆ. ಅದೇ ಬೀರಕಲ್ಕುಡನು ಕಾರ್ಕಳದ ಭೈರರಸನ ಅಪ್ಪಣೆಯ ಮೇರೆಗೆ ಕಾರ್ಕಳದಲ್ಲಿ ಗೊಮ್ಮಟ ಪ್ರತಿಮೆಯನ್ನು ನಿರ್ಮಾಣ ಮಾಡಿ ಸ್ಥಾಪಿಸುತ್ತಾನೆ, ಅದೇ ಬೀರಕಲ್ಕುಡನು ವೇಣೂರಿನ ತಿಮ್ಮಣ್ಣ ಅಜಿಲನ ಅಪ್ಪಣೆಯಂತೆ ವೇಣೂರಿನಲ್ಲಿ ಗೊಮ್ಮಟ ಮೂರ್ತಿಯನ್ನು ನಿರ್ಮಾಣ ಮಾಡಿ ಸ್ಥಾಪಿಸುತ್ತಾನೆ. ಇಲ್ಲಿ ಪ್ರಧಾನವಾಗಿ ತುಳುನಾಡಿನ ಇಬ್ಬರು ಐತಿಹಾಸಿಕ ರಾಜರು ಬೀರ ಕಲ್ಕುಡನಿಂದ ಗೊಮ್ಮಟ ಮೂರ್ತಿಯನ್ನು ನಿರ್ಮಿಸುತ್ತಾರೆ.

ಒಬ್ಬ ಕಾರ್ಕಳದ ಭೈರರಸ. ಇನ್ನೊಬ್ಬ ವೇಣೂರಿನ ತಿಮ್ಮಣ್ಣ ಅಜಿಲ. ಇದೇ ಬೀರಕಲ್ಕುಡನು ಮುಂದೆ ಕಲ್ಕುಡ ಭೂತವಾಗುತ್ತಾನೆ. ಅವನ ತಂಗಿ ಕಾಳಮ್ಮ ಕಲ್ಲುರ್ಟಿ ಭೂತವಾಗುತ್ತಾಳೆ. ಈ ಪಾಡ್ದನದಲ್ಲಿ ಕಾಣಿಸಿಕೊಂಡಿರುವ ಐತಿಹಾಸಿಕ ಅಂಶಗಳಲ್ಲಿ ಕಾಲದ ದೃಷ್ಟಿಯಿಂದ ಹೊಂದಾಣಿಕೆ ಕಾಣಿಸುವುದಿಲ್ಲ. ಶಂಬುಕಲ್ಕುಡನು ನಿರ್ಮಿಸಿದ ಎಂದು ಹೇಳುವ ಶ್ರವಣಬೆಳಗೊಳದ ಗೊಮ್ಮಟ ನಿರ್ಮಾಣವಾದದ್ದು ಚಾವುಂಡರಾಯನ ಕಾಲದಲ್ಲಿ 10 ನೇ ಶತಮಾನದಲ್ಲಿ. ಕಾರ್ಕಳದ ಗೊಮ್ಮಟಮೂರ್ತಿ ಸ್ಥಾಪನೆಯಾದದ್ದು, ಕ್ರಿ. ಶ. 1432 ರಲ್ಲಿ – ಒಂದನೆಯ ಪಾಂಡ್ಯ ಅಥವಾ ವೀರ ಪಾಂಡ್ಯ ದೇವ ಅಥವಾ ಅಭಿನವ ಚಾವುಂಡರಾಯ (ಕ್ರಿ. ಶ. 1420 – 1450) ಎಂಬ ಕಾರ್ಕಳದ ಭೈರರಸನ ಕಾಲದಲ್ಲಿ. ವೇಣೂರಿನ ಗೊಮ್ಮಟ ಮೂರ್ತಿ ಸ್ಥಾಪನೆಯಾದದ್ದು ಕ್ರಿ. ಶ. 1603ರಲ್ಲಿ ತಿಮ್ಮಣ್ಣಾಜಿಲನೆಂಬ (ಕಿ. ಶ. 1600 – 1610) ಅಜಿಲ ಅರಸನ ಕಾಲದಲ್ಲಿ.

ಈ ಪಾಡ್ದನದಲ್ಲಿ ಐತಿಹಾಸಿಕವಾಗಿ 10 ನೇ ಶತಮಾನದ ಶ್ರವಣಬೆಳಗೊಳದ ಗೊಮ್ಮಟ, ಕ್ರಿ. ಶ. 1432 ರ ಕಾರ್ಕಳದ ಗೊಮ್ಮಟ ಮತ್ತು ಕ್ರಿ. ಶ. 1603 ರ ವೇಣೂರಿನ ಗೊಮ್ಮಟಮೂರ್ತಿಗಳ ನಿರ್ಮಾಣದ ಕತೆ ಬರುತ್ತದೆ. ಇಷ್ಟು ಕಾಲದ ಅಂತರವಿರುವ ಮೂರು ಘಟನೆಗಳು ಒಬ್ಬನೇ ವ್ಯಕ್ತಿಯ ಕಾಲದಲ್ಲಿ ನಡೆಯಿತು ಎನ್ನುವುದು ಸಂಪೂರ್ಣವಾಗಿ ಕಾಲ್ಪನಿಕ ಸಂಗತಿಯಾಗುತ್ತದೆ. ಕಾರ್ಕಳ ಮತ್ತು ವೇಣೂರಿನ ಗೊಮ್ಮಟಮೂರ್ತಿಗಳ ಸ್ಥಾಪನೆಯ ನಡುವೆ 171 ವರ್ಷಗಳ ಅಂತರವಿದೆ. ಈ ದೃಷ್ಟಿಯಿಂದ ಈ ಎರಡು ಗೊಮ್ಮಟಗಳ ನಿರ್ಮಾಣ ಒಬ್ಬನೇ ವ್ಯಕ್ತಿಯಿಂದ ಆಯಿತು ಎಂಬುದು ಸಂಪೂರ್ಣ ಕಾಲ್ಪನಿಕ ಅಂಶ.

'ಕಲ್ಕುಡ' ಎಂದರೆ ಕಲ್ಲುಕುಟ್ಟುವ ಕೆಲಸ ಮಾಡುವಾತ. 'ಕಲ್ಲುರ್ಟಿ' ಎಂದರೂ ಅದೇ ಅರ್ಥ. ಆದ್ದರಿಂದ ವೃತ್ತಿನಾಮವಾಗಿರುವ 'ಕಲ್ಕುಡ' ಎಂಬ ಶಬ್ದವು ಪರಂಪರಾಗತವಾಗಿ ಮುಂದುವರಿದುಕೊಂಡು ಬರುತ್ತದೆ. ಆ ಕಾರಣದಿಂದ ಕಾರ್ಕಳದ ಗೊಮ್ಮಟಮೂರ್ತಿಯನ್ನು ನಿರ್ಮಿಸಿದ ಒಬ್ಬ ಕಲ್ಕುಡನ ವಂಶ ಪರಂಪರೆಯ ಇನ್ನೊಬ್ಬ ಕಲ್ಕುಡನು ವೇಣೂರಿನ ಗೊಮ್ಮಟಮೂರ್ತಿಯನ್ನು ನಿರ್ಮಿಸಿರಬೇಕು. ಕಲ್ಕುಡ ಎಂಬ ವೃತ್ತಿನಾಮದ ಕಾರಣದಿಂದ ಆ ಎರಡು ಗೊಮ್ಮಟಪ್ರತಿಮೆಗಳನ್ನು ಒಬ್ಬನೇ ಕಲ್ಕುಡ ರಚಿಸಿದ ಎನ್ನುವ ಮಾತು ಐತಿಹ್ಯದ ರೂಪದಲ್ಲಿ ಜನಪದ ಪರಂಪರೆಯಲ್ಲಿ ಕಾಣಿಸಿಕೊಂಡಿರಬೇಕು.

ಈಗ ಉಪಲಬ್ಧವಾದ ಕಲ್ಕುಡ, ಕಲ್ಲುರ್ಟಿ ಪಾಡ್ದನಗಳ ಎಲ್ಲ ಪಾಠಗಳಲ್ಲಿಯೂ ಈ ಎರಡು ಸ್ಥಳಗಳ (ಕಾರ್ಕಳ ಮತ್ತು ವೇಣೂರು) ಗೊಮ್ಮಟ ಮೂರ್ತಿಗಳ ವಿಚಾರ ಬರುತ್ತದೆ. ಇದೇ ವಸ್ತುವುಳ್ಳ 'ಪೊಸಭೂತ' ಪಾಡ್ದನದಲ್ಲಿ ಏಣೂರಿನ ಅಜಿಲನ ಬಗ್ಗೆ ಹೇಳುವಾಗ "ಅಳ್ಳ್ ಪಲಯೆ ಪಾಂಡ್ಯಪ್ಪರಾಯೆರ್, ಮೆಗ್ಯೆ ತಿಮ್ಮಣ್ಣಾಜಿರೆರ್" (ಅಲ್ಲಿ ಅಣ್ಣ ಪಾಂಡ್ಯಪ್ಪರಾಯರು, ತಮ್ಮ ತಿಮ್ಮಣ್ಣಾಜಿಲರು) ಎಂಬ ಮಾತು ಬರುತ್ತದೆ. ತುಳುನಾಡಿನ ಇತಿಹಾಸದಲ್ಲಿ ಏಣೂರಿನ ಅಂದರೆ ವೇಣೂರಿನ ಅಜಿಲ ಮನೆತನದ ರಾಜಕೀಯ ವಂಶಾವಳಿಯಲ್ಲಿ ಪಾಂಡ್ಯ ಭೂಪ (ಕ್ರಿ. ಸ. 1585—1600) ಮತ್ತು ಅವನ ತಮ್ಮ ತಿಮ್ಮಣ್ಣಾಜಿಲ (ಕ್ರಿ. ಸ. 1600—1600) ಇವರ ಹೆಸರುಗಳು ಬರುತ್ತವೆ. ಆದ್ದರಿಂದ ಪೊಸಭೂತದ ಪಾಡ್ದನದ ಮೇಲಿನ ಮಾತು ಇತಿಹಾಸದ ಆಧಾರದಿಂದ ಸಮರ್ಥನೀಯವಾಗಿದೆ. ಮೇಲಿನ ಎಲ್ಲಾ ಆಧಾರಗಳಿಂದ ಕಲ್ಕುಡ—ಕಲ್ಲುರ್ಟಿ ಭೂತಗಳ ಪಾಡ್ದನಗಳ ಕಾಲ, ವೇಣೂರಿನ ಗೊಮ್ಮಟ ಮೂರ್ತಿಯ ಸ್ಥಾಪನೆಯ ಬಳಿಕ ಅಂದರೆ ಕ್ರಿ. ಶ. 1603ರ ಬಳಿಕ ಕೆಲವೇ ವರ್ಷಗಳ ಒಳಗೆ ಈ ಕಲ್ಕುಡ-ಕಲ್ಲುರ್ಟಿ ಪಾಡ್ದನಗಳು ರಚನೆಯಾಗಿರಬೇಕು. ಬಹುಶಃ 17ನೇ ಶತಮಾನದ ಪೂರ್ವಾರ್ಧ ಭಾಗ ಎಂದು ಭಾವಿಸಬಹುದು.

'ಬೊಬ್ಬರ್ಯ' ಭೂತ ಪಾಡ್ದನದಲ್ಲಿ ಒಂದು ಕತೆ "ಕಲ್ಕುಡ ಕಲ್ಲ್ ಕಡೆತ್ತೆರ್" (ಕಲ್ಕುಡ ಕಲ್ಲನ್ನು ದಾಟಿದರು) ಎನ್ನುವ ಮಾತು ಬರುತ್ತದೆ. ಬೊಬ್ಬರ್ಯ ಭೂತದ ಕಾಲ ಈಗಾಗಲೇ ಶಾಸನಗಳ ಆಧಾರದಿಂದ ನೋಡಿದಂತೆ ಕ್ರಿ. ಸ. 1546 ಕ್ಕಿಂತ ಹಿಂದೆ ಎಂದು ಗೊತ್ತಾಗುತ್ತದೆ. ಬೊಬ್ಬರ್ಯ ಭೂತದ ಪಾಡ್ದನವು ಸುಮಾರಾಗಿ 16 ನೇ ಶತಮಾನದ ಮಧ್ಯಭಾಗದಲ್ಲಿ ರಚನೆಯಾಗಿರಬಹುದು. ಅಂತಹ ಪಾಡ್ದನದಲ್ಲಿ 17 ನೇ ಶತಮಾನದ ಆರಂಭದ ಕಾಲದ ಎಂದು ನಾವು ಭಾವಿಸಿರುವ ಕಲ್ಕುಡನ ಪ್ರಸ್ತಾಪ ಹೇಗೆ ಬಂದಿತು ? ಒಂದೋ, ಬೊಬ್ಬರ್ಯನನ್ನು ಕುರಿತ ಪಾಡ್ದನದಲ್ಲಿ ಕಲ್ಕುಡನನ್ನು ಕುರಿತ ಮಾತು ಕಾಲಕ್ರಮೇಣ ಸೇರಿದ ಸೇರ್ಪಡೆಯಾಗ ಬಹುದು. ಅಥವಾ ನಮಗೆ ಈಗ ಸಿಕ್ಕಿರುವ ಬೊಬ್ಬರ್ಯನ ಪಾಡ್ದನವು ಬೊಬ್ಬರ್ಯ ಭೂತದ ಪ್ರಾಚೀನ ಪಾಡ್ದನವಾಗಿರದೆ 17 ನೇ ಶತಮಾನದ ಆರಂಭದ ಕಾಲದ ರಚನೆಯಾಗಿರಬಹುದು.

'ಕಲ್ಕುಡ - ಕಲ್ಲುರ್ಟಿ' ಪಾಡ್ದನದ ರಚಕನು ಐತಿಹಾಸಿಕ ಸಂಗತಿಗಳನ್ನು ನಿರೂಪಿಸುವಾಗ ಕಾಲದ ಅಂತರವನ್ನು ಪರಿಗಣಿಸಿಲ್ಲ ಎನ್ನುವುದಕ್ಕೆ ಇನ್ನೊಂದು ಸಣ್ಣ ಆಧಾರವನ್ನು ಕೊಡಬಹುದು. ಬೀರ ಕಲ್ಕುಡನು ಕಾರ್ಕಳದ ಭೈರರಸನಲ್ಲಿ ಯಾವ ಯಾವ ಕೆಲಸ ಮಾಡಿದ ಎನ್ನುವ ಸಂದರ್ಭದಲ್ಲಿ "ಆಯೆ ಸಾರ ಕಂಬೊ ಬತ್ತಾಡದ ಬೇಲೆ ಬೆಂದೆ" (ಅವನು ಸಾವಿರ ಕಂಬದ ಬಸದಿಯ ಕೆಲಸ ಮಾಡಿದ) ಎನ್ನುವ ಮಾತು ಬರುತ್ತದೆ. ಕಾರ್ಕಳದ ಭೈರರಸರ ಮನೆತನದ ಇತಿಹಾಸದಲ್ಲಿ ಪ್ರಸಿದ್ಧನಾದ ಇಮ್ಮಡಿ ಭೈರವರಾಯ (ಕ್ರಿ.ಶ.1560-1590) ಎಂಬುವನು 1586ರಲ್ಲಿ ಕಾರ್ಕಳದಲ್ಲಿ 'ತ್ರಿಭುವನ ತಿಲಕ ಜೈನ ಚೈತ್ಯಾಲಯ'ವನ್ನು ಕಟ್ಟಿಸಿದನು. ಅದು ಮೂಡಬಿದರೆಯ ಸಾವಿರ ಕಂಬದ ಬಸದಿಯನ್ನು ಹೋಲುತ್ತದೆ ಎಂಬ ವಿಚಾರವಿದೆ. ಪಾಡ್ದನಕಾರನು ಹೇಳಿದ 'ಕಾರ್ಕಳದಲ್ಲಿ ಸಾವಿರ ಕಂಬದ ಬಸದಿಯ ಕೆಲಸ' ಎಂದರೆ ಇದೇ ಆಗಿರಬೇಕು. ಆದರೆ ಇದು ಪಾಡ್ದನ ದಲ್ಲಿ ಹೇಳಿದಂತೆ ಗೊಮ್ಮಟನ ಮೂರ್ತಿಯನ್ನು ಸ್ಥಾಪಿಸಿದ ಭೈರರಸನ ಕಾಲದಲ್ಲಿ ಆದ ಕೆಲಸ ಅಲ್ಲ. ಕಾರ್ಕಳದ ಭೈರರಸನಾದ ಇಮ್ಮಡಿ ಭೈರವರಾಯ (ಕ್ರಿ,ಶ.1560-1590?). ಇವನು ಬಹಳ ಪ್ರಸಿದ್ಧನಾಗಿದ್ದು ವೇಣೂರಿನಲ್ಲಿ ಗೊಮ್ಮಟ ಮೂರ್ತಿಯ ಸ್ಥಾಪನೆ ಮಾಡುವ ವರ್ತಮಾನ ಕೇಳಿ ಅಲ್ಲಿನ ಅಜಿಲರೊಡನೆ ಯುದ್ಧ ಮಾಡಿದ ಎಂದು ಇತಿಹಾಸ ಹೇಳುತ್ತದೆ.

'ಕಲ್ಕುಡ-ಕಲ್ಲುರ್ಟಿ' ಪಾಡ್ದನಗಳ ಕಾಲ ಈಗಾಗಲೇ ವಿವರವಾಗಿ ಚರ್ಚಿಸಿರುವಂತೆ ಕ್ರಿ.ಶ 1603ರ ಬಳಿಕ, 17ನೇ ಶತಮಾನದ ಆರಂಭದ ಕಾಲ ಆಗಿದ್ದರೂ ಕತೆಯ ಆಧಾರದಿಂದ ಕಲ್ಕುಡ ಭೂತದ ಆರಾಧನೆಯ ಕಾಲವನ್ನು ಅದಕ್ಕಿಂತ ಹೆಚ್ಚು ಪ್ರಾಚೀನ ಎಂದು ಭಾವಿಸಬೇಕಾಗುತ್ತದೆ. ಕಾರ್ಕಳದಲ್ಲಿ ಗೊಮ್ಮಟಮೂರ್ತಿ ಯನ್ನು ಒಬ್ಬ ಕಲ್ಕುಡನಿಂದ ಕೆತ್ತಿಸಿದ ಭೈರರಸನು ಇಂತಹ ಗೊಮ್ಮಟನನ್ನು ಈ ಶಿಲ್ಪಿ ಮತ್ತೆಲ್ಲಿಯೂ ನಿರ್ಮಿಸ ಬಾರದು ಎನ್ನುವ ಮತ್ಸರದಿಂದ ಆ ಕಲ್ಕುಡನ ಒಂದು ಕೈ ಮತ್ತು ಒಂದು ಕಾಲನ್ನು ಕಡಿದನು ಎಂಬ ಪಾಡ್ದನದ ಮಾತನ್ನು ಒಪ್ಪಿಕೊಳ್ಳುವುದಾದರೆ, ಒಂದು ಕೈ ಮತ್ತು ಒಂದು ಕಾಲು ಇಲ್ಲದ ಇಂತಹ ಕಲ್ಕುಡನು ಬೇರೆ ಶಿಲ್ಪದ ನಿರ್ಮಾಣ ಮಾಡಿದನು ಎಂಬ ವಿಚಾರವನ್ನು ವಾಸ್ತವವಾಗಿ ಸ್ವೀಕರಿಸುವುದು ಅಸಾಧ್ಯ. ಕ್ರಿ.ಶ.1432 ರಲ್ಲಿ ಕಾರ್ಕಳ ಗೊಮ್ಮಟ ಸ್ಥಾಪನೆಯಾದ ಬಳಿಕ ಕಾರ್ಕಳದ ಭೈರರಸನ ಹಿಂಸೆಯಿಂದ ಒಂದು ಕೈ ಮತ್ತು ಒಂದು ಕಾಲನ್ನು ಕಳೆದುಕೊಂಡ ಶಿಲ್ಪಿ ಕಲ್ಕುಡನು ಒಂದೋ ಆ ಹಿಂಸೆಯ ನೋವಿನಿಂದ ಅಥವಾ ಆತ್ಮಹತ್ಯೆಯಿಂದ ತನ್ನ ಪ್ರಾಣವನ್ನು ಕಳೆದುಕೊಂಡಿರಬಹುದು. ಈ ರೀತಿ ದುರ್ಮರಣವನ್ನು ಅಪ್ಪಿದ ಕಲ್ಕುಡನೆಂಬ ಮಾನವ ವ್ಯಕ್ತಿಯು ಜನಪದ ಕಲ್ಪನೆಗೆ ಭೂತವಾಗಿ ಕಂಡಿರಬಹುದು; ಈ ದೃಷ್ಟಿಯಿಂದ ಕಲ್ಕುಡ-ಕಲ್ಲುರ್ಟಿ ಭೂತಗಳ ಆರಂಭ ಕ್ರಿ.ಶ. 1432ರ ಬಳಿಕ 15ನೇ ಶತಮಾನದ ಪೂರ್ವಾರ್ಧದಲ್ಲಿ ಎಂದು ಊಹಿಸಬಹುದು. ಮುಂದೆ ಈ ಕಲ್ಕುಡನ ಮನೆತನದ ಯಾವನೋ ಇನ್ನೊಬ್ಬ ಕಲ್ಕುಡನು ವೇಣೂರಿನ ತಿಮ್ಮಣ್ಣಾಜಿಲನ ಆಳ್ವಿಕೆಯಲ್ಲಿ

ವೇಣೂರಿನಲ್ಲಿ ಗೊಮ್ಮಟ ಮೂರ್ತಿಯನ್ನು ನಿರ್ಮಿಸಿರಬಹುದು. ಈ ಎರಡು ಭಿನ್ನ ಘಟನೆಗಳನ್ನು ಒಂದಂ ಗೂಡಿಸಿ ಇಂದು ಕಾಣಿಸುವ ಕಲ್ಕುಡ-ಕಲ್ಲುರ್ಟಿ ಪಾಡ್ದನ ಬಳಿಕ ನಿರ್ಮಾಣವಾಗಿರಬೇಕು.

### ಪಂಜುರ್ಲಿ ಪಾಡ್ದನದ ಬೇರೆ ಬೇರೆ ಪಾಠಗಳ ಕಾಲ

ಪಂಜುರ್ಲಿ ಭೂತದ ಉಗಮಕ್ಕೆ ಸಂಬಂಧಿಸಿದ ಪಾಡ್ದನಗಳು ಸಂಪೂರ್ಣವಾಗಿ ಪೌರಾಣಿಕ ಸ್ವರೂಪದ ಕಾಲ್ಪನಿಕ ಸಂಗತಿಗಳನ್ನು ಮತ್ತು ಇತಿಹಾಸ ಪೂರ್ವದ ಸಂಸ್ಕೃತಿಯ ಅಂಶಗಳನ್ನು ಒಳಗೊಂಡಿರುವುದರಿಂದ ಅವುಗಳ ಕಾಲನಿರ್ಣಯದ ಬಗ್ಗೆ ಯಾವುದೇ ಮಾತನ್ನು ಹೇಳುವುದಕ್ಕೂ ಸಾಧ್ಯವಾಗುವುದಿಲ್ಲ. ಆದರೆ ಪಂಜುರ್ಲಿ ಭೂತದ ಮಹಿಮೆ ಮತ್ತು ಸಂಚಾರಕ್ಕೆ ಸಂಬಂಧಿಸಿದ ಕೆಲವು ಪಾಡ್ದನಗಳಲ್ಲಿ ಕೆಲವು ಐತಿಹಾಸಿಕ ವ್ಯಕ್ತಿ, ಸ್ಥಳ, ಘಟನೆ ಮುಂತಾದವುಗಳ ಉಲ್ಲೇಖವಿರುವುದರಿಂದ ಅವುಗಳ ಕಾಲನಿರ್ಣಯವನ್ನು ಚರ್ಚಿಸಬಹುದು.

ಪಂಜುರ್ಲಿ ಪಾಠ 4ರಲ್ಲಿ (ಪ.4) ಕುಕ್ಕೆ ಸುಬ್ರಹ್ಮಣ್ಯ, ಕದ್ರಿ ಮಂಜುನಾಥ, ಕಾಂತಾವರದ ಕಾಂತೇಶ್ವರ, ಕಾಪು ಜನಾರ್ಧನ ದೇವಸ್ಥಾನಗಳ ಹೆಸರುಗಳು ಬರುತ್ತವೆ. ಈ ಎಲ್ಲಾ ದೇವಸ್ಥಾನಗಳ ಸ್ಪಷ್ಟವಾದ ಕಾಲ ನಿರ್ಣಯ ಅಸಾಧ್ಯವಾಗಿದ್ದರೂ ಸಾಧಾರಣವಾಗಿ ಅಂಗೀಕೃತವಾಗಿರುವ ಕಾಲದ ವಿಚಾರ ಹೇಳುವುದಾದರೆ ಇವು ಅತ್ಯಂತ ಪ್ರಾಚೀನ ಅಂದರೆ ಸುಮಾರು ಕ್ರಿ. ಶ. 9ನೇ ಶತಮಾನದ ಕುಕ್ಕೆ ಸುಬ್ರಹ್ಮಣ್ಯ ದೇವಸ್ಥಾನ ಮತ್ತು ತೀರ ಕೊನೆಯದು ಎಂದರೆ ಸುಮಾರು 14ನೇ ಶತಮಾನದ ಕಾಪು ಜನಾರ್ಧನ ದೇವಸ್ಥಾನ. ಆದ್ದರಿಂದ ಈ ಪಾಡ್ದನದ ರಚನೆ 14ನೇ ಶತಮಾನದ ಬಳಿಕ ಎಂಬ ಗಡುವನ್ನು ಇಟ್ಟುಕೊಳ್ಳಬಹುದು. ಈ ಪಾಡ್ದನದಲ್ಲಿ ಪಂಜುರ್ಲಿಯು ಕದ್ರಿಯಿಂದ ಮಂಜುನಾಥ ದೇವರನ್ನು ತಂದು ಧರ್ಮಸ್ಥಳದಲ್ಲಿ ಸ್ಥಾಪಿಸಿದ ಎನ್ನುವ ವಿಚಾರ ಇದೆ. ಇದಕ್ಕೆ ಸ್ಪಷ್ಟ ಐತಿಹಾಸಿಕ ಆಧಾರಗಳು ಸಿಗುವುದಿಲ್ಲ. ಧರ್ಮಸ್ಥಳದ ಹೆಸರು 'ಕುಡುಮ' ಎಂದಾಗಿತ್ತೆಂದೂ ಒಂದು ಬ್ರಹ್ಮಸ್ಥಾನವಾಗಿದ್ದ 'ಕುಡುಮ'ದಲ್ಲಿ ಶ್ರೀ ವಾದಿರಾಜ ಸ್ವಾಮಿಗಳು ಶೈವದೇವಾಲಯವನ್ನು ರೂಪಿಸಿ 'ಧರ್ಮಸ್ಥಳ'ವೆಂಬ ನಾಮಕರಣ ಮಾಡಿದರೆಂದೂ ಐತಿಹ್ಯವಿದೆ. ಧರ್ಮಸ್ಥಳದ ಮೇಲ್ವಿಚಾರಣೆ ನೋಡಿಕೊಳ್ಳುತ್ತಿರುವ ಹೆಗಡೆ ಮನೆತನದ ಇತಿಹಾಸ ಕ್ರಿ. ಶ. 1503 ರಿಂದ ಸ್ಪಷ್ಟವಾಗಿ ಸಿಗುತ್ತದೆ. ಅದಕ್ಕಿಂತ ಹಿಂದೆ ಇದ್ದರು ಎಂದು ಹೇಳುವ ಬರ್ಮಣ್ಣ ಹೆಗ್ಗಡೆ ಅವರಿಗೆ ಕನಸಿನಲ್ಲಿ ದೈವಗಳು ಕಾಣಿಸಿಕೊಳ್ಳುವುದು ಮುಂತಾದುವು ಐತಿಹ್ಯಗಳು. ಈ ದೃಷ್ಟಿಯಿಂದ ಧರ್ಮಸ್ಥಳದ ಮಂಜುನಾಥ ದೇವಸ್ಥಾನದ ಸ್ಥಾಪನೆ 16ನೇ ಶತಮಾನದ ಆರಂಭದಲ್ಲಿ ಆ ಕಾರಣದಿಂದ ಪಂಜುರ್ಲಿ ಪಾಠ 4ರ ಕಾಲವು 16ನೇ ಶತಮಾನದ ಆರಂಭದ ಕಾಲ ಎಂದು ಊಹಿಸಬಹುದು.

ಪಂಜುರ್ಲಿ ಪಾಠ 10 (ಪ.10) ರಲ್ಲಿ ಸಂಪೂರ್ಣವಾಗಿ ತುಳುನಾಡಿನ ಇತಿಹಾಸಕ್ಕೆ ಸಂಬಂಧಿಸಿದಂತೆ ಒಂದು ಐತಿಹಾಸಿಕ ಘಟನೆ ಇದೆ. ಈ ಪಾಡ್ದನದಲ್ಲಿ ಮೇಲಿನ ರಾಜ್ಯದ ಕನ್ನಡ ಅರಸನೊಬ್ಬನನ್ನು ಕಾರ್ಕಳದ ಭೈರರಸನು ವಿರೋಧಿಸಿ ಅಧಿಕಾರಚ್ಯುತನಾದ ಘಟನೆ ವರ್ಣಿತವಾಗಿವೆ. ಇಲ್ಲಿ ಮೇಲಿನ ರಾಜ್ಯದ ಕನ್ನಡ ಅರಸು ಎಂದರೆ ವಿಜಯ ನಗರದ ಅರಸ ಎನ್ನುವುದು ಸ್ಪಷ್ಟ. ತುಳುನಾಡಿನ ಇತಿಹಾಸದಲ್ಲಿ ಈ ಘಟನೆಗೆ ಶಾಸನಗಳ ಆಧಾರದ ಪೋಷಣೆ ಸಿಗುತ್ತದೆ. ಕಾರ್ಕಳದ ಭೈರರಸರಲ್ಲಿ ಒಬ್ಬನಾದ ಇಮ್ಮಡಿ ಭೈರರಸ ಒಡೆಯ 5ನೇ ಭೈರವನು (ಕ್ರಿ. ಶ. 1501-1538) ಕ್ರಿ. ಶ. 1515-16ರಲ್ಲಿ ವಿಜಯನಗರದ ಅರಸ ಕೃಷ್ಣದೇವ ರಾಯನನ್ನು ಪ್ರತಿಭಟಿಸುವ ಸಾಹಸ ಮಾಡಿದನು. ಇದರಿಂದ ಸಿಟ್ಟಿಗೆದ್ದ ಆ ಚಕ್ರವರ್ತಿಯು ಸ್ವತಃ ತಾನೇ ಸೇನೆಯ ನಾಯಕತ್ವವಹಿಸಿ, ತುಳುನಾಡಿನ ಮೇಲೆ ದಂಡೆತ್ತಿ ಬಂದು 5ನೆಯ ಭೈರವನನ್ನು ಸೋಲಿಸಿ ಅವನನ್ನು

ಅಧಿಕಾರಚ್ಯುತನನ್ನಾಗಿ ಮಾಡಿದನು (ಆಧಾರ: ಮೂಡಿಗೇರಿಯ ಶಾಸನ ಕ್ರಿ. ಶ. 1516). ಈ ಭೈರವರಸನ ಪಾಡ್ದನದಲ್ಲಿ ಪಂಜುರ್ಲಿ ಭೂತದ ಪ್ರಸ್ತಾಪವಿದೆ. ಈ ದೃಷ್ಟಿಯಿಂದ ಈ ಪಾಡ್ದನದ ಕಾಲವನ್ನು ಕ್ರಿ.ಶ. 1516ರ ಬಳಿಕ, ಬಹುಶಃ 16ನೇ ಶತಮಾನದ ಪೂರ್ವಾರ್ಧದಲ್ಲಿ ಎಂದು ಊಹಿಸಬಹುದು. ಈ ಪಾಡ್ದನದ ರಚನೆಯ ಕಾಲಕ್ಕಾಗಲೇ ಪಂಜುರ್ಲಿಯ ಆರಾಧನೆ ಇತ್ತು ಎಂದು ತಿಳಿದುಕೊಳ್ಳಬಹುದು.

ಪಂಜುರ್ಲಿ ಪಾಠ 6 (ಪ 6): ಇದರಲ್ಲಿ ಕಲ್ಲುರ್ಟಿ ಭೂತದ ಪ್ರಸ್ತಾಪ ಇದೆ. ಇದು ಮೂಲರೂಪದ್ದೋ ಅಥವಾ ಅನಂತರದ ಸೇರ್ಪಡೆಯೋ ಎನ್ನಲು ಸಾಧ್ಯವಿಲ್ಲ. ಮೂಲರೂಪವಾಗಿದ್ದರೆ ಈ ಪಾಡ್ದನದ ಕಾಲ 17ನೇ ಶತಮಾನದ ಪೂರ್ವಾರ್ಧವಾಗಿರುತ್ತದೆ. ಈ ಪಾಡ್ದನದ ರಚನೆ ಮತ್ತು ಶೈಲಿ ನೋಡಿದಾಗ ಇದು ಅನಂತರದ ಬೆಳವಣಿಗೆ ಎಂದು ಸ್ಪಷ್ಟವಾಗುತ್ತದೆ. ಭಾಷೆಯಲ್ಲಿ ಸ್ವಲ್ಪ ಶಿಷ್ಟತೆ. ವಿಪರೀತ ದೀರ್ಘವಾದ ಮಾತುಗಳು ಇಲ್ಲಿ ದೊರೆಯುತ್ತವೆ.

## ಅತ್ತಾವರ ದೈಯಂಗೊಳೂ ಪಾಡ್ದನದ ಕಾಲ

ಈ ಪಾಡ್ದನದಲ್ಲಿ ಐತಿಹಾಸಿಕ ವ್ಯಕ್ತಿಯೊಬ್ಬನ ಹೆಸರು ಬರುತ್ತದೆ. ಆ ವಾಕ್ಯಗಳು ಈ ರೀತಿ ಇವೆ. "ಆತ್ ಪೊರ್ತುಗು ಬಿಲ್ಲು ಸುಲ್ತಾನ ಈರಪ್ಪ ನಾಯ್ಕನಾಕುಳೆ ದಂಡ್ ತೋಜಿಂಡ್. ಆ ದಂಡ್ ದಡೆಗ್ ಪೋದು ಆ ವೀರಪ್ಪ ನಾಯ್ಕನಾಕುಳೆ ದಂಡ್ ಸಮ್ಮಾರ ಮಳ್ತೆರ್" "ಯೆಂಕುಳು ತುಳು ರಾಜ್ಯೊಗಟ್ಟ ಜತ್ತ್‌ದ್ ಬತ್ತೊ. ಯೆಂಕುಳೆಗ್ ಬಿಲ್ಲ್ ಸುಲ್ತಾನ್ ಈರಪ್ಪ ನಾಯ್ಕ ದಂಡ್ ತೋಜಿಂಡ್, ದಂಡ್‌ನ್ ಸಂವಾರೊ ಮಳ್ತೊ" (ಅಪ್ಪರಲ್ಲಿ ಬಿಲ್ಲು ಸುಲ್ತಾನ ಈರಪ್ಪ ನಾಯ್ಕನವರ ಸೈನ್ಯ ಕಂಡಿತು. ಆ ಸೇನೆಯಲ್ಲಿಗೆ ಹೋಗಿ ಆ ವೀರಪ್ಪನಾಯ್ಕನವರ ಸೇನೆಯನ್ನು ಸಂಹಾರ ಮಾಡಿದರು). (ನಾವು ತುಳು ರಾಜ್ಯಕ್ಕೆ ಘಟ್ಟ ಇಳಿದು ಬಂದೆವು, ನಮಗೆ ಬಿಲ್ಲು ಸುಲ್ತಾನ ಈರಪ್ಪ ನಾಯ್ಕನ ಸೇನೆ ಕಂಡಿತು, ದಂಡನ್ನು ಸಂಹಾರ ಮಾಡಿದೆವು).

ಇಲ್ಲಿ ಕಾಣಿಸುವ ಈರಪ್ಪ ನಾಯ್ಕ ಅಥವಾ ವೀರಪ್ಪನಾಯ್ಕ ಎಂಬ ವ್ಯಕ್ತಿ ಯಾರು ಎಂದು ಸ್ಪಷ್ಟವಾಗುವುದಿಲ್ಲ. ತುಳುನಾಡನ್ನು ಆಳಿದ ಇಕ್ಕೇರಿ ಅರಸರಲ್ಲಿ 'ವೀರಭದ್ರಪ್ಪ ನಾಯ್ಕ' ಎನ್ನುವವನು ಒಬ್ಬನು. ಅವನ ಆಳ್ವಿಕೆಯ ಕಾಲ ಕ್ರಿ.ಶ.1629 ರಿಂದ 1645ರ ವರೆಗೆ. ಈ ವೀರಬದ್ರಪ್ಪ ನಾಯಕನೇ ಈ ಪಾಡ್ದನದ ವೀರಪ್ಪ ನಾಯ್ಕನಾದರೆ ಈ ಪಾಡ್ದನದ ರಚನೆಯ ಕಾಲ 17ನೇ ಶತಮಾನದ ಮಧ್ಯಭಾಗ ಎಂದು ಊಹಿಸಬಹುದು.

ಈ ಪಾಡ್ದನದಲ್ಲಿ 'ಈಜಾನಗರ'ದ ಹೆಸರು ಬರುತ್ತದೆ. "ಘಟ್ಟದ ಮಿತ್ತ್‌ಡ್ ಅಯೆರೆ ನಾಡ್ದ್ ಈಜಾನಗರೊಡು ಕಿಲೆಸಿಮಗೆ ಉಳ್ಳೆಂದ್ ಪಂಡೆರ್" (ಘಟ್ಟದ ಮೇಲೆ ಆ ಕಡೆಯ ನಾಡಿನಲ್ಲಿ ಈಜಾನಗರದಲ್ಲಿ ಕ್ಷೌರಿಕನು ಇದ್ದಾನೆ ಎಂದು ಹೇಳಿದರು).

ಇಲ್ಲಿನ 'ಈಜಾನಗರ' ಎಂದರೆ 'ವಿಜಯನಗರ' ಎನ್ನುವುದು ಸ್ಪಷ್ಟ. ಇದೇ ಈಜಾನಗರದ ಹೆಸರು ತೋಡಕುಕ್ಕಿನಾರ್ ಪಾಡ್ದನ, ಕೋಟಿ-ಚೆನ್ನಯ ಪಾಡ್ದನಗಳಲ್ಲೂ ಬರುತ್ತದೆ. ಈ ಮೂರು ಪಾಡ್ದನಗಳಲ್ಲೂ 'ಈಜಾನಗರ' ಅಂದರೆ 'ವಿಜಯನಗರ'ದಿಂದ ತುಳುನಾಡಿಗೆ ಕ್ಷೌರಿಕನು ಬರುತ್ತಾನೆ. ತುಳುನಾಡನ್ನು ವಿಜಯನಗರದ ಅರಸರು ಕ್ರಿ.ಶ.1345 ರಿಂದ ಸುಮಾರು 1650ರ ವರೆಗೆ ಆಳಿವಂತೆ ತುಳು ಇತಿಹಾಸ ತಿಳಿಸುತ್ತದೆ. ಸುಮಾರು ಕ್ರಿ.ಶ.1600ರ ಹೊತ್ತಿಗೆ ತುಳುನಾಡಿನ ಮೇಲೆ ವಿಜಯನಗರದ ಅರಸರ ಪ್ರಭಾವ ಸಂಪೂರ್ಣ

ಕಡಿಮೆಯಾಗುತ್ತದೆ. ಹಾಗಿದ್ದರೂ ಸುಮಾರು 250ಕ್ಕೂ ಮೇಲ್ಪಟ್ಟು ವರ್ಷಗಳಕಾಲ ತುಳುನಾಡಿನ ಮೇಲೆ ಸ್ಪಷ್ಟವಾದ ಆಡಳಿತ ಮುದ್ರೆಯನ್ನು ಒತ್ತಿದ ವಿಜಯನಗರದ ಪ್ರಸ್ತಾಪವು ಅನಂತರವೂ ಬಂದಿರುವುದು ಅಸಂಭವ ಅಲ್ಲ. ಈ ದೃಷ್ಟಿಯಿಂದಲೂ ಈ ಪಾಡ್ದನದ ರಚನೆಯ ಕಾಲ 17ನೇ ಶತಮಾನ ಎಂದು ಭಾವಿಸಬಹುದು.

**ತೋಡಕುಕ್ಕಿನಾರ್ ಪಾಡ್ದನದ ಕಾಲ**

ಅತ್ತಾವರ ದೈಯಂಗೊಳುಪಾಡ್ದನ ಮತ್ತು ತೋಡಕುಕ್ಕಿನಾರ್ ಪಾಡ್ದನದ ಕಾಲ ಸುಮಾರು ಒಂದೇ ಆಗಿರಬೇಕು. ಏಕೆಂದರೆ ಈ ಎರಡು ಪಾಡ್ದನಗಳಲ್ಲಿಯೂ ಘಟ್ಟದ ಮೇಲಿನ ನಾಡಾದ ಈಜಾನಗರ(ವಿಜಯನಗರ)ದಿಂದ ತುಳುನಾಡಿಗೆ ಕ್ಷೌರಿಕ ಬರುತ್ತಾನೆ. ಪ್ರಧಾನವಾಗಿ ಭೂತಗಳ ಸಂಚಾರವಿರುವ ಈ ಎರಡು ಪಾಡ್ದನಗಳಲ್ಲಿಯೂ ಆರಂಭದಲ್ಲಿ ಒಂದೇ ರೀತಿಯ ಸ್ಥಳಗಳು ಕಾಣಿಸಿಕೊಳ್ಳುತ್ತವೆ. ರಚನೆಯ ದೃಷ್ಟಿಯಿಂದಲೂ ಈ ಎರಡು ಪಾಡ್ದನಗಳಿಗೆ ಅನೇಕ ಸಾಮ್ಯಗಳಿವೆ. ಈ ತೋಡಕುಕ್ಕಿನಾರ್ ಭೂತದ ಪಾಡ್ದನದಲ್ಲಿ ಬರುವ ಪೊಯ್ಯತ್ತಾಯ ವಂಶದ ಪರಂಪರೆಯ ಬಗ್ಗೆ ದಾಖಲೆಗಳು ಸಿಗುತ್ತವೆ. ಈಗ ಸಿಕ್ಕಿರುವ ದಾಖಲೆಗಳ ಪ್ರಕಾರ ಅತ್ಯಂತ ಪ್ರಾಚೀನ ವ್ಯಕ್ತಿಯೆಂದರೆ ಕ್ರಿ.ಶ.1705ರ 'ಶಂಕರ ನಾರಾಯಣ ಪೊಯ್ಯತ್ತಾಯ'. ಈ ದೃಷ್ಟಿಯಿಂದಲೂ ಈ ಪಾಡ್ದನದ ಕಾಲ 17ನೇ ಶತಮಾನಕ್ಕಿಂತ ಪ್ರಾಚೀನವಾಗುವುದಿಲ್ಲ. ಈ ಪಾಡ್ದನದಲ್ಲಿ "ಚಾವಡಿದ ನಡುಟು ನಾಲ್ ಕಾರ್‌ದ ಪರಂಗಿ ಮುಕ್ಕಲಿಗೆ ದೀಪಾಯೆಲ್" ಎನ್ನುವ ಮಾತು ಬರುತ್ತದೆ. ಇಲ್ಲಿ 'ನಾಲ್ ಕಾರ್‌ದ ಪರಂಗಿ ಮುಕ್ಕಲಿಗೆ' ಎಂದರೆ 'ನಾಲ್ಕು ಕಾಲಿನ ಕುರ್ಚಿ' ಎಂದು ಅರ್ಥವಾಗುತ್ತದೆ. ಇದು 'ಪರಂಗಿ' ಅಂದರೆ ವಿದೇಶೀಯರಿಂದ ಬಂದ ಕಾರಣ 'ಪರಂಗಿ ಮುಕ್ಕಲಿಗೆ' ಎಂದು ಹೆಸರಾಯಿತು. ಪರಂಗಿಯರವರಲ್ಲಿ ಪೋರ್ಚುಗೀಸರು ತುಳುನಾಡಿಗೆ ಆಗಮಿಸಿದ್ದು ಕ್ರಿ.ಶ.1520ರ ಸುಮಾರಿಗೆ. ಈ ಪಾಡ್ದನದಲ್ಲಿ ಉಳ್ಳಾಳ್ತಿ, ಪಿಲಿಚಾಮುಂಡಿ, ಜುಮಾದಿ, ದುರ್ಗಲಯ್ಯೆ ಮುಂತಾದ ಭೂತಗಳ ಪ್ರಸ್ತಾಪ ಇದೆ. ಈ ಕಾರಣಗಳಿಂದಲೂ ಈ ಪಾಡ್ದನ ಹೆಚ್ಚು ಪ್ರಾಚೀನವೆಂದು ಅನ್ನಿಸುವುದಿಲ್ಲ.

ಕೋಟಿ ಚೆನ್ನಯ ಪಾಡ್ದನ : ಕೋಟಿ ಚೆನ್ನಯ ಪಾಡ್ದನದಲ್ಲಿಯೂ ಈಜಾನಗರದಿಂದ (ವಿಜಯನಗರ) ಕ್ಷೌರಿಕನು ತುಳುನಾಡಿಗೆ ಬರುವ ವಿಚಾರ ಇದೆ. ಗಟ್ಟದ ಮೇಲಿನ ಈಜಾನಗರ (ವಿಜಯನಗರ) ಬೇಟೆನಾಯಿಗಳನ್ನು ತಂದ ಸಂಗತಿಯು ಈ ಪಾಡ್ದನದಲ್ಲಿ ಇದೆ.

ತೋಡಕುಕ್ಕಿನಾರ್ ಪಾಡ್ದನದಂತೆಯೇ' ಕೋಟಿ ಚೆನ್ನಯ ಪಾಡ್ದನದಲ್ಲಿ' ಪರಂಗಿ ಮುಕ್ಕಲಿಗೆಕೆ' ಯ ಹೆಸರು ಬರುತ್ತದೆ. ಈ ಆಧಾರಗಳಿಂದ ಕೋಟಿ ಚೆನ್ನಯ ಪಾಡ್ದನದ ಕಾಲವನ್ನು ಸುಮಾರಾಗಿ 'ಅತ್ತಾವರದೈಯಂಗೊಳು ಮತ್ತು ತೋಡಕುಕ್ಕಿನಾರ್' ಪಾಡ್ದನಗಳ ಕಾಲವೆಂದೇ ಅಂದರೆ 17 ನೇ ಶತಮಾನವೆಂದೇ ಊಹಿಸಬಹುದು. ಈ ಪಾಡ್ದನದಲ್ಲಿ ಬರುವ ಪೆರ್ಮಲೆ ಬಲ್ಲಾಳ, ಪಂಜದ ಕೇಮರ ಬಲ್ಲಾಳ, ಏಣ್ಮೂರಿನ ಬಲ್ಲಾಳ-ಇವರ ಐತಿಹಾಸಿಕ ವಿಚಾರಗಳು ಸಿಗುವುದಿಲ್ಲ. ಈ ಪಾಡ್ದನದಲ್ಲಿ ಒಂದು ಕಡೆ " ಬ್ಯಾರಿ ಪಳ್ಳಿಯೋ ಕಂಡುಂಬ ಇಂಗ್ರೇಜಿಯೋ, ಸೆಟ್ಟಿ ಬತ್ತಿ ಬಸ್ತಿಯೋ ದೇವರೆ ದೇವಮಾಡೊನೊ ಅವು ತೋಜುಂಡೆಯೇ. ಬ್ರಹ್ಮೆರೆ ಸಿಂಗದಾನೊಮೊ ಅವು ತೋಜುಂಡೆಯೇ " (ಬ್ಯಾರಿಯ ಮಸೀದಿಯೊ, ಕ್ರೈಸ್ತನ ಇಗರ್ಜಿಯೊ, ಜೈನನ ಬಸದಿಯೊ ದೇವರ ದೇವಾಲಯವೋ ಅದು ಕಾಣಿಸುವುದು, ಬ್ರಹ್ಮರಸ್ಥಾನವೋ ಅದು ಕಾಣಿಸುವುದು).

ಇಲ್ಲಿನ ಕ್ರೈಸ್ತನ ಇಗರ್ಜಿ ಎನ್ನುವ ಮಾತು ಕೂಡಾ ಕ್ರೈಸ್ತ ಧರ್ಮ ಈ ನಾಡಿನಲ್ಲಿ ಸರಿಯಾಗಿ ನೆಲೆಯೂರಿದ ಮೇಲೆ, ಅಂದರೆ 16 ನೇ ಶತಮಾನದ ಬಳಿಕ ಈ ಪಾಡ್ದನದ ರಚನೆ ಎನ್ನುವ ಅಭಿಪ್ರಾಯವನ್ನು ಕೊಡುತ್ತದೆ.

ಜುಮಾದಿ ಪಾಡ್ದನ (ಧೂಮಾವತಿ) J[6]

ಈ ಪಾಡ್ದನದಲ್ಲಿ ವೇಣೂರಿನ ಗೊಮ್ಮಟ ಪ್ರತಿಮೆಯ ಉಲ್ಲೇಖ ಬರುತ್ತದೆ. ಜುಮಾದಿ ಭೂತವು ವೇಣೂರಿನಲ್ಲಿ ಗೊಮ್ಮಟ ಪ್ರತಿಮೆಯನ್ನು ನೋಡಿ ಅದರ ಪೂಜೆಯ ಇಂದ್ರನನ್ನು ಹೊಡೆದು ಬೀಳಿಸುತ್ತದೆ. ವೇಣೂರು ಗೊಮ್ಮಟನ ಪ್ರತಿಮೆಯ ಸ್ಥಾಪನೆಯ ಕಾಲ ಕ್ರಿ. ಶ, 1603. ಆದ್ದರಿಂದ ಈ ಪಾಡ್ದನದ ರಚನೆಯ ಕಾಲ ಕ್ರಿ. ಶ. 1603ರ ಬಳಿಕ ಎನ್ನುವುದು ಸ್ಪಷ್ಟ. ಇದೇ ಪಾಡ್ದನದಲ್ಲಿ ಒಬ್ಬ ಚೌಟ ಅರಸನ ವಿಚಾರ ಬರುತ್ತದೆ. ಆದರೆ ಅವನ ಹೆಸರನ್ನು ಹೇಳಿಲ್ಲ. ವೇಣೂರಿನ ಗೊಮ್ಮಟ ಪ್ರತಿಮೆಯ ಸ್ಥಾಪನೆಯ ಬಳಿಕ ಕ್ರಿ. ಶ. 1603ರ ಬಳಿಕ–ತುಳುನಾಡಿನಲ್ಲಿ ಬರುವ ಚೌಟ ಅರಸನೆಂದರೆ ಚಂದ್ರಶೇಖರ ಚಿಕ್ಕರಾಯ. ಅವನ ಆಳ್ವಿಕೆಯ ಕಾಲ ಕ್ರಿ. ಶ, 1606 ರಿಂದ 1628. ಪಾಡ್ದನದಲ್ಲಿ ಬರುವ ಚೌಟ ಅರಸನು ಈ ಚಂದ್ರ ಶೇಖರ ಚಿಕ್ಕರಾಯನೇ ಆಗಿರಬಹುದು. ಏಕೆಂದರೆ ಅನಂತರದ ಆಳ್ವಿಕೆ ಇರುವುದು ಚೆನ್ನಮ್ಮ ದೇವಿಯದ್ದು. ಪಾಡ್ದನದಲ್ಲಿ ಚೌಟ ಅರಸ ಎಂದು ಸ್ಪಷ್ಟವಾಗಿ ಹೇಳಿರುವ ಕಾರಣ ಅದು ಹೆಣ್ಣು ಅರಸಿಯ ಆಳ್ವಿಕೆ ಆಗುವುದಿಲ್ಲ. ಈ ದೃಷ್ಟಿಯಿಂದ ಈ ಪಾಡ್ದನದ ರಚನೆ 17 ನೇ ಶತಮಾನದ ಪೂರ್ವಾರ್ಧ ಆಗಿರಬಹುದು, ಮಾರಾವಾಂಡಿ ಭೂತ ; ಮಾರಾವಾಂಡಿ ಭೂತದ ಪಾಡ್ದನದಲ್ಲಿ ಆ ಭೂತವು ವೇಣೂರಿಗೆ ಬರುವುದು, ಆಗ ವೇಣೂರನ್ನು ತಿಮ್ಮಣ್ಣ ಅಜಿಲರು ಆಳುತ್ತಿದ್ದರು ಎನ್ನುವ ಮಾತು ಬರುತ್ತದೆ. ತಿಮ್ಮಣ್ಣಾಜಿಲರ ಆಳ್ವಿಕೆಯ ಕಾಲ ಕ್ರಿ. ಶ. 1600 ರಿಂದ 1610. ಆದ್ದರಿಂದ ಈ ಪಾಡ್ದನದ ರಚನೆಯ ಕಾಲವು ಸುಮಾರು ಅದೇ ಆಗಿದ್ದು 17 ನೇ ಶತಮಾನದ ಪೂರ್ವಾರ್ಧ ಎಂದು ಭಾವಿಸಬಹುದು.

ಜುಮಾದಿ ಪಾಡ್ದನ J[8]

ದೇವುಪೂಂಜನ ವೃತ್ತಾಂತವಿರುವ ಜುಮಾದಿ ಪಾಡ್ದನದಲ್ಲಿ ವೇಣೂರಿನ ತಿಮ್ಮಣ್ಣಾಜಿಲನ ಸೇನಾಪತಿ ದೇವುಪೂಂಜನು ಬಂಗರಸರ ಜೊತೆಗೆ ಯುದ್ಧ ಮಾಡುವ ಘಟನೆ ಇದೆ, ತಿಮ್ಮಣ್ಣಾಜಿಲನ ಆಳ್ವಿಕೆಯ ಕಾಲ ಕ್ರಿ. ಶ. 1600–1610. ಆದ್ದರಿಂದ ಈ ಪಾಡ್ದನದ ರಚನೆ, ಅದರ ಬಳಿಕ 17ನೇ ಶತಮಾನದ ಪೂರ್ವಾರ್ಧ ಆಗಿರಬೇಕು.

ಸಾರಾಲ ಜುಮಾದಿ ಪಾಡ್ದನ

ಈ ಪಾಡ್ದನದಲ್ಲಿ ಬಂಟ್ವಾಳದಿಂದ ಮಂಗಳೂರಿಗೆ ಬರುವ ದಾರಿಯಲ್ಲಿ ಇರುವ ಊರಾದ ಪರಂಗಿ ಪೇಟೆಯ ಹೆಸರು ಇದೆ. ಈ 'ಪರಂಗಿ ಪೇಟೆ' ಎನ್ನುವ ಹೆಸರು ಪರಂಗಿಯವರಿಂದ ಅಂದರೆ ವಿದೇಶೀಯರ ಆಗಮನದ ಬಳಿಕ ಬಂದದ್ದು. ಪೋರ್ಚುಗೀಸರು 1573 ರಲ್ಲಿ ಇಕ್ಕೇರಿಯವರೊಡನೆ ಸಂಧಾನ ಮಾಡಿ ಅರ್ಕುಳವನ್ನು ಪಡೆದುಕೊಂಡು, ಅಲ್ಲಿ ಮಳಿಗೆಗಳನ್ನು ಹಾಕಿ ಜವುಳಿ ಅಂಗಡಿ ಹಾಕಿದ ಕಾರಣ ಆ ಪೇಟೆಗೆ 'ಪರಂಗಿ ಪೇಟೆ' ಎಂಬ ಹೆಸರು ಬಂತು ಎಂದು ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆಯಲ್ಲಿ ಇದೆ. ಆದ್ದರಿಂದ ಈ ಪಾಡ್ದನದ ರಚನೆ 16ನೇ ಶತಮಾನದ ಕೊನೆಯ ಬಳಿಕ, ಬಹುಶಃ 17ನೇ ಶತಮಾನದಲ್ಲಿ ಆಗಿರಬಹುದು.

ನೇರವಾಗಿ ಕಾಲನಿರ್ದೇಶವನ್ನು ಕೊಡದ ಅನೇಕ ಪಾಡ್ದನಗಳು ಇವೆ. ಭೂತದ ಮಹಿಮೆ ಮತ್ತು ಪ್ರಸರಣಕ್ಕೆ ಸಂಬಂಧಿಸಿದ ಇಂತಹ ಅನೇಕ ಪಾಡ್ದನಗಳಲ್ಲಿ ತುಳುನಾಡಿನ ಸ್ಥಳೀಯ ಅರಸು ಮನೆತನದವರಾದ ಜೈನ ಧರ್ಮದ ಬಂಗರು, ಚೌಟರು, ಸಾವಂತರು, ಅಜಿಲರು, ಭೈರರಸರು, ಹೆಗ್ಗಡೆಗಳು ಮುಂತಾದ ಅರಸರ ಉಲ್ಲೇಖಗಳು ಇವೆ. ಈ ಅರಸು ಮನೆತನಗಳೆಲ್ಲ ತುಳುನಾಡಿನಲ್ಲಿ ಹೆಚ್ಚು ಪ್ರಭಾವಶಾಲಿಯಾಗಿ ಇದ್ದದ್ದು 15, 16 ಮತ್ತು 17ನೆಯ ಶತಮಾನಗಳಲ್ಲಿ. ಈವರೆಗೆ ಈ ಅಧ್ಯಾಯದಲ್ಲಿ ಚರ್ಚಿಸಿರುವ ಕಾಲ ನಿರ್ದೇಶನವಿರುವ ಪಾಡ್ದನಗಳು ಹೆಚ್ಚಾಗಿ 16 ಮತ್ತು 17ನೇ ಶತಮಾನಕ್ಕೆ ಸೇರಿದವು. 17ನೇ ಶತಮಾನದ ರಚನೆಗಳ ಕುರುಹುಗಳು ಇವೆ. ಆದ್ದರಿಂದ ಸಮಗ್ರವಾಗಿ ತುಳು ಪಾಡ್ದನಗಳ, ಅದರಲ್ಲೂ ಮುಖ್ಯವಾಗಿ ಭೂತಾರಾಧನೆಗೆ ಸಂಬಂಧಿಸಿದ ಪಾಡ್ದನಗಳ ರಚನೆಯ ಕಾಲವನ್ನು 15, 16, 17ನೇ ಶತಮಾನ ಎಂದು ತೀರ್ಮಾನಿಸುವುದು ಹೆಚ್ಚು ಸಹಜವಾಗಿದೆ.

೨

# ಕಬಿತಗಳು

# ಕುಣಿತದ ಹಾಡುಗಳು

# ಇತರ ಜನಪದ ಗೀತಗಳು

## ೨. ಕಬಿತಗಳು

'ಕಬಿತಗಳು' ತುಳು ಜನಪದ ಸಾಹಿತ್ಯದ ಕೆಲಸದ ಹಾಡುಗಳಲ್ಲಿ ಒಂದು ಪ್ರಮುಖ ಪ್ರಕಾರಕ್ಕೆ ಸೇರುತ್ತವೆ. 'ಕವಿತ' ಎನ್ನುವುದರಿಂದ 'ಕಬಿತ' ಎನ್ನುವ ಪದ ಬಂದಿರಬೇಕು. ಇಲ್ಲಿ 'ಕಬಿತ' ಎನ್ನುವುದು ಒಂದು ವಿಶಿಷ್ಟ ರೀತಿಯ ಹಾಡುಗಳಿಗೆ ಮಾತ್ರ ಅನ್ವಯವಾಗುತ್ತದೆ.

1. ಹಾಡುವ ಹಿನ್ನೆಲೆ : ಹೊಲಗಳಲ್ಲಿ ನೇಜಿ (ನಾಟಿ) ನೆಡುವಾಗ ಹೇಳುವ ಹಾಡುಗಳೇ 'ಕಬಿತ'ಗಳು. ನೇಜಿ (ನಾಟಿ) ಕೀಳುವಾಗ ಕಬಿತಗಳನ್ನು ಹಾಡುವುದಿಲ್ಲ. 'ಸಂಧಿ'ಗಳನ್ನು ಹಾಡುತ್ತಾರೆ.

ಸಾಮಾನ್ಯವಾಗಿ ಹೆಂಗಸರು ನೇಜಿ ನೆಡುವುದು ತುಳುನಾಡಿನಲ್ಲಿ ಹಿಂದಿನಿಂದ ನಡೆದು ಬಂದ ಸಂಪ್ರದಾಯ. ಅವರಲ್ಲಿ ಒಬ್ಬಾಕೆ ಆ ಗುಂಪಿನ ನೇತೃತ್ವ ವಹಿಸುತ್ತಾಳೆ. ಅವಳು 'ಕಬಿತ' ದ ಒಂದು ಸಾಲನ್ನು ಹಾಡುತ್ತಾಳೆ. ಆಗ ಎಲ್ಲರೂ ಆ 'ಕಬಿತ' ದ ಪಲ್ಲವಿಯನ್ನು ಒಟ್ಟಿಗೇ ಹಾಡುತ್ತಾರೆ. ಬಳಿಕ ಪುನಃ ಆ ಹೆಂಗಸು ಕಬಿತದ ಮುಂದಿನ ಸಾಲನ್ನು ಹಾಡುತ್ತಾಳೆ. ಉಳಿದವರು ಹಿಂದಿನದೇ ಪಲ್ಲವಿಯನ್ನು ಹೇಳುತ್ತಾರೆ. ಈ ರೀತಿ 'ಕಬಿತ' ದ ಹಾಡುವಿಕೆಯು ಮುಂದುವರಿಯುತ್ತದೆ. ಇಲ್ಲಿ 'ಕಬಿತ' ದ ಪಠ್ಯವನ್ನು ಹಾಡುವವಳು ಒಬ್ಬಳು ಮಾತ್ರ. ಉಳಿದವರು ಪಲ್ಲವಿಯನ್ನು ಮಾತ್ರ ಪುನರಾವರ್ತಿಸುತ್ತಾರೆ. ಒಂದು ಸಾಲನ್ನು ಹಾಡಿದ ಮೇಲೆ ಪ್ರತೀ ಬಾರಿಯೂ ಪಲ್ಲವಿಯನ್ನು ಹಾಡಬೇಕು.

2. ಕಬಿತಗಳ ವಸ್ತು : ಕಬಿತಗಳಲ್ಲಿ ಕಥೆ ಇರುವುದು ಬಹಳ ಕಡಿಮೆ. 'ಹೀ ಜೋ ಮಂಜಟ್ಟಿ ಗೋಣ' ಎಂಬ ಕಬಿತದಲ್ಲಿ ಸ್ಪಷ್ಟವಾದ ಕಥೆ ಇದೆ, ಆದುದರಿಂದ ಈ ಕಬಿತ 'ಕಥನ ಕವನ' (Ballad) ದ ವ್ಯಾಪ್ತಿಗೆ ಸೇರುತ್ತದೆ. ಆದರೆ ಹೆಚ್ಚಿನ ಕಬಿತಗಳಲ್ಲಿ ಶಬ್ದಗಳ ಸರಮಾಲೆ, ಹಾಸ್ಯದ ತುಣುಕು, ಒಂದು ಸಾಮಾನ್ಯ ಘಟನೆ, ಒಂದು ಚಿಕ್ಕ ವಿಚಾರ' ಇರುತ್ತದೆ. ಕಬಿತಗಳು ಶುದ್ಧ ಕೆಲಸದ ಹಾಡುಗಳಾಗಿರುವುದರಿಂದ, ಇಲ್ಲಿ ಸಾಹಿತ್ಯಿಕ ಮೌಲ್ಯ ವಿಶೇಷವಾಗಿ ಕಂಡು ಬರುವುದಿಲ್ಲ. ಆದರೆ ಕೆಲವು ಕಬಿತಗಳಲ್ಲಿ ತುಳುನಾಡಿನ ಸಂಸ್ಕೃತಿಯ ಕೆಲವು ವಿಚಾರಗಳನ್ನು ಕಾಣಬಹುದು. ಉದಾಹರಣೆಗಾಗಿ ಕೆಲವು ಕಬಿತಗಳನ್ನು ಇಲ್ಲಿ ಅಧ್ಯಯನ ಮಾಡಬಹುದು.

(1) ಓ ಬೇಲೇ : ಅತ್ಯಂತ ಜನಪ್ರಿಯವಾದ ಹಾಗೂ ಸಾರ್ವತ್ರಿಕವಾಗಿ ಲಭ್ಯವಾಗುವ ಕಬಿತ-ಓ ಬೇಲೇ.

"ಓಬೇಲೇ" ಕಬಿತಕ್ಕೂ ಆ ಕಬಿತವನ್ನು ಹಾಡುವ ಸಂದರ್ಭಕ್ಕೂ ಸ್ಪಷ್ಟವಾದ ಸಂಬಂಧವಿದೆ. ತುಳುವಿನಲ್ಲಿ ಬೇಲೆ = ಕೆಲಸ. "ಓ ಬೇಲೆ" = ಓ ಕೆಲಸವೇ ಎಂದು ಅರ್ಥ. ಹೊಲಗಳಲ್ಲಿ ನೇಜಿ ನೆಡುವಾಗ ಹಾಡುವ ಹಾಡುಗಳು 'ಕಬಿತಗಳು'. ನೇಜಿ ನೆಡುವುದಕ್ಕಾಗಿ ಹೊಲೆಯನೊಬ್ಬನು ಧನಿಗಳ ಅಪ್ಪಣೆಯಂತೆ ಆಳುಗಳನ್ನು ತರುವುದಕ್ಕೆ ಹೋಗುವ ಮತ್ತು ಆಳುಗಳನ್ನು ತರುವ ವಿಷಯವನ್ನು ಈ 'ಓ ಬೇಲೇ' ಕಬಿತವು ಒಳಗೊಂಡಿದೆ. ಇಲ್ಲಿ ಕಬಿತದ ವಸ್ತು ಮತ್ತು ಅದನ್ನು ಹಾಡುವ ಸಂದರ್ಭಗಳ ಸಂಬಂಧ ನೇರವಾಗಿ ಕಾಣಿಸುತ್ತದೆ. ಈ ರೀತಿಯ ಸ್ಪಷ್ಟ ಸಂಬಂಧ ಉಳಿದ ಕಬಿತಗಳಲ್ಲಿ ಕಾಣಿಸುವುದಿಲ್ಲ. ಈ ಕಾರಣದಿಂದಾಗಿ, 'ಓ ಬೇಲೇ' ಕಬಿತವು ತುಳುನಾಡಿನಲ್ಲಿ ಸಾರ್ವತ್ರಿಕವಾಗಿ ಕಾಣಸಿಕ್ಕುತ್ತದೆ ಮತ್ತು ಜನಪ್ರಿಯವಾಗಿದೆ ಎಂದು ಭಾವಿಸಬೇಕಾಗುತ್ತದೆ. ಎಲ್ಲ ಕಬಿತಗಳನ್ನೂ ರೂಢಿಯಲ್ಲಿ 'ಓ ಬೆಲೆ' ಹಾಡುಗಳು ಎಂದೂ ಕರೆಯುವ ಸಂಪ್ರದಾಯವಿದೆ. ಇದು 'ಓ ಬೇಲೇ' ಕಬಿತದ ಭೌಗೋಳಿಕ ವ್ಯಾಪ್ತಿಯನ್ನು ಸೂಚಿಸುತ್ತದೆ. 'ಕಬಿತ'ಗಳು 'ಕೆಲಸದ ಹಾಡುಗಳು' '(ಓ ಬೇಲೆ' ಹಾಡುಗಳು) (work songs) ಎನ್ನುವ ಸಂಗತಿಯೂ ಇದರಿಂದ ಗೊತ್ತಾಗುತ್ತದೆ.

'ಓ ಬೇಲೇ' ಕಬಿತದ ಜನಪ್ರಿಯತೆ ಮತ್ತು ಸಾರ್ವತ್ರಿಕತೆಯ ಕಾರಣದಿಂದ ಅದರ ಕೆಲವು ಭಿನ್ನ ಭಿನ್ನ ಪಾಠಗಳು ದೊರೆಯುತ್ತವೆ. ಇಲ್ಲಿ ನಾಲ್ಕು ಪಾಠಗಳ ಆಧಾರದಿಂದ 'ಓ ಬೇಲೇ' ಕಬಿತವನ್ನು ಅಧ್ಯಯನ ಮಾಡಲಾಗಿದೆ. ಈ ಭಿನ್ನ ಪಾಠಗಳಲ್ಲಿ ಮುಖ್ಯ ವಸ್ತುವಿನಲ್ಲಿ ವಿಶೇಷ ವ್ಯತ್ಯಾಸವಿಲ್ಲ. ವಿವರಣೆಗಳಲ್ಲಿ ವ್ಯತ್ಯಾಸಗಳು ದೊರೆಯುತ್ತವೆ.

ಪಾಠ 1: (ಸೂಚನೆ: ಪ್ರತೀ ಸಾಲಿನ ಆರಂಭದಲ್ಲಿ 'ಓ' ಬರುತ್ತದೆ.)

ಓ ಬೇಲೇ ಓ ಬೇಲೆ || ಪಲ್ಲವಿ ||
ನಮ್ಮಾಂಡ ಉಳ್ಳಯೇ
ಪೋತುಂಗೆ ಅವುಳು
ಅಜೆ ಮುಡಿತ್ತಾಡೆ
ದರ್ಬೆ ಪಿರೆಪ್ಪತೇರ್
ಮೂಜಿ ಮುಡಿತ್ತಾಡೆಗ್
ದರ್ಬೆಟ್ ನೇಜಿ ಪಾಡ್ಪಾತ್ತೇರ್
ಒರೊಪಾಡಿ ನೇಜಿ
ಚಾಲೆಪಕ್ಕಿ ಪೆಜ್ಜಿದ್ ಪೋಡು
ಮಗ್ತ್ ಒರೊ ಪಾಡ್ಯೆರ್
ಕುಕ್ಕಿರಿ ಪಂಜಿ ಪೆಜ್ಜಿದ್ ಪೋಂಡು
ಮಗ್ತ್ ಒರೊ ಪಾಡ್ಯೆರ್
ಗಂಡಸಾಲೆ ಜೀರಸಾಲೆ
ಅವು ಒಂಜಿ ನೇಜಿ
ದೂಜಿ ಕೊಡಿಪ್ಪುತ ಪೊರ್ಲು
ಕೊಡಿತ್ತೊಂದ್ ಬತ್ತ್ಂಡ್
ನಮ್ಮಾಂಡ ಉಳ್ಳಾಯೇ
ಕಂಡೊದ ಕರೆಬರಿ
ಪೋತು ಸೂನಾಗ
ಮೂಂತೆರೆ ನಟ್ಟಿ ನಡ್‌ದ್ ತೀರ್‌ಂಡ್
ನಮ್ಮಾಂಡ ನಟ್ಟೇ
ಬೂರಾರಿ ಪೋಂಡು
ಜನಮಾನಿ ಒಂತೆ ಕಮ್ಮಿ ಅಂಡೆ
ಅತೇನ ಪೋರ್ತುದೂ
ಪೋಪೆತ್ತೋ ದಿಕ್ಕೇ
ಕಲಾಲ ದಿಕ್ಕೇ
ಒಡೆಗ್ ಪೋಪಾ
ಕಲಾಲ ದಿಕ್ಕಾ
ಅಪೇತ ಬೈಲ್‌ಗ್
ಏನಾಂಡ ಪೋಪೇ
ನೇಜೀತ ಪೊಣ್ಣುಳು
ಓ ಬೇಲೆ ಪಾಡ್ದ
ನೇಜಿ ನಡ್ಪೊತ್ತೊ
ಓ ಬೇಲೆ ಕೆಣ್ಯಾರ
ಏನಾಂಡ ಪೋಪೆ
ಆಂಡ ಪೋಪುಂಡ

ಎಂಕೆ ಬೆನ್ನೀಗ್
ಕೂಡ್ಪನೋ ಪಂಡ್‌ದ್
ಕೇಂಡೇರ್ ಉಳ್ಳಾಯೇ
ಕೂಡೊಳೀ ಪಂಡೇ
ಈ ಅಂಚಿ ಪೋಲಾ
ಈ ಗಟ್ಟದ ಮಿತ್ತ್‌ಗ್
ಜನಮಾನೀನೆ ಕೂಟೊಂದು ಬಲ್ಲಾ
ಅಪಗ ಪಣ್ಪೆತ್ತೋ ದಿಕ್ಕೇ
ಎನ್ನ ಪನ್ನೇಟಾ
ಬರಯೆರ್ ಅಕುಳು
ಅತೇನ ಪೊರ್ತುಟೂ
ಪಣ್ಪೇರ್ ಉಳ್ಳಾಯೇ
ಈ ಅಂಚಿ ಪೋಲ
ದೈ ತೋಟೊದ ಪಾಳೆ ಕಡ್ಪುಲ
ದೆತ್ತೀಟ ಇಳ್‌ಣೊ
ನಟ್ಪುದ್ ಉಣ್ಣಾಂದ್
ಪಂಡೇರ್ ಉಳ್ಳಾಯೇ
ದೈತೋಟೊಗು ಪೋಯೆತ್ತೋ ದಿಕ್ಕೇ
ದೈತೋಟೊದ ಪಾಳೆ ಕಡ್ತೆ ಆಯೆಂ
ಪಾಳೆ ಕಡ್ತ್‌ದ್
ದೆತ್ತೀಟ ತಳ್‌ಣೋ
ಕೇಂಡೆತ್ತೋ ದಿಕ್ಕೇ
ಅಪಗ ನನೊನೇ
ಆಗೊಳಿತ ತಳ್‌ಣೋ
ಮರಯಿದ ಉಪ್ಪಾಡ್
ಕುದ್ರೆತ ಅಳೆ
ಕೊಂಡತ್ತ್‌ದ್ ಬಳಸ್ಪೆರ್
ಆಯಿನ ಸಿಂದೋಂದು
ಬತ್ತೆತ್ತೋ ದಿಕ್ಕೇ
ಅತೆನ ಪೊರ್ತುಟೂ
ಕೊರ್ವೇರ್ ಉಳ್ಳಾಯೇ
ಉಳ್ಳಾಯೆ ದೀಡ್ಪಿ
ಕಣ್ಣ್‌ತ ಮುಟ್ಟಾಳೆ
ಕಲಾಲಗ್ ಕೊರ್ವೇರ್
ಉಳ್ಳಾಯೆ ದೊಂಬುಗು ಪತ್‌ನ
ಬೊಳ್ಗೊಡೆ ಕಲಾಲಗ್ ಕೊರ್ವೆರ್

ಉಳ್ಳಾಯೆಂ ಮೊಟ್ಟುಪಿ
ಮುಲಾರ್ಡಿ ಮೊಟ್ಟು
ಉಳ್ಳಾಯೆ ಸುತ್ತ್‌ಪಿ
ಕಾಂಗ್‌ತ ಮಾಸಾಡಿ
ಕಲಾಲಗ್ ಕೊರ್ವೇರ್
ಉಳ್ಳಾಯೆ ಪತ್ತ್‌ಪಿ ನಾಗರಬೆತ್ತೊ
ಕಲಾಲಗ್ ಕೊರ್ವೇರ್
ಈ ಅಂಡ ಪೋಲಾಗ
ಗಟ್ಟದ ಮಿತ್ತ್‌ಗ್
ಜನಮಾನಿನ್
ಕೂಟೊಂದು ಬಲ್ಲಾ
ಅಳ್ತ್ ನನಾನೇ
ಪಿದಡೋಂದು ಪೋಯೆ
ಸಿರ್ತೆ ಸಿರಿಲೋಕೊಡ್ತು
ಮಿತ್ತ್ ಮಿರಿ ಲೋಕೊಗು
ಗಟ್ಟಾತ ಮಿತ್ತ್‌ಗ್
ಪೋನಾಗ ಉಳ್ಳತ್ತೊ ಪೊಣ್ಣುಗುಳು
ಬೈರೇರೆ ಪೊಣ್ಣುಗಳು
ರಾಗೊ ಒಯ್ತೋಂದ್
ರಾಗಿ ಬೀಸೋಂದ್
ಸೋಬಾನೆ ಪಂಡೋಂದ್
ಉಳ್ಳೊಗೇ ಪೊಣ್ಣುಗುಳು
ಅಪಾಗ ಪಣ್ಪೆತ್ತೋ
ಕಲಾಲ ದಿಕ್ಕೇ
ಎನ್ನ ಉಳ್ಳಾಯಗ್
ನಟ್ಪೇತ ಬೇಲೆಗ್
ಬಿಟ್ಪೇತ ಬೇಲೆಗ್
ನಿ ಕುಳು ಬರುವಾರೋ
ಎನ್ನ ಉಳ್ಳಾಯಗ್
ಮೂಜಿ ದಿನೊತ್ತ
ನಟ್ಪೇತ ಬೇಲೆಗ್
ಬಿಟ್ಪೇತ ಬೇಲೆಗ್
ಎಂಕುಳು ಬರಾಯೋ
ಎಂಕುಳೆ ಬೈರೇರ
ಮುಪ್ಪೊ ರೂಪಾಯಿತ
ಮಣ್ಣ ಬೇಲೆನೆ
ಬತ್ತ್‌ಡ್ ಬೆನಿಯೆರೆ

ಪೋತೇರ್ ಅವುಳು
ಅಕುಳು ಬನ್ನಾಗ
ಬಿಂದೆರ್ ಸಂದಾಗೋ
ಅಟ್ಟಿಲ್ ಅರಗಣೊ
ಎಂಕ್ಲೆಗ್ ಅವೊಡೂ
ಎಂಕುಳು ಬರಾಯೋ
ಕೂಟ್ಯೆತ್ತ್ರೋ ದಿಕ್ಕೇ
ಕೆಂಚ ವಿಾಸೆನ್ ಕೆಸರಿತ್ ಅವುಳು
ಕುಪ್ಪುಳು ಕಣ್ಣಿನ್ ಮಗ್‌ತ್ತ್
ನಾಗರಬೆತ್ತ್ರೊ ವಂಗ್‌ರೆತ್ ಪತ್ರಿಯೆ
ಅತೇನ ಪೊರ್ತುಟೂ
ನೋಪಾಡ ದಿಕ್ಕಾ
ಎಂಕುಳೋ ಬರ್ಪೋಂಡ್
ಬೇಕೋ ಬೇಕೋನೇ
ಬಿಚ್ಚಿದ್ ಪೋಯಿ ಚರೆನ್ ಕಟ್ಟ್ರೋಂದ್
ಪಿದಾಡ್ಯೊ ಪೊಣ್ಣುಗುಳು
ಜನೊವರಾನೀನ್
ಕೂಟ್ಯೆತ್ತ್ರೋ ದಿಕ್ಕೇ
ಕಲಾಲ ದಿಕ್ಕೇ
ಕರ್ವಾತಿ ಟುಂಡೂ ಮಪ್ಪಾಳು ಜನೊ
ಬೊಳ್ಪಾತಿ ಟುಂಡೂ ಮುಪ್ಪಾಳು ಜನೊ
ಜನಮಾನೀನ್
ಕೂಟೋಂದ್ ಬನ್ನಾಗ
ಒಂಜಿ ಗುಡ್ಡೇನ್
ಕರಿಯೋಂದ್ ಬನ್ನಾಗ
ಒಂಜಿ ಗುಡ್ಡೇನ್
ಜತ್ತ್ರೋಂಡ್ದ್ ಬನ್ನಾಗ
ಅಂಗಾತೆಸೆಟ್ ಆಸರ್
ಪೋಂಡತ್ತ್ರೋ ದಿಕ್ಕಾಗೆ
ಬಡವುಟು ಬೇಸಾರ
ಪೋಂಡತ್ತ್ರೋ ದಿಕ್ಕಾಗೆ
ಒಂಜಾಳೆ ಜನೊ ದೆತ್ತ್‌ತ್‌ಗೆ ಅವುಳು
ಪೊಲ್ಲಾಳೆ (ಬೈದ್ಯೆರೆ) ಗುತ್ತಿಗೆಟ್
ಅಡವು ದೀಡ್‌ಡ್
ರಡ್ಡ್ ಸೇರೊನೆ
ಕಳಿಯಾಂಡ ಪರುವೆ

ಆಯೆಡ್ದ್ ಇಂಚೀನೆ
ಬನ್ನಾಗ ಅವುಳು
ಬಜ್ಜಿರೆ ತಿನಾಂತೆ
ಬಾಲ ಬೆರಾವ್ಮೆ
ಪೋಪುಂಡು ದಿಕ್ಕಾಗ್
ಒಂಜಾಳ್ ಜನೊ
ದೆತ್ತ್ತೆಗೆ ಅವುಳು
ಜೆಟ್ಟೀನ ಅಂಗಡಿಡೆ
ಅಡವು ದೀಡ್ಯೆ
ಬಚ್ಚಿರೇ ಸಿಂದೇ
ಬತ್ತ್ತ್ ನವಾ
ಎತ್ತ್ನಗನೇ
ನಮ್ಮಾಂಡ ಉಳ್ಳಾಯೇ
ಜನಮಾನಿನ್
ಲೆಕ್ಕೊ ಮಾಳ್ತೆತ್
ಕುಳ್ಯೆರ್‌ಗೆ ಅವುಳು
ಸೂನಾಗ ಅವುಳು
ಕರ್ವಾತಿಟುಂಡು ಮುಪ್ಪೊಗ್ ಒಂಜಿ ಕವಿ್ಮ
ಬೊಳ್ಪಾತಿಟುಂಡು ಮುಪ್ಪೊಗ ಒಂಜಿಕವಿ...
ಅತೇನ ಪೊರ್ತುಟು
ರಡ್ಡಾಳ್ ಜನೊನು
ದಾಸೆ ಮುಳ್ತಾಂದ್
ಕೇಂಡೆರ್ ಉಳ್ಳಾಯೇ
ನೋಪೆರೆ ಕಟ್ಯೇರೆ
ಪೋಪೇರ್ ಉಳ್ಳಾಯೇ
ದಮ್ಮಯ್ಯ ಉಳ್ಳಾಯು
ದಕ್ಕಯ್ಯ ಉಳ್ಳಾಯು
ಒಂಜಿ ಗುಡ್ಡೇನೆ
ಕರಿಯೋಂಡೆ ಬನ್ನಾಗ
ಅಂಗಾತೆನೆಟ್ ಅಸಾರ
ಪೋಡೆಂಕ್
ಬಟವೂಡೆ ಬೇಸಾರ
ಎಂಕಾಂಡ್ ಪೋಂಡೂ
ಒಂಬಾಳ್ ಜನೊ
ಅಡವು ದೀಡ್ತ್
ಕಳಿಯಾಂಡ ಪರಿಯೇ

ಆಯಿಡ್ದ್ ಇಂಚೀ
ಬನ್ನಾಗ ಎಂಕ್
ಬಚ್ಚಿರೆ ಸಿನಾಂಬೆ
ಬಾಲ ಬೆರವ್ಮೆ
ಪೋತುಂಡುಗೆ ಅವುಳು
ಒಂಜಾಳೆ ಜನೋ
ಚೆಚ್ಚೀನ ಅಂಗಡೀಟ್
ಆಡವು ದೀಡ್ತ್
ಬಚ್ಚಿರೆ ಸಿಂದೆ
ಕೊಪಿತೋಂಡ್ದ್ ಲಾಗ್ಯೊಂಡ್ದ್
ಉಳ್ಳೇರ್ ಉಳ್ಳಾಯೇ
ಕಂಡೊತಾಡೆಗ್ ಪೋನಾಗ
ಬೇರೆ ತಾಕ್ಲಟ ಕೋಪೊ
ಇಲ್ಲಾಡೆಗ್ ಬನ್ನಾಗ
ದೆತ್ತೀಟ ಕೋಪೊ
ಕೋಪೀತ್ ಲಾಗೀತ್
ದೆತ್ತೀಗ್ ಬಂಜಿ
ಬತ್ತ್ಂಡ್ಗೆ ಅವುಳು
ಪೊಣ್ಣು ಬಾಲೆನ್
ಪೆದ್ದ್ಂಟ ಅಳ್
ಅಪ್ಪೆಗ್ ಸಹಾಯೊ
ಅಣ್‌ಜಾಲೆನೆ
ಪೆದ್ದಂಟ ಅಳ್
ಅಮ್ಮಗ್ ಸಹಾಯೊ
ಪೊಣ್ಣು ಮಗಳ್
ಪುಟ್ಟುಂಡನೆ ಅಂದಾಂಡ
ಬೊಳ್ಳುಗು ಲಕ್ಕಿತ್
ಚೆಂಬು ಒಟ್ಟೆಲ್
ದೆಕ್ಕುವತ್ತೋ ಬಾಲೇ
ಅಣೆ ಮಗೇನೆ
ಪುಟ್ಟುಂಡನೆ ಅವುಳು
ಕಂಡೊತ ಕರೆಬರಿಕ್ಕೆ
ಪೋತುಂಗೆ ಅವುಳು
ಎಚ್ಚಾಯಿ ನೀರ್ ತಗ್ಗಾವು ಬಾಲೇ
ತಗ್ಗಾಯಿ ನೀರ್ ಎಚ್ಚಾವು ಬಾಲೇ
31 ಕಂಡೊದ ಕಡಿ ನೀರ್

ಕಟ್ಟೊಂದು ಬರುವೆ
ಬನ್ನಾಗ ಅವುಳು
ಮುದ್ದುಳ್ಳ ಕಂಜಿ
ಮೊಗುರು ಪಂತಿ
ಪೊರಿತ್ತೊಂದೇ ಬರುವೆ
ಕಂಜಿದ ಮೋನೆಗ್
ಪಾಡ್ಯನೇ ಮಗೇ
ದಾರಿಕ್ ಗೊಟ್ಟು
ಕೊಟ್ಟಾಂಡ ದೀಯೆ
ಉಳಾಯಿ ಪೊಗ್ಯೆ
ತಾನ್‌ಲ ಪತ್ತ್‌ನ
ಬೊಳ್ಳಿನ ಸಿರಿಗಿಂಡ್ಯೆ
ದೆತ್ತೊಂಡೆ ಮಗೇ
ಅಮ್ಮೆರ ತೋಡಾಯಿನ
ಗುಯೆಲಾಡೆ ಪೋಯೆ
ಆಕಾಶಾಂಡ ಪನೆಮರ
ಪಾತಾಳಾಂಡ ಪನಿನೀರ್
ಒಂಜೇ ಮರಾಯಿ ನೀರ್‌ಲ ದೆತ್ತ್
ತನ್ನಾನಿ ಸಿರಿಗಿಂಡ್ಯೆ
ಬೊಳ್ಳುಕಲ್ಲ ಪೊಡಿ ಪಾಡ್ಯೆ
ಬೊಳ್ಯೊನೊಕೆ ನೆಡಿಯೆ
ಮುಗ್‌ತೊಂಜಿ ಮರಯಿ
ನೀರೆನ್‌ದೆತ್ತೆ
ತನ್ನಾನೆ ಕಾರ್ ಕೈಯೇ
ಮುಖಸಿರಿ ಸೆಡಿಯೇ
ಎಲಗ್‌ತೊಂಜಿ ಮರಯಿ
ನೀರ್‌ನ್ ದೆತ್ತೇ
ಬೊಳ್ಳಿನ ಸಿರಿಗಿಂಡ್ಯೆ
ದಿಂಜಾಯೆ ಮಗೇ
ಅಮ್ಮೇಶಿ ಕಟ್ಟಾಯೆ
ತೊಳಸಿ ಮುಂಟಮೆಗ್
ಬರುವೆನಾ ಮಗೇ
ಮೂಜಿಲಾ ಸುತ್ತು
ಬಲೆನ್ ಬರುವೆ
ತೊಳಸಿಗ್ ನೀರ್
ಮುಯ್ಯೇ ಮಗೇ

ಬಂಜಾರೊ ಅಂಗಾಯೇ
ನೀರ್‌ನ್ ದೆತ್ರೇ
ಉಡಲ್‌ಗ್ ಸಂಪಾಂಡ್
ಪರಿಯೆನೋ ಮಗೇ
ಉಳಯಿನೇ ಪೋಪೆ
ಅಯೆ ಪೋದ್
ಅಪ್ಪೆರಡ ಕೇನ್ಯೆ
ಅಗೊಳಿದ ತಂಞ್ಞಣ
ಕುದುಪೆದ ಬೆಂಞ್ಞಣ
ಕುಪ್ಪಿದ ಉಪ್ಪಾಡ್
ಮರಾಯಿದ ಅಡ್‌ಂಗಾಯಿ
ಬಲೆಸಿರಿ ಅಂದ್ ಅಂಡ್

ಪಚ್ಚೆ ಬರಕಾಂದ ಪಸಂಗರಿ
ನೈಕೊಂಡು ಬಳಸ್ಯೆರ್
ಪೇರ್‌ಡ್ ಉಂಡೆ ಮಗೆ
ಅಳ್ಳೆಟ್ ಕೈದೆಕ್ಕೆ
ಪೂಜಿದ್ ಬಾಜಿರಡ್ ಕುಳ್ಯೆ
ಕುಳ್ಯೆನಾ ಮಗೆ ಕುಳ್ಯೊಡಲಾಂಡ್
ಬಾರಾ ಗೆಂದಾಂಡ್
ಮಲ್ಲಾಯನಾಯ
ಪಾತೆರೆ ಮಗೆ
ಬಡವರೆನಾಯ
ಕೇಂಡ್ ಕೊರುವೆ
ಓ ಬೇಲೆ ಓ ಬೇಲೆ

ಕನ್ನಡದಲ್ಲಿ 'ಓಬೇಲೇ' ಕಬಿತದ ಸಾರಾಂಶ : ಒಬ್ಬ ಧನಿಗಳು ಇರುತ್ತಾರೆ. ಅವರು ತಮ್ಮ ಗದ್ದೆಗಳಲ್ಲಿ ಹಾಕಿದ ನೇಜಿಯನ್ನು ಕಿತ್ತು ಮತ್ತೆ ನೆಡಲು ಆಳುಗಳು ಸಿಗದೆ ತೊಂದರೆಯಲ್ಲಿರುತ್ತಾರೆ. ಅವರು ತಮ್ಮ ಹೊಲೆಯ ಆಳನ್ನು ಕರೆದು ನೇಜಿ ನೆಡಲು ಹೆಣ್ಣಾಳುಗಳನ್ನು ಕರೆದು ತರಲು ಹೇಳುತ್ತಾರೆ. ಅವನು ಹಾಗೆಯೇ ಆಚೆಯ ಜೈಲಿಗೆ ಹೋಗಿ ಹೆಣ್ಣಾಳುಗಳಲ್ಲಿ ಹೇಳಿದರೆ ಅವರು ಬರಲಾರರು ಎನ್ನುತ್ತಾನೆ. ಅವನಿಗೆ ಧನಿಗಳಿಂದ ಹೆಚ್ಚಿನ ಸತ್ಕಾರ ಪಡೆಯುವ ಅಭಿಲಾಷೆಯಿಂದ ಆತ ಹಾಗೆ ಹೇಳುತ್ತಾನೆ. ಅವನು ಧನಿಗಳ ಹೆಂಡತಿಯಿಂದ ತಂಗಳನ್ನ, ಉಪ್ಪಿನಕಾಯಿ, ಮಜ್ಜಿಗೆ ಪಡೆದು ಉಣ್ಣುತ್ತಾನೆ. ಆಮೇಲೆ ಧನಿಗಳು ಅವನಿಗೆ ತಾವು ತಲೆಯಲ್ಲಿ ಧರಿಸುವ ಕಣ್ಣು ಕಣ್ಣಿನ 'ಮುಟ್ಟಾಳೆ' (ಅಡಿಕೆ ಹಾಳೆಯಿಂದ ಮಾಡಿದ ಟೊಪ್ಪಿಗೆ ಅದು ಅಂದವಾದದ್ದು ಇರಬೇಕು)ಯನ್ನು ಕೊಡುತ್ತಾರೆ. ಅವರು ಬಿಸಿಲಿಗೆ ಹಿಡಿಯುವ ಬೆಳ್ಗೊಡೆಯನ್ನು ಅವನಿಗೆ ಕೊಡುತ್ತಾರೆ. ಅವರು ಮೆಟ್ಟುವ ಮೆಟ್ಟನ್ನು, ಉಡುವ ಬಟ್ಟೆಯನ್ನು ಹಿಡಿಯುವ ನಾಗರ ಬೆತ್ತವನ್ನು ಅವನಿಗೆ ಕೊಡುತ್ತಾರೆ. ಅವುಗಳನ್ನು ಹಿಡಿದುಕೊಂಡು ಅವನು ಬಂದಾಗ ಬೈರರ ಹೆಣ್ಣುಗಳು ರಾಗ ಎಳೆಯುತ್ತಾ ರಾಗಿ ಬೀಸುತ್ತಾ ಸೋಬಾನೆ ಹಾಡುತ್ತಾ ಇರುತ್ತಾರೆ. ಇವನು ಅವರನ್ನು ನಾಟಿಯ ಕೆಲಸಕ್ಕೆ ಕರೆಯುತ್ತಾನೆ. ಅದಕ್ಕೆ ಅವರು "ನಾವು ಬರುವುದಿಲ್ಲ' ನಮ್ಮ ಗಂಡಸರು ಮೂವತ್ತು ರೂಪಾಯಿಯ ಮಣ್ಣ ಕೆಲಸಕ್ಕೆ ಹೋಗಿದ್ದಾರೆ. ಅವರು ಕೆಲಸ ಮಾಡಿ ಬರುವಾಗ ಅವರಿಗೆ ಬಿಸಿ ನೀರು ಕಾಯಿಸಿಡಬೇಕು, ಅಡುಗೆ ಮಾಡಬೇಕು" ಎನ್ನುತ್ತಾರೆ. ಆಗ ಆ ಹೊಲೆಯನು ತನ್ನ ಕೆಂಚು ಮೀಸೆಯನ್ನು ಅಲುಗಾಡಿಸಿದನು, ಕಣ್ಣನ್ನು ಸಿಟ್ಟಿನಿಂದ ಅರಳಿಸಿದನು, ನಾಗರ ಬೆತ್ತವನ್ನು ಎತ್ತಿದನು. ಆಗ ಆ ಹೆಣ್ಣುಗಳು ಹೆದರಿ, 'ನಮಗೆ ಹೊಡೆಯ ಬೇಡ, ನಾವು ಬರುತ್ತೇವೆ' ಎಂದು ಲಗುಬಗೆಯಿಂದ ಹೊರಟರು. ಈ ಆಳುಗಳನ್ನು ಸೇರಿಸಿಕೊಂಡು ಹೊಲೆಯನು ಹೊರಟನು. ಕಪ್ಪು ಜನಗಳು (ಹೊಲೆಯರು ಮೂವತ್ತೂ, ಬಿಳಿ ಜನಗಳು(ಹೊಲೆಯರಲ್ಲದವರು) ಮೂವತ್ತೂ ಇದ್ದರು. ದಾರಿಯಲ್ಲಿ ಒಂದು ಗುಡ್ಡವನ್ನು ಇಳಿದುಕೊಂಡು ಬರುವಾಗ ಹೊಲೆಯನಿಗೆ ವಿಪರೀತ ಬಾಯಾರಿಕೆ ಯಾಯಿತು. ಅವನು ಒಂದು ಆಳನ್ನು ಕಳ್ಳಿಗೆ ಗುತ್ತಿಗೆಯಲ್ಲಿ ಅಡವು ಇಟ್ಟು, ಅಲ್ಲಿ ಸಾಕಷ್ಟು ಕಳ್ಳು ಕುಡಿದ. ಅಲ್ಲಿಂದ ಮುಂದೆ ಬಂದಾಗ, ಎಲೆ ಅಡಿಕೆ ತಿನ್ನದೆ ಅವನಿಗೆ ಬಹು ಭ್ರಮೆಯಾಯಿತು. ಅವನು ಶೆಟ್ಟಿ ಅಂಗಡಿಯಲ್ಲಿ ಒಂದು ಆಳನ್ನು ಒತ್ತೆಯಿಟ್ಟು, ಎಲೆ ಅಡಿಕೆ ತಿನ್ನುತ್ತಾನೆ. ಕೊನೆಗೆ ಧನಿಗಳಲ್ಲಿಗೆ ಬರುತ್ತಾನೆ. ಧನಿಗಳು ಆಳುಗಳನ್ನು ಲೆಕ್ಕ ಮಾಡುವಾಗ ಕರಿಯ ಆಳುಗಳಲ್ಲಿ ಮೂವತ್ತಕ್ಕೆ ಒಂದಾಳು ಕಮ್ಮಿ ಇದೆ. ಬಿಳಿಯ ಆಳುಗಳಲ್ಲಿ ಮೂವತ್ತಕ್ಕೆ ಒಂದಾಳು ಕಮ್ಮಿ ಇದೆ. ಆಗ ಧನಿಗಳು ಆ ಎರಡು ಆಳುಗಳನ್ನು 'ಏನು ಮಾಡಿದಿ

ಯೆಂದು ಹೊಲೆಯನಿಗೆ ಹೊಡೆಯಲು ಬರುತ್ತಾನೆ. ಅವನು 'ದಮ್ಮಯ್ಯ', 'ದಕ್ಕಯ್ಯ' ಎಂದು ಅಂಗಲಾಚಿ ಸತ್ಯ ಸಂಗತಿಯನ್ನು ಹೇಳುತ್ತಾನೆ. ಆದರೂ ದನಿಗಳ ಸಿಟ್ಟು ಆರುವುದಿಲ್ಲ. ಗದ್ದೆಯಲ್ಲಿಗೆ ಹೋಗುವಾಗ, ಕೆಲಸದವರಲ್ಲಿ ಸಿಟ್ಟುಗೊಳ್ಳುತ್ತಾರೆ. ಮನೆಗೆ ಬಂದಾಗ ಹೆಂಡತಿಯಲ್ಲಿ ಸಿಟ್ಟುಗೊಳ್ಳುತ್ತಾರೆ. ಹೆಂಡತಿಯಲ್ಲಿ ಸಿಟ್ಟುಗೊಂಡು ಜಗಿದಾಗ ಹೆಂಡತಿಗೆ ಹೊಟ್ಟೆ ಬರುತ್ತದೆ. ಆ ಮಗು ಹೆಣ್ಣು ಆದರೆ ತಾಯಿಗೆ ಸಹಾಯಕ ವಾಗುತ್ತದೆ. ಗಂಡು ಮಗುವಾದರೆ ತಂದೆಗೆ ಸಹಾಯಕವಾಗುತ್ತದೆ. ಹೆಣ್ಣು ಮಗು ಬೆಳಿಗ್ಗೆ ಎದ್ದು ಚೆಂಬು ಬಟ್ಟಲು ತೊಳೆದೀತು. ಗಂಡು ಮಗು ಗದ್ದೆಯ ಬದಿಗೆ ಹೋಗಿ ಗದ್ದೆಯ ನೀರನ್ನು ಸರಿಮಾಡುತ್ತದೆ. ಅಲ್ಲಿಂದ ಬರುವಾಗ ಹುಲ್ಲು ಕಿತ್ತು ತಂದು ಕರುವಿಗೆ ಹಾಕುತ್ತದೆ. ಬಾವಿಯಿಂದ ನೀರು ಸೇದಿ, ಕೈಕಾಲು ಮುಖ ತೊಳೆದುಕೊಂಡು ತುಳಸಿಗೆ ನೀರು ಹೊಯ್ದು, ತಾನು ನೀರು ಕುಡಿಯುತ್ತದೆ. ತಾಯಿಯಲ್ಲಿ ಕೇಳಿ, ತಂಗಳನ್ನ, ಮೊಸರು, ಉಪ್ಪಿನಕಾಯಿ, ಪಸೆಂಗರಿಯ ಊಟ ಮಾಡುತ್ತದೆ. ಹಾಲಿನಲ್ಲಿ ಉಂಡು ಮಂಜ್ಜಿಗೆಯಲ್ಲಿ ಕೈ ತೊಳೆಯುತ್ತದೆ. ಹೊರಗೆ ಬಂದು ಕುಳಿತುಕೊಳ್ಳುತ್ತಾನೆ. ಅವನು ಶ್ರೀಮಂತರ ಮಾತು ಮಾತಾಡು ವುದಿಲ್ಲ. ಬಡವರ ಸಂಕಷ್ಟಗಳನ್ನು ವಿಚಾರಿಸುತ್ತಾನೆ.

ಈ 'ಓ ಬೇಲೆ' ಕಬಿತದ ಬೇರೆ ಪಾಠಗಳಲ್ಲಿ ವಿವರಣೆಗಳ ವ್ಯತ್ಯಾಸವನ್ನು ಕಾಣಬಹುದು. ಒಂದು ಪಾಠ ದಲ್ಲಿ ಆ ಹೊಲೆಯ ಆಳಿನ ಹೆಸರು ಮದಪೂರ ಬಬ್ಬು ಎಂದು ಇದೆ. ಈ ಪಾಠದ ಪ್ರಕಾರ ಬೈರರ ಹುಡುಗಿ ಯರು ಕೆಲಸಕ್ಕೆ ಬರಲು ನಿರಾಕರಿಸುವ ಸಂದರ್ಭ, ಕಾರಣ :

"ತಿರುಗೊಂದೇ ಪೋನಗ — ನಟ್ಟೇಗ್ ಬರ್ಪರ
ರಾಗ ಒಯ್ತ್‌ದ್ — ಬರಿಯೆರೇ ಬರುವೊನೇ
ರಾಗಿ ಬೀಸುವೆರ್ — ಎಂಕ್‌ಳೆಗ್ ನೋಪುನ
ಬೈರೆರೆ ಪೊಣ್ಣುಳು — ಬೈರೆಲ ಉಳ್ಳೇ
ಪದೊ ಪಂಡ್‌ದ್ — ಬುಳ್ಪುನ ಬಾಲೇ
ಬಾರ್ ಎಡ್ಪುವೆರ್ — ಎಂಕ್ಲೆಗ್ ಉಂಡು
ಎರ್‌ಯೆ ಪೊಣ್ಣುಲೆ — ಕರೆಪ್ಪುನ ಕಂಜಿ
ದಾನೇಂದ್ ಕೇಣ್ಪರ್ — ಎಂಕ್ಲಂಗ್ ಉಂಡು"

(ಅವನು ತಿರುಗಾಡುತ್ತಾ ಬರುವಾಗ, ಬೈರರ ಹೆಣ್ಣುಗಳು ರಾಗ ಎಳೆಯುತ್ತಾ ರಾಗಿ ಬೀಸುತ್ತಾ ಹಾಡು ಹಾಡುತ್ತಾ ಬತ್ತ ಕುಟ್ಟುತ್ತಾ ಇರುತ್ತಾರೆ. ಅವನು ಅವರಲ್ಲಿ ನಾಟಿಯ ಕೆಲಸಕ್ಕೆ ಬನ್ನಿ ಎನ್ನುತ್ತಾನೆ. ಅದಕ್ಕೆ ಅವರು "ನಮಗೆ ಹೊಡೆಯುವ ಗಂಡಸರಿದ್ದಾರೆ, ಅಳುವ ಮಕ್ಕಳಿವೆ, ಅಂಬಾ ಎನ್ನುವ ಕರುಗಳಿವೆ. ಆದ್ದರಿಂದ ಬರಲು ಆಗುವುದಿಲ್ಲ" ಎನ್ನುತ್ತಾರೆ).

ಆಗ ಬಬ್ಬು ಅವರಿಗೆ ಕೊಡುವ ಸಮಾಧಾನ :

"ನೋಪುನ ಬೈರಗ್ — ಬಳಸ್‌ದ ಬಲಟ್
ಉಣಪ್ಪುಲ ಕಜಿಪ್ಪುಲ — ದೀದಾಂಡ ಬಲೆ
ಮಲ್ತೆದ್ ನಿಕಳೆ — ಬುಳುಪ್ಪುನ ಬಾಲೆಗ್

ಮಿರೆ ಕೊರ್ಲೆ ಪಂತಿ ಪೊರಿತ್ತೈದ್
ತೊಟ್ಟಿಲ್ ಪಾಡೆಲೆ ದೀದಾಂಡ ಬಲೇ
ಕರೆಪ್ಪುನ ಕಂಜಿಗ್ ಪಂಡೆನೆ ಬಬ್ಬೂ "

(ಹೊಡೆಯುವ ಗಂಡಸರಿಗೆ ಅನ್ನ ಪಲ್ಯ ಮಾಡಿ ಬಡಿಸಿ ಇಟ್ಟು ಬನ್ನಿರಿ. ಆಳುವ ಮಕ್ಕಳಿಗೆ ಮೊಲೆ ಕೊಟ್ಟು, ತೊಟ್ಟಿಲು ತೂಗಿ ಬನ್ನಿರಿ. ಅಂಬಾ ಎನ್ನುವ ಕರುವಿಗೆ ಹುಲ್ಲು ಹಾಕಿ ಬನ್ನಿರಿ " ಎಂದು ಬಬ್ಬು ಅವರಿಗೆ ಹೇಳಿದನು).

ಬಬ್ಬುವು ತಂದ ಆಳುಗಳಲ್ಲಿ ಸಂಖ್ಯೆ ಕಮ್ಮಿ ಕಂಡಾಗ ಸಿಟ್ಟುಗೊಂಡ ಧನಿಗಳಿಗೆ ಇಲ್ಲಿ ಆತ ಸತ್ಯಸಂಗತಿಯನ್ನು ತಿಳಿಸದೆ, ಒಂದು ಸುಳ್ಳು ಹೇಳುತ್ತಾನೆ.

" ತೋಡೂಡೆ ಕೊನತ್ತೆ ಬೊಳೊವ್ವ ಗುದ್‌್ದಂಡೊ''

(ಆಳುಗಳನ್ನು ತೋಡಿನಲ್ಲೆ ದಾಟಿಸಿಕೊಂಡು ತಂದೆನು. ಆಗ ಪ್ರವಾಹದಲ್ಲಿ ಅವರು ಕೊಚ್ಚಿಕೊಂಡು ಹೋಗಿರಬಹುದು.)

ಇನ್ನೊಂದು ಪಾಠದಲ್ಲಿಯೂ ಇದೇ ಕಾರಣವನ್ನು ಆತನು ಕೊಡುತ್ತಾನೆ. " ಓ ಬೇಲೆ " ಕಬಿತದ ಎಲ್ಲ ಪಾಠಗಳಲ್ಲೂ ಕೊನೆಗೆ ಧನಿಗಳಿಗೆ ಸಿಟ್ಟು ಬರುವುದು, ಆದ್ದರಿಂದ ಅವರ ಹೆಂಡತಿ ಗರ್ಭಿಣಿಯಾಗುವುದು ಈ ವಿಚಾರ ಬರುತ್ತದೆ. 'ಓ ಬೇಲೆ' ಕಬಿತದ ಒಂದು ಪಾಠದಲ್ಲಿ ಈ ಅರ್ಥದ ಮಾತುಗಳು ಬರುತ್ತವೆ, "ನಾವೆಲ್ಲ ಸೇರಿ ನಾಟಿ ಮಾಡುತ್ತಿರುವ ಗದ್ದೆಯ ಈ ಸಸಿಗಳಿಗೆ ಹೊಸ ಚಿಗುರು ಹುಟ್ಟಿ ಬರಲಿ, ಮನೆಯೊಳಗೆ ಒಡೆಯನ ಮಡದಿಗೆ ಗರ್ಭ ನಿಲ್ಲಲಿ : ಗದ್ದೆ ತುಂಬಾ ತೆನೆಯಾಗಲಿ, ಹತ್ತು ತಾಯಿಯ ಮಕ್ಕಳು ನಾವು. ಹದಿನಾರು ಕುಲದವರು. ಇಲ್ಲಿ ಗದ್ದೆಯಲ್ಲಿ ಒಂದೇ ತಾಯಿಯ ಮಕ್ಕಳಂತೆ ದುಡಿಯುತ್ತಿದ್ದೇವೆ. ಒಡೆಯರು ನಮಗೆ ಕಳಸೆಯಲ್ಲಿ (ಅಕ್ಕಿ ಅಳೆಯುವ ಒಂದು ಸಾಧನ) ಕೂಲಿ ಕೊಟ್ಟಾರು. ನಾವು ಅದನ್ನು ಸೇರಿನಲ್ಲಿ (ಕಳಸೆಗಿಂತ ಹದಿನಾಲ್ಕು ಪಾಲು ಚಿಕ್ಕದಾದ ಅಕ್ಕಿ ಅಳೆಯುವ ಇನ್ನೊಂದು ಸಾಧನ) ಹಂಚಿ ಕೊಳ್ಳೋಣ",

ಇಲ್ಲಿ ಹೊಲದಲ್ಲಿನ ನಾಟಿಯ ಬೆಳೆಗೂ ಒಡೆಯನ ಹೆಂಡತಿಯ ಗರ್ಭಕ್ಕೂ ಸಂಬಂಧವನ್ನು ಗುರುತಿಸಬಹುದು. ಫಲೋತ್ಪತ್ತಿಯ ನಂಬಿಕೆ (fertility belief) ಇಲ್ಲಿ ಕೆಲಸ ಮಾಡುವುದನ್ನು ಕಾಣಬಹುದು.

ಬೇರೆ ಬೇರೆ ಕುಲದವರು ಒಂದೇ ಹೊಲದಲ್ಲಿ ಒಟ್ಟಿಗೆ ಕೆಲಸ ಮಾಡುವಲ್ಲಿನ ಸಹಬಾಳ್ವೆಯ, ಸಮಾನತೆಯ ತತ್ತ್ವ ಕಬಿತದ ಮಾತುಗಳಲ್ಲಿಯೂ ವ್ಯಕ್ತವಾಗಿದೆ.

ಒಡೆಯನು ತನ್ನ ಆಳಿಗಾಗಿ ತನ್ನದೇ ಟೊಪ್ಪಿಗೆ, ಮೆಟ್ಟು, ನಾಗರಬೆತ್ತ, ಕೊಡೆಗಳನ್ನು ಕೊಡುವಲ್ಲಿ ತುಳುನಾಡಿನಲ್ಲಿ ಧನಿ ಮತ್ತು ಆಳಿನ ನಡುವೆ ಇದ್ದ ಸಂಬಂಧದ ಸೌಹಾರ್ದತೆ ವ್ಯಕ್ತವಾಗುತ್ತದೆ. ಆದರೆ ಇನ್ನೊಂದು ಪಾಠದಲ್ಲಿ ಆತನು 'ನಾನೇ ಹೋಗಿ ಕೇಳಿದರೆ ಕೆಲಸಕ್ಕೆ ಆಳುಗಳು ಬರಲಾರರು. ಆದ್ದರಿಂದ ನಿಮ್ಮ ಗುರುತು ಕೊಡಿ' ಎನ್ನುತ್ತಾನೆ. ಆಗ ಧನಿಗಳು ತಮ್ಮ ಅಂದದ ಮುಟ್ಟಾಳೆ

ಬೆಳ್ಳಿಯ ಕಟ್ಟ ಇರುವ ಬೆತ್ತ, ಗೆಜ್ಜೆಯ ಕತ್ತಿಗಳನ್ನು ಗುರುತಿಗಾಗಿ ಅವನಲ್ಲಿ ಕೊಡುತ್ತಾರೆ. ಈ ಪಾಠ ಹಿಂದಿನ ಪಾಠಕ್ಕಿಂತ ಹೆಚ್ಚು ಸಂಭಾವ್ಯ ಎನ್ನಿಸುತ್ತದೆ.

ಹೊಲೆಯನು ಬೈರರ ಕೇರಿಗೆ ಬರುವಾಗ ಅಲ್ಲಿ ಹೆಣ್ಣುಗಳು ರಾಗಿ ಬೀಸುತ್ತಾ ರಾಗ ಎಳೆಯುತ್ತಾ ಸೋಬಾನೆ ಹೇಳುತ್ತಾ ಭತ್ತವನ್ನು ಕುಟ್ಟುತ್ತಾ ಇದ್ದರಂತೆ. ತುಳುನಾಡಿನಲ್ಲಿ ಹಿಂದೆ ರಾಗಿ ಬೀಸುವಾಗ, ಭತ್ತ ಕುಟ್ಟುವಾಗ ಹಾಡುಗಳನ್ನು ಹಾಡುತ್ತಿದ್ದರು ಎನ್ನುವುದು ಇಲ್ಲಿ ಸ್ಪಷ್ಟವಾಗುತ್ತದೆ. ಇವತ್ತು ಈ ಪದ್ಧತಿ ಕಾಣಿಸುವುದಿಲ್ಲ.

ತುಳುನಾಡಿನಲ್ಲಿ ಹಿಂದೆ ಇದ್ದ ಸಾಮಾನ್ಯ ಊಟದ ಪದ್ಧತಿಯ ಚಿತ್ರಣ ಇಲ್ಲಿ ಇದೆ. ತಂಗಳನ್ನ, ಮೊಸರು, ಉಪ್ಪಿನಕಾಯಿ, ಅಡೆಂಗಾಯಿ, ಪಸಂಗರಿಗಳ ವಿವರಣೆ ಸಿಗುತ್ತದೆ. 'ಪೇರೆಡ್ ಉಂಡೆ ಮಗೆ, ಅಳೆಟ್ಟ್ ಕೈ ದೆಕ್ಯೆ' ಎನ್ನುವುದನ್ನು ತುಳುವಿನಲ್ಲಿ ಸಮೃದ್ಧಿಯನ್ನು ಸೂಚಿಸುವ ರೂಢಿಯ ಮಾತು (ಹಾಲಿನಲ್ಲಿ ಉಂಡನು, ಮಜ್ಜಿಗೆಯಲ್ಲಿ ಕೈ ತೊಳೆದನು).

'ಓ ಬೇಲೆ' ಕಬಿತದಲ್ಲಿ ಕೆಲಸಕ್ಕೆ ಸಂಬಂಧಿಸಿದಂತೆ ಘಟನೆ ಇದೆ. ಆದರೆ ಅದು ಕಥೆಯ ರೂಪದಲ್ಲಿ ಇಲ್ಲ.

"ಏ ದಾ ಬಲ್ಲ ಮಗ ದೂಜಿ ಕೆಮ್ಮೈರಾ"

ಈ ಕಬಿತವು ಸುಂದರವಾದ ಕೆಂಬಣ್ಣದ ಹೋರಿಯನ್ನು ಸಂಬೋಧಿಸಿ ಹೇಳುವ ರೀತಿಯಲ್ಲಿ ಇದೆ. ಇಲ್ಲಿ ಹೋರಿಯ ಸೌಂದರ್ಯದ ವಿವರಣೆ ಮತ್ತು ಅದರ ಗುಣಗಳ ವೈಶಿಷ್ಟ್ಯ ದೊರೆಯುತ್ತದೆ,

ಅದರ ಜನಪ್ರಿಯ ಪಾಠ ಹೀಗಿದೆ :

''ಏ ದಾ ಬಲ್ಲ ಮಗ ದೂಜಿ ಕೆಮ್ಮೈರಾ ॥ ಪಲ್ಲವಿ ॥
ವಾ ಪೆತ್ತದ ಮಗೆನೊ ಆಯೆ ದೂಜಿ ಕೆಮ್ಮೈರೇ
ಕಬುಲ್ತಿ ಪೆತ್ತದ ಮಗೆನೊ ಆಯೆ ದೂಜಿ ಕೆಮ್ಮೈರೇ
ಅಜ್ಜೆಗೊಂಜಿ ಮುಕ್ಕುರಾಯಗ್ ದೂಜಿ ಕೆಮ್ಮೈರಗೆ
ಬಲ್ಲ ಮಲೆತ ಪಂತಿ ಆಯಗೆ ದೂಜಿ ಕೆಮ್ಮೈರಗೆ
ಸುಲ್ಲ ಮಲೆತ ನೀಗ್ ಆಯರ್ ದೂಜಿ ಕೆಮ್ಮೈರಗೆ
ಬಂಜೆದಡಿಟ್ಟ್ ಮಂಗಳೊ ಆಯಗೆ ದೂಜಿ ಕೆಮ್ಮೈರಗೆ
ಮುಂಡೋಡು ಕೊಡ್ಯೆನಾಯಗೆ ದೂಜಿ ಕೆಮ್ಮೈರಗೆ
ಬೇಂಪುಡು ಬೊಳಾಯಗಾಯಗೆ ದೂಜಿ ಕೆಮ್ಮೈರಗೆ
ಬಡನೆರೆ ಕೆಯಿ ತಿನಡ ಮಗ ದೂಜಿ ಕೆಮ್ಮೈರಾ
ಬಡವೆರೆ ಕೋಲು ಬೇಲಿ ಲ್ಯಾಪಡ ಮಗ ದೂಜಿ ಕೆಮ್ಮೈರಾ
ಮಾದೇರ್‌ದ ಕಾಡೆಡೆ ಕಬ್ಬೊಂದುಪ್ಪೆ ದೂಜಿ ಕೆಮ್ಮೈರಾ
ಓಣಿ ಓಣಿ ಕಬ್ಬೊಂದುಪ್ಪೆ ದೂಜಿ ಕೆಮ್ಮೈರಾ
ಎಡ್ಡೆ ಎಡ್ಡೆ ಗದಸುಗಳು ಉಳ್ಳೊ ದೂಜಿ ಕೆಮ್ಮೈರಾ
(ಪಿಠೆ ಪತ್ಪುನೆ)
ಏ ದಾ ಬಲ್ಲ ಮಗ ದೂಜಿ ಕೆಮ್ಮೈರಾ"

ಈ ಕಬಿತವನ್ನು ಸ್ಥೂಲವಾಗಿ ಹೀಗೆ ಕನ್ನಡಕ್ಕೆ ಭಾಷಾಂತರಿಸಬಹುದು :

"ಹೇ ದಾ ಬಾ ಮಗನೇ ಚೆಲುವ ಕೆಮ್ಮೈರಾ
ಯಾವ ದನದ ಮಗನೊ ಅವನು ಚೆಲುವ ಕೆಮ್ಮೈರಾ
ಹೆಜ್ಜೆಗೊಂದು ಹೂಂಕುರವಗೆ ಚೆಲುವ ಕೆಮ್ಮೈರಗೆ
'ಬಲ್ಲ' ಮೇಲೆಯ ಹುಲ್ಲು ಅವಗೆ ಚೆಲುವ ಕೆಮ್ಮೈರಗೆ
'ಸುಲ್ಲ' ಮಲೆಯ ನೀರು ಅವಗೆ ಚೆಲುವ ಕೆಮ್ಮೈರಗೆ
ಹೊಟ್ಟೆಯಡಿಲಿ 'ಮಂಗಳ'( = ಬಿಳಿ ಮಚ್ಚೆ)ನವಗೆ ಚೆಲುವ ಕೆಮ್ಮೈರಗೆ
ಹಣೇಲಿ ಬಿಳಿ ಮಚ್ಚೆಯವಗೆ ಚೆಲುವ ಕೆಮ್ಮೈರಗೆ
ಬಾಲದಲಿ ಬಿಳಿ ಬಣ್ಣವವಗೆ ಚೆಲುವ ಕೆಮ್ಮೈರಗೆ
ಬಡವರ ಪೈರು ತಿನಬೇಡ ಮಗ ಚೆಲುವ ಕೆಮ್ಮೈರಾ
ಬದೀಲೆ ಹೋಗಿ ಬದೀಲೆ ಬಾ ಚೆಲುವ ಕೆಮ್ಮೈರಾ
ಬಡವರ ಕೋಲು ಬೇಲಿ ಹಾರ್‌ಬೇಡ ಚೆಲುವ ಕೆಮ್ಮೈರಾ
ಗುಂಪಿನಲಿ ಹೋಗಿ ಗುಂಪಿನಲಿ ಬಾ ಚೆಲುವ ಕೆಮ್ಮೈರಾ
'ಮಾದೇರೆ'ನ ಕಾಡಿನಲ್ಲಿ ಅಡಗಿರುತ್ತಾನೆ ಚೆಲುವ ಕೆಮ್ಮೈರಾ
ಓಣಿ ಓಣೀಲಿ ಅಡಗಿರುತ್ತಾನೆ ಚೆಲುವ ಕೆಮ್ಮೈರಾ
ಒಳ್ಳೆ ಒಳ್ಳೆಯ ಕಡಸುಗಳಿವೆ ಚೆಲುವ ಕೆಮ್ಮೈರಾ
(ಹುಲಿ ಹಿಡಿಯುವುದು)
ಹೇ ದಾ ಬಾ ಮಗನೇ ಚೆಲುವ ಕೆಮ್ಮೈರಾ"

"ಹುಲಿ ಹಿಡಿಯುವ" ಸಂದರ್ಭದಲ್ಲಿ ನೇಜಿ ನೆಡುವ ಹೆಂಗುಸರು ಒಬ್ಬರನ್ನೊಬ್ಬರು ಗಟ್ಟಿಯಾಗಿ ಹಿಡಿದು-ಕೊಳ್ಳುತ್ತಾರೆ. ಚೆಲುವ ಕೆಮ್ಮೈರ (ಸುಂದರವಾದ ಕೆಂಬಣ್ಣದ ಹೋರಿ)ನು ಮಾದೇರ್‌ನ ಕಾಡಿನಲ್ಲಿ ಅಡಗಿರುವುದು, ಓಣಿ ಓಣಿಗಳಲ್ಲಿ ಅಡಗಿರುವುದು, ಒಳ್ಳೆಒಳ್ಳೆಯ ಕಡಸುಗಳಿವೆ ಎನ್ನುವುದು–ಆ ಮೇಲೆ ಹುಲಿ ಹಿಡಿಯುವ ಪ್ರಸಂಗ ಬರುತ್ತದೆ. ಆದ್ದರಿಂದ ಚೆಲುವ ಕೆಮ್ಮೈರ ಹೋರಿಯು ಸುಂದರವಾದ ಕಡಸು (ಈಯದ ಹಸು)ಗಳೊಡನೆ ಕೂಡುವುದಕ್ಕೆ ಸಂಕೇತವಾಗಿ ಈ 'ಹುಲಿ ಹಿಡಿಯುವ' ಪ್ರಸಂಗ ಬರುತ್ತದೆ. ಹೋರಿ ಅಥವಾ ಕಡಸುಗಳನ್ನು 'ಹುಲಿ' ಹಿಡಿಯುವುದು 'ಕಬಿತ'ದ ವಿವರಣೆಯಲ್ಲಿ ಸಂಗತವೆನ್ನಿಸುವುದಿಲ್ಲ. ಇಲ್ಲಿ ಹೋರಿಯು ತಾರುಣ್ಯಕ್ಕೆ ಸಂಕೇತ. ಪ್ರಣಯ ಭಾವವನ್ನು ಹೋರಿಯೊಂದರ ವರ್ತನೆಯ ಪ್ರತಿಮೆಯ ಮೂಲಕ ಅಭಿವ್ಯಕ್ತಿಸುವ ತಂತ್ರವನ್ನು ಈ ಕಬಿತದಲ್ಲಿ ಕಾಣುತ್ತೇವೆ. ಈ ಕಬಿತವನ್ನು ಹೊಲಗಳಲ್ಲಿ ಹಾಡುವವರು ಹೆಂಗಸರು ಮಾತ್ರ ಎನ್ನುವುದನ್ನು ಪರಿಗಣಿಸಿದರೆ ಈ ವಿಚಾರ ಹೆಚ್ಚು ಅರ್ಥಪೂರ್ಣವೆಂದು ಅನ್ನಿಸುತ್ತದೆ. ಹಳ್ಳಿಯ ಹೆಣ್ಣು ಮಕ್ಕಳು ತಮ್ಮ ಕಾಮ, ಆಕಾಂಕ್ಷೆಗಳನ್ನು ಹಾಡಿನ ಮೂಲಕ ಧ್ವನಿಸುವುದನ್ನು ಇಲ್ಲಿ ಗಮನಿಸಬಹುದು.

'ಬಡವರ ಪೈರು ತಿನಬೇಡ', 'ಬಡವರ ಕೋಲು ಬೇಲಿ ಹಾರಬೇಡ' ಎಂದು ಹೋರಿಯಲ್ಲಿ ಹೇಳುವಲ್ಲಿ ಬಡವರ ಬೆಳೆಗಳ ಬಗ್ಗೆ ಇರುವ ಆದರ, ಆಸಕ್ತಿ ವ್ಯಕ್ತವಾಗುತ್ತದೆ. ಈ ಕಬಿತವನ್ನು ಹಾಡುವವರು, ಹೊಲಗಳಲ್ಲಿ ಕೆಲಸ ಮಾಡುವವರು ಎಲ್ಲಾ ಬಡವರು ಎನ್ನುವುದನ್ನು ತಿಳಿದುಕೊಂಡಾಗ ಇವರು ತಮ್ಮ ಭಾವನೆಗಳನ್ನೇ ಇಲ್ಲಿ ತೋಡಿಕೊಳ್ಳುತ್ತಿದ್ದಾರೆ ಅನ್ನಿಸುತ್ತದೆ.

(3) ಏರಪ್ಪೆ ಇಲ್ಲಾಲ್

'ಏರಪ್ಪೆ ಇಲ್ಲಾಲ್' ಎಂಬ ಕಬಿತವು ಒಂದು ಚಿಕ್ಕ ಹಾಸ್ಯ ಘಟನೆಯನ್ನು ವಿವರಿಸುತ್ತದೆ. ಒಬ್ಬ ಮುಸಲ್ಮಾನ ವ್ಯಾಪಾರಿ (ಬ್ಯಾರಿ)ಯು ಸಾಮಾನುಗಳನ್ನು ಮಾರುತ್ತಾ ಒಂದು ಮನೆಗೆ ಬರುತ್ತಾನೆ. ಅಲ್ಲಿದ್ದ ಹೆಂಗಸಿನಲ್ಲಿ ಕಾಮ ಭಾವನೆ ತಾಳಿ, ತಂಗಲು ಜಾಗ ಕೇಳುತ್ತಾನೆ. ರಾತ್ರಿ ಅವಳನ್ನು ಸಮೀಪಿಸಿದಾಗ, ಅಡಗಿ ಕುಳಿತಿದ್ದ ಅವಳ ಗಂಡ ಈ ವ್ಯಾಪಾರಿಯನ್ನು ಬೆನ್ನಟ್ಟಿ ಓಡಿಸುತ್ತಾನೆ.

ಈ ಕಬಿತದ ರೂಪ ಹೀಗಿದೆ :

"ಏರಪ್ಪೆ ಇಲ್ಲಾಲ್ ॥ ಪಲ್ಲವಿ ॥
"ಯಾನತ್ತೋ" ಪಂಡಳ್
"ಬೆಲ್ಲೊಲ ಪೊಡಿಲ ಬೋಡಾದೇ ?"
"ಬೋಡ್ಯೆರಂಚ ಬೋಡಾಂದೇ
ಕೊರ್ಯೆರೆ ದಾಲ ಇದ್ಯಾಂಡೇ"
"ಬೆಲ್ಲೊಲ ಪೊಡಿಲ ಕೊರೊಂಡೆಯೇ
"ಬನ್ನಗ ಯಾನ್ ಬರ್ಪೆಂಡೇ"
ಸಾಮಾನ್ ಗೀಮಾನ್ ಮಾರೊಂಡೇ
ಕತ್ತಲೆದ ಪೊರ್ತುಗು ಬತ್ತೊಂಡೇ
"ಏರಪ್ಪೆ ಇಲ್ಲಾಲ್"
"ಏನತ್ತೋ" ಪಂಡಾಳ್
"ತಡೆಪು ಬುಡಾರೊ ಕೊರ್ಪಾನದೇ"
"ತಡೆಪು ಬುಡಾರೊ ಕೊರಾಯೆ" ಪಂಡಾಳ್
"ಬೆಲ್ಲೊಲ ತಾರಾಯಿಲ ಚೀಪೆನೋದೇ
ಯಾನಂತೆ ಕೈಪೆನದೇ ?
"ತಡೆಪ್ಪು ಬುಡಾರೊ ಕೊರ್ವೆ" ಪಂಡಳ್
ಕಣಕ್ಕ್ ಕೊಟ್ಯಾಗ್ ಪೋವೊಂಡಳ್
ಪರಿಕೊಟೆ ಪಜೆ ಕೊರೊಂಡಳ್
ಪರಿಕೊಟೆ ಕಂಬೊಳಿ ಕೊರಿಯಾಳೆ
ಕುರಿಯೆಲ್ ತಂಞಣೊ ಕೊರಿಯಾಳೆ
ಪುರಿಯಾಯಿ ಉಪ್ಪಡ್ ಕೊರಿಯಾಳೆ
ಆಯಿನ್ ಮಾತಾ ಕಟ್ಟೊಂಡೇ
ಆಯಿನ್ ಮಾತಾ ಮುದ್ದೆ ಮಲ್ತೊಂಡೇ
"ಛೀ, ಉಂಬುಳಿ ತುಚಚ್ಚೊಂಡೇ
ನಿದ್ರೆ ಒಂಜಿ ಬರ್ಪುಜಿ" ಪಂಡೇ
ನಟ್ಟ ನಡೀರ್ಲೆ ಲಕ್ಕೊಂಡೇ
ಓರೆ ಬಾಕಿಲ್ ಮಲ್ತೋಂಡೇ
ಪಜೆ ಕಿಜೆ ಪರಡೋಂಡೇ
"ಛೀ ಜಾರಿ ಆಕಾರೊ"
"ಬೆಲ್ಲೊಲ ತಾರಾಯಿಲ ಚೀಪೆನೋದೇ
ಏನೂಂತೆ ಕೈಪೆನೋದೇ?
ಅತೆನ ಪೊರ್ತುಡು ತೂವೊಂಡೇ
ಅಳೆ ಕಂಡನಿ ತೂವೊಂಡೇ
"ಓಡು ಬಾರಿ ಓಡು ಬ್ಯಾರಿ"ಂಡ್ ಪಂಡೊಂಡೆ
ಬೆತ್ತೊ ದೆತ್ತ್‌ದ್ ಬೆರಿ ಪತ್ತೊಂಡೇ
ಏರಪ್ಪೆ ಇಲ್ಲಾಲ್"

ಈ ಕಬಿತದ ಕನ್ನಡ ರೂಪಾಂತರ :

"ಯಾರಮ್ಮಾ ಮನೇಲಿ ?"
"ನಾನಲ್ವೇ" ಹೇಳಿದ್ಳು
"ಬೆಲ್ಲ ಹುಡಿ ಬೇಕೇನೇ ?"
"ಬೇಕಾಗ್ಲಿಕ್ಕೇನೋ ಬೇಕಲ್ಲಾ"
"ಕೊಡಲು ಏನೂ ಇಲ್ವಲ್ಲಾ"
"ಬೆಲ್ಲ ಹುಡಿ ಕೊಟ್ಕೊಂಡ"
ಬರ್‍ವಾಗ ನಾ ಬರ್ತೇನೆಂದ
ಸಾಮಾನ್ ಗೀಮಾನ್ ಮಾರ್ಕೊಂಡ
ಕತ್ತಲೆ ಹೊತ್ತಿಗೆ ಬಂದ್ಕೊಂಡ.
"ಯಾರಮ್ಮಾ ಮನೇಲಿ?"
"ನಾನಲ್ವೇ" ಹೇಳಿದ್ಳು.
"ತಂಗಲು ಬಿಡಾರ ಕೊಡ್ತಿಯೇನೇ?"
"ತಂಗಲು ಬಿಡಾರ ಕೊಡೆ" ಎಂದ್ಳು
"ಬೆಲ್ಲ ಕಾಯಿ ಸಿಹಿಯೇನೇ?"

"ನಾ ಮಾತ್ರ ಕಹಿಯೇನೇ ?"
"ತಂಗಲು ಬಿಡಾರ ಕೊಡ್ತೇನೆ"ಂದ್ಲು
ಕಟ್ಟಿಗೆ ಕೊಟ್ಟಿಗೆ ಹೋಕ್ಕೊಂಡ್ಲು
ಹರಕು ಚಾಪೆ ಕೊಟ್ಕೊಂಡ್ಲು
ಹರಕು ಕಂಬ್ಳಿ ಕೊಟ್ಕೊಂಡ್ಲು
ಕೊಳೆತ ತಂಗಳನ್ನು ಕೊಟ್ಕೊಂಡು
ಹುಳುಬಿದ್ದ ಉಪ್ಪಿನಕಾಯಿ ಕೊಟ್ಕೊಂಡ್ಲು
ಅದನ್ನೆಲ್ಲಾ ಕಟ್ಕೊಂಡ
ಅದನ್ನೆಲ್ಲಾ ಮುದ್ದೆ ಮಾಡ್ದ
"ಛೀ, ಸೊಳ್ಳೆ ಕಚ್ತಾದೆ"
"ಬರ್‍ತಿಲ್ಲ ಏನೂ ನಿದ್ದೆ "

ನಡುರಾತ್ರಿ ಎದ್ಕೊಂಡ
ಓರೆ ಬಾಗ್ಲು ಮಾಡ್ಕೊಂಡ
ಚಾಪೆನೆಲ್ಲಾ ತಡವರಿಸಿದ
"ಛೀ, ತೊಲಗಿ ಆ ಕಡೆ"
"ಬೆಲ್ಲ ಕಾಯಿ ಸಿಹಿಯೇನೇ ?"
"ನಾ ಮಾತ್ರ ಕಹಿಯೇನೇ ?"
ಅಷ್ಟೊತ್ತಿಗೆ ನೋಡ್ಕೊಂಡ
ಆಕೆ ಗಂಡ ನೋಡ್ಕೊಂಡ
"ಓಡು ಬ್ಯಾರಿ, ಓಡು ಬ್ಯಾರಿ" ಹೇಳ್ಕೊಂಡ
ಬೆತ್ತ ಹಿಡ್ದು ಬೆನ್ನಟ್ಟಿ
"ಯಾರಮ್ಮಾ ಮನೇಲಿ"

ಈ ಕಬಿತದಲ್ಲಿ ಮುಸಲ್ಮಾನ ವ್ಯಾಪಾರಿ(ಬ್ಯಾರಿ)ಯ ಕಾಮಾತುರತೆ ಮತ್ತು ಹೆಣ್ಣೊಬ್ಬಳ ಜಾಣ್ಮೆ ವ್ಯಕ್ತವಾಗುತ್ತದೆ. ಕೊಡಲು ಏನೂ ಇಲ್ಲದೆ ಸಾಮಾನುಗಳನ್ನು ತೆಗೆದುಕೊಂಡು, ವ್ಯಾಪಾರಿಗೆ ತಂಗಲು ಬಿಡಾರಕೊಟ್ಟು ಕೊನೆಗೆ ಮಿತಿ ಮೀರಿದಾಗ ಗಂಡನ ಸಹಾಯದಿಂದ ಆತನನ್ನು ಆಕೆ ಬೆನ್ನಟ್ಟುತ್ತಾಳೆ. ವ್ಯಾಪಾರಿಗೆ ಆಕೆ ಹರಕು ಚಾಪೆ, ಹರಕು ಕಂಬಳಿ, ಕೊಳೆತ ತಂಗಳನ್ನ, ಹುಳುಬಿದ್ದ ಉಪ್ಪಿನಕಾಯಿ ಕೊಡುವುದರಲ್ಲೇ ಆತನ ಬಗ್ಗೆ ಆಕೆಗಿರುವ ತಿರಸ್ಕಾರ ಸ್ಪಷ್ಟವಾಗುತ್ತದೆ. ಹಳ್ಳಿಗಳಲ್ಲಿ ಸಾಮಾನ್ಯವಾಗಿ ನಡೆಯುವ ಒಂದು ಪ್ರಸಂಗವನ್ನು ಕಬಿತಕ್ಕೆ ವಸ್ತುವಾಗಿ ಇಲ್ಲಿ ಆರಿಸಲಾಗಿದೆ. ಹೆಂಗಸರು ಹಾಡುವ ಈ 'ಕಬಿತ' ಗಳಲ್ಲಿ ಹೆಣ್ಣೊಬ್ಬಳ ಜಾಣತನ ವ್ಯಕ್ತವಾಗಿರುವುದು ಔಚಿತ್ಯಪೂರ್ಣವಾಗಿದೆ.

ಮುಸ್ಲಿಂ ಸಂಪರ್ಕ ತುಳುನಾಡಿನಲ್ಲಿ ಆದ ಮೇಲೆ ಬಂದ 'ಕಬಿತ' ಇದು ಎಂದು ಗೊತ್ತಾಗುತ್ತದೆ. ಮಾತ್ರವಲ್ಲ, ತುಳುನಾಡಿನಲ್ಲಿ ವ್ಯಾಪಾರಿ ವೃತ್ತಿಯನ್ನು ಮಾಡುವ ವರ್ಗದಲ್ಲಿ ಪ್ರಮುಖವಾದುದು ಮುಸಲ್ಮಾನರದು. 'ಬ್ಯಾರಿ' ಎನ್ನುವುದು ತುಳುನಾಡಿನ ಮುಸ್ಲಿಮರಲ್ಲಿ ಪ್ರಸಿದ್ಧವಾದ ಉಪನಾಮ. ಅದು ವ್ಯಾಪಾರಿ (ಬ್ಯಾರಿ) ಎನ್ನುವುದರಿಂದ ನಿಷ್ಪನ್ನವಾಗಿದೆ. ಹಿಂದೆ ಹಳ್ಳಿಗಳಲ್ಲಿ ಈ 'ಬ್ಯಾರಿ' (ವ್ಯಾಪಾರಿ)ಗಳು ಮನೆ ಮನೆಗೆ ಬೆಲ್ಲ, ಸಂಬಾರ, ಜೀನಸು ಮೊದಲಾದುವನ್ನು ಹೊತ್ತುಕೊಂಡು ಹೋಗಿ ಮಾರುತ್ತಿದ್ದರು. ಆಗ ಈಗಿನಂತೆ ಹಳ್ಳಿಗಳಲ್ಲಿ ಅಂಗಡಿಗಳು ಇರಲಿಲ್ಲ. ಈ ವಿಚಾರವನ್ನೂ ಈ ಕಬಿತದಿಂದ ತಿಳಿದು ಕೊಳ್ಳಬಹುದು.

### 4) ಆಭರಣ ವಿಶೇಷಗಳುಳ್ಳ ಕಬಿತಗಳು

ಅನೇಕ ಕಬಿತಗಳಲ್ಲಿ ಯಾವುದೇ ಘಟನೆಯಾಗಲೀ ಪ್ರಸಂಗವಾಗಲೀ ಇರುವುದಿಲ್ಲ. ಬರೇ ಶಬ್ದಗಳ ಸರಮಾಲೆಯಿರುವ ಕಬಿತಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆಯುತ್ತವೆ. ಸಾಹಿತ್ಯಿಕವಾಗಿ ಯಾವುದೇ ಮಹತ್ವವೂ ಈ ಕಬಿತಗಳಿಗೆ ಇಲ್ಲ. ಆದರೆ ಇಂತಹ ಕೆಲವು ಕಬಿತಗಳಲ್ಲಿ ಹೆಂಗಸರ ಆಭರಣಗಳ ಹೆಸರುಗಳ ಪಟ್ಟಿ ಸಿಗುತ್ತದೆ. ಇಲ್ಲಿ ಕಾಣಿಸುವ ಎಷ್ಟೋ ಆಭರಣಗಳು ಇಂದು ಕಾಣಸಿಗುವುದಿಲ್ಲ. ತುಳುನಾಡಿನಲ್ಲಿ ಒಂದು ಕಾಲಕ್ಕೆ ಪ್ರಚಲಿತವಾಗಿದ್ದ ಆಭರಣಗಳನ್ನು ಈ ಕಬಿತಗಳಿಂದ ತಿಳಿದುಕೊಳ್ಳಬಹುದು.

ಉದಾ : 'ಏಲ್ಯಾಲ್ ಎಲ್ಯ ಬಾಲೆ', 'ಪೊಣ್ಣು ರಾಮಸ್ವಾಮಿ ಮಗಳಾಳ್', 'ಡಿಂಬಿಸಾಲೆ', 'ಟ್ರೂವೆಲೀ ಬಾಲೇ ಬಾಲೆ ಪೋಲಿಯೇ' ಇತ್ಯಾದಿ ಕಬಿತಗಳು.

(1) ಎಲ್ಯಾಲ್ ಎಲ್ಯ ಬಾಲೆ

" ಎಲ್ಯಾಲ್ ಎಲ್ಯ ಬಾಲೆ ತೆಲೆಕ್ಕೇದ ಮೋನೆದಾಳೋ ।। ಪಲ್ಲವಿ ।।
ಎಲ್ಯಾಲ್ ಎಲ್ಯ ಬಾಲೆಗ್ ಅಜಿವರಣೊ ತಿರೆಪ್ಪುದ ಪೂವಾವೊಡೋ
ಎಲ್ಯಾಲ್ ಎಲ್ಯ ಬಾಲೆಗ್ ಅಜಿವರಣೊ ಬುಗುಡಿ ಆವೊಡೋ
ಎಲ್ಯಾಲ್ ಎಲ್ಯ ಬಾಲೆಗ್ ಅಜಿವರಣೊ ಉಂಗಿಲೊ ಆವೊಡೋ
ಎಲ್ಯಾಲ್ ಎಲ್ಯ ಬಾಲೆಗ್ ಅಜಿವರಣೊ ಮುಂದಲೆ ಆವೊಡೋ
ಎಲ್ಯಾಲ್ ಎಲ್ಯ ಬಾಲೆಗ್ ಅಜಿವರಣೊ ಮೂಂಕುತಿ ಆವೊಡೋ
ಎಲ್ಯಾಲ್ ಎಲ್ಯ ಬಾಲೆಗ್ ಅಜಿವರಣೊ ಕಾರಉಂಗಿಲೊ ಆವೊಡೋ
ಎಲ್ಯಾಲ್ ಎಲ್ಯ ಬಾಲೆಗ್ ಅಜಿವರಣೊ ಕಾಫಿಸರೊ ಆವೊಡೋ
ಎಲ್ಯಾಲ್ ಎಲ್ಯ ಬಾಲೆಗ್ ಅಜಿವರಣೊ ಬಂಗಾರ್‌ದ ಕಾಜಿ ಆವೊಡೋ
ಎಲ್ಯಾಲ್ ಎಲ್ಯ ಬಾಲೆಗ್ ಅಜಿವರಣೊ ಬಂಗಾರ್‌ದ ಕೇದಗೆ ಆವೊಡೋ
ಎಲ್ಯಾಲ್ ಎಲ್ಯ ಬಾಲೆಗ್ ಅಜಿವರಣೊ ತಾರೆ ಆವೊಡೋ
ಎಲ್ಯಾಲ್ ಎಲ್ಯ ಬಾಲಗ್ ಅಜಿವರಣೊ ಟಿಕ್ಕಿ ಆವೊಡೋ
ಎಲ್ಯಾಲ್ ಎಲ್ಯ ಬಾಲೆಗ್ ಅಜಿವರಣೊ ಮಿಸ್‌ರಿದ ಮಾಲೆ ಆವೊಡೋ
ಎಲ್ಯಾಲ್ ಎಲ್ಯ ಬಾಲೆಗ್ ಅಜಿವರಣೊ ಕೊಪ್ಪು ಸರಪಳಿ ಆವೊಡೋ"

ಈ ಕಬಿತದಲ್ಲಿ " ಚಿಕ್ಕವಳು ಚಿಕ್ಕ ಹುಡುಗಿ ನಗುವಿನ ಮುಖದವಳು " ಎಂಬುದು ಪಲ್ಲವಿ. 'ಚಿಕ್ಕವಳ ಚಿಕ್ಕ ಹುಡುಗಿಗೆ ಆರು ವರಹದ (ಎಲ್ಯಾಲ್ ಎಲ್ಯ ಬಾಲೆಗ್ ಅಜಿ ವರಣೊ.......) ಇಂತಹ ಆಭರಣ ಆಗಬೇಕು' ಎಂಬ ಸೊಲ್ಲು ಅದೇ ರೀತಿಯಲ್ಲಿ ಪುನರಾವರ್ತನೆಯಾಗುತ್ತದೆ. ಆಭರಣದ ಹೆಸರೊಂದನ್ನು ಬಿಟ್ಟರೆ ಬೇರೆ ಯಾವುದೇ ಪದವೂ ಈ ಕಬಿತದಲ್ಲಿ ವ್ಯತ್ಯಾಸವನ್ನು ಪಡೆಯುವುದಿಲ್ಲ. ಇಲ್ಲಿ ಕಾಣಿಸುವ ಆಭರಣಗಳು : ತಿರ್‌ಪ್ಪುದ ಪೂ, ಬುಗುಡಿ, ಉಂಗಿಲೊ, ಮುಂದಲೆ, ಮೂಂಕುತಿ, ಕಾರ್ ಉಂಗಿಲೊ. ಕಾಫಿಸರೊ, ಬಂಗಾರ್‌ದ ಕಾಜಿ, ಬಂಗಾರ್‌ದ ಕೇದಗೆ, ತಾರ್, ಟಿಕ್ಕಿ. ಮಿಸ್‌ರಿದ ಮಾಲೆ, ಕೊಪ್ಪು ಸರಪಳಿ,

(2) ಪೊಣ್ಣು ರಾಮಸ್ವಾಮಿ ಮಗಳಾಳೆ

" ಪೋಯಾಜೇ ಪೋಯಾಜೇ, ಕಾವೇರಿ ಅಮಾಸೆ ತೀರ್ಥೊಗು, ಪೋಯಾಜೇ ।। ಪಲ್ಲವಿ ।।
ಮುತ್ತ್ದ್ ಕಾರಉಂಗಿಲೊಡು ಒರೊ ಪಿದೊಡ್‌ವಾಳ್, ಪೊಣ್ಣು ರಾಮಸ್ವಾಮಿ ಮಗಳಾಳೆ
ದೀತಿ ನೆಕ್ಕಿಲೀಸಡೇ ಒರೊ ಪಿದೊಡ್‌ವಾಳೆ, ಪೊಣ್ಣು ರಾಮಸ್ವಾಮಿ ಮಗಳಾಳೆ
ಉಳಯೊರೋ ಪಿದಯೋರೋ ನಲೆಪ್ಪುವಳೇ, ಪೊಣ್ಣು ರಾಮಸ್ವಾಮಿ ಮಗಳಾಳೆ
ಪೋಪೆಯೇ ಅಪ್ಪೆರೇ ಪೋಪೆಯೇ ಅಪ್ಪೇರೇ, ಪನ್ವಳಾಳೆ ಪೊಣ್ಣು ರಾಮಸ್ವಾಮಿ ಮಗಳಾಳೆ
ಪೋಯಶಾಜೇ. ಪೋಯಶಾಜೇ, ಪೊಣ್ಣು ರಾಮಸ್ವಾಮಿ ಮಗಳಾಳೆ
ದೀಕ್‌ನ ಸಕ್ರಸ್ ರೋಡು ಒರೊ ಪಿದೊಡ್‌ವಾಳೆ, ಪೊಣ್ಣು ರಾಮಸ್ವಾಮಿ ಮಗಳಾಳೆ
ಅಪ್ಪೆಮ್ಮ ಮೋನೇನ್ ತೂಪಳಾಳ್, ಪೊಣ್ಣು ರಾಮಸ್ವಾಮಿ ಮಗಳಾಳೆ
ಕಣ್ಣೆಡ್ ಕಡುದುಕ್ಕೊ ದೆಪ್ಪುವಳಾಳ್, ಪೊಣ್ಣು ರಾಮಸ್ವಾಮಿ ಮಗಳಾಳೆ
ದೀತಿ ಕಾಜಿಡೇ ಒರೊಪಿದೊಡ್‌ವಾಳ್, ಪೊಣ್ಣು ರಾಮಸ್ವಾಮಿ ಮಗಳಾಳೆ





ಪೆಟ್ಟಿಗೆ ತರ್ಕೊಳು ಪತೊಣುವಾಳೆ, ಪೊಣ್ಣು ರಾಮಸ್ವಾಮಿ ಮಗಳಾಳೆ
ಪಿದಡ್‌ಯಾಳ್ ಪಿದಡ್‌ವಾಳೇ, ಪೊಣ್ಣು ರಾಮಸ್ವಾಮಿ ಮಗಳಾಳೆ
ಕಾವೇರಿ ಅಮಾಸೆ ತೀರ್ಥೊಗು ಪೋಯಾಜೆ, ಪೊಣ್ಣು ರಾಮಸ್ವಾಮಿ ಮಗಳಾಳೆ
ದೀತಿ ಪುಚ್ಚೆ ಬಂಗಾರೆಡೇ ಪಿದಡ್‌ವಾಳೆ, ಪೊಣ್ಣು ರಾಮಸ್ವಾಮಿ ಮಗಳಾಳೆ
ದೀತಿ ಮುಂದರೇಡೇ ಪಿದಡೆವಾಳೆ, ಪೊಣ್ಣು ರಾಮಸ್ವಾಮಿ ಮಗಳಾಳೆ"

ಈ ಕಬಿತದಲ್ಲಿ ಕಾವೇರಿ ಅಮಾವಾಸ್ಯೆಯ ತೀರ್ಥಕ್ಕೆ ಹೋಗುವ ಹೆಂಗಸರ ಪ್ರಸ್ತಾಪ ಬರುತ್ತದೆ. ಕೊಡಗಿನ ತಲಕಾವೇರಿಯಲ್ಲಿ ವರ್ಷಕ್ಕೊಂದು ಬಾರಿ ನಡೆಯುವ ಅಮಾವಾಸ್ಯೆಯ ತೀರ್ಥದ ಉತ್ಸವಕ್ಕೆ ತುಳುನಾಡಿನ ಹೆಂಗಸರು ವೈಭವದಿಂದ ಯಾತ್ರೆ ಮಾಡುತ್ತಾರೆ. ಅಂತಹ ಹೆಂಗಸರ ಒಂದು ತಂಡ ರಾಮಸ್ವಾಮಿಯ ಮಗಳನ್ನು ಅಲ್ಲಿಗೆ ಆಹ್ವಾನಿಸುವುದು, ಅವಳು ಆಭರಣಗಳ ಸಹಿತ ಹೊರಡುವುದು ಈ ಚಿತ್ರವನ್ನು ಇಲ್ಲಿ ಕಾಣಬಹುದು. 'ಪೋಯಾಜೇ ಪೊಯಾಜೇ, ಕಾವೇರಿ ಅಮಾಸೆ ತೀರ್ಥೊಗು ಪೋಯಾಜೇ' (ಹೋಗೋಣವೇ, ಹೋಗೋಣವೇ, ಕಾವೇರಿ ಅಮಾವಾಸ್ಯೆಯ ತೀರ್ಥಕ್ಕೆ ಹೋಗೋಣವೇ) ಎಂಬುದು ಪಲ್ಲವಿಯಾಗಿ ಇಲ್ಲಿ ಕಾಣಿಸುತ್ತದೆ. ರಾಮಸ್ವಾಮಿಯ ಮಗಳು ತನ್ನ ತಂದೆ ತಾಯಿಯರನ್ನು ಬಿಟ್ಟು ಹೊರಡುತ್ತಿರುವುದರಿಂದ ದುಃಖದಿಂದ ಕಣ್ಣೀರಿಡುತ್ತಾಳಂತೆ. "ಕಣ್ಣಿಡ್ ಕಡುದುಕ್ಕೊ ದೆಪ್ಪುವಳಾಳೆ" (ಕಣ್ಣಿನಲ್ಲಿ ಕಡುದುಃಖ ತೆಗೆಯುತ್ತಾಳೆ) ಎಂಬುದು ತುಳು ಜನಪದ ಸಾಹಿತ್ಯದಲ್ಲಿ ದುಃಖವನ್ನು ವರ್ಣಿಸುವ ಒಂದು ನುಡಿಗಟ್ಟು. "ಪೊಣ್ಣು ರಾಮಸ್ವಾಮಿ" ಎನ್ನುವುದು ಒಬ್ಬ ವ್ಯಕ್ತಿಯ ಹೆಸರು. ಬಹುಶ: "ಪೊನ್ನು ರಾಮಸ್ವಾಮಿ" ಎಂದು ಇದ್ದಿರಬೇಕು. ಈ ರೀತಿಯ ಹೆಸರು ತುಳುನಾಡಿನಲ್ಲಿ ದೇಶೀಯವಾಗಿ ಇಲ್ಲ. ಸಾಮಾನ್ಯವಾಗಿ ತುಳುನಾಡಿನವರು ಬೇರೆ ಬೇರೆ ಉದ್ಯೋಗಗಳಿಗಾಗಿ ತುಳುನಾಡಿಗೆ ಬಂದು ನೆಲಸುತ್ತಾರೆ. ಅಂತಹ ತಮಿಳರ ಹೆಸರು ಇದು ಆಗಿರಬೇಕು. ಇಲ್ಲಿ ಬರುವ ಆಭರಣಗಳು : ಮುತ್ತು ಕಾರ ಉಂಗಿಲೊ, ನೆಕ್ಕಿಲೆಸೆ, ಸಕ್ರಿಸರೊ, ಮುಂದಲೆ, ಕಾಜಿ—ಇತ್ಯಾದಿ.

### 3) ಡಿಂಬಿ ಸಾಲೇ

'ಡಿಂಬಿ ಸಾಲೇ ಡಿಂಬಿ ಸಾಲೇ' ಎಂಬ ಪಲ್ಲವಿಯುಳ್ಳ ಕಬಿತದ ಬೇರೆ ಬೇರೆ ಪಾಠಗಳು ದೊರೆಯುತ್ತವೆ. ಒಂದು ಪಾಠದಲ್ಲಿ ಬರೇ ಆಭರಣಗಳ ಪಟ್ಟಿ ಇದ್ದು, ಸಂಪೂರ್ಣ ತುಳುಭಾಷೆಯಲ್ಲಿದೆ. ಇನ್ನೊಂದು 'ಕಬಿತ'ದಲ್ಲಿ 'ತುಳು ಮತ್ತು ಕನ್ನಡ' ಮಾತುಗಳ ಮಿಶ್ರಣ ರೂಪವಿದೆ. ಇಲ್ಲೂ ಆಭರಣಗಳ ಪಟ್ಟಿ ಸಿಗುತ್ತದೆ, ಈ ಕಬಿತವು ಒಂದು ತುಳು ಕಬಿತ ಮತ್ತು ಒಂದು ಕನ್ನಡ ಹಾಡಿನ ಮಿಶ್ರ ರೂಪವಾಗಿ ಹುಟ್ಟಿದ್ದು ಆಗಿರಬೇಕು(ಈ ವಿಚಾರವನ್ನು ಮುಂದೆ ಚರ್ಚಿಸಲಾಗುವುದು).

ಇಲ್ಲಿ 'ಡಿಂಬಿ ಸಾಲೇ' ಎಂಬ ಪದದ ವಿಚಾರ. ಮೂಲದಲ್ಲಿ ಅದು "ಧಿಮ್ಮಿಸಾಲೇ" ಎಂದು ಇದ್ದಿರಬಹುದೆಂದು ಕಾಣುತ್ತದೆ. ಏಕೆಂದರೆ ತುಳು-ಕನ್ನಡ ಮಿಶ್ರ ರೂಪದಲ್ಲಿ 'ಧಿಮ್ಮಿ ಧಿಮ್ಮಿ' ಎಂದು ಚಂದಾಕೆ ಕೂಗಿರೋ.

'ಡಿಂಬಿ ಸಾಲೇ ಡಿಂಬೀ ಸಾಲೇ' ಎಂಬ ಸೊಲ್ಲು ಸಿಗುತ್ತದೆ. ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡದ ಜನಪದ ಸಾಹಿತ್ಯದಲ್ಲಿ 'ದಿಮ್ ಸಾಲ್ ಪದಗಳು' ಎನ್ನುವ ಕನ್ನಡ ಹಾಡುಗಳ ಪ್ರಕಾರ ಇದೆ (ವಿವರಣೆ ಮತ್ತು ಹೋಲಿಕೆ ಮುಂದೆ ಕೊಡಲಾಗುವುದು).

ಇಲ್ಲಿ 'ಸಾಲೆ' 'ಶ್ಯಾಲಿ' ಎಂದರೆ 'ಅಕ್ಕಿ', ತಮಿಳುನಾಡಿನಲ್ಲಿ ಗಂಧಸಾಲೆ, ಜೀರಸಾಲೆ ಮುಂತಾದ ಭತ್ತದ ಬಗೆಗಳಿವೆ. ತುಳು ಕಬಿತಗಳಲ್ಲಿ, ಇತರ ಹಾಡುಗಳಲ್ಲಿ ಈ ಹೆಸರುಗಳು ಬರುತ್ತವೆ, ಈ 'ಗಂಧಸಾಲೆ' 'ಜೀರ ಸಾಲೆ' ಹೆಸರುಗಳ ಸಾಮ್ಯದಿಂದ 'ಧಿಮ್ಮಿ ಸಾಲೆ' ಎಂಬ ಪದ ಬಂದಿರಬಹುದು. ಇಲ್ಲಿ 'ಧಿಮ್ಮಿ' ಎನ್ನುವುದು ಯಾವುದೇ ಭತ್ತದ ರೀತಿಯ ಹೆಸರಾಗಿ ಸಿಗುವುದಿಲ್ಲ, ಕುಣಿತಕ್ಕೆ ಸಂಬಂಧಿಸಿದ 'ಧಿಮ್ಮಿ' ಎಂಬ ಹೆಜ್ಜೆಯ ಶಬ್ದ ವನ್ನು 'ಸಾಲೆ' ಪದಕ್ಕೆ ಸೇರಿಸಿ, 'ಧಿಮ್ಮಿಸಾಲೆ' ಎಂಬುದನ್ನು ಉಂಟುಮಾಡಿರಬೇಕು. ಇದು ವಿನೋದ ಪ್ರವೃತ್ತಿಯಿಂದ ಆಗಿರಬಹುದೇ ಎಂದು ಸಂಶಯಪಡಬೇಕಾಗುತ್ತದೆ. ಆದರೆ ಮೂಲದಲ್ಲಿ ಕೃಷಿಗೆ ಸಂಬಂಧಿ ಸಿದ ಹಾಡು ಇದು ಎನ್ನುವುದು ಇದರಿಂದ ತಿಳಿದು ಬರುತ್ತದೆ. 'ಧಿಮ್ಮಿ ಸಾಲೇ' ಎನ್ನುವ ಶಬ್ದವು ರೂಢಿ ಯಲ್ಲಿ 'ಡಿಂಬಿ ಸಾಲೇ' ಎಂದಾಗಿದೆ,

ಸಂಪೂರ್ಣ ತುಳು ಭಾಷೆಯಲ್ಲಿ 'ಡಿಂಬಿ ಸಾಲೇ' ಕಬಿತದ ರೂಪವು ಹೀಗಿದೆ :

"ಡಿಂಬಿ ಸಾಲೇ ಡಿಂಬಿ ಸಾಲೇ ॥ ಪಲ್ಲವಿ ॥
ಡಿಂಬಿ ಸಾಲೆ ಮಗಳೆ ಅಳ್ ದಾನೆ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ಕಬಿತ್ತ ಬೆಂಡೆ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ದಾನೆ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ಸೊಂಬೊದ ಪಟ್ಟೆ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ದಾನೆ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ಕಂಬೆಲೆದ ನೆಕೆಲೆಸ್ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ದಾನೆ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ಕೈತ್ತ ಕಾಜಿ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ದಾನೆ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ಕೈತ್ತ ಉಂಗಿಲೊ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ದಾನೆ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ತರೆತ್ತ ಗುಲಾಬಿದ ಪೂ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್‌ದಾನೆ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ಕೆಕ್ಕೆಲೆದ ಗೆಜ್ಜೆಕ್ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ದಾನೆ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ಕಂಬೆಲೆದ ಮಿಸಿರಿದ ಮಾಲೆ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ದಾನೆ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ಕಬಿತ್ತ ಕೊಪ್ಪು ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ದಾನೆ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ಕೆಕ್ಕೆಲೆದ ಕರಿಯಣಿ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ದಾನೆ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ಕಂಬಿಲೆದ ಸಕ್ಕೆರ್‌ದ ಸರೊ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ದಾನೆ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಕಾರ್‌ದ ಕಾರಂಗಿಲೋ ಮಾರುಂಡಳೋ

ಡಿಂಬಿ ಸಾಲೆ ಮಗಳೆ ಅಳ್ ದಾನೆ ಮಾರುಂಡಳೋ
ಡಿಂಬಿ ಸಾಲೆ ಮಗಳೆ ಅಳ್ ಕಾರ್‌ಡ ಪೌಜನಿಗೆ ಮಾರುಂಡಳೋ"

ಈ ಕಬಿತದಲ್ಲಿ "ಧಿಮ್ಮಿ ಸಾಲೆ ಮಗಳು ಏನು ಮಾಡಿಕೊಂಡು ಉಂಡಳೊ ?" (ಡಿಂಬಿ ಸಾಲೆ ಮಗಳೆ ಅಳ್ ದಾನೆ ಮಾರುಂಡಳೋ) ಎಂದು ಕೇಳಿ, "ಧಿಮ್ಮಿ ಸಾಲೆ ಮಗಳು ಇಂತಹ ಆಭರಣವನ್ನು ಮಾರಿಕೊಂಡು ಉಂಡಳು" ಎಂದಳು ಉತ್ತರ ಹೇಳಿ ಕಬಿತ ಮುಂದುವರಿಯುತ್ತದೆ. ಆಭರಣಗಳ ಹೆಸರುಗಳ ವ್ಯತ್ಯಾಸವನ್ನು ಬಿಟ್ಟರೆ, ಉಳಿದ ಎಲ್ಲಾ ಮಾತುಗಳೂ ಒಂದೇ ರೀತಿ ಇವೆ. ಇಲ್ಲಿ ಆಭರಣಗಳ ಹೆಸರುಗಳನ್ನು ಕೊಡುವಾಗ, ಅವು ದೇಹದ ಯಾವ ಅಂಗದಲ್ಲಿ ಧರಿಸುವವುಗಳು ಎಂಬ ಸೂಚನೆ ಸಿಗುತ್ತದೆ : ಕೆಚಿತ್ತ ಬಿಂಡ್, ಸೊಂಟೊದ ಪಟ್ಟಿ, ಕಂಟೆಲ್‌ದ ನೆಕ್‌ಲೆಸ್, ಕೈತ್ತ ಕಾಜಿ, ಕೈತ್ತ ಉಂಗಿರೋ, ತರೆತ್ತ ಗುಲಾಬಿದ ಪೂ, ಕೆಕ್ಕ್‌ಲ್‌ದ ಗೆಜ್ಜೆಕ್, ಕಂಟೆಲೆದ ಮಿರಿಸಿದ ಮಾಲೆ, ಕೆಚಿತ್ತ ಕೊಪ್ಪು, ಕೆಕ್ಕ್‌ಲ್‌ದ ಕರಿಯಣಿ, ಕಂಟೆಲ್‌ದ ಸಕ್ಕ್‌ರ್‌ದ ಸೆರೊ, ಕಾರ್‌ದ ಕಾರ ಉಂಗಿಲೊ, ಕಾರ್‌ದ ಪೌಜನಿಗೆ (ಕಿವಿಯ ಬೆಂಡೋಲೆ, ಸೊಂಟದ ಪಟ್ಟಿ, ಕೊರಳಿನ ನೆಕ್ಲೇಸ್, ಕೈಯ ಬಳೆ, ಕೈ ಉಂಗುರ, ತಲೆಯ ಗುಲಾಬಿ ಹೂ (ಚಿನ್ನದ್ದು), ಕುತ್ತಿಗೆಯ ಗೆಜ್ಜೆಟಿಕ್, ಕೊರಳಿನ ಮಿಸಿರಿದ ಮಾಲೆ, ಕಿವಿಯ ಕೊಪ್ಪು, ಕುತ್ತಿಗೆಯ ಕರಿಮಣಿ, ಕುತ್ತಿಗೆಯ ಸಕ್ಕ್‌ರ್ ಸರ, ಕಾಲಿನ ಕಾಲುಂಗುರ, ಕಾಲಿನ ಪೌಜನಿಗೆ).

ಇವುಗಳಲ್ಲಿ 'ನೆಕ್ಲೇಸ್' ಎಂಬ ಸ್ವಲ್ಪ ಆಧುನಿಕ ಆಭರಣವನ್ನು ಹೊರತುಪಡಿಸಿದರೆ, ಉಳಿದೆಲ್ಲವುಗಳೂ ತುಳುನಾಡಿನ ಸ್ತ್ರೀಯರ ಪ್ರಾಚೀನ ಆಭರಣಗಳು. ದಕ್ಷಿಣ ಕನ್ನಡದಲ್ಲಿ ಕನ್ನಡ ಮಾತನಾಡುವ ಉತ್ತರ ಭಾಗದಲ್ಲಿ ಇಲ್ಲಿನ ಮೂಲ ನಿವಾಸಿಗಳ ಒಂದು ಬಳಗದವರು ಮನೆ ಮನೆಗೆ ಬರುತ್ತಾರೆ. ಅವರು ಸ್ವಂತ ಬೇಸಾಯಗಾರರಲ್ಲ. ಅವರಲ್ಲಿ ಒಬ್ಬಾತ ಒಂದು ಓಲೆಯ ಕೊಡೆಗೆ ಕಿಸ್ಕಾರ ಹೂ, ಕೋಳಿಯ ಮೊಟ್ಟೆ ಮೊದಲಾದವನ್ನು ತೂಗಿಕೊಂಡು ಬಂದು ಮನೆ ಮುಂದೆ ಕುಣಿಯುತ್ತಾನೆ. 'ದಿಮಿ ಸಾಲೆ' ಎಂಬ ಪಲ್ಲವಿಯುಳ್ಳ ಒಂದು ಹಾಡನ್ನು ಹಾಡುತ್ತಾನೆ. ಸಾಲೆ, ಶ್ಯಾಲೆ-ಅಕ್ಕಿಯ ಹೆಸರಾದುದರಿಂದ ಪೂರ್ವದ ಕೃಷಿಯ ಸಂಸ್ಕಾರಕ್ಕೆ ಸಂಬಂಧಿಸಿದುದು ಎಂದು ಊಹಿಸಬಹುದು.

ಸುಳ್ಯದಲ್ಲಿ ಕನ್ನಡ ಮಾತಾಡುವವರಲ್ಲಿ ಇರುವ ಹಾಡು—

ಡಿಮಿ ಡಿಮಿ ಹೇಳಿರೋ ಎಲ್ಲವರು ಹೇಳಿರೋ
ಎಲ್ಲವರು ಹೇಳಿದರೆ ಚೆಂದವಾಗಿ ಕೇಳುತದೆ
ಡಿಮಿ ಶಾಲೆ ಮಗಳು ಏನು ಮಾರ್‍ಕೊಂಡಳು
ಡಿಮಿ ಸಾಲೆ ಮಗಳು ಕೊಪ್ಪು ಮಾರ್‍ಕೊಂಡಳು

ಅವಳು ಒಂದೊಂದಾಗಿ ತನ್ನ ಆಭರಣಗಳನ್ನು ಮಾರಿಕೊಂಡುದನ್ನು ಬಣ್ಣಿಸುತ್ತಾರೆ. ಅನಂತರ—

ರಾಮಣ್ಣ ಭೀಮಣ್ಣ ಒಂದೇ ತಾಯಿ ಮಕ್ಕಳು
ರಾಮುನ ಮಗಳಿಗೆ ಕಂಚಿನ ಬಟ್ಟಲು
ಭೀಮುನ ಮಗನಿಗೆ ಚಿನ್ನದ ಬಟ್ಟಲು ।

ಈ ರಾಮುನಾರು, ಭೀಮುನಾರು , ಇಲ್ಲೇಕೆ ಬಂದರು—ಎಂಬುದು ತಿಳಿಯುವುದಿಲ್ಲ. ಕುಂದಾಪುರದ ಕಡೆ ಹಾಡುವ ದಿಮಿ ಸಾಲೆ ಕೊನೆಗೆ 'ರಾಮುನಾ ಭೀಮುನಾ ಹೋಳಿಯ ಹಬ್ಬ' ಎಂಬ ಸೊಲ್ಲು ಬರುತ್ತದೆ.

ಕಾಲಕ್ರಮದಲ್ಲಿ ಸ್ಥಳಾಂತರಗೊಂಡ ಯಾವುದೋ ಒಂದು ಕೋಮಿನವರ ಕೃಷಿ ಕರ್ಮದ ಹಾಡು ಇದು. ಅದೇ 'ಶಾಲೆ'ಯನ್ನು ಕುರಿತ ಹಾಡು ನಿಜವಾದರೂ ಅದನ್ನು ಹಾಡುವ ಕಾಲ ಬೇಸಾಯದ ಸಮಯವಾದರೂ ಹೋಳಿಗೂ ಅದಕ್ಕೂ ಸಂಬಂಧವಿಲ್ಲವೆಂದು ಕಾಣುತ್ತದೆ.

ದಿಮ್‌ಸಾಲೆ ಪದಗಳು : ಕಾಮನ ಹುಣ್ಣಿಮೆಯ ರಾತ್ರಿ ಕಾಮನನ್ನು ಸುಡುತ್ತಾರೆ. ಮರುದಿನ ದಿಮ್‌ಸಾಲೆ ಪದ ಹೇಳುತ್ತ ಕುಣಿಯುತ್ತ ಮನೆ ಮನೆ ತಿರುಗಿ ಹಣ ಪಡೆಯುತ್ತಾರೆ. ಒಕ್ಕಲಿಗರ ಗಂಡು "ಮಕ್ಕಳು" ಕಾಮನೋ ಭೀಮನೋ ಕಲ್ಲಗುಡ್ಡೆ ಬಕ್ಕಾನೋ : ಕಾಮನ ಸುಟ್ಟ ಮರುದಿವ್ಸ ಅವ್ಲಕ್ಕಿ ಕಾಯಿ ಭಾತ ದುಮ್ ಸಾಲ್ಯೋ" ಎಂದು ಕೂಗುತ್ತ ಬರುತ್ತಾರೆ. ಇದು ಉತ್ತರ ಕನ್ನಡದಲ್ಲಿ ಹುಣ್ಣಿಮೆಯ ರಾತ್ರಿಯಲ್ಲಿ ಹುಡುಗರು ಗುಂಪಾಗಿ ಸೇರಿ, ದಿಮ್ ಸಾಲೆ ಎಂದು ಕೂಗುತ್ತಾ ಪದ ಹೇಳಿ ದುಡ್ಡು–ಕಾಯಿಗಳನ್ನು ಬೇಡುತ್ತಾರೆ.

"ಕಾಮನೋ ಭೀಮನೋ ಕಳ್ಳಬಡ್ಡಿ ಮಕ್ಕಳೋ ದಿಮ್‌ಸಾಲೆ
ಕಾಮಣ್ಣ ಭೀಮಣ್ಣ ಹೆಣ್ಣು ಕೇಂಬುಕ್ಕೋದರೋ
ಈ ಕಾಮಣ್ಣ ಮಕ್ಕಳೋ ಮಹಾಕಳ್ಳಗಾರರೋ
ದಿಮ್‌ಸಾಲೆ ಎನ್ನಿರೋ ದಿಮ್‌ಗುಟ್ಟಿ ಕುಣಿಯಿರೋ
ಹಬ್ಬು ಬೆಳ್ದೆ ಮರುದಿನ ಎನ್ ತಿಂಬ್ರಿ ಮಕ್ಕಳೆ
ಹಿಟ್ ಮಾಡ್ದೆ ಅಕ್ಕೀನ ಕುಟ್ಕಂಡೇ ತಿನ್ನಿರೋ

ಇಲ್ಲಿ ಕಾಣಿಸುವ 'ಕಾಮಣ್ಣ ಭೀಮಣ್ಣ' ಎನ್ನುವುದು ಕಾಲ ಕ್ರಮೇಣ 'ರಾಮಣ್ಣ ಭೀಮಣ್ಣ' ಆಗಿರಬೇಕು. ಹೋಳಿ ಹಬ್ಬದ ಕಾಮನ ಹುಣ್ಣಿಮೆಗೆ ಸಂಬಂಧಿಸಿದ ಈ ಕನ್ನಡ ಸಾಲು ತುಳು ಕಬಿತದ ನಡುವೆ ಸೇರಿಕೊಂಡಿರುವ ಒಂದು ಪಾಠ ಸಿಕ್ಕಿದೆ. ಈ ಪಾಠ ಸಿಕ್ಕಿರುವುದು ತುಳು ಮಾತಾಡುವ ಪ್ರದೇಶದಲ್ಲಿಯೇ. 'ಡಿಂಬಿ ಸಾಲೆ' ಎಂದು ಪಲ್ಲವಿ ಇರುವ ತುಳು ಕಬಿತದ ನಡು ನಡುವೆ-

"ರಾಮಣ್ಣ ಭೀಮಣ್ಣ ಒಂದೇ ತಾಯ ಮಕ್ಕಳು
ಧಿಮಿ ಧಿಮಿ ಎಂದು ಚಂದಾಕೆ ಕೂಗಿರೋ"

ಎನ್ನುವ ಕನ್ನಡ ಹಾಡಿನ ಸಾಲುಗಳು ಕಾಣಿಸುತ್ತವೆ. ಇದು ಒಂದು ಮಿಶ್ರ ಪಾಠ. ಈ ಕಬಿತದ ಉಳಿದ ವಿವರಣೆಗಳೆಲ್ಲವೂ ಹಿಂದೆ ನೋಡಿದ 'ಡಿಂಬಿ ಸಾಲೆತುಳು ಕಬಿತದ ಹಾಗೆಯೇ ಇವೆ. ಇದೇ ಆಭರಣಗಳ ಪಟ್ಟಿಯನ್ನು ಇಲ್ಲೂ ಕಾಣಬಹುದು:

"ಡಿಂಬಿ ಸಾಲೇ ಡಿಂಬಿ ಸಾಲೇ
ಡಿಂಬಿ ಸಾಲೇ ರಂಗ ಕೊಂಬಿಸಾಲೇ
ರಾಮಣ್ಣ ಭೀಮಣ್ಣ ಒಂದೇ ತಾಯಿ ಮಕ್ಕಳೂ
ಧಿಮಿ ಧಿಮಿ ಎಂದು ಚಂದಾಕೆ ಆಡಿರೋ
ಡಿಂಬಿ ಸಾಲೇೀ ರಂಗ ಕೊಂಬಿಸಾಲೇೀ
ಡಿಂಬಿ ಸಾಲೆ ಮಗಳ್ ದಾನ್ ಮಾರುಂಡಾಳೆ
ಡಿಂಬಿ ಸಾಲೆ ಮಗಳ್ ಕಬಿತ್ತ ಬೆಂಡ್ ಮಾರುಂಡಾಳ್
.... .... .... .... .... .... .... .... .... .... .... ....

ಹೀಗೆಯೇ ಈ ಕಬಿತ ಮುಂದುವರಿಯುತ್ತದೆ.

"ಡಿಂಬೆಸಾಲೆ" ತುಳು ಕಬಿತದ ಮೂರನೆಯ ಪಾಠಾಂತರವೂ ಸಿಗುತ್ತದೆ. ಇದು ಸಂಪೂರ್ಣ ತುಳು ವಿನಲ್ಲಿದೆ. ಇಲ್ಲೂ ಆಭರಣಗಳ ಪಟ್ಟಿ ಇದೆ. ಹಿಂದಿನ ಎರಡು ಪಾಠಾಂತರಗಳಷ್ಟು ಆಕರ್ಷಕವಾಗಿಲ್ಲ. ಅದರ ಸ್ವರೂಪ ಹೀಗಿದೆ :

"ಸಾತು ಕೊಪ್ಪು ಸತಾರೆ ಮಿಂಸಿರಿ ಪೋಣಗ ವೋತ್‌ಂಡ್ ಸಾಲೆ
ಸೋಡಂಗಿರ್‍ತ್ತಿ ಸೂಳೆಗ್ ಬಾಲಿಗ್ ಡಿಂಬಿಸಾಲೇ
ಸಾತ್ ಮಿಂಸಿರಿ ಸಾತ್‌ಕೊಪ್ಪು ಪೋನಗ ಪೋತೆಂಡ್ ಸಾಲೇ
ಸೋಡಂಗಿರ್‍ತ್ತಿ ಸೂಳೆಗ್ ಬಾಲೆಗ್ ಡಿಂಬಿಸಾಲೇ
ಸಾತ್ ಬೆಂಡ್ರೆ............ .. ...................................
..................................................................."

ಇಲ್ಲಿ ಆಭರಣಗಳ ಪಟ್ಟಿಯು ಜೊತೆಗೆ "ಸೋಡಂಗಿರ್‍ತ್ತಿ ಸೂಳೆಗ್ ಬಾಲೆಗ್ ಡಿಂಬಿಸಾಲೇ" (ಸೋಣಂಗೇರಿಯಸೂಳೆಗೆ ಬಾಲೆಗೆ ಡಿಂಬಿಸಾಲೇ) ಎನ್ನುವ ನುಡಿಯೂ ಪಲ್ಲವಿಯಂತೆ ಬರುತ್ತದೆ. 'ಸೋಣಂಗೇರಿ' ಎನ್ನುವುದು ಒಂದು ಊರಿನ ಹೆಸರು. ಅಲ್ಲಿನ ಸೂಳೆಯೊಬ್ಬಳ ಆಭರಣಗಳನ್ನು ಈ ಕಬಿತ ವಿವರಿಸುತ್ತದೆ. ಇಲ್ಲಿ ಕೊಪ್ಪು. ಮಿಂಸಿರಿ, ಬೆಂಡ್ರೆ, ಕಾಜಿ, ಪಟ್ಟಿ, ಉಂಗಿಲೊ, ಗೆಜ್ಜೆಟಿಕೆ, ಟಿಕ್ಕಿ, ಪೂವು, ಮುಂದಲೆ ಎನ್ನುವ ಆಭರಣಗಳ ಜೊತೆಗೆ ರವಕೆ ಮತ್ತು ಅಂಗ ಎನ್ನುವ ವಸ್ತ್ರ ವಿಶೇಷಗಳನ್ನು ಕೊಡಲಾಗಿದೆ.

ಸಾಮಾನ್ಯವಾಗಿ ಈ ಎಲ್ಲ ಕಬಿತಗಳ ಹಾಗೂ ಅವುಗಳ ಪಾಠಾಂತರಗಳಲ್ಲಿ ಕಾಣಿಸುವ ಆಭರಣಗಳ ಹೆಸರುಗಳಲ್ಲಿ ವಿಶೇಷ ವ್ಯತ್ಯಾಸವಿಲ್ಲ.

(4) ಟ್ರುವೇಲೆ ಬಾಲೆ ಬಾಲೆ ಪೊಲಿಯೇ

'ಟ್ರುವೇಲೆ ಬಾಲೆ ಬಾಲೆ ಪೊಲಿಯೇ' ಎನ್ನುವ ಕಬಿತದಲ್ಲಿ ಸ್ಪಷ್ಟವಾದ ಕಥೆಯಿಲ್ಲವಾದರೂ ಚಿಕ್ಕದಾದ ಒಂದು ಘಟನೆ ಇದೆ. ಇಲ್ಲಿ ಪೌರಾಣಿಕ ಪಾತ್ರಗಳು ತುಳುನಾಡಿನ ಪರಿಸರದಲ್ಲಿ ವ್ಯವಹರಿಸುತ್ತವೆ. ಈ ದೃಷ್ಟಿಯಿಂದ ಇದು ಇತರ ಕಬಿತಗಳಿಗಿಂತ ಭಿನ್ನ. ಸಾಂಸ್ಕೃತಿಕವಾಗಿ ಈ ಕಬಿತದಲ್ಲಿ ಆಭರಣಗಳ ಪಟ್ಟಿಯು ಜೊತೆಗೆ, ರವಕೆ, ಸೀರೆಗಳಂತಹ ವಸ್ತ್ರ ವಿಶೇಷಗಳೂ ಪ್ರಸ್ತಾವಿತವಾಗಿವೆ. ಈ ಕಬಿತದ ಕೊನೆಯಲ್ಲಿ ಮಗುವನ್ನು ತೊಟ್ಟಿಲಲ್ಲಿ ಹಾಕಿ ತೂಗುವ ಜೋಗುಳದಂತಹ ರಚನೆ ಸಿಗುತ್ತದೆ. ಇದು ಕಬಿತದ ಲಯ ಹಾಗೂ ಸ್ವರೂಪದಿಂದ ಪ್ರತ್ಯೇಕ. ಇಲ್ಲಿ ಹೆಣ್ಣಿನ ಸಿಂಗಾರದ ವಿವರಣೆಯನ್ನು ಕಾಣಬಹುದು. ಸಾಹಿತ್ಯಿಕವಾಗಿಯೂ ಇದು ಉತ್ತಮ ಭಾಗ.

ಮೊದಲು ಈ ತುಳು ಕಬಿತದ ಜನಪ್ರಿಯ ಪಾಠವನ್ನು ನೋಡಬಹುದು.

"ಟ್ರುವೇಲೆ ಬಾಲೆ ಬಾಲೆ ಪೊಲಿಯೇ ॥ ಪಲ್ಲವಿ ॥
ಮಿತ್ತೊಂಜಿ ಮಿರಿ ಲೋಕೊಡುಳ್ಳೆರಡೋ
ತಿರ್ತೊಂಜಿ ಸಿರಿ ಲೋಕೊಡುಳ್ಳೆರಡೋ
ನನಾಂಡ ಈಸ್ವರೇ ಲೋಕೊ ಈಸ್ವರೇ
ಮಿತ್ತ್‌ಲ ಮಿರಿ ಲೋಕೊಡಿತ್ತಿನಾರ್
ಬೊಟ್ಟುಡು ಸಾರೊ ಮುಡಿ ಕಂಡೊನೇ ಈಸ್ವರಗ್
ಬೈಲ್‌ಡ್ ನೂದುಮುಡಿ ಕಂಡೊನೇ ಈಸ್ವರಗ್
ಕೊಟ್ಟುಲ ದೀಡ್‌ಪಿ ಕೊಟ್ಟಾರೊಗ್
ನನ ಬೇಗೊ ಪೋತೆರ್ ಈಸ್‌ವರೇ
ಕಂಡೊದ ನೀರ್ ಪೇರ್ ಕಟ್ಟೆಬೆರ್
ಸಿರ್ಕೆನ ನೀರೆನ್ ಎರ್ಕಾಬೇರ್ ಈಸ್ವರೇ
ಎರ್ಕೆನ ನೀರೆನ್ ಸಿರ್ಕಾಬೇರ್ ಈಸ್ವರೇ
ಉಳ್ಳೆಯೇ ಈಸ್ವರೇ ಕೇನಿದರೋ
ಕಿರೆತ್ತಾಡೆ ಪೋದೆಲ ಕೈಕಾರ್ ದೆಕ್ಕೊಂದ್
ಒಂಜಲ ಬಲ್ಲಿಯೇ ಈಸ್‌ವರಾ
ಕೈ ಮೋನೆ ದೆಕ್ಕಿಯೆರೆ ಕೆರೆಕ್ಕ್ ಪೋಪೆಂದ್
ಒಂಜಲ ಪೋತೆರ್ ಲೋಕೊ ಈಸ್ವರೇ
ಕಿರೆತ್ತಾಡೆ ನನಲ ಪೋನಗವೋ
ತಾಮರೆದ ಪೂ ಅಂಡ ಉಂಡುಂಗೆ ಅವಾ
ಅಪ್ಪೊಂಜಿ ಪೂವುನ್ ಪತ್ಯೆರೇಂದೆ

ಒಂಜಲ ಪೋತೆರ್ ಈಸ್‌ವರೇ
ಪತ್ಯೆರ್ ಪೋನಗ ಅಕರೊ ಪೋಪುಂಡು
ಕೊಯೆದೇ ಕಿಸೆಕ್ಕ್ ಪಾದ್‌ಬೆರೋ
ಇಂದೆ ದಾನೆ ಈಸ್ವರಾ ಕೇನಿದರೋ
ತೆಲಿತ್ತೊಂದು ಬತ್ತೆನೆ ಪೂವುಲ ಅವು
ಅತ್ತಾಂಡ ನನ ಬೇಗೊ ಬರ್ಪೆರಡೋ
ಇಲ್ಲಡೆ ಎತ್ತೆನಗ ಲೆಪ್ಪುವೆರ್
ಇಂದಾಯು ಲಂದಾಯು ಪಾರ್‌ವತೀ
ಪಾಡೊಂಡ ಅಟಿಲ್ ಕಾಲ್ಯಾಂಡಡೊ
ಬೆಂದೆರ್‌ಬೀಳ್ಯಾಂಡಡೋ
ಇಂದೊಂಜಿ ಪೂವುನ್ ಮುಡಿಪ್ಪೊಡು
ತಲೇನೆ ಕಟ್ಟ್‌ಲ ಪಾರ್‌ವತೀ
ನಿನ್ನೊಂಜಿ ಪೊರ್ಲಂಕೆ ತೂವೊಂಡುಂದೆ
ಅಪ್ಪೊಂಜಿ ಪೂವುನು ದೆತ್ತಳಡೊ
ಗಿಳಿಸೂವೆ ಬಾಕೆಲ್‌ಡ್ ದೀಡ್‌ದಳ್
ಮನದ್ದಾನಿದ ದಿನೊಟ್ಟೊಗೆ
ಗಲ್ಲೊನೆ ಕಲೆಂಬಿಡ್ ಪಾಡೆದಳ್
ಅನಿದ ದಿನೊಮನೊ ಕರಿತ್ತ್ಂಡೆ
ಮನದ್ದಾನಿದ ದಿನೊಟ್ಟೊಗೆ
"ಬಾಲೆದ ಸ್ವರೊನೆ ಕೇನುಂಡೆಂಕ್
ಅಂದಯು ಪಾರ್‌ವತಿ ಕೇನಿದನೋ
ಬಾರೆಲ್ ಬಂಧುಳು ಇದ್ಯಂದಿನರಮನೆಡ್
ಬಾಲೆದ ಸ್ವರೊನೆ ಕೇನುಂಡೆಂಕ್"
"ದ್ಯಾತೆನ್ ಪನಪ್ಪರೊ ಈಸ್‌ವರಾ
ನಮ್ಮಾನರಮನೆಡ್ ಬಾಲೆಲೆದ್ದಿ"
"ಬಾಲೇನೆ ಬುಳುಪ್ಪುನ ಕೇನುಂಡಯಾ"
ಪಾರ್‌ವತೀ ನಂದಾದೀಪೊ ಪೊತ್ತಾದಳೆ
ಉಳಾಯಿ ಸೂತ್ರೊಗು ಪೋಪಳಡೋ
"ಪೊಣ್ಣುನೇ ಮಗಳ್ ಉಜ್ವಾನೇ ಉದಿಪ್ಪಾನೊ
ಲಕ್ಕ್‌ಂಡ್ ಬಾಲೆ ಅವು ಕೇನಿದರೋ"
"ಪಿದಾಯೀನೆ ಸೂತ್ರೊಗು ಕೊಂಡುಬಲಾ"
ಬಾಲೆದ ಪೊರ್ಲುನೆ ತೂಪೆರ್ ಈಸ್ವರೇ

ಸೊಂಟೊಗು ನೇವಳೊ ಒಯ್ಪುಬೆರ್
ಎಲ್ಯೆನೇ ಮಗಳ್ ಮಲ್ಲೆ ಅಯಳೋ
ಪೊಣ್ಣು ಪೋದ್ ಪೊಣ್ಜೊವು ಅತಳದೋ
ಅಂದಾಯು ಲಪ್ಪೆರೇ (ಅಪ್ಪೆರೇ) ಕೇನಿದರೋ
ತುತ್ಯೆರೆ ಸೀರೆ ಎಂಕ್ ಅವೊಡೂಂದೆ
ಕುಡಲಾದ ಬಂದರೊಗ್ ಪೋತೆರಡೋ
ಸೀರೆನೆ ನನಾಲ ಕೊಂಡು ಬರುವೆರ್
ಬುಕ್ಯೊಲ ದುಕ್ಕಿತ್ ಬುಳ್ಪುವಳ್ ಮಗಳ್
ಪಾಡ್ಯೆರೆ ರವಕೆ ಅವೊಡುಂದ್
ರವಾಕೆ ನನಾಲ ಕೊಂಡಪೆರ್
ಬುಕ್ಯೊಲ ದುಕ್ಕಿತೆ ಬುಳ್ಪುವಳ್ ಮಗಳ್
ಕೆಬಿಕ್ಕೆ ಬೆಂಡೆಲ ಅವೊಡುಂದೆ
ಕುಡುಲಾದ ಪೇಂಟೆಗೆ ಪೋತೆರಡೋ
ಒಂಜಿ ತೂಕೊ ಬಂಗಾರ್ ತೂಕಬೆರ್
ಕೃಷ್ಣಯ್ಯ ಆಚಾರಿಯುಡ ಕೊರ್ತೆರಡೋ
ಒಂಜೀನೆ ಕಾಯುಪ್ಪುಗು ರಡ್ಡೆಲ ಕೊಡಪ್ಪುಗೂ
ಕೆಬಿಕ್ಕೆ ಬೆಂಡೆಲ ಮನ್ಪೊಡುಂದ್
ಬುಕ್ಯೊಲ ಬುಳ್ಪುವಳೆ ಮಗಳಾಳ್
ಮೂಂಕುಗು ಟೆಕ್ಕಿಲ ಅಪೊಡುಂದ್
ಅತೆನ ಪೊರ್ತುಗು ಪೋತೆರವಾ
ಕುಡಲಾದ ಬಂದರ್‌ಗ್ ಪೋತೆರ್‌ಗೇ
ಒಂಜಿ ತೂಕೊ ಬಂಗಾರ್ ತೂಕಬೆರ್
ಕೃಷ್ಣಯ್ಯ ಆಚಾರಿಯುಡ ಕೊರ್ತೆರವಾ
ಎಂಕೊಂಜಿ ಮೂಂಕುಗು ಟೆಕ್ಕಿ ಅವೊಡುಂದು
ಒಂಜಿನೇ ಕಾಯುಪ್ಪುಗು ರಡ್ಡೆಲ ಕೊಡಪ್ಪುಗು
ಬುಕ್ಯೊಲ ದುಕ್ಕಿತ್ ಬುಳ್ಪುವಳೆ ಮಗಳೆ
ಕೆಕ್ಕಿಲೆಗ್ ನೆಕ್ಕಿಲೀಸೆ ಅವೊಡುಂದ್
ಕುಡಲದಾ ಬಂದರ್‌ಗೆ ಪೋಪೆರವಾ
ಒಂಜಿ ತೂಕೊ ಬಂಗಾರ್ ತೂಕಾಬೆರ್
ಕೃಷ್ಣಯ್ಯ ಆಚಾರಿಯುಡ ಕೊರ್ತೆರಡೋ
ಒಂಜಿನೇ ಕಾಯುಪ್ಪುಗು ರಡ್ಡೆನೇ ಕೊಡಪ್ಪುಗೂ
ಎಂಕಾಂಡ ನೆಕೆಲೇಸ್ ಕೊರ್‌ಲಂಡ್ ಪಂಡೆರ್

ಇದೇ ರೀತಿ ಕೆಲವು ಆಭರಣಗಳ ಪೆಸರುಗಳೊಂದಿಗೆ ಕಬಿತ ಮುಂದುವರಿದು ಮುಕ್ತಾಯವಾಗುತ್ತದೆ. ಈ ತುಳು ಕಬಿತದ ಸಾರಾಂಶವನ್ನು ಕನ್ನಡದಲ್ಲಿ ಹೀಗೆ ಸಂಗ್ರಹಿಸಬಹುದು :

"ಈಶ್ವರನು ಮೇಲಿನ ಮಿರಿಲೋಕದಲ್ಲಿರುತ್ತಾನೆ. ಅವನ ಪತ್ನಿ ಪಾರ್ವತಿ. ಈಶ್ವರನಿಗೆ ಸಾವಿರ ಮುಡಿ ಅಕ್ಕಿಯ ಬೆಟ್ಟು ಗದ್ದೆ ಮತ್ತು ನೂರು ಮುಡಿ ಅಕ್ಕಿಯ ಬೈಲು ಗದ್ದೆಯ ಬೇಸಾಯವಿರುತ್ತದೆ. ಅವನು ಹಾರೆಯನ್ನು ಇಡುವ ಕೊಟ್ಟಿಗೆಗೆ ಹೋಗಿ, ಹಾರೆಯನ್ನು ತೆಗೆದುಕೊಂಡು ಗದ್ದೆಯಲ್ಲಿರುವ ನೀರನ್ನು ಬೆಳೆಗೆ ಬೇಕಾದಷ್ಟು ಇರುವಂತೆ ಕಟ್ಟುತ್ತಾನೆ, ನೀರು ಕಡಿಮೆಯಾಗಿರುವಲ್ಲಿ ಹೆಚ್ಚಿಸುತ್ತಾನೆ. ಹೆಚ್ಚಿರುವಲ್ಲಿ ಕಡಿಮೆ ಮಾಡುತ್ತಾನೆ. ಆಮೇಲೆ ಕೈಕಾಲು ಮುಖ ತೊಳೆಯಲೆಂದು ಕೆರೆಯಲ್ಲಿಗೆ ಹೋಗುತ್ತಾನೆ. ಆ ಕೆರೆಯಲ್ಲಿ ಒಂದು ತಾವರೆಯ ಹೂವು ಕಾಣಿಸುತ್ತದೆ. ಆ ತಾವರೆಯ ಹೂವನ್ನು ಹಿಡಿಯಲು ಈಶ್ವರ ಅದರ ಹತ್ತಿರ ಹೋದಾಗ, ಆ ಹೂವು ಅವನಿಂದ ದೂರ ಸರಿಯುತ್ತದೆ. ಕೊನೆಗೂ ಈಶ್ವರ ಆ ತಾವರೆಯ ಹೂವನ್ನು ಕೊಯಿದು, ಕಿಸೆಯಲ್ಲಿ ಹಾಕಿಕೊಳ್ಳುತ್ತಾನೆ. ನಗುತ್ತಾ ಇದ್ದ ಆ ಹೂವಿನ ಸಹಿತ ಮನೆಗೆ ಬಂದು ಪಾರ್ವತಿಯನ್ನು ಕರೆಯುತ್ತಾನೆ. "ಈ ಹೂವನ್ನು ನೀನು ಮುಡಿಯಬೇಕು. ತಲೆಯನ್ನು ಬಾಚಿ, ಕೂದಲನ್ನು ಕಟ್ಟಿಕೋ. ನಿನ್ನ ಚಂದವನ್ನು ನಾನೊಮ್ಮೆ ನೋಡಬೇಕು" ಎನ್ನುತ್ತಾನೆ ಈಶ್ವರ. ಪಾರ್ವತಿ ಆ ಹೂವನ್ನು ತೆಗೆದುಕೊಂಡು, ಮನೆಯ ಗಿಳಿಬಾಗಿಲಲ್ಲಿ ಇಟ್ಟಳು. ಮರುದಿನ ಈಶ್ವರನಿಗೆ ಮಗುವಿನ ಸ್ವರ ಕೇಳಿಸುತ್ತದೆ. "ಹೌದೇನೇ ಪಾರ್ವತಿ, ಕೇಳಿದೆಯಾ! ಮಗುವಿನ ಸ್ವರವು ನನಗೆ ಕೇಳಿಸುತ್ತಿದೆ. ಮಕ್ಕಳಿಲ್ಲದ ಅರಮನೆಯಲ್ಲಿ ಮಗುವಿನ ಸ್ವರವು ಕೇಳಿಸುತ್ತಿದೆ". ಅದಕ್ಕೆ ಪಾರ್ವತಿಯು "ಏನು ಹೇಳುತ್ತೀರಿ ನೀವು ಈಶ್ವರಾ ? ನಮ್ಮ ಅರಮನೆಯಲ್ಲಿ ಮಕ್ಕಳಿಲ್ಲ" ಎನ್ನುತ್ತಾಳೆ. ಆದರೆ ಪಾರ್ವತಿ ನಂದಾದೀಪ ಉರಿಸಿ ಒಳಗೆ ಹೋಗಿ ನೋಡುವಾಗ ತಾವರೆಯ ಹೂವಿನ ಬದಲು ಒಂದು ಹೆಣ್ಣು ಮಗು ಇತ್ತು. ಅವಳು ಅದನ್ನು ಹೊರಗೆ ತಂದು ಈಶ್ವರನಿಗೆ ತೋರಿಸುತ್ತಾಳೆ. ಆ ಮಗುವಿನ ಸೊಂಟಕ್ಕೆ ನೇವಳವನ್ನು ಹಾಕುತ್ತಾರೆ. ಕ್ರಮೇಣ ಆ ಹೆಣ್ಣು ಮಗು ಬೆಳೆದು ತರುಣಿಯಾಗುತ್ತದೆ. ಆಕೆ ತಾಯಿ ಪಾರ್ವತಿಯಲ್ಲಿ "ಹೌದೇ ಅಮ್ಮಾ, ನನಗೆ ಉಡಲು ಸೀರೆ ಬೇಕು" ಎನ್ನುತ್ತಾಳೆ. ಆಗ ಅವರು ಮಂಗಳೂರಿನ (ಕುಡಲ) ಬಂದರಿಗೆ ಹೋಗಿ ಸೀರೆ ತರುತ್ತಾರೆ ಮತ್ತೂ ಆ ಹುಡುಗಿ ಅಳುತ್ತಿರುತ್ತಾಳೆ. "ನನಗೆ ರವಕೆ ಬೇಕು" ಎನ್ನುತ್ತಾಳೆ. ಅವಳಿಗೆ ರವಕೆ ತಂದುಕೊಡುತ್ತಾರೆ. ಮತ್ತೂ ಆಕೆ ಅಳುತ್ತಿರುತ್ತಾಳೆ. "ಕಿವಿಗೆ ಬೆಂಡೋಲೆ ಆಗಬೇಕು" ಎನ್ನುತ್ತಾಳೆ. ಅವರು ಮಂಗಳೂರಿನ ಪೇಟೆಗೆ ಹೋಗುತ್ತಾರೆ. ಒಂದು ತೂಕ ಚಿನ್ನವನ್ನು ತೂಗಿಸುತ್ತಾರೆ. ಕೃಷ್ಣಯ್ಯ ಆಚಾರಿಯಲ್ಲಿ (ಅಕ್ಕಸಾಲಿಗನಲ್ಲಿ) ಕೊಡುತ್ತಾರೆ. ಒಂದು ಬಾರಿ ಕಾಯಿಸಿ, ಎರಡನೇ ಬಾರಿ ಹೊಡೆದು, ಕಿವಿಗೆ ಬೆಂಡೋಲೆ ಮಾಡಿಸುತ್ತಾರೆ. ಮತ್ತೂ ಆ ಮಗಳು ಅಳುತ್ತಾಳೆ. ಮೂಗಿಗೆ ಟಿಕ್ಕಿ ಆಗಬೇಕು ಎನ್ನುತ್ತಾಳೆ, ಕೃಷ್ಣಯ್ಯ ಆಚಾರಿಯಲ್ಲಿ ಟಿಕ್ಕಿ ಮಾಡಿಸುತ್ತಾರೆ. ಆಮೇಲೆ ನೆಕ್‌ಲೇಸ್ ಮಾಡಿಸುತ್ತಾರೆ. ಇದೇರೀತಿ ಆಭರಣಗಳ ಪಟ್ಟಿ ಮುಂದುವರಿಯುತ್ತದೆ.

ಈ ಕಬಿತದ ಕೊನೆಯಲ್ಲಿ ಬರುವ ಜೋಗುಳದ ನುಡಿಗಟ್ಟು ಹೀಗಿದೆ: "ಕಂಚಿ ಮಿಂಚೀನ ಕಳಸೊ ಕನ್ನೆಟಿ ಗಂಗೆ ತಾಂಟಿನ ಗುಮರೆ ಪುಟ್ಟ್‌ನ ಬಾಲೆ ಅರಿಪ್ಪುಂಡು ಬಾಲೆಅರಿಪ್ಪುಂಡು, ಓಳು ಪನ್ನಗ, ಉಳಯಿ ಸೂತ್ರೊಡು, ಪಿದ್‌ಯಿ ಪಾತ್ರೊಡು, ಎಣ್ಣೆ ಓಲೆಡ್, ಎಸಳ್ ಬುಗುಡೀಡ್, ಕಲ್ಲುಲ್ಲ ಕೊಪ್ಪುಡು, ಮುಳ್ಳುಳ್ಳ ಬಾಲ್‌ಸರೊಡು, ಮೂಜಿ ಕೈತ್ತ ಕೊಪ್ಪರೊಡು ಬೆಂದ್‌ರ್ ಕಾಯಿಂಡ್ ಮಗ, ಸಾಲ್ ಕೈತ್ತ ಕೊಪ್ಪರೊಡು ಪುರುಗೊ ಮಾಜಿಂಡ್ ಮಗ, ಬಾಲೆಲ್ಲ ಸಾಲೆಲ್ಲ ಪರಮೇಸ್ರ ದೇವಸ್ಥಾನೊಗು ಪಟ್ಟ ಪರಕೆ ಪಾಡಿಯೆರೆಂದ್ ಪೋತೆರ್ ಮಗ, ಬಾಲೇ ನಮೋಲ ಪೋಯಿ, ಜೋ, ಜೋ" (ಹೀಗೆ ಮೂರು ಬಾರಿ ಹೇಳುವುದು).

(ಕಂಚು-ಮಿಂಚಿನ-ಕಳಶ-ಕನ್ನಡಿ, ಗಂಗೆ ತಾಗಿದ ಗುಮರೆ ಹುಟ್ಟಿದ ಮಗು. ಎಲ್ಲಿ ಎಂದರೆ ಒಳಗಿನ ಸೂತ್ರದಲ್ಲಿ ಹೊರಗಿನ ಪಾತ್ರದಲ್ಲಿ, ಎಣ್ಣೆ ಓಲೆಯಲ್ಲಿ ಎಳಸು ಬುಗುಡಿಯಲ್ಲಿ, ಕಲ್ಲುಳ್ಳ ಕೊಪ್ಪಿನಲ್ಲಿ, ಮುಳ್ಳುಳ್ಳ ಬಾಲೆಸರದಲ್ಲಿ ಮೂರು ಕೈಯ ಕೊಪ್ಪರಿಗೆಯಲ್ಲಿ ಬಿಸಿ ನೀರು ಕಾಯಿತು ಮಗ, ನಾಲ್ಕು ಕೈಯ ಕೊಪ್ಪರಿಗೆಯಲ್ಲಿ

ಪುರುಗು ಮಾಸಿತು ಮಗ, ಮಕ್ಕಳು ಎಲ್ಲರೂ ಪರಮೇಶ್ವರ ದೇವಸ್ಥಾನಕ್ಕೆ ಹರಕೆ ಹಾಕಲು ಹೋಗಿದ್ದಾರೆ ಮಗ, ಮಂಗುವೇ ನಾವೂ ಹೋಗುವ, ಜೋ ಜೋ").

ಈ ಕಬಿತದ ಪಲ್ಲವಿ 'ಟ್ರುವೇಲೆ ಬಾಲೆ ಬಾಲೆ ಪೊಲಿಯೇ' ಎನ್ನುವುದು, ಇಲ್ಲಿ 'ಟ್ರುವೇಲೆ' ಎನ್ನುವುದು ಅನುಕರಣ ಪದದ ರೀತಿಯಲ್ಲಿ ಬಂದಿದೆ. ಮಗುವನ್ನು ತೊಟ್ಟಿಲಲ್ಲಿ ಹಾಕಿ, ತೊಟ್ಟಿಲನ್ನು ಆರಂಭದಲ್ಲಿ ತೂಗಿ ಬಿಡುವಾಗ, ಈ ಪದವನ್ನು ಬಳಸುತ್ತಾರೆ. ಹಕ್ಕಿಗಳ ಹಿಂಡನ್ನು ಓಡಿಸುವಾಗಲೂ ಈ ಪದವನ್ನು ಉಪಯೋಗಿಸುತ್ತಾರೆ. 'ಟ್ರುವೇಲೆ ಬಾಲೆ ಬಾಲೆ ಪೊಲಿಯೆ' ಎನ್ನುವ ಪಲ್ಲವಿಯು ಜೋಗುಳದ ಹಾಡಿನ ಧಾಟಿಗೂ ಹೊಂದಿಕೊಳ್ಳುವುದನ್ನು ಗಮನಿಸಬಹುದು. ಇಲ್ಲಿ ಬರುವ ಪೊಲಿ ಬಗ್ಗೆ ವಿವೇಚಿಸಬಹುದು. ಭತ್ತದ ಬೇಸಾಯಕ್ಕೆ ಸಂಬಂಧಿಸಿದಂತೆ ಕನ್ನಡ ನಾಡಿನ ಅನೇಕ ಕಡೆಗಳಲ್ಲಿ ಈ 'ಪೊಲಿ' ಎಂಬ ಶಬ್ದದ ಪ್ರಯೋಗದಲ್ಲಿದೆ. ದಕ್ಷಿಣ ಕನ್ನಡದ ಉತ್ತರ ಭಾಗದ ಕನ್ನಡ ಮಾತಾಡುವ ಪ್ರದೇಶದಲ್ಲಿ ಭತ್ತದ ರಾಶಿಯು ಪೂಜೆ ಮಾಡುವಾಗ 'ಪೊಲಿ ಹೆಚ್ಚಿ ಬರಲಿ' ಎನ್ನುತ್ತಾರೆ. ಅಲ್ಲಿ 'ಪೊಲಿ' ಶಬ್ದಕ್ಕೆ 'ಹೊಸಬತ್ತ' ಎಂಬ ಅರ್ಥವನ್ನು ಕೊಡಲಾಗಿದೆ. ತುಳುನಾಡಿನಲ್ಲಿ ಮತ್ತು ತುಳು ಜನಪದ ಸಾಹಿತ್ಯದಲ್ಲಿ ಪೊಲಿ ಶಬ್ದದ ಪ್ರಯೋಗವನ್ನು ನೋಡಬಹುದು,

ಹೊಲಗಳಲ್ಲಿ ಕೆಯ್ (ಭತ್ತದ ತೆನೆ) ಕೊಯ್ದ ಬಳಿಕ, ಭತ್ತವನ್ನು ಅಂಗಳಕ್ಕೆ ಸಾಗಿಸಿ, 'ತುಪ್ಪೆ' (ರಾಶಿ ಕಣಜ) ಮಾಡಿ, ಅದರ ಮುಂದೆ 'ಪೊಲಿ' ಕರೆಯುವ ಕ್ರಮ ಕೆಲವೊಂದು ಕಡೆಯಲ್ಲಿದೆ. ಇಲ್ಲಿ 'ಪೊಲಿ' ಅಂದರೆ ಹುಲುಸು, ಅಭಿವೃದ್ಧಿ, ಧಾನ್ಯಲಕ್ಷ್ಮಿ ಎಂಬ ಅರ್ಥವನ್ನು ಕೊಡಲಾಗಿದೆ. ಈ 'ಪೊಲಿ ಕರೆಯುವಿಕೆ'ಯಲ್ಲಿ ಜನರ ಭಾವ ಶ್ರೀಮಂತಿಕೆಯನ್ನು ಗುರುತಿಸಬಹುದು. ಮಾಲೋಪಮೆಯ ಮೂಲಕ ಸುಂದರ ಕಾವ್ಯದ ಸ್ವರೂಪವನ್ನು ಈ ನುಡಿಗಟ್ಟುಗಳಲ್ಲಿ ಕಾಣಬಹುದು.

'ಪೊಲಿ ಪೊಲಿ ಪೊಲಿ ಪೊಲಿ ಎಚ್ಚ್‌ಲ, ಪಂಚ ಪಾಂಡವೆರೆ ಪೊಲಿ. ನಿಚ್ಚ ದೇವೆರ್ಕುಳೆ ಪೊಲಿ. ತುಪ್ಪೆ ಪಾಡೊಡು, ಸಿರಿ ತೂವೊಡು. ಅ ಜಾಲ ಪೊಲಿ, ಈ ಜಾಲ ಪೊಲಿ ಅಜಿಪತ್ತಾಜೆ ಜಾಲ್ದಾತೆ ಪೊಲಿ ಎಳ್ಪತ್ತೇಳ್ ಕೋಟಿ ಪೊಲಿ. ಎಂಕುಳೆ ಜಾಲೆಗೆ ಬಲ ಪೊಲಿ. ಅಪ್ಪೆ ಬೆಂಟ್ ಬಾಲೆಲ್ ಬನ್ನಂಗೆ ಬರೊಡು, ಪೆತ್ತದ ಬೆರಿಯೆ ಕಂಜಿ ಬನ್ನಂಗೆ ಬರೊಡು, ಪೆರಡೆದ ಬೆರಿಟೆ ಕಿನ್ನಿಲು ಬನ್ನಂಗೇ ಬರೊಡು. ಮರಿತ ಬೆರಿಯೆ ಕಿನ್ನಿಲು ಬನ್ನಂಗೆ ಬರೊಡು. ಪಿಲಿತ ಬೆರಿಯೆ ಪಿಲಿತ ಕುರ್ಲೆಲು ಬನ್ನಂಗೇ ಬರೊಡು. ಮದಿಮಾಳೆ ಪೊಣ್ಣಗೇ ತರೆ ಬನ್ನಂಗೇ ಬರೊಡು. ಕೆರ್ಮುಲೆ ಪೊಣ್ಣಗೆ ಮಿರೆ ಬನ್ನಂಗೇ ಬರೊಡು, ಪಿಜಿನೆದ ಧಾರೆ ಬನ್ನಂಗೇ ಮಾಜಿದ ಪಿರವೇ ನೂಲು ಬನ್ನಂಗೇ ಬರೊಡು. ಪಕ್ಕಿಲೆ ಬಾಯಿಡ್ ಬರೊಡು. ಒಲಿವ ನಾಲಾಯಿಡ್ ಬರೊಡು ಕುದುಕ ಬೀಲೊಡು ಬರೊಡು. ಪೇರ್ ಉರ್ಕಾರುಲೆಕ್ಕೊ ಉರ್ಕಾರೊಡು. ಕಡಲ ಸೆರೆ ಮಗ್ರಿಲೆಕ್ಕೊ ಮಗ್ರೊಡು, ನೀರು ಪೆರ್ಚುಲೆಕ್ಕೊ ಪೆರ್ಚೊಡು".

(ಪೊಲಿ ಪೊಲಿ ಪೊಲಿ ಪೊಲಿ ಹೆಚ್ಚಾಗು. ಪಂಚ ಪಾಂಡವರ ಪೊಲಿ. ನಿತ್ಯದೇವರ ಪೊಲಿ. ಕಣಜ ಕಟ್ಟಬೇಕು. ಐಸಿರಿ ನೋಡಬೇಕು. ಆ ಅಂಗಳದ ಪೊಲಿ, ಈ ಅಂಗಳದ ಪೊಲಿ, ಅರುವಾತ್ತರು ಅಂಗಳದಷ್ಟು ಪೊಲಿ, ಎಪ್ಪತ್ತೇಳು ಕೋಟಿ ಪೊಲಿ, ನಮ್ಮ ಅಂಗಳಕ್ಕೆ ಬಾ ಪೊಲಿ, ತಾಯ ಬೆನ್ನಲ್ಲೆ ಮಕ್ಕಳು ಬರುವ ಹಾಗೆ ಬರಬೇಕು. ಹಸುವಿನ ಬೆನ್ನಲ್ಲೆ ಕರು ಬರುವಂತೆ ಬರಬೇಕು. ಹೇಂಟೆಯ ಹಿಂದೆ ಮರಿಗಳು ಬರುವಂತೆ ಬರಬೇಕು. ನಾಗರಹಾವಿನ ಹಿಂದೆ ಅದರ ಮರಿಗಳು ಬರುವಂತೆ ಬರಬೇಕು. ಹುಲಿಯ ಹಿಂದೆ ಹುಲಿ ಮರಿಗಳು ಬರುವಂತೆ ಬರಬೇಕು. ಮದುಮಗಳು ಹೆಣ್ಣಿಗೆ ತಲೆಕೂದಲು ಬರುವಂತೆ ಬರಬೇಕು. ಹೊಲತಿ ಹೆಣ್ಣಿಗೆ ಮೊಲೆ ಬರುವಂತೆ ಬರಬೇಕು. ಇರುವೆಯ ಸಾಲು ಬರುವಂತೆ ಬರಬೇಕು, ಸೂಜಿಯ ಹಿಂದೆ ನೂಲು ಬರುವಂತೆ ಬರಬೇಕು. ಹಕ್ಕಿಗಳ ಬಾಯಲ್ಲಿ ಬರಬೇಕು. ಹೆಬ್ಬುಲಿಯ ನಾಲಿಗೆಯಲ್ಲಿ ಬರಬೇಕು. ನರಿಯ ಬಾಲದಲ್ಲಿ ಬರಬೇಕು.

ಹಾಲು ಉಕ್ಕಿದಂತೆ ಉಕ್ಕಬೇಕು. ಕಡಲತೆರೆ ಮಗುಚಿದಂತೆ ಮಗುಚಬೇಕು. ನೀರು ಹೆಚ್ಚುವಂತೆ ಹೆಚ್ಚಬೇಕು).

ತುಳುನಾಡಿನಲ್ಲಿ ಭತ್ತವನ್ನು ಸಾಲ (ಕಡ) ಕೊಡುವ ಒಂದು ಪದ್ಧತಿ ಇದೆ. ಮಳೆಗಾಲದ ವೇಳೆಯಲ್ಲಿ ಅಂದರೆ ಭತ್ತದ ಫಸಲಿಗಿಂತ ಮೊದಲು, ಆಹಾರದ ಅಭಾವ ಇದ್ದಾಗ-ಭತ್ತ ಅಥವಾ ಅಕ್ಕಿಯನ್ನು ಉಳ್ಳವರು ಇಲ್ಲದವರಿಗೆ ಸಾಲ ಕೊಡುತ್ತಾರೆ. ಈ ರೀತಿ ಸಾಲ ತೆಗೆದುಕೊಂಡವರು ಬೆಳೆ ಕೊಯ್ದು ಆದಾಗ, ತೆಗೆದು ಕೊಂಡುದಕ್ಕೆ ಸ್ವಲ್ಪ ಅಂಶವನ್ನು ಸೇರಿಸಿ ಹಿಂದಕ್ಕೆ ಕೊಡಬೇಕು. ಉದಾಹರಣೆಗೆ: ಒಂದು ಮುಡಿ ಭತ್ತ ಅಥವಾ ಅಕ್ಕಿಯನ್ನು (ಮೂರುಕಳಸೆ) ಸಾಲ ತೆಗೆದುಕೊಂಡಿದ್ದರೆ, ಬೆಳೆಕೊಯ್ದ ಮೇಲೆ, ನಾಲ್ಕುಕಳಸೆಯ ಷ್ಟನ್ನು ಹಿಂದಕ್ಕೆ ಕೊಡಬೇಕು. ಇಲ್ಲಿ ಒಂದು ಕಳಸೆಯಷ್ಟು ಭತ್ತ ಅಥವಾ ಅಕ್ಕಿಯು ಬಡ್ಡಿಯ ರೂಪದಂತೆ ಸಂದಾಯವಾಗುತ್ತದೆ. ಈ ರೀತಿ ಭತ್ತವನ್ನು ಸಾಲಕ್ಕೆ ಕೊಡುವ ಪದ್ಧತಿಗೆ 'ಪೊಲಿಗೆ ಕೊಡುವುದು' (ಪೊಲಿಕ್ಕ್ ಕೊರ್ಪುನೆ) ಎನ್ನುತ್ತಾರೆ. ಇಲ್ಲಿ "ಪೊಲಿ" ಎನ್ನುವ ಪದ ಹೊಸ ಭತ್ತ, ಹೆಚ್ಚು ಎಂಬ ಅರ್ಥಗಳಲ್ಲಿ ಕಾಣಿಸು ತ್ತದೆ.

ತುಳುನಾಡಿನ ಹಳ್ಳಿಗಳಲ್ಲಿ ಇರುವ ಒಂದು ಚಿಕ್ಕ ಜಂತುವನ್ನು 'ಪೊಲಿ' ಎಂದು ಕರೆಯುತ್ತಾರೆ. ಹಳ್ಳಿಗರ ನಂಬಿಕೆಯಂತೆ, ಈ 'ಪೊಲಿ' ಇದ್ದರೆ ಮನೆಗೆ ಕ್ಷೇಮ. ಅದರಲ್ಲೂ ಭತ್ತದ ರಾಶಿಯಲ್ಲಿ ಇದ್ದರೆ ಭತ್ತ ಹೆಚ್ಚಾಗು ತ್ತದೆ ಎಂಬ ನಂಬಿಕೆ ಇದೆ. ಅದಕ್ಕಾಗಿ ಈ 'ಪೊಲಿ'ಯನ್ನು ಕೊಲ್ಲುವುದಿಲ್ಲ. ಮಾತ್ರವಲ್ಲದೆ, ಎಲ್ಲಿಯಾದರೂ ಇದ್ದರೆ ಅದನ್ನು ಭತ್ತದ ರಾಶಿಯ ಮೇಲೆ ತಂದು ಹಾಕುತ್ತಾರೆ. ಇಲ್ಲಿಯೂ 'ಪೊಲಿ' ಶಬ್ದಕ್ಕೆ 'ಪುಲುಸು' 'ಹೆಚ್ಚು' 'ಭತ್ತ'ಗಳೊಡನೆ ಸಂಬಂಧವನ್ನು ಕಾಣಬಹುದು.

'ಪೊಲಿ' ಶಬ್ದದ ಮೇಲಿನ ವಿವೇಚನೆಗಳಿಂದ, ತುಳುವ ಸಂಸ್ಕೃತಿಯಲ್ಲಿ ಅದರಲ್ಲೂ ಭತ್ತದ ಬೆಳೆಗೆ ಸಂಬಂ ಧಿಸಿದಂತೆ ಅದು ಪ್ರಧಾನವಾದುದು ಅನ್ನಿಸುತ್ತದೆ. 'ಬಾಲೆ ಪೊಲಿಯೇ' ಎನ್ನುವ ಕಬಿತದ ನುಡಿಯಲ್ಲಿ ಬರುವ 'ಪೊಲಿ' ಎಂಬ ಶಬ್ದವು ಹೆಚ್ಚು, ಅಭಿವೃದ್ಧಿ ಎಂಬ ಅರ್ಥಕ್ಕೆ ಹೊಂದಿಕೆಯಾಗುತ್ತದೆ, ಮಗುವನ್ನು ಕುರಿತು ಹೇಳುವ ಹಾಡು ಆದ್ದರಿಂದ, ಮಗುವನ್ನು ಜೋಗುಳ ಹಾಡುವ ಸಂದರ್ಭವೂ ಬರುವುದರಿಂದ, 'ಮಗು ಹೆಚ್ಚಾಗಲಿ', 'ಮಗು ಬೆಳೆಯಲಿ 'ಮಗು ಅಭಿವೃದ್ಧಿಯಾಗಲಿ', ಎಂಬ ಅರ್ಥ ಇಲ್ಲಿ ಸಮಂಜಸವಾಗುತ್ತದೆ. ಈಶ್ವರ ಪಾರ್ವತಿಯರ ಹೆಣ್ಣು ಮಗು ಬೆಳೆದು ದೊಡ್ಡವಳಾಗುವುದನ್ನು ಈ ಕಬಿತದ ಕ್ರಿಯೆಯಲ್ಲಿ ನೋಡ ಬಹುದು.

'ಟ್ರುವೇಲೆ ಬಾಲೆ ಬಾಲೆ ಪೊಲಿಯೆ' ಎಂಬ ಕಬಿತದಲ್ಲಿ ಪೌರಾಣಿಕ ಪಾತ್ರಗಳಾದ ಶಿವ ಪಾರ್ವತಿಯರು ತುಳುನಾಡಿನ ಪರಿಸರ ಮತ್ತು ಸಂಸ್ಕೃತಿಯಲ್ಲಿ ಬದುಕುವುದನ್ನು ಕಾಣಬಹುದು. ಇಲ್ಲಿನ ಪ್ರಧಾನ ಕಸುಬು ಭತ್ತದ ಬೇಸಾಯ ಆಗಿರುವುದರಿಂದ, ಈಶ್ವರನೂ ಸಾವಿರ ಮುಡಿ ಬೆಟ್ಟುಗದ್ದೆಯನ್ನೂ ನೂರು ಮುಡಿ ಬೈಲು ಗದ್ದೆಯನ್ನೂ ಬೇಸಾಯ ಮಾಡುತ್ತಾನೆ. ಹಾರೆಯನ್ನು ತೆಗೆದುಕೊಂಡು ಗದ್ದೆಯ ನೀರನ್ನು ಕಟ್ಟುತ್ತಾನೆ, ತುಳುವ ಸಂಸ್ಕೃತಿಯ ಭತ್ತದ ಬೇಸಾಯದ ಕ್ರಮವನ್ನು ಇಲ್ಲಿ ಕಾಣಬಹುದು. ಕಬಿತಗಳು ಈ ಬೇಸಾಯಕ್ಕೆ ಸಂಬಂಧಿಸಿದ ನೇಜಿ ನೆಡುವ ಕೆಲಸದ ಹಾಡುಗಳು, ಈ ದೃಷ್ಟಿಯಿಂದ ಈ ಕಬಿತದಲ್ಲಿ ವಸ್ತುವಿಗೂ ಅದನ್ನು ಹಾಡುವ ಸಂದರ್ಭಕ್ಕೂ ಸಂಬಂಧವನ್ನು ನೇರವಾಗಿ ಕಾಣಬಹುದು.

'ತಾವರೆ ಹೂವು ಹೆಣ್ಣಾಗಿ ಮಾರ್ಪಾಡಾಯಿತು' ಎನ್ನುವಲ್ಲಿ 'ರೂಪ ಪರಿವರ್ತನೆ' (Transformation:) ಯ ಜನಪದ ಆಶಯ ( motif ) ವನ್ನು ಗುರುತಿಸಬಹುದು. D 431. 1.1. Transformation : flower to person. (Stith Thompson - Motif Index) ಹುಡುಗಿಗೆ ಸೀರೆ, ರವಕೆಯಂತಹ

ವಸ್ತ್ರ ವಿಶೇಷಗಳು, ಕೆಬಿಕ್ಕ್ ಬೆಂಡ್ (ಕಿವಿಗೆ ಬೆಂಡೋಲೆ), ಮೂಂಕುಗು ಟಿಕ್ಕಿ (ಮೂಗಿಗೆ ಟಿಕ್ಕಿ), ಕೆಕ್ಕಿಲ್‌ಗೆ ನೆಕ್ಕಿಲೆಸ್ (ಕೊರಳಿಗೆ ನೆಕ್ಲೇಸ್ ಸರ) ಇತ್ಯಾದಿ ಆಭರಣಗಳನ್ನು ಕೊಡಿಸುವಲ್ಲಿ, ಇಲ್ಲಿನ ಸ್ತ್ರೀಯರ ವೇಷ ಭೂಷಣಗಳ ಪದ್ಧತಿಯನ್ನು ನೋಡಬಹುದು. ಇನ್ನೊಂದು ಸ್ವಾರಸ್ಯವಾದ ಅಂಶ–ಇಂತಹ ವಸ್ತುಗಳನ್ನು ತರುವ ಅಥವಾ ಮಾಡಿಸುವ ಪರಿಸರ, ಇದು ಸಂಪೂರ್ಣವಾಗಿ ಜನಪದ ವ್ಯಕ್ತಿಗೆ ಸೀಮಿತವಾದುದು. ಮಂಗಳೂರಿನ ಬಂದರಿಗೆ ಹೋಗಿ ಸೀರೆ ರವಕೆಯನ್ನು ಈಶ್ವರ ತಂದನಂತೆ. ಮಂಗಳೂರಿನ ಪೇಟೆಗೆ ಹೋಗಿ, ಬಂಗಾರ ತೂಕ ಮಾಡಿಸಿ ತೆಗೆದು, ಕೃಷ್ಣಯ್ಯ ಆಚಾರಿಯಲ್ಲಿ ಆಭರಣಗಳನ್ನು ಈಶ್ವರ ಮಾಡಿಸಿದನಂತೆ. ಇತ್ತೀಚಿನವರೆಗೆ ತುಳುನಾಡಿನ ಹಳ್ಳಿಗಳಲ್ಲಿ ಬಟ್ಟೆ ಬರೆಗಳನ್ನು ತರುವುದು ಮತ್ತು ಆಭರಣಗಳನ್ನು ಮಾಡಿಸುವುದು ಈ ರೀತಿಯಲ್ಲೇ ಇತ್ತು.

ಕಬಿತದ ಕೊನೆಯಲ್ಲಿ ಬರುವ ಸುಂದರವಾದ ಜೋಗುಳದ ನುಡಿಗಟ್ಟಿನಲ್ಲಿ ತುಳುನಾಡಿನ ಹೆಣ್ಣುಗಳ ಅಲಂಕಾರ, ಆಭರಣಗಳು, ಎಣ್ಣೆ ಸ್ನಾನದ ಕ್ರಮ, ದೇವಸ್ಥಾನಕ್ಕೆ ಹರಕೆ ಹೋಗುವ ಪದ್ಧತಿಗಳು ವರ್ಣಿತವಾಗಿವೆ. ಎಣ್ಣೆ ಓಲೆ, ಎಸಳು ಬುಗುಡಿ, ಕಲ್ಲುಳ್ಳ ಕೊಪ್ಪು, ಮುಳ್ಳುಳ್ಳ ಬಾಲ್ ಸರ– ಹೆಂಗಸರ ಆಭರಣಗಳ ಹೆಸರುಗಳ ಜೊತೆಗೆ ಅವುಗಳ ವೈಶಿಷ್ಟ್ಯ, ವಿಶೇಷಣಗಳನ್ನು ಇಲ್ಲಿ ಕೊಟ್ಟಿದೆ. ಇಂದು ಈ ಆಭರಣಗಳು ನೋಡಲು ಸಿಗುವುದೇ ಅಪೂರ್ವ. ಬಿಸಿ ನೀರಿನ ಸ್ನಾನದ ಬಗ್ಗೆ ಹೇಳುವಾಗ 'ಮೂರು ಕೈಯ ಕೊಪ್ಪರಿಗೆಯಲ್ಲಿ ಬಿಸಿ ನೀರು ಕಾಯಿತು' ಎನ್ನುವ ಮಾತು ಹಿಂದೆ ವೈಭವ ಪೂರ್ಣವಾಗಿ ಎಣ್ಣೆ ಸ್ನಾನ ಮಾಡುತ್ತಿದ್ದ ದಿನಗಳನ್ನು ನೆನಪಿಸುತ್ತದೆ. 'ಕೊಪ್ಪರಿಗೆ' ಎನ್ನುವುದು ದೊಡ್ಡ ಗಾತ್ರದ ಲೋಹದ ಪಾತ್ರೆ. ದೊಡ್ಡ ಸಮಾರಂಭಗಳಲ್ಲಿ ಅನ್ನ ಬೇಯಿಸಲು ಅಥವಾ ಎಣ್ಣೆ ಕಾಯಿಸಲು, ನೀರು ಕುದಿಸಲು ಇಂತಹ 'ಕೊಪ್ಪರಿಗೆ'ಗಳನ್ನು ಬಳಸುತ್ತಿದ್ದರು. ಇಂದಿಗೂ ಹಳ್ಳಿಗಳಲ್ಲಿ ವಿಶೇಷ ಸಂದರ್ಭಗಳಲ್ಲಿ ಇಂತಹ ಕೊಪ್ಪರಿಗೆಗಳನ್ನು ಕಾಣಬಹುದು, ಅದರಲ್ಲೂ 'ಮೂರು ಕೈಯ ಕೊಪ್ಪರಿಗೆ' ಎನ್ನುವುದು ವಿಶೇಷವಾದುದು. ಅದು ವೈಭವದ ಶ್ರೀಮಂತಿಕೆಯ ಸಂಕೇತ. ಅದೇ ರೀತಿ 'ನಾಲ್ಕು ಕೈಯ ಕೊಪ್ಪರಿಗೆ' ಎನ್ನುವುದು ಕೂಡಾ ತುಳುನಾಡಿನಲ್ಲಿ ಪ್ರಾಚೀನ ಕಾಲದಿಂದಲೂ ಇದ್ದದ್ದು ಶೈವ ಧರ್ಮ. ಆದ್ದರಿಂದಲೇ ಈಶ್ವರ ದೇವಸ್ಥಾನಗಳು ಈ ನಾಡಿನಲ್ಲಿ ಅಧಿಕ ಸಂಖ್ಯೆಯಲ್ಲಿವೆ. ಈ ಕಬಿತದ ಮಾತೂ ಅದನ್ನೇ ಪೋಷಿಸುತ್ತದೆ – 'ಪರಮೇಶ್ವರ ದೇವಸ್ಥಾನಕ್ಕೆ ಹರಕೆ ಹಾಕಲು ಹೋಗುವುದು'.

## 5 ಊರಿನ ಹೆಸರುಗಳು ಉಳ್ಳ ಕಬಿತಗಳು

ಕೆಲವು ಕಬಿತಗಳಲ್ಲಿರುವ ಶಬ್ದಗಳ ಸರಮಾಲೆಯಲ್ಲಿ ತುಳುನಾಡಿನ ಊರುಗಳ ಹೆಸರುಗಳು ಬರುತ್ತವೆ. ಬೇರೆ ಯಾವುದೇ ರೀತಿಯ ಸಾಹಿತ್ಯಿಕ ಮೌಲ್ಯ ಕಾಣಿಸುವುದಿಲ್ಲ. ನಿದರ್ಶನಕ್ಕೆ ಎರಡು ಕಬಿತಗಳನ್ನು ಗಮನಿಸಬಹುದು.

೧) ತೇರ್‌ಡ್ ತೇರೆಡ್ಡನೋ. ೨) ಗೋವಿಂದ ಬದನ.

೧) ತೆರ್‌ಡ್ ತೇರೆಡ್ಡನೋ

ಈ ಕಬಿತದಲ್ಲಿ ತುಳುನಾಡಿನ ಕೆಲವು ದೇವಸ್ಥಾನಗಳ ರಥೋತ್ಸವಗಳ ಪಟ್ಟಿ ದೊರೆಯುತ್ತದೆ. ಅದರ ಪಾಠ ಹೀಗಿದೆ :

"ತೇರ್‌ಡ್ ತೇರ್‌ಡ್ಡೆನೋ
ಓ ಬಡಿಯಾ ವಾ ಊರ ತೇರೆಡ್ಡೆನೋ? ॥ ಪ ॥
ತೇರ್‌ಡ್ ತೇರೆಡ್ಡೆನೊ
ಮದವೂರ ತೇರೆಡ್ಡೆನೋ?
ಗೊಲ್ಲೆರೆನ ನೂಲು ಪತ್ತಿನಿಯೋ—ಓ ಬಡಿಯಾ
ಸೂಳೆಗುಳೆ ಮೈ ಮುಟ್ಟಿನಿಯೋ?
ತೇರ್‌ಡ್ ತೇರೆಡ್ಡೆನೋ
ಕದ್ರಿದ ತೇರೆಡ್ಡೆನೋ
ಉಡುಪಿದ ತೇರೆಡ್ಡೆನೋ
ಗೊಲ್ಲೆರೆನ ನೂಲು ಪತ್ತಿನಿಯೋ-ಓ ಬಡಿಯಾ
ಸೂಳೆಗುಳೆ ಮೈ ಮುಟ್ಟಿನಿಯೋ ?
ಮಂಜೇಸರದ ತೇರೆಡ್ಡೆನೋ
ಕುಂಬುಳೆದ ತೇರೆಡ್ಡೆನೋ
ಸುಬ್ರಹ್ಮಣ್ಯದ ತೇರೆಡ್ಡೆನೋ
........................."

ಹೀಗೆಯೇ ಮುಂದುವರಿಯುತ್ತದೆ.

ಇದರ ಕನ್ನಡ ರೂಪಾಂತರ :

"ತೇರಿನಲ್ಲಿ ತೇರು ಒಳ್ಳೆಯದೋ
ಓ ಬಡಿಯಾ ಯಾವೂರ ತೇರು ಒಳ್ಳೆಯದೋ ?
ತೇರಿನಲ್ಲಿ ತೇರು ಒಳ್ಳೆಯದೋ
ಮದೂರ ತೇರು ಒಳ್ಳೆಯದೋ
ಗೊಲ್ಲರ ನೂಲು ಹಿಡಿದದ್ದೋ–ಓ ಬಡಿಯಾ
ಸೂಳೆಗಳ ಮೈ ಮುಟ್ಟಿದ್ದೋ
ತೇರಿನಲ್ಲಿ ತೇರು ಒಳ್ಳೆಯದೊ
ಕದ್ರಿಯ ತೇರು ಒಳ್ಳೆಯದೋ
ಉಡುಪಿಯ ತೇರು ಒಳ್ಳೆಯದೋ
ಗೊಲ್ಲರ ನೂಲು ಹಿಡಿದದ್ದೋ-ಓ ಬಡಿಯಾ
ಸೂಳೆಗಳ ಮೈ ಮುಟ್ಟಿದ್ದೋ
ಮಂಜೇಶ್ವರದ ತೇರು ಒಳ್ಳೆಯದೋ
ಕುಂಬಳೆಯ ತೇರು ಒಳ್ಳೆಯದೋ
ಸುಬ್ರಹ್ಮಣ್ಯದ ತೇರು ಒಳ್ಳೆಯದೋ
......................................"

ಇದೇ ರೀತಿ ಬೇರೆ ಬೇರೆ ಊರುಗಳ ತೇರುಗಳು ಹೆಸರುಗಳು ಕಾಣಿಸಿಕೊಳ್ಳುತ್ತವೆ.

ಇಲ್ಲಿರುವ ಕಾಸರಗೋಡು ತಾಲೂಕಿನ ಮದೂರು, ಮಂಜೇಶ್ವರ, ಕುಂಬಳೆ, ಮಂಗಳೂರಿನ ಕದ್ರಿ, ಉಡುಪಿ ಮತ್ತು ಸುಬ್ರಮಣ್ಯ-ಇವು ತುಳುನಾಡಿನ ಪ್ರಸಿದ್ಧ ದೇವಾಲಯಗಳಿರುವ ಸ್ಥಳಗಳು. ಇಲ್ಲಿನ ರಥೋತ್ಸವಗಳು ಜನಪ್ರಿಯವಾದವುಗಳು. ಇಂತಹ ರಥೋತ್ಸವ (ತೇರು)ಗಳನ್ನು ಕಂಡವನೊಬ್ಬನಲ್ಲಿ ಹಾಸ್ಯಮಯವಾಗಿ ಇವುಗಳಲ್ಲಿ ಯಾವುದು ಒಳ್ಳೆಯದು ಎಂದು ಕೇಳಲಾಗಿದೆ (ತೇರ್‌ಡ್ ತೇರೆಡ್ಡೆನೋ ಓ ಬಡಿಯಾ ವಾ ಊರ ತೇರೆಡ್ಡೆನೋ). ಬಡಿಯನ ಪಾಲಿಗೆ ರಥೋತ್ಸವದಲ್ಲಿ ಸಿಗುವ ಆನಂದ ಯಾವ ಥರದ್ದು ಎನ್ನುವುದು ಲೌಕಿಕವಾಗಿ ತಮಾಷೆಯಾಗಿ ಬಂದಿದೆ. ರಥೋತ್ಸವಗಳಲ್ಲಿ ಹೆಚ್ಚಾಗಿ ತರುಣರು ಪಡೆಯುವ ಲೌಕಿಕ ಸುಖವನ್ನು ಈ ಮೂಲಕ ಮಾರ್ಮಿಕವಾಗಿ ತಿಳಿಸಲಾಗಿದೆ. "ಗೊಲ್ಲೆರ್‌ನ ನೂಲು ಪತ್ತಿನಿಯೋ ಓ ಬಡಿಯಾ ಸೂಳೆಗುಳೆ ಮೈ ಮುಟ್ಟಿನಿಯೋ?" (ಗೊಲ್ಲರ ನೂಲು ಹಿಡಿದದ್ದೋ-ಓ ಬಡಿಯಾ ಸೂಳೆಗಳ ಮೈ ಮುಟ್ಟಿದ್ದೋ ?) ಜಾತ್ರೆಯ ಜನಸಂದಣಿಯಲ್ಲಿ ಸೂಳೆಯರೂ ಸೇರಿರುತ್ತಿದ್ದರು ಹಾಗೂ ಅವರ ಮೈ ಮುಟ್ಟಲು ರಸಿಕರು ಇಂತಹ ಸಂದರ್ಭವನ್ನು ಬಳಸಿಕೊಳ್ಳುತ್ತಿದ್ದರು ಎಂಬುದು ಈ ಮಾತುಗಳಿಂದ ತಿಳಿಯುತ್ತದೆ. ಇಲ್ಲಿ ಬರುವ "ಗೊಲ್ಲರ ನೂಲು ಹಿಡಿದದ್ದೋ" ಎನ್ನುವ ಮಾತಿನ ಸ್ಪಷ್ಟ ಅರ್ಥ ಆಗುವುದಿಲ್ಲ. ಇಂತಹ ಜಾತ್ರೆಗಳಲ್ಲಿ ಗೊಲ್ಲರ ನೂಲು ಹಿಡಿಯುವ ಕೆಲಸವನ್ನು ಕೆಲವರು ಮಾಡುತ್ತಿದ್ದರು ಎಂದು ಗೊತ್ತಾಗುತ್ತದೆ. ಆದರೆ 'ಗೊಲ್ಲರ ನೂಲು' ಅಂದರೆ ಏನು ಎನ್ನುವುದಕ್ಕೆ ಸಮರ್ಪಕ ಉತ್ತರ ಸಿಗುವುದಿಲ್ಲ (ಗೊಲ್ಲರ ನೂಲು=ಗೊಲ್ಲರ ವಸ್ತ್ರ. (ಗೊಲ್ಲತಿಯರ ವಸ್ತ್ರ ? ಆಗಿರಬಹುದೇ ?).

## 2) ಗೋವಿಂದ ಬದನೆ

ಈ ಕಬಿತದಲ್ಲಿ ತುಳುನಾಡಿನ ಕೆಲವು ಸಣ್ಣಪುಟ್ಟ ಊರುಗಳ ಹೆಸರುಗಳನ್ನು ಕಾಣಬಹುದು. ತುಳು ನಾಡಿನ ಒಂದು ಜನಪ್ರಿಯ ತರಕಾರಿ ಬದನೆಗೆ ಈ ಕಬಿತ ಸಂಬಂಧಿಸಿದೆ. 'ಗೋವಿಂದ ಬದನೆ' ಎನ್ನುವುದು ಅದರ ಪಲ್ಲವಿ. ಕಬಿತದ ಪಾಠ ಹೀಗಿದೆ :

"ಗೋವಿಂದ ಬದನೆ ॥ ಪಲ್ಲವಿ ॥
ಗೋವಿಂದ ಬದನೇ
ಬದನೆ ಓಳು ಉಂಡುಯಾ
ಕುಡ್ಲ ಪೇಂಟೆಡ್ ಬದನೆ ಅತ್ತೋ
ಅತೆನ ಪೊರ್ತುಡೆ ಪನ್ಪೆರತ್ತೋ
ಜನೊಕ್ಕುಳೆನ್ ನನ ಲೆತ್ತೆರತ್ತೋ
ಕುಡ್ಲ ಪೇಂಟೆದ ಬಾಯಿ ಅತ್ತೋ
ಅಕುಳು ನನ ಬತ್ತೆರತ್ತೋ
ಬದನೆ ಸಾಲ್ ದೆಪ್ಪೊಡುಂದು
ಬದನೆ ಸಾಲ್ ದೆಪ್ಪಯೆರತ್ತೋ
ಬದನೆ ಸಾಲ್ ಸುಡ್ಪಯೆರೋ
ಬದನೆ ಸಾಲ್ ಸುಡ್ಪದ್
ಬದನೆ ಬಿತ್ತ್ ಪಾಡೆಂಡತ್ತೋ
ಮನದ್ದನಿ ಅಡೆ ಪೋನಗ
ರಡ್ಡ್ ಇರೆ ಲಕ್ಕೆಂಡತ್ತೋ
ಇರ್ ನನ ಲಾನಗ
ಈಟ್ ನನ ಪಾಡೆಂಡತ್ತೋ
ಕುಡ್ಲ ಪೇಂಟೆದ ಬಾಯಿತ್ತೋ
ಮನದ್ದನಿ ಅಡೆ ಪೋನಗ,
ದಯಿ ನನ ಲಾಂಡತ್ತೋ
ಮನದ್ದನಿ ದಿನೊಟ್ಟ್ ಲಕ್ಕೆನಗ
ಬದನೆ ದಯಿ ಲಕ್ಕೆಂಡತ್ತೋ
ಬದನೆ ಬಿತ್ತೆಲೆ ಪೋಂಡತ್ತೋ
ಅವು ಒಂಜಿ ಬಾಯಿ ಪೋಂಡತ್ತೋ
ಉಂದೊಂಜಿ ಬದನೆಗ್
ಕೊಯ್ಯೊಡುಂಡ್
ಕಾಂಟ್ಯ ನನ ಕೊಂಡೋಡತ್ತೋ
ಬದನೆ ಕೊಯಿದ್ ಕಾಂಟ್ಯಗ್ ನನ
ಪಾಡೆಂಡ್ ಅತ್ತೋ
ನನ ಬೇಗೋ ಪಿದಡೆಂಡ್
ತರೆ ಬಾರೆದ್ ಕಟೆಂಡ್ತ್ತೋ
ಕಾಂಟ್ಯದ ಅಡಿಕ್ಕೆ ಬೇಕೊನೆ
ಬೆರಿಯೆ ನನ ಮಲ್ತ್ಂಡತ್ತೋ
ಬದನೆ ಕಾಂಟ್ಯ ತರೆಕ್ಕೆ ದೀಡ್ಂಡತ್ತೋ
ಅಲ್ತ್ ನನ ಪಿದಡೆಂಡತ್ತೋ
ನನ ಒಯ್ಪೆ ಬರ್ಪುಂಡಂ
ಕುಡ್ಲ ಪೇಂಟೆ ಬತ್ತೆಂಡತ್ತೋ
ನನ ಓಡೆ ಬರ್ಪುಂಡು
ಇಟ್ಟೆಲ್ ಪೇಂಟೆಗ್ ಬತ್ತ್ಂಡತ್ತೋ
ಅಲ್ಯೊಂಜಿ ಬೆರಣೆರ್ ಕೇಂಡೆರತ್ತೋ
ಕಾಂಟ್ಯಡ್ ದ್ಯಾತ್ತ ಬಾಯಿಯೇ
ಕ್ಯಾಂಟ್ಯಡ್ ಬದನೆ ಅಣ್ಣೆರೇ
ಬದನೆ ನನ ಕೊರ್ಪುನವೊ
ಬೇಗೊ ನನಲ ಕೇಂಡೆರತ್ತೋ
ಬದನೆ ಕೋರ್ಪುನವುಂದ್ ಪಂಡಳತ್ತೋ
ದುಡ್ಡುಗು ಐತ್ ಬದನೇ
ದುಡ್ಡುಗು ರಡ್ಡ್ ಬದನೇಂದ್
ಅವು ಒಂಜಿ ಬಾಯಿ ಪಂಡೆಂಡತ್ತೋ
ಕೊರ್ಪುನ ನನ ಕೊರ್ಲಯಾ
ಅಲ್ತ್ ತರೆಕ್ಕೆ ದೀಡಿಯಲತ್ತೋ
ಓಳೆ ನನ ಬರ್ಪುಂಡು
ಓಡೆಗ್ ನನ ಎತ್ತೆಂಡೆ
ಅಡ್ಯನಡ್ಕದ ಪೇಂಟೆಗೆ
ಅಲ್ತ ಒಂಜಿ ಕೇಂಡೆರೆ
ಕಾಂಟ್ಯಡೆ ದ್ಯಾತ್ತ ಬಾಯಮ್ಮ
ಕಾಂಟ್ಯಡ್ ನನ ಬದನೆ ಅತ್ತೋ
ನನ ಕೊರ್ಪುನವೊಂದ್
ಅಂದೆದೆ ನನ ಪಂಡ್ಂಡ್
ದುಡ್ಡುಗು ಐತ್ ಬದನೇಂದೆ
ದುಡ್ಡುಗು ಮೂಜಿ ಬದನೇಂದೆ
ಅಲ್ತ್ ನನ ಬುಡಿಯೆರತ್ತೊ

ಅಲ್ತೆ ಓಳೆ ಬರ್ಪುಂಡು
ಅಲ್ತೆ ನನ ಬನ್ನಾಗ
ಓಳು ನನ ಕೇಂಡೆರೆ
ನನ ಬೇಕೊ ಬರ್ಪೆರತ್ತೋ
ಬದನೆ ಮಾರೋಂದೆ ಬರ್ಪೆರತ್ತೋ
ಓಳೆ ನನ ಬರ್ಪುಂಡು
ಪೇಂಟೆಡ್ ನನ ಪೋಪುಂಡತ್ತೋ
ಬದನೆ ಬಾಯಿ ಪೋಪುಂಡತ್ತೋ
ಅಲ್ತೆನನ ಕೇಂಡೆರೆ
ಬದನೆನನ ಕೊರ್ಪ ರಂಗ್
ಕೊರಿಯಿರೆ ನನ ಕೊರೊಲೆ ಅತ್ತೋ
ಅಲ್ತ್ ನನ ಪಿದಡ್‌ಂಡತ್ತೋ
ಓಳೆ ನನ ಬರ್ಪುಂಡು

ಅಜ್ಜಿನಡ್ಕಗೆ ಎತ್ತೆಂಡತ್ತೋ
ಓಳೆ ನನ ಬರ್ಪೆರ್
ನಡಂಚ್ಚಾರೆದ ಬಿರಣ ಕೈತ್ತಡೆ
ಕುಪ್ಪುಳಂ ಚಾರೆಗೆ ಎತ್‌ನಗ
ಅರ್ಲ್ಂಜಿ ಬಿರಣೆ ಕೇಂಡೆಡತ್ತೋ
ದ್ಯಾತ್ತ ಬಾಯಿಂದೆ ಕೇಂಡೆರಡತ್ತೋ
ಇಂದೆ ಬದನೆ ಅಣ್ಣೆರೇಂಡ್
ಪಂಡೆರತ್ತೋ
ಬದನೆ ನನ ಕೊರ್ಪರಾ
ಕೊರೊಲಿ ನನ ಅಣ್ಣೆರೇ
ಎಂಕುಳೆಗೆ ನನ ಬೋಡುಂದೆ
ನಡಂಚ್ಚಾರೆ ಬಿರಣೆರೆ ತಂಡೆರ್
ಗೋವಿಂದ ಬದನೇ ॥"

**ಈ ಕಬಿತದ ಕನ್ನಡ ಸಾರಾಂಶ**

"ಮಂಗಳೂರು ಪೇಟೆಯ 'ಬಾಯಿ' ಯೊಬ್ಬಳು (ಕ್ರೈಸ್ತ ಹೆಂಗಸು) ಬದನೆ ಬೆಳೆಸುತ್ತಾಳೆ. ಮೊದಲು ಬದನೆಯ ಸಾಲು ಮಾಡಿ, ಬಳಿಕ ಆ ಸಾಲನ್ನು ಬೆಂಕಿಯಿಂದ ಸುಡುತ್ತಾರೆ. ಸುಟ್ಟ ಆ ಸಾಲಿನಲ್ಲಿ ಬದನೆಯ ಬೀಜವನ್ನು ಹಾಕುತ್ತಾರೆ. ಅದು ಮೊಳೆತು ಗಿಡವಾಗುತ್ತದೆ. ಆ ಗಿಡದಲ್ಲಿ ಬದನೆ ಆಗುತ್ತದೆ. ಅದನ್ನು ಆ 'ಬಾಯಿ'ಯು ಕೊಯ್ದು ಒಂದು ಕುಕ್ಕೆಯಲ್ಲಿ ಹಾಕುತ್ತಾಳೆ. ಬಳಿಕ ಅದನ್ನು ಮಾರಲು ಊರೂರು ತಿರುಗುತ್ತಾಳೆ. ಮಂಗಳೂರು ಪೇಟೆಯನ್ನು ಇಳಿದು ಆ ಬಾಯಿಯು ವಿಟ್ಲಪೇಟೆಗೆ ಬರುತ್ತಾಳೆ. ಅಲ್ಲಿ ಒಬ್ಬ ಬ್ರಾಹ್ಮಣ ಬದನೆಯ ಬಗ್ಗೆ ವಿಚಾರಿಸಿ, ಅದರ ಬೆಲೆ ಏನೆಂದು ಕೇಳುತ್ತಾರೆ. ಆಗ ಬಾಯಿಯು 'ದುಡ್ಡಿಗೆ ಎರಡು ಬದನೆ' ಎಂದು ಹೇಳುತ್ತಾಳೆ. ಅವರು ಬೇಡವೆಂದು ಬಿಡುತ್ತಾರೆ. ಅಲ್ಲಿಂದ ಬಾಯಿಯು ಬದನೆಯನ್ನು ತೆಗೆದುಕೊಂಡು ಅಡ್ಯನಡ್ಕದ ಪೇಟೆಗೆ ಬರುತ್ತಾಳೆ. ಅಲ್ಲೊಬ್ಬರು ಬದನೆಯ ಬೆಲೆ ವಿಚಾರಿಸುತ್ತಾರೆ. ಬಾಯಮ್ಮ 'ದುಡ್ಡಿಗೆ ಮೂರು ಬದನೆ' ಎನ್ನುತ್ತಾಳೆ. ಅವರು ಬೇಡವೆಂದು ಬಿಡುತ್ತಾರೆ. ಅಲ್ಲಿಂದ ಮುಂದೆ ಅಜ್ಜಿನಡ್ಕ, ಕುಪ್ಪುಚಾರ್, ನಡ್ಸಾರ್ ಮುಂತಾದ ಊರುಗಳಿಗೆ ಬದನೆ ಮಾರಾಟ ಮಾಡುತ್ತಾ ಬಾಯಮ್ಮ ಬರುತ್ತಾಳೆ. ಕೊನೆಗೆ ಬದನೆ ಮಾರಾಟವಾಗುತ್ತದೆ".

ಈ ಕಬಿತವು ಬಂಟ್ವಾಳ ತಾಲ್ಲೂಕಿನ ಪುಣಚಾ ಎಂಬ ಗ್ರಾಮದಲ್ಲಿ ಸಿಕ್ಕಿರುವುದರಿಂದ, ಮಂಗಳೂರಿನಿಂದ ಪುಣಚದವರೆಗಿನ ಕೆಲವು ಊರುಗಳು –ಅಡ್ಯನಡ್ಕ, ಅಜ್ಜಿನಡ್ಕ, ಕುಪ್ಪುಚಾರ್, ನಡ್ಸಾರ್ ಇತ್ಯಾದಿ- ಇಲ್ಲಿ ಸ್ಥಾನ ಪಡೆದಿದೆ. ತುಳುನಾಡಿನಲ್ಲಿ ಬದನೆ ಎಂಬ ತರಕಾರಿಯನ್ನು ಬೆಳೆಸುವ ಮತ್ತು ಹಿಂದೆ ಮಾರುತ್ತಿದ್ದ ಕ್ರಮವನ್ನು ಈ ಕಬಿತದಿಂದ ತಿಳಿದುಕೊಳ್ಳಬಹುದು. ಬದನೆಯ ಸಾಲು ಮಾಡುವುದು ಅದನ್ನು ಸುಡುವುದು ಅದರಲ್ಲಿ ಬೀಜ ಹಾಕುವುದು – ಇದು ಬದನೆಯನ್ನು ಬೆಳೆಸುವ ಕ್ರಮ. ತುಳುನಾಡಿನಲ್ಲಿ ಸಾಮಾನ್ಯವಾಗಿ ತರಕಾರಿಗಳನ್ನು ಮಾರಾಟದ ದೃಷ್ಟಿಯಿಂದ ಬೆಳೆಸುವವರು ಕ್ರೈಸ್ತ ಹೆಂಗಸರು. ಅವರನ್ನು ರೂಢಿಯಲ್ಲಿ ತುಳುವಿನಲ್ಲಿ 'ಬಾಯಿ' ಅಥವಾ 'ಬಾಯಮ್ಮ' ಎಂದು ಕರೆಯುತ್ತಾರೆ. ಈಗಲೂ ತರಕಾರಿಯ ಕ್ಷೇತ್ರದಲ್ಲಿ

'ಬಾಯಂಮ್ಮ'ನವರದೇ ಮೇಲುಗೈ. ಇದು ಹೆಚ್ಚು ಸಾಂಪ್ರದಾಯಿಕವೆಂಬಂತೆ ನಡೆದುಕೊಂಡು ಬಂದಿದೆ. ಆದರೆ ಈ ಜಿಲ್ಲೆಯಲ್ಲಿ ವಾರದ ಸಂತೆಗಳ ಪದ್ಧತಿ ಹೆಚ್ಚಾಗಿರುವುದರಿಂದ ಮನೆ ಮನೆಗೆ ತರಕಾರಿಗಳನ್ನು ಒಯ್ದು ಮಾರಾಟ ಮಾಡುವ ಪದ್ಧತಿ ಕಾಣಿಸುವುದಿಲ್ಲ. ಆದರೆ ಹಿಂದೆ ಈ ಕ್ರಮ ಇತ್ತು ಎನ್ನುವುದಕ್ಕೆ ಈ ಕಬಿತ ಸಾಕ್ಷಿಯಾಗಿದೆ. ಈ ಕಬಿತದ ಪಲ್ಲವಿ 'ಗೋವಿಂದ ಬದನೇ' ಎನ್ನುವುದೂ ಸ್ವಾರಸ್ಯಪೂರ್ಣವಾದುದು. ಹೆಚ್ಚಾಗಿ ದೇವಾಲಯಗಳ ಜಾತ್ರೆಗಳಲ್ಲಿ ತೇರು ಎಳೆಯುವಾಗ ಅಥವಾ ಭಜನೆ ಮುಂತಾದ ಧಾರ್ಮಿಕ ಆಚರಣೆಗಳ ಸಂದರ್ಭಗಳಲ್ಲಿ ಭಕ್ತಿಯ ಆವೇಶದಿಂದ 'ಗೋವಿಂದಾ', 'ಗೋವಿಂದ ಹರಿ ಗೋವಿಂದಾ' ಎಂದು ಉದ್ಘೋಷಿಸುವುದಿದೆ. ಅಂತಹ ಸೊಲ್ಲಿಗೆ ಹಾಸ್ಯದ ಲೇಪವನ್ನು ಕೊಡುವ ದೃಷ್ಟಿಯಿಂದ ಅದಕ್ಕೆ 'ಬದನೆ' ಎಂಬ ತರಕಾರಿಯ ಹೆಸರನ್ನು ಜೋಡಿಸಲಾಗಿದೆ. 'ಗೋವಿಂದ' ಎನ್ನುವ ಶಬ್ದಕ್ಕೆ ವಿಡಂಬನೆಯ ಅರ್ಥದಲ್ಲಿ 'ಮುಗಿಯಿತು', 'ತೀರಿಹೋಯಿತು' ಎನ್ನುವ ಅರ್ಥಗಳೂ ರೂಢಿಯಲ್ಲಿವೆ.

## (3) ಹಕ್ಕಿಗಳನ್ನು ಕುರಿತ ಕಬಿತಗಳು

ತುಳು ಕಬಿತಗಳಲ್ಲಿ ಹಕ್ಕಿಗಳನ್ನು ಕುರಿತವು ವಿಶಿಷ್ಟವಾದವು. ಕೊರೊಂಗು (ಕೊಕ್ಕರೆ), ಕುವಾ ಹಕ್ಕಿ (ಹಂಡುಕೋಳಿ) ಗಳಿಗೆ ಸಂಬಂಧಿಸಿದ ಎರಡು ಕಬಿತಗಳು ದೊರೆಯುತ್ತವೆ. ಇಂತಹ ಕಬಿತಗಳಲ್ಲಿಯೂ ವಿಶೇಷವಾದ ವಸ್ತುವಾಗಲೀ ಸಾಹಿತ್ಯಾಂಶವಾಗಲೀ ಇರುವುದಿಲ್ಲ. ಕೊರೊಂಗು ಮತ್ತು ಕುವಾ ಹಕ್ಕಿಗಳನ್ನು ಸಂಬೋಧಿಸಿ, ಈ ಹಾಡುಗಳನ್ನು ಹೇಳಲಾಗಿದೆ.

### ಕೊರೊಂಗು (ಕೊಕ್ಕರೆ)

"ರಾವೋ ರಾವು ಕೊರೊಂಗು ರಾವೊಂದೇನೆ ದಾನೆಬೇ" ('ಹಾರೂ ಹಾರು ಕೊಕ್ಕರೆಯೇ', 'ಹಾರದೆ ನಾನು ಏನು ಮಾಡಲಿ') ಎನ್ನುವುದು ಇಲ್ಲಿ ಪದವಿ. ಈ ಪಲ್ಲವಿಯಲ್ಲಿ ಸಂಭಾಷಣೆಯ ರೂಪದ ಎರಡು ಮಾತುಗಳಿವೆ. ಒಂದು, ಕೊಕ್ಕರೆಯನ್ನು ಉದ್ದೇಶಿಸಿ ಹೇಳುವುದು. ಇನ್ನೊಂದು, ಕೊಕ್ಕರೆ ಅದಕ್ಕೆ ಉತ್ತರಿಸುವುದು; ಮುಂದಿನ ಸಾಲುಗಳಲ್ಲಿ ವಿಶೇಷವೇನೂ ಇಲ್ಲ.

ಕುವಾ : 'ಕುವಾ' ಎನ್ನುವುದು ತುಳುನಾಡಿನ ಹಳ್ಳಿಗಳ ಗದ್ದೆಗಳ ಬದಿಗಳಲ್ಲಿ ಕಾಣಿಸುವ ಹಂಡುಕೋಳಿ ಜಾತಿಯ ಹಕ್ಕಿ. ಅದರ ಕೂಗು 'ಕುವಾ' ಎನ್ನುವ ಹಾಗೆ ಕೇಳಿಸುವುದರಿಂದ, ಆ ಹಕ್ಕಿಯನ್ನು ತುಳುವಿನಲ್ಲಿ 'ಕುವಾ ಹಕ್ಕಿ' ಎನ್ನುತ್ತಾರೆ. ಇಲ್ಲಿಯೂ ಕಬಿತವು 'ಕುವಾ' ಹಕ್ಕಿಯೊಡನೆ ಸಂಭಾಷಣೆಯ ರೂಪದಲ್ಲಿದೆ.

"ಕೂವಾ ಕೂವಾ ಈ ಒಯಿಟ್ಟ್ ಕುಳ್ಳೆದ" (ಕೂವಾ ಕುವಾ ನೀ ಯಾತರಲ್ಲಿ ಕುಳಿತಿರುವೆ) – ಈ ರೀತಿ ಕಬಿತ ಆರಂಭವಾಗುತ್ತದೆ. ಇಲ್ಲಿ 'ಕುವಾ ಕುವಾ' ಎನ್ನುವ ಪಲ್ಲವಿ ಬರುತ್ತದೆ.

'ಕುವಾ ಕುವಾ ನೀ ಯಾತರಲ್ಲಿ ಮಲಗಿರುವೆ ।  
ಮರದಲ್ಲಿ ಮಲಗಿರುವೆ  
ಕುವಾ ಕುವಾ ನೀ ಯಾತರಲ್ಲಿ ಅಡಗಿರುವೆ  
ಹಳುವಲ್ಲಿ ಅಡಗಿರುವೆ' ॥

ಈ ರೀತಿ ಮುಂದುವರಿಯುತ್ತದೆ. ಕುವಾದ ಆಹಾರ ವಿಹಾರಗಳನ್ನು ಇಲ್ಲಿ ಬಣ್ಣಿಸಲಾಗಿದೆ. 'ಕುವಾ' ಎಂಬ ಒಂದು ಹಕ್ಕಿಯು ಕೂಗಿನಿಂದಲೇ ಒಂದು ಹಾಡು ಪ್ರೇರಿತವಾಗಿರುವುದಕ್ಕೆ ಇದು ಒಳ್ಳೆಯ ನಿದರ್ಶನ. ಕೊಕ್ಕರೆ ಮತ್ತು ಕುವಾ-ಎರಡೂ ಹೊಲ ಗದ್ದೆಗಳ ಸಮೀಪ ಇರುವ ಹಕ್ಕಿಗಳು. ಹೊಲಗಳಲ್ಲಿ ಹಾಡುವ ಕಬಿತಗಳ ವಸ್ತುಗಳಾಗಿರುವುದನ್ನು ಗಮನಿಸಬಹುದು.

## (7) ಓಯ್ಯ (ಹೋಯ್ಯಾ)

ಹೊಲದಲ್ಲಿ ನೇಜಿಯನ್ನು ನೆಟ್ಟು, ಕೊನೆಯಾಗುವ ವೇಳೆಗೆ ಹೇಳುವ ಕಬಿತ 'ಓಯ್ಯ' (ಹೋಯ್ಯಾ). 'ಓಯ್ಯ' ಹೇಳುತ್ತಾರೆ, ಎಂದರೆ ನೇಜಿ ನೆಟ್ಟು ಮುಗಿಯಿತು ಎಂದು ಅರ್ಥ. ಈ ಕಬಿತದಲ್ಲೂ ವಿಶೇಷವಾದ ಸಾಹಿತ್ಯಾಂಶ ಇಲ್ಲ. ಕೆಲಸದ ಮುಕ್ತಾಯದಲ್ಲಿ ಇರುವ ತ್ವರೆಯ ಪ್ರವೃತ್ತಿಯನ್ನು ಈ ಕಬಿತದ ಲಯದಲ್ಲಿ ಕಾಣಬಹುದು. 'ಓಯ್ಯ ಓಯ್ಯ' ಎನ್ನುವ ಪಲ್ಲವಿಯಂತೆಯೇ ಉಳಿದ ಸಾಲುಗಳನ್ನೂ ಬೇಗ ಬೇಗನೆ ಹೇಳುತ್ತಾರೆ. ಈ ಕಬಿತದ ಸಾಮಾನ್ಯ ಪಾಠ ಹೀಗಿದೆ (ಪ್ರತೀವಾಕ್ಯದ ಆರಂಭದಲ್ಲಿ 'ಓ' ಎಂದು ಇರುತ್ತದೆ).

"ಓಯ್ಯ ಓಯ್ಯ ॥ ಪಲ್ಲವಿ ॥
ಓ ನಡಿ ಒಂಜಿ ನಟ್ಟಿ
ಓಟೆದ ಪುಂಡೆಲ್ದ್ ಲೆಕೊ
ಲಕ್ಕೆದೆ ಬರೊಡು
ಮಲ್ಲೊಂಜಿ ಕಂಡೊ
ಮಲ್ಲ ಬಾರಾಪಿ ಕಂಡೊ
ಕೇಂಡಾರೋ ಮಂದೆ
ನಂಕಾಂಡ ಪೋವೊಡು
ಕಣಂದೂರ ಕಟ್ಟಗೆ
ಒಂಜಿ ಪುಳಿತ್ತ
ಚಬಟೇನೇ ಪತ್ತೊಡು
ನಂಕಾಂಡ ಪೋವೊಡು
ಕಡೇ ಸ್ವಾಲ್ಯ ದೇವೆರೇ
ದೇವಸ್ಥಾನ ಮಗೆರದೆ
ಅಜಿ ಮೂಜಿ ಪದ್ರಾಡೆ
ವರ್ಸೊನೇ ಅತೆಂಡೆ
ಕುಡುಂಬಾನ ಇಂಗ್ರೇಜಿ
ಮಗ್ರ್‌ದ್ ಅಜಿಮೂಜಿ ವರ್ಸೊನೇ
ಭೂತೋಲಿ ಬರಿಮಾಡೊ
ಮಗ್ರ್‌ದ್ ಅಜಿ ಮೂಜಿ
ವರ್ಸೊನೇ ಅತೆಂಡೆ
ನಂಕಾಂಡ ಪೋವೊಡು
ಉಂಡೊಂಜಿ ಕೇಪುಳ್ದ ಮರ
ಕಡ್ಪಿಯಾರೆಂದ್ ಪೋವೊಡು
ಕುದುರೆ ವರ್ಗಾಂತ ಗಡಿಯೆ
ಔಳಾಂಡ್ ದೀಡ್‌ನಗ
ಆನೆ ವರ್ಗಾಂತ ಗಡಿಯೇ ಲಕ್ಕುಂಡು
ಐನೊಂಜಿ ನಡುತುಂಡು
ದೆತ್ತೆದೆ ದೇವೆತೆಡೆ
ದೇವಸ್ಥಾನೊ ಕಟ್ಟಾವೊಡು
ಐನ್ ಕಡೆತುಂಡು ದೆತ್ತೆದೆ
ಭೂತೊಲೆಗ್ ಬದಿವಾಡೊ ಕಟ್ಟವೊಡು
ಕೊಡಿತುಂಡು ದೆತ್ತೆದೆ
ಕುಡುಂಬಾಗೆ ಇಂಗ್ರೇಜಿ ಕಟ್ಟವೊಡು
ನಮ್ಮನೆ ನಡಿ ಒಂಜಿ ನಟ್ಟಿ
ಬಂಗಬಾರೆ ಸಿಂಗಬಾರೆ
ಸಿರಿಯಾಂಡ ಒಯ್ತ್‌ದ
ಕೈಲೆನೇ ಪಾಡಿಲೆಕ್ಕೊ
ಬಾರೆದ ಕುರಳ್ ಬರೊಡು
ಓಯ್ಯ ಓಯ್ಯ ॥

**ಈ ಕಬಿತದ ಕನ್ನಡ ರೂಪಾಂತರ :**

ಹೋಯ್ಯ ಹೋಯ್ಯ ॥ ಪಲ್ಲವಿ ॥
ಓ ನಟ್ಟಿ ಒಂದು ನಾಟಿ
ಬಿದಿರಿನ ಹಿಂಡಿಲಿನಂತೆ
ಎದ್ದು ಬರಬೇಕು
ದೊಡ್ಡದೊಂದು ಗದ್ದೆ
ಹೆಚ್ಚು ಭತ್ತವಾಗುವ ಗದ್ದೆ
ಕೇಳಿದ್ದೀರೋ ಜನಗಳೇ
ನಮಗಾದರೇ ಹೋಗಬೇಕು
ಕಣಂದೂರ ಕಟ್ಟಕ್ಕೆ
ಒಂದು ಹುಳಿಯು
ಚಬಟೆಯನ್ನೇ ಹಿಡಿಯಬೇಕು
ನಮಗಾದರೇ ಹೋಗಬೇಕು
ಕಡೇಶ್ವಾಲ್ಯ ದೇವರ
ದೇವಸ್ಥಾನ ಮುಗುಂಚಿ
ಆರು ಮೂರು ಹನ್ನೆರಡು
ವರ್ಷವೇ ಆಯಿತು
ಕುಡುಂಬನ ಇಗರ್ಜಿ
ಮುಗುಂಚಿ ಆರು ಮೂರು ವರ್ಷವೇ
ಭೂತಗಳ ಬದಿಮಾಡ
ಮುಗುಚಿ ಆರುಮೂರು ವರ್ಷವೇ ಆಯಿತು.
ನಮಗಾದರೆ ಹೋಗಬೇಕು
ಒಂದು ಕಿಸಗಾರದ ಮರ
ಕಡಿಯಲೆಂದು ಹೋಗಬೇಕು
ಕುದುರೆ ವರ್ಗದ ಗಡಿಯು
ಅಲ್ಲಾದರೆ ಇಡುವಾಗ
ಆನೆ ವರ್ಗದ ಗಡಿಯೇ ಏಳುತ್ತದೆ.
ಅದರ ಒಂದು ನಡುತುಂಡು
ತೆಗೆದು ದೇವರಿಗೆ ದೇವಸ್ಥಾನ ಕಟ್ಟಿಸಬೇಕು
ಅದರ ಕಡೆತುಂಡು ತೆಗೆದು
ಭೂತಗಳಿಗೆ ಬದಿಮಾಡ ಕಟ್ಟಿಸಬೇಕು
ತುದಿಯ ತುಂಡು ತೆಗೆದುಕೊಂಡು
ಕುಡುಂಬನಿಗೆ ಇಗರ್ಜಿ ಕಟ್ಟಿಸಬೇಕು
ನಮ್ಮದೇ ನಟ್ಟಿ ಒಂದು ನಾಟಿ
ಬಂಗಬಾಳೆ ಸಿಂಗಬಾಳೆ
ಸಿಹಿಯಾದರೆ ಎಳೆದು
ಗೊನೆಯನ್ನೇ ಹಾಕಿದಂತೆ
ಭತ್ತದ ತೆನೆಯೇ ಬರಬೇಕು
ಹೋಯ್ಯ ಹೋಯ್ಯ ॥

ನೇಜಿ ನೆಟ್ಟು ಮುಗಿಯುವ ಹಂತದಲ್ಲಿ ಈ ಕಬಿತವನ್ನು ಹೇಳುವುದರಿಂದ, ಪೈರು ಚೆನ್ನಾಗಿ ಬೆಳೆಯಬೇಕೆಂಬ ಹಾರೈಕೆ ಇಲ್ಲಿ ಕಾಣಿಸುತ್ತದೆ. ದೇವರು, ಭೂತಗಳ ಸ್ಮರಣೆ-ಬೆಳೆ ಚೆನ್ನಾಗಿ ಬರಬೇಕು ಎಂಬ ಹಾರೈಕೆ. ಇವುಗಳ ಸಂಬಂಧವನ್ನು ನೋಡಬಹುದು. ಕೇಪುಳ್ದ ಮರ (ಕಿಸ್ಗಾರ ಮರ)ವನ್ನು ಒಳ್ಳೆಯ ಕೆಲಸಗಳಿಗೆ–ದೇವಸ್ಥಾನ, ಭೂತದ ಬದಿಮಾಡ, ಇಗರ್ಜಿ-ದೇವಸ್ಥಾನಗಳ ರಚನೆಗಳಿಗೆ ಉಪಯೋಗಿಸುತ್ತಾರೆ. ಈ ವಿಚಾರ ಈ ಕಬಿತದಲ್ಲಿ ಬಂದಿದೆ. ಆನೆಗಡಿ ಮತ್ತು ಕುದುರೆ ಗಡಿ-ಮರವನ್ನು ಕಡಿಯುವಾಗ ಹಾಕುವ ಗಡಿ (ಪೆಟ್ಟು)ಗಳ ವಿಧಗಳು : ದೊಡ್ಡದು ಮತ್ತು ಸಣ್ಣದು ಎಂಬ ಅರ್ಥ. ಬಿದಿರಿನ ಹಿಂಡಿಲು ಮತ್ತು ಬಾಳೆಗೊನೆ-ಸಮೃದ್ಧಿಯ ಸಂಕೇತಗಳು. ಬಿದಿರಿನ ಹಿಂಡಿಲಿನಲ್ಲಿ ಅನೇಕ ಬಿದಿರುಗಳು ಇರುತ್ತವೆ. ಬಾಳೆಗೊನೆಯಲ್ಲಿ ಅನೇಕ ಬಾಳೆಕಾಯಿಗಳು ಇರುತ್ತವೆ. ಹಾಗೆಯೇ ಭತ್ತದ ತೆನೆಯಲ್ಲಿ ಹೆಚ್ಚು ಭತ್ತದ ಕುಂಡಿಗೆಗಳು ಬರಬೇಕು ಎನ್ನುವ ಆಶಯ ಇಲ್ಲಿ ವ್ಯಕ್ತವಾಗಿದೆ.

**ಈ ಕಬಿತದ ಇನ್ನೊಂದು ಪಾಠದಲ್ಲಿ ಈ ಅರ್ಥದ ಮಾತುಗಳು ಬರುತ್ತವೆ:**

**"ಹೋಯ್ಯಾ ॥ ಹೊಯ್ಯಾ' ॥ ॥ ಪಲ್ಲವಿ ॥**
ಓ ಎಲ್ಲಮ್ರು ಹೇಳಿ ॥ **ಹೋಯ್ಯಾ ॥**

ಗಟ್ಟದ ಮೇಲೆ ।
ಈ ಊರಬಾಲೆ ।
ಅಟ್ಟದ ಮೇಲೆ ।
ಬಂಗಾರದ ವಾಲೆ ।
ಬೀರಾ ಸಾಲೆ ।
ಗಂಧ ಸಾಲೆ ।
ರಾಜಾ ಕಯಮೆ ।
ದಕ್ಕಯ್ಯ ಬಾರೋ ।
ದಮ್ಮಯ್ಯ ಬಾರೋ ।
ನಾಟೀಯ ಕೆಲಸ ।
ಮುಗಿಸುವ ಸರಸ ।''

ಇಲ್ಲಿ ಭತ್ತದ ವಿಧಗಳಾದ ಗಂಧಸಾಲೆ, ಬೀರಸಾಲೆ, ರಾಜಾ ಕಯಮೆಗಳ ಹೆಸರುಗಳು ಬಂದಿವೆ. 'ನಾಟಿಯ ಕೆಲಸವನ್ನು ಸರಸವಾಗಿ ಮುಗಿಸುವ' ಎನ್ನುವ ಮಾತು ಗಮನಿಸಬೇಕಾದದ್ದು. ಕೆಲಸದ ಹಾಡುಗಳ ಮಹತ್ವವನ್ನು ಈ ಹೇಳಿಕೆಯಲ್ಲಿ ಗುರುತಿಸಬಹುದು.

3. ಕಬಿತಗಳ ಛಂದೋಲಯ : ಕಬಿತಗಳ ಛಂದೋಲಯವನ್ನು ಗುರುತಿಸುವಾಗ, ಸಾಲುಗಳ ದೀರ್ಘತೆಯ ದೃಷ್ಟಿಯಿಂದ ಕಬಿತಗಳನ್ನು ಸ್ಥೂಲವಾಗಿ ಎರಡು ಭಾಗ ಮಾಡಿಕೊಳ್ಳಬಹುದು.

೧) ಕಿರಿಸಾಲುಗಳುಳ್ಳ ಕಬಿತಗಳು. ೨) ಹಿರಿ ಸಾಲುಗಳುಳ್ಳ ಕಬಿತಗಳು.

**1. ಕಿರಿ ಸಾಲುಗಳುಳ್ಳ ಕಬಿತಗಳು**

ಉದಾ : 1) ಓ ಬೇಲೇ ಓ ಬೇಲೇ

2) ಏರಪ್ಪೆ ಇಲ್ಲಾಲೆ

3) ಡಿಂಬಿಸಾಲೇ ಡಿಂಬಿಸಾಲೇ

4) ಗೋಂವಿದ ಬದನೇ-ಇತ್ಯಾದಿ.

| | ವಿ | ವಿ |
|---|---|---|
| 1) | ಓ ಬೇಲೇ | ಓ ಬೇಲೇ |
| | ಓ ಸಮ್ಮಾಂಡ | ಉಳ್ಳಯೇ |
| | ಓ ಪೋತುಗೆ | ಅವುಳು |
| | ಓ ಅಜಿ | ಮುಡಿತ್ತಾಡೆ |

ಇಲ್ಲಿ 'ಓಬೇಲೇ' ಎನ್ನುವುದು ಕನ್ನಡ ಛಂದಸ್ಸಿನ ಅಂಶಗಣದಲ್ಲಿ ವಿಷ್ಣುಗಣವಾಗಿದೆ. ಪ್ರತೀ ಸಾಲಿನಲ್ಲಿ ಎರಡು ವಿಷ್ಣುಗಣಗಳು ಬರುವುದನ್ನು ಕಾಣಬಹುದು; ಪಲ್ಲವಿಯ ಮುಂದಿನ ಸಾಲುಗಳಲ್ಲಿ 'ಓ' ಎನ್ನುವುದು ಸಂಬೋಧನೆಯ ರೂಪದಲ್ಲಿ ಪ್ರತ್ಯೇಕವಾಗಿಯೇ ಉಳಿದು, ಮುಂದಿನ ಗಣದ ಆರಂಭಕ್ಕೆ ಅವಕಾಶ ಮಾಡಿಕೊಡುತ್ತದೆ (ಹೊಸಗನ್ನಡ ಛಂದಸ್ಸಿನಲ್ಲಿ ಈ ಪರಿಕಲ್ಪನೆಯನ್ನು 'ಅನಾಗತ' ಎಂದು ಕರೆಯಲಾಗಿದೆ),

ಆದ್ದರಿಂದ ಮುಂದಿನ ಸಾಲುಗಳಲ್ಲಿ 'ನವ್ಯಾಂಡ' ಮತ್ತು 'ಉಳ್ಳಯೇ' ಎನ್ನುವ ಗಣಗಳು ಎರಡು ವಿಷ್ಣುಗಣಗಳ ರೂಪದಲ್ಲಿವೆ. ಕೆಲವೊಮ್ಮೆ ವಿಷ್ಣುಗಣದ ಸ್ಥಾನದಲ್ಲಿ ಬ್ರಹ್ಮಗಣ (ಉದಾ: 'ಅವುಳು', 'ಅಜಿ') ಬರುವಂತೆ ತೋರುತ್ತದೆ. ಆದರೆ ಎಳೆತ ಅಥವಾ ಮೌನದ ಮೂಲಕವೂ ಅಂತಹ ಗಣಗಳಿಗೆ ವಿಷ್ಣುಗಣದ ವ್ಯಾಪ್ತಿ ಬರುವುದು ಸಾಧ್ಯ. ಜನಪದ ಸಾಹಿತ್ಯದಲ್ಲಿ ವಿಷ್ಣುಗಣದಂತೆಯೇ ಬ್ರಹ್ಮಗಣವೂ ಒಂದು ವೈವಿಧ್ಯದ ಸೊಗಸನ್ನು ಹೆಚ್ಚಿಸುವ ಸಂಭಾವ್ಯತೆಯೂ ಇದೆ.

2)

| | | | |
|---|---|---|---|
| ವಿ | ವಿ | | |
| ಏರಪ್ಪೆ | ಇಲ್ಲಾಳಿ | | |
| ವಿ | ವಿ | | |
| ಏನತ್ತೊ | ಪಂಡಾಳೆ | | |
| ವಿ | ಬ್ರ | ಬ್ರ | ಮು |
| ಬೆಲ್ಲೊಲ | ಪೊಡಿಲ | ಬೋಡಾ | ದೇ |
| ಬೋಡ್ಯೆ | ರಂಚ | ಬೋಡಾಂ | ಡೇ |
| ಕೊರ್ಯೆರೆ | ಡಾಲ | ಇದ್ಯಾಂ | ಡೇ |

ಇಲ್ಲಿ ಎರಡು ವಿಷ್ಣುಗಣಗಳು ಆರಂಭದ ಸಾಲುಗಳಲ್ಲಿ ಬರುತ್ತವೆ. ಮುಂದಿನ ಸಾಲುಗಳು ಹಿಂದಿನ ಸಾಲುಗಳ ಸುಮಾರು ಒಂದೂವರೆ ಪಾಲಿನಷ್ಟು ದೀರ್ಘವಾಗಿವೆ. ಇಲ್ಲಿ ಸಾಮಾನ್ಯವಾಗಿ ವಿಷ್ಣುಗಣ : ಬ್ರಹ್ಮಗಣ : ಬ್ರಹ್ಮಗಣ : ಒಂದು ಅಂಶ (ಮುಡಿಯ ರೀತಿ) ಈ ವಿನ್ಯಾಸವಿದೆ. ಕೆಲವೊಂದು ಬಾರಿ ವಿಷ್ಣುಗಣದ ಸ್ಥಾನದಲ್ಲಿ ಬ್ರಹ್ಮಗಣ ಬರುವುದೂ ಉಂಟು.

| | | | | | |
|---|---|---|---|---|---|
| ಬ್ರ | ಬ್ರ | ಅಂ | ಬ್ರ | ಬ್ರ | ಅಂ |
| ಡಿಂಬಿ | ಸಾऽ | ಲೇ | ಡಿಂಬಿ | ಸಾऽ | ಲೇ |

ಡಿಂಬಿ : ಸಾಲೆ : ಮಂಗऽ : ಳಾಳೆ : ದಾನೆ : ಮಾऽ : ರುಂಡ : ಳೋ :

ಹಾಡುವಿಕೆಯ ದೃಷ್ಟಿಯಿಂದ 'ಡಿಂಬಿಸಾಲೆ' ಕಬಿತದ ಲಯ ವಿನ್ಯಾಸ ಮೇಲೆ ಗುರುತಿಸಿದ ಗಣವಿಭಾಗದ ಹಾಗೆಯೇ ಇದೆ. ಪಲ್ಲವಿಯಾದ 'ಡಿಂಬಿಸಾಲೇ' ಎನ್ನುವಲ್ಲಿ 'ಡಿಂಬಿ' ಎನ್ನುವುದು ಒಂದು ಬ್ರಹ್ಮಗಣದ ವ್ಯಾಪ್ತಿಯುಳ್ಳದ್ದು. 'ಸಾ' ಒಂದು ಬಿಡಿ ಅಕ್ಷರವಾದರೂ ಹಾಡುವಾಗ 'ಸಾऽ' (ಪ್ಲುತ ಅಕ್ಷರ) ಆಗಿ, ಬ್ರಹ್ಮಗಣದ ವ್ಯಾಪ್ತಿಯನ್ನು ಸೂಚಿಸುತ್ತದೆ. ಕೊನೆಯಲ್ಲಿ ಬರುವ 'ಲೇ' ಎಂಬ ಅಕ್ಷರ ಚರಣಕ್ಕೆ 'ಮುಡಿ' ಯಂತೆ ಮುಕ್ತಾಯದ ಭಾವನೆಯನ್ನು ಉಂಟುಮಾಡುವ ಬಿಡಿ ಅಕ್ಷರ. ಮುಂದಿನ ಸಾಲಿನ ಗಣಗಳೂ ಸಾಮಾನ್ಯವಾಗಿ ಬ್ರಹ್ಮಗಣದ ವ್ಯಾಪ್ತಿಯುಳ್ಳವು. ಕೆಲವೊಮ್ಮೆ ಹಾಡುವಾಗ ಅಕ್ಷರಗಳ ಎಳೆಯುವಿಕೆಯಿಂದಲೂ ಬ್ರಹ್ಮಗಣದ ವ್ಯಾಪ್ತಿಯನ್ನು ಪಡೆಯುತ್ತವೆ. ಈ ಸಾಲುಗಳಲ್ಲಿಯೂ ಕೊನೆಯಲ್ಲಿ 'ಳೋ' ಎಂಬ ಬಿಡಿ ಅಕ್ಷರವು ಚರಣಕ್ಕೆ ಮುಕ್ತಾಯವನ್ನು ತರುವುದನ್ನು ಕಾಣಬಹುದು.

(4) ಗೋವಿಂದ : ಬದ : ನೇ
ಗೋವಿಂದ : ಬದನೇ :
ಬದನೆ : ಓಳು : ಉಂಡು : ಯಾ

ಮೇಲೆ ಗುರುತಿಸಿದ ರೀತಿಯಲ್ಲಿ ಹಾಡುವಾಗ ಈ ಕಬಿತದ ಸಾಲುಗಳ ಲಯವಿನ್ಯಾಸ ಗೋಚರಿಸುತ್ತದೆ. ಇಲ್ಲಿ 'ಗೋ' ಎಂಬ ಅಕ್ಷರ ಪ್ಲುತದಂತೆ 'ಗೋ' ಆಗಿ ವರ್ತಿಸುತ್ತದೆ. ಹಾಗಾಗಿ, ಬ್ರಹ್ಮಗಣದ ವ್ಯಾಪ್ತಿಯ ಗಣಗಳು ಇಲ್ಲಿ ಕಾಣಿಸುತ್ತವೆ, ಕೊನೆಯಲ್ಲಿ 'ನೇ' ಅಥವಾ 'ಯಾ' ಎಂಬ ಬಿಡಿ ಅಕ್ಷರಗಳು ಚರಣಗಳ ಮುಕ್ತಾಯವನ್ನು ತಿಳಿಸುತ್ತವೆ.

## 2. ಹಿರಿ ಸಾಲುಗಳುಳ್ಳ ಕಬಿತಗಳು

ಉದಾ : (1) ಏ ದಾ ಬಲ್ಲ ಮಗ ದೂಜಿ ಕೆಮ್ಮೈರಾ

(2) ಎಲ್ಯಾಳೆ ಎಲ್ಯ ಬಾಲೆ ತೆಲೆಕ್ಕೇದ ಮೋನೆದಾಳೋ

(3) ಪೋಯಾಜೇ ಪೋಯಾಜೇ ಕಾವೇರಿ ಅಮಾಸೆ ತೀರ್ಥೊಗು ಪೋಯಾಜೇ

(4) ಟ್ರುವೇಲೆ ಬಾಲೇ ಬಾಲೆ ಪೊಲಿಯೇ

(5) ರಾವೋ ರಾವು ಕೊರೊಂಗು ರಾವಂದೇನೆ ದಾನೆ ಬೇ, – ಇತ್ಯಾದಿ

(1)

| | | | | | | |
|---|---|---|---|---|---|---|
| ಬ್ರ | ಬ್ರ | ಬ್ರ | ಬ್ರ | ಬ್ರ | ಬ್ರ | ಅಂಶ |
| ಏ | ದಾ | ಬಲ್ಲ | ಮಗ | ದೂಜಿ | ಕೆಮ್ಮೈ | ರಾ |
| ವಾ | ಪೆತ್ತದ | ಮಗೆನೊ | ಆಯೆ | ದೂಜಿ | ಕೆಮ್ಮೈ | ರೇ |
| ಕಬುಲ್ತಿ | ಪೆತ್ತದ | ಮಗೆನೊ | ಆಯೆಂ | ದೂಜಿ | ಕೆಮ್ಮೈ | ರೇ |

ಇಲ್ಲಿ ಸಾಮಾನ್ಯವಾಗಿ ಬ್ರಹ್ಮಗಣದ ಲಯವಿದೆ. 'ಏ' 'ದಾ' 'ವಾ' ಮುಂತಾದ ಅಕ್ಷರಗಳು ಹಾಡುವಾಗ ಪ್ಲುತಗಳಂತೆ ವರ್ತಿಸುತ್ತವೆ. 'ಮಗ' ಎಂಬ ಗಣದ 'ಗ' ಎನ್ನುವ ಅಕ್ಷರದ ಬಳಿಕ ಮೌನದ ವಿನ್ಯಾಸವಿದೆ. 'ಕಬುಲ್ತಿ' 'ಪೆತ್ತದ' ಎನ್ನುವ ಗಣಗಳು ವಿಷ್ಣುಗಳಾದರೂ ತ್ವರಿತವಾಗಿ ಉಚ್ಚಾರಣೆಗೊಳ್ಳುತ್ತವೆ. ಪ್ರತೀ ಚರಣದ ಕೊನೆಯಲ್ಲಿ 'ರಾ' ಅಥವಾ 'ರೇ' ಎಂಬ ಬಿಡಿ ಅಕ್ಷರಗಳು ಮುಕ್ತಾಯದ ರೂಪದಲ್ಲಿ ಬರುತ್ತವೆ.

(2)

| | | | | | |
|---|---|---|---|---|---|
| ವಿ | ವಿ | | ವಿ | ವಿ | |
| — —-- | — — | – | — | — — | — |
| ಎಲ್ಯಾಲು | ಎಲ್ಯ ಬಾ | ಲೇ | ತೆಲೆಕೇದಾ | ಮೋನೆದಾ | ಳೋ |

ಇಲ್ಲಿ ಪ್ರಧಾನವಾಗಿ ವಿಷ್ಣುಗಣದ ಲಯವಿದೆ. ಚರಣದ ನಡುವೆ 'ಲೇ' ಎನ್ನುವ ಮತ್ತು ಚರಣದ ಕೊನೆಯಲ್ಲಿ 'ಳೋ' ಎಂಬ ಬಿಡಿ ಅಕ್ಷರಗಳಿವೆ. 'ಲೇ' ಅಕ್ಷರವು ಎರಡು ವಿಷ್ಣುಗಳಾದ ಮೇಲೆ ರಾಗಾಲಾಪನೆಗಾಗಿ ಬಂದರೆ, 'ಳೋ' ಅಕ್ಷರವು ಚರಣದ ಅಂತ್ಯದಲ್ಲಿ ರಾಗಾಲಾಪನೆಯ ಮೂಲಕ ಮುಕ್ತಾಯ ಭಾವನೆಯನ್ನು ಉಂಟುಮಾಡುತ್ತದೆ.

(3) ಪೋಯಾಜೇ | ಪೋಯಾಜೇ | ಕಾವೇರಿ | ಅಮಾಸೆ | ತೀರ್ಥೊಗು | ಪೋಯಾ | ಜೇ |
ಮುತ್ತುಕಾರ | ಉಂಗಿಲೊಡು | ಒರೊ ಪಿದೊ | ಡೆವಾಳ್ | ಪೊಣ್ಣು ರಾಮ | ಸ್ವಾಮಿ |
ಮಂಗಳಾ | ಳೆ |

ಇಲ್ಲಿ ಪ್ರಧಾನವಾಗಿ ವಿಷ್ಣುಗಣದ ಲಯವಿನ್ಯಾಸವಿದೆ. ಕೆಲವೊಂದು ಬಾರಿ ರುದ್ರಗಣದ ಸ್ವರೂಪ ಕಾಣಿಸುವುದಾದರೂ ಅದೂ ಅನೇಕ ಬಾರಿ ಒಂದು ವಿಷ್ಣುಗಣ ಮತ್ತು ಒಂದು ಅಂಶದ ಹಾಗೆ ವಿಭಾಗ ವಾಗುತ್ತದೆ.

(4) ಟ್ರು | ವೇಲೆ | ಬಾಲೇ | ಬಾಲೆ ಪೋಲಿ | ಯೋ |
ಮಿ | ತ್ರೊಂಜಿ | ಮಿರಿ | ಲೋಕೊ | ಡುಳ್ಳೆರ | ಡೋ |
ತಿ | ತೊರ್ಂಜಿ | ಸಿರಿ | ಲೋಕೊ | ಡುಳ್ಳೆರ | ಡೋ

ಈ ಕಬಿತದ ಸಾಲುಗಳ ಆರಂಭದಲ್ಲಿ ಒಂದೊಂದು ಬಿಡಿ ಅಕ್ಷರ ಪ್ರತ್ಯೇಕವಾಗಿ ಅನಾಗತದಂತೆ ನಿಂತು, ಚರಣಗಳ ಆರಂಭಕ್ಕೆ ಉತ್ತೇಜನವನ್ನು ಕೊಡುತ್ತದೆ. ಮುಂದೆ ಸಾಮಾನ್ಯವಾಗಿ 2 ಬ್ರಹ್ಮಗಣಗಳೂ ಒಂದು ವಿಷ್ಣುಗಣವೂ ಕೊನೆಯಲ್ಲಿ ಮುಡಿಯಂತೆ ಮುಕ್ತಾಯವನ್ನು ತರುವ ಒಂದು ಬಿಡಿ ಅಕ್ಷರವೂ ಬರುತ್ತದೆ. ಅಕ್ಷರ ಗಳ ಎಳೆಯುವಿಕೆಯಿಂದ ಕೆಲವೊಂದು ಗಣಗಳಿಗೆ ಬ್ರಹ್ಮಗಣದ ವ್ಯಾಪ್ತಿ ಸಿಗುತ್ತದೆ. 'ಬಾಲೆ ಪೋಲಿ'ಯಂತಹ ಗಣದ ಸಂದರ್ಭದಲ್ಲಿ ವಿಷ್ಣುಗಣದ ಬದಲು ರುದ್ರಗಣ ಬರುವುದನ್ನು ಕಾಣಬಹುದು.

| | ಬ್ರ | ಬ್ರ | | ಬ್ರ | ಬ್ರ | ಬ್ರ | |
|---|---|---|---|---|---|---|---|
| (5) | ರಾವೋ | ರಾವು | ಕೊರೊಂಗೊ | ರಾವು | ದೇನೆ | ದಾನೆ | ಬೇ |

ಈ ಕಬಿತದಲ್ಲಿ ಪ್ರಧಾನವಾಗಿ ಬ್ರಹ್ಮಗಣದ ಲಯವಿದೆ. ಚರಣದ ಕೊನೆಯಲ್ಲಿ ಬಿಡಿ ಅಕ್ಷರವು ಮುಕ್ತಾಯದ ರೂಪದಲ್ಲಿ ಬರುತ್ತದೆ. 'ಕೊರೊಂಗು' ಎನ್ನುವ ಗಣ ತ್ವರಿತವಾಗಿ ಉಚ್ಚಾರಣೆಯಾಗಿ ಬ್ರಹ್ಮ ಗಣದ ವ್ಯಾಪ್ತಿಯನ್ನೇ ಪಡೆಯುತ್ತದೆ.

ಮೇಲಿನ ಉದಾಹರಣೆಗಳ ಮೂಲಕ, ಕಬಿತಗಳ ಛಂದೋಲಯದ ಅಭ್ಯಾಸದ ದೃಷ್ಟಿಯಿಂದ ಕೆಲವು ತೀರ್ಮಾನಗಳಿಗೆ ಬರಬಹುದು.

(1) ಕಬಿತಗಳ ಲಯ ಸಾಮಾನ್ಯವಾಗಿ ಅಂಶಗಣದ ಸ್ವರೂಪದ್ದು. ಅದರಲ್ಲೂ ವಿಶೇಷವಾಗಿ ಬ್ರಹ್ಮ ಗಣ ಮತ್ತು ವಿಷ್ಣುಗಣಗಳ ಪ್ರಾಚುರ್ಯವಿದೆ.

(2) ಚರಣದ ಕೊನೆಯಲ್ಲಿ ಸಾಮಾನ್ಯವಾಗಿ ಒಂದು ಬಿಡಿ ಅಕ್ಷರ ಬಂದು ಚರಣಕ್ಕೆ ಮುಕ್ತಾಯದ ಭಾವನೆಯನ್ನು ಉಂಟುಮಾಡುತ್ತದೆ.

ಮೇಲಿನ ಎರಡು ವಿಚಾರಗಳು ಕಬಿತಗಳನ್ನು ಹಾಡುವ ಸಂದರ್ಭದೊಡನೆ ಸಂಬಂಧಿಸಿವೆ. ನೇಜಿ ನೆಡುವ ಕೆಲಸದಲ್ಲಿ, ಮೊದಲು ನೇಜಿಯ ಸೂಡಿಯನ್ನು ತೆಗೆದುಕೊಳ್ಳುವುದು, ಅದರಿಂದ ಎರಡು-ಮೂರು ನೇಜಿಗಳನ್ನು ಬೇರ್ಪಡಿಸಿ ನೆಡಲು ತೆಗೆದುಕೊಳ್ಳುವುದು. ಅದನ್ನು ತೆಗೆದುಕೊಂಡು ಬಾಗಿಕೊಂಡು ಗದ್ದೆಯಲ್ಲಿ ನೆಡುವುದು (ಊರುವುದು), ಆಮೇಲೆ ಬಾಗಿದ ಭಂಗಿಯಿಂದ ನೆಟ್ಟಗೆ ನಿಲ್ಲುವುದು – ಇದು ನೇಜಿ ನೆಡುವ ಹೆಂಗಸರ ಆ ಸಂದರ್ಭದ ಬೇರೆ ಬೇರೆ ಹಂತಗಳು. ಬಹಳ ಕ್ಷಿಪ್ರವಾಗಿ ಆಗುವ ಈ ಹಂತಗಳನ್ನು ಬ್ರಹ್ಮಗಣ ಅಥವಾ ವಿಷ್ಣು ಗಣಗಳು ಸಮರ್ಪಕವಾಗಿ ನಿರ್ವಹಿಸುತ್ತವೆ. ನೇಜಿಯನ್ನು ಊರಿ, ಬಾಗಿದ ಸ್ಥಿತಿಯಿಂದ ನೆಟ್ಟಗೆ ನಿಲ್ಲುವಾಗ ಕಬಿತದ ಸಾಲಿನ ಕೊನೆಯ ಬಿಡಿ ಅಕ್ಷರವು ಉಚ್ಚಾರಣೆಗೊಳ್ಳುತ್ತದೆ. ಅದು ಒಮ್ಮೆ ನೇಜಿಯನ್ನು ನೆಟ್ಟು ಮುಗಿಯುವ ತಾತ್ಕಾಲಿಕ ಸ್ಥಿತಿಯನ್ನು ಸೂಚಿಸುತ್ತದೆ. ಹಿರಿಸಾಲುಗಳುಳ್ಳ ಕಬಿತದ ಒಂದು ಸಾಲು ಇಷ್ಟು

ಕೆಲಸಗಳ ಒಂದು ಘಟಕವನ್ನು ಪ್ರತಿನಿಧಿಸಿದರೆ, ಕಿರಿಸಾಲುಗಳುಳ್ಳ ಕಬಿತದಲ್ಲಿ ಇದಕ್ಕಾಗಿ ಎರಡು ಸಾಲುಗಳು ಸಾಮಾನ್ಯವಾಗಿ ಬಳಕೆಯಾಗುತ್ತವೆ.

ನೇಜಿ ನೆಟ್ಟು ಮುಗಿಯುವ ಹಂತದಲ್ಲಿ ಹೇಳುವ 'ಓಯ್ಯ' (ಹೋಯ್ಯಾ) ಕಬಿತದ ಲಯವು ಆ ಸಂದರ್ಭಕ್ಕೆ ಅನುಗುಣವಾಗಿದೆ.

ಬ್ರ | ಬ್ರ |
ಓಯ್ಯ | ಓಯ್ಯ |
ಓ | ನಡಿ ಒಂಜಿ | ನಟ್ಟೇ |
ಓಟೆದ | ಪುಂದೆಲ್ದಲೆಕೊ |
ಓ | ಲಕ್ಕಿದೆ | ಬರೊಡು |
ಓ | ಮಲ್ಲೊಂಜಿ | ಕಂಡೊ |

ಇಲ್ಲಿ 'ಓಯ್ಯ | ಓಯ್ಯ" ಎನ್ನುವ ಪಲ್ಲವಿಯಲ್ಲಿ ಎರಡು ಬ್ರಹ್ಮಗಣಗಳಿವೆ. ಮುಂದಿನ ಸಾಲುಗಳಲ್ಲಿನ ಆರಂಭದ 'ಓ' ಎನ್ನುವುದು ಸಂಬೋಧನೆಯ ರೂಪದಲ್ಲಿ ಪ್ರತ್ಯೇಕವಾಗಿ 'ಅನಾಗತ'ದಂತೆ ನಿಂತು, ಸಾಲುಗಳ ಆರಂಭಕ್ಕೆ ಉತ್ತೇಜನ ಕೊಡುತ್ತದೆ. ಆ ಸಾಲುಗಳಲ್ಲಿಯೂ ಸಾಮಾನ್ಯವಾಗಿ ಎರಡು ಬ್ರಹ್ಮಗಣಗಳಿರುತ್ತವೆ. (ಕೆಲವೊಮ್ಮೆ ಗಣವೈವಿಧ್ಯ ಇರುವುದಿದೆ) ಆದರೆ ಈ ಸಾಲುಗಳ ಕೊನೆಯಲ್ಲಿ ಒಂದು ಬಿಡಿ ಅಕ್ಷರ ಉಳಿಯುವುದಿಲ್ಲ ಎನ್ನುವುದು ಗಮನಾರ್ಹ. ಅವಸರದ, ತ್ವರೆಯ ಪ್ರವೃತ್ತಿಯನ್ನು ಈ ಕಬಿತದ ಲಯ ತನ್ನ ಎರಡು ಬ್ರಹ್ಮಗಣಗಳಿಂದ ಮತ್ತು ಕೊನೆಯಲ್ಲಿ ಯಾವುದೇ ಬಿಡಿ ಅಕ್ಷರ ಬರದೆ ಇರುವುದರ ಮೂಲಕ ಸೂಚಿಸುತ್ತದೆ. ಈ ದೃಷ್ಟಿಯಿಂದ 'ಓಯ್ಯ' ಕಬಿತದ ಲಯ ಮತ್ತು ಅದನ್ನು ಹಾಡುವಾಗ ಮಾಡುವ ಕೆಲಸಗಳ ನಡುವಿನ ಸಂಬಂಧ ಬಹಳ ಸಮರ್ಪಕವಾಗಿದೆ.

## 4. ಕಬಿತಗಳ ಉಗಮ ಮತ್ತು ಬೆಳವಣಿಗೆ

ಕೆಲಸದ ಹಾಡುಗಳಾದ ಕಬಿತಗಳು ಆ ಕೆಲಸದ ಜೊತೆಗೆಯೇ ಉಗಮಗೊಂಡಿರಬಹುದು. ನಿರ್ದಿಷ್ಟ ಕಥಾವಸ್ತು, ಘಟನಾವಳಿಗಳು ಇಲ್ಲದಿರುವುದರಿಂದ ಇವುಗಳ ಕಾಲ ನಿರ್ಣಯಕ್ಕೆ ಯಾವುದೇ ಸುಳುಹು ದೊರೆಯುವುದಿಲ್ಲ. ಆದರೆ ಇವುಗಳ ವಸ್ತು–ಲಘುವಾದುದು ಮತ್ತು ರಚನೆ–ಸಡಿಲವಾದುದು. ಕಬಿತಗಳನ್ನು ಹಾಡುವವರು–ಹೊಲಗಳಲ್ಲಿ ನೇಜಿ ನೆಡುವ ಹೆಂಗಸರು. ಕಬಿತಗಳು ವಸ್ತು ವೈವಿಧ್ಯವನ್ನು ಕುರಿತು ವಿವರವಾಗಿ ಚರ್ಚಿಸಲಾಗಿದೆ. ಇಲ್ಲಿ ನಮಗೆ ಕಾಣಿಸುವ ಮುಖ್ಯ ವಿಚಾರ–ಕಬಿತಗಳ ವಸ್ತು ಸಾಮಾನ್ಯವಾಗಿ ಹೆಂಗಸರಿಗೆ ಸಂಬಂಧಿಸಿದ್ದು.

'ಓಬೇಲೆ' ಕಬಿತದಲ್ಲಿ ಹೊಲದ ನೇಜಿ ನೆಡುವ ಕೆಲಸಕ್ಕಾಗಿ ಹೆಣ್ಣಾಳುಗಳನ್ನು ತರುವ ವಿಚಾರವಿದೆ. ಜೊತೆಗೆ, ಒಡೆಯನ ಹೆಂಡತಿ 'ಗರ್ಭ ಧರಿಸುವ' ವಿಚಾರವಿದೆ. 'ಏದಾ ಬಲ್ಲ ಮಗ ದೂಜೆ' ಕಮ್ಮೆರಾ'ದಲ್ಲಿ ಹೆಂಗಸರು ತಮ್ಮ ಕಾಮ, ಪ್ರಣಯ ಭಾವನೆಯನ್ನು ಹೋರಿಯ ಸಂಕೇತದ ಮೂಲಕ ವ್ಯಕ್ತಪಡಿಸುತ್ತಾರೆ. 'ಏರಪ್ಪೆ ಇಲ್ಲಾಲೆ' ಕಬಿತದಲ್ಲಿ ತನ್ನನ್ನು ಕಾಮಿಸುವ ಬ್ಯಾರಿಯನ್ನು ಹೆಣ್ಣೊಬ್ಬಳು ಜಾಣತನದಿಂದ ಒಲಿಸಿ, ಓಡಿಸುವ ಸಂಗತಿಯಿದೆ. 'ಎಲ್ಯಾಲ್ ಎಲ್ಯ ಬಾಲೆ', 'ಪೊಣ್ಣು ರಾಮಸ್ವಾಮಿ ಮಗಳಾಳೆ', 'ಡಿಂಬಿಸಾಲೆ', 'ಟುವೇಲೆ ಬಾಲೆ ಬಾಲೆ ಪೊಲಿಯೇ' ಮುಂತಾದ ಕಬಿತಗಳಲ್ಲಿ ಹೆಂಗಸರ ಆಭರಣಗಳ ಪಟ್ಟಿ ಮಾತ್ರವೇ

ದೊರೆಯುತ್ತದೆ. 'ತೇರೆಡ್ ತೇರೆಡ್ಡೆನೋ' ಕಬಿತದಲ್ಲಿ ಹಳ್ಳಿಯ ಹೆಂಗಸರು ದೇವರ ಜಾತ್ರೆಗಳ ಬಗ್ಗೆ ಇರಿಸಿ ಕೊಂಡ ಭಾವನೆ ವ್ಯಕ್ತವಾಗುತ್ತದೆ. 'ಗೋವಿಂದ ಬದನೇ' ಕಬಿತ–ಪ್ರಧಾನವಾಗಿ ಕ್ರೈಸ್ತ ಹೆಂಗಸೊಬ್ಬಳಿಗೆ ಸಂಬಂಧಿಸಿದ್ದು. ಈ ದೃಷ್ಟಿಯಿಂದ ಇಂತಹ ಕಬಿತಗಳ ಸೃಷ್ಟಿಕರ್ತರು ಹೆಂಗಸರು ಎಂದು ಭಾವಿಸಬಹುದು.

'ಕಬಿತ'ಗಳ ಪಾಠ ಸ್ಥಿರವಾಗಿ ಇರುವುದಿಲ್ಲ. ಕಬಿತಗಳು ಸದಾ ಬೆಳೆಯುತ್ತಲೇ ಹೋಗುವ ಪ್ರಕಾರಗಳು. ಆದ್ದರಿಂದಲೇ ಅವುಗಳ ರಚನೆ ಬಹಳ ಸಡಿಲವಾದದ್ದು. ಎಷ್ಟೋ ಕಬಿತದ ಸಾಲುಗಳು ಹೊಲಗಳಲ್ಲಿ ಹೆಂಗಸರಿಂದ ಆಶುಕವಿತೆಯ ರೂಪದಲ್ಲಿ ಸೇರುವುದನ್ನು ಈಗಲೂ ಕಾಣಬಹುದು. ಪ್ರಧಾನವಾಗಿ, ಆಭರಣಗಳ ಮತ್ತು ಊರಿನ ಹೆಸರುಗಳುಳ್ಳ ಕಬಿತಗಳು ಈ ಜಾತಿಯವು. ಇನ್ನೂ ಕೆಲವು ಬಾರಿ, ಹೊಸ ಕಬಿತಗಳು ತಮಾಷೆಗಾಗಿ ಹೊಲಗಳಲ್ಲಿಯೇ ಹೆಂಗಸರಿಂದ ನಿರ್ಮಾಣವಾಗುವ ಸಂದರ್ಭಗಳೂ ಇವೆ. ಬರೇ ಲಯಬದ್ಧವಾದ ಸಾಲು ಯಾವುದಾದರೊಂದು ಸಂಗತಿಯನ್ನು-ಸಾಮಾನ್ಯವಾಗಿ ಹಾಸ್ಯದ-ಒಳಗೊಂಡಿದ್ದರೆ ಸಾಕು ಎನ್ನುವ ಕಾರಣದಿಂದ ಕಬಿತಗಳು ಸದಾ ಬೆಳೆಯುತ್ತಲೇ ಬರುವ ಜನಪದ ಸಾಹಿತ್ಯದ ಪ್ರಕಾರಕ್ಕೆ ಸೇರುತ್ತವೆ.

## 5. ಕಬಿತಗಳ ಕ್ರಿಯೆ (Function)

ಹೊಲಗಳಲ್ಲಿ ನೇಜಿ ನೆಡುವ ಕೆಲಸದ ಹಾಡುಗಳಾದ ಕಬಿತಗಳು, ಎಲ್ಲ ಕೆಲಸದ ಹಾಡುಗಳಂತೆಯೇ ಶ್ರಮ ಪರಿಹಾರಕ್ಕಾಗಿ ಮತ್ತು ಮನಸ್ಸಿನ ಸಂತೋಷಕ್ಕಾಗಿ ಬಳಕೆಯಾಗುತ್ತವೆ. ಇಂತಹ ಕೆಲಸದ ಹಾಡುಗಳ ಬಳಕೆ ಯಿಂದ ಕೆಲಸದ ದಕ್ಷತೆ (efficiency) ಜಾಸ್ತಿಯಾಗುತ್ತದೆ ಎಂದು ಕಂಡುಹಿಡಿಯಲಾಗಿದೆ.[1] ಈ ಅಭಿಪ್ರಾಯ ಕಬಿತಗಳಿಗೂ ಅನ್ವಯವಾಗುತ್ತದೆ. (1) ಕೆಲಸದ ದಕ್ಷತೆ (efficiency of work) ಹೆಚ್ಚಾಗುವುದು. (2) ಕೆಲಸದ ಆಯಾಸ ಕಡಮೆಯಾಗುವುದು, (3) ಮನಸ್ಸು ಸಂತೋಷದಿಂದ ಕೂಡಿರುವುದು. (4) ಜಾತಿ, ಮತಗಳ ಭೇದವಿಲ್ಲದೆ ಎಲ್ಲರೂ ಒಂದೆಡೆ ಕಲೆತು ಕೆಲಸ ಮಾಡುವ ಸಮಾನತೆಯ, ಸಹಬಾಳ್ವೆಯ ತತ್ವ ಪ್ರಾಯೋಗಿಕವಾಗಿ ಕಾಣಿಸಿಕೊಳ್ಳುವುದು (ಕಬಿತಗಳನ್ನು ಹಾಡುವ ಹೆಂಗಸರು ಜಾತಿ-ಮತಭೇದವಿಲ್ಲದೆ ನಗುನಗುತ್ತಾ, ಒಬ್ಬರ ಮೈಮೇಲೆ ಇನ್ನೊಬ್ಬರು ಕೆಸರು ನೀರು ಎರಚುತ್ತಾ ತಮಾಷೆ ಮಾಡುತ್ತಾ ಆನಂದಿಸುತ್ತಾರೆ ಉಳಿದ ಸಂದರ್ಭಗಳಲ್ಲಿ ಅಸ್ಪೃಶ್ಯರೆಂದು ಪರಿಣಿತರಾಗುವ ಹರಿಜನರ ಮೈಯನ್ನು ಇಲ್ಲಿ ಮುಟ್ಟುತ್ತಾರೆ ಮತ್ತು ಎಲ್ಲರಂತೆಯೇ ಅವರೊಡನೆ ಹೊಲದಲ್ಲಿ ಸ್ನೇಹಭಾವದಿಂದ ವರ್ತಿಸುತ್ತಾರೆ)–ಇವು ಕಬಿತಗಳ ಪ್ರಧಾನವಾದ ನಾಲ್ಕು ಕಾರ್ಯಗಳು.

## 6. ಕಬಿತಗಳ ಭವಿಷ್ಯ

ಜಗತ್ತಿನಾದ್ಯಂತ ಕೆಲಸದ ಹಾಡುಗಳು ಕಣ್ಮರೆಯಾಗುತ್ತಿವೆ. ಇದಕ್ಕೆ 'ಆ ಕೆಲಸಗಳಿಗಾಗಿ ಯಂತ್ರಗಳ ಬಳಕೆಯಾಗುತ್ತಿರುವುದು' ಒಂದು ಪ್ರಮುಖ ಕಾರಣ ಎನ್ನುವುದು ಮುಖ್ಯ ವಿಚಾರ. ಹಿಂದೆ ದೇಹಶ್ರಮದ

1 Therasa C. Brakeley: 'Worksong': 'Standard Dictionary of Folklore Mythology and Legend' 1972-"Worksong-a song sung at a task to increase efficiency of the effort by timing the work stroke, setting a study work pace, or whiling away the tedium of the working hour." P. 1181.

ಮೂಲಕ ಆಗುತ್ತಿದ್ದ ಅನೇಕ ಕೆಲಸಗಳು ಇಂದು ಯಂತ್ರಗಳ ಮೂಲಕ ಆಗುತ್ತಿರುವುದರಿಂದ, ಸಾಂಸ್ಕೃತಿಕ ಸಂದರ್ಭ (Cultural context)ವಿಲ್ಲದೆ ಕೆಲಸದ ಹಾಡುಗಳು ಬಳಕೆಯಾಗುತ್ತಿಲ್ಲ. ಕಬಿತಗಳು ಕ್ರಿಯಾತ್ಮಕವಾಗಿರುವುದು ಹೊಲಗಳಲ್ಲಿ ನೇಜಿ ನೆಡುವ ಸಂದರ್ಭದಲ್ಲಿ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಭತ್ತದ ಬೇಸಾಯದಲ್ಲಿ ನೇಜಿ ನೆಡುವ ಕೆಲಸಕ್ಕೆ ಯಂತ್ರಗಳು ಬಳಕೆಯಾಗುತ್ತಿಲ್ಲ. ದೊಡ್ಡ ದೊಡ್ಡ ಗದ್ದೆಗಳಿಗೂ ಈ ಮಾತು ಅನ್ವಯವಾಗುತ್ತದೆ. ಆದರೆ ಇತ್ತೀಚೆಗೆ ಒಂದೇ ಬಾರಿ ಬೀಜ ಹಾಕಿ, ಹಾಗೆ ಬೆಳೆದ ನೇಜಿಯನ್ನೇ ಮುಂದೆ ಭತ್ತದ ಪೈರನ್ನಾಗಿ ಕೊಯ್ಯುವುದು ಆರ್ಥಿಕವಾಗಿ ಲಾಭಕರ ಎನ್ನುವ ದೃಷ್ಟಿಯಿಂದ ಅನುಸರಿಸುತ್ತಿದ್ದಾರೆ. ಇದರಿಂದಾಗಿ ಒಮ್ಮೆ ಹಾಕಿದ ನೇಜಿಯನ್ನು ಕಿತ್ತು, ಮತ್ತೆ ನೆಡುವ ಹೆಚ್ಚಿನ ಕೆಲಸ ತಪ್ಪುತ್ತದೆ ಎನ್ನುವುದು ಕಾರಣ. ಈ ರೀತಿಯ ಬೇಸಾಯದಲ್ಲಿ ನೇಜಿ ನೆಡುವ ಕೆಲಸಕ್ಕೆ ಆಸ್ಪದವೇ ಇಲ್ಲ. ಆದ್ದರಿಂದ ಕಬಿತಗಳ ಬಳಕೆಗೆ ಅವಕಾಶವೇ ಇಲ್ಲ. ಆದರೆ ಒಳ್ಳೆಯ ಫಸಲಿನ ದೃಷ್ಟಿಯಿಂದ ನೇಜಿ ಹಾಕಿ, ಅದನ್ನು ತೆಗೆದು ಮತ್ತೆ, ನೆಡುವ ಸಂಪ್ರದಾಯವನ್ನು ಇನ್ನೂ ಇಟ್ಟುಕೊಳ್ಳಲಾಗಿದೆ. ದಕ್ಷಿಣ ಕನ್ನಡದ ಹೊಲಗಳು ಭೌಗೋಳಿಕವಾಗಿ ಎತ್ತರ ತಗ್ಗಿನಲ್ಲಿ ಇರುವುದರಿಂದ ಇಲ್ಲಿ ಯಂತ್ರಗಳ ಬಳಕೆಗೆ ಸರಿಯಾದ ಅವಕಾಶವಿಲ್ಲ. ಇತ್ತೀಚೆಗೆ, ಕರ್ನಾಟಕ ಭೂಸುಧಾರಣಾ ಕಾನೂನು ಬಂದ ಮೇಲೆ ಈ ಜಿಲ್ಲೆಯ ಆರ್ಥಿಕ–ಸಾಮಾಜಿಕ ಚಿತ್ರವೇ ಬದಲಾಗಿದೆ. ಇಡೀ ಕರ್ನಾಟಕ ರಾಜ್ಯದ ಅರ್ಧ ಭಾಗ ಗೇಣಿದಾರರು ಈ ಜಿಲ್ಲೆಯವರು ಅದರಿಂದ, ಭತ್ತದ ಹೊಲಗಳು ಗೇಣಿದಾರರ ವಶಕ್ಕೆ ಹೋಗಿವೆ. ಚಿಕ್ಕ ಚಿಕ್ಕ ಹೊಲಗಳ ಒಡೆಯರು ಕಾಣಿಸಿಕೊಂಡಿದ್ದಾರೆ. ಒಬ್ಬನೇ ಭೂಮಾಲಿಕನ ವಶವಿದ್ದ, ದೊಡ್ಡ ದೊಡ್ಡ ಹೊಲಗಳು ತುಂಡು ತುಂಡಾಗಿವೆ. ಇಂತಹ ಚಿಕ್ಕ ಚಿಕ್ಕ ಹೊಲಗಳಲ್ಲಿ ಮತ್ತು ಭೌಗೋಳಿಕವಾಗಿ ಎತ್ತರ-ತಗ್ಗುಗಳಲ್ಲಿ ಇರುವ ಹೊಲಗಳಲ್ಲಿ ಭತ್ತದ ಬೇಸಾಯಕ್ಕೆ ಯಂತ್ರಗಳ ಬಳಕೆ ಪ್ರಾಯೋಗಿಕವಾಗಿ ಮತ್ತು ಆರ್ಥಿಕವಾಗಿ ವ್ಯಾವಹಾರ್ಯವಾಗಿಲ್ಲ. ಈ ಎಲ್ಲ ದೃಷ್ಟಿಗಳಿಂದ ಕಬಿತದಂತಹ ಕೆಲಸದ ಹಾಡುಗಳು ಮುಂದುವರಿದುಕೊಂಡು ಬರಲು ಅವಕಾಶವಿದೆ.

# ೩ ಕುಣಿತದ ಹಾಡುಗಳು

## 1. ಹಿನ್ನೆಲೆ

ತುಳು ಜನಪದ ಸಾಹಿತ್ಯದ ಕುಣಿತದ ಹಾಡುಗಳು ಪ್ರಧಾನವಾಗಿ ಇಲ್ಲಿ ಮೂಲನಿವಾಸಿಗಳು ಎನ್ನಿಸಿಕೊಂಡಿರುವ ಹರಿಜನರ ಬೇರೆ ಬೇರೆ ವರ್ಗಗಳಿಗೆ ಸಂಬಂಧಿಸಿದವುಗಳು. ತುಳುನಾಡಿನಲ್ಲಿ ಇಂದಿಗೂ ಅವರ ಮದುವೆ, ಹಬ್ಬದಂತಹ ಸಂದರ್ಭಗಳಲ್ಲಿ ಹಾಡು ಹೇಳಿಕೊಂಡು ಕುಣಿಯುವುದನ್ನು ಕಾಣಬಹುದು. ಇವರಲ್ಲಿ 'ನಲಿಕೆಯವರು' ಎಂಬ ಪಂಗಡದವರು ಇದ್ದಾರೆ. ಹೆಸರೇ ಸೂಚಿಸುವಂತೆ 'ನಲಿಕೆ' (=ಕುಣಿತ)ಯೇ ಕಸುಬಾಗಿ ಉಳ್ಳವರು 'ನಲಿಕೆಯವರು'. ಇವರು ಅನೇಕ ಸಂದರ್ಭಗಳಲ್ಲಿ ಕುಣಿತದ ಜೊತೆಗೆ ಹಾಡನ್ನೂ ಹಾಡುತ್ತಾರೆ. ನಲಿಕೆಯವರ ಹೆಣ್ಣುಗಳು ಮನೆ ಮನೆಗೆ ಬಂದು ಕುಣಿದು ಹಾಡಿ, ಮನೆಯವರು ಕೊಟ್ಟ ವಸ್ತು, ಹಣ — ಇವುಗಳಿಂದ ಸಂತೃಪ್ತರಾಗುತ್ತಿದ್ದರು. ಇಂದು ಇಂತಹ ಕುಣಿತ ಮತ್ತು ಅದಕ್ಕೆ ಸಂಬಂಧಿಸಿದ ಹಾಡುಗಳು ಕಾಣಸಿಗುವುದು ಬಹಳ ಅಪೂರ್ವ. ನಲಿಕೆಯವರ ಕುಣಿತದ ಹಾಡುಗಳಲ್ಲಿ 'ಮಾದಿರ ಪದ', 'ಅಟಕಳೆಂಜ' ಮುಂತಾದುವು ಪ್ರಮುಖವಾದುವು.

## 2.1 ಮಾದಿರ ಪದ

ಮಾದಿರ ಹಾಡುಗಳಲ್ಲಿ ವಿನೋದ ಪ್ರವೃತ್ತಿ ಪ್ರಧಾನವಾಗಿದೆ. ಈ ಮಾದಿರ ಹಾಡು ಅನೇಕ ಬಿಡಿಪದಗಳ ಸಂಕಲನದಂತೆ ಕಾಣಿಸುತ್ತದೆ.

ಮಾದಿರೊಂದು ಪನ್ಪುನಾಳ್ ಮಾಪೊರುಳೆದಿ ಮಾದಿರಾ
ಬೊಳ್ಳೆರಿ ಚೆನ್ನಗ್ ಅಡುವೆಂದುಳ್ಳೆನೊ ಮಾದಿರಾ
ಕಂಚಿದನೇ ತಟ್ಟುಗೊಡು ಬಳನೊಡುಂದುಳ್ಳನೆ ಮಾದಿರಾ
ಎನನ್ ಕೊಣಪಿ ಚೆನ್ನರೆ ಮಾಗೆ ಏರೆನಾತೆಗೆ ಉಳ್ಳೇನಾ
ಅಯುನಾತೇ, ಇಂಬ್ಯನಾತೇ, ತಪ್ಪುದ ಕುಂಟದಾತೇ
ತಪ್ಪುಲ ಜಾಪಿ ಕುಂಟದಾತೆ, ಅರಿಲ ಲಪ್ಪಿ ಬಳ್ಳದಾತೇ
ಕೊಣಪೆಂಡಲಾ ಕೊಣವಡೆ, ಇನಿಯೆ ಕೊಣವಾಡೆ"

(ಮಾದಿರ ಎಂಬುವಳು ಬಲು ಚೆಲುವೆ – ಮಾದಿರ
ಬೊಳ್ಳೆರಿ ಚೆನ್ನನನ್ನು ಮದುವೆಯಾಗುವೆಯಾ ಮಾದಿರ?

ಕಂಚಿನ ಸಟ್ಟುಗದಲ್ಲಿ ಬಡಿಸಬೇಕೆಂದಿರುವೆಯಾ ಮಾದಿರ ?
ನನ್ನನ್ನು ಕೊಂಡೊಯ್ಯುವ ಚೆನ್ನೆಯರ ಮಗ ಯಾರಷ್ಟು ಎತ್ತರ ಇದ್ದಾನೆ?
ಅವನಷ್ಟು, ಇವನಷ್ಟು, ಸೊಪ್ಪಿನ ಗೂಟದಷ್ಟೆ
ಸೊಪ್ಪು ಇಳಿಸುವ ಗೂಟದಷ್ಟೆ, ಅಕ್ಕಿ ಅಳೆಯುವ ಸೇರಿನಷ್ಟೆ
ಒಯ್ಯುವನಾದರೆ ಒಯ್ಯಲಿ, ಈ ಹೊತ್ತೇ ಒಯ್ಯಲಿ)

ಈ 'ಮಾದಿರಪದ'ವು ಕೆಲವು ಮಾರ್ಪಾಡುಗಳ ಮೂಲಕ ಅನೇಕ ಪಾಠಾಂತರಗಳಲ್ಲಿ ಕಾಣಿಸಿಕೊಳ್ಳುತ್ತದೆ. ಅಂತಹ ಒಂದು ಪಾಠಾಂತರವನ್ನು ಇಲ್ಲಿ ನೋಡಬಹುದು :

"ನಾಲ್ ನೆಲ ದಾರಿಲೊ ದಾರಿಲೊ ನೆಲಮಾದಿರ
ಮಾದಿರೊಗುಲ ನಪ್ಪುನಾಳೆ ಮಾ ಪೊರುಳೆದಿ
ಮಾದಿರೊಗುಲ ನಪ್ಪುನಾಳೆ ಮಾ ಪೊರುಳೆದಿ ಮಾದಿರ
ಚೆನ್ನೆರಿ ನಿಲೊ ಅಪ್ಪುಂಡು ಬೊಳಿ ಅರಿ ಚೆನ್ನಯೆ
ಬೊಳ್ಳೆನೇ ಬೊಳಿ ಅರಿ ಚೆನ್ನ, ನಡುವಸ್ತಿ ಉಳ್ಳಲ್ ಮಾದಿರ
ಕಂಚಿ ಪತ್ತೆನ ತಟ್ಟುಗೊಡು ಬಳಸೊಂದುಳ್ಳಳೊ
ಮಂಡಲ್ ಮಂಡಲ್ ಕುಬೆಟ್ಟುಪ್ಪುನಾ ಮಾದಿರ
ಬಾರಿ ರಂದೆದೆಲಾ ಪೋಪೆ ಪಂಡಳ್. ಬಸ ಬಡಕ್ಕಾಯಿ ರಾಜ್ಯೊಗು
ಕುಳ್ಳದ್ ಬಾರಿಯೊ ರಾಯೆ ಬುಡಯೆ ಸಮ್ಮಲೆ ಒರಿ ಮಗೇ
ಓವೊಂಜಿ ಪೋಲಾ ಮಾದಿರಾ ಬಸ ಬಡಕ್ಕಾಯಿ ರಾಜ್ಯೊಗು
ಸಮ್ಮಲೆ ಮಗ ಭಾರಿಯೊ ಪೊದೆ ದಾಯಿತ್ತ ಕೊನತ್ತ ಈ ?
ಸಾಮಾನೆ ಕೊನೆತ್ತೆರ್ ಸಮ್ಮಲೆ ಒರಿ ಮಗೆ"

(ನಾಲ್ಕು ನೆಲ ದಾರಿಲ, ದಾರಿಲ ನೆಲ ಮಾದಿರ
ಮಾದಿರಕ್ಕೆ ಕುಣಿಯುವವಳು ಮಹಾ ಚೆಲುವೆಯು
ಮಾದಿರಕ್ಕೆ ಕುಣಿಯುವವಳು ಮಹಾ ಚೆಲುವೆ ಮಾದಿರ
ಚೆನ್ನಿನ ನೆಲ ಆಗುತ್ತದೆ, ಬಿಳಿಯ ಚೆನ್ನನು
ಬೆಳ್ಳಂಬೆಳ್ಳಗೆ ಚೆನ್ನನು, ನಡುವಣವಳು ಮಾದಿರ
ಕಂಚಿನ ಸಟ್ಟುಗದಲ್ಲಿ ಬಡಿಸಬೇಕೆಂದಿರುವೆ
ಮಂಡಲು ಮಂಡಲಿನ ತುದಿಯಲ್ಲಿ ಇರುವವಳು ಮಾದಿರ
ಬಹಳ ಹಠಹಿಡಿದು ಹೋಗುತ್ತೇನೆ ಎಂದಳು ಉತ್ತರ ರಾಜ್ಯಕ್ಕೆ
ಹೋಗಲು ಅವಳನ್ನು ಬಿಡಲಾರ ಮಾವನ ಒಬ್ಬಮಗ
ಮಾವನ ಮಗ ಹೋಗಿ ಅಲ್ಲಿ, ಏನು ತಂದೆ ನೀನು?
ಸಾಮಾನು ತಂದೆ ಎನ್ನುತ್ತಾನೆ ಮಾವನ ಮಗ ಒಬ್ಬನು)

ಇಲ್ಲಿ 'ಮಾದಿರ' ಎಂಬ ಶಬ್ದದ ಅರ್ಥವನ್ನು ಮೊದಲು ವಿವೇಚಿಸಬಹುದು. ನಲಿಕೆಯ ಹೆಣ್ಣು ತನ್ನ ಒಂದು ಚಿಕ್ಕ ಹುಡುಗಿಯನ್ನು ಮಾದಿರ ಎಂದು ಸಿಂಗಾರ ಮಾಡಿ ಮನೆಮನೆಗೆ ಕೊಂಡುಹೋಗುತ್ತಾಳೆ. ಅಲ್ಲಿ 'ತೆಂಬಲೆ' (ಚರ್ಮದ ಚಿಕ್ಕವಾದ್ಯ) ಯನ್ನು ಬಡಿದು ಹಾಡು ಹೇಳಿದಾಗ ಆ ಮಾದಿರ ಹುಡುಗಿ ಕುಣಿಯುತ್ತಾಳೆ. ಮನೆಗಳಲ್ಲಿ ಸಿಕ್ಕಿದ ಅಕ್ಕಿ, ಭತ್ತ, ತೆಂಗಿನಕಾಯಿ ಮುಂತಾದುವನ್ನು ತೆಗೆದುಕೊಂಡು ಊರೂರು ತಿರುಗುತ್ತಾರೆ. ಈ ರೀತಿ ನಲ್ಕೆಯವರ ಹೆಂಗಸರು ಹಾಡಿ ಕುಣಿಯುವ ಜನಪದ ಕಲೆಗೆ 'ಮಾದಿರ' ಎನ್ನುತ್ತಾರೆ. ಈ 'ಮಾದಿರ' ಎನ್ನುವ ಶಬ್ದ 'ಮಾದಿಗ ಹೆಣ್ಣು' ಅಥವಾ 'ಹೊಲೆಯ ಹೆಣ್ಣು' ಎನ್ನುವ ಅರ್ಥದಲ್ಲಿ ಬಳಕೆಯಾಗಿರಬಹುದು ಮಾತೃ ಎನ್ನುವುದರಿಂದ ಮಾದಿರ ಬಂದಿರಬಹುದು ಎನ್ನುವುದಾದರೆ ಈ ಶಬ್ದದ ಮೂಲಾರ್ಥ 'ತಾಯಿ' ಎಂದಾಗುತ್ತದೆ. ಮಾದಿರ ಪದದ ಮೇಲಿನ ಎರಡೂ ಪಾಠಾಂತರಗಳನ್ನು ಅಧ್ಯಯನ ಮಾಡಿದಾಗ, ಇಲ್ಲಿ ವಸ್ತು ವಿಶಿಷ್ಟವಾಗಿ ಏನೂ ಇಲ್ಲ. 'ಮಾದಿರ' ಎನ್ನುವ ಹೆಣ್ಣು ಬಹಳ ಚೆಲುವೆ. ಅವಳು ಸುಂದರನಾದ ಚೆನ್ನನನ್ನು ಮದುವೆಯಾಗುತ್ತಾಳೆಯೇ? ಮದುವೆಯ ವೇಳೆ ಕಂಚಿನ ಸಟ್ಟುಗದಲ್ಲಿ ಅವನಿಗೆ ಬಡಿಸುತ್ತಾಳೆಯೇ ಎನ್ನುವ ಮಾತುಗಳಲ್ಲಿ ಮಾದಿರ ಹೆಣ್ಣಿನ ಮದುವೆಯ ಪ್ರಸ್ತಾಪವಿದೆ. ಅದಕ್ಕೆ ಪ್ರತಿಯಾಗಿ ಮಾದಿರ ಹೆಣ್ಣು ಚೆನ್ನೆಯರ ಮಗನ ಬಗ್ಗೆ ಅವನ ಸೌಂದರ್ಯದ ಬಗ್ಗೆ ಪ್ರಶ್ನಿಸುವಾಗ ಅವಳಿಗೆ ಅವನ ರೂಪದ ಬಗ್ಗೆ ತಿಳಿದುಕೊಳ್ಳಬೇಕಾದ ಕುತೂಹಲ ವ್ಯಕ್ತವಾಗಿದೆ. 'ಸೊಪ್ಪಿನ ಗೂಟದಷ್ಟು', 'ಅಕ್ಕಿ ಅಳೆಯುವ ಸೇರಿನಷ್ಟು' ಎಂದು ಗಂಡನ್ನು ಹೋಲಿಸುವಾಗ ವಾಸ್ತವಿಕತೆಗಿಂತ ಹೆಚ್ಚಾಗಿ ಹಾಸ್ಯ ಪ್ರಧಾನವಾಗಿವೆ. ಇನ್ನೊಂದು ಪಾಠಾಂತರದಲ್ಲಿ ಸುಮಾರಾಗಿ ಇದೇ ಭಾವ ಕಾಣಿಸಿಕೊಂಡರೂ ಮಾವನಮಗನ ಜೊತೆಗೆ ಉತ್ತರದ ರಾಜ್ಯಕ್ಕೆ ಹೋಗಲು ಮಾದಿರ ಹಠಹಿಡಿಯುವ ವಿಚಾರ ನಿರೂಪಿತವಾಗಿದೆ. ಆದರೆ ಮಾವನ ಮಗ ಅವಳನ್ನು ಬಿಟ್ಟು ತಾನೊಬ್ಬನೇ ಹೋಗಿಬರುವುದು, ಬರುವಾಗ ಅವಳಿಗೆ ಬೇಕಾದ ವಸ್ತುಗಳನ್ನು ತರುವುದು– ಈ ವಿಚಾರ ಸಿಗುತ್ತದೆ. ಕೆಲಸದ ನಿಮಿತ್ತವಾಗಿ ನಲಿಕೆಯವರು ಅಥವಾ ಇತರ ಹರಿಜನವರ್ಗದವರು ಪರಊರಿಗೆ ಹೋಗಿ ಸಂಪಾದನೆ ಮಾಡಿ ಊರಿಗೆ ಹಿಂದೆ ಬರುವ ಕ್ರಮ ಇತ್ತು. ಇಲ್ಲಿ ಕಾಣಿಸುವ ಸಂಗತಿ ಅಂತಹುದಕ್ಕೆ ಸಂಬಂಧಪಟ್ಟಿರಬಹುದು.

ಮಾದಿರ ಪದದಲ್ಲಿ ಹಾಡಿನ ವಸ್ತುವಿಗಿಂತ ಹೆಚ್ಚಾಗಿ ಅದರ ಲಯಗತಿಗೆ ಪ್ರಾಧಾನ್ಯವಿದೆ. ಕಾರಣ ಅದು ಕುಣಿತದ ಹಾಡು. ಕುಣಿತದ ಹೆಜ್ಜೆಗಳ ಗತ್ತಿಗೆ ಅನುಗುಣವಾಗಿ ಹಾಡಿನ ಲಯದಲ್ಲಿ ಪದಗಳು ಸ್ಪಂದಿಸುವುದನ್ನು ಇಲ್ಲಿ ಗಮನಿಸಬಹುದು. ಈ ಹಾಡಿನ ಲಯವನ್ನು ಈ ರೀತಿ ಗುರುತಿಸಬಹುದು.

ಮಾದಿ | ರೊಂದು | ಪನ್ಪಿ | ನಾಳೆ | ಮಾ | ಪೊರ್ಲೆದಿ | ಮಾದಿ | ರಾ |
ಬೊಳ್ಳೆರಿ | ಚೆನ್ನಗೆ | ಅಡುಮೆಂ | ದುಳ್ಳೆನೊ | ಮಾದಿ | ರಾ |
ಕಂಚಿ | ದನೇ | ತಟ್ಟು | ಗೊಡು | ಒಳಸೊ | ದುಂದುಳ್ಳನೆ | ಮಾದಿ | ರಾ |
ಎನನೆ | ಕೊನಪಿ | ಚೆನ್ನರೆ | ಮಗೆ | ಏರೆ | ನಾತೆಗೆ | ಉಳ್ಳೆ | ನೋ |
ಅಯ | ನಾತೇ | ಇಂಬ್ಯ | ನಾತೇ | ತಪ್ಪುದ | ಕುಂಟೊ | ದಾತೇ |
ತಪ್ಪುಲ | ಜಾಪಿ | ಕುಟ | ದಾತೇ | ಅರಿಲ | ಲಪ್ಪಿ | ಬಳ್ಳ | ದಾತೇ |

ಇಲ್ಲಿ ಪ್ರಧಾನವಾಗಿ ಬ್ರಹ್ಮಗಣದ ಅಥವಾ ಮೂರು ಮಾತ್ರೆಯ ಗಣದ ಲಯವಿದೆ. ಕೆಲವೊಂದು ಬಾರಿ ಗಣ ವೈವಿಧ್ಯ ಕಾಣಿಸುತ್ತದೆ. ಅಂತಗಣದ ಬ್ರಹ್ಮಗಣ ಅಥವಾ ಮಾತ್ರಾ ಮೂರು ಗಣದಲ್ಲಿ ಮಾತ್ರೆಯ ಗಣವಿರುವ ಉತ್ಸಾಹ ಲಯ (3 | 3 | 3 | 3 | — —) ಅತ್ಯಂತ ಚಿಕ್ಕಗಣವಾಗಿದ್ದು,

ಕುಣಿತಕ್ಕೆ ಬಹಳ ಹೊಂದಿಕೆಯಾಗುವ ಗುಣವನ್ನು ಪಡೆದಿದೆ. ಆದ್ದರಿಂದ ಈ ಕುಣಿತದ ಹಾಡಿನಲ್ಲಿ ಕುಣಿತದ ಲಯದ ಬಳಕೆ ಔಚಿತ್ಯಪೂರ್ಣವಾಗಿದೆ. ಹೆಚ್ಚಾಗಿ ಚರಣದ ಕೊನೆಯಲ್ಲಿ ಒಂದು ಬಿಡಿ ಅಕ್ಷರವು (ಮುಡಿಯಂತೆ) ಬಂದು ಚರಣದ ಮುಕ್ತಾಯವನ್ನು ಸೂಚಿಸುವುದರ ಜೊತೆಗೆ ಕುಣಿತದ ಹೆಜ್ಜೆಗಳ ಒಂದಂ ಹಂತದ ನಿಲುಗಡೆಯನ್ನು ನಿರ್ದೇಶಿಸುತ್ತದೆ.

## 2. ಆಟಿಕಡೆಂಜ

'ನಲಿಕೆ' ಜನಾಂಗದಲ್ಲಿ ಕಾಣಿಸುವ ಒಂದು ಜನಪದ ಕಲೆ 'ಆಟಿಕಡೆಂಜ' ಅಥವಾ 'ಆಟಿಕಳೆಂಜ' 'ಕಡೆಂಜ' (ಕಳೆಂಜ) ಎನ್ನುವುದು ಒಂದು ಭೂತದ ಹೆಸರು . 'ಆಟಿ (=ಆಷಾಢ) ತಿಂಗಳಿನಲ್ಲಿ ಆಚರಿಸುವ ಕಲೆಯಾಗಿರುವುದರಿಂದ ಇದಕ್ಕೆ 'ಆಟಿಕಡೆಂಜ' ಎಂದು ಹೆಸರು ಬಂದಿದೆ. ನಲಿಕೆಯಲ್ಲಿ 'ಆಟಿ' ತಿಂಗಳು 'ಸತ್ತವರ ಕಾಲ' ಎಂಬ ನಂಬಿಕೆ ಇದೆ.

ನಲಿಕೆಯುವರು 'ಆಟಿ'(ಆಷಾಢ ತಿಂಗಳಿನಲ್ಲಿ 'ಆಟಿಕಡೆಂಜ'ನ ವೇಷ ಹಾಕಿ ಮನೆ ಮನೆಗೆ ಬಂದು ಕುಣಿಯುತ್ತಾರೆ. ಊರಿಗೆ ಬಂದ ಮಾರಿಯನ್ನು, ರೋಗರುಜಿನಗಳನ್ನು ಅಟ್ಟಲು 'ಆಟಿಕಡೆಂಜ' ಬಂದಿದ್ದಾರೆ. ಎನ್ನುವುದು ಹಳ್ಳಿಗರ ನಂಬಿಕೆ. ಕಾಲಿಗೆ ಚಿಕ್ಕ ಗಗ್ಗರ, ಸೊಂಟಕ್ಕೆ ಕಟ್ಟಿದ ಕೆಂಪು ಮತ್ತು ಬಿಳಿಪಟ್ಟಿಗಳಿರುವ ಲುಂಗ, ಅದರ ಮೇಲೆ ಎಳತು ತೆಂಗಿನ ಗರಿಯ ಜಾಲರಿಯಂತಹ ಅಲಂಕಾರ, ತಲೆಗೆ ಅಡಿಕೆ ಹಾಳೆಯಿಂದ ಮಾಡಿದ ಉದ್ದನೆಯ ಟೊಪ್ಪಿಗೆ, ಹಣೆಗೆ ಕಂಚಿನ ಕೇದಗೆ, ಮುಂದಲೆ, ಮೈಕೈ ಹಾಗೂ ಮುಖಕ್ಕೆ ಬಳಿದ ಕೆಂಪು ಹಾಗೂ ಬಿಳಿ ಬಣ್ಣದ ರೇಖೆ, ಮುಖಕ್ಕೆ ಕಪ್ಪು ಮೀಸೆ, ಕೈಯಲ್ಲಿ ತಾಳೆಗರಿಯ ಕೊಡೆ–ಈ ರೀತಿ ಅಲಂಕೃತನಾದ 'ಆಟಿಕಡೆಂಜ' ಮನೆ ಬಾಗಿಲಿಗೆ ಬರುತ್ತಾನೆ. ನಲಿಕೆಯುವಳು ತೆಂಬರೆಯನ್ನು ಬಾರಿಸುತ್ತಾ ಆಟಿಕಡೆಂಜನ ಹಾಡನ್ನು ಹಾಡುತ್ತಾಳೆ. ಅಟಿಕಡೆಂಜನು ಕೈಯಲ್ಲಿರುವ ತಾಳೆ ಎಲೆಯ ಕೊಡೆಯನ್ನು ಗರಗರನೆ ತಿರುಗಿಸುತ್ತಾ, ತೆಂಬರೆಯ ಪೆಟ್ಟಿಗೆ ಸರಿಯಾಗಿ ಕುಣಿಯುತ್ತಾನೆ. 'ಆಟಿಕಡೆಂಜ' ಹಾಡಿನ ಬೇರೆ ಬೇರೆ ಪಾಠಾಂತರಗಳು ದೊರೆಯುತ್ತವೆ. ಇಲ್ಲಿ ಮುಖ್ಯವಾಗಿ ಮೂರು ಭಿನ್ನ ಪಾಠಗಳನ್ನು ಗಮನಿಸಲಾಗಿದೆ :

### ಪಾಠ-1

"ಆಟಿಡ್ ಬತ್ತಿ ಕಳೆಂಜೆ ಮಾರಿ ಕಳೆಪ್ಪೆನೋ
ಮೂಡಯಿದ ಮಾರಿನ್ ಮೂಡಯಿಗೆ ಕೊಂಡೋಪೆನೋ
ನಾಯಿದ ಕುತ್ತಾಂಡ ಬೊಣ್ಕೊಡೇ ಪೋವಾಡೇ
ಪುಚ್ಚೆದ ಕುತ್ತಾಂಡ ಪೇರ್‌ಡೇ ಪೋವಾಡೆ
ನರಮಾನಿ ಕುತ್ತಾಂಡ ಮುಖಯೆ ಪೋವಾಡೇ"

(ಆಷಾಢ ಮಾಸದಲ್ಲಿ ಬಂದ 'ಕಳಂಜ' ಮಾರಿ ಕಳೆಯುತ್ತಾನೆ. ಪೂರ್ವದಿಕ್ಕಿನ ಮಾರಿಯನ್ನು ಪೂರ್ವಕ್ಕೇ ಕೊಂಡು ಹೋಗುತ್ತಾನೆ. ನಾಯಿಯ ರೋಗವಾದರೆ ಬೂದಿಯಲ್ಲೇ ಹೋಗಲಿ. ಬೆಕ್ಕಿನ ರೋಗವಾದರೆ ಹಾಲಿನಲ್ಲೇ ಹೋಗಲಿ. ಮನುಷ್ಯರ ರೋಗವಾದರೆ ಪೂರ್ವ ದಿಕ್ಕಿಗೇ ಹೋಗಲಿ).

ಪಾಠ -2

"ಆಟಿಡ್ ಬತ್ತೆ ಕಳಂಜೆ ಮಾರಿ ಕಳೆಪನೋ
ಮೂಡೈತ ಮಾರಿನೆ ಮೂಡಾಯಿಗೇ ಕೊಂಡೋಪೆನೋ
ಅಟೆಡ್ ಮುಪ್ಪೊದಿನ ಮಾಮಿ ಬುಡಾರೊ
ಬಾರೆದ ಕಂಡೆ ತಿಂದೆನೋ ಕಳಂಜೆ ಬಂಜಿ ಬಳಪುಂಡೇ
ಮುಂಡಿದ ಕಂಡೆ ತಿಂದೆ ಕಳಂಜೆ ದೊಂಡೆ ಮೂರುಂಡೇ
ಕಳಂಜೆ ಕಣ್ಣಡ್ ತೂಪೆನೋ, ಅಡ್ಡ ಬುಳಿಪ್ಪೆನೋ
ಮೂಡಾಯಿ ಪೋಪೆನೋ ಕಳಂಜೆ ಮಾರಿ ಕಳೆಪ್ಪೆನೋ
ಮೂವೊಡುಂತ್ತಾ ಸಾಂತಾಣೆ ನಟ್ಯೆನೋ ಕಳಂಜೆ
ಈ ವೊಡುತ್ತಾ ಪೆಲತ್ತರಿ ನಟ್ಯೆನೋ
ಬಾಕಿಲ್ ಬಾಕಿಲ್ ಪೋಪೆನೋ ಕಳಂಜೆ
ಮಾರಿ ಕಳಪ್ಪೆನೋ
ಆಟಿಡ್ ಬತ್ತೆನೋ ಕಳಂಜೆ
ಸೋಣಡ್ ಪೋಪೆನೋ"

(ಆಟ್ (ಆಷಾಢ)ದಲ್ಲಿ ಬಂದ ಕಳಂಜ ಮಾರಿ ಕಳೆಯುವನೋ
ಮೂಡಣ ಮಾರಿಯಂ ಮೂಡಣದೂರಿಗೆ ತಾನು ಸಾಗಿಪನೋ
ಆಟಿಯು ತಿಂಗಳ ಮೂವತ್ತು ದಿನ ಅತ್ತೆಯ ಮನೆಯಲ್ಲಿ
ಬಾಳೆಯು ಗಡ್ಡೆ ತಿಂದೇ ಹೊಟ್ಟೆಯು ಊದಿಹಂದು
ಮರಸಣಿಗೆಯ ಗಡ್ಡೆಯು ತಿಂದೇ ಗಂಟಲು ಕಟ್ಟಿಹುದು
ಕಳಂಜ ಕಾಂಬನೋ ಕಣ್ಣಿಂದ, ಅಡ್ಡಕ್ಕೆ ಬೆಳೆಯುವನೋ
ಮೂಡಣದೂರಿಗೆ ಹೋಗುವನೋ ಮಾರಿಯು ಕಳೆಯುವನೋ
ಹಿಂದಣ ವರ್ಷದ 'ಸಾಂತಣಿ' ( =ಬೇಯಿಸಿದ ಹಲಸಿನ ಬೀಜ) ಬೇಡುವನೋ
ಇಂದಿನ ವರ್ಷದ ಹಲಸಿನ ಬೀಜವ ಬೇಡುವನೋ
ಬಾಗಿಲಂ ಬಾಗಿಲು ತಿರುಗುವನೋ
ಕಳಂಜಿ ಮಾರಿಯು ತಾನು ಕಳೆಯುವನೋ
ಆಷಾಢದಲಿ ಬಂದ ಕಳಂಜ ತಾನವ
ಸೋಣ (ಶ್ರಾವಣ)ದಲಿ ಮರಳಿ ಹೋಗುವನೋ)

ಪಾಠ-3

'ಕಳಂಜೆ ಕಳಂಜೇ ಸೋಯೊಗೊಡು ಪುಟ್ಯೊಂಡೇ
ನೂಯೊಡು ಬಳತ್ತೊಂಡೇ
ಪತ್ತ್ ಪ್ರಾಯಾಂಡೇ ಪದಿನಾಜಿ ಪ್ರಾಯಾಂಡೇ
ಏಳ್ ಪ್ರಾಯಾಂಡ್ ಎಳ್ಪ ಸಿಗೆಯಿಂಡೆ

ಎಳ್ಪ ತಿಂಗೊಳುಡೆ ಕೆಂಚಿ ಮಿಸೆ ಅಂಡ್ ಕೇಸರಿ ಗಡ್ಡ ಅಂಡ್
ಗುಮ್ಮೆ ಕೊಡೆಂಜಿ ಅಂಡೇ ಚಾಮೇರಿ ಬಂಜಾಂಡೇ
ತೆನ್ಕಾಯಿ ಕೂಟಾಂಡೇ ಬಡಕ್ಕಾಯಿ ರಾಜ್ಯಾಂಡೇ
ಅಲ್‌ಗೆ ದೋಲಾಂಡೇ ಪೀಲಿಗ್ ಮುರಿಯಾಂಡೇ
ಕೆಂಚಿ ಮಿಸೆ ಅಂಡೆ ಕೇಸರಿ ಗಡ್ಡ ಅಂಡೆ
ಪಾಲ್ಯೊನು ಪೋಪೆಂದೆ ಅಡ್ಡಣ ದಕ್ಕೆಡ್ಡೇ
ಪಾಂಡ್ಯಾಲ್ ಪಾರಾವೊಂಡೆ ತಾನ್ ಪಾರೊಂಡೆ
ಮಾಮಿನ ಇಲ್ಲಡ್ ಆಟಿದ ಮುಪ್ಪದಿನ
ಸೋಣೊಡು ಮುಪ್ಪದಿನ ಮಗಳೆ ಇಲ್ಲಡ್
ಬಾರೆದ ಕಂಡೆ ತಿಂದ್ ಕಳೆಂಜೆ ಬಂಜಿ ಬಳಪುಂಡೇ
ಮುಂಡಿದ ಕಂಡೆ ತಿಂದೆ ಕಳೆಂಜೆ ದೊಂಡೆ ಮೂರುಂಡೇ
ಕುಕ್ಕುದ ಉಪ್ಪಡ್ ತಿಂದೆ ಕಳೆಂಜೆ ಕೂಳಿ ಸೀರಾವುಂಡೇ
ಎರ್ಮೆದ ಪುಂಡಿ ತಿಂದೆ ಕಳೆಂಜೆ ಕಡೆ ಕಣ್ಣ್ ಕಂತುಂಡೇ
ಮೂವೊಡು ಈ ಬೇಲ್ಯೊಡು ಮಾರಿ ಕಳಿಪೆ
ಈಯೊಡು ಬೇಲ್ಯೊಡು ಬೀರಿ ಕಳಿಪೆ"

(ಕಳಂಜ ಕಳಂಜನು ಮನುಷ್ಯನಾಗಿ ಹುಟ್ಟಿದನು
ಮಾಯದಲ್ಲಿ ಬಳೆದನು
ಹತ್ತು ಪ್ರಾಯವಾಯಿತು, ಹದಿನಾರು ಪ್ರಾಯವಾಯಿತು
ಏಳು ಪ್ರಾಯವಾಯಿತು ಎಪ್ಪತ್ತು ಚಿಗುರಿತು
ಎಪ್ಪತ್ತು ತಿಂಗಳಲ್ಲೇ ಕೆಂಚು ಮಿಸೆ ಆಯಿತು ಕೇಸರಿಗಡ್ಡೆ ಆಯಿತು
ಕೆನ್ನೆ ಬೀಗಿತು. ಹೊಟ್ಟೆ ಬೀಗಿತು.
ದಕ್ಷಿಣದಲ್ಲಿ ಕೂಟವಾಯಿತು, ಉತ್ತರದಲ್ಲಿ ರಾಜ್ಯವಾಯಿತು
ಕೆಂಚು ಮಿಸೆ ಆಯಿತು, ಕೇಸರಿ ಗಡ್ಡೆ ಆಯಿತು
ದಾನ ಕೇಳಲು ಹೋಗುತ್ತೇನೆ ಎಂದ, ಅಡ್ಡಣ ಎಸೆದಿದ್ದಾನೆ
'ಪಾಂಡ್ಯಾಲೆ' (ಒಂದು ಆಟ) ಹಾರಿಸಿಕೊಂಡ, ತಾನು ಓಡಿಕೊಂಡ
ಅತ್ತೆಯ ಮನೆಯಲ್ಲಿ ಆಷಾಢದ ಮೂವತ್ತು ದಿನ
ಶ್ರಾವಣದಲ್ಲಿ ಮಗಳ ಮನೆಯಲ್ಲಿ ಮೂವತ್ತು ದಿನ
ಬಾಳೆಯ ಗಡ್ಡೆಯನು ತಿಂದು ಕಳೆಂಜನ ಹೊಟ್ಟೆ ಬೆಳೆಯಿತೋ
'ಮುಂಡಿಗಡ್ಡೆ'ಯನು ತಿಂದು ಕಳೆಂಜನ ಗಂಟಲು ತುರಿಸುತ್ತದೆಯೋ
ಮಾವಿನ ಉಪ್ಪಿನಕಾಯಿ ತಿಂದು ಕಳೆಂಜನ ಹಲ್ಲು ಹುಳಿಯುತ್ತಿದೆಯೋ
ಎಮ್ಮೆಯ ಹಿಂಡಿ ತಿಂದು ಕಳೆಂಜನ ಕಡೆಕಣ್ಣು ಮುಳುಗುತ್ತಿದೆಯೋ
ಕಳೆದ ವರ್ಷ ಈ ಹೊತ್ತಿನಲಿ ಮಾರಿ ಕಳೆಯುತ್ತಾನೆ
ಈ ವರ್ಷ ಈ ಹೊತ್ತಿನಲಿ 'ಬೀರಿ' ಕಳೆಯುತ್ತಾನೆ.)

ಆಟಿ ಕಳೆಂಜನ ಹಾಡಿನಲ್ಲಿ, ಆಷಾಢದಲ್ಲಿ ಬರುವ 'ಕಳೆಂಜ' ಎನ್ನುವ ಹೊಲೆಯನು ಪ್ರಧಾನವಾಗಿದ್ದಾನೆ. ಮಾರಿಯನ್ನು ಓಡಿಸುವುದು ಈ ಕಳೆಂಜನ ಕೆಲಸ ಎಂದು ಕಾಣಿಸುತ್ತದೆ. ಮನುಷ್ಯರಿಗಾಗಲೀ ಪ್ರಾಣಿಗಳಿಗಾಗಲೀ ಬರುವ ಮಾರಿಯನ್ನು ಅಥವಾ ರೋಗವನ್ನು ನಿವಾರಣೆ ಮಾಡುವ ಮಂತ್ರವಿದ್ಯೆ ಉಳ್ಳವನ ಹಾಗೆ

ಈ 'ಕಳೆಂಜ' ಇಲ್ಲಿ ಇದ್ದಾನೆ. ನಾಯಿಯ ರೋಗವನ್ನು ಬೂದಿಯಲ್ಲಿ, ಬೆಕ್ಕಿನ ರೋಗವನ್ನು ಹಾಲಿನಲ್ಲಿ ನಿವಾರಣೆ ಮಾಡುವಾಗ ಸಾಕಷ್ಟು ಹಾಸ್ಯಪ್ರಜ್ಞೆಯೂ ಇದೆ. ನಾಯಿ ಬೂದಿಯಲ್ಲಿ ಹೊರಳಾಡುವ ಮೂಲಕ ಸಂತೋಷಪಡುತ್ತದೆ. ತನ್ನ ಮೈ ತುರಿಕೆಯನ್ನು ಹೋಗಲಾಡಿಸುತ್ತದೆ. ಬೆಕ್ಕು ಹಾಲು ಕುಡಿಯುವುದರ ಮೂಲಕ ಸಂತೃಪ್ತಿಯನ್ನು ಪಡೆಯುತ್ತದೆ. ಅದರ ಎಲ್ಲ ಕಾಯಿಲೆಗೂ ಹಾಲೇ ಮದ್ದು. ಮನುಷ್ಯನ ಕಾಯಿಲೆಯನ್ನು ಮೂಡು ದಿಕ್ಕಿಗೆ ಓಡಿಸುವ, ಅಂದರೆ ಮಾರಿಯನ್ನು ಸಾಗಹಾಕುವ ಮಾತು ಇಲ್ಲಿ ವ್ಯಕ್ತವಾಗಿದೆ. ಮಾರಿಯನ್ನು ಗಡಿ ದಾಟಿಸುವುದು, ಊರಿಂದ ಹೊರಗೋಡಿಸುವುದು-ಕರ್ನಾಟಕದ ಎಲ್ಲೆಡೆಯೂ ಕಾಣಿಸುವ ಜಾನಪದ ಸಂಪ್ರದಾಯ. ಇಲ್ಲಿ ಕಾಣಿಸುವ ಮಾರಿಯೂ ಅಂತಹದ್ದೇ ಇರಬೇಕು. ತುಳುನಾಡಿನ ಹಳ್ಳಿಗಳಲ್ಲಿ ಹೊಲೆಯರಲ್ಲಿ ಕೆಲವು ವಿಶಿಷ್ಟ ವ್ಯಕ್ತಿಗಳು ಮಂತ್ರ ವಿದ್ಯೆ (Magic) ಬಲ್ಲವರಾಗಿ, ತಮ್ಮ ಕೆಲವು ವಿಶಿಷ್ಟ ಆಚರಣೆಯಿಂದ ಪ್ರಾಣಿಗಳಿಗೆ, ಬೆಳೆಗಳಿಗೆ ಬಂದ ರೋಗವನ್ನು ಹೋಗಲಾಡಿಸುತ್ತಾರೆ ಎಂಬ ನಂಬಿಕೆ ಇದೆ. (ಹರಿಜನರಲ್ಲಿ ಒಂದು ವರ್ಗವಾದ 'ಮೇರ ಜನಾಂಗ'ದ ಮುಖಂಡನು ಇಂತಹ ಮಂತ್ರವಾದಿಯಂತೆ ವರ್ತಿಸುತ್ತಾನೆ, ಆತನು ಮಾಡುವ ಮಾಂತ್ರಿಕ ಕ್ರಿಯೆಗೆ 'ಮಂಜ ಕಳೆಯುವುದು' ಎನ್ನುತ್ತಾರೆ) ಆಟಿ ಕಳೆಂಜನ ಹಾಡುಗಳಲ್ಲಿ ಬರುವ ಕಳೆಂಜನು ರೋಗವನ್ನೋ ಮಾರಿಯನ್ನೋ ದೂರಮಾಡುವುದು ಇಂತಹ ಮಂತ್ರ ವಿದ್ಯೆಯ ರೂಪದಂತೆ ಭಾಸವಾಗುತ್ತದೆ.

ಆಟಿ ಕಳೆಂಜನ ಹಾಡಿನ ಎರಡನೆಯ ಮತ್ತು ಮೂರನೆಯ ಪಾಠಗಳಲ್ಲಿ ಮೇಲಿನ ಭಾವಗಳ ಜೊತೆಗೆ ಇತರ ಕೆಲವು ವಿಚಾರಗಳೂ ಸೇರಿಕೊಂಡಿವೆ. ಆಟಿ ಕಳೆಂಜನು ಮನೆಮನೆಗೆ ಬಂದು ಹಾಡಿ ಕುಣಿದು ಮನೆಯವರು ಕೊಟ್ಟ ವಸ್ತುಗಳನ್ನು ಸಂಗ್ರಹಿಸಿಕೊಂಡು ಮುಂದುವರಿಯುತ್ತಾನೆ. ಆಷಾಢ (ಆಟಿ) ಮಾಸದಲ್ಲಿ ಅತ್ತೆಯ ಮನೆಯಲ್ಲಿ ಮೂವತ್ತು ದಿನಗಳನ್ನು ಕಳೆದನಂತೆ. ಅಲ್ಲಿ ಬಾಳೆಯ ಗಡ್ಡೆ ತಿಂದು ಹೊಟ್ಟೆ ಊದಿರುವುದು, ಮುಂಡಿಗಡ್ಡೆ ತಿಂದು ಗಂಟಲು ಕಟ್ಟಿರುವುದು, ಹುಳಿ ಮಾವಿನ ಉಪ್ಪಿನಕಾಯಿ ತಿಂದು ಹಲ್ಲು ಹುಳಿಯಾಗುವುದು, ಎಮ್ಮೆಗಳಿಗೆ ಹಾಕುವ ಹಿಂಡಿಯನ್ನು ತಿಂದು ಕಡೆಕಣ್ಣು ಆಳಕ್ಕೆ ಇಳಿದಿರುವುದು_ಇದು ಅಲ್ಲಿ ಆತ ಪಟ್ಟಿರುವ ಭವಣೆಯ ಚಿತ್ರವನ್ನು ಕೊಡುತ್ತದೆ. ಅದರಿಂದ ಬೇಸತ್ತು ಆತ ಮೂಡಣ ದಿಕ್ಕಿಗೆ ಬಂದು ಮಾರಿಯನ್ನು ಓಡಿಸುವ ಕೆಲಸವನ್ನು ಕೈಗೊಂಡಿರಬೇಕು. ಈ ರೀತಿ ಜನಗಳಿಗೆ, ಜಾನುವಾರುಗಳಿಗೆ, ಬೆಳೆಗಳಿಗೆ ಬಂದ ಮತ್ತು ಬರುವ ರೋಗಗಳನ್ನು ನಿವಾರಿಸುವ ಕೆಲಸವನ್ನು ಕೈಗೊಂಡ ಕಳೆಂಜನು ತಾನು ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ಆ ಮನೆಗಳವರಿಂದ ಹಿಂದಣ ವರ್ಷದ 'ಸಾಂತಾಣಿ' (ಬೇಯಿಸಿದ ಹಲಸಿನ ಬೀಜ), ಈ ವರ್ಷದ ಹಲಸಿನ ಬೀಜವನ್ನೋ ಬೇಡುತ್ತಾನೆ. ಈ ರೀತಿಯ ಸಾಮಾನ್ಯ ವಸ್ತುಗಳನ್ನು ಬೇಡುತ್ತಾ ಮನೆ ಮನೆಗಳಿಗೆ ತಿರುಗುತ್ತಾನೆ. ಆಷಾಢ ಮಾಸದಲ್ಲಿ ಅಂದರೆ ಮಳೆಗಾಲದಲ್ಲಿ ಸಾಮಾನ್ಯವಾಗಿ ಹಳ್ಳಿಯ ಜನರಿಗೆ ಉಣ್ಣಲು, ತಿನ್ನಲು ಬಹಳ ಕಷ್ಟದ ಕಾಲ. ಆದ್ದರಿಂದಲೇ ಈ ಸಮಯದಲ್ಲಿ ಬಹಳ ಬಡತನದಲ್ಲಿರುವ ಹರಿಜನರಂತೂ ಕುಣಿತದ, ಮಾರಿ ಕಳೆಯುವ ಅಥವಾ ಇತರ ನೆಪಗಳಲ್ಲಿ ಮನೆ ಮನೆಗೆ ತಿರುಗಿ ಹಾಡಿ, ಕುಣಿದು, ಜೀವನೋಪಾಯಕ್ಕಾಗಿ ಬೇಕಾದ ವಸ್ತುಗಳನ್ನು ಸಂಗ್ರಹಿಸುತ್ತಾರೆ. ಅಂತಹವರಲ್ಲಿ ಆಟಿ ಕಳೆಂಜನು ಒಬ್ಬನಾಗಿರಬೇಕು. ಏಕೆಂದರೆ ಶ್ರಾವಣ ಮಾಸ ಬಂದಾಗ ಕಳೆಂಜ ಮರಳಿ ಹೋಗುತ್ತಾನೆ. ಈ ರೀತಿ ಹರಿಜನರ ಅನೇಕ ಕುಣಿತಗಳು ಮತ್ತು ಆ ಸಂದರ್ಭದ ಕುಣಿತದ ಹಾಡುಗಳು ಬದುಕಿನ ನಿರ್ವಹಣೆಯ ಅನಿವಾರ್ಯತೆಯಿಂದ ಹುಟ್ಟಿಕೊಂಡವುಗಳಾಗಿರುತ್ತವೆ.

'ಆಟಿ ಕಳೆಂಜನ' ಮೂರನೆಯ ಪಾಠದಲ್ಲಿ ಕೆಲವು ವಿಶಿಷ್ಟ ವಿಚಾರಗಳು ಇವೆ. 'ಕಳೆಂಜ' ಭೂತದ ಸ್ವರೂಪದವನು ಎನ್ನುವ ಅಭಿಪ್ರಾಯ ಇದೆ.-'ಸೋಯೊಗೊಡು ಪುಟ್ಟೊಂಡೇ, ಮಾಯೊಡು ಬಳತ್ತೊಂಡೇ' 'ಕಳೆಂಜ'ನ ದೈಹಿಕ ಸ್ವರೂಪದ ಅಂದರೆ ಅವನ ವೇಷ ಭೂಷಣದ ಕಲ್ಪನೆ ಇಲ್ಲಿ ಸಿಗುತ್ತದೆ—'ಕೆಂಚು ಮೀಸೆ ಮತ್ತು ಕೇಸರಿ ಗಡ್ಡ' ಅವನಿಗೆ ಇದೆ.

ಆಟಿ ಕಳೆಂಜನ ವೇಷ ಹಾಕಿ, ಕೃತಕ ಕುದುರೆಯನ್ನು ತಂದು, ಮನೆಗಳ ಮುಂದೆ ನಿಂತು ಹಾಡುತ್ತ, ಕುಣಿಯುವ ಒಂದು ಸಂಪ್ರದಾಯ ಹಿಂದೆ ಇತ್ತು. ಆದರೆ ಇಂದು ಆಟಿ ಕಳೆಂಜ ನೃತ್ಯ ಸಂಪ್ರದಾಯದಲ್ಲಿ ಕೃತಕ ಕುದುರೆ ಕಾಣಿಸುವುದಿಲ್ಲ.

3. ಕರೆಂಗೋಲು

ತುಳುನಾಡಿನಲ್ಲಿ ಬೇಸಾಯದ ಚಟುವಟಿಕೆಗಳಿಗೆ ಸಂಬಂಧಿಸಿದ ಒಂದು ಜನಪದ ಕಲೆ 'ಕರೆಂಗೋಲು ಕುಣಿತ '. 'ಕರೆಂಗೋಲು' ಪದಕ್ಕೆ ಸ್ಪಷ್ಟವಾದ ಅರ್ಥ ದೊರೆಯುವುದಿಲ್ಲವಾದರೂ ಕಲಾವಿದರು ಹಿಡಿಯುವ ಕೋಲು ಕರಿಯದಾದುದರಿಂದ ಈ ಅರ್ಥ ಬಂದಿರಬಹುದು.

ಹರಿಜನರು ಸುಗ್ಗಿಯ ಕಾಲದಲ್ಲಿ ಕರೆಂಗೋಲು ಹಿಡಿಯುತ್ತಾರೆ. ಮೈಗೆ ಕರಿಯ ಬಣ್ಣ ಸವರಿಕೊಂಡು ಅಂಗಿ ಚಡ್ಡಿ ತೊಟ್ಟುಕೊಳ್ಳುವ ಕುಣಿತದವರು ಮೈತುಂಬ ಸೊಪ್ಪು ಮತ್ತು ಗುಂಡುಮಣಿಗಳ ಅಲಂಕಾರ ಮಾಡಿಕೊಂಡಿರುತ್ತಾರೆ. ಸೊಂಟ ಮತ್ತು ಕೈಗಳಿಗೆ ಅಡಕೆಯ ಸಿಂಗಾರದ ಹೂಗೊಂಚಲನ್ನೂ ಕಟ್ಟಿಕೊಂಡಿರುತ್ತಾರೆ. ಹತ್ತಾರು ಜನ ಸ್ತ್ರೀ ಪುರುಷರು ಪಾಲುಗೊಳ್ಳುವ ಈ ಕಲಾ ತಂಡದಲ್ಲಿ ಒಬ್ಬ ಮುದುಕನ ವೇಷ ಧರಿಸಿದರೆ, ಇನ್ನಿಬ್ಬರು ಗಂಡು – ಹೆಣ್ಣು ವೇಷ ಹಾಕುತ್ತಾರೆ. ಕಲಾವಿದರೆಲ್ಲ ಮೈಗೆ ಬಿಳಿಯ ಬಣ್ಣ ಹಚ್ಚಿಕೊಂಡು ಕಾಲಿಗೆ ಗೆಜ್ಜೆಕಟ್ಟಿರುತ್ತಾರ. ಕೈಯಲ್ಲಿ ಹಿಡಿದ ಉದ್ದ ಕರಿಯ ಕೋಲನ್ನು ನೆಲಕ್ಕೆ ಕುಟ್ಟುತ್ತಾ ಹಿಂದಕ್ಕೆ ಮುಂದಕ್ಕೆ ಗೆಜ್ಜೆಯ ಕಾಲಿನ ಹೆಜ್ಜೆ ಇಡುತ್ತಾ 'ಕರೆಂಗೋಲು ಕರೆಂಗೋಲು' ಎಂದು ಹಾಡುತ್ತಾ ಕುಣಿಯುತ್ತಾರೆ. ಕೆಲವು ಕಡೆ ಕಲಾವಿದರು ನೆಕ್ಕಿ ಸೊಪ್ಪಿನ ಕೊಂಬೆಯನ್ನು ಕರೆಂಗೋಲನ್ನಾಗಿ ಬಳಸುವುದಿದೆ. ಕರೆಂಗೋಲು ಕುಣಿತಕ್ಕೆ 'ಡೋಲು' ಎಂಬ ಚರ್ಮವಾದ್ಯದ ಬಡಿತವಿರುತ್ತದೆ.

ಮಾಗಿಯ ಹುಣ್ಣಿಮೆಯ ಕಾಲದಲ್ಲಿ (ಸುಗ್ಗಿಯ ಕಾಲದಲ್ಲಿ) ಕಲಾವಿದರು ವೇಷ ಹಾಕಿಕೊಂಡು ಮನೆ ಮನೆಗೆ ಹೋಗಿ, ಮುಂದಿನ ಬಿತ್ತನೆಯ ಬೀಜ ಸಂಗ್ರಹಿಸುತ್ತಾರೆ. ಕರೆಂಗೋಲು ಕುಣಿತದ ವೇಳೆ ಹಾಡುವ ಹಾಡಿನ ಕೆಲವು ಪಾಠಗಳು ಸಿಗುತ್ತವೆ. ಒಂದು ಸಂಕ್ಷಿಪ್ತವಾದ ಪಾಠ ಈ ರೀತಿ ಇದೆ :

"ಕರಂಗೋಲು ಕರಂಗೋಲು ಮಾಯೆದ ಪುಣ್ಣಾಮೆ
ಕರಂಗೋಲು ಪುಟ್ಟಿನೆ ಒಪ್ಪೊಂಜಿ ನಾಡೆಡ್
ಕರಿಯ ಬಡಕ್ಕಾಯಿ ಬೊಳಿಯ ನಾಡೆಡೆಯ
ಕರೆಂಗೋಲು ಕೊಂಡರ್ಪಿ ಕುನೆಳ್ ಎಂಚಯಾ?
ಬಾರೆದ ಬಲ್ಲೆಡ್ ಬರಿ ಕೊಣರೊಡು
ನೆಕ್ಕಿದ ತುಪ್ಪುಡು ಎದ್ದಿ ಕೊಣರೊಡು
ಮಾದೆರಿ ಬಡುಟು ಮಾದ್ ಕೊಣರೊಡೇ
ಕುಂಟಿನೇ ಮೈಪುಡು ಅಡ್ತ್ರ ಕೊಣರೊಡೇ"

(ಕರಂಗೋಲು ಕರಂಗೋಲು ಮಾಯಿಯ ಹುಣ್ಣಿಮೆ
ಕರಂಗೋಲು ಹುಟ್ಟಿದ್ದು ಯಾವ ನಾಡಿನಲ್ಲಿ?
ಕಡಲ ಕರೆಯಲ್ಲಿ ಬಡಗು ಬಿಳಿಯ ನಾಡಿನಲ್ಲಿ
ಕರಂಗೋಲು ತರುವಂಥ ಕುಶಲತೆ ಹೇಗೆ?
ಬಾಳೆಯ ಹಗ್ಗದಲ್ಲಿ ಸುತ್ತಿ ತರಬೇಕು

ನೆಕ್ಕಿಯು ಸೊಪ್ಪಿನಲ್ಲಿ ಬೀಸಿ ತರಬೇಕು
ಮಾದೆರ ಬೆತ್ತದಲ್ಲಿ ತಿರುಗಿಸಿ (ಪಳಗಿಸಿ) ತರಬೇಕು
ಕುಂಟು ಹಿಡಿಸೂಡಿಯಲ್ಲಿ ಗುಡಿಸಿ ತರಬೇಕು)

'ಕರೆಂಗೋಲು' ಹಾಡಿನ ಹೆಚ್ಚು ವಿಸ್ತಾರವಾದ ಇನ್ನೊಂದು ಪಾಠ ಈ ರೀತಿ ಇದೆ:

"ಪೊಲಿಯೇ ಪೊಲಿಯೆರೆ ಪೊಲಿ ಪೂವೆ ಪೊಂಡೆ ಉಳ್ಳಯಾ
ಮಾಯಿದ ಪುಣ್ಣಮೆ ಉಳ್ಳಯಾ ಮಾಯೊಡೆ ಪೋಂಡೆ
ಸುಗ್ಗಿದ ಪುಣ್ಣಮೆ ಉಳ್ಳಯಾ ಸುಗ್ಗಿಡೇ ಪೋಂಡೆ
ಕರೆಂಗೋಲು ಪುಟ್ಟಿನಾಜಿ ಓಳುಜಿ ಕಾಂತಕ್ಕ
ಮುಂಡಾಯಿ ದಿಕ್ಕೆಡ ಉಳ್ಳಯಾ ಸುದೆ ಪೊಯ್ಯೆಡೆ
ಸುದೆ ಪೊಯ್ಯೆಡೆ ಉಳ್ಳಯಾ ನೀರ್ ಬುರುದಿಡೆ
ನೀರ್ ಬರುದಿಡೆ ಉಳ್ಳಯಾ ಮಾದೆರೆದ ಕಾಡೆಡೆ
ಮಾದೆರೆದ ಕಾಡೆಡೆ ಉಳ್ಳಯಾ ನೆಕ್ಕಿದ ಪುದೆಲೆಡೆ
ಕರೆಂಗೋಲು ಕೊನೊಪಿನಾ ಏರೆದೆ ಕಾಂತಕ್ಕ
ಆ ಕರೆಂಗೋಲು ಕೊನೆಯಿರೆ ಕುಚೆಲು (ಕುಸೆಲ್) ಪಿನಯುನೆ
ಆಕರೆಂಗೋಲು ಕೊನೆಯೆರೆ ಜೆಯ್‌ಕುಳು ಪಿಂಬೆರ್
ಉಳ್ಳಾದಿನೆ ಮೆನಿಪುಲ ಜೇಯಿ ಮದಿಮ್ಮಾಳೆ
ಉಳ್ಳಾದಿನ್ ಮೆನಿಪುಲ ಕುಚೆಲು (ಕುಸೆಲ್) ಪಿನಯುನೆ
ಕುಡುಪುಗು ಕೈ ಕೊರ್‌ದ್ ಮೆನಿಪುಲಾ
ಉಳ್ಳಾಯನ್ ಮೆನಿಪುಲ ಜೆಯ್ ಮದಿಮ್ಮಾಳೆ
ಉಳ್ಳಾಯನ್ ಮೆನಿಪುಲ ಕುಚೆಲು (ಕುಸೆಲ್) ಪಿನಯುನೆ
ಚೆಂಬುಡು ನೀರ್ ಪತ್ತೆದ್ ಮೆನಿಪುಲಾ
ಬಾಲೆ ಮೆನಿಪುಲಾಜೆ ಬಾಲೆ ಮದಿಮ್ಮಾಳೆ
ಬಾಲೆನ್ ಮೆನಿಪುಲ ಕುಚೆಲ್‌ನೆ (ಕುಸೆಲ್‌ನೆ) ಪಿನಯುನೆ
ಬಟ್ಟಲ್‌ಡ್ ಪೇರ್ ಉನುಪು ಪಾಡ್ದ್ ಮೆನಿಪುಲಾ
ಉಳ್ಳಾಯೆ ಉಳ್ಳೆರಾ ಇಜ್ಜೆರಾ ಜೇವು ಮದಿಮ್ಮಾಳೆ
ಲೆಪ್ಪನಾರೆ ಬುಲೆಪ್ಪನಾರ್ ಕೂಟೊಗು ಪೋತೆರೆ
ಕೂಟೊಡ್ದ್ ಪಿದಡ್ನೆಗ ದಾನೆ ಮಂದಿತೆರೆ
ಗಿಂಡ್ಯೆಪತ್ತ್‌ಬೊರಿಯೆರೆ ಪೆತ್ತ ಮಲ್ತೆರ್
ಅಂಡೆ ಕೊನೊಡ್ ಬೊರಿಯೆರೆ ಎರ್ಮೆ ಮಲ್ತೆರ್
ರೋಂಕಾನ್ ಬಾಂಕಾನ್ ಕಂಡ ಮಲ್ತೆರ್
ಕೋಟ್ಯಾಡಕ್ ಮಂಜಲ್ ಬೊಟ್ಟು ಮಲ್ತೆರ್
ಕಟಾಣಿಕೆ ಮೇಲಾಯಿನ ತಾರೆಮರ ದೀತೆರೆ
ತೋಟೊಗು ಮೇಲಾಯಿನ ಕಂಗೆಮರ ದೀತೆರೆ

ಒಳ್ಳಿಗೆ ಮೇಲಾಯಿನ ಒಟ್ಟೆರೆ ಬೂರು ದೀತೆರೆ
ಕಾಡೆಗೆ ಮೇಲಾಯಿನ ಇರುವೆ ಮರದೀತೆರೆ
ಬೊಟ್ಟುಗು ಮೇಲಾಯಿನ ಪಿಲ ಮರ ದೀತೆರೆ
ಎಡೆನ್ ಮೋಡೆನ್ ಗೋಣ ಮಲ್ತೆರ್
ಕಾರಿನೆ ಕಬುಲನೆ ಇನೆ ಮಲ್ತೆರ್
ಅಂಗರನೆ ಬಾಕುಡನೆ ಜತೆ ಮಲ್ತೆರ್
ಕಾನದನೆ ಕಟದನೆ ಆಳೆ ಮಲ್ತೆರ್
ಏರೆಗ ಅಂಗರ ಬಾಕುಡ ನಾಲೆ ಎರು ಮಾದವೊಡೆ
ನಾಲೆ ಎರು ಮಾದಾವೆರೆ ಉಳ್ಳಯಾ ನಾಯೆರೆ ಇಜ್ಜಾಂಡೆ
ಬೋವು ಕಡೆ ಪಾದೆ ಉಳ್ಳಯಾ ಮೊನೆ ಪಾಡೊಡೆ
ಏರೆಗ ಅಂಗರ, ಬಾಕುಡ ನಾಲೆ ಎರು ಮಾದಾವೊಡೆ
ನಾಲೆ ಎರು ಮಾದಾವೆರೆ ಉಳ್ಳಯಾ ಪನೋರ ಇಜ್ಜಾಂಡೆ
ಪಾವೋಲೆ ಪತ್ತೊಡೆ ಉಳ್ಳಯಾ ಪನೊರೊಂಜಿ ಬೊಟ್ಟೊಡು
ಏರೆಗ ಅಂಗರ, ಬಾಕುಡ ನಾಲೆ ಎರು ಮಾದಾವೊಡೆ
ನಾಲೆ ಎರು ಮಾದಾವೊ ಉಳ್ಳಯಾ ಪತ್ತೊಂಜಿ ಇಜ್ಜಾಂಡೆ
ನಕ್ಕುರು ಪತ್ತೊಡೆ ಉಳ್ಳಯಾ ಪತ್ತೊಂಜಿ ಬೊಟ್ಟೊಡೇ
ಏರೆಗ ಅಂಗರ, ಬಾಕುಡ ನಾಲೆ ಎರು ಮಾದಾವೊಡೆ
ನಾಲೆ ಎರು ಮಾದವೊಡ ಉಳ್ಳಯಾ, ನುಗವೊಂಜಿ ಇಜ್ಜಾಂಡೆ
ಪೊನ್ನೆ ಕಡೆಪೊಡೇ ಉಳ್ಳಯಾ ನುಗೊ ಕೆತ್ತೊಡೆ
ಏರೆಗ ಅಂಗರ, ಬಾಕುಡ ನಾಲೆ ಎರು ಮಾದಾವೊಡೆ
ನಾಲೆ ಎರು ಮಾದವೊಡ ಉಳ್ಳಯಾ ಪೊಣಕೆದ ಬಲ್ಲೆವೊಂಜಿ ಇಜ್ಜಾಂಡೆ
ಕೇರಿನ ಪತ್ತೊಡ ಉಳ್ಳಯಾ ಪುಣಕೆದ ಬಲ್ಲೆ ಪಾಡೊಡೇ
ಏರೆಗ ಅಂಗರ, ಬಾಕುಡ ನಾಲೆ ಎರು ಮಾದಾವೊಡೆ
ನಾಲೆ ಎರು ಮಾದಾವೊಡೆ ಉಳ್ಳಯಾ ಕೋಂಟೆ ಬಲ್ಲೆ ಇಜ್ಜಾಂಡೆ
ಪಜ್ಜಿ ಹರಂಬೋಲೆ ಪತ್ತೊಡು ಉಳ್ಳಯಾ ಕೋಟೆ ಬಲ್ಲಿ ಪಾಡೊಡು
ಏರೆಗ ಅಂಗರ, ಬಾಕುಡ ನಾಲೆ ಎರು ಮಾದಾವೊಡೆ
ನಾಲೆ ಎರು ಮಾದಾವೊಡೆ ಉಳ್ಳಯಾ ಕಟ್ಟಬಲ್ಲೆ ಇಜ್ಜಾಂಡೇ
ಉಲ್ಲುಂಗೇಲ್ ಹರಂಬೋಲು ಪತ್ತೊಡೆ ಉಳ್ಳಯಾ ಕಟ್ಟೆದ ಬಲ್ಲಿ ಪಾಡೊಡೇ
ಏರಗ ಅಂಗರ ಬಾಕುಟ ನಾಲೆ ಎರು ಮಾದಾವೊಡೇ
ನಾಲ್ ಎರು ಮಾದಾವೊಡೆ ಉಳ್ಳಯಾ ಪಲಾಯಿವೊಂಜಿ ಇಜ್ಜಾಂಡೇ
ಏರೆಗ ಅಂಗರ, ಬಾಕುಡ ನಾಲೆ ಎರು ಮಾದಾವೊಡೆ
ನಾಲೆ ಎರು ಮಾದವೊಡೆ ಉಳ್ಳಯಾ ಪುಡ್‌ಕಾಯಿವೊಂಜಿ ಇಜ್ಜಾಂಡೆ

ಬಿದೆರೆನ್ ಕಡ್‌ಪೊಡೆ ಉಳ್ಳಯಾ ಫುಡ್‌ಕಾಯಿ ಪಾಡೊಡೆ
ಪೊಲಿಯೇ ಪೊಲಿಯೆರ್ ಪೊಲಿ ಪೂವೆ ಪೋಂಡು ಉಳ್ಳಯಾ
ಏರ್‌ಗ ಅಂಗರ, ಬಾಕುಡ ನಾಲೆ ಎರು ಮಾದಾವೊಡ
ನಾಲೆ ಏರು ಮಾದಾವೊಡೆ ಉಳ್ಳಯಾ ಎರುನ್ ಕೊನೆಡ್ರೊಂಡೆ
ಬಾರೆನ ಬಲ್ಲ್‌ಡ್ ಉಳ್ಳಯಾ ಬಂದಿತ್ ಕೊನ್‌ಡ್ರೊಂಡೆ
ಕಂಚಿನ ಅಡ್‌ಪೆಡೆ (ಕಂಚಡ್ಪೆ) ಉಳ್ಳಯಾ ಗಾಲೆತೆದೆ ಕೊನ್‌ಡ್ರೊಂಡೆ
ಪಾರನ ಅಡ್‌ಪೆಡೆ ಉಳ್ಳಯಾ ಪುಡೆತದೆ ಕೊನ್‌ಡ್ರೊಂಡೆ
ತಾರೆದ ಮೈಪುಡ್ ಉಳ್ಳಯಾ ಬೀಜಿದ್ ಕೊನ್‌ಡ್ರೊಂಡೆ
ಕುಂಟಿ ಮೈಪುಡ್ ಉಳ್ಳಯಾ ಅಡಿತೆದ್ ಕೊನ್‌ಡ್ರೊಂಡೆ
ನೆಡಿಲ ಕೋಲುಡು ಉಳ್ಳಯಾ ನೆಡಿತೆದೆ ಕೊನ್‌ಡ್ರೊಂಡೆ
ನೆಕ್ಕಿದ ಕೋಲುಂಡು ಉಳ್ಳಯಾ ನೋತುಂದೆ ಕೊನ್‌ಡ್ರೊಂಡೆ
ಚಿಟ್ಟೆಯಿದ ತುಪ್ಪುಡ್ ಉಳ್ಳಯಾ ತಿಕ್ಕೆದೆ ಕೊನ್‌ಡ್ರೊಂಡೆ
ಚೂರಿದ ಮುಳ್ಳುಡು ಉಳ್ಳಯಾ ಚುರಿದ್ (ಸುರಿದ್) ಕೊನ್‌ಡ್ರೊಂಡೆ
ಪೊಲಿಯೇ ಪೊಲಿಯೆರೆ ಪೊಲಿ ಪೂವೆ ಪೋಂಡು ಉಳ್ಳಯಾ
ಅಯೆರೆಗೆ ಲಯಲ ಪಟ್ಟ ಉಳ್ಳಯಾ ಬೇತೆನೆ ಅರಿಪುಲೆ
ಮುಡಾಯಿ ಪದೊಲಿಡ್ ಉಳ್ಳಯಾ ಕಂಚಿ ಮಾನಿ ಒಡಾರ್
ಪಡ್ಡಾಯಿ ಪದೊಲಿಡ್ ಉಳ್ಳಯಾ ಬೊಳ್ಳಿಮಾನಿ ಒಡಾರ್
ಬಡ್ಕಾಯಿ ಪದೊಲಿಡ್ ಉಳ್ಳಯಾ ದೀಪದ ಒಡಾರ್
ತೆನ್ಕಾಯಿ ಪರೊಲಡೆ ಉಳ್ಳಯಾ ನಿನೆ ಮಾನಿ ಒಡಾರ್
ಅಂಚ ಪನ್‌ಪೆಂಡಾ ಪುಳ್ಯನೇಟ ಉಂಡುಯೇ ಉಳ್ಳಯಾ
ಪೊಲಿ ಪೊಲಿಯೆರೆ ಪೊಲಿ ಪೂವೆ ಪೋಂಡೆ ಉಳ್ಳಯಾ ॥ "

( ಹೊಲಿಯೇ ಹೊಲಿಯೆರೆ ಹೊಲೆ ಹೂವೆ ಹೋಯಿತೆ ಒಡೆಯಾ
ಮಾಯಿಯ ಹುಣ್ಣಿಮೆ, ಒಡೆಯಾ ಮಾಯಂದಲ್ಲೇ ಹೋಯಿತೇ
ಸುಗ್ಗಿಯ ಹುಣ್ಣಿಮೆ, ಒಡೆಯಾ ಸುಗ್ಗಿಯಲ್ಲೇ ಹೋಯಿತೇ
ಕರಂಗೋಲು ಹುಟ್ಟಿದ್ದು ಎಲ್ಲೇ ಕಾಂತಕ್ಕ
ಮೂಡು ದಿಕ್ಕಿನಲ್ಲಿ, ಒಡೆಯಾ, ಹೊಳೆಯ ಹೊಯಿಗೆಯಲ್ಲಿ
ಹೊಳೆಯ ಹೋಯಿಗೆಯಲ್ಲಿ, ಒಡೆಯಾ, ನೀರಿನ ಬದಿಯಲ್ಲಿ
ನೀರಿನ ಬದಿಯಲ್ಲಿ, ಒಡೆಯಾ, ಮಾದೇರಿನ ಕಾಡಿನಲ್ಲಿ
ಮಾದೇರಿನ ಕಾಡಿನಲ್ಲಿ, ಒಡೆಯಾ, 'ನಕ್ಕಿ' ಸೊಪ್ಪಿನ ಪೊದರಿನಲ್ಲಿ,
ಕರಂಗೋಲು ತರುವುದು ಯಾರೇ ಕಾಂತಕ್ಕ ?
ಆ ಕರಂಗೋಲು ತರುವ ಕುಶಲತೆ ಏನು ?
ಆ ಕರಂಗೋಲು ತರುವ ಮಕ್ಕಳು ತಿಳಿದಿದ್ದಾರೆ
ಒಡತಿಯನ್ನು ಎಚ್ಚರಿಸು ಚಿಕ್ಕ ಮದುಮಗಳೇ
ಒಡತಿಯನ್ನು ಎಚ್ಚರಿಸುವ ಕುಶಲತೆ ಗೊತ್ತಿದೆಯೇ ?
'ಕುಡುಂಪು'ವಿಗೆ ಕೈ ಕೊಟ್ಟು ಎಚ್ಚರಿಸು

ಒಡೆಯನನ್ನು ಎಚ್ಚರಿಸು ಚಿಕ್ಕ ಮದುಮಗಳೇ
ಒಡೆಯನನ್ನು ಎಚ್ಚರಿಸುವ ಕುಶಲತೆ ಗೊತ್ತಿದೆಯೇ ?
ಚೆಂಬಿನಲ್ಲಿ ನೀರು ಹಿಡಿದು ಎಚ್ಚರಿಸು
ಮಗುವನ್ನು ಎಚ್ಚರಿಸು ಚಿಕ್ಕ ಮದುಮಗಳೆ,
ಮಗುವನ್ನು ಎಚ್ಚರಿಸುವ ಕುಶಲತೆ ಗೊತ್ತಿದೆಯೇ ?
ಬಟ್ಟಲಿಗೆ ಹಾಲು ಅನ್ನ ಹಾಕಿ ಎಚ್ಚರಿಸು.
ಒಡೆಯ ಇದ್ದಾರೋ ಇಲ್ಲವೋ ಹುಡುಗಿ ಮದುಮಗಳೇ
ಕರೆಯುದವರು ಆಳದವರು ಕೂಟಕ್ಕೆ ಹೋಗಿದ್ದಾರೆ
ಕೂಟದಿಂದ ಹೊರಡುವಾಗ ಏನನ್ನು ತಂದರು ?
ಗಿಂಡಿ ಹಿಡಿದು ಕರೆಯಲು ದನ ತಂದರು
ಹಂಡೆ ಕೊಂಡೊಯ್ದು ಕರೆಯಲು ಎಮ್ಮೆ ತಂದರು.
ಅಡ್ಡಾದಿಡ್ಡಿಯ ಹೊಲ ಮಾಡಿದರು
ಮಜಲು ಬೊಟ್ಟು ಗದ್ದೆ ಮಾಡಿದರು
ಕಟ್ಟ ಹುಣಿಯಲ್ಲಿ ಉತ್ತಮವಾದ ತೆಂಗಿನಮರ ಇಟ್ಟಿದ್ದಾರೆ.
ತೋಟದಲ್ಲಿ ಉತ್ತಮವಾದ ಅಡಕೆ ಮರ ಇಟ್ಟಿದ್ದಾರೆ
ಬಳ್ಳಿಯಲ್ಲಿ ಉತ್ತಮವಾದ ವೀಳ್ಯದೆಲೆ ಬಳ್ಳಿ ಇಟ್ಟಿದ್ದಾರೆ
ಕಾಡಿನಲ್ಲಿ ಉತ್ತಮವಾದ 'ಇರುವೆ ಮರ' ಇಟ್ಟಿದ್ದಾರೆ
ಬೆಟ್ಟಿನಲ್ಲಿ ಉತ್ತಮವಾದ ಹಲಸಿನ ಮರ ಇಟ್ಟಿದ್ದಾರೆ
ಎಡೆ ಮೋಡೆ ಕೋಣಗಳನ್ನು ಮಾಡಿದರು
ಕಾಳ ಕಬುಲ (ಎತ್ತು)ಗಳನ್ನು ಜೊತೆ ಮಾಡಿದರು
ಅಂಗಾರ ಮತ್ತು ಬಾಕುಡನನ್ನು ಜೊತೆ ಮಾಡಿದರು
ಕಾನದ ಮತ್ತು ಕಟದನನ್ನು ಆಳು ಮಾಡಿದರು
ಯಾರೋ, ಅಂಗರ, ಬಾಕುಡ ನಾಲ್ಕೆತ್ತು ತಿರುಗಿಸಬೇಕಲ್ಲ
ನಾಲ್ಕೆತ್ತು ತಿರುಗಿಸಲು, ಒಡೆಯಾ, ನೇಗಿಲು ಇಲ್ಲವಲ್ಲ
ಬೋವಿನ ಮರ ಕಡಿಸಿ, ಒಡೆಯಾ, ನೇಗಿಲಿನ ಮೊನೆ ಹಾಕಬೇಕಲ್ಲ,
ಯಾರೋ, ಅಂಗರ, ಬಾಕುಡ, ನಾಲ್ಕೆತ್ತು ತಿರುಗಿಸಬೇಕಲ್ಲ,
ನಾಲ್ಕೆತ್ತು ತಿರುಗಿಸಲು, ಒಡೆಯಾ, ನೇಗಿಲು ಮೊನೆಯ ಕಬ್ಬಿಣ (ಪನೊರು) ಇಲ್ಲವಲ್ಲ,
ಪಾವಲಿ ಹಿಡಿಯಬೇಕಲ್ಲ, ಒಡೆಯಾ, 'ಪನೊರು' ಹೊಡೆಸಬೇಕಲ್ಲ,
ಯಾರೋ, ಅಂಗರ, ಬಾಕುಡ ನಾಲ್ಕೆತ್ತು ತಿರುಗಿಸಬೇಕಲ್ಲ,
ನಾಲ್ಕೆತ್ತು ತಿರುಗಿಸಲು, ಒಡೆಯಾ, 'ಹಿಡಿ' (ನೇಗಿಲಿನ) ಇಲ್ಲವಲ್ಲ,
ಎರೆಹುಳ ಹಿಡಿಯಬೇಕಲ್ಲ, ಒಡೆಯಾ, ಹಿಡಿಯೊಂದು ಹೊಡೆಸಬೇಕಲ್ಲ,
ಯಾರೋ, ಅಂಗರ, ಬಾಕುಡ ನಾಲ್ಕೆತ್ತು ತಿರುಗಿಸಬೇಕಲ್ಲ,
ನಾಲ್ಕೆತ್ತು ತಿರುಗಿಸಲು, ಒಡೆಯಾ, ನೊಗವೊಂದು ಇಲ್ಲವಲ್ಲ,
ಹೊನ್ನೆಮರ ಕಡಿಯಬೇಕಲ್ಲ, ಒಡೆಯಾ, ನೊಗ ಕೆತ್ತಬೇಕಲ್ಲ,
ಯಾರೋ, ಅಂಗರ, ಬಾಕುಡ, ನಾಲ್ಕೆತ್ತು ತಿರುಗಿಸಬೇಕಲ್ಲ,
ನಾಲ್ಕೆತ್ತು ತಿರುಗಿಸಲು, ಒಡೆಯಾ, ಜೋಡಿ ಹಗ್ಗ ಇಲ್ಲವಲ್ಲ,

ಕೇರೆ ಹಾವನ್ನು ಹಿಡಿಯಬೇಕಲ್ಲ, ಒಡೆಯಾ, ಜೋಡಿ ಹಗ್ಗ ಹಾಕಬೇಕಲ್ಲ,
ಯಾರೋ, ಅಂಗರ, ಬಾಕುಡ, ನಾಲ್ಕೆತ್ತು ತಿರುಗಿಸಬೇಕಲ್ಲ,
ನಾಲ್ಕೆತ್ತು ತಿರುಗಿಸಲು, ಒಡೆಯಾ, ಕೊಂಟಿ ಹಗ್ಗ ಇಲ್ಲವಲ್ಲ
ಹಸಿ 'ಹರಂಬೋಲೆ' ಹಿಡಿಯಬೇಕಲ್ಲ, ಒಡೆಯಾ ಕೋಂಟಿ ಹಗ್ಗ ಹಾಕಬೇಕಲ್ಲ,
ಯಾರೋ, ಅಂಗರ, ಬಾಕುಡ, ನಾಲ್ಕೆತ್ತು ತಿರುಗಿಸಬೇಕಲ್ಲ,
ನಾಲ್ಕೆತ್ತು ತಿರುಗಿಸಲು, ಒಡೆಯಾ, ಕಟ್ಟುವ ಹಗ್ಗ ಇಲ್ಲವಲ್ಲ,
ಒಣಗಿದ 'ಹರಂಬೋಲೆ' ಹಿಡಿಯಬೇಕಲ್ಲ, ಒಡೆಯಾ, ಕಟ್ಟುವ ಹಗ್ಗ ಹಾಕಬೇಕಲ್ಲ,
ಯಾರೋ, ಅಂಗರ, ಬಾಕುಡ, ನಾಲ್ಕೆತ್ತು ತಿರುಗಿಸಬೇಕಲ್ಲ,
ನಾಲ್ಕೆತ್ತು ತಿರುಗಿಸಲು, ಒಡೆಯಾ, ಹಲಗೆ ಒಂದು ಇಲ್ಲವಲ್ಲ,
ಯಾರೋ ಅಂಗರ, ಬಾಕುಡ, ನಾಲ್ಕೆತ್ತು ತಿರುಗಿಸಬೇಕಲ್ಲ,
ನಾಲ್ಕೆತ್ತು ತಿರುಗಿಸಲು, ಒಡೆಯಾ, 'ಪುಡ್ಕಾಯಿ' (ಹಿಡಿಕೋಲು) ಒಂದು ಇಲ್ಲವಲ್ಲ,
ಬಿದಿರನ್ನು ಕಡಿಯಬೇಕಲ್ಲ, ಒಡೆಯಾ, 'ಪುಡ್ಕಾಯಿ' (ಹಿಡಿಕೋಲು) ಹಾಕಬೇಕಲ್ಲ,
ಹೊಲೆಯೋ ಹೊಲೆಯೆರೆ ಹೊಲಿ ಹೂವೆ ಹೋಯಿತು ಒಡೆಯಾ
ಯಾರೋ ಅಂಗರ, ಬಾಕುಡ, ನಾಲ್ಕೆತ್ತು ತಿರುಗಿಸಬೇಕಲ್ಲ,
ನಾಲ್ಕೆತ್ತು ತಿರುಗಿಸಲು ಒಡೆಯಾ ಎತ್ತನ್ನು ತರಬೇಕಲ್ಲ,
ಬಾಳೆಯ ಹಗ್ಗದಲ್ಲಿ, ಒಡೆಯಾ, ಬಂಧಿಸಿ ತರಬೇಕಲ್ಲ,
ಜರಡಿಯಲ್ಲಿ ಜಾಳಿಸಿ ತರಬೇಕಲ್ಲ, ಒಡೆಯಾ,
ಗೆರಸೆಯಲ್ಲಿ ಹಾರಿಸಿ ತರಬೇಕಲ್ಲ, ಒಡೆಯಾ
ತೆಂಗಿನ ಹಿಡಿಸೂಡಿಯಲ್ಲಿ, ಒಡೆಯಾ, ಬೀಸಿ ತರಬೇಕಲ್ಲ,
ಗಿಡ್ಡ ಹಿಡಿಸೂಡಿಯಲ್ಲಿ, ಒಡೆಯಾ, ಗುಡಿಸಿ ತರಬೇಕಲ್ಲ,
'ನೆಡಿಲ' ಕೋಲಿನಲ್ಲಿ, ಒಡೆಯಾ, ನೆಟ್ಟು ತರಬೇಕಲ್ಲ,
ನೆಕ್ಕಿಯ ಕೋಲಿನಲ್ಲಿ, ಒಡೆಯಾ, ಹೊಡೆದು ತರಬೇಕಲ್ಲ,
ಚಿಟ್ಟೆ ಸೊಪ್ಪಿನಲ್ಲಿ, ಒಡೆಯಾ, ತಿಕ್ಕಿ ತರಬೇಕಲ್ಲ,
ಚೂರಿ ಮುಳ್ಳಿನಲ್ಲಿ, ಒಡೆಯಾ, ಪೋಣಿಸಿ ತರಬೇಕಲ್ಲ,
ಹೊಲಿಯೋ ಹೊಲಿಯರೆ ಹೊಲಿ ಹೂವೆ ಹೋಯಿತು ಒಡೆಯಾ
ಹಾಗೆ ಹೇಳುವುದಾದರೆ ಬೆಳಗ್ಗಿನವರೆಗೆ ಇದೆ, ಒಡೆಯಾ
ಹೊಲಿ ಹೊಲಿಯೆರೆ ಹೊಲಿ ಹೂವೆ ಹೋಯಿತು ಒಡೆಯಾ)

'ಕರೆಂಗೋಲು' ಹಾಡಿನ ಮೊದಲನೆಯ ಸಂಕ್ಷಿಪ್ತ ಪಾಠದಲ್ಲಿ ಕರೆಂಗೋಲಿನ ಸ್ವರೂಪವನ್ನು ತಿಳಿಸಲಾಗಿದೆ. ಕರೆಂಗೋಲು ಇರುವ ಸ್ಥಳ, ಅದನ್ನು ಬಾಳೆಯ ಹಗ್ಗದಲ್ಲಿ ಕಟ್ಟಿ ತರುವ ಕ್ರಮವನ್ನು ಹೇಳಲಾಗಿದೆ. ನೆಕ್ಕಿಯ ಸೊಪ್ಪು, ಮಾನೇರಿನ ಕೋಲು – ಇವು ಕರೆಂಗೋಲಿನ ರೂಪದಲ್ಲಿ ಬಳಕೆಯಾಗುತ್ತವೆ ಎಂಬ ವಿಚಾರ ಗೊತ್ತಾಗುತ್ತದೆ. ಕರೆಂಗೋಲಿನ ಎರಡನೆಯ ದೀರ್ಘ ಪಾಠದಲ್ಲಿ ಕರೆಂಗೋಲಿನ ಸ್ವರೂಪಕ್ಕೆ ಸಂಬಂಧಿಸಿದ ವಿವರಗಳು ಇರುವಂತೆಯೇ, ಅದಕ್ಕೆ ಸಂಬಂಧವಿಲ್ಲದ ಕೇವಲ ರಂಜನೆಯ ಅನೇಕ ಮಾತುಗಳೂ ಬರುತ್ತವೆ. ಇಲ್ಲಿ ಹಾಡಿನ ಆರಂಭದಲ್ಲಿ 'ಪೊಲಿಯೋ ಪೊಲಿಯೆರೆ ಪೊಲಿ ಪೂವೆ ಪೋಂಡೆ' ಎನ್ನುವ ಪಲ್ಲವಿಯಂತಹ ಸಾಲು ಬರುತ್ತದೆ. 'ಕಬಿತ'ಗಳ ಅಧ್ಯಾಯದಲ್ಲಿ 'ಪೊಲಿ' ಶಬ್ದದ ವಿವರಣೆಯನ್ನು ನೋಡಲಾಗಿದೆ.

ಸಮೃದ್ಧಿಯಾಗಲಿ ಎನ್ನುವ ಅರ್ಥದಲ್ಲಿ ಇಲ್ಲಿಯೂ ಆ ಪದ ಪ್ರಯೋಗವಾಗಿದೆ. 'ಕರೆಂಗೋಲು' ಪದ ಹಾಡಿ ಕುಣಿಯುವ ಹರಿಜನರು ಆಯಾಯ ಮನೆಗಳಿಗೆ ಸಮೃದ್ಧಿಯ ಹಾರೈಕೆಯನ್ನು ಇಲ್ಲಿ ಕೊಡುತ್ತಾರೆ. ಒಡೆಯನಿಗೆ ಸಮೃದ್ಧಿಯ ಬೆಳೆಯಾದರೆ ಮಾತ್ರ, ಅತನಿಂದಾಗಿಯೇ ಬದುಕುವ ತಾನೂ ಕೂಡಾ ಬೆಚ್ಚಗಿರಬಲ್ಲೆ ಎನ್ನುವ ಅಭಿಪ್ರಾಯ ಈ ಹಾರೈಕೆಯಲ್ಲಿದೆ. ಕರೆಂಗೋಲು ಹುಟ್ಟಿದ ಸ್ಥಳ, ಸಂದರ್ಭಗಳನ್ನು ಹಾಡಿನ ಆರಂಭದ ಭಾಗದಲ್ಲಿ ವಿವರಿಸಲಾಗಿದೆ. ಹೊಳೆಯ ಬದಿಯಲ್ಲಿನ ಮಾದೇರಿನ ಕಾಡಿನ ಮಾದೇರೆ ಬೆತ್ತ ಅಥವಾ ನೆಕ್ಕಿಯ ಪೊದರಿನ ನೆಕ್ಕಿಯ ಸೊಪ್ಪು–ಇವು ಕರೆಂಗೋಲು ಆಗಿ ಬಳಕೆಯಾಗುವ ಸಾಮಗ್ರಿಗಳು ಎಂದು ಗೊತ್ತಾಗುತ್ತದೆ. ಇಂತಹ ಕರೆಂಗೋಲನ್ನು ತರುವ ಕೌಶಲ್ಯವೇನು ಎಂದು ವರ್ಣಿಸುವಲ್ಲಿ ಸಹಜವಾದ ಹಾಸ್ಯವಿದೆ. ಒಡತಿಯನ್ನು ಎಚ್ಚರಿಸುವಲ್ಲಿ ಅನ್ನ ಬಸಿಯುವ 'ಕುಡುಪು', ಒಡೆಯನನ್ನು ಎಚ್ಚರಿಸುವಲ್ಲಿ ನೀರಿನ ಚೆಂಬು, ಮಗುವನ್ನು ಎಬ್ಬಿಸಲು ಬಟ್ಟಲಿನಲ್ಲಿ ಹಾಲು ಅನ್ನ–ಈ ಉಪಾಯವನ್ನು ಹೇಳುವಲ್ಲಿ ಅವರವರ ಸ್ವಭಾವವನ್ನು ನವುರಾಗಿ ಹಾಸ್ಯ ಮಾಡಲಾಗಿದೆ. ಅಡುಗೆ ಮಾಡುವ ಒಡತಿ, ಉಣ್ಣಲು ಮೊದಲು ಕೈ ತೊಳೆಯುವುದಕ್ಕೆ ಚೆಂಬು ನೀರು ತೆಗೆದುಕೊಳ್ಳುವ ಒಡೆಯ, ಹಾಲನ್ನದ ಹೆಸರೆತ್ತಿದೊಡನೆಯೇ ಜಾಗೃತವಾಗುವ ಮಗು–ಈ ವಿಚಾರಗಳ ನಿರೂಪಣೆಯಲ್ಲಿ ವಾಸ್ತವಿಕ ಸಂಗತಿ ಸುಂದರವಾಗಿ ಪ್ರತಿಪಾದಿತವಾಗಿದೆ. ಒಡೆಯನ ವೃತ್ತಿ, ಅವನು ಮಾಡುವ ಬೇರೆ ಬೇರೆ ಕೆಲಸಗಳ ವಿವರಗಳು ಮುಂದೆ ಬರುತ್ತವೆ. ಬೇಸಾಯ ಪ್ರಧಾನವಾಗಿರುವ ತುಳುನಾಡಿನ ಹಳ್ಳಿಯ ಮನೆಯ ಒಡೆಯನೊಬ್ಬನ ಸಹಜಚಿತ್ರಣವನ್ನು ಇಲ್ಲಿ ನೋಡಬಹುದು. ದನ–ಎಮ್ಮೆಗಳನ್ನು ಹಾಲಿಗಾಗಿ ಸಾಕುವುದು, ಹೊಲ ಗದ್ದೆಗಳನ್ನು ಬೇಸಾಯ ಮಾಡುವುದು, ತೆಂಗಿನಮರ, ಅಡಿಕೆ ಮರ, ವೀಳ್ಯದೆಲೆ, ಇರುವೆ ಮರ, ಹಲಸಿನ ಮರಗಳನ್ನು ನೆಡುವುದು, ಹೊಲವನ್ನೇ ಉಳಲು ಕೋಣಗಳ ಜೊತೆ ಎತ್ತುಗಳ ಜೊತೆಯನ್ನು ಸಿದ್ಧಮಾಡುವುದು, ಆಳುಗಳನ್ನು (ಅಂಗರ, ಬಾಕುಡ) ಒಟ್ಟುಗೂಡಿಸುವುದು–ಈ ರೀತಿ ಆ ವಿವರಗಳನ್ನು ಸಂಗ್ರಹಿಸಲಾಗಿದೆ. ಮುಂದಿನ ಭಾಗ ಸಂಭಾಷಣೆಯ ಧಾಟಿಯಲ್ಲಿದೆ. ಒಡೆಯನು ಆಳುಗಳಲ್ಲಿ, ಹೊಲಗಳಲ್ಲಿ ನಾಲ್ಕೆತ್ತು ತಿರುಗಿಸಬೇಕು. ಅಂದರೆ ಹೊಲವನ್ನು ಉಳಬೇಕು ಎಂದು ಹೇಳುತ್ತಾ ಹೋಗುತ್ತಾರೆ, ಆದಕ್ಕೆ ಆಳುಗಳನ್ನು ಹೊಲವನ್ನು ಉಳಲು ಇರುವ ಕೆಲವು ಅಡ್ಡಿ ಆತಂಕಗಳನ್ನು ಹೇಳುತ್ತಾ ಹೋಗುತ್ತಾರೆ. ಹಳ್ಳಿಗಳ ಬೇಸಾಯಗಾರರಿಗೆ ಇರುವ ಸಣ್ಣಪುಟ್ಟ ತೊಂದರೆಗಳ ಪರಿಚಯ ಇಂತಹ ಪ್ರಸಂಗದಲ್ಲಿ ಆಗುತ್ತದೆ. ನೇಗಿಲು ಇಲ್ಲ, ಪನೋರು (ಕಬ್ಬಿಣದ ತುದಿ) ಇಲ್ಲ, ಹಿಡಿ (ಪತ್ತು) ಇಲ್ಲ, ನೊಗ ಇಲ್ಲ, ಪೊಣಕೆಯ (ಎತ್ತುಗಳನ್ನು ಜತೆ ಮಾಡುವ) ಹಗ್ಗ ಇಲ್ಲ, ಕೋಂಟಿ ಹಗ್ಗ (ನೊಗ ನೇಗಿಲುಗಳನ್ನು ಜೋಡಿಸುವ ಹಗ್ಗ) ಇಲ್ಲ, ಕಟ್ಟ ಬಲ್ಲೆ (ಕಟ್ಟುವ ಹಗ್ಗ) ಇಲ್ಲ, ಹಲಗೆ (ಉತ್ತು ಆದ ಮೇಲೆ, ಹೆಂಟೆಗಳನ್ನು ಸರಿಪಡಿಸಲು ಉಪಯೋಗಿಸುವ ಎಳೆಯುವ ಹಲಗೆ) ಇಲ್ಲ–ಇತ್ಯಾದಿ 'ಇಲ್ಲ'ಗಳ ಸರಪಳಿ ಬೆಳೆಯುತ್ತಾ ಹೋಗುತ್ತದೆ. ಮುಂದಿನ ಭಾಗದಲ್ಲಿ ಅಂದರೆ ಕೊನೆಯ ಭಾಗದಲ್ಲಿ 'ಕರೆಂಗೋಲು' ಕುಣಿತದ ಹೊಲೆಯರ ಹಾಸ್ಯಪ್ರಜ್ಞೆ ಹೆಚ್ಚು ಎದ್ದು ತೋರುತ್ತದೆ. ಹೊಲವನ್ನು ಉಳಲು ಎತ್ತುಗಳನ್ನೋ ಕೋಣಗಳನ್ನೋ ತರುವಾಗ, ಹೇಗೆ ತರಬೇಕು ಎನ್ನುವ ಪ್ರಶ್ನೆಗೆ ಬೇರೆ ಬೇರೆ ವಿಧಾನಗಳನ್ನು ತಮಾಷೆಯಾಗಿ ಹೇಳಲಾಗಿದೆ'. ಬಾಳೆಯ ಹಗ್ಗದಲ್ಲಿ ಬಂಧಿಸಿ, ಜರಡಿಯಲ್ಲಿ ಜಾಳಿಸಿ, ಗೆರಸೆಯಲ್ಲಿ ಹಾರಿಸಿ, ತೆಂಗಿನ ಹಿಡಿಸೂಡಿಯಲ್ಲಿ ಬೀಸಿ, ಗಿಡ್ಡ ಹಿಡಿಸೂಡಿಯಲ್ಲಿ ಗುಡಿಸಿ, 'ನೆಡಿಲ' ಕೋಲಿನಲ್ಲಿ ನೆಟ್ಟು, ನೆಕ್ಕಿಯ ಕೋಲಿನಲ್ಲಿ ಹೊಡೆದು, ಚಿಟ್ಟೆ ಸೊಪ್ಪಿನಲ್ಲಿ ತಿಕ್ಕಿ, ಚೂರಿ ಮುಳ್ಳಿನಲ್ಲಿ ಪೋಣಿಸಿ ತರಬೇಕು–ಇಲ್ಲೆಲ್ಲಾ ಅಸಂಭಾವ್ಯತೆಯನ್ನು ಹಾಸ್ಯಮಯವಾಗಿ ಹೇಳಲಾಗಿದೆ. ಆದರೆ ಈ ಮೂಲಕ ತುಳುವ ಸಂಸ್ಕೃತಿಯ ಬೇರೆ ಬೇರೆ ವಸ್ತುಗಳ ಸ್ವರೂಪವನ್ನು ಗಮನಿಸಬಹುದು. 'ಕರೆಂಗೋಲು' ಕುಣಿಯುವ ಹೊಲೆಯರ ಕೈಯಲ್ಲಿರುವ ಕಪ್ಪು ಕೋಲು ಅಥವಾ ನೆಕ್ಕಿ ಸೊಪ್ಪು ಈ ರೀತಿ ಹೊಲಗಳಿಗೆ ಎತ್ತುಗಳನ್ನು ತರುವ ತಂತ್ರದ ಸಾಧನಗಳಾಗಿರಬಹುದು. ಇಂತಹ ಹಾಡಿಗೆ ಕೊನೆಯಲ್ಲಿ, ಅದು ಇದೇ ರೀತಿ ಮುಂದುವರೆಯುತ್ತಾ ಹೋಗಬಹುದು ಎನ್ನುವುದಕ್ಕೆ ಹಾಡಿನ ಕೊನೆಯಲ್ಲಿ ಬರುವ ಒಂದು ಸಾಲು ಸ್ಪಷ್ಟ

ಸಾಕ್ಷಿಯಾಗುತ್ತದೆ–'ಅಂಡ ಪನ್‌ಪೆಂಡಾ ಪುಳ್ಯನೇಟ ಉಂಡುಯೇ ಉಳ್ಳಯಾ' (ಹಾಗೆ ಹೇಳುವುದಾದರೆ ಮುಂಜಾವದವರೆಗೂ ಹೇಳಬಹುದು, ಒಡೆಯಾ).

ಸುಗ್ಗಿಯ ಕಾಲದಲ್ಲಿ ಬೆಳೆಗಳನ್ನು ಕೊಯ್ದು ಆಗಿರುವುದರಿಂದ, ಎಲ್ಲ ಬೇಸಾಯಗಾರರ ಮನೆಗಳಲ್ಲೂ ಭತ್ತ ಸಮೃದ್ಧಿಯಾಗಿರುತ್ತದೆ. ಆಗ ಹೆಚ್ಚಾಗಿ ಹೊಲೆಯರು (ಅವರಿಗೆ ಹೊಲಗಳಾಗಲೀ ಅಥವಾ ಇತರ ಯಾವುದೇ ಆಸ್ತಿಯಾಗಲೀ ಇರುವುದಿಲ್ಲ) ಮನೆ ಮನೆಗಳಿಗೆ ಹೋಗಿ 'ಕರೆಂಗೋಲು' ಇಂತಹ ಹಾಡುಗಳನ್ನು ಹೇಳಿ, ಮನೆ ಯೊಡೆಯರಿಂದ ಭತ್ತ ಮತ್ತು ಇತರ ವಸ್ತುಗಳನ್ನು ಪಡೆಯುತ್ತಾರೆ. ಅದಕ್ಕಾಗಿ ಒಡೆಯರನ್ನು ಹೊಗಳು ತ್ತಾರೆ. ನೆಕ್ಕಿ ಸೊಪ್ಪನ್ನು ಹಾರೈಕೆಯ ರೂಪದಲ್ಲಿ ಬಡಿದು ಮನೆಯವರಿಗೆ ಶ್ರೇಯಸ್ಸನ್ನು ಕೋರುತ್ತಾರೆ.

## 4. ನಲಿಕೆಯವರ ಇತರ ಕುಣಿತದ ಹಾಡುಗಳು

ನಲಿಕೆಯವರ ಕುಣಿತದ ಹಾಡುಗಳಲ್ಲಿ ಇನ್ನೊಂದು ಹಾಡು ಈ ರೀತಿ ಇದೆ. ಮನೆ ಮನೆಗೆ ಬಂದು ಕುಣಿದು ಹಾಡಿ, ಆ ಮನೆಗಳಲ್ಲಿ ಕೊಟ್ಟ ವಸ್ತು, ದವಸಧಾನ್ಯಗಳನ್ನು ಪಡೆದುಕೊಂಡು ಹೋಗುತ್ತಾರೆ. ಈ ಹಾಡಿನಲ್ಲಿ ಆ ಕಸುಬಿನ ವಿಚಾರ ಹಾಸ್ಯಮಯವಾಗಿ ವರ್ಣಿತವಾಗಿದೆ. ಮನೆ ಮನೆಗೆ ಬಂದು ದಾನದ ಮಹತ್ವ ವನ್ನು ಹೊಗಳಿ, ಮನೆಯವರಿಂದ ಏನನ್ನಾದರೂ ಪಡೆಯುವ ಬುದ್ಧಿವಂತಿಕೆ, ಜಾಣತನ ಈ ಹಾಡಿನಲ್ಲಿ ವ್ಯಕ್ತವಾಗುತ್ತದೆ. ತಮಗೆ ಕೊಟ್ಟ ದಾನಗಳಿಂದ ಕೊಟ್ಟವರಿಗೆ ಶ್ರೇಯಸ್ಸಾಗುತ್ತದೆ ಎಂದು ಈ ಹಾಡಿನಲ್ಲಿ ಹೇಳಲಾಗಿದೆ:

"ನೂಲೊರು ಕೊಡಿ ಕೊರೆಂಬ ನೂತ್ರ ಗ್ರಾಚಾರೊ ಪರಿಯಾರೊ
ತರೆ ಬುಡಿನಾಯಗ್ ಎಣ್ಣೆದಾನೊ ಮಲ್ಪಡೇ
ಬಡವು ಕಟ್ಟಿನಾಯಗ್ ಉಣಿಪು ದಾನ ಮಲ್ಪೊಡೇ
ಅಂಗೈ ಬುಡುದು ಬತ್ತಿನಾಯಗ್ ಪಣವು ದಾನ ಮಲ್ಪೊಡೇ
ಪೇರ್ ಪರದೆ ಉಳ್ಳಾಕುಲೆ ಕೂಳಿ ಪೋವಂದೆ
ಪಕ್ಕಿ ತಿಂದ್‌ದ್ ಉಳ್ಳಾಯ ಒಕ್ಕಲ್‌ಪೋವಂದೇ
ಕೋರಿದ ಕಾರೆಗೆ ಗಜ್ಜೆ ಕಟ್ಟೆಂಡ ಇಲ್ಲ ಸುತ್ತ ಬರುವೆ
ಕಕ್ಕೆ ಕಾರೆಗೆ ಗಜ್ಜೆ ಕಟ್ಟೆಂಡ ನಾಲ್ ಊರುಗು ಪುದರತ್ತ"

(ಬಟ್ಟೆ ಚೂರು ಕೊಟ್ಟರೆ ನೂರಿಪ್ಪತ್ತು ಗ್ರಹಚಾರ ಪರಿಹಾರ
ತಲೆ (ಕೂದಲು) ಬಿಟ್ಟವನಿಗೆ ಎಣ್ಣೆ ದಾನ ಮಾಡಬೇಕು
ಹಸಿವು ಕಟ್ಟಿದವರಿಗೆ ಅನ್ನ ದಾನ ಮಾಡಬೇಕು
ಅಂಗೈ ಬಿಟ್ಟು ಬಂದವನಿಗೆ ದುಡ್ಡು ದಾನ ಮಾಡಬೇಕು
ಹಾಲು ಕುಡಿದು, ದನಿಗಳೇ, ಹಲ್ಲು ಹೋಗದು
ಹಕ್ಕಿ ತಿಂದು, ಧನಿಗಳೇ, ಒಕ್ಕಲು ಹೋಗದು

ಕೋಳಿಯ ಕಾಲಿಗೆ ಗೆಜ್ಜೆ ಕಟ್ಟಿದರೆ ಮನೆಯ ಸುತ್ತು ಬಂದೀತು
ಕಾಗೆಯ ಕಾಲಿಗೆ ಗೆಜ್ಜೆ ಕಟ್ಟಿದರೆ ನಾಲ್ಕು ಊರಿಗೆ ಹೆಸರಲ್ಲವೆ ?)

ಮೇಲಿನ ಹಾಡಿನಲ್ಲಿ ನಲಿಕೆಯವರು ತಮಗೆ ಬೇಕಾದ ವಸ್ತುಗಳನ್ನು ಪಡೆಯುವುದಕ್ಕಾಗಿ ದಾನದ ಹೆಸರನ್ನು ಬಳಸಿಕೊಂಡಿದ್ದಾರೆ. ಬಟ್ಟೆ, ಎಣ್ಣೆ, ಅನ್ನ, ದುಡ್ಡು–ಇತ್ಯಾದಿ ವಸ್ತುಗಳನ್ನು ಪಡೆಯುವ ಉಪಾಯ ಈ ಹಾಡಿನಲ್ಲಿದೆ. ನಲಿಕೆಯವರಿಗೆ ದಾನ ಕೊಟ್ಟರೆ ದಾನ ಮಾಡಿದವರಿಗೆ ಒಳ್ಳೆಯದಾಗುತ್ತದೆ ಎನ್ನುವ ನಂಬಿಕೆ ಈಗಲೂ ಹಳ್ಳಿಗಳಲ್ಲಿದೆ. ಅದರ ಮೂಲ ಉದ್ದೇಶ ಈ ಹಾಡಿನಲ್ಲಿ ತಿಳಿಯುತ್ತದೆ. ನಲಿಕೆಯವರು ಸಾಮಾನ್ಯವಾಗಿ ಉದ್ದನೆಯ ತಲೆಕೂದಲು ಬಿಟ್ಟಿರುತ್ತಾರೆ. 'ತಲೆಕೂದಲು ಬಿಟ್ಟವನಿಗೆ ಎಣ್ಣೆದಾನ ಮಾಡ ಬೇಕು' ಎನ್ನುವ ಮಾತಿನಲ್ಲಿ ಈ ವಿಚಾರ ಕಾಣಿಸುತ್ತದೆ. ಹಾಸ್ಯಮಯವಾಗಿ ದಾನವನ್ನು ಕೇಳುವ ರೀತಿ ಈ ಹಾಡಿನಲ್ಲಿದೆ. ಹಾಡಿನ ಕೊನೆಯ ಬಾಗ, ದಾನ ಮಾಡಬೇಕಾದ ಅಗತ್ಯವನ್ನು ತಮಾಷೆಯಾಗಿ ಆದರೆ ಸುಂದರವಾದ ಹೋಲಿಕೆಗಳ ಮೂಲಕ ಹೇಳುತ್ತದೆ. 'ಹಾಲು ಕುಡಿದರೆ ಹಲ್ಲು ಹೋಗುವುದಿಲ್ಲ, ಹಕ್ಕಿ ತಿಂದು ಒಕ್ಕಲು ಹೋಗುವುದಿಲ್ಲ' ಎನ್ನುವ ಮಾತುಗಳಲ್ಲಿ ಅಲ್ಪ ಸ್ವಲ್ಪ ದಾನ ಮಾಡಿದರೆ ನಷ್ಟವೇನೂ ಇಲ್ಲ ಎನ್ನುವ ಭಾವ ಕಾಣಿಸುತ್ತದೆ. ಹಾಲು – ಹಲ್ಲು, ಹಕ್ಕಿ – ಒಕ್ಕಲು – ಈ ಪದಗಳ ಪ್ರಾಸ ಗಮನಾರ್ಹ. 'ಕೋಳಿಯ ಕಾಲಿಗೆ ಗೆಜ್ಜೆ ಕಟ್ಟಿದರೆ ಮನೆಯ ಸುತ್ತ ಬಂದೀತು' 'ಕಾಗೆಯ ಕಾಲಿಗೆ ಗೆಜ್ಜೆ ಕಟ್ಟಿದರೆ ನಾಲ್ಕು ಊರಿಗೆ ಹೆಸರಲ್ಲವೇ ?' ಎನ್ನುವ ಸಾಲುಗಳು ಕಾವ್ಯಮಯವಾಗಿವೆ. ನಲಿಕೆಯವರು ತಮ್ಮನ್ನು ಕಾಗೆಗೆ ಹೋಲಿಸಿರುವುದು ಧ್ವನಿಪೂರ್ಣ ಮತ್ತು ಮಾರ್ಮಿಕ ಕಾಗೆಯಂತೆ ನಲಿಕೆಯವರ ಮೈಬಣ್ಣವು ಕಪ್ಪು. ಕಾಗೆಯಂತೆ ಅವರು ಊರು ಊರುಗಳಲ್ಲಿ ತಿರುಗುತ್ತಾರೆ. ಕಾಗೆಯಂತೆ ಸಿಕ್ಕಸಿಕ್ಕಲ್ಲಿ ಸಿಕ್ಕಿದ್ದನ್ನು ತಿನ್ನುತ್ತಾರೆ, ಆದರೂ ಸಮಾಜದಲ್ಲಿ ಜನರು ನಲಿಕೆಯವರನ್ನು ಕಾಗೆಗಳಂತೆ ಅಸ್ಪೃಶ್ಯ, ಹೀನ ಎಂಬ ಬಾವನೆಯಿಂದ ನೋಡುತ್ತಾರೆ ಎನ್ನುವ ಅರ್ಥವನ್ನೂ ಕಾಣಬಹುದು. ಇಂತಹ ನಲಿಕೆಯವರಿಗೆ ದಾನ ಮಾಡಿದರೆ ನಾಲ್ಕು ಊರುಗಳನ್ನು ತಿರುಗುವ ಇವರು, ದಾನ ಮಾಡಿದ ವ್ಯಕ್ತಿಯ ಗುಣಗಾನ ಮಾಡುತ್ತಾ ಹೋಗುತ್ತಾರೆ. ಇದರಿಂದ ದಾನಿಗೆ ಸಾಕಷ್ಟು ಹೆಸರೂ ಕೀರ್ತಿಯೂ ಬರುತ್ತದೆ. ಕಾಗೆಯ ಕಾಲಿಗೆ ಗೆಜ್ಜೆ ಕಟ್ಟಿದರೆ ನಾಲ್ಕು ಊರಿಗೆಲ್ಲ ಅದು ಗೊತ್ತಾಗುವಂತೆ, ನಲಿಕೆಯವರಿಗೆ ಮಾಡಿದ ದಾನ ಕೂಡಾ. ಆದರೆ ಕೋಳಿಯ ಕಾಲಿಗೆ ಗೆಜ್ಜೆ ಕಟ್ಟಿದರೆ ಅದು ಮನೆಯ ಸುತ್ತಷ್ಟೇ ಬಂದೀತು. ಅಂದರೆ ತಾನು ಸಾಕಿದ ಆಳುಗಳಿಗೆ ದಾನ ಮಾಡಿದರೆ ಅದು ಆ ಪರಿಸರ ದಲ್ಲಷ್ಟೇ ಉಳಿಯುತ್ತದೆ. ಹೊರಗೆಲ್ಲೂ ಪ್ರಸಾರವಾಗುವುದಿಲ್ಲ. ಸಾಕುವ ಕೋಳಿಯಂತೆ ಸಾಕುವ ಆಳುಗಳು ಯಾರದ್ದೇ ಅಂಕೆಯಿಲ್ಲದ ಕಾಗೆಗಳಂತೆ ನಲಿಕೆಯವರು. ಈ ಸಾದೃಶ್ಯ ವೈದೃಶ್ಯ ಅನುಪಮವಾಗಿದೆ. ದಾನ ಯಾಚಿಸುವ ಪುಸಲಾಯಿಸುವ ಧಾಟಿ, ನಲಿಕೆಯವರ ಜನಾಂಗದ ಮೇಲೆಯೇ ಕೇಂದ್ರೀಕೃತವಾಗುವ ಮಟ್ಟಕ್ಕೆ ಹೋಗಿ ಮುಟ್ಟುವುದನ್ನು ಗಮನಿಸಬಹುದು. ಈ ಹಾಡಿನ ಲಯ ಕುಣಿತಕ್ಕೆ ಅನುಕೂಲವಾಗಿದೆ. ಸಾಮಾನ್ಯ ವಾಗಿ 3 ಮಾತ್ರೆಗಳ ಉತ್ಸಾಹಲಯದಲ್ಲಿ ಕಾಣಿಸುತ್ತದೆ. ಅದು ಕುಣಿತಕ್ಕೆ ವಿಶಿಷ್ಟವಾದ ಗತಿ. ಆದ್ದರಿಂದಲೇ ಈ ಹಾಡು ಪ್ರಾಯೋಗಿಕವಾಗಿ ಕೂಡಾ ಹೆಚ್ಚು ಸಫಲವಾಗಿದೆ.

ಹರಿಜನರ ಲೇ ಲೇ ಲೇ ಲಾ ಎಂಬ ಸೊಲ್ಲಿನಿಂದ ಕೂಡಿದ ಸಾಕಷ್ಟು ದೀರ್ಘವಾದ ಹಾಡುಗಳು ಸಿಗುತ್ತವೆ. ಇಂತಹ ಹಾಡುಗಳಲ್ಲಿ ಜೀವನ ರಸಿಕತೆಯ ನಾನಾ ನಮೂನೆಗಳನ್ನು ಕಾಣಬಹುದು. ಅಂತಹ ಲೇ ಲೇ ಹಾಡು ಈ ರೀತಿ ಇದೆ :

"ಲೇ ಲೇ ಲಾ ಲೇ ಲೇ ಲೇ — ಯೇಣೂರೆಂಕವ್ಮಾ
ಲೇ ಲೇ ಲಾ ಲೇ ಲೇ ಲೇ —ಡೊಂಬೆರೆಂಕವ್ಮಾ
ಎಂಕುಳೆಂಕುಳೆ ಮೂವುನಳ್ಪೆ — ಯೇಣೂರೆಂಕವ್ಮಾ
ಕಾಯಿಂ ಪೆಲಕ್ಕಾಯಿಂ ಚಂಗುಳಿ — ಡೊಂಬೆರೆಂಕವ್ಮಾ
ತನಿ ಕಳಿ ಪರೋಡು — ಯೇಣೂರೆಂಕವ್ಮಾ
ದನಿವಂತೆ ಒಯಿಪ್ಪೊಡು — ಡೊಂಬೆರೆಂಕವ್ಮಾ
ಕಡ್ಯಡೆ ಕಳಿ ಉರ್ಕ್ಕರುಂಡು —ಯೇಣೂರೆಂಕವ್ಮಾ
ಕೊಡ್ಯನ್ ಮೀನ್ ಬೆಯ್ಪುಂಡು — ಡೊಂಬೆರೆಂಕವ್ಮಾ
ನಲಿಪಾಳೆಂದ್ ಬವುದೊಳುಂ — ಯೇಣೂರೆಂಕವ್ಮಾ
ವಾ ಊರ ಮಂಗಣೆ — ಡೊಂಬೆರೆಂಕವ್ಮಾ"

(ನಾವು ನಮ್ಮ ಮಾವನಲ್ಲಿ — ವೇಣೂರೆಂಕವ್ಮಾ
ಕಾಯಿ ಹಲಸಿನ ಚಂಗುಳಿ (ಮುದ್ದೆ) — ಡೊಂಬರೆಂಕವ್ಮಾ
ಸವಿಕಳ್ಳು ಕುಡಿಯಬೇಕು — ವೇಣೂರೆಂಕವ್ಮಾ
ದನಿ ತುಸು ಎಳೆಯಬೇಕು — ಡೊಂಬರೆಂಕವ್ಮಾ
ಗಡಿಗೆಯಲ್ಲಿ ಕಳ್ಳು ಉಕ್ಕುತ್ತದೆ — ವೇಣೂರೆಂಕವ್ಮಾ
ಕೊಡ್ಯನ್ ಮೀನು ಬೇಯುತಿದೆ —ಡೊಂಬರೆಂಕವ್ಮಾ
ಕುಣಿಯುವಳೆಂದು ಬಂದಿದ್ದಾಳೆ —ವೇಣೂರೆಂಕವ್ಮಾ
ಯಾವ ಊರ ವಯ್ಯಾರಿ — ಡೊಂಬರೆಂಕವ್ಮಾ)

ಮೇಲಿನ ಹಾಡಿನಲ್ಲಿ ಹರಿಜನರ ಬದುಕಿನ ಕ್ರಮವನ್ನು ನೋಡಬಹುದು. ಅವರು ತಿನ್ನುವ ಮತ್ತು ಕುಡಿಯುವ ವಸ್ತುಗಳ ವಿವರಣೆ ಇಲ್ಲಿ ಸಿಗುತ್ತದೆ. ಕಾಯಿ ಹಲಸಿನ ಮುದ್ದೆ, ಸವಿಯಾದ ಕಳ್ಳು ಇವುಗಳ ರುಚಿಯನ್ನು ಸವಿದು ಸವಿದು ಈ ಹಾಡಿನಲ್ಲಿ ಹೇಳಲಾಗಿದೆ. ಗಡಿಗೆಯಲ್ಲಿ ಉಕ್ಕುವ ಕಳ್ಳು, ಅದಕ್ಕೆ ನಂಜಿ ಕೊಳ್ಳಲು ಉಪಯೋಗಿಸುವ 'ಕೊಡ್ಯಾನ್' ಮೀನು ಇವು ಅವರ ಆಸ್ವಾದನೆಯ ಅಭಿರುಚಿಯನ್ನು ತಿಳಿಸುತ್ತದೆ. ಜೊತೆಗೆ ಕುಣಿಯುವ ವೈಯ್ಯಾರಿಯ ಆಕರ್ಷಣೆಯನ್ನು ಅವರು ಮರೆತಿಲ್ಲ. ಡೊಂಬರ ಹೆಣ್ಣು ವೆಂಕಮ್ಮಾ ವೇಣೂರಿನಿಂದ ಬಂದವಳು ಎನ್ನುವ ಮಾತು ಕುಣಿಯುವ ಹೆಣ್ಣನ್ನು ನಿರ್ದೇಶಿಸುತ್ತದೆ. 'ವೇಣೂರ ವೆಂಕಮ್ಮ' ಎನ್ನುವುದು ಶಬ್ದ ಸ್ವರೂಪಕ್ಕಾಗಿ ಬಂದಿದೆ, ತಿಂದು ಕುಡಿದು ದಿನದ ಬದುಕನ್ನು ಸುಖವಾಗಿ ಕಳೆಯುವ ಹರಿಜನರ ಜೀವನ ದೃಷ್ಟಿಗೆ ಅವರ ಈ ಹಾಡು ಕನ್ನಡಿ ಹಿಡಿಯುತ್ತದೆ. 'ಲೇ ಲೇ ಲೇ ಲಾ ಲೇ ಲೇ ಲೇ' ಎನ್ನುವ ಪಲ್ಲವಿ ಕುಣಿತದ ಸೊಗಸಿಗೆ ಪೋಷಕವಾಗಿದೆ. 'ಏಣೂರೆಂಕವ್ಮಾ' ಮತ್ತು 'ಡೋಂಬೆರೆಂಕವ್ಮಾ' ಎನ್ನುವ ಪದಗಳಿಂದ ಸಾಲು ಮುಕ್ತಾಯವಾಗುವಾಗ ಕುಣಿತದ ತಾತ್ಕಾಲಿಕ ನಿಲುಗಡೆಯನ್ನು ಕಾಣಬಹುದು.

## 4 ಇತರ ತುಳು ಜನಪದ ಗೀತೆಗಳು

### 1. ಉರಳ್

**ಹಾಡುವ ಹಿನ್ನೆಲೆ**

ತುಳು ಜನಪದ ಸಾಹಿತ್ಯದಲ್ಲಿ 'ಉರಲ್' (ಉರಳ್) ಎನ್ನುವುದು ಕೆಲಸದ ಹಾಡುಗಳ ಒಂದು ಚಿಕ್ಕ ಪ್ರಕಾರ. ಗಂಡಸರು ಹೊಲಗಳಲ್ಲಿ ಉಳುವಾಗ ಮತ್ತು ಗಾಡಿ ಹೊಡೆಯುವಾಗ 'ಉರಳ್' ಹೇಳುತ್ತಾರೆ. ಹೆಂಗಸರು ನೇಜಿಯ ವೇಳೆ ಕಬಿತ ಹೇಳಿದ ಮೇಲೆ 'ಉರಳ್' ಹೇಳುತ್ತಾರೆ. ಈ ಉರಳ್ ಹೇಳಿದ ಮೇಲೆ 'ಓ ಓ ಓ ಓ' ಎನ್ನುತ್ತಾರೆ. 'ಇದಕ್ಕೆ ಉರಳ್ ಕೊಡುವುದು' ಎಂದು ಹೆಸರು.

**ರಾಚನಿಕ ಸ್ವರೂಪ**

ಎರಡು ಸಾಲುಗಳು ಉಳ್ಳ 'ಉರಳ್' ಛಂದಸ್ಸಿನ ದೃಷ್ಟಿಯಿಂದ 'ದ್ವಿಪದಿ'ಯ ಜಾತಿಗೆ ಸೇರುತ್ತದೆ. ಇದು ಸಾಮಾನ್ಯವಾಗಿ ಕನ್ನಡದ ಚುಟುಕಗಳನ್ನು ಹೋಲುತ್ತದೆ. ಇದರಲ್ಲಿ ಎರಡು ವಾಕ್ಯಗಳು ಇರುತ್ತವೆ. ಕೆಲಸದ ಹಾಡುಗಳಾದ ಉರಳ್‌ಗಳ ರಾಚನಿಕ ಸ್ವರೂಪಕ್ಕೂ ಆ ಕೆಲಸಗಳಿಗೂ ಸಂಬಂಧವನ್ನು ಕಾಣಬಹುದು. ಉರಳ್‌ಗಳ ಲಯ ಮತ್ತು ಅವುಗಳನ್ನು ಹಾಡುವ ರೀತಿ – ಇದು ಉಳುವಾಗ ಮತ್ತು ಗಾಡಿ ಹೊಡೆಯುವಾಗ ಅನುಕೂಲಕರವಾಗಿ ಕಾಣಿಸುತ್ತದೆ. ರಾಗಪೂರ್ವಕವಾಗಿ ಎಳೆದು ಹೇಳುವ 'ಉರುಳ್' ಉಳುವ ಅಥವಾ ಗಾಡಿ ಎಳೆಯುವ ಎತ್ತುಗಳಿಗೆ ಉತ್ತೇಜನವನ್ನು ಕೊಟ್ಟು, ಅವು ಲವಲವಿಕೆಯಿಂದ ಮುಂದಕ್ಕೆ ಹೋಗಲು ಸಹಾಯಕವಾಗುತ್ತದೆ. ಉರಳಿನ ಪಠ್ಯ ಭಾಗದಲ್ಲಿರುವ ಲಯವು ಉಳುವ ಮತ್ತು ಗಾಡಿ ಎಳೆಯುವ ಕೆಲಸದ ಲಯಕ್ಕೆ ಹೊಂದಿಕೆಯಾಗುತ್ತದೆ. ಪ್ರತಿ ಪದದ ಕೊನೆಯಲ್ಲಿ ಎಳೆದು ದೀರ್ಘವಾಗಿ ಉಚ್ಚರಿಸುವ ಕಾರಣ, ಕೆಲಸದ ಒಂದೊಂದು ಗತಿಯೂ ಮುಂದಿನ ಗತಿಗೆ ಸಂಬಂಧದ ಕೊಂಡಿಯನ್ನು ಕೊಡುತ್ತದೆ. ಇದಕ್ಕೆ ಹೆಚ್ಚು ಪೂರಕವಾಗಿ 'ಓ ಓ ಓ ಓ' ಎಂದು ಕೊಡುವ 'ಉರಳ್' ಕ್ರಿಯಾತ್ಮಕವಾಗಿದೆ.

ಉದಾ :

1) ಕುಮರಡ್ಕದ । ಕುಡುವೋ । ಕಾಳಗೇ ।
ಕಾಯೆರಡ್ಕದಾ । ಬಹುವೋ ।ಬೊಳ್ಳಗೇ । ॥ ಓ ಓ ಓ ಓ ವ್ವಾ ॥

2) ಗಾಳಿಗಪ್ಪಾ । ಪೋಪುಂಡೋ । ಗೋಳಿದಾ । ಗೆಲ್ಲೇ ।
ದೋಲುಗಪ್ಪಾ । ನಲಿಪ್ಪವೇ । ಜವ್ವನಾ । ದಿಕ್ಕೇ ೀೀ । ॥ ಓ ಓ ಓ ಓ ವ್ವಾ ॥

3) ಕದ್ರುದಾ । ಪದವುಡೂ । ಕರುೀ । ರಾಪುಂಡು ।
ತೆಟ್ಯಾಲೇ । ಮುಂಡೆಗ್ ೀೀ । ತೆಡಿಲೆ ೀೀ । ಹಾಕುಂಡು । ಓ ಓ ಓ ಓ ವ್ವಾ ॥

ಮೇಲಿನ ನಿದರ್ಶನಗಳಲ್ಲಿ ಕಾಣುವಂತೆ, ಉರಳ್‌ನ ಪ್ರತಿಯೊಂದು ಗಣದ ಕೊನೆಯ ಅಕ್ಷರ ದೀರ್ಘವಾಗಿ ಎಳೆದು ಉಚ್ಚಾರಣೆಗೊಳ್ಳುತ್ತದೆ. ಹೆಚ್ಚಾಗಿ ಪ್ರತಿ ಸಾಲಿನಲ್ಲಿ 4 ಗಣಗಳು ಬರುವುದನ್ನೂ ಸಾಲುಗಳಲ್ಲಿ ಅಂತ್ಯಪ್ರಾಸ ಇರುವುದನ್ನೂ ನೋಡಬಹುದು. ಗಾಡಿಯ ಗಾಲಿಗಳು ತಿರುಗುವ ಚಲನೆಗೂ ಗಣದ ಕೊನೆಯಲ್ಲಿ ದೀರ್ಘಾಕ್ಷರ ಉಳ್ಳ ನಾಲ್ಕು ಗಣಗಳ ಸಾಲಿನ ರಚನೆಗೂ ಸಾವಯವ ಸಂಬಂಧವಿದೆ. ಹಾಗೆಯೇ ಹೊಲದಲ್ಲಿ ಉಳುವಾಗ ನೇಗಿಲನ್ನು ಎಳೆದುಕೊಂಡು ಹೋಗುವ ಎತ್ತುಗಳ ಚಲನೆಯಲ್ಲಿ ಪ್ರತಿಯೊಂದು ಬಾರಿಯ ಎಳೆತಕ್ಕೂ ಉರಳ್‌ನ ಗಣದ ಕೊನೆಯ ಅಕ್ಷರದ ದೀರ್ಘತೆಗೂ ನೇರ ಸಂಬಂಧವಿದೆ. ಗಾಡಿಯ ಚಕ್ರದ ಆವರ್ತನ ಅಥವಾ ನೇಗಿಲಿನ ಒಂದು ಅವಧಿಯ ಎಳೆತ– ಇದರ ಕಾಲಾವಧಿಗೆ ಅನುಸಾರವಾಗಿ ಉರಳ್‌ನಲ್ಲಿ ಹೆಚ್ಚಾಗಿ 'ವಿಷ್ಣುಗಣ'ಗಳು ಬಳಕೆಯಾಗಿರುವುದನ್ನು ಗಮನಿಸಬಹುದು. ಕೆಲವೊಂದು ಶಬ್ದಗಳು ಬ್ರಹ್ಮಗಣದ ಸ್ವರೂಪದಲ್ಲಿ ಕಾಣಿಸಿಕೊಂಡರೂ ಹಾಡುವಿಕೆಯಲ್ಲಿ ಅಕ್ಷರಗಳ ಎಳೆತದಿಂದಾಗಿ, ವಿಷ್ಣುಗಣದ ವ್ಯಾಪ್ತಿಯಲ್ಲಿ ಅವು ವರ್ತಿಸುತ್ತವೆ. 'ಉರಳ್' ಪಠ್ಯ ಭಾಗದ ಕೊನೆಯಲ್ಲಿ 'ಓ ಓ ಓ ಓ ವ್ವಾ' ಎಂದು ದನಿಗೊಡುವ ರೀತಿ, ಆಯಾಸಗೊಂಡ ಎತ್ತುಗಳಿಗೆ ಹೊಸ ಚೈತನ್ಯವನ್ನು ಕೊಡುವುದರ ಜೊತೆಗೆ ಗಾಡಿ ಹೊಡೆಯುವ ಅಥವಾ ಉಳುವ ವ್ಯಕ್ತಿಗೂ ಉತ್ಸಾಹವನ್ನು ಉಂಟುಮಾಡುತ್ತದೆ.

**'ಉರಲ್' ಶಬ್ದದ ನಿಷ್ಪತ್ತಿ**

Tulu - English Dictionary ಯಲ್ಲಿ ಸಿಗುವ ವಿವರಣೆ[1] :

ಉರ = Ploughing.

ಉರಲ್ = a plough-man or a cow-boy singing at the top of his voic while at work. ಉರಲ್ ಕೊರ್ಪುನಿ.

ಉರವೆ = a Person who ploughs

Dravidian Etymological Dictionary ಯಲ್ಲಿ ಸಿಗುವ ಬೇರೆ ಬೇರೆ ದ್ರಾವಿಡ ಭಾಷೆಗಳಲ್ಲಿನ ಶಬ್ದ ರೂಪ ಹಾಗೂ ಅರ್ಥ ವಿವರಣೆ[2]:

ತಮಿಳು : ಉ ಟಿ = to plough, dig up, root up, scratch.

ಉ ಟವಣ್ = ploughman; agriculturist.

ಉ ಟೌಲ್ = Ploughing; scratching or probling (as bees the flowers)

---

1. Mariappa Bhat M. and Shankara Kedilaya A. (Dr) : "Tulu-English Dictionary" Madras University of Madras, 1967.
2. Burrow T. and Emeneau M. B. : "A Dravidian Etymological Dictionary, Oxford,1961. P. 53.

ಮಲೆಯಾಳಂ : ಉ ಟವು = tillage.

ಕನ್ನಡ : ಉ ಟು = to plough

ಉ ಟಲ್ = pluoghing

ಕೋಲಾಮಿ : ಉರ್ = to plough

ನಾಯ್ಕಿ : ಉರ್ = to plough

ಪರ್ಜಿ : ಉಱ್ = to plough

ಮೂಲದ್ರಾವಿಡದ 'ಱ್' ತುಳುವಿನಲ್ಲಿ 'ರೆ' ಆಗಿ ಪರಿವರ್ತನೆಗೊಳ್ಳುತ್ತದೆ.

ಉದಾ : ಬಾ ಟಿ (ಕ) — ಬಾರೆ (ತು) ಕೋಟಿ (ಕ) — ಕೋರಿ (ತು) — ಇತ್ಯಾದಿ. ಆದ್ದರಿಂದ ತಮಿಳು, ಕನ್ನಡಗಳ 'ಉಟು' ತುಳುವಿನಲ್ಲಿ 'ಉರು' ಆಗುತ್ತದೆ. 'ಉರು'ವಿನಿಂದ 'ಉರಲ್' ಬಂದಿದೆ. ಆದ ಕಾರಣ 'ಉರಲ್' ಎಂದರೆ 'ಉಳುವುದಕ್ಕೆ ಸಂಬಂಧಿಸಿದ್ದು' ಎಂದು ಅರ್ಥಬರುತ್ತದೆ. ಈ ದೃಷ್ಟಿಯಿಂದ 'ಉರಲ್' ಎನ್ನುವುದಕ್ಕೆ 'ಉಳುವಾಗ ಹೇಳುವ ಹಾಡು' ಎಂಬ ಅರ್ಥ ಸರಿಹೊಂದುತ್ತದೆ. ಮೂಲತಃ ಉಳುವಾಗ ಹೇಳುತ್ತಿದ್ದ ಈ 'ಉರಲ್', ಆಮೇಲೆ ಗಾಡಿ ಹೊಡೆಯುವಾಗಲೂ ಬಳಕೆಯಾಗಿರಬೇಕು.

## ಉರಳ್‌ಗಳ ವಸ್ತು

ಎರಡು ಸಾಲಿನ ಜನಪದ ಹಾಡುಗಳಾದ 'ಉರಳ್'ಗಳಲ್ಲಿ ಹಾಸ್ಯ ಸಾಮಾನ್ಯವಾಗಿ ಸೇರಿಕೊಂಡಿರುತ್ತದೆ. ಉರಳ್‌ಗಳ ವಸ್ತುವಿಗೂ ಅದನ್ನು ಹಾಡುವ ಸಂದರ್ಭ (ಅಂದರೆ-ಉಳುವುದು, ಗಾಡಿ ಹೊಡೆಯುವುದು, ನೇಜಿ ನೆಡುವ ಕಬಿತಗಳ ಬಳಿಕದ ಸಂದರ್ಭ) ಗಳಿಗೂ ಅನೇಕ ಬಾರಿ ಯಾವುದೇ ಸಂಬಂಧ ಕಾಣಿಸುವುದಿಲ್ಲ. ಆದರೆ ಕೆಲವೊಮ್ಮೆ ಅಪೂರ್ವವಾಗಿ ಈ ಸಂಬಂಧವನ್ನು ಕಾಣಬಹುದು. ಕೆಲವು 'ಉರಳ್'ಗಳ ಉದಾಹರಣೆಗಳನ್ನು ಅಧ್ಯಯನಕ್ಕಾಗಿ ಇಲ್ಲಿ ಬಳಸಿಕೊಳ್ಳಲಾಗಿದೆ.

1. ಕುಮುರಡ್ಕದ ಕುಡುವೋ ಕಾಳಗ್
ಕಾಯೆರಡ್ಕದ ಬಡುವೋ ಬೊಳ್ಳಗ್ ॥ ಓ ಓ ಓ ಓ ವ್ವಾ ॥

(ಕುಮೇರಿಯಲ್ಲಿ ಬೆಳೆದ ಹುರುಳಿ ಕಾಳ (ಕಪ್ಪು) ಎತ್ತಿಗೆ;
ಕಾಸರಕನ ಕಾಡಿನ ಬೆತ್ತ ಬೊಳ್ಳ (ಬಿಳಿಯ) ಎತ್ತಿಗೆ)

ಈ ಉರಳ್‌ನಲ್ಲಿ ಶಬ್ದಗಳ ಜೋಡಣೆಯ ಸೊಗಸನ್ನು ಗಮನಿಸಬಹುದು. ಪ್ರಾಸದ ವಿವಿಧ ವಿನ್ಯಾಸಗಳು ಈ ದ್ವಿಪದಿ ರೂಪದ 'ಉರಳ್'ನಲ್ಲಿ ಕಾಣಿಸುತ್ತವೆ. 'ಕುಮುರಡ್ಕದ', 'ಕಾಯೆರಡ್ಕದ' ಎನ್ನುವ ಪದಗಳ ಜೋಡಣೆ, 'ಬಡು' ಮತ್ತು 'ಕುಡು' ಎನ್ನುವ ಪದಗಳ ಸ್ವರೂಪ, 'ಕಾಳಗ್' 'ಬೊಳ್ಳಗ್' ಎನ್ನುವ ಶಬ್ದರೂಪಗಳು-ಸಮತೂಕವುಳ್ಳ ಕಾವ್ಯ ಶಿಲ್ಪವನ್ನು ತೋರಿಸುತ್ತವೆ. ಅರ್ಥದ ದೃಷ್ಟಿಯಿಂದಲೂ ಈ ಉರಳ್‌ನ ಸ್ವಾರಸ್ಯವನ್ನು ಗಮನಿಸಬಹುದು. ರೈತನು ಉಳುತ್ತಿರುವಾಗ ತನ್ನ ಎರಡು ಎತ್ತುಗಳಿಗೆ ಕೊಡಬೇಕೆಂದಿರುವುದು ಏನು ಎಂಬುದನ್ನು ಇಲ್ಲಿ ನವುರಾಗಿ ಹೇಳಲಾಗಿದೆ. ಸರಿಯಾಗಿ ನೊಗ, ನೇಗಿಲು ಎಳೆಯುವ

ಕಾಳ ಎತ್ತಿಗೆ ಹುರುಳಿ, ಸರಿಯಾಗಿ ಎಳೆಯದ ಬೊಳ್ಳ ಎತ್ತಿಗೆ ಬೆತ್ತದ ಪೆಟ್ಟು, ಕೆಲಸಕ್ಕೆ ತಕ್ಕ ಪ್ರತಿಫಲ ಎಂಬ ತತ್ತ್ವವನ್ನು ಈ ಎರಡು ಸಾಲಿನ ಕವನದಲ್ಲಿ ಪ್ರತಿಪಾದಿಸಲಾಗಿದೆ. ಈ ಉರಳ್ ಅನ್ನು ಹೊಲ ಉಳುವಾಗ ಮಾತ್ರವಲ್ಲ, ಗಾಡಿ ಹೊಡೆಯುವಾಗಲೂ ಬಳಸುತ್ತಾರೆ. ಎರಡು ಎತ್ತುಗಳ ಕೆಲಸದ ತಾರತಮ್ಯವನ್ನು ಗಮನಿಸಿಕೊಂಡು ಅವುಗಳಿಗೆ ಕೊಡುವ ಬಹುಮಾನ ಮತ್ತು ಶಿಕ್ಷೆ–ಇದು ಇಲ್ಲಿನ ಉರಳ್‌ಗಳ ವಸ್ತು. ಈ ದೃಷ್ಟಿಯಿಂದ ಈ ಉರಳ್‌ನ ವಸ್ತುವಿಗೂ ಇದನ್ನು ಹಾಡುವ ಸಂದರ್ಭ (ಉಳುವುದು, ಗಾಡಿ ಹೊಡೆಯುವುದು) ಕ್ಕೂ ನೇರ ಸಂಬಂಧವನ್ನು ಕಾಣಬಹುದು.

2. ಗಾಳಿಗಪ್ಪಾ ಪೋಪುಂಡೋ ಗೋಳಿದಾ ಗೆಲ್ಲೆ
ದೋಲುಂಗಪ್ಪಾ ನಲಿಪ್ಪುವೇ ಜವ್ವನಾ ದಿಕ್ಕೇ ॥ ಓ ಓ ಓ ಓ ವ್ವಾ ॥

(ಗಾಳಿಗೆ ಹೋಗುತ್ತದೆ ಗೋಳಿಯ ಗೆಲ್ಲು
ದೋಲಿಗೆ ನಲಿಯುತಿಹನು ತರುಣ ಹೊಲೆಯನು.)

ಈ ಉರಳ್‌ನಲ್ಲಿ ಕೂಡಾ ಎರಡು ಸಾಲುಗಳ ನಡುವೆ ಸಮತೂಕವನ್ನು ಕಾಣಬಹುದು. 'ಗಾಳಿ' ಮತ್ತು 'ದೋಲು' ಎನ್ನುವ ಪದಗಳಲ್ಲಿನ ಆದಿಪ್ರಾಸವನ್ನು ಗುರುತಿಸಬಹುದು. ಅರ್ಥದ ದೃಷ್ಟಿಯಿಂದ ಈ ಉರಳ್‌ನಲ್ಲಿ ವಿಶೇಷವೇನೂ ಕಾಣುವುದಿಲ್ಲ. ಹೊಲೆಯ ತರುಣನೊಬ್ಬನು ದೋಲಿನ (ಒಂದು ಚರ್ಮವಾದ್ಯ– ಸಾಮಾನ್ಯವಾಗಿ ಹರಿಜನರು ತಮ್ಮ ಕುಣಿತಗಳಿಗೆ ಉಪಯೋಗಿಸುತ್ತಾರೆ) ಬಡಿತಕ್ಕೆ ಸರಿಯಾಗಿ ಕುಣಿಯುವ ದೃಶ್ಯವನ್ನು ಇಲ್ಲಿ ಹೇಳಲಾಗಿದೆ. ತುಳುನಾಡಿನ ಹಳ್ಳಿಗಳಲ್ಲಿ ಹೊಲೆಯರು ದೋಲು ಬಡಿದು ಕುಣಿಯುವುದು ಸಾಧಾರಣವಾಗಿ ಕಾಣುತ್ತಿದ್ದ ಸಂಗತಿ. ಇಂದು ಅದು ಬಹಳ ಕಡಿಮೆಯಾಗುತ್ತಾ ಬಂದಿದೆ. ಅಂತಹ ಒಂದು ಚಿತ್ರವನ್ನು ಇಲ್ಲಿ ಕೊಡಲಾಗಿದೆ, ಆದರ ಆರಂಭದ ಸಾಲು ಅಂತಹ ವಿಚಾರಕ್ಕೆ ವಿಶೇಷವಾದ ಯಾವುದೇ ಸಂಬಂಧವನ್ನು ಕೊಡುವುದಿಲ್ಲ. 'ಗೋಳಿ ಮರದ ಗೆಲ್ಲು ಗಾಳಿಗೆ ಹಾರುತ್ತಿದೆ' ಎನ್ನುವಲ್ಲಿ ಗಾಳಿಯ ಬೀಸು ವಿಕೆಯಿಂದ ಪ್ರಕೃತಿಯಲ್ಲಿ ಆಗುವ ಚಲನೆಯನ್ನು ತಿಳಿಸಲಾಗಿದೆ. ಜೊತೆಗೇ ಒಂದು ಆನಂದದ ವಾತಾವರಣವನ್ನು ಅದು ಸೃಷ್ಟಿಸುತ್ತದೆ ಎನ್ನುವ ಭಾವನೆಯು ಬರುತ್ತದೆ. ಇಂತಹ ಉತ್ಸುಕ ವಾತಾವರಣದಲ್ಲಿ ದೋಲಿನ ಬಡಿತಕ್ಕೆ ಅನುಗುಣವಾಗಿ ಹೊಲೆಯ ತರುಣನೊಬ್ಬನು ಕುಣಿದಿರಬೇಕು. "ಗಾಳಿ" ಮತ್ತು "ಗೋಲಿ" ಎನ್ನುವ ಪದಗಳ ರೂಪ ಸಾದೃಶ್ಯವನ್ನು ಇಲ್ಲಿ ನೋಡಬಹುದು. ಹೆಚ್ಚಿನ ಉರಳ್‌ಗಳು ಹೊಲೆಯರು ರಚಿಸಿದವುಗಳು ಎನ್ನುವ ಭಾವನೆ ಉಂಟಾಗುತ್ತದೆ. ಕಾರಣ - ಅವುಗಳ ವಸ್ತುವಿನ ದೃಷ್ಟಿಯಿಂದ ಹೊಲೆಯರ ಪ್ರಸ್ತಾಪ ಅವುಗಳಲ್ಲಿ ಬರುತ್ತದೆ. ಭಾಷೆಯ ದೃಷ್ಟಿಯಿಂದಲೂ ಇಂತಹ ಉರಳ್‌ಗಳಲ್ಲಿ ಹರಿಜನರ ತುಳುವಿನ ಸ್ವರೂಪವನ್ನು ನೋಡಬಹುದು. ಉದಾ : ಮುಂದಿನ "ಉರಳ್"ಗಳನ್ನು ಈ ದೃಷ್ಟಿ ಕೋನದಿಂದಲೂ ಗಮನಿಸಬಹುದು.

3. ಎಂಕುಳೆ ಬೊಳ್ಳೇ ಪೋವಂದಿ ಕಂಬುಳ ಇದ್ದಿ
ಎಂಕುಳೆ ಉಳ್ಳಯೇ ಪೋವಂದಿ ಪೊಣ್ಣು ಇದ್ದಿ ॥ ಓ ಓ ಓ ಓ ವ್ವಾ ॥

(ನಮ್ಮ ಬೊಳ್ಳ (ಬಿಳಿಯ ಎತ್ತು) ಹೋಗದ ಕಂಬಳ ಇಲ್ಲ.
ನಮ್ಮ ಒಡೆಯ ಹೋಗದ ಹೆಣ್ಣು ಇಲ್ಲ.)

ಹೊಲೆಯನೊಬ್ಬನು ಹೇಳುವ ರೀತಿಯಲ್ಲಿ ಈ 'ಉರಳ್' ರಚನೆಯಾಗಿದೆ. ಕಂಬಳಕ್ಕೆ ಎಲ್ಲ ಕಡೆಗಳಿಗೂ ಹೋಗುವ ಬೊಳ್ಳ (ಬಿಳಿಯ ಎತ್ತು)—ಇದರ ಬಗ್ಗೆ ಬಹಳ ಹೆಮ್ಮೆಯಿಂದ ಹೊಲೆಯನು ಇಲ್ಲಿ ಅದನ್ನು ಸಾರುತ್ತಿದ್ದಾನೆ. ಎಲ್ಲ ಕಂಬಳಗಳಲ್ಲಿಯೂ ಗೆದ್ದು ಜಯಭೇರಿ ಹೊಡೆಯುವ ಅದರ ಬಗ್ಗೆ ಅದರ ಒಟ್ಟಿಗೆ ಹೋಗಿರಬಹುದಾದ ಹೊಲೆಯನೊಬ್ಬನ ಅಭಿಮಾನ, ಗೌರವ ಇಲ್ಲಿ ವ್ಯಕ್ತವಾಗುತ್ತದೆ. ಎರಡನೆಯ ಸಾಲಿನಲ್ಲಿ ಹೊಲೆಯನು ತನ್ನ ಧಣಿಯ (ಒಡೆಯ) ಬಗ್ಗೆ ಹೇಳುತ್ತಿದ್ದಾನೆ. ತನ್ನ ಧಣಿಯು ಪಡೆಯದ ಹೆಣ್ಣೇ ಇಲ್ಲ ಎಂದು ಹೇಳುವ ಮಾತು ಅವನ ಧಣಿ ಸಾಕಷ್ಟು ರಸಿಕ ಮತ್ತು ವಿಷಯಲಂಪಟ ಎನ್ನುವ ಅರ್ಥವನ್ನು ಕೊಡುತ್ತದೆ. ಆದರೆ ಅಂತಹ ಧಣಿಯ ಬಗ್ಗೆ ಅವನ ಸೇವಕ ಹೊಲೆಯನು ತಾಳಿರುವ ಭಾವನೆ ತಿರಸ್ಕಾರದ್ದು ಅಲ್ಲ. ಬದಲಾಗಿ ಹೆಮ್ಮೆಯದ್ದು, ಅಭಿಮಾನದ್ದು. ಏಕೆಂದರೆ, ಒಂದು ಕಾಲಕ್ಕೆ ತುಳುನಾಡಿನ ಹಳ್ಳಿಗಳಲ್ಲಿ ಧಣಿಗಳು ಅಂದರೆ ಭೂಮಿಯ ಒಡೆಯರು ಸಾಕಷ್ಟು ಹೆಣ್ಣುಗಳ ಸಂಪರ್ಕವನ್ನು ಇಟ್ಟುಕೊಂಡಿದ್ದರು. ಮಂದುವೆಯಾದ ವ್ಯಕ್ತಿಗಳಿಗೆ ಇನ್ನೂ ಕೆಲವು ಹೆಣ್ಣುಗಳು ಉಪಪತ್ನಿಯರ ಹಾಗೆ ಇರುತ್ತಿದ್ದರು. ಈ ರೀತಿ ಅನೇಕ ಹೆಣ್ಣುಗಳನ್ನು ಒಬ್ಬ ಗಂಡು ಇಟ್ಟುಕೊಂಡಿರುವುದು ಆ ಕಾಲಕ್ಕೆ ಸಮಾಜದಲ್ಲಿ ಹೆಮ್ಮೆಯ ವಿಷಯ ವಾಗಿತ್ತು. ಅವನಾಗಲೀ ಅವನ ಆಳುಗಳಾಗಲೀ ಈ ಸಂಗತಿಯನ್ನು ಒಂದು ಅಭಿಮಾನದ ವಿಷಯದ ಹಾಗೆ ಸಾರುತ್ತಿದ್ದರು. ಕಂಬಳಕ್ಕೆ ಒಂದು ಎತ್ತು ಹೋಗಿ ಜಯಗಳಿಸುವುದು ಮತ್ತು ತನಗೆ ಬೇಕಾದ ಹೆಣ್ಣನ್ನು ಒಂದು ಗಂಡು ಪಡೆಯುವುದು—ಇವೆರಡೂ ಸಮಾಜದಲ್ಲಿ ಪ್ರತಿಷ್ಠೆಯ ವಿಷಯಗಳು ಎಂಬುದನ್ನು ಹೊಲೆಯನು ಇಲ್ಲಿ ಸಾರುತ್ತಿದ್ದಾನೆ. ತುಳುನಾಡಿನ ಒಂದು ಕಾಲದ ಸಂಸ್ಕೃತಿಯನ್ನು ಈ 'ಉರಳ್'ನಲ್ಲಿ ಕಾಣಬಹುದು.

4. ಎಂಕೊಂಜಿ ಭೂತೊ ಉಂಡು 'ಲೆಕ್ಕೆಸಿರಿ'
ಯಾನ್ ಮಲ್ತಿನ ಮಾತಲಾ ಅಯಿಕ್ಕೇ ಸರಿ.
(ನನಗೊಂದು ಭೂತವಿದೆ ರಕ್ತೇಶ್ವರಿ,
ನಾನು ಮಾಡಿದ್ದೆಲ್ಲವೂ ಅದಕ್ಕೇ ಸರಿ.)

ಈ ಉರಳ್ ಗಾದೆಯ ರೂಪದಲ್ಲಿಯೂ ಪ್ರಯೋಗದಲ್ಲಿದೆ. ಇದು ತುಳುನಾಡಿನ ಒಂದು ಪ್ರಸಿದ್ಧ ಭೂತವಾದ 'ಲೆಕ್ಕೆಸಿರಿ' (ರಕ್ತೇಶ್ವರಿ)ಯನ್ನು ಕುರಿತದ್ದು. ಈ ಭೂತದ ಬಗ್ಗೆ ಜನರಿಗಿರುವ ವಿಶೇಷವಾದ ಅರ್ಪಣಾಭಾವವನ್ನು ಇಲ್ಲಿ ನೋಡಬಹುದು. ತಾನು ಮಾಡಿದ್ದೆಲ್ಲವೂ ಅದಕ್ಕೆ ಸಮರ್ಪಿತ ಎನ್ನುವ ಮಾತು ಈ ಅಭಿಪ್ರಾಯಕ್ಕೆ ಪೋಷಕವಾಗಿದೆ. 'ಲೆಕ್ಕೆಸಿರಿ' ಭೂತಕ್ಕೆ ಹರಕೆಯ ರೂಪದಲ್ಲಿ ಸಲ್ಲಿಸಬೇಕಾದ ಖರ್ಚು ಜಾಸ್ತಿ. ಈ ಕಾರಣದಿಂದ ಸಾಮಾನ್ಯನೊಬ್ಬನ ಸಂಪಾದನೆಯೆಲ್ಲವನ್ನೂ ಆತ ಈ ಭೂತದ ಸಂತೃಪ್ತಿಗಾಗಿಯೇ ವಿನಿಯೋಗಿಸಬೇಕಾಗುತ್ತದೆ. ಈ ಅರ್ಥದ ದೃಷ್ಟಿಯಿಂದಲೂ ಮೇಲಿನ ಉರಳ್ ಅನ್ನು ನೋಡಬಹುದು. ಈ ಉರಳ್‌ನಲ್ಲಿ ಇರುವ ಸಮತೂಕ ಗುಣ. 'ಲೆಕ್ಕೆಸಿರಿ' 'ಅಯಿಕ್ಕೆ ಸರಿ' ಎನ್ನುವ ಅಂತ್ಯಪ್ರಾಸದ ಸ್ವರೂಪವನ್ನು ನೋಡಬಹುದು. ತುಳುನಾಡಿನ ಒಂದು ಸಾಂಸ್ಕೃತಿಕ ವಿಶೇಷವಾದ ಭೂತಾರಾಧನೆಯನ್ನು ಹೇಳುವುದರಿಂದ ಈ 'ಉರಳ್' ಬಹಳ ಜನಪ್ರಿಯವಾಗಿ ಗಾದೆಯ ಮಟ್ಟಕ್ಕೆ ಹೋಗಿ ಮುಟ್ಟಿದೆ.

5. 'ಕದ್ರದೆ' ಪದವುಡೂ ಕರು ರಾಪುಂಡು
('ಕಂಚಿನಡ್ಕದ')
ತೆಟ್ಯಾಲೇ ಮಂಡೆಗ್ ತೆಡಿಲ್ ಹಾಕುಂಡು ॥ಓ ಓ ಓ ಓ ವ್ವಾ॥
(ಕದ್ರಿಯ (ಅಥವಾ ಕಂಚಿನಡ್ಕದ) ಪದನಲ್ಲಿ ಹದ್ದು ಹಾರುತ್ತದೆ.
ಬ್ಯಾರಿಗಳ ತಲೆಗೆ ಸಿಡಿಲು ಹೊಡೆಯುತ್ತದೆ.)

ಇದು ಒಂದು ಹಾಸ್ಯಮಯವಾದ ಉರಳ್. ಈ ಉರಳ್ ಕೂಡಾ ಹೊಲೆಯನೊಬ್ಬನು ಹೇಳುವ ಭಾಷೆಯಲ್ಲಿ ಇದೆ. 'ಕದ್ರಿ' ಅಥವಾ 'ಕಂಚಿನಡ್ಕ' ಎಂದರೆ ಊರಿನ ಹೆಸರುಗಳು. 'ಪದವು' ಎಂದರೆ ಎತ್ತರವಾದ, ಸಾಕಷ್ಟು ಮಟ್ಟಿಗೆ ಸಮತಟ್ಟಾದ ಪ್ರದೇಶ. ಇಂತಹ ಪದವುಗಳಲ್ಲಿ ಮೇಲ್ಗಡೆಗೆ ಹದ್ದುಗಳು ಹಾರುತ್ತಿರುವುದು ಒಂದು ಸಾಮಾನ್ಯ ದೃಶ್ಯ. ಇಂತಹ ದೃಶ್ಯವನ್ನು ಕಂಡ ಒಬ್ಬ ಹೊಲೆಯನು ಅದನ್ನು ಒಂದು ತಮಾಷೆಯ ಪ್ರಸಂಗಕ್ಕೆ ತಿರುಗಿಸಿದ್ದಾನೆ. 'ತೆಟ್ಯಾಲೆ' ಎಂದರೆ ಮುಸಲ್ಮಾನರು ಅಥವಾ ಬ್ಯಾರಿಗಳನ್ನು ಹೊಲೆಯರು ಸಂಬೋಧಿಸುವ ಪದ. ತುಳುನಾಡಿನ ಬ್ಯಾರಿಗಳ ತಲೆ ಸಾಂಪ್ರದಾಯಿಕವಾಗಿ ನುಣ್ಣಗೆ ಬೋಳಾಗಿರುತ್ತದೆ. ಇದು ಇಲ್ಲಿನ ಉಳಿದ ಎಲ್ಲಾ ಜಾತಿ ವರ್ಗಗಳವರಿಗೆ ಒಂದು ತಮಾಷೆಯ ವಸ್ತು. ಆ ಕಾರಣಕ್ಕಾಗಿಯೇ ಹೊಲೆಯನಂತಹ ಒಬ್ಬನು ಕೂಡಾ ಈ ಸಂದರ್ಭವನ್ನು ಬಳಸಿಕೊಂಡಿದ್ದಾನೆ. ಇಲ್ಲಿ 'ಬ್ಯಾರಿಗಳ ತಲೆಗೆ ಸಿಡಿಲು ಹೊಡೆಯುತ್ತದೆ' ಎನ್ನುವ ಮಾತಿನಲ್ಲಿ 'ಸಿಡಿಲು' ಎನ್ನುವ ಪದ ವಾಸ್ತವಿಕವಾಗಿರಲಾರದು. ಬೋಳುತಲೆಯ ಒಬ್ಬ ಬ್ಯಾರಿಯು ಕದ್ರಿಯದ್ದೋ ಕಂಚಿನಡ್ಕದ್ದೋ ಪದವಿನಲ್ಲಿ ಬಂದಾಗ ಅಂತಹ ಪದವಿನ ಮೇಲ್ಭಾಗದಲ್ಲಿ ಹದ್ದೊಂದು ಹಾರುತ್ತಿದ್ದಾಗ ಈ ಕಲ್ಪನೆ ಮೂಡಿರಬೇಕು. ಈ ರೀತಿ ಹಾರುತ್ತಿರುವ ಹದ್ದು ಬ್ಯಾರಿಯ ಬೋಳುತಲೆಯ ಮೇಲೆ ಬಂದು ಸಿಡಿಲಿನಂತೆ ಬಡಿಯುತ್ತದೆ ಎನ್ನುವ ಹಾಸ್ಯರೂಪದ ಹೆದರಿಕೆಯನ್ನು ಆ ಬ್ಯಾರಿಯಲ್ಲಿ ಈ ಹೊಲೆಯನು ಉಂಟು ಮಾಡಿರಬೇಕು. ಹಾರುತ್ತಿರುವ ಹದ್ದು ಕೆಳಗೆ ಎರಗುವುದನ್ನು ಸಿಡಿಲಿನ ಹೊಡೆತಕ್ಕೆ ಹೋಲಿಸಿದ ದೃಷ್ಟಾಂತ ಸುಂದರವಾಗಿದೆ. ಭಿನ್ನ ಸಂಸ್ಕೃತಿಯ ಜನರನ್ನು ಪ್ರಾದೇಶಿಕ ಸಂಸ್ಕೃತಿಯ ಜನರು ಹೇಗೆ ಕಾಣುತ್ತಾರೆ ಎನ್ನುವುದಕ್ಕೂ ಈ 'ಉರಳ್' ಒಂದು ನಿದರ್ಶನ ಸ್ವರೂಪದ ದೃಷ್ಟಿಯಿಂದ ಸಮತೂಕದ ಜೊತೆಗೆ, ಸಾಲುಗಳ ಕೊನೆಯಲ್ಲಿ ಬರುವ 'ರಾಪುಂಡು' 'ಹಾಕುಂಡು' ಎನ್ನುವ ಪದಗಳ ಪ್ರಾಸವನ್ನು ಇಲ್ಲಿ ಗಮನಿಸಬಹುದು.

6. ಎಂಕುಳೆ ಉಳ್ಳಾಯೆ ಊರುಗಾಪಿ ಬಾರಗೆ
ಅರೆಗೊಂಜಿ ಕಾಣಿಕೆ ಪೊಟ್ಟು ತಾರಗೆ ॥
(ನಮ್ಮ ಒಡೆಯ ಊರಿಗಾಗುವ ಯಜಮಾನ
ಅವರಿಗೊಂದು ಕಾಣಿಕೆ ಹೊಟ್ಟು ತೆಂಗಿನಕಾಯಿ)

7. ಮಾನೊಗು ಬಲ್ಲಾಳೆಗೆ ಅಡಿಯೆನೆ
ಮಂದ ತೆಲೆಕ್ಕ ಉಪ್ಪು ಪಾಡ್ದ್ ಪರಿಯೆನೆ
(ಮರ್ಯಾದೆಗೆ ಬಲ್ಲಾಳರನ್ನು ಮದುವೆಯಾದೆನೇ
ಗಂಜಿಯ ದಪ್ಪ ತಿಳಿಗೆ ಉಪ್ಪು ಹಾಕಿ ಕುಡಿದೆನೇ)

ಮೇಲಿನ ಎರಡು ಉರಳ್‌ಗಳಲ್ಲಿಯೂ ಒಡೆಯನನ್ನು ವಿಡಂಬನೆ ಮಾಡುವ ಹೊಲೆಯರ ಹಾಸ್ಯ ಪ್ರವೃತ್ತಿಯನ್ನು ನೋಡಬಹುದು. ಮೊದಲನೆಯ 'ಉರಳ್'ನ ಮೊದಲನೆಯ ಸಾಲಿನಲ್ಲಿ ತನ್ನ 'ಉಳ್ಳಾಯ' (ಒಡೆಯ)ನನ್ನು ಊರಿಗೆಲ್ಲಾ ಯಜಮಾನ ಎಂದು ಹೊಗಳಲಾಗಿದೆ. ಎರಡನೆಯ ಸಾಲಿನಲ್ಲಿ ಅವರಿಗೆ ಕಾಣಿಕೆ 'ಹೊಟ್ಟು ತೆಂಗಿನಕಾಯಿ' ಎಂದು ತಮಾಷೆ ಮಾಡಲಾಗಿದೆ. ಇಲ್ಲಿ 'ಬಾರಗೆ', 'ತಾರಗೆ' ಎಂಬ ಶಬ್ದಗಳು ಚರಣದ ಕೊನೆಯಲ್ಲಿ ತಮ್ಮ ಪ್ರಾಸದ ಸೊಗಸಿನಿಂದ ರಂಜಿಸುತ್ತವೆ. ಎರಡನೆಯ ಉರಳ್‌ನಲ್ಲಿ ಗೌರವಕ್ಕಾಗಿ ಮರ್ಯಾದೆಗಾಗಿ ಬಲ್ಲಾಳನನ್ನು ಮದುವೆಯಾದರೂ ಗಂಜಿತಿಳಿಗೆ ಉಪ್ಪು ಹಾಕಿ ಕುಡಿಯುವ ಪಾಡು ತಪ್ಪಲಿಲ್ಲ ಎಂದು ವಿಡಂಬಿಸಲಾಗಿದೆ. ಇಲ್ಲಿನ 'ಅಡಿಯೆನೆ' ಮತ್ತು 'ಪರಿಯೆನೆ' ಎಂಬುದರ ಪ್ರಾಸ ಸ್ವರೂಪವನ್ನು ನೋಡಬಹುದು.

ಮೊದಲನೆಯ ಪಾದದಲ್ಲಿ ಅಭಿವ್ಯಕ್ತಗೊಂಡ ವಿಚಾರದ ಗುಂಗಿನಲ್ಲಿ ನಾವು ಇರುವಾಗಲೇ ಎರಡನೆಯ ಪಾದವು ತೀರ ಭಿನ್ನವಾದ ಇನ್ನೊಂದು ತಿರುವನ್ನು ಪಡೆದು ನಮ್ಮನ್ನು ಆಶ್ಚರ್ಯಗೊಳಿಸುತ್ತದೆ. ಈ ಆಶ್ಚರ್ಯದೊಡನೆಯೇ ನಾಜೂಕಾದ ಹಾಸ್ಯ ನಮ್ಮನ್ನು ಆಕರ್ಷಿಸುತ್ತದೆ. ಮೊದಲನೆಯ ಚರಣವನ್ನು ಕೇಳಿದಾಗ ನಾವು ಭಾವಿಸುವುದಕ್ಕಿಂತ ತೀರ ಭಿನ್ನವಾದ ತಿರುವನ್ನು ಪಡೆದು ಮುಕ್ತಾಯಗೊಳ್ಳುವ ಎರಡನೆಯ ಚರಣ ; ಅದರ ಹಿಂದಿರುವ ನವುರಾದ ಹಾಸ್ಯ–ಇವು 'ಉರಳ್'ಗಳ ಸ್ವರೂಪದಲ್ಲಿ ಬಹಳ ಮುಖ್ಯವಾದವು.

## 2. ನಾವಿಕರ ಹಾಡುಗಳು

ತುಳುನಾಡಿನ ಕಡಲ ಕರಾವಳಿಯಲ್ಲಿ ವಾಸಿಸುವ ನಾವಿಕರು ದೇಶ ಪರದೇಶಗಳಿಗೆ ಹಡಗನ್ನು ಕೊಂಡು ಹೋಗುತ್ತಾರೆ. ಆ ಹಡಗನ್ನು ಕಡಲಿಗೆ ತಳ್ಳಲು ಅನೇಕರು ಬೆನ್ನೊಡ್ಡಬೇಕಾಗುತ್ತದೆ. ಒಂದೊಂದೇ ಉಸುರಿಗೆ ಅದನ್ನು ತಳ್ಳಿ ನೀರಿಗೆ ಇಳಿಸಬೇಕಾಗುತ್ತದೆ. ಹಾಗೆ ತಳ್ಳುವಾಗ ಒಂದು ಪಂಗಡದವರು 'ಯಾ ಅಲ್ಲಾ' ಎಂದು ರಾಗವೆಳೆದರೆ, ಮತ್ತೊಂದು ಪಂಗಡದವರು 'ಯಾ ಅರಬ್ಬೀ' ಎನ್ನುತ್ತಾರೆ. ಈ ಹಾಡು ಮುಸಲ್ಮಾನ ವರ್ಗದವರಲ್ಲಿ ಜನಪ್ರಿಯವಾದ ಹಾಡು. ಆದ್ದರಿಂದಲೇ ಅವರ ಧರ್ಮಕ್ಕೆ ಸಂಬಂಧಿಸಿದ 'ಯಾ ಅಲ್ಲಾ', 'ಯಾ ಅರಬ್ಬೀ' ಎನ್ನುವ ಸೊಲ್ಲುಗಳು ಕಾಣಿಸುತ್ತವೆ. ಈ ಸೊಲ್ಲಿನ ಆಧಾರದ ಮೇಲೆಯೇ ತುಳುವಿನಲ್ಲಿ ರಚಿತವಾದ ಒಂದು ಚಿಕ್ಕ ಪದ್ಯ ದೊರೆಯುತ್ತದೆ. ಈ ಹಾಡು ಒಬ್ಬ ನಾವಿಕನ ಕತೆಯಂತೆ ಕಾಣುತ್ತದೆ :

"ಯಾ ಅಲ್ಲಾ ಯಾ ಅರಬ್ಬೀ
ಒಂಜಿ ನನ ಅಪ್ಪೆಗೆ
ಅಪ್ಪೆ ನನ ಉಳ್ಳೆರಾಡೊ
ಒಂಜಿ ಮಗೆ ಉಳ್ಳೆರಾಡೊ
ಸೇಕುಲ್ಲ ಸೈಯದು
ಅಮ್ಮೆ ನನ ಉಳ್ಳೆರಡೋ...."

ಒಬ್ಬ ಮಗನಿಗೆ ಒಬ್ಬ ತಂದೆ, ತಂದೆಗೆ ಒಬ್ಬ ಮಗನಿದ್ದ. ಮಗನ ಹೆಸರು ಸೇಕುಲ್ಲ ಸೈಯದು. ಸೇಕುಲ್ಲ ಸೈಯದು ಬ್ಯಾರಿಯ ಅರಬ್ಬಿ ಬ್ಯಾರಿಯ ಮಗ. ಮುಂದೆ ಆ ಮಗನ ವಿದ್ಯಾಭ್ಯಾಸ, ಮುಂಜಿ ನಡೆದು ಆತನಿಗಾಗಿ ತಂದೆ ಹಡಗು ಕಟ್ಟಿಸಿ, ಅವನನ್ನು ವ್ಯಾಪಾರಕ್ಕೆ ಕಳುಹಿಸುತ್ತಾನೆ, ಹಡಗು ಕಟ್ಟುವ ವಿವರ, ಪ್ರಯಾಣದ ವಿವರಗಳು ಬರುತ್ತವೆ. ಅವುಗಳನ್ನು ಹಾಡುತ್ತಾ ಹಾಡುತ್ತಾ ನಾವಿಕನು ಕಡಲ ನೀರಿನಲ್ಲಿ ಹುಟ್ಟು ಹಾಕುತ್ತಾನೆ. ಕತೆ ಮುಗಿಯುವಾಗ ಸೇಕುಲ್ಲ ಸೈಯದು ಕಲ್ಕತ್ತೆಗೆ ಹೋಗಿ ವ್ಯಾಪಾರ ಮಾಡಿ, ಅಲ್ಲಿಂದ ಒಬ್ಬಳು ಬೀಬಿಯನ್ನು ಸಾಗಿಸಿಕೊಂಡು ಮನೆಗೆ ಬಂದಿರುತ್ತಾನೆ. ಈ ಹಾಡಿನಲ್ಲಿ ಸೊಲ್ಲು ಕೆಲಸಕ್ಕೆ ಸಂಬಂಧಿಸಿದ್ದು. ಮುಂದಿನ ಸಾಲುಗಳು ಅದ್ಭುತ ರಮಣೀಯ ಕತೆಯನ್ನು ಹೇಳುತ್ತವೆ. ತುಳುನಾಡಿನ ಮುಸ್ಲಿಮರ ವ್ಯಾಪಾರ ಸಂಸ್ಕೃತಿಯನ್ನೂ ನಾವಿಕ ವಿದ್ಯೆಯ ರೀತಿಯನ್ನೂ ಈ ಹಾಡು ಚಿತ್ರಿಸುತ್ತದೆ.

## 3. ಮೀನನ್ನು ಕುರಿತು ಬಿಡಿ ಹಾಡುಗಳು

ತುಳು ಜನಪದ ಗೀತಗಳಲ್ಲಿ ಅನೇಕ ಬಿಡಿ ಹಾಡುಗಳು ಸಿಗುತ್ತವೆ. ಲಘು ಹಾಸ್ಯ ಪ್ರಧಾನವಾಗಿರುವ ಇಂತಹ ಜನಪದ ಹಾಡುಗಳಲ್ಲಿ ಮೀನನ್ನು ಕುರಿತವು ಕೆಲವು ಇವೆ. ವಿಶಾಲವಾದ ಸಮುದ್ರದ ಕರಾವಳಿ ಇರುವ ತುಳುನಾಡಿನಲ್ಲಿ ಮೀನುಗಾರಿಕೆ ಒಂದು ಪ್ರಧಾನ ಕಸುಬು. ಆದ್ದರಿಂದಲೇ ಮೀನನ್ನು ಕುರಿತ ತುಳು ಹಾಡುಗಳು ಇಲ್ಲಿನ ಸಂಸ್ಕೃತಿಯ ನೈಜ ರೂಪ ಒಂದನ್ನು ತಿಳಿಸುತ್ತವೆ. ಅಂತಹ ಕೆಲವು ಹಾಡುಗಳನ್ನು ಇಲ್ಲಿ ಅಧ್ಯಯನ ಮಾಡಬಹುದು.

### 1. ಮೀನಿನ ದಿಬ್ಬಣ

| | |
|---|---|
| ಬಂಗುಡೆ ಮದಿಮಾಯೆ ಬೂತಾಯಿ ಮದಿಮಾಳೆ | (‘ಬಂಗುಡೆ’ ಮದುಮಗ, ‘ಬೂತಾಯಿ’ ಮದುಮಗಳು |
| ದಿಬ್ಬಣೊಡೆ ಪೋನಗ । | ದಿಬ್ಬಣದಲಿ ಹೋಗುವಾಗ |
| ನೀರ್‌ಡಿತ್ತಿ ಮೀನುಳು ಮಾತ ಪಿದಾಡೊಂದುಳ್ಳೆರೆ॥ | ನೀರೊಳಗಿದ್ದ ಮೀನುಗಳೆಲ್ಲ ಹೊರಡುತ್ತಿದ್ದಾರೆ |
| ಆಹಾ। ಪಿದಾಡೊಂದುಳ್ಳೆರೆ ॥ | ಆಹಾ, ಹೊರಡುತ್ತಿದ್ದಾರೆ. |
| ಕೊಂಬು ಕೊಣ್ದು ಪಾರ್ಬೆ ಕೊಂತ್ಯಣ್ಣೆ | ಕೊಂಬು ಹಿಡಿದು ಓಡುತ್ತಾನೆ ‘ಕೊಂತಿ’ ಅಣ್ಣ |
| ದಿಡುಂಬು ಗುದ್ಬೆ ಮಡೆಂಜಣ್ಣೆ ॥ | ದಿಡುಂಬು ಗುದ್ದುತ್ತಾನೆ ‘ಮಡೆಂಜಿ’ ಅಣ್ಣ |
| ಮೀನೆ ಒಯಿಪುವೆ ಮುಗುಡಣ್ಣೆ | ಮೀಸೆ ಎಸೆಯುತ್ತಾನೆ ‘ಮುಗುಡ’ಣ್ಣಾ |
| ಮುಂಡಾಸೆ ಕಟ್ಟುವೆ ಮೊರಂಟೆ ಅಣ್ಣೆ | ಮುಂಡಾಸು ಕಟ್ಟುತ್ತಾನೆ ‘ಮೊರಂಟೆ’ ಅಣ್ಣಾ |
| ಮುಂಡೊಗು ನಾಮೊ ಪಾಡ್ಬೆ ಕೊಡ್ಯಣಣ್ಣೆ | ಹಣೆಗೆ ನಾಮ ಹಾಕುತ್ತಾನೆ ‘ಕೊಡ್ಯಾನ’ಣ್ಣ |
| ಪರಡೊಂದು ಬರ್ಪೆ ಡೆಂಜಣ್ಣೆ ॥ | ತೆವಳುತ್ತಾ ಬರುತ್ತಾನೆ ‘ಏಡಿ’ ಅಣ್ಣಾ |
| ಸೀರೆ ನೆರಿ ಪತ್ಬಳ್ ತೆಬಟೆ ಅಕ್ಕ | ಸೀರೆ ನೆರಿ ಹಿಡಿಯುತ್ತಾಳೆ ‘ತೆಬಟೆ’ ಅಕ್ಕಾ |
| ಕಣ್ಣಿಗ್ ಮಯಿ ಪಾಡ್ಬಳೆ ಚಂದ್ರಮಾಡಕ್ಕ ॥ | ಕಣ್ಣಿಗೆ ಕಾಡಿಗೆ ಹಾಕುತ್ತಾಳೆ ‘ಚಂದ್ರಮಂಡ’ಕ್ಕ |
| ತರೆ ಬಾರೆದ್ ಕಟ್ಬಳ್ ಬಾಲೆಕ್ಕ | ತಲೆ ಬಾಚಿ ಕಟ್ಟುತ್ತಾಳೆ ‘ಬಾಲೆ’ ಅಕ್ಕ |
| ಪೂ ಮುಡಿಪುವಳೆ ಕಿಜಣಕ್ಕ ॥ | ಹೂ ಮುಡಿಸುತ್ತಾಳೆ ‘ಕಿಣಜ’ಕ್ಕ |
| ಕಂಟ್ಯೊಂದು ಬರ್ಪಳೆ ಎಟ್ಯಕ್ಕ | ಕುಟ್ಟಿಕೊಂಡು ಬರುತ್ತಾಳೆ ‘ಸಿಗಡಿ’ ಅಕ್ಕ |
| ಲಾಗ್ಯೊಂದು ಬರ್ಪಳೆ ಕೈಪೆ ಅಕ್ಕ ॥ | ನೆಗೆದುಕೊಂಡು ಬರುತ್ತಾಳೆ ‘ಕೈಪೆ’ ಅಕ್ಕ) |

‘ಮೀನಿನ ದಿಬ್ಬಣ’ ಎಂಬ ಮೇಲಿನ ಹಾಡಿಗೆ ಕೆಲವು ಪಾಠಾಂತರ ಕೂಡಾ ಇದೆ. ಒಂದು ಪಾಠಾಂತರದ ಪ್ರಕಾರ ಆರಂಭದ ಸಾಲುಗಳು ಹೀಗೆ ಇವೆ :

“ಬಂಗುಡೆ ಮದಿಮಾಯೆ, ಬೂತಾಯಿ ಮದಿಮಾಳೆ
ದಿಬ್ಬಣ ಪೋನಾಗ
ನೀರಿಡಿತ್ತಿ ಮೀನೆಳು ಮಾತಾ ಮಸ್ಕಿರಿ ಮಲ್ತೆರ್‌ಗೆ
ಆಹಾ, ಮಸ್ಕಿರಿ ಮಲ್ತೆರ್‌ಗೆ

ಬಂಗುಡೆ ಮದುಮಗ ಮದುಮಗಳು
ದಿಬ್ಬಣ ಹೋಗುವಾಗ
ನೀರಲ್ಲಿದ್ದ ಮೀನುಗಳೆಲ್ಲ
ಗೇಲಿ ಮಾಡಿದುವು,
ಆಹಾ, ಗೇಲಿ ಮಾಡಿದುವು.)

ಮೇಲಿನ ಹಾಡಿನಲ್ಲಿ 'ಬಂಗುಡೆ' ಮತ್ತು 'ಬೂತಾಯಿ' ಎನ್ನುವ ಎರಡು ಮೀನುಗಳ ಮದುವೆಯ ದಿಬ್ಬಣವನ್ನು ವರ್ಣಿಸಲಾಗಿದೆ. ತುಳುನಾಡಿನ ಬೇರೆ ಬೇರೆ ಮೀನುಗಳ ಹೆಸರುಗಳನ್ನು ಇಲ್ಲಿ ನೋಡಬಹುದು. ಬಂಗುಡೆ, ಬೂತಾಯಿ, ಕೊಂತಿ, ಮಡೆಂಜಿ, ಮುಗುಡು, ಮೊರಂಟೆ, ಕೊಡ್ಯಾನ್, ಡೆಂಜಿ, ತೆಬಟೆ, ಚಂದ್ರಮಡೆ, ಬಾಲೆ, ಕಿಜನ್, ಎಟ್ಟಿ, ಕೈಪೆ—ಇವು ಇಲ್ಲಿ ಕಾಣಿಸುವ ಬೇರೆ ಬೇರೆ ಮೀನುಗಳು. ಇವುಗಳಲ್ಲಿ ಕೆಲವು ತೋಡು ಕೆರೆಗಳ ಮೀನುಗಳು ಬಂಗುಡೆ ಮತ್ತು ಬೂತಾಯಿ—ಕಡಲಿನಲ್ಲಿ ಸಿಗುವ ಮೀನುಗಳು 'ಬಂಗುಡೆ' ಗಾತ್ರದಲ್ಲಿ ದೊಡ್ಡದು. ಆದ್ದರಿಂದ ಅದು ಮದುಮಗ. 'ಬೂತಾಯಿ' ಗಾತ್ರದಲ್ಲಿ ಚಿಕ್ಕದು. ಆದ್ದರಿಂದ ಅದು ಮದುಮಗಳು. ಇವುಗಳ ಮದುವೆಯ ದಿಬ್ಬಣದಲ್ಲಿ ಭಾಗವಹಿಸುವ ಬೇರೆ ಬೇರೆ ಮೀನುಗಳು ಅವುಗಳ ವಿಶಿಷ್ಟ ಗುಣಗಳಿಂದ ಪ್ರಸಿದ್ಧವಾಗಿವೆ. ಆ ಮೀನುಗಳ ವಿಶಿಷ್ಟತೆಯನ್ನು ಆಧರಿಸಿ, ಮದುವೆಯ ದಿಬ್ಬಣದಲ್ಲಿ ಅವುಗಳ ಪಾತ್ರವನ್ನು ಹೇಳಲಾಗಿದೆ. 'ಕೊಂತಿ ಮೀನು' ಸಪೂರವಾಗಿ ಉದ್ದವಾದ ಮೀನು. ನೀರಿನಲ್ಲಿ ಅದು ಹರಿದಾಡುವಾಗ ಕೊಂಬು ವಾದ್ಯವನ್ನು ಊದುವ ವ್ಯಕ್ತಿಯಂತೆ ಕಾಣಿಸುತ್ತದೆ. ಆದ್ದರಿಂದಲೇ 'ಕೊಂತಿಯು ಕೊಂಬು ಹಿಡಿದುಕೊಂಡು ಓಡುತ್ತದೆ ಎಂದು ವರ್ಣಿಸಲಾಗಿದೆ. 'ದಿಡುಂಬು' ಎನ್ನುವುದು ಬಾರಿಸುವ (ಹೊಡೆಯುವ) ಒಂದು ಚರ್ಮವಾದ್ಯ. 'ಮಡೆಂಜಿ' ಮೀನಿನ ಉಬ್ಬು ಗಾತ್ರವನ್ನು ಗಮನಿಸಿ 'ಅದು ದಿಡುಂಬು ವಾದ್ಯವನ್ನು ಹೊಡೆಯುತ್ತದೆ ಎಂದು ನಿರೂಪಿಸಲಾಗಿದೆ. ಮುಗುಡು ಮೀನಿಗೆ ಉದ್ದವಾದ ಮೀಸೆಗಳಿರುವುದರಿಂದ ಅದು ಮೀಸೆಯನ್ನು ಎಳೆಯುವ ಹಾಗೆ ಹೇಳಿದೆ. ಮೊರಂಟೆ ಮೀನಿನ ತಲೆ, ಗಾತ್ರದಲ್ಲಿ ದೊಡ್ಡದಾಗಿದ್ದು ಮುಂಡಾಸು ಕಟ್ಟಿದಂತೆ ಕಾಣಿಸುತ್ತದೆ. ಅದಕ್ಕಾಗಿಯೇ 'ಮೊರಂಟೆ ಮುಂಡಾಸು ಕಟ್ಟಿದ್ದಾನೆ' ಎನ್ನುವ ಮಾತು, ಬರುತ್ತದೆ. 'ಕೊಡ್ಯಾನ್' ಮೀನಿಗೆ ಹಣೆಯಲ್ಲಿ ನಾಮದಂತಹ ರಚನೆ ಇದೆ. ಏಡಿ (ಡೆಂಜಿ) ತನ್ನ ಕಾಲುಗಳ ಮೂಲಕ ತೆವಳುತ್ತಾ ತೆವಳುತ್ತಾ ಬರುತ್ತದೆ. ಈ ವಿವರಣೆಯನ್ನು ಹಾಡಿನಲ್ಲಿ ನೋಡಬಹುದು. ಮುಂದೆ ಕಾಣಿಸುವ ಕೆಲವು ಮೀನುಗಳನ್ನು ಹೆಣ್ಣುಗಳು ಎಂದು ವಿವರಿಸಲಾಗಿದೆ. ವೈಜ್ಞಾನಿಕವಾಗಿ ಏನೇ ಇರಲಿ, ಜನಪದ ಸಂಪ್ರದಾಯದಲ್ಲಿ ಈ ಮೀನುಗಳನ್ನು–ತೆಬಟೆ, ಚಂದ್ರಮಡೆ, ಬಾಲೆ, ಕಿಜನ್, ಎಟ್ಟಿ, ಕೈಪೆ—ಹೆಣ್ಣು ಮೀನುಗಳು ಎನ್ನುವುದು ವಾಡಿಕೆ. ಬಾಲೆ ಮೀನಂತೂ ಒಂದು ಜನಪದ ಕತೆಯಲ್ಲಿ ಮದುಮಗಳು ಹೆಣ್ಣು ಎನ್ನುವ ಹಾಗೆ ಚಿತ್ರಿತವಾಗಿದೆ. 'ತೆಬಟೆ' ಮೀನಿನ ಮೈ ಮೇಲೆ ಇರುವ ತೆಳುವಾದ ಪದರುಗಳು ನೆರಿಗೆ ಇರುವ ಸೀರೆಯನ್ನು ಉಟ್ಟಂತೆ ಕಾಣಿಸುತ್ತದೆ. ಚಂದ್ರಮಡೆ ಮೀನಿನ ಕಣ್ಣಿನ ಪಕ್ಕದ ಕಪ್ಪು ಗುರುತು. ಅದು ಕಣ್ಣಿಗೆ ಕಾಡಿಗೆಯನ್ನು ಹಾಕಿದೆ ಎನ್ನುವ ಭಾವನೆಯನ್ನು ಉಂಟು ಮಾಡುತ್ತದೆ. ಬಾಲೆ ಮೀನು ತಲೆ ಬಾಚುತ್ತದೆ. ಕಿಜನು ಮೀನು ಹೂ ಮುಡಿಸುತ್ತದೆ ಎನ್ನುವುದು ಹೆಚ್ಚು ಸಹಜವಾಗಿ ಸುಂದರವಾಗಿದೆ. ಸಿಗಡಿ (ಎಟ್ಟಿ) ಮೀನು ಜಿಗಿಯುತ್ತಾ ಬರುವ ದೃಶ್ಯವನ್ನು 'ಕುಟ್ಯೊಂದು ಬರ್‌ಪ್ಪಳೆ' ಎಂದೂ 'ಕೈಪೆ ಮೀನಿನ ನೆಗೆತವನ್ನು ಲಾಗ್ಯೊಂದು ಬರೆಪ್ಪಳೆ' ಎಂದೂ ಚಿತ್ರಿಸಲಾಗಿದೆ. ತುಳುನಾಡಿನ ಬೇರೆ ಬೇರೆ ಮೀನುಗಳ ಸ್ವಭಾವ, ಆಕಾರವನ್ನು ಹಾಸ್ಯಮಯ ಪ್ರಸಂಗವೊಂದರ ಮೂಲಕ ಕಾವ್ಯಮಯವಾಗಿ ವರ್ಣಿಸಿರುವುದು ಈ ಹಾಡಿನ ವೈಶಿಷ್ಟ್ಯ.

2. ಇನ್ನೊಂದು ತುಳು ಜನಪದ ಗೀತದಲ್ಲಿ ಒಬ್ಬಾಕೆ ಗೆಳತಿಯರನ್ನು ಕರೆದು 'ಪಡುವಣಕ್ಕೆ' ಹೋಗೋಣ ಎನ್ನುತ್ತಾಳೆ. ಪಡುವಣದಲ್ಲಿ ಕಡಲಿದೆ, ಅಲ್ಲಿ ಸಾಕಷ್ಟು ಮೀನುಗಳಿವೆ. ಅವುಗಳನ್ನು ಹಿಡಿಯೋಣ ಎನ್ನುವುದು ಆಕೆಯ ಆಸೆ. ಆ ಹಾಡು ಹೀಗೆ ಆರಂಭವಾಗುತ್ತದೆ:

"ಓ ಮನಂಗೋ ಓ ಚೆನಂಗೋ—ಪಡ್ಡಯಿ ಪೋವಂತಾಯಿಜಿ ॥ ಪಲ್ಲವಿ ॥
ಎಟ್ಟೆ ತಿನಂದೆ ಕರಿಯಿಜಿ"
(ಓ ಮನಂಗೋ, ಓ ಚೆನಂಗೋ, ಪಡುವಣಾಕ್ಕೆ ಹೋಗದೆ ಆಗದು,
ಸಿಗಡಿ ಮೀನು ತಿನ್ನದೆ ಆಗದು)

ಇದೇ ರೀತಿ ಮುಂದುವರಿಯುತ್ತದೆ. ಪ್ರತಿಯೊಂದು ಸಾಲಿನಲ್ಲಿಯೂ ಬೇರೆ ಬೇರೆ ಮೀನುಗಳ ಹೆಸರು ಬರುತ್ತದೆ. ಇಂತಹ ಮೀನನ್ನು ತಿನ್ನಬೇಕೆಂದು ಆ ಮೀನಿನ ಹೆಸರನ್ನು ಹೇಳುತ್ತಾಳೆ. ಇಲ್ಲಿ 'ಮನಂಗು' ಎನ್ನುವುದೂ ಒಂದು ಮೀನಿನ ಹೆಸರು. 'ಚೆನಂಗು' ಎನ್ನುವುದು 'ಮನಂಗು' ಎನ್ನುವ ಶಬ್ದಕ್ಕೆ ಸಾದೃಶ್ಯವಾಗಿ ಬಂದ ಪ್ರಾಸಬದ್ಧ ಶಬ್ದ. 'ಎಟ್ಟೆ' (ಸಿಗಡಿ) ಅಂದರೆ ಒಂದು ಮೀನಿನ ಹೆಸರು. ಇದೇ ರೀತಿ ಇನ್ನೂ ಅನೇಕ ಮೀನಿನ ಹೆಸರುಗಳು ಬರುತ್ತವೆ. ಇಲ್ಲಿ, ಕಡಲಿಗೆ ಹೋಗಿ ಮೀನುಗಳನ್ನು ಹಿಡಿಯಲು ಮತ್ತು ಅವುಗಳನ್ನು ತಿನ್ನಲು ಆಸೆಯುಳ್ಳ ಹೆಣ್ಣುಗಳ ಭಾವನೆಯನ್ನು ಕಾಣಬಹುದು. ಕರಾವಳಿಯ ತುಳುವರ ಮೀನುಗಾರಿಕೆಯ ಸಂಸ್ಕೃತಿ ಇಲ್ಲಿ ನಿಚ್ಚಳವಾಗಿದೆ.

3. ಹರಿಜನರಲ್ಲಿ ಕೊರಗ ಎಂಬ ವರ್ಗದ ತರುಣರ ಲೇ ಲೇ ಲೇ ಪದಗಳಲ್ಲಿಯೂ ಮೀನಿನ ವರ್ಣನೆಯನ್ನು ಕಾಣಬಹುದು. ಈ ಹಾಡುಗಳು ಪ್ರಧಾನವಾಗಿ ಕುಣಿತದ ಹಾಡುಗಳು. ಆದರೆ ಮೀನುಗಾರಿಕೆಯ ಸಂಸ್ಕೃತಿಯ ಚಿತ್ರಣವಿರುವುದರಿಂದ ಆ ಹಾಡನ್ನು ಇಲ್ಲಿ ಗಮನಿಸಬಹುದು.

"ಲೇ ಲೇ ಲೇಲೆ ಲೇಲೇಲಾ, ಲೇಲೆ ಲೇಲೆ ಲೇಲೆಲಾ
ಓಡ ಕರೆಕ್ ಕೊಣತೆದೇ ತೇಡೆ ಮೀನು ಪತ್ತೊಡು
ಲ ಲ ಲ ಮೀನ್ ಪತ್ಯೆಗಾ ವುಲೊಲೊ ಯೇಮೆ ಪೋಂಡೆಗಾ
ಕಾಣೆ ಮೀನ್ ಉಂಡುಗಾ, ಕಣ್ಣ್ ಬುಡೆದ್ ತೂಲಗಾ
ಪೊರ್ತು ಬಯ್ಯ್ ಆಂಡೆಗಾ, ಜತ್ತೆದೋಡೊ ಪೋಯಿಗಾ"
(ಲೇ ಲೇ ಲೇಲೆ ಲೇಲೆಲಾ, ಲೇಲೆ ಲೇಲೆ ಲೇಲೆಲಾ
ದೋಣಿಯನ್ನು ಕೆರೆಗೆ ತಂದು ತೇಡೆ ಮೀನು ಹಿಡಿಯಬೇಕು
ಲ ಲ ಲ ಮೀನು ಹಿಡಿಯಿರೋ 'ಅಯ್ಯೋ ಆಮೆ ಹೋಯಿತೋ'.
ಕಾಣೆ ಮೀನು ಇವೆ, ಎಲಾ, ಕಣ್ಣು ಬಿಟ್ಟು ನೋಡೆಲಾ,
ಹೊತ್ತು ಸಂಜೆ ಆಯಿತೋ. ದೋಣಿ ಇಳಿದು ಹೋಗುವಾ).

ಕಡಲಿನಲ್ಲಿ ದೋಣಿಯ ಮೂಲಕ ಮೀನು ಹಿಡಿಯುವ ಪದ್ಧತಿಯನ್ನು ಈ ಹಾಡಿನಲ್ಲಿ ಚಿತ್ರಿಸಲಾಗಿದೆ. 'ತೇಡೆ ಮೀನು' ಮತ್ತು 'ಕಾಣೆ ಮೀನು' —ಇವು ಎರಡು ಮುಖ್ಯವಾದ ಮೀನುಗಳ ಜಾತಿಗಳು. ಹಾಗೆಯೇ ಹೊಲೆಯರು ಸಮುದ್ರದ ಕೆರೆಯಲ್ಲಿ ಸಿಕ್ಕುವ ಆಮೆಗಳನ್ನು ಹಿಡಿದು ಪದಾರ್ಥ ಮಾಡಿ ತಿನ್ನುತ್ತಾರೆ. ಆ

ಸಂಸ್ಕೃತಿ ಈ ಮಾತುಗಳಲ್ಲಿ ಕಾಣಿಸಿಕೊಂಡಿದೆ. ಸಂಜೆಯಾದಾಗ ದೋಣಿ ಇಳಿದು ಮನೆಗೆ ಹಿಂತಿರುಗುವ ಮಾತು, ಮೀನುಗಾರಿಕೆಯ ಸ್ವರೂಪವನ್ನು ಹೇಳುತ್ತದೆ. ಭಾಷೆ ಮತ್ತು ಲಯದ ದೃಷ್ಟಿಯಿಂದ ಈ ಕುಣಿತದ ಹಾಡುಗಳಲ್ಲಿ ಸೊಗಸನ್ನು, ನಾಟಕೀಯತೆಯನ್ನು, ಚಿತ್ರದ ಶಕ್ತಿಯನ್ನು ಕಾಣಬಹುದು. "ಲ ಲ ಲಾ ಏಲಾನ್ ಪತ್ಲೆಗಾ ಉಲೊಲೊ ಏಮೆ ಪೋಂಡುಗಾ" ಎನ್ನುವ ಮಾತು ಆ ಚಿತ್ರವನ್ನು ಶಬ್ದ ರೂಪದಲ್ಲಿ ಕಣ್ಣ ಮುಂದೆ ತರುತ್ತದೆ. 'ಪತ್ಲೆಗಾ', 'ಪೋಂಡುಗಾ', 'ಉಂಡುಗಾ', 'ತೂಲಗಾ', 'ಅಂಡೆಗಾ', 'ಪೋಯಿಂಗಾ'—ಈ ಎಲ್ಲ ಪದಗಳ ಕೊನೆಯಲ್ಲಿ ಬರುವ 'ಗಾ' ಎನ್ನುವ ಅಕ್ಷರವು ಹರಿಜನ ಹುಡುಗರನ್ನು ಸಂಬೋಧಿಸುವ ರೀತಿಯನ್ನು ಸೂಚಿಸುತ್ತದೆ. ಸಾಮಾನ್ಯ ಮಾತುಕತೆಗಳಲ್ಲಿಯೂ ಹರಿಜನ ಬಾಲಕರನ್ನು ಕುರಿತು ಹೇಳುವಾಗ ಮಾತಿನ ಕೊನೆಯಲ್ಲಿ 'ಗಾ' ಸೇರಿಸುತ್ತಾರೆ. 'ಮಗಾ' ಎನ್ನುವ ಪ್ರೀತಿ ಸೂಚಕವಾದ ಶಬ್ದ 'ಅಗಾ' ಎಂದಾಗಿ ಅದೇ ಸಂಕ್ಷಿಪ್ತವಾಗಿ 'ಗಾ' ಎಂದಾಗಿದೆ.

ಮಗಾ > ಅಗಾ > ಗಾ.

## 4. ತುಳು ಪ್ರಣಯ ಗೀತಗಳು

1. ಹರಿಜನರಲ್ಲಿ ಪ್ರಯೋಗದಲ್ಲಿದ್ದ ಶೃಂಗಾರ ರಸ ಪ್ರಧಾನವಾದ ಒಂದು ತುಳುಹಾಡು :

"ಆ ಯೇರೇಟ್ ಈ ಉಳ್ಳ ಈಯೇರೇಟ್ ಏನ್ ಉಳ್ಳೆ
ನಿಕ್ಕ್ ಎನಡ ಮನಸಾಂಡ ಸುದೆ ಮಿಾಂದ್‌ದೆ ಬಲ್ಲ
ಎನ್ನಾಡೆ ಬರುವನಾ ಸೂಳೆ ದಿಕ್ಕಾಳೆ
ಸೂಳೆ ಬೊಟ್ಯೊ ಸೂವರೆ ಪಣ್ಪಾದೆ ಕಡಪೂವೆ"

(ಆಚೆಯ ದಡದಿ ಇರುವೆ ನೀನು
ಈಚೆಯ ದಡದಿ ಇರುವೆ ನಾನು ।
ನಿನಗೆ ನನ್ನಲೆ ಮನಸಾದರೆ
ನದಿಯಲಿ ಈಜಿ ಬಾರೆ ।
ನನ್ನಯ ಬಳಿಗೆ ಬರುವೆಯೇನೆ
ಹೊಲೆಯರ ಹುಡುಗಿ ಸೂಳೆ
ಸೂಳೆಯ ಗುಡಿಸಲ ಕಾಣುವ ಮುನ್ನ
ಹೇಳಿ ಕಳುಹಿಸುವೆಯೇನೆ ॥)

ಇಲ್ಲಿ ಹೊಲೆಯ ತರುಣನೊಬ್ಬನು ತರುಣಿಯೊಬ್ಬಳನ್ನು ಸಂಬೋಧಿಸಿ, ತನ್ನ ಪ್ರಣಯ ಭಾವನೆಯನ್ನು ವ್ಯಕ್ತ ಮಾಡುತ್ತಿದ್ದಾನೆ. ಹೊಲೆಯರ ನಿವಾಸವನ್ನು 'ಬೊಟ್ಟ' ಎಂದು ಕರೆಯುವ ವಿಚಾರ ಇಲ್ಲಿ ತಿಳಿಯುತ್ತದೆ.

2. ಒಬ್ಬಳು ವಯ್ಯಾರಿಯನ್ನು ಕುರಿತು ಒಬ್ಬ ಗೀತಕಾರ ಹಾಡಿದ ಹಾಡು ಹೀಗಿದೆ :

"ಅಳೆ ಪಾಣಿರೆದ ದೂಮಪ್ಪಣ್ಣನ ಮಗಳಾಳ್
ಅಳೆ ಪುತ್ತೂರುವ ಕೊರಗಪ್ಪಣ್ಣನ ಮರ್ಮಾಳಾಳೆ
ಅಳೆನ ಕಂಡನಿ ಇಲ್ಲ್ ಉಂಡು ಗುಂಡೂರಡೆ
ಅಳೆ ಮಿಂಡನ ಇಲ್ಲ್ ಉಂಡು ಮುಂಡೂರುಡೆ
ಅಳೆ ಸುತ್ತುನ ಸೀರೆ ಉಂಡು ಪುತ್ತೂರುಡೆ
ಅಳೆ ಮುತ್ತುದ ಮಾಲೆ ಉಂಡು ಪತ್ತೂರುಡೆ
ಅಳೆ ಪಾಡ್‌ನ ರವಕೆ ಉಂಡು ರಾವೂರುಡು
ಅಳೆ ತಿಕ್ಕವುನ ಕೊಪ್ಪು ಉಂಡು ಉಪ್ಪೂರುಡು"



(ಅವಳು ಪಾಣೇರಿನ ದೂಮಪ್ಪಣ್ಣನ ಮಗಳಲ್ಲವೇ ?
ಅವಳು ಪುತ್ತೂರಿನ ಕೊರಗಪ್ಪಣ್ಣನ ಸೊಸೆಯಲ್ಲವೇ ?
ಅವಳ ಗಂಡನ ಮನೆ ಇದೆ ಗುಂಡೂರಲ್ಲಿ
ಅವಳ ಮಿಂಡನ ಮನೆ ಇದೆ ಮುಂಡೂರಲ್ಲಿ
ಅವಳು ಸುತ್ತುವ ಸೀರೆ ಇದೆ ಪುತ್ತೂರಲ್ಲಿ
ಅವಳ ಮುತ್ತಿನ ಸರವಿದೆ ಹತ್ತೂರಲ್ಲಿ
ಅವಳು ಹಾಕುವ ರವಿಕೆ ಇದೆ ರಾವೂರಲ್ಲಿ
ಅವಳು ಸಿಕ್ಕಿಸುವ ಕೊಪ್ಪು ಇದೆ ಉಪ್ಪೂರಲ್ಲಿ).

ಹೀಗೆ ಹತ್ತು ಊರಲ್ಲಿ ಅವಳ ಒಡವೆ ವಸ್ತುಗಳು ಚೆಲ್ಲಾಡುತ್ತಿರಲು, ಅವಳ ಕೀರ್ತಿ ಇನ್ನೆಷ್ಟು ಊರಿನಲ್ಲಿ ಹಬ್ಬಿರಲಾರದು ಎನ್ನುವ ಭಾವ ಅಡಕವಾಗಿದೆ. ಈ ಹೆಣ್ಣು ಸಾಮಾನ್ಯಳಲ್ಲ ಎನ್ನುವ ಧ್ವನಿ ಈ ಹಾಡಿನಲ್ಲಿದೆ.

ಇಲ್ಲಿ ಬರುವ ಪಾಣೆ, ಮಂಗಳೂರು, ಪುತ್ತೂರು, ಮುಂಡೂರು, ಉಪ್ಪೂರು ಮೊದಲಾದುವು ತುಳು ನಾಡಿನ ಕೆಲವು ಪ್ರಮುಖ ಊರುಗಳು. ಆದರೆ ಇಲ್ಲಿ ಕಾಣಿಸುವ ಗುಂಡೂರು, ಹತ್ತೂರು, ರಾವೂರುಗಳು ಪ್ರಾಸಕ್ಕಾಗಿ ಬಂದಿರುವ ಶಬ್ದಗಳು. ಗಂಡ—ಗುಂಡೂರು, ಮಿಂಡ—ಮುಂಡೂರು, ಸುತ್ತುವ—ಪುತ್ತೂರು, ಮುತ್ತಿನ—ಹತ್ತೂರು, ರವಿಕೆ—ರಾವೂರು, ಕೊಪ್ಪು—ಉಪ್ಪೂರು. ಈ ಪದಗಳ ಸಂಬಂಧದ ಪ್ರಾಸವನ್ನು ನೋಡಬಹುದು. ಇದು ನೇರವಾಗಿ ಪ್ರಣಯ ಭಾವನೆಯನ್ನು ಹೇಳುವ ಹಾಡು ಅಲ್ಲವಾದರೂ ಹೆಣ್ಣೊಬ್ಬಳ ಬಗ್ಗೆ ಇರುವ ಜನಪ್ರಿಯತೆಯನ್ನು ಇಲ್ಲಿ ತಿಳಿಸಲಾಗಿದೆ.

3. ಹರಿಜನರಲ್ಲಿ ಒಂದು ಒಳವರ್ಗ 'ಮುಂಡಾಲರು'. ಅವರ ಹಾಡುಗಳಲ್ಲಿ ಇರುವ ಒಂದು ಪ್ರಣಯ ಗೀತವನ್ನು ಇಲ್ಲಿ ನೋಡಬಹುದು :

ತನನ ನನ್ನನ್ನಾ ನನ್ನ ತಂಕುರು ಮೇಸ್ತ್ರಿಯಣ್ಣಾ
ತನನ ನನ್ನನ್ನಾ ನನ್ನ ಲಮ್ಮು (ಅಮ್ಮ) ಮೇಸ್ತ್ರಿಯಣ್ಣಾ
ಎಂಕೊರಿ ಆಸೆ ಪಾಡಿಯೆ ಅಮ್ಮು ಮೇಸ್ತ್ರಿಯಣ್ಣೆ
ನಿಕ್ಕ್ ಯಾನೆ ತಿಕ್ಕಯೆ ಅಣ್ಣಾ ಅಮ್ಮ ಮೇಸ್ತ್ರಿಯಣ್ಣಾ ॥ ತನನ ॥
ಮಿತ್ತ್‌ಡ್ಯಾಡ್ ಉಂತಡ ಅಪ್ಪೆ, ತಾರಾಯಿದ ಎಣ್ಣೆ ಪಾಡಡ ಅಪ್ಪೆ
ತಾರಾಯಿದ ಎಣ್ಣೆ ಪಾಡಡ ಅಪ್ಪೆ, ತರೆ ಬಾರ್‌ದ ಕಟ್ಟಡ.

ಕಣ್ಣೆಸನ್ನೆ ಮಲ್ಪುವೆ ಅಯೆ ಅಮ್ಮು ಮೇಸ್ತ್ರಿಯಣ್ಣೆ
ಆನೆ ಈ ಪಾಡದ ಅಣ್ಣಾ. ಮೋನೊ ಈ ಕೊರಡ
ನಿಕ್ಕ್ ಯಾನೆ ತಿಕ್ಕಯೆ ಅಣ್ಣಾ ಅಮ್ಮು ಮೇಸ್ತ್ರಿಯಣ್ಣಾ
ಗಾಳೊ ಪಾಡಡೇ ಭಾವ, ಗಾಳೊ ಪಾಡಡೇ
ಗುಂಡಿಡಿತ್ತೆನ ಮೀನಿಗೆ ಮಿನಿ ಗಾಳೊ ಪಾಡಡೇ
ಕಣ್ಣೆ ಪಾಡಡೇ ಬಾವ, ಕಣ್ಣ್ ಪಾಡಡೇ
ಕಂಡನಿ ಇತ್ತೆನ ಪೊಣ್ಣಗೆ ಮೀನಿ ಕಣ್ಣೆ ಪಾಡಡೇ
ತಿರ್ತ ರಟ್ಲ್ಲಡೆ ಈರೆ ಬಲೆಣ್ಣಾ
ಮಿತ್ತ ರಟ್ಲ್ಲಡ್ ಯಾನೆ ಬರ್ಪೆ
ನೀರೆಗೆಂದ್ ಯಾನೆ ಬರ್ಪೆ, ಗೋಂಕುದಾಡೆಂಡ್ ಈ ಬಲ
ನಡಂರಟ್ಟೆ ಜೆತ್ತೆನಾದ್ ಕುಳ್ಳಿದ್ ಲಕ್ಕೆಗೊ ಅಣ್ಣಾ
ಇಲ್ಲೆಡ್ ಪೆರತೊಂಜಿ ಪಂಜಾತಿಡೆ
ಎಂಕೊರ್ತಿ ಮೈತ್ತಿದಿ ಕನಕಜಾಲೆಡ್ ಉಳ್ಳಾಲ್
ಸಜೊ ಮೈತ್ತಿದಿ
ಕನಕಜಾಲೆಡ್ ಉಳ್ಳಾಲ್ ಅವ ಕುಂದೊದ ಬುಡಾರೊಡು
ಮಧ್ಯರಾತ್ರೆಡೆ ಬತ್ತೆನಣ್ಣಾ ನೀಯೆಪ್ಪೊ ಮಲ್ತೊಂದು ಉಳ್ಳೆ
ನಿಕ್ಕ್ ಯಾನೆ ತಿಕ್ಕಯೆ ಅಣ್ಣಾ ತಂಕುರು ಮೇಸ್ತ್ರಿಯಣ್ಣಾ
ಆಸೆ ಈ ಪಾಡಡ ಅಣ್ಣಾ ಮೋಸೊ ಈ ಕೊರಡ
ತನನ ನನ್ನನ್ನಾ ನನ್ನ ತಂಕುರು ಮೇಸ್ತ್ರಿಯಣ್ಣಾ"

(ತನನ ನನ್ನನ್ನಾ ನನ್ನ ತಂಕುರು ಮೇಸ್ತ್ರಿಯಣ್ಣಾ
ತನನ ನನ್ನನ್ನಾ ನನ್ನ ಅಮ್ಮು ಮೇಸ್ತ್ರಿಯಣ್ಣಾ
ನನಗೊಬ್ಬ ಆಸೆ ಹಾಕಿದ ಅಮ್ಮು ಮೇಸ್ತ್ರಿಯಣ್ಣಾ
ನಿನಗೆ ನಾನು ಸಿಗಲಾರೆನಣ್ಣಾ ಅಮ್ಮು ಮೇಸ್ತ್ರಿಯಣ್ಣಾ
ಹೊಸಿಲಿನಲ್ಲಿ ನಿಲ್ಲಬೇಡ ಮಗಳೇ, ತೆಂಗಿನೆಣ್ಣೆ ಹಾಕಬೇಡ
ತೆಂಗಿನೆಣ್ಣೆ ಹಾಕಬೇಡ, ತಲೆ ಬಾಚಿ ಕಟ್ಟಬೇಡ
ಕಣ್‌ಸನ್ನೆ ಮಾಡುತ್ತಾನೆ ಅಮ್ಮು ಮೇಸ್ತ್ರಿಯಣ್ಣಾ
ಆಸೆ ನೀನು ಹಾಕಬೇಡ ಅಣ್ಣಾ ಮೋಸ ನೀನು ಕೊಡಬೇಡ
ನಿನಗೆ ನಾನು ಸಿಗಲಾರೆನಣ್ಣಾ ಅಮ್ಮು ಮೇಸ್ತ್ರಿಯಣ್ಣಾ
ಗಾಳ ಹಾಕಬೇಡಿ ಭಾವ, ಗಾಳ ಹಾಕಬೇಡಿ
ಹೊಂಡದಲ್ಲಿರುವ ಮೀನಿಗೆ ನೀವು ಗಾಳ ಹಾಕಬೇಡಿ
ಕಣ್ಣು ಹಾಕಬೇಡಿ ಭಾವ, ಕಣ್ಣು ಹಾಕಬೇಡಿ
ಗಂಡನಿರುವ ಹೆಣ್ಣಿಗೆ ನೀವು ಕಣ್ಣು ಹಾಕಬೇಡಿ
ಕೆಳಗಿನ ಕಡೆಯಲ್ಲಿ ನೀವು ಬನ್ನಿರಿ
ಮೇಲಿನ ಕಡೆಯಲ್ಲಿ ನಾನು ಬರುವೆ
ನೀರಿಗೆಂದು ನಾನು ಬರುವೆ, ಗೇರಿಗೆಂದು ನೀನು ಬಾ

ನಡುಸ್ಥಳದಲ್ಲಿ ಮಲಗಿ ಕುಳಿತು ಎದ್ದು ಬರೋಣ
ಮನೆಯಲ್ಲಿ ಇನ್ನೊಂದು ಪಂಚಾತಿಗೆ
ನನಗೊಬ್ಬಳು ನಾದಿನಿ ಕನಕಜಾಲಿನಲ್ಲಿದ್ದಾಳೆ
ಕನಕಜಾಲಿನಲ್ಲಿ ಇದ್ದಾಳೆ ಗಾರೆಯ ಬಿಡಾರದಲ್ಲಿ
ಮಧ್ಯರಾತ್ರಿಯಲಿ ಬಂದಿಯಾ ಅಣ್ಣ
ನೆನಪು ಮಾಡುತ್ತಿದ್ದೇನೆ
ನಿನಗೆ ನಾನು ಸಿಗಲಾರೆನಣ್ಣಾ ತಂಕುರು ಮೇಸ್ತ್ರಿಯಣ್ಣಾ
ಆಸೆ ನೀನು ಹಾಕಬೇಡ ಅಣ್ಣಾ
ಮೋಸ ನೀನು ಮಾಡಬೇಡ ಅಣ್ಣಾ
ತನನ ನನ್ನನ್ನಾ ನನ್ನ ತಂಕುರು ಮೇಸ್ತ್ರಿಯಣ್ಣಾ)

ಈ ಪ್ರಣಯ ಗೀತದಲ್ಲಿ ಹೆಣ್ಣೊಬ್ಬಳು ತನ್ನನ್ನು ಪ್ರೇಮಿಸಿ ಬಂದ ಮೇಸ್ತ್ರಿಯೊಬ್ಬನನ್ನು ಕುರಿತು ಎಚ್ಚರಿಕೆ ಹೇಳುವ ರೀತಿ ಕಾಣಿಸುತ್ತದೆ. ತಲೆಗೆ ತೆಂಗಿನ ಎಣ್ಣೆ ಹಾಕಿ, ಬಾಚಿ ಕಟ್ಟಿ ಹೊಸಿಲಲ್ಲಿ ನಿಂತ ಹೆಣ್ಣನ್ನು ಕಂಡಂತಹ ಒಂದು ಗಂಡು ಊಹಿಸಿರಬೇಕು. ಒಂದು ಬಾರಿ 'ಆಸೆ ಹಾಕಬೇಡಿ' ಎಂದು ಹೇಳುವ ಹೆಣ್ಣೇ ಮತ್ತೊಂದು ಬಾರಿ 'ಮೋಸ ಮಾಡಬೇಡಿ' ಎಂದು ಹೇಳುತ್ತಾಳೆ. ಈ ಹೆಣ್ಣಿಗೆ ಗಂಡಿನ ಮೇಲೆ ಇರುವ ಪ್ರಣಯ ಭಾವನೆ ವ್ಯಕ್ತವಾಗುತ್ತದೆ. ಭಾವ ಮತ್ತು ನಾದಿನಿಯರ ನಡುವಿನ ಪ್ರಣಯ ಸಂಬಂಧದ ಸೂಚನೆ ಈ ಹಾಡಿನಲ್ಲಿದೆ. ಯಾವುದೋ ನೆಪದಲ್ಲಿ ಬೇರೆ ಬೇರೆಯಾಗಿ ಬಂದು ಗಂಡು ಹೆಣ್ಣುಗಳು ಒಂದೆಡೆ ಸೇರುವ ಕಳ್ಳ ಪ್ರಣಯದ ಸೂಚನೆಯನ್ನು ಇಲ್ಲಿ ನೋಡಬಹುದು. ಗಾರೆಯ ಮನೆಯಲ್ಲಿ ಸುಖವಾಗಿ ಇರುವ ನಾದಿನಿಗೆ ಭಾವ ಆಸೆಪಡುವ ಚಿತ್ರವನ್ನೂ ಇಲ್ಲಿ ತಿಳಿಸಲಾಗಿದೆ. ಗಂಡು ಮಧ್ಯರಾತ್ರೆಯ ವೇಳೆಗೆ ಹೆಣ್ಣನ್ನು ಸಮೀಪಿಸುವುದು ಇಲ್ಲಿ ಕಾಣುವ ಮತ್ತೊಂದು ದೃಶ್ಯ. ಒಟ್ಟಿನಲ್ಲಿ ಈ ಪ್ರಣಯ ಗೀತೆ ಹೆಣ್ಣೊಬ್ಬಳು ತನಗೆ ಗಂಡಿನ ಮೇಲಿರುವ ಮೋಹವನ್ನು ಆಸೆಯನ್ನು ಹೊರನೋಟಕ್ಕೆ ನಿಷೇಧದ ರೂಪದಲ್ಲಿ ಸಾರುತ್ತ ಒಳಗೊಳಗೆ ಅದನ್ನು ಇಚ್ಛಿಸುತ್ತಾ ಬದುಕುವ ರೀತಿಯನ್ನು ಹೇಳುತ್ತದೆ. 'ತನನ ನನ್ನನ್ನಾ ನನ್ನ' ಎನ್ನುವ ಪಲ್ಲವಿ ಹಾಡಿಗೆ ಹೆಚ್ಚು ಮೋಹಕತೆಯನ್ನು ತಂದುಕೊಡುತ್ತದೆ. ಪದ್ಯದ ಲಯ ಪ್ರಣಯ–ಭಾವನೆಗೆ ಅನುಕೂಲವಾಗಿದೆ. 'ಗಾಳ ಹಾಕಬೇಡಿ ಭಾವ, ಹೊಂಡದಲ್ಲಿರುವ ಮೀನಿಗೆ ಗಾಳ ಹಾಕಬೇಡಿ' ಎನ್ನುವ ಮಾತಿನಲ್ಲಿ ಹೆಣ್ಣನ್ನು ಹಿಡಿಯಲು ಗಂಡು ಪಡುವ ಪ್ರಯತ್ನವನ್ನು ರೂಪಕದ ರೀತಿಯಲ್ಲಿ ಚಿತ್ರಿಸಲಾಗಿದೆ. 'ಕುಂದೊದ ಬುಡಾರೊ' (ಗಾರೆಯ ಬಿಡಾರ) ಎನ್ನುವುದು ಹರಿಜನನೊಬ್ಬನ ಪಾಲಿಗೆ ಬಹು ಶ್ರೀಮಂತ ಮನೆ ಎನ್ನುವ ಅರ್ಥದಲ್ಲಿ ಈ ಹಾಡಿನಲ್ಲಿ ಪ್ರಯೋಗವಾಗಿದೆ.

4. ಹೆಣ್ಣು ಮಗಳೊಬ್ಬಳು ತನ್ನ ಪ್ರಿಯಕರನನ್ನು ಆದರಿಸಿ ಸ್ವಾಗತಿಸುವ ಹಾಡೊಂದು ಈ ರೀತಿ ಬರುತ್ತದೆ. :

"ಬಲ್ಲೇ ಸ್ವಾಮಿಯೊರೊ ಬಲ್ಲೆಯೇ
ಮಲ್ಲಿಗೆದ ಮಿತ್ತೊರೊ ಬಲ್ಲೆಯೇ"

(ಬನ್ನಿ ಸ್ವಾಮಿ ಬನ್ನಿ
ಮಲ್ಲಿಗೆಯ ಮೇಲೆ ನಡೆದುಕೊಂಡು ಬನ್ನಿ)

ಗ್ರಾಮೀಣ ಹೆಣ್ಣೊಬ್ಬಳು ತನ್ನ ನಲ್ಲನನ್ನು ತನ್ನ ಬಳಿ ಕರೆಯುತ್ತಿರುವ ಸಂದರ್ಭವನ್ನು ಈ ಕಾವ್ಯಮಯ ಶಬ್ದಗಳಲ್ಲಿ ಕಾಣಬಹುದು. ತನ್ನ ನಲ್ಲನು ಬರುವ ದಾರಿಯಲ್ಲಿ ಮಲ್ಲಿಗೆಯನ್ನು ಹರಡಿ, ಆ ಮಲ್ಲಿಗೆಯ ಹಾಸಿಗೆಯ ಮೇಲೆ ನಡೆದುಕೊಂಡು ಬರಲು ಆಕೆ ಆಹ್ವಾನಿಸುತ್ತಾಳೆ. ಕೋಮಲತೆ, ಮಾಧುರ್ಯ, ಪ್ರೇಮ ಇದರ ದ್ಯೋತಕವಾಗಿ ಮಲ್ಲಿಗೆ ಹೂ ಇಲ್ಲಿ ಕಾಣಿಸಿಕೊಂಡಿದೆ.

## 5. ಶಿಶುಪ್ರಾಸಗಳು(Nursery Rhymes)

ತುಳು ಜನಪದ ಸಾಹಿತ್ಯದಲ್ಲಿ 'ಶಿಶುಪ್ರಾಸ' ದಂತಹ ರಚನೆಗಳೂ ದೊರೆಯುತ್ತವೆ. ಇಲ್ಲಿ ಮುಖ್ಯವಾಗಿ ಸರಪಳಿ (chain) ಯಂತಹ ಸಂಭಾಷಣೆಯ ಸ್ವರೂಪದ ಶಿಶುಪ್ರಾಸಗಳು ದೊರೆಯುತ್ತವೆ. ಅಂತಹ ಒಂದು ಶಿಶುಪ್ರಾಸವನ್ನು ಇಲ್ಲಿ ಉದಾಹರಿಸಬಹುದು. ಕೆಲವು ಪಾಠಾಂತರಗಳು ಸಿಗುವ ಈ ಶಿಶುಪ್ರಾಸದ ಸಾಮಾನ್ಯ ಪಾಠ ಈ ರೀತಿ ಇದೆ :

"ತಿತ್ತಿರಿ ತಿತ್ತಿರಿ ಮಜಲಡೆ ಪಂತಿ ಎರ್ಕಂಡೆ
ತಿತ್ತಿರಿ ತಿತ್ತಿರಿ ಮಜಲಡೆ ಪಂತಿ ಎರ್ಕಂಡೆ
ದಾಯೆ ಎರ್ಮೆ ದಾಯೆ ಎರ್ಮೆ ಪಂತಿ ಮೇಯಿಜಾ ?
ಈರೆ ದಿಕ್ಕೆ ಬಲ್ಲ್ ಬುಡಾಂದಿನೆಕೆ ಯಾನ್ ದಾನೊಡು ?
ದಾಯೆ ದಿಕ್ಕಾ ದಾಯೆ ದಿಕ್ಕಾ ಬಲ್ಲೆ ಬುಡುಜಾ ?
ಈರೆ ದೆತ್ತಿ ತೆಲೆ ಮಯಿಪಂದಿನೆಕ್ಕೆ ಯಾನ್ ಹಾನೊಡೊ ?
ದಾಯೆ ಪೊಣ್ಣ್ ದಾಯೆ ಪೊಣ್ಣ್ ದಿಕ್ಕಗೆ ತೆಲೆ ಮಯಿತೆಜಾ ?
ಎನ್ನ ಕುಡಪ್ಪಿನು ಎಲೆ ಕೊಣೊಯಿನೆಕ್ಕೆ ಯಾನ್ ದಾನೊಡು ?
ದಾಯೆ ಪುಚ್ಚೆ ದಾಯೆ ಪುಚ್ಚೆ ಎಲೆ ಪತ್ತೆಜಾ ?
ಈರೆ ಮಗಳ್ ಪೇರ ಬೆಸಲೆ ನಕ್ಕಿರೆ ಕೊರಂದಿನೆಕ್ಕೆ ಯಾನೆ ದಾನೊಡು ?
ದಾಯೆ ಪೊಣ್ಣ್ ದಾಯೆ ಪೊಣ್ಣ್ ಪುಚ್ಚೆಗೆ ಪೇರ್ ಬೆಸಲೆ ನೆಕ್ಕಿರೆ ಕೊರೆಜಾ ?
ಎನ್ನ ಕಬುಲ್ತೆ ಪೆತ್ತನೆ ಪಿಲಿ ಕೊಂಡೊಯಿನೆಕೆ ಯಾನೆ ದಾನೊಡು ?
ದಾಯೆ ಬೆಡಿಗರ ದಾಯೆ ಬೆಡಿಗಾರ ಬೆಡಿ ದಕ್ಕ್‌ಜಾ ?
ಎನ್ನ ಬೆಡಿಕ್ ಉದಲ್ ಪತ್ತಿನೆಕ್ ಯಾನ್ ದಾನೊಡು ?
ದಾಯೆ ಕೋರಿ ದಾಯೆ ಕೋರಿ ಬೆಡಿತ್ತ ಉದಲ್ ಒಕ್ಕೆಜಾ ?
ಎನ್ನ ಕೋಕಾಯಿ ಮಂಡೆ ಕಟ್ಟಿನೆಕ್ಕೆ ಯಾನೆ ದಾನೊಡು ?
ದಾಯೆ ಆಚಾರಿ ದಾಯೆ ಆಚಾರಿ ಕೋರಿದ ಕೋಕಾಯಿ ಕೆತ್ತೆಜಾ ?
ಎನ್ನ ಉಳಿ ಬಾಜಿ ಕಳುವೆರೆ ಕೊಂಡೊಯಿನೆಕ್ಕೆ ಯಾನೆ ದಾನೊಡು ?
ದಾಯೆ ಬೂತೊ ದಾಯೆ ಬೂತೊ ಕಳುವೆರನೆ ಪತ್ತೆಜಾ ?
ವರ್ಸೊಡೊಂಬೆ ಕೋಲ ಕೊರಂದಿನಗ ದಾಯೆ ಪತ್ತೊಡೂ ?"
(ತಿತ್ತಿರಿ ತಿತ್ತಿರಿ ಮಜಲಿನಲ್ಲಿ ಹುಲ್ಲು ತುಂಬಿದೆ
ತಿತ್ತಿರಿ ತಿತ್ತಿರಿ ಮಜಲಿನಲ್ಲಿ ಹುಲ್ಲು ತುಂಬಿದೆ

ಯಾಕೆ ಎಮ್ಮೆ ಯಾಕೆ ಎಮ್ಮೆ ಹುಲ್ಲು ಮೇಯಲಿಲ್ಲ ?
ನಿಮ್ಮ ಹೊಲೆಯ ಹಗ್ಗ ಬಿಡದುದಕ್ಕೆ ನಾನೇನು ಮಾಡಲಿ ?
ಯಾಕೆ ಹೊಲೆಯ ಯಾಕೆ ಹೊಲೆಯ ಹಗ್ಗ ಬಿಡಲಿಲ್ಲ ?
ನಿಮ್ಮ ಒಡತಿ (ಗಂಜಿ) ತಿಳಿ ಹೊಯ್ಯದ್ದಕ್ಕೆ ನಾನೇನು ಮಾಡಲಿ ?
ಯಾಕೆ ಹೆಣ್ಣೇ ಯಾಕೆ ಹೆಣ್ಣೇ ಹೊಲೆಯನಿಗೆ ತಿಳಿ ಹೊಯ್ಯಲಿಲ್ಲ ?
ನನ್ನ 'ಬಸಿತಟ್ಟೆ'ಯನ್ನು ಇಲಿ ಕೊಂಡೊಯ್ದುದಕ್ಕೆ ನಾನೇನು ಮಾಡಲಿ ?
ಯಾಕೆ ಬೆಕ್ಕೇ ಯಾಕೆ ಬೆಕ್ಕೇ ಇಲಿ ಹಿಡಿಯಲಿಲ್ಲ ?
ನಿಮ್ಮ ಮಗಳು ಹಾಲಿನ ಪಾತ್ರೆ ನೆಕ್ಕಲು ಬಿಡದುದಕ್ಕೆ ನಾನೇನು ಮಾಡಲಿ?
ಯಾಕೆ ಹೆಣ್ಣೇ ಯಾಕೆ ಹೆಣ್ಣೇ ಬೆಕ್ಕಿಗೆ ಹಾಲಿನ ಪಾತ್ರೆ ನೆಕ್ಕಲು ಕೊಡಲಿಲ್ಲ ?
ನನ್ನ ಕಪಿಲೆ ದನವನ್ನು ಹುಲಿ ಕೊಂಡೊಯ್ದುದಕ್ಕೆ ನಾನೇನು ಮಾಡಲಿ ?
ಯಾಕೆ ಕೋವಿಯವನೇ ಯಾಕೆ ಕೋವಿಯವನೇ ಕೋವಿ ಬಿಡಲಿಲ್ಲ ?
ನನ್ನ ಕೋವಿಗೆ ಗೆದ್ದಲು ಹಿಡಿದದ್ದಕ್ಕೆ ನಾನೇನು ಮಾಡಲಿ ?
ಯಾಕೆ ಕೋಳಿ ಯಾಕೆ ಕೋಳಿ ಕೋವಿಯ ಗೆದ್ದಲು ಕುಕ್ಕಲಿಲ್ಲ ?
ನನ್ನ ಕೊಕ್ಕು ಮೊಂಡಾದುದಕ್ಕೆ ನಾನೇನು ಮಾಡಲಿ ?
ಯಾಕೆ ಬಡಗಿ ಯಾಕೆ ಬಡಗಿ ಕೋಳಿಯ ಕೊಕ್ಕು ಕೆತ್ತಲಿಲ್ಲ ?
ನನ್ನ ಉಳಿ ಬಾಚಿ ( ಸಾಮಗ್ರಿಗಳು ) ಕಳ್ಳರು ಕೊಂಡೊಯ್ದದ್ದಕ್ಕೆ ನಾನೇನು ಮಾಡಲಿ ?
ಯಾಕೆ ಭೂತ ಯಾಕೆ ಭೂತ ಕಳ್ಳರನ್ನು ಹಿಡಿಯಲಿಲ್ಲ ?
ವರ್ಷಕ್ಕೊಂದು ಕೋಲ ಕೊಡದಿರುವಾಗ ನಾನ್ಯಾಕೆ ಹಿಡಿಯಲಿ?

ಹಾಸ್ಯ ಪ್ರಧಾನವಾಗಿರುವ ಈ ಶಿಶುಪ್ರಾಸವು ಒಂದು ಕೌಟುಂಬಿಕ ಪರಿಸರದಲ್ಲಿ ಬೇರೆ ಬೇರೆ ವ್ಯಕ್ತಿಗಳ, ಪ್ರಾಣಿಗಳ, ಪಕ್ಷಿಗಳ ಹಾಗೂ ಭೂತದ ಕೆಲಸಗಳನ್ನು ತಿಳಿಸುತ್ತದೆ. ಹುಲ್ಲು ಮೇಯುವ ಎಮ್ಮೆ, ಎಮ್ಮೆ ಸಾಕುವ ಹೊಲೆಯ ಆಳು, ಅಡುಗೆ ಮಾಡುವ ಹೆಂಗಸರು, ಇಲಿ ಹಿಡಿಯುವ ಬೆಕ್ಕು, ಹುಲಿಯನ್ನು ಬೇಟೆಯಾಡುವ ಕೋವಿಗಾರ, ಗೆದ್ದಲು ಕುಕ್ಕುವ ಕೋಳಿ, ಕೆತ್ತುವ ಕೆಲಸದ ಬಡಗಿ, ಕಳ್ಳರನ್ನು ಹಿಡಿಯುವ ಭೂತ ಈ ರೀತಿಯ ಕೆಲಸದ ನಿರ್ದೇಶನ ಇಲ್ಲಿ ಇದೆ. ಆದರೆ ಅದನ್ನು ಸರಪಳಿಯಂತೆ ನೆಯ್ದ ಕ್ರಮ, ಪ್ರಶ್ನೆಗೆ ಪ್ರಶ್ನೆಯ ರೂಪದಲ್ಲೇ ಉತ್ತರಿಸುವ ಸಂಭಾಷಣೆಯ ತಂತ್ರ ; ಅದರಲ್ಲಿ ಅಡಕವಾಗಿರುವ ಸಹಜವಾದ ಹಾಸ್ಯದ ಸ್ವರೂಪದ ಆಕರ್ಷಕವಾಗಿದೆ. ಶಿಶುಪ್ರಾಸಕ್ಕೆ ತೀರ ಅಗತ್ಯವಾದ ಪುನರಾವರ್ತನೆ ಕಾಣಿಸುತ್ತದೆ. ಪ್ರತಿಯೊಂದು ಬಾರಿ ಪ್ರಶ್ನಿಸುವಾಗಲೂ ''ದಾಯೆ ........... ದಾಯೆ ........ " (ಯಾಕೆ ...... ಯಾಕೆ ........) ಎನ್ನುವ ಮಾತು ಬರುತ್ತದೆ. ಪ್ರಶ್ನೆಯ ರೂಪದ ಉತ್ತರದಲ್ಲೂ ಆರಂಭದಲ್ಲಿ 'ಎನ್ನ' (ನನ್ನ) ಅಥವಾ 'ಈರೆ' ( ನಿಮ್ಮ ) ಎನ್ನುವ ಪದಗಳು ಬರುತ್ತವೆ. ಪದ್ಯದ ಆರಂಭದ ಸಾಲುಗಳಲ್ಲಿನ "ತಿತ್ತಿರಿ ತಿತ್ತಿರಿ" ಎನ್ನುವ ಪದಗಳು ಶಿಶುಪ್ರಾಸಗಳ ಸಹಜ ಗುಣವಾದ ಅನುಕರಣ ಪದಗಳ ಬಳಕೆಯನ್ನು ತೋರಿಸುತ್ತವೆ. ಈ ಶಿಶುಪ್ರಾಸದ ಕೊನೆಯ ಸಾಲುಗಳು ತುಳುನಾಡಿನ ಸಂಸ್ಕೃತಿಯ ಒಂದು ಮುಖವನ್ನು ಪರಿಚಯಿಸುತ್ತವೆ. ಭೂತಾರಾಧನೆಯಲ್ಲಿ ಮುಖ್ಯವಾದ ಒಂದು ನಂಬಿಕೆ ಎಂದರೆ ಭೂತವು ತಮ್ಮನ್ನು ರಕ್ಷಿಸುತ್ತದೆ. ಕಳ್ಳರನ್ನು ಹಿಡಿದು ಶಿಕ್ಷಿಸುತ್ತದೆ ಎಂಬುದು. ಹಾಗೆಯೇ ಅಂತಹ ಕೆಲಸಗಳನ್ನು ಭೂತವು ಮಾಡಬೇಕಾದರೆ ಅವರ ಮನಸ್ಸಿಗೆ ಸಂತೋಷವಾಗಬೇಕು. ಅಂದರೆ, ಆ ಭೂತಕ್ಕೆ ವರ್ಷಕ್ಕೆ ಒಂದು ಬಾರಿ 'ಕೋಲ' ( ಭೂತದ ಒಂದು ರೀತಿಯ ಉತ್ಸವ ) ಕೊಡಬೇಕು. ಈ ರೀತಿ ಅದಕ್ಕೆ 'ಕೋಲ' ಕೊಡದಿದ್ದರೆ ಅದು ಯಾವ ಸಹಾಯವನ್ನೂ ಮಾಡುವುದಿಲ್ಲ. ಬದಲಾಗಿ ಅನೇಕ ಬಾರಿ ತೊಂದರೆಯನ್ನೇ ಕೊಡುತ್ತದೆ.

ಮೇಲಿನ ಶಿಶುಪ್ರಾಸದ ಪಾಠಾಂತರಗಳಲ್ಲಿ ಮುಖ್ಯವಾದುದು, ಕೊನೆಯ ಸಾಲುಗಳ ಪಾಠಾಂತರ. ಅದು ಈ ರೀತಿ ಬರುತ್ತದೆ:

"ದಾಯೆ ಆಚಾರಿ ದಾಯೆ ಆಚಾರಿ ಕೋರಿದ ಕೋಕಾಯಿ ಕತ್ತೆಜಾ?
ಎನ್ನ ಉಳಿಬಾಜಿ ಕಳುವೆರೆ ಕೊಂಡೊಯಿನೆಕ್ ಯಾನೆ ದಾನೊಡು
ದಾಯೆ ನಾಯಿ ದಾಯೆ ನಾಯಿ ಕಳುವೆರೆನೆ ಪತ್ತೆಜಾ?
ಎಂಕೊಂಜಿ ಉರ್ಜಿರ ಬತ್ತೆನ್‌ಕೆ ಯಾನ್ ದಾನೊಡು?"
(ಯಾಕೆ ಬಡಗಿ ಯಾಕೆ ಬಡಗಿ ಕೋಳಿಯ ಕೊಕ್ಕು ಕೆತ್ತಲಿಲ್ಲ?
ನನ್ನ ಉಳಿ ಬಾಜಿ ಕಳ್ಳರು ಕೊಂಡೊಯ್ದುದಕ್ಕೆ ನಾನೇನು ಮಾಡಲಿ?
ಯಾಕೆ ನಾಯಿ ಯಾಕೆ ನಾಯಿ ಕಳ್ಳರನ್ನು ಹಿಡಿಯಲಿಲ್ಲ?
ನನಗೊಮ್ಮೆ ಹೇಲಲು ಬಂದದ್ದಕ್ಕೆ ನಾನೇನು ಮಾಡಲಿ?)

ಇಲ್ಲಿ ಶಿಶುಪ್ರಾಸದ ಕೊನೆ ವಾಸ್ತವಿಕತೆಗಿಂತಲೂ ಹೆಚ್ಚಾಗಿ ಹಾಸ್ಯದಲ್ಲಿಯೇ ಪರ್ಯಾವಸಾನಗೊಳ್ಳುತ್ತದೆ. ಇಲ್ಲಿ ಕಳ್ಳರನ್ನು ಹಿಡಿಯಬೇಕಾಗಿರುವುದು 'ಭೂತ' ಅಲ್ಲ, ನಾಯಿ. ಆದರೆ ಅಂತಹ ನಾಯಿಯು ಕಳ್ಳರನ್ನು ಹಿಡಿಯದಿದ್ದುದಕ್ಕೆ ಕೊಡುವ ಕಾರಣ, ಸ್ವಲ್ಪ ಅಶ್ಲೀಲವೆಂದು ಅನ್ನಿಸಿದರೂ ಶಿಶುಪ್ರಾಸದ ಚೌಕಟ್ಟಿನಲ್ಲಿ ಹಿಂದಿನ ಪಾಠಕ್ಕಿಂತ ಹೆಚ್ಚು ಸಹಜವಾಗಿದೆ. ಹಳ್ಳಿಗಳಲ್ಲಿ ಕಳ್ಳರನ್ನು ಹಿಡಿಯುವ ಕೆಲಸ ನಾಯಿಯದ್ದು ಎನ್ನುವುದರ ಹಿನ್ನೆಲೆಯಲ್ಲಿ ಈ ವಿಚಾರ ಸಮಂಜಸವಾಗಿದೆ.

ತುಳುವಿನಲ್ಲಿ ದೊರೆಯುವ ಇನ್ನೊಂದು ರೀತಿಯ ಶಿಶುಪ್ರಾಸವನ್ನು ಇಲ್ಲಿ ಗಮನಿಸಬಹುದು. 'ಸರಪಳಿ' (chain) ಯ ತಂತ್ರ ಇಲ್ಲಿಯೂ ಕಾಣಿಸುತ್ತದೆ. ಇಲ್ಲಿಯೂ ಪ್ರಶ್ನೆ ಮತ್ತು ಉತ್ತರ ರೂಪದ ಸಂಭಾಷಣೆಯ ಸ್ವರೂಪ ಇದೆ. ಆದರೆ ಇಲ್ಲಿ ಉತ್ತರವು ಸ್ಪಷ್ಟವಾಗಿ ಉತ್ತರ ರೂಪದಲ್ಲಿಯೇ ಇದೆ. ಮರು ಪ್ರಶ್ನೆಯ ರೂಪದಲ್ಲಿ ಇಲ್ಲ. ಇಂತಹ ಶಿಶುಪ್ರಾಸಗಳು ಕನ್ನಡ ಜನಪದ ಸಾಹಿತ್ಯದಲ್ಲಿಯೂ ಸಿಗುತ್ತವೆ.[1] ಅಂತಹ ಒಂದು ಶಿಶುಪ್ರಾಸ:

"ಓಡೆ ಪೋಪ ಕುಂಡಚ್ಚ?
ಬಲ್ಲಾಳೆ ಬೊಟ್ಟುಗು ಬಾರೆ ಪೆಜ್ಜೆರೆ ಪೋಪೆ
ಕಲ್ಲ್ ಮುಳ್ಳು ದಕ್‌ಂಡ ದಾನೆ ಮಲ್ಪುವ?
ಕಂಡೆಕ್ಕ್ ನೂರುವೆ.
ಕಂಡೆಟ್ ಯೇರುಂಡು?
ಕಂಡೆಟೆ ಅಜ್ಜಿ ಉಂಡು.
ಅಜ್ಜಿದಾದ ಕೊರ್ಪುಂಡು?
ಅಜ್ಜಿ ಗೆಜ್ಜೆ ಕೊರ್ಪುಂಡು.
ಗೆಜ್ಜೆನ್ ದಾನೆ ಮಲ್ಪುವ?
ಗೆಜ್ಜೆನ್ ಪೆತ್ತಗ್ ಕಟ್ಟುವೆ,
ಪೆತ್ತ ದಾದ ಕೊರ್ಪಳ್?
ಪೆತ್ತ ಪೇರ್ ಕೊರ್ಪಳೆ.
ಪೇರೆನ್ ದಾನೆ ಮಲ್ಪುವ?
ಪೇರೆನ್ ದೇವೆರೆಗೆ ಕೊರ್ಪೆ.

---

[1] ನೋಡಿ: 'ಶಿಶು ಪ್ರಾಸಗಳು', ವಿವಿಧ ಸಂಗ್ರಾಹಕರು, ಮೈಸೂರು-1972.,
(20ನೇ ಸಂಖ್ಯೆಯ ಶಿಶುಪ್ರಾಸ. ಪು.19)

ದೇವರೆ ದಾದ ಕೊರ್ಪೆರೆ?
ದೇವರೆ ಗಂದ ಕೊರ್ಪೆರೆ
ಗಂದೊನು ದಾದ ಮಲ್ಪುವ?
ಗಂದೊನು ಮುಂಡೊಗು ಪಾಡುವೆ.
ಮುಂಡ ದಾದ ಕೊರ್ಪುಂಡು?
ಮುಂಡ ಪೇನೆ ಕೊರ್ಪುಂಡು.
ಪೇನೆನ್ ದಾದ ಮಲ್ಪುವ ?
ಪೇನೆನ್ ಕೋರಿಗೆ ಪಾಡುವೆ.
ಕೋರಿ ದಾದ ಕೋರ್ಪುಂಡು ?
ಕೋರಿ ತೆತ್ತಿ ಕೊರ್ಪುಂಡು.
ತೆತ್ತಿನೆ ದಾದ ಮಲ್ಪುವ ?
ನಿರೆಕರೆತ ಬೆನ್ನರೆ ಬನ್ನಗ
ಚಂಯ್ ಚಂಯ್ ಮಲ್ಪುವೆ "

(ಎಲ್ಲಿಗೆ ಹೋಗುತ್ತಿ ಅಳಿಲೇ ?
ಬಲ್ಲಾಳನ ಬೆಟ್ಟಿಗೆ ಭತ್ತ ಹೆಕ್ಕಲು
ಹೋಗುತ್ತೇನೆ.
ಕಲ್ಲು ಮುಳ್ಳು ಎಸ್ಪೆದರೆ ಏನು ಮಾಡುವೆ ?
ಬಿಲಕ್ಕೆ ನುಸುಳುವೆ
ಬಿಲದಲ್ಲಿ ಯಾರಿದ್ದಾರೆ ?
ಬಿಲದಲ್ಲಿ ಅಜ್ಜ ಇದೆ.
ಅಜ್ಜ ಏನು ಕೊಡುತ್ತದೆ ?
ಅಜ್ಜ ಗೆಜ್ಜೆ ಕೊಡುತ್ತದೆ.
ಗೆಜ್ಜೆಯನ್ನು ಏನು ಮಾಡುವೆ ?
ಗೆಜ್ಜೆಯನ್ನು ದನಕ್ಕೆ ಕಟ್ಟುವೆ.
ದನ ಏನು ಕೊಡುತ್ತದೆ ?
ದನ ಹಾಲು ಕೊಡುತ್ತದೆ.
ಹಾಲನ್ನು ಏನು ಮಾಡುವೆ ?
ಹಾಲನ್ನು ದೇವರಿಗೆ ಕೊಡುವೆ.
ದೇವರು ಏನು ಕೊಡುತ್ತಾರೆ ?
ದೇವರು ಗಂಧ ಕೊಡುತ್ತಾರೆ.
ಗಂಧವನ್ನು ಏನು ಮಾಡುವೆ ?
ಗಂಧವನ್ನು ಹಣೆಗೆ ಹಾಕುವೆ.
ಹಣೆ ಏನು ಕೊಡುತ್ತದೆ ?
ಹಣೆ ಹೇನನ್ನು ಕೊಡುತ್ತದೆ.
ಹೇನನ್ನು ಏನು ಮಾಡುವೆ ?
ಹೇನನ್ನು ಕೋಳಿಗೆ ಹಾಕುವೆ.
ಕೋಳಿ ಏನನ್ನು ಕೊಡುತ್ತದೆ ?
ಕೋಳಿ ಮೊಟ್ಟೆ ಕೊಡುತ್ತದೆ.
ಮೊಟ್ಟೆಯನ್ನು ಏನು ಮಾಡುವೆ ?
ನೆರೆಕರೆಯ ನೆಂಟರು ಬಂದಾಗ
ಚಂಯ್ ಚುಂಯ್ ಮಾಡುವೆ )

ಈ ಶಿಶುಪ್ರಾಸದಲ್ಲಿ ಪ್ರಶ್ನೆಗೊಂದು ಉತ್ತರ ಎಂಬಂತೆ ಸರಪಳಿಯು ಮುಂದುವರಿಯುತ್ತಾ ಬರುವ ತಂತ್ರವಿದೆ. ಸಾಮಾನ್ಯವಾಗಿ ಅರ್ಥಕ್ಕಿಂತಲೂ ಪ್ರಾಸಕ್ಕೆ ಇಲ್ಲಿ ಪ್ರಾಧಾನ್ಯವಿರುವುದರಿಂದ, ಇವುಗಳ ಮಹತ್ವ ಸಾಹಿತ್ಯಿಕವಾಗಿರುವುದಕ್ಕಿಂತಲೂ ಹೆಚ್ಚಾಗಿ ಆಟಗಳಲ್ಲಿ ಕ್ರಿಯಾತ್ಮಕವಾಗಿರುವುದರಲ್ಲಿ ಕಂಡುಬರುತ್ತದೆ. ಅಜ್ಜ–ಗೆಜ್ಜೆ ಎನ್ನುವಲ್ಲಿನ ಸಂಬಂಧ ಇಂತಹ ಪ್ರಾಸಕ್ಕೆ ಸಂಬಂಧಿಸಿದ್ದು. ಹಣೆಯು ಹೇನನ್ನು ಕೊಡುತ್ತದೆ ಎನ್ನುವ ಮಾತು ಕೂಡಾ ವಾಸ್ತವಿಕತೆಗಿಂತ ಹೆಚ್ಚಾಗಿ ಮಾತಿನ ಮುಂದುವರಿಕೆಗೆ ಬಂದಿರುವ ರೀತಿಯನ್ನು ಸೂಚಿಸುತ್ತದೆ. 'ಬಲ್ಲಾಳೆ ಬೊಟ್ಟುಗು ಬಾರೆ ಪೆಜ್ಜೆರೆ ಪೋಪೆ' (ಬಲ್ಲಾಳನ ಬೆಟ್ಟಿಗೆ ಭತ್ತವನ್ನು ಹೆಕ್ಕಲು ಹೋಗುತ್ತೇನೆ) ಎಂದು ಅಳಿಲು ಹೇಳುವ ಮಾತಿನಲ್ಲಿ ತುಳುನಾಡಿನ ತುಂಡರಸರಾದ ಬಲ್ಲಾಳರ ಪ್ರಸ್ತಾಪವಿದೆ. 'ಬಾರೆ ಬಲ್ಲಾಳಗ್, ದೂರು ಕುಂಡಚ್ಚಗ್' (ಭತ್ತ ಬಲ್ಲಾಳನಿಗೆ, ದೂರು ಅಳಿಲಿಗೆ) ಎನ್ನುವ ತುಳು ಗಾದೆಯೊಂದನ್ನು ಇಲ್ಲಿ ಗಮನಕ್ಕೆ ತರಬಹುದು. ಬಲ್ಲಾಳರ ಭತ್ತದ ರಾಶಿಗಳಿಗೆ ಮಣ್ಣಿಗೆ ಹಾಕಿ ಭತ್ತವನ್ನು ಹಾಳು ಮಾಡುವ ಪ್ರವೃತ್ತಿಯನ್ನು ಈ ಮಾತುಗಳಲ್ಲಿ ಹೇಳಲಾಗಿದೆ. ಈ ಶಿಶುಪ್ರಾಸದ ಕೊನೆಯಲ್ಲಿ ಬರುವ ಸಾಲುಗಳು ಮಕ್ಕಳ ಗ್ರಹಿಕೆಯ ದೃಷ್ಟಿಯಿಂದ ಹೆಚ್ಚು ಸಹಜವಾಗಿವೆ ಮತ್ತು ಸುಂದರವಾಗಿವೆ. ಕೋಳಿ ಮೊಟ್ಟೆಯನ್ನು ನೆಂಟರು ಬಂದಾಗ 'ಚುಂಯ್ ಚುಂಯ್' ಎಂದು ಕಾಯಿಸುತ್ತೇನೆ ಎನ್ನುವ ಮಾತಿನಲ್ಲಿ ಅನುಕರಣ ಪದಗಳು ಶಕ್ತಿಪೂರ್ಣವಾಗಿವೆ, ನೆಂಟರು ಬಂದಾಗ ಮಾತ್ರ ಕೋಳಿ ಮೊಟ್ಟೆಯಂತಹ ಅಪೂರ್ವ ವಸ್ತುಗಳನ್ನು ಉಪ

ಯೋಗಿಸುವ ಹಳ್ಳಿಗರ ಸ್ವಭಾವ ಗೊತ್ತಾಗುತ್ತದೆ. "......ದಾದ ಕೊರ್ಪುಂಡು" (......ಏನುಕೊಡುತ್ತದೆ) ಎನ್ನುವ ಮಾತಿನ ಪುನರಾವರ್ತನೆಯು ಈ ಶಿಶುಪ್ರಾಸವನ್ನು ಮಕ್ಕಳ ನಡುವೆ ಹೆಚ್ಚು ಜನಪ್ರಿಯವಾಗಿಡಲು ಕಾರಣವಾಗಿದೆ.

## 6. ಮದುವೆಯ ಹಾಡುಗಳು

ಯಾವುದೇ ಭಾಷೆಯ ಜನಪದ ಸಾಹಿತ್ಯದಲ್ಲಿ ಜನನ, ಮದುವೆಯಂತಹ ಪ್ರಮುಖ ಸಂಸ್ಕಾರಗಳಿಗೆ ಸಂಬಂಧಿಸಿದ ಹಾಡುಗಳು ಸಿಗುತ್ತವೆ. ಬ್ರಾಹ್ಮಣ ಸಮಾಜಗಳಲ್ಲಿ ವಿವಾಹ ಸಂದರ್ಭದಲ್ಲಿ ಸಂಸ್ಕೃತ ಭಾಷೆಯ ಮಂತ್ರಗಳ ಜೊತೆಗೆ, ದೇಸಿಯ ಸಂಪ್ರದಾಯಕ್ಕೆ ಸೇರಿದ ಹೆಂಗಸರ ಹಾಡುಗಳೂ ಜನಪ್ರಿಯವಾಗಿ ಬಳಕೆಯಾಗುತ್ತವೆ. ಸಾಮಾನ್ಯವಾಗಿ ಅವುಗಳನ್ನು ಒಟ್ಟಿಗೆ 'ಶೋಬಾನೆ ಹಾಡುಗಳು' ಎನ್ನುತ್ತಾರೆ. ಅವುಗಳಲ್ಲಿ ಅನೇಕ ಪ್ರಕಾರಗಳು ಇವೆ. ತುಳುನಾಡಿನ ತುಳು ಸಂಸ್ಕೃತಿಯ ಜನರಲ್ಲಿ ಬ್ರಾಹ್ಮಣರ ಒಂದು ವರ್ಗವೂ ಇದೆ. ತುಳು ಮಾತೃಭಾಷೆಯಾಗಿರುವ ಶಿವಳ್ಳಿ ಬ್ರಾಹ್ಮಣರಲ್ಲಿ ಮದುವೆಯ ಸಂಸ್ಕಾರಕ್ಕೆ ಸಂಬಂಧಿಸಿದ ತುಳು ಹಾಡುಗಳು ಸಿಗುತ್ತವೆ. ಬ್ರಾಹ್ಮಣೇತರ ತುಳುವರಲ್ಲಿ ಶೋಬಾನೆ ಹಾಡುಗಳು ಕಾಣಿಸದಿದ್ದರೂ ಮದುವೆಗೆ ಸಂಬಂಧಿಸಿದ ಇನ್ನು ಕೆಲವು ರೀತಿಯ ಹಾಡುಗಳನ್ನು ನೋಡಬಹುದು (ನನ್ನ ಅಧ್ಯಯನದಲ್ಲಿ ಬ್ರಾಹ್ಮಣೇತರ ಸಮಾಜಗಳ ಜನಪದ ಸಾಹಿತ್ಯವನ್ನು ಮಾತ್ರ ಗಮನಿಸಲಾಗಿದೆ). ಈ ಹಾಡುಗಳಲ್ಲಿ ಬ್ರಾಹ್ಮಣರ ಮದುವೆಯ ಹಾಡುಗಳಂತೆ ಕೃಷ್ಣ, ರಂಗ, ರುಕ್ಮಿಣಿ ಮೊದಲಾದ ಪೌರಾಣಿಕ ದೇವತೆಗಳು ಕಾಣಿಸುವುದಿಲ್ಲ. ಹೆಚ್ಚು ವಾಸ್ತವಿಕವಾದ ವಿವರಣೆಗಳು ಈ ಮದುವೆಯ ಹಾಡುಗಳ ವೈಶಿಷ್ಟ್ಯ. ಅಂತಹ ಒಂದು ಮದುವೆಯ ಹಾಡನ್ನು ಪರಿಶೀಲಿಸಬಹುದು :

"ತಂದನಾರೆ ತಾನಾರೆ ತಂದನಾರೆ ತಾನಾರೆ
ಸಾದಿಡ್ ಇಲ್ಲ್ ಕಟ್ಯೆರೆ ಏರೆ ಪಂಡಿನಿ ?
ಸಾದಿಡ್ ಇಲ್ಲ್ ಕಟ್ಯೆರೆ ಅಮ್ಮೆರೆ ಪಂಡಿನಿ
ಪೊರ್ಲುಲ ಪೊಣ್ಣು ಕನಯರೆ ಏರ್ ಪಂಡಿನಿ?
ಪೊರ್ಲುಲ ಪೊಣ್ಣು ಕನಯೆರೆ ಅಪ್ಪೆರ್ ಪಂಡಿನಿ.
ಪಾಡೆದ್'ಂಡೆ ಪೊಣ್ಣು ಪಟ್ಟೆ ರವಕೆ
ತುತ್ತುದುಂಡು ಪೊಣ್ಣು ಜಾಗಿನ ಪಟ್ಟೆ
ತುಂಬುದುಂಡು ಪೊಣ್ಣು ನೀರ ಕಂದೆಲ್
ತಟ್ಟೆದೆಂಡ್ ಪೊಣ್ಣು ಕೋಲು ಮಯಿ
ತಂದಾನಾರೆ ತಾನಾರೆ ತಂದನಾರೆ ತಾನಾರೆ
ದಗಬಲಟ್ ಕಾಯಿ ಅನಗ ಕಾಡ್ದಿ ಕುಕ್ಕು
ಮದಿಮುಳಾನಗ
ಕೊಯಿ ಕೊಯಿ ಮುತ್ತುಜಿ ಕೋಡು ಲತ್ತಣೆ
ಪುಡಿದೆಂಡೆ ಪೊಣ್ಣು ಪುಂಡಿ ತಂಬಿಲ
ಮುಟ್ಟುದುಂಡು ಪೊಣ್ಣು ಬೇರ ಸಂಕಲೆ
ಯೇಣೂರ ಗೋಳಿನವುಳು ದಾರೆ ಅಪುಂಡೆ
ಮದೆಕಟ್ಟೆ ದೊಂಪೊಡು ಮದಿಮ್ಮಾಯೆ
ಯೇರಾಜೆ ಗುಂಡೊಡು ಮದಿಮ್ಮಾಳೆ
ಪನಿ ಪನಿ ಬರ್ಸೊಗು ತತ್ರ ಬೋಡ
ಮುಂಡೆಯಿ ಗುಂಡಿಗೆ ಕಂತ್ರೆರಿ ಬೋಡ
ಮುಂಡೆಯಿದ ಗುಂಡಿಗೆ ಮುದಳೆದ ಸಿಂತೆ
ಈ ಎಂಚ ಬತ್ತ ಮಂಗ ಬಾಲೆ ಬಂಗಾರಿಯೆ
ಅಲ್ಲೇನ ದಂಡೆ ಪತ್ತೆ ಕಣಿಯೆ ಬತ್ತೆ
ತಂದಾನಾರೆ ತಾನಾರೆ ತಂದಾನಾರೆ ತಾನಾರೆ
ದೇನೆ ಅಪುಂಡೆ ಅವುಳು ದೇನೆ ಅಪುಂಡೆ
ಯೇಣೂರ ಗೋಳಿಸವುಳು ದೇಸೆ ಅಪುಂಡು ॥"

(ತಂದಾನಾರೆ ತಾನಾರೆ ತಂದಾನಾರೆ ತಾನಾರೆ
ದಾರಿಯಲ್ಲಿ ಮನೆ ಕಟ್ಟಲು ಯಾರು ಹೇಳಿದ್ದು ?
ದಾರಿಯಲ್ಲಿ ಮನೆ ಕಟ್ಟಲು ತಂದೆ ಹೇಳಿದ್ದು.
ಅಂದವಾದ ಹೆಣ್ಣು ತರಲು ಯಾರು ಹೇಳಿದ್ದು?
ಅಂದವಾದ ಹೆಣ್ಣು ತರಲು ತಾಯಿ ಹೇಳಿದ್ದು.

ಹಾಕಿದೆ ಹೆಣ್ಣು ಪಟ್ಟೆಯ ರವಿಕೆ
ಉಟ್ಟಿದೆ ಹೆಣ್ಣು ಪಟ್ಟೆಯ ಸೀರೆ
ಹೊತ್ತಿದ್ದಾಳೆ ಹೆಣ್ಣು ನೀರಿನ ಕಳಶ
ಎತ್ತಿಕೊಂಡಿದ್ದಾಳೆ ಹೆಣ್ಣು ಕಳ್ಳಿನ ಮಂಡಕೆ
ಹಚ್ಚಿದ್ದಾಳೆ ಹೆಣ್ಣು ಅಲಂಕಾರದ ಕಾಡಿಗೆ
ತಂದಾನಾರೆ ತಾನಾರೆ ತಂದಾನಾರೆ ತಾನಾರೆ
ದಗಬಲದಲ್ಲಿ ಕಾಯಿ ಆಗುವಾಗ, 'ಕಾಡ್ದ'
ಮಾವು ಮದುಮಗಳಾಗುವಾಗ
ಕೊಯಿದು ಕೊಯಿದು ಮುಗಿಯುವುದಿಲ್ಲ
ಕೋಡು ಅಲಸಂಡೆ
ಮುಟ್ಟಿದೆ ಹೆಣ್ಣು ಬೇರ ಸಂಕಲೆಗೆ
ವೇಣೂರಿನ ಗೋಳಿಯಲ್ಲಿ ಧಾರೆ ಆಗುತ್ತದೆ.

ಮರೆಕಟ್ಟಿದ ಚಪ್ಪರದಲ್ಲಿ ಮದುಮಗ
ಯೇರಾಜಿಯ ಗುಂಡದಲ್ಲಿ ಮದುಮಗಳು
ಹನಿ ಹನಿ ಮಳೆಗೆ ಕೊಡೆ ಬೇಕೋ?
'ಮುಂಡೆಯಿ'ಯ ಹಳ್ಳಕ್ಕೆ 'ತಂತ್ರಿ'
(ಮೀನು ಹಿಡಿಯುವ ಸಾಧನ) ಬೇಕೇ?
'ಮುಂಡೆಯಿ'ಯ ಹಳ್ಳದಲ್ಲಿ ಮೊಸಳೆಯಿದೆ
ನೀನು ಹೇಗೆ ಬಂದೆ ಮಂಗಳೇ ಬಾಲೆ ಬಂಗಾರಿಯೇ
ತಾವರೆಯ ದಂಟು ಹಿಡಿದು ಕಣಿಯ ಬಂದನು.
ತಂದಾನಾರೆ ತಾನಾರೆ ತಂದಾನಾರೆ ತಾನಾರೆ
ಸೇಸೆ ಆಗುತ್ತದೆ, ಅಲ್ಲಿ ಸೇಸೆ ಆಗುತ್ತದೆ.
ವೇಣೂರು ಗೋಳಿಯಲ್ಲಿ ಸೇಸೆ ಆಗುತ್ತದೆ.)

ಈ ಮದುವೆಯ ಹಾಡಿನಲ್ಲಿ ಮದುವೆಯ ಹೆಣ್ಣಿನ ಅಲಂಕಾರದ ವರ್ಣನೆ ಸರಳವಾಗಿ ಇದೆ – ಪಟ್ಟೆಯ ಸೀರೆ,ಪಟ್ಟೆಯ ರವಕೆ, ಕಣ್ಣಿಗೆ ಕಾಡಿಗೆ ಇತ್ಯಾದಿ ಜೊತೆಗೆ ತಲೆಯಲ್ಲಿ ನೀರಿನ ಮಂಡಕೆ, ಕಂಕುಳಲ್ಲಿ ಕಳ್ಳಿನ ಮಡಕೆ ಹೊತ್ತುಕೊಂಡು ಹೋಗುವ ಮದುಮಗಳ ಒಂದು ವಿಶಿಷ್ಟ ಸಂಪ್ರದಾಯವನ್ನೂ ಇಲ್ಲಿ ಹೇಳಲಾಗಿದೆ. ಮದುಮಗಳಿಗೆ ಹಿಡಿಯಬೇಕಾದ 'ಕೊಡೆ'ಯ ಪ್ರಸ್ತಾಪವಿದೆ. ಹಾಡಿನ ಆರಂಭದಲ್ಲಿ ಮನೆ ಕಟ್ಟಲು ಹೇಳುವ ತಂದೆ ಮತ್ತು ಹೆಣ್ಣು ತರಲು ಹೇಳುವ ತಾಯಿಯ ವಿಚಾರ ಬರುತ್ತದೆ. ಮದುವೆಯ ಸಂದರ್ಭದಲ್ಲಿ ಗಂಡು ಮತ್ತು ಹೆಣ್ಣು ಹಳ್ಳದಲ್ಲಿ ಮೀನುಹಿಡಿಯುವ ಒಂದು ವಿಶಿಷ್ಟ ಸಂಪ್ರದಾಯದ ವಿಚಾರ ಬರುತ್ತದೆ. ಕೊನೆಯಲ್ಲಿ ಗಂಡು ಹೆಣ್ಣಿಗೆ ಸೇಸೆಯಾಗುವ ಮಾತು ಇದೆ. ಸಾಂಪ್ರದಾಯಿಕ ಮದುವೆಯ ಕೆಲವು ಅಂಶಗಳನ್ನು ಈ ಹಾಡಿನ ಕೆಲವು ತುಣುಕುಗಳು ತಿಳಿಸುತ್ತವೆ.

# ತುಳು ಜನಪದ ಕಥೆಗಳು

(TULU FOLKTALES)

ಎಲ್ಲ ಜನಪದ ಸಾಹಿತ್ಯದಂತೆಯೇ ತುಳು ಜನಪದ ಸಾಹಿತ್ಯದಲ್ಲಿಯೂ ಜನಪದ ಕಥೆಗಳದ್ದು ಒಂದು ಪ್ರಮುಖ ಪ್ರಕಾರ. ತುಳುವಿನಲ್ಲಿ ಜನಪದ ಕಥೆ (Folktale) ಗಳನ್ನು 'ಕಥೆ' ಅಥವಾ 'ಅಜ್ಜಿಕಥೆ' ಎಂದು ಕರೆಯುತ್ತಾರೆ. ವಿಪುಲವಾಗಿ ಇರುವ ತುಳು ಜನಪದ ಕಥೆಗಳ ಸಂಗ್ರಹ ಈವರೆಗೆ ಆಗಿಲ್ಲ. ಒಂದೇ ಒಂದು ತುಳು ಜನಪದ ಕಥಾ ಸಂಗ್ರಹವೂ ಈವರೆಗೆ ಪ್ರಕಟವಾಗಿಲ್ಲ. 19ನೇ ಶತಮಾನದಲ್ಲಿ ತುಳು ಜನಪದ ಸಾಹಿತ್ಯವನ್ನು ಸ್ವಲ್ಪ ಮಟ್ಟಿಗೆ ಕಲೆ ಹಾಕಿದ ಬಾಸೆಲ್ ಮಿಷನರಿಗಳು ತುಳುಗಾದೆಗಳ ಮತ್ತು ಪಾಡ್ದನಗಳ ಸಂಗ್ರಹಕ್ಕೆ ಮಹತ್ವ ಕೊಟ್ಟವು. ಈ ಶತಮಾನದ ಮೂರು, ನಾಲ್ಕನೆಯ ದಶಕಗಳಲ್ಲಿ ಕೆಲವು ವಿದ್ವಾಂಸರು ಆಸ್ತಕರು ಕೆಲವು ಪಾಡ್ದನಗಳ ಸಂಗ್ರಹವನ್ನು ಮಾಡಿದರು. ಇತ್ತೀಚೆಗಿನ ವರ್ಷಗಳ ಸಂಗ್ರಾಹಕರೂ ತಮ್ಮ ಗಮನವನ್ನು ಪಾಡ್ದನಗಳ ಸಂಗ್ರಹಕ್ಕೇ ಮೀಸಲಾಗಿ ಇರಿಸಿದ್ದಾರೆ. ಭೂತಾರಾಧನೆಗೆ ಸಂಬಂಧಿಸಿದ ಪಾಡ್ದನಗಳು ಧಾರ್ಮಿಕವಾಗಿಯೂ ಇಲ್ಲಿನ ಜನಜೀವನದ ಮೇಲೆ ಪ್ರಭಾವ ಬೀರಿರುವುದರಿಂದ ಹಾಗೂ ಅಲ್ಲಿ ಕಂಡುಬರುವ ಕೆಲವು ವಿಶಿಷ್ಟ ಕಥನ ಶೈಲಿಗಳಿಂದಾಗಿ ತುಳು ಜನಪದ ಸಾಹಿತ್ಯದಲ್ಲಿ ಪಾಡ್ದನಗಳ ಸಂಗ್ರಹಕ್ಕೇ ಪ್ರಾಧಾನ್ಯ ದೊರೆಯಿತು ಮತ್ತು ಈಗಲೂ ದೊರಕುತ್ತಿದೆ. ಆದರೆ ಇಂತಹ ಯಾವುದೇ ಧಾರ್ಮಿಕ ಸಂದರ್ಭವಾಗಲೀ ಧಾರ್ಮಿಕ ವಸ್ತುವಾಗಲೀ ಜನಪದ ಕಥೆಗಳಿಗೆ ಇಲ್ಲ. ಕೇವಲ ಮನೋರಂಜನೆಗಾಗಿ ಮಾತ್ರ ತುಳು ಜನಪದ ಕಥೆಗಳು ಬಳಕೆಯಾಗುತ್ತವೆ. ಅವುಗಳ ವಸ್ತು ವಾಸ್ತವಿಕ ಅಲ್ಲ, ಅವು ಕಟ್ಟುಕತೆಗಳು ಎನ್ನುವ ದೃಢವಾದ ಭಾವನೆ ಅಂತಹ ಕಥೆಗಳನ್ನು ಹೇಳುವ ಹಳ್ಳಿಯವರಲ್ಲಿಯೂ ಇರುವುದರಿಂದ, ಅವುಗಳನ್ನು ಅವರು ಬಹಳ ಲಘುವಾಗಿ ಪರಿಗಣಿಸುತ್ತಾರೆ. ವಿದ್ವಾಂಸರು, ಸಂಗ್ರಾಹಕರು ಕೂಡಾ ಈ ದೃಷ್ಟಿಯಿಂದಲೇ ಜನಪದ ಕಥೆಗಳನ್ನು ಅವಗಣಿಸಿದ್ದಾರೆ. ಜಗತ್ತಿನ ಜನಪದ ಕಥೆಗಳ ಬಗ್ಗೆ ನಡೆದಿರುವ ಅಪಾರವಾದ ಸಂಶೋಧನೆ, ಅಧ್ಯಯನ, ಆ ಮೂಲಕ ಪ್ರಾದೇಶಿಕ ಭಾಷೆಗಳ ಜನಪದ ಕಥೆಗಳು ಸಂಗ್ರಹಿತವಾಗಬೇಕಾದ ಅಗತ್ಯ–ಈ ವಿಚಾರ ವೈಜ್ಞಾನಿಕವಾಗಿ ಯಾರಿಗೂ ಗೊತ್ತಿಲ್ಲದಿರುವುದು ಈ ಅವಜ್ಞೆಗೆ ಕಾರಣ. ಆದರೂ ಕುತೂಹಲದ ದೃಷ್ಟಿಯಿಂದ, ಮನೋರಂಜಕ ವಸ್ತುವಿದೆ ಎನ್ನುವುದಕ್ಕಾಗಿ 1970–71 ರಿಂದ 'ತುಳುಕೂಟ' ದಂತಹ ತುಳುಪತ್ರಿಕೆಗಳಲ್ಲಿ ತುಳು ಜನಪದ ಕಥೆಗಳು ಪ್ರಕಟವಾಗಿವೆ. ಕಥೆಯಾಗಿಯೇ ಸವಿಯುವ ದೃಷ್ಟಿಯೇ ಈ ಸಂಗ್ರಹಗಳಿಗೆ ಕಾರಣ. ಇವುಗಳು ಹೆಚ್ಚಾಗಿ ಧ್ವನಿಮುದ್ರಣದ ರೂಪದವು ಅಲ್ಲ. ಆದರೂ ಬಹುಮಟ್ಟಿಗೆ ಮೂಲಕ್ಕೆ ಹತ್ತಿರದವಂತೆ ಕಾಣಿಸುತ್ತವೆ. ಕೆಲವೊಮ್ಮೆ ಪತ್ರಿಕೆಯ ಪ್ರಕಟನೆಯ ದೃಷ್ಟಿಯಿಂದ ಭಾಷೆ ಶೈಲಿಯ ಶಿಷ್ಟ ಸ್ವರೂಪವನ್ನು ಕಾಣಬಹುದು. ನಾನು ಪ್ರತ್ಯೇಕವಾಗಿ ಧ್ವನಿಮುದ್ರಣ ಯಂತ್ರದ ಸಹಾಯದಿಂದ ಜನಪದ ಕಥೆಗಳನ್ನು ಸಂಗ್ರಹಿಸಿದ್ದೇನೆ. ಆದರೆ ವಿಸ್ತಾರವಾದ ತುಳುನಾಡನ್ನು ಸಮಗ್ರವಾಗಿ

ಈ ಸಂಗ್ರಹಕ್ಕೆ ಒಳಗುಪಡಿಸಲು ಸಾಧ್ಯವಾಗಲಿಲ್ಲ. ನನ್ನ ಸಂಗ್ರಹ ಹೆಚ್ಚಾಗಿ ಪುತ್ತೂರು ತಾಲೂಕು, ಬಂಟ್ವಾಳ ತಾಲೂಕು ಮತ್ತು ಮಂಗಳೂರು ತಾಲೂಕುಗಳಿಗೆ ಸೀಮಿತವಾಗಿದೆ. ಅದಕ್ಕಾಗಿ 'ತುಳುಕೂಟ' ಪತ್ರಿಕೆಯಲ್ಲಿ ಸಂಗ್ರಹವಾಗಿರುವ ಬೇರೆ ಬೇರೆ ಪ್ರದೇಶಗಳ ಕಥೆಗಳನ್ನೂ ಇಲ್ಲಿನ ಅಧ್ಯಯನಕ್ಕೆ ಬಳಸಿಕೊಂಡಿದ್ದೇನೆ. ತುಳುವಿನ ಸಮಗ್ರ ಜನಪದ ಕಥೆಗಳ ಸಂಗ್ರವಾಗದೆ, ಒಂದೊಂದೇ ಕಥೆಯನ್ನು 'ಚಾರಿತ್ರಿಕ ಭೌಗೋಳಿಕ ವಿಧಾನ' (Historical Geographical Method)ಕ್ಕೆ ಒಳಗು ಮಾಡುವುದು ಅಸಾಧ್ಯ. ಆದ್ದರಿಂದ ಇಲ್ಲಿ ಸಾಮಾನ್ಯವಾಗಿ ಪ್ರಾದೇಶಿಕ ಜನಪದ ಕಥೆಗಳ ಸಂಶೋಧನಾತ್ಮಕ ಅಧ್ಯಯನಗಳ ರೀತಿಯನ್ನೇ ಅನುಸರಿಸಲಾಗಿದೆ. (Dr. P .D. Goswami ಯವರ "Ballads And Tales of Assam" 1970—ಈ ಗ್ರಂಥದಲ್ಲಿನ 'Marchen' ನ ಅಧ್ಯಯನದ ಕ್ರಮವನ್ನೂ ಗಮನಿಸಲಾಗಿದೆ).

ತುಳು ಜನಪದ ಕಥೆಗಳನ್ನು—'ಕಥೆ ಅಥವಾ ಅಜ್ಜಿಕಥೆ' ಗಳನ್ನು ಹೆಚ್ಚಾಗಿ ರಾತ್ರಿಯ ವೇಳೆ ಹೇಳುತ್ತಾರೆ. ಅಜ್ಜಿ, ತಾಯಿ ಮುಂತಾದ ವಯಸ್ಸಾದ ಹೆಂಗಸರು ಸಾಮಾನ್ಯವಾಗಿ ಕಥೆ ಹೇಳುವವರು. ಗಂಡಸರೂ ಕಥೆ ಹೇಳು ವುದಿದೆ. ಆದರೆ ಬಹಳ ಕಡಿಮೆ. ಮಕ್ಕಳಿಗೆ ಅಥವಾ ಮೊಮ್ಮಕ್ಕಳಿಗೆ ರಾತ್ರಿಯ ವೇಳೆ ನಿದ್ದೆ ಮಾಡಿಸುವ ವೇಳೆಗೆ ಕಥೆ ಹೇಳುವ ಪದ್ಧತಿ ಇದೆ. ಮನೋರಂಜನೆಯ ಉದ್ದೇಶದಿಂದಲೇ ಸಮಯ ಕಳೆಯುವ ರೀತಿಯಲ್ಲಿ ಕಥೆಗಳನ್ನು ಹೇಳಲಾಗುತ್ತದೆ. ಈ ಕಥೆ ಹೇಳುವ ಕ್ರಮ ಈಗ ಬಹಳ ಕಡಿಮೆಯಾಗುತ್ತಾ ಬಂದಿದೆ. ನಾನು ಗಮನಿಸಿದಂತೆ, ಹಳ್ಳಿಗಳಲ್ಲಿ 20 ವರ್ಷಗಳ ಹಿಂದೆ ಕಥೆ ಹೇಳುವ ಪ್ರಮಾಣಕ್ಕೆ ಹೋಲಿಸಿದರೆ ಈಗಿನ ಕಥೆ ಹೇಳುವ ಪ್ರಮಾಣ ಶೇಕಡ 20 ಕ್ಕಿಂತಲೂ ಕಡಮೆ ಎನ್ನಿಸುತ್ತದೆ. ಇಷ್ಟು ಕಡಮೆ ಅವಧಿಯಲ್ಲಿ ಕಥೆ ಹೇಳುವ ಪ್ರಮಾಣ ಇಷ್ಟು ಇಳಿಮುಖವಾಗುವುದಕ್ಕೆ ಮುಖ್ಯ ಕಾರಣ—ಸಿನಿಮಾಗಳು ಮತ್ತು ರೇಡಿಯೋ. ತುಳುನಾಡಿನ ಪ್ರತಿ ಯೊಂದು ಹಳ್ಳಿಯಲ್ಲಿಯೂ ಪ್ರಧಾನ ಕಸುಬು ಆಗಿದ್ದ ಬೇಸಾಯದ ಬದಲು, ಹೆಚ್ಚು ಉತ್ಪನ್ನವಿರುವ ಬೀಡಿ ಕಟ್ಟುವ ಕೆಲಸ ಬಹಳ ಜನಪ್ರಿಯವಾಗಿದೆ. ಈಗ ಬೀಡಿ ಕಟ್ಟುವವರೆಲ್ಲಾ ಹಿಂದೆ ಬೇಸಾಯದ ಕೂಲಿ ಕೆಲಸ ಮಾಡುತ್ತಿದ್ದವರು ಅಥವಾ ಯಾವುದಾದರೂ ಸಾಂಪ್ರದಾಯಿಕ ವೃತ್ತಿ-ಕುಂಬಾರ, ಕಮ್ಮಾರ, ಗಾಣಿಗ, ಮಡಿವಾಳ, ಕಳ್ಳು ಇಳಿಸುವವ (ಬಿಲ್ಲವ)—ಮಾಡುತ್ತಿದ್ದವರು. ಜನಪದ ಕಥೆಗಳ ಮುಖ್ಯ ವಕ್ತೃಗಳೂ (informent) ಕೇಳುಗರೂ (Listener) ಹೆಚ್ಚಾಗಿ ಇವರೇ ಆಗಿದ್ದರು. ಇವರು ಇಪ್ಪತ್ತು ವರ್ಷಗಳ ಹಿಂದೆ ಸಿನೇಮಾವನ್ನು ನೋಡಿದವರಲ್ಲ, ರೇಡಿಯೋವನ್ನು ಕೇಳಿದವರಲ್ಲ. ಆದರೆ ಈ ಕೂಲಿಕಾರ ವರ್ಗದವರ ಮನೆಗಳಲ್ಲಿ ಇಂದು ರೇಡಿಯೋಗಳನ್ನು ಕಾಣುವುದು ತುಳುನಾಡಿನ ಹಳ್ಳಿಗಳಲ್ಲಿ ಮುಖ್ಯ ಅಂಶ. ಆದ್ದರಿಂದಲೇ ಅವರ ಮನೆಗಳಲ್ಲಿ ಜನಪದ ಕಥೆಗಳು ರಾತ್ರಿಯ ವೇಳೆ ಬಳಕೆಯಾಗುವ ಅವಕಾಶ, ಸಂದರ್ಭಗಳೇ ಇಲ್ಲ. ಇದಕ್ಕೆ ಅವರ ಮೇಲೆ ಆಗುತ್ತಿರುವ ಸಿನಿಮಾದ ಪ್ರಭಾವವೂ ಕಾರಣ. ಜನಪದ ಕಥೆಗಳ ಪರಂಪರೆ ಇದ್ದ ಮಧ್ಯಮ ವರ್ಗದವರ ಸ್ಥಿತಿಯೂ ಇದೇ ರೀತಿ ಆಗಿದೆ. ಆದ್ದರಿಂದ ತುಳು ಜನಪದ ಕಥೆಗಳು ಈಗ ಸಂಗ್ರಹಕ್ಕಾಗಿ ವಕ್ತೃಗಳಿಂದ ಸಿಗ ಬಹುದೇ ಹೊರತು, ಅದು ಒಂದು ಪರಂಪರೆಯಾಗಿ ಉಳಿಯುವ ಯಾವ ಲಕ್ಷಣವೂ ತುಳು ಸಂಸ್ಕೃತಿಯಲ್ಲಿ ಕಾಣಿಸುವುದಿಲ್ಲ.

ಈ ಅಧ್ಯಯನದಲ್ಲಿ ಒಟ್ಟು ಸುಮಾರು 50 ಜನಪದ ಕಥೆಗಳನ್ನು ಆರಿಸಿಕೊಳ್ಳಲಾಗಿದೆ. ವಸ್ತುವಿನ ದೃಷ್ಟಿಯಿಂದ ಮತ್ತು ಸ್ವರೂಪದ ದೃಷ್ಟಿಯಿಂದ ಎಲ್ಲ ವರ್ಗಗಳ ಪ್ರಾತಿನಿಧ್ಯವಿರುವ ಕಥೆಗಳನ್ನು ಇಲ್ಲಿ ಕಾಣ ಬಹುದು. ಅಂತಹ ವಿಶಿಷ್ಟ ಪ್ರಮುಖ ಕಥೆಗಳನ್ನು ಆರಿಸಿಕೊಂಡು ಅಧ್ಯಯನ ಮಾಡಲಾಗಿದೆ. 'ಜನಪದ ಕಥೆ' (Folktale) ಯನ್ನು ಕುರಿತು ಇಂಗ್ಲಿಷ್‌ನಲ್ಲಿ ಸಾಕಷ್ಟು ವಿವರವಾಗಿ ಸಂಶೋಧನೆಗಳು ನಡೆದು, ಅದರ ಸ್ವರೂಪವನ್ನು ತಿಳಿಸಲಾಗಿದೆ. ಕನ್ನಡ ಜನಪದ ಕಥೆಗಳ ಅನೇಕ ಸಂಗ್ರಹಗಳು ಬಂದಿದ್ದು, ಅವುಗಳಲ್ಲಿ ಕೆಲವು

ಶಾಸ್ತ್ರೀಯ ಸಂಗ್ರಹಗಳ ಪ್ರಸ್ತಾವನೆಗಳಲ್ಲಿಯೂ ಜನಪದ ಕಥೆಯ ಲಕ್ಷಣ ಸ್ವರೂಪದ ವಿವರಣೆಗಳು ಸಿಗತ್ತವೆ. ಆದ್ದರಿಂದ ಇಲ್ಲಿ ಅಂತಹ ವಿಷಯದ ಅನಾವಶ್ಯಕ ಪುನರಾವರ್ತನೆಯನ್ನು ಕೈಬಿಟ್ಟು, ತುಳು ಜನಪದ ಕಥೆಗಳು ಅಧ್ಯಯನಕ್ಕೇ ಗಮನ ಕೊಡಲಾಗಿದೆ.

**ಜನಪದ ಕಥೆಗಳ ಅಧ್ಯಯನದ ಭಿನ್ನ ರೀತಿಗಳು[1,2]**

ಜನಪದ ಕಥೆಗಳ ಅಧ್ಯಯನದಲ್ಲಿ ಮುಖ್ಯವಾಗಿ ಎರಡು ರೀತಿಗಳಿವೆ : (1) ಜನಪದ ಕಥೆಗಳ ಸ್ವರೂಪ ಮತ್ತು ಉಗಮ ಹಾಗೂ ಅದರ ಪ್ರಸರಣ. (2) ಜನಪದ ಕಥೆಗಳ ವಸ್ತು ಮತ್ತು ರೂಪದಲ್ಲಿ ಅಭಿವ್ಯಕ್ತವಾದ ಜನಪದ ಸಂಸ್ಕೃತಿ. ಈ ಎರಡು ದೃಷ್ಟಿಕೋನಗಳು ಬೇರೆ ಬೇರೆ ಮೂಲಗಳಿಂದ ಹುಟ್ಟಿಕೊಂಡಿವೆ. ಮೊದಲನೆಯದು ತೌಲನಿಕ ಸಾಹಿತ್ಯದಿಂದ ಪ್ರೇರಣೆಗೊಂಡುದು; ಎರಡನೆಯದು, ಫ್ರೆಂಚ್ ಸಮಾಜಶಾಸ್ತ್ರೀಯ ಮತ್ತು ಬ್ರಿಟಿಷ್ ಮಾನವ ಶಾಸ್ತ್ರೀಯ ಪ್ರಸ್ಥಾನಗಳಿಂದ ಬೆಳವಣಿಗೆ ಪಡೆದಿವೆ. ಈ ಪ್ರಸ್ಥಾನಗಳು ಜನಪದ ಸಮಾಜದ ಸಂಶೋಧನೆಗಾಗಿ ಜನಪದ ಕಥೆಯಂತಹ ಜನಪದ ಪರಂಪರೆಯನ್ನು ಬರೀ ಸಾಧನವಾಗಿ ಪರಿಗಣಿಸತ್ತವೆ. Folklore Fellows Association ನವರು ಅಂತರಾಷ್ಟ್ರೀಯ ಜನಪದ ಕಥನಗಳನ್ನು ತೌಲನಿಕವಾಗಿ ವಿಶ್ಲೇಷಿಸಿ, ಅವುಗಳ ಉಗಮ ಮತ್ತು ಪ್ರಸರಣಕ್ಕೆ ಸಂಬಂಧಿಸಿದಂತೆ ವಿಶೇಷವಾದ ಫಲಿತಾಂಶಗಳನ್ನು ಪಡೆದಿದ್ದಾರೆ. ಎರಡನೆಯ ವರ್ಗಕ್ಕೆ ಸೇರುವ ರಷ್ಯನ್ ಜಾನಪದ ವಿದ್ವಾಂಸರು ಜನಪದ ಕಥೆಗಳ ಸಮಾಜ ಶಾಸ್ತ್ರೀಯ ಐತಿಹಾಸಿಕ ವಿಶ್ಲೇಷಣೆಗೆ ಹೆಚ್ಚಿನ ಗಮನ ಕೊಟ್ಟಿದ್ದಾರೆ. Linda Degh ಅವರು ತಮ್ಮ 'Folktales and Society : Story telling in a Hungarian Peasant Community' ಎಂಬ ಗ್ರಂಥದಲ್ಲಿ Kakasdn Szeklurs ಜನಾಂಗದ ಜನಪದ ಕಥೆಗಳನ್ನು ಪ್ರಧಾನವಾಗಿ ಈ ದೃಷ್ಟಿಯಿಂದ ಅಧ್ಯಯನ ಮಾಡಿದ್ದಾರೆ. Stith Thompson ಅವರ 'The Folktale' ಗ್ರಂಥ ಜನಪದ ಕಥೆಗಳ ತೌಲನಿಕ ಅಧ್ಯಯನದ ಪ್ರಾತಿನಿಧಿಕ ಸಂಶೋಧನ ಗ್ರಂಥವಾಗಿದೆ. ಜನಪದ ಕಥಗಳನ್ನು ಪ್ರಾದೇಶಿಕವಾಗಿ, ಸಮಗ್ರವಾಗಿ ಅಧ್ಯಯನ ಮಾಡಿದಾಗ ಮಾತ್ರ (ಅದೂ 'Tape Recorder'ನ ಮೂಲಕ) Linda Deghರವರ ಮಾದರಿಯಲ್ಲಿ ಜನಪದ ಕಥೆಗಳನ್ನು ಸಾಂಸ್ಕೃತಿಕ ದೃಷ್ಟಿಯಿಂದ ಅಧ್ಯಯನ ಮಾಡಬಹುದು. ಆದರೆ ತುಳು ಜನಪದ ಕಥೆಗಳ ಸಂಗ್ರಹವು ಇಷ್ಟು ವ್ಯಾಪಕ ಪ್ರಮಾಣದಲ್ಲಿ ಆಗಿಲ್ಲದೆ ಇರುವುದರಿಂದ, ಆ ರೀತಿಯ ಸಂಶೋಧನೆಗೆ ಇಲ್ಲಿ ಹೆಚ್ಚು ಅವಕಾಶ ಸಿಕ್ಕಿಲ್ಲ. ಆದರೆ ಜನಪದ ಕಥೆಗಳ ಅಧ್ಯಯನದಲ್ಲಿ ಮಾನವಶಾಸ್ತ್ರೀಯ ಸಮಾಜಶಾಸ್ತ್ರೀಯ ಸಂಶೋಧನೆ (Anthropological Sociological Research of Folktales) ಇಂದು ಒಂದು ಪ್ರಮುಖ ರೀತಿಯಾಗಿರುವುದರಿಂದ, ಆ ದೃಷ್ಟಿಯಿಂದಲೂ ತುಳು ಜನಪದ ಕಥೆಗಳನ್ನು ಅಧ್ಯಯನ ಮಾಡಿ, ಅಂತಹ ವಿಚಾರಗಳನ್ನು ಈ ಅಧ್ಯಾಯದ ಕೊನೆಯ ಭಾಗದಲ್ಲಿ ಕೊಡಲಾಗಿದೆ.

ಆರಂಭದಲ್ಲಿ ಜನಪದ ಕಥೆಗಳ ಅಧ್ಯಯನದ ಹೆಚ್ಚು ಜನಪ್ರಿಯ ಕ್ರಮವಾದ ತೌಲನಿಕ ಕ್ರಮವನ್ನು, Stith Thompson ಅವರ 'ವರ್ಗಸೂಚಿ' (Type Index) ಯ ಆಧಾರದ ಮೇಲೆ ಕಥೆಗಳನ್ನು ವರ್ಗೀಕರಿಸಿಕೊಂಡು ಅನುಸರಿಸಲಾಗಿದೆ. ಜನಪದ ಕಥೆಗಳ ವರ್ಗೀಕರಣದಲ್ಲಿ Stith Thompson ಅವರ 'Types of

---

1. Linda Degh : 'Survey of the Results in Folktale Research to the Present'- Folktales and Society : Story Telling in a Hungurian Peasant Communites, 1969.
2. Linda Degh : 'Folk Narrative'; 'Folklore and Folklife'. Ed. Richard M. Dorson, 1972

the Folktale' (1961) ಬಹಳ ಪ್ರಸಿದ್ಧವಾದುದು. ಜನಪದ ಕಥಾವರ್ಗಸೂಚಿಯಲ್ಲಿ ಒಟ್ಟು ಐದು ಪ್ರಮುಖ ವಿಭಾಗಗಳಿವೆ:

1. ಪ್ರಾಣಿ ಕಥೆಗಳು (Animal Tales):

ವರ್ಗಗಳ ಸಂಖ್ಯೆ:

1— 99. ಕಾಡು ಪ್ರಾಣಿಗಳು (Wild Animals)

100—149. ಕಾಡುಪ್ರಾಣಿಗಳು ಮತ್ತು ಸಾಕುಪ್ರಾಣಿಗಳು (Wild Animals and Domestic Animals)

150—199. ಮನುಷ್ಯ ಮತ್ತು ಕಾಡು ಪ್ರಾಣಿಗಳು (Man and Wild Animals)

200—219. ಸಾಕು ಪ್ರಾಣಿಗಳು (Domestic Animals)

220—249. ಹಕ್ಕಿಗಳು (Birds)

250—274. ಮೀನು (Fish)

275—299. ಇತರ ಪ್ರಾಣಿಗಳು ಮತ್ತು ವಸ್ತುಗಳು (Other Animals and Objects)

2. ಸಾಮಾನ್ಯ ಜನಪದ ಕಥೆಗಳು (Ordinary Folktales) (300-1199) :

300—749. A. ಮಾಂತ್ರಿಕ ಕಥೆಗಳು (Tales of Magic).

300—399. ಅತಿಮಾನುಷ ವಿರೋಧಿಗಳು (Supernatural Adversaries)

400—459. ಅತಿಮಾನುಷ ಪತಿ (ಪತ್ನಿ) ಅಥವಾ ಇತರ ಸಂಬಂಧಿಕರು (Supernatural Husband (Wife) or other relatives).

460—499. ಅತಿಮಾನುಷ ಕಾರ್ಯಗಳು (Superhuman Tasks)

500—559. ಅತಿಮಾನುಷ ಸಹಾಯಕರು (Supernatural Helpers)

560—649. ಮಾಂತ್ರಿಕ ವಸ್ತುಗಳು (Magic Objects)

650—699. ಅತಿಮಾನುಷ ಶಕ್ತಿ ಅಥವಾ ಜ್ಞಾನ (Supernatural Power or Knowledge).

700—749. ಇತರ ಅತಿಮಾನುಷ ಕಥೆಗಳು (Other Tales of the Supernatural)

750—849. B. ಧಾರ್ಮಿಕ ಕಥೆಗಳು (Religious Stories)

850—999. C. Novelle. (Romantic Tales) (ರಮ್ಯ ಕಥೆಗಳು)

1000-1199. D. ಹೆಡ್ಡ ರಾಕ್ಷಸನ ಕಥೆಗಳು (Tales of Stupid Ogre)

3. Jokes and Anecdotes. (ತಮಾಷೆ ಮತ್ತು ವಿನೋದ ವೃತ್ತಾಂತಗಳು) (1200–1999)

1200—1349. ಮೂರ್ಖರ ಕಥೆಗಳು (Numskull Stories)

1350—1439. ದಂಪತಿಗಳನ್ನು ಕುರಿತ ಕಥೆಗಳು (Stories about Married Couples)

1440—1524. ಹೆಣ್ಣನ್ನು ಕುರಿತ ಕಥೆಗಳು (Stories about a Woman or Girl)

1525—1874. ಗಂಡನ್ನು ಕುರಿತ ಕಥೆಗಳು (Stories about a Man or Boy)

1875—1999. ಸುಳ್ಳಿನ ಕಥೆಗಳು (Tales of Lying)

4. ಸೂತ್ರ ಕಥೆಗಳು (Formula Tales) (2000 - 2399)

5. ವರ್ಗೀಕರಿಸದ ಕಥೆಗಳು (Unclassified Tales) (2400 - 2499)

ಮೇಲಿನ ಪ್ರಮುಖ ಮೂರು ವರ್ಗಗಳಾದ ಪ್ರಾಣಿ ಕಥೆಗಳು, ಸಾಮಾನ್ಯ ಜನಪದ ಕಥೆಗಳು ಮತ್ತು ತಮಾಷೆ ಹಾಗೂ ವಿನೋದ ವೃತ್ತಾಂತಗಳು. ಇವುಗಳಿಗೆ ತುಳು ಜನಪದ ಕಥೆಗಳಲ್ಲಿಯೂ ನಿದರ್ಶನಗಳು ಸಿಗುತ್ತವೆ. ಇಲ್ಲಿ ಅಧ್ಯಯನಕ್ಕೆ ಬಳಸಿಕೊಂಡ ಸುಮಾರು 50 ತುಳು ಜನಪದ ಕಥೆಗಳಲ್ಲಿ 4 ಪ್ರಾಣಿ ಕಥೆಗಳೂ 25 ಸಾಮಾನ್ಯ ಜನಪದ ಕಥೆಗಳೂ 21 ತಮಾಷೆ ಹಾಗೂ ವಿನೋದ ವೃತ್ತಾಂತಗಳ ಕಥೆಗಳೂ ಸಿಕ್ಕಿವೆ. 25 ಸಾಮಾನ್ಯ ಜನಪದ ಕಥೆಗಳಲ್ಲಿ 19 ಮಾಂತ್ರಿಕ ಕಥೆಗಳು, ಉಳಿದ 6 ರಮ್ಯ ಕಥೆಗಳು. ಈ ಸಂಖ್ಯಾ ಪ್ರಮಾಣ ಸ್ಥೂಲವಾಗಿ ತುಳು ಜನಪದ ಕಥೆಗಳ ಬೇರೆ ಬೇರೆ ವರ್ಗಗಳ ಪ್ರಮಾಣದ ಸ್ಥೂಲ ಕಲ್ಪನೆಯನ್ನು ಕೊಡುತ್ತದೆ. ಹೆಚ್ಚು ತುಳು ಜನಪದ ಕಥೆಗಳು ಸಂಗ್ರಹವಾದರೂ ಈ ಮೂರು ಪ್ರಮುಖ ವರ್ಗಗಳಲ್ಲಿನ ಕಥೆಗಳ ಸಂಖ್ಯಾ ಪ್ರಮಾಣ ವಿಶೇಷ ವ್ಯತ್ಯಾಸವನ್ನು ಪಡೆಯಲಾರದು.

ಇಂತಹ ವರ್ಗಗಳ ಒಳಗೆ ಬರುವ ತುಳು ಜನಪದ ಕಥೆಗಳನ್ನು ಸ್ಥೂಲವಾಗಿ ಆಯಾಯ ವರ್ಗಗಳ ಕೆಳಗೆ, ವರ್ಗ ಸಂಖ್ಯೆಗಳ ಸಂಕ್ಷಿಪ್ತ ವ್ಯಾಪ್ತಿಯೊಳಗೆ ಗುರುತಿಸಲಾಗಿದೆ. ಆದರೆ ಪ್ರತಿಯೊಂದು ಜನಪದ ಕಥೆಗೂ ಸ್ಪಷ್ಟವಾಗಿ ವರ್ಗಸಂಖ್ಯೆಯನ್ನು ಕೊಡಲು ಸಾಧ್ಯವಾಗಿಲ್ಲ. ಕಾರಣ, ಅನೇಕ ಕಥೆಗಳು ಈ ರೀತಿ ಇನ್ನೊಂದು ಕಥೆಯ ವರ್ಗವನ್ನು ಸರಿಯಾಗಿ ಹೋಲದಿರುವುದು. ಕೆಲವು ಕಥೆಗಳು ಎರಡು ಕಥೆಗಳ ಸಂಯೋಗದಿಂದ ಕೂಡಿಕೊಂಡಿವೆ.

ತುಳು ಜನಪದ ಕಥೆಗಳ ವರ್ಗೀಕರಣದಲ್ಲಿ Stith Thompson ಅವರ ವರ್ಗೀಕರಣ ಕ್ರಮದ "ಸರಳ ಕಥೆಗಳು" (Simple Tales) ಮತ್ತು "ಸಂಕೀರ್ಣ ಕಥೆಗಳು" (Complex Tales) – ಈ ಸ್ಥೂಲ ವಿಭಾಗವನ್ನು ಸಮರ್ಪಕವಾಗಿ ಅನ್ವಯಿಸಲು ಸಾಧ್ಯವಾಗುವುದಿಲ್ಲ.

Stith Thompson ಅವರ ಪ್ರಕಾರ—

1. ಸರಳ ಕಥೆಗಳು (Simple Tales)

1. ಪ್ರಾಣಿ ಕಥೆಗಳು (ವರ್ಗಗಳು 1-299)

2. ತಮಾಷೆ ಮತ್ತು ವಿನೋದ ವೃತ್ತಾಂತಗಳು. (ವರ್ಗಗಳು 1200 – 1999)

3. ಸೂತ್ರ ಕಥೆಗಳು. (ವರ್ಗಗಳು 2000 – 2399)

2. ಸಂಕೀರ್ಣ ಕಥೆಗಳು (Complex Tales)

1. ಮಾಂತ್ರಿಕ ಕಥೆಗಳು (ವರ್ಗಗಳು 300 – 749).

2. ಧಾರ್ಮಿಕ ಕಥೆಗಳು (ವರ್ಗಗಳು 750 – 849).

3. ರಮ್ಯ ಕಥೆಗಳು (ವರ್ಗಗಳು 850 – 999).

ಸರಳ ಜನಪದ ಕಥೆಗಳು ಕೇವಲ ಒಂದು ಅಥವಾ ಎರಡು ಆಶಯ (Motif)ಗಳನ್ನು ಹೊಂದಿದ್ದು, ತಮ್ಮ ರಚನೆಯಲ್ಲಿ ಸರಳವಾಗಿರುತ್ತವೆ. ಸಂಕೀರ್ಣ ಜನಪದ ಕಥೆಗಳು ಎರಡಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಆಶಯಗಳನ್ನು ಹೊಂದಿದ್ದು, ತಮ್ಮ ರಚನೆಯಲ್ಲಿ ಸಂಕೀರ್ಣವಾಗಿರುತ್ತವೆ.

ಆದರೆ ಸರಳ ಕಥೆಗಳಿಗೆ ಸಾಂಪ್ರದಾಯಿಕವಾಗಿ ಸೇರ್ಪಡೆಯಾಗುವ ಪ್ರಾಣಿ ಕಥೆಗಳು ಮತ್ತು ತಮಾಷೆ ಹಾಗೂ ವಿನೋದ ವೃತ್ತಾಂತಗಳು – ಈ ವರ್ಗದ ತುಳು ಕಥೆಗಳಲ್ಲಿ ಎರಡಕ್ಕಿಂತ ಹೆಚ್ಚಿನ ಆಶಯಗಳುಳ್ಳ ಕಥೆಗಳೂ ಸಿಗುತ್ತವೆ. ಆದರೆ ಹೋಲಿಕೆಯ ದೃಷ್ಟಿಯಿಂದ ಮಾಂತ್ರಿಕ ಹಾಗೂ ರಮ್ಯ ಕಥೆಗಳಿಗಿಂತ ಕಡಮೆ ಸಂಖ್ಯೆಯ ಆಶಯಗಳು ಇವೆ. ವರ್ಗೀಕರಣದ ದೃಷ್ಟಿಯಿಂದ ಸರಳ ಕಥೆ ಅಥವಾ ಅದೇ ಮಾದರಿಯ ಕಥೆಗಳನ್ನು ಸುಲಭವಾಗಿ ವರ್ಗೀಕರಿಸಬಹುದು. ಆದರೆ ಹೆಚ್ಚು ಸಂಖ್ಯೆಯ ಆಶಯಗಳಿರುವ ಸಂಕೀರ್ಣ ಕಥೆಗಳನ್ನು ಸೂಕ್ಷ್ಮವಾಗಿ ವರ್ಗೀಕರಣ ಮಾಡಲು ಅನೇಕ ತೊಡಕುಗಳಿವೆ. ಮಾಂತ್ರಿಕ ಕಥೆಗಳ ವಿಭಾಗದಲ್ಲಿ ಒಂದು ಕಥೆಯು ಅತಿಮಾನುಷ ವಿರೋಧಿ, ಅತಿಮಾನುಷ, ಸಹಾಯಕ. ಅತಿ ಮಾನುಷ ಪತಿ (ಪತ್ನಿ), ಮಾಂತ್ರಿಕ ವಸ್ತುಗಳು ಮುಂತಾದ ಅನೇಕ ಉಪವರ್ಗಗಳಿಗೆ ಸಂಬಂಧಿಸಿರುತ್ತದೆ. ಇವುಗಳಲ್ಲಿ ಅತಿ ಮುಖ್ಯವಾದುದು ಯಾವುದು ಎಂಬ ನಿರ್ಧಾರ ಅನೇಕ ಬಾರಿ ಸಾಧ್ಯವಾಗುವುದಿಲ್ಲ. ಆದ್ದರಿಂದ 'ಮಾಂತ್ರಿಕ ಕಥೆಗಳು' ವಿಭಾಗದಲ್ಲಿ ತುಳು ಜನಪದ ಕಥೆಗಳನ್ನು ಇರಿಸುವಾಗ, ಸೂಕ್ಷ್ಮವಾದ ವರ್ಗಗಳ ಒಳಗೆ ಅವುಗಳನ್ನು ಇರಿಸಲು ಸಾಧ್ಯವಾಗಿಲ್ಲ.

ತುಳು ಜನಪದ ಕಥೆಗಳ ಇಂತಹ ವರ್ಗೀಕರಣದ ಜೊತೆಗೆಯೇ ಆಯಾಯ ಕಥೆಯ ಕೆಳಗೆ ಆ ಕಥೆಯನ್ನು ಹೋಲುವ ಕನ್ನಡ ಜನಪದ ಕಥೆಗಳನ್ನೂ ತುಳು ಕಥೆಯ ವರ್ಗವನ್ನೂ ಹೆಚ್ಚು ಮಟ್ಟಿಗೆ ಹೋಲುವ ಜಾಗತಿಕ ಕಥೆಗಳ ವರ್ಗವನ್ನೂ ಚರ್ಚಿಸಲಾಗಿದೆ. ತುಳು ಜನಪದ ಕಥೆಗಳ ಆಶಯ ಸೂಚಿ (Motif Index) ಯನ್ನು ಮುಂದಿನ ಭಾಗದಲ್ಲಿ ಪ್ರತ್ಯೇಕವಾಗಿ ಕೊಟ್ಟಿರುವುದರಿಂದ, ಆ ಕುರಿತು ಕಥೆಗಳ ಸಂದರ್ಭದಲ್ಲಿ ವಿಶೇಷವಾಗಿ ಚರ್ಚಿಸಿಲ್ಲ. ತುಳು ಜನಪದ ಕಥೆಗಳ ಸ್ವರೂಪದಲ್ಲಿ ಎರಡು ಕಥೆಗಳ ಸಂಯೋಗದಿಂದ ಉಂಟಾದ ಸಂಕೀರ್ಣ ಕಥೆಯ ಸ್ವರೂಪದಂತಹ ಏನಾದರೂ ವೈಶಿಷ್ಟ್ಯಗಳಿದ್ದರೆ, ಅಂತಹ ಸಂಗತಿಗಳನ್ನೂ ಅಲ್ಲಿಯೇ ಗಮನಿಸಲಾಗಿದೆ. ಸಾಂಸ್ಕೃತಿಕವಾಗಿ ತುಳು ಜನಪದ ಕಥೆಗಳ ವಿಶಿಷ್ಟತೆಯನ್ನು ಮುಂದೆ ಪ್ರತ್ಯೇಕವಾಗಿಯೇ ಗಮನಿಸಿರುವುದರಿಂದ, ಆ ಕುರಿತೂ ಆಯಾಯ ಕಥೆಗಳ ಸಂದರ್ಭಗಳಲ್ಲಿ ಏನೂ ಪ್ರಸ್ತಾಪಿಸಿಲ್ಲ. ಪ್ರತಿಯೊಂದು ತುಳು ಜನಪದ ಕಥೆಯನ್ನೂ ಅದರ ಇಡೀ ಪಠ್ಯದ ಮೂಲಕ ಕೊಡುವುದು ಅಸಾಧ್ಯವೂ ಅನಗತ್ಯವೂ ಆಗಿರುವುದರಿಂದ ಆ ರೀತಿ ಮಾಡಿಲ್ಲ. ಆದರೆ ಕೆಲವಾದರೂ ತುಳು ಜನಪದ ಕಥೆಗಳ ರಚನೆಯನ್ನು ತಿಳಿಯಲು

ಅನುಕೂಲವಾಗುವಂತೆ, ಪ್ರತಿಯೊಂದು ವರ್ಗದಲ್ಲಿಯೂ ಪ್ರಾತಿನಿಧಿಕವಾಗಿ ಕೆಲವು ತುಳು ಕಥೆಗಳ ಸಂಪೂರ್ಣ ಪಾಠವನ್ನು ಕೊಡಲಾಗಿದೆ. ಉಳಿದ ಕಥೆಗಳ ಕಥಾಸಾರಾಂಶವನ್ನು ಮಾತ್ರ ಆರಂಭದಲ್ಲಿ ಕೊಟ್ಟು, ಅಧ್ಯಯನ ಮಾಡಿದೆ. ಈ ರೀತಿ ಕಥೆಯೊಂದರ ಕಥಾಸಾರಾಂಶವನ್ನು ಕೊಡುವಾಗ, ಕಥೆಯ ದೃಷ್ಟಿಯಿಂದ ಪ್ರಮುಖ ಘಟನೆಗಳನ್ನು ಮಾತ್ರ ಇಟ್ಟುಕೊಳ್ಳಲಾಗಿದೆ. ಯಾವುದೇ ಪ್ರಮುಖ ಆಶಯವೂ ಬಿಟ್ಟು ಹೋಗದಂತೆ ನೋಡಿಕೊಳ್ಳಲಾಗಿದೆ (Stith Thompson ಅವರು 'Folktale' ಗ್ರಂಥದಲ್ಲಿ, P. D. Goswami ಯವರು ತಮ್ಮ 'Ballads and Tales of Assum' ಗ್ರಂಥದಲ್ಲಿ Linda Degh ಅವರು 'Folktales and Society' ಗ್ರಂಥದಲ್ಲಿ ಅನುಸರಿಸಿದ ಕ್ರಮವನ್ನು ಮಾದರಿಗೆ ಇಟ್ಟುಕೊಳ್ಳಲಾಗಿದೆ). ತುಳು ಜನಪದ ಕಥೆಗಳ ಪೂರ್ಣ ಪಾಠವನ್ನು ಕೊಟ್ಟ ಅಥವಾ ಸಾರಾಂಶವನ್ನು ಕೊಟ್ಟ ವಿಚಾರವನ್ನು ಆಯಾಯ ಕಥೆಯ ಸಂದರ್ಭಗಳಲ್ಲಿ ತಿಳಿಸಲಾಗಿದೆ. ಈ ಎಲ್ಲ ಕಡೆಗಳಲ್ಲಿಯೂ ತುಳು ಜನಪದ ಕಥೆಗಳ ಕನ್ನಡ ಅನುವಾದವನ್ನೇ ಬಳಸಲಾಗಿದೆ. ಪಾಡ್ದನಗಳಂತೆ ತುಳು ಜನಪದ ಕಥೆಗಳಲ್ಲಿ ತುಳು ಭಾಷೆ, ಸಂಸ್ಕೃತಿಗೇ ವಿಶಿಷ್ಟವಾದ ಶೈಲಿ, ವಸ್ತು ಇಲ್ಲ. ಆದ್ದರಿಂದ ತುಳು ಮೂಲವನ್ನು ಕೊಡುವುದು ಅನಾವಶ್ಯಕವೆಂದು ಭಾವಿಸಿ ಕನ್ನಡ ಅನುವಾದ ಮತ್ತು ಕನ್ನಡ ರೂಪಾಂತರಗಳನ್ನು ಕೊಟ್ಟು, ಅಧ್ಯಯನಕ್ಕೆ ಒಳಪಡಿಸಲಾಗಿದೆ.

## 1. ಪ್ರಾಣಿ ಕಥೆಗಳು (Animal Tales) (ವರ್ಗಗಳು 1—299)

ತುಳು ಜನಪದ ಕಥೆಗಳಲ್ಲಿ ಶುದ್ಧಪ್ರಾಣಿ ಕಥೆ ತೀರ ವಿರಳ. ಆದ್ದರಿಂದ 1—99ರ ಕಾಡು ಪ್ರಾಣಿಗಳು, 100—149ರ ಕಾಡು ಪ್ರಾಣಿಗಳು ಮತ್ತು ಸಾಕು ಪ್ರಾಣಿಗಳು ಮುಂತಾದ ವರ್ಗಗಳಿಗೆ ನಿದರ್ಶನಗಳು ಸಿಗುವುದಿಲ್ಲ. ತುಳು ಜನಪದ ಕಥೆಗಳಲ್ಲಿ ಸಾಕುಪ್ರಾಣಿಗಳು ಪಾತ್ರಗಳಾಗಿ ಬಂದರೂ, ಅಂತಹ ಕಥೆಗಳು ಸ್ವರೂಪದಲ್ಲಿ ಮಾಂತ್ರಿಕ ಕಥೆಗಳು ಅಥವಾ ಹಾಸ್ಯ ಕಥೆಗಳು ಆಗಿರುತ್ತವೆ. ಪ್ರಾಣಿಗಳೇ ಪ್ರಧಾನ ಪಾತ್ರ ವಹಿಸುವ ರೀತಿಯಲ್ಲಿನ ಪ್ರಾಣಿ ಕಥೆಗಳಲ್ಲಿ, 150-199 : ಈ ವರ್ಗಗಳ 'ಮನುಷ್ಯ ಮತ್ತು ಕಾಡುಪ್ರಾಣಿಗಳು' (Man and Wild Animals) ಈ ವಿಭಾಗಕ್ಕೆ ಮಾತ್ರ ಉದಾಹರಣೆಗಳು ಸಿಗುತ್ತವೆ. ಒಂದು ಕಥೆಯಲ್ಲಿ 1-99 : 'ಕಾಡು ಪ್ರಾಣಿಗಳು' (Wild Animals) ಈ ವರ್ಗದ ಲಕ್ಷಣಗಳೂ ಇವೆ. ಇಂತಹ ಕಥೆಗಳಲ್ಲಿ ಇಲ್ಲಿನ ನಿದರ್ಶನಗಳು ನಾಲ್ಕು ಕೂಡಾ, ನರಿಗೆ ಸಂಬಂಧಪಟ್ಟವು ; ಕನ್ನಡ ಜನಪದ ಕಥೆಗಳಂತೆಯೇ ತುಳು ಜನಪದ ಕಥೆಗಳಲ್ಲಿಯೂ 'ತಂತ್ರಿ' (Thickster) ಯ ಪಾತ್ರವೇ ನರಿಗೆ ಮೀಸಲು. ನರಿಯ ಜಾಣತನ, ಕುತಂತ್ರಗಳನ್ನು ಇಂತಹ ಕಥೆಗಳಲ್ಲಿ ಕಾಣಬಹುದು. ಈ ರೀತಿಯ ಪ್ರಾಣಿ ಕಥೆಗಳಲ್ಲಿ ನರಿಯ ಜೊತೆಗೆ ಮನುಷ್ಯ ಪಾತ್ರಗಳೂ, ಇತರ ಪ್ರಾಣಿ ಪಾತ್ರಗಳೂ ಕಾಣಿಸಿಕೊಳ್ಳುತ್ತವೆ. ತುಳುವಿನಲ್ಲಿ 'ನರಿ'ಗೆ 'ಕುದಿಕ್ಕೆ' ಎನ್ನುತ್ತಾರೆ. ಇಂಗ್ಲಿಷ್‌ನಲ್ಲಿ ಇರುವಂತೆ 'Fox' ಮತ್ತು 'Jackal' ಎಂಬ ಪ್ರಭೇದವು ತುಳುವಿನಲ್ಲಿ ಇಲ್ಲ. ನರಿಯ ಜಾಣತನ, ಕುತಂತ್ರದಿಂದಾಗಿ ಅಂತಹ ಮನುಷ್ಯರನ್ನೂ 'ಕುದಿಕ್ಕೆ' (ನರಿ) ಎಂದು ತುಳುವಿನಲ್ಲಿ ಕರೆಯುವುದು ಸಾಮಾನ್ಯವಾಗಿ ರೂಢಿಯಲ್ಲಿದೆ. ತುಳು ಸಂಸ್ಕೃತಿಯಲ್ಲಿ ನರಿಯು ಕೋಳಿ ಮತ್ತು ಮುಳ್ಳು ಸೌತೆಕಾಯಿಗಳನ್ನು ಕದ್ದು ತಿನ್ನುವುದಕ್ಕೆ ಪ್ರಸಿದ್ಧವಾಗಿದೆ.

ನರಿಯ ಜಾಣತನಕ್ಕೆ ಸಂಬಂಧಿಸಿದ ನಾಲ್ಕು ಕತೆಗಳನ್ನು ಮುಂದೆ ಕೊಡಲಾಗಿದೆ. ಇಲ್ಲಿ ತುಳು ಮೂಲ ರೂಪದ ಸಂಪೂರ್ಣ ಅನುವಾದವನ್ನೇ ಇಟ್ಟುಕೊಳ್ಳಲಾಗಿದೆ.

## 1. ನರಿಯಣ್ಣನ ಬುದ್ಧಿವಂತಿಕೆ

"ದೊಡ್ಡ ತೋಡಿನ ದಂಡೆಯಲ್ಲಿ ಒಂದು ದ್ರಾಕ್ಷಿಯ ಮರ ಇತ್ತು. ಆ ದಾರಿಯಾಗಿ ಒಂದು ನರಿಯು ಬಂದಿತು. ಆ ನರಿಗೆ ಹಣ್ಣು ದ್ರಾಕ್ಷಿಯನ್ನು ನೋಡಿ, ಅದನ್ನು ತಿನ್ನಬೇಕೆಂದು ಆಶೆ ಆಗಿ, ಮೆಲ್ಲನೆ ಮರಕ್ಕೆ ಹತ್ತಿ, ಗೆಲ್ಲಿನಲ್ಲಿ ಕುಳಿತುಕೊಂಡು ಒಂದೊಂದೇ ದ್ರಾಕ್ಷಿಯನ್ನು ಕೊಯಿದು ತಿನ್ನಲು ಸುರುಮಾಡಿತು. ಆ ಹೊತ್ತಿನಲ್ಲಿ ಒಂದು ಕಾಡು ಹಂದಿಯು ಆ ದಾರಿಯಾಗಿ ಬಂದಿತು. ಆ ಹಂದಿಗೆ ಮೂರು ದಿನಗಳಿಂದ ತಿನ್ನಲು ಏನೂ ಸಿಕ್ಕದೆ ಹಸಿವೆಯಿಂದ ಕಂಗಾಲು ಆಗಿತ್ತು. ನರಿಯಣ್ಣನು ಮರದಲ್ಲಿ ಕುಳಿತುಕೊಂಡಿರುವುದನ್ನು ನೋಡಿ ಆ ಹಂದಿಯು 'ನರಿಯಣ್ಣಾ ನರಿಯಣ್ಣಾ, ನೀನು ಮರದಲ್ಲಿ ಕುಳಿತುಕೊಂಡು ಏನು ತಿನ್ನುವುದು ?' ಎಂದು ಕೇಳಿತು. ಆಗ ಮಹಾ ಜಾಣನಾದ ನರಿಯಣ್ಣನು ಹೇಳಿತು : 'ನಾನೋ ಹಂದಿಯಣ್ಣಾ, ನಾನು ನನ್ನ ಎರಡು ಕಣ್ಣುಗಳಿಂದ ಒಂದು ಕಣ್ಣನ್ನು ತಿಂದದ್ದು. ಹಸಿವಾದ ವೇಳೆಯಲ್ಲಿ ಬಹಳ ರುಚಿಯಾಗಿತ್ತು' ಎಂದು ಹೇಳಿ, ತನ್ನ ಎರಡು ಕಣ್ಣುಗಳಲ್ಲಿ ಒಂದು ಕಣ್ಣನ್ನು ಮುಚ್ಚಿಕೊಂಡಿತು.

ಇದನ್ನು ಕೇಳಿದ ಪೆದ್ದ ಹಂದಿಯ ಬಾಯಿಯಲ್ಲಿ ನೀರು ಇಳಿಯಿತು. ಆಗಲೇ ಹಂದಿರಾಯ ನರಿಯಲ್ಲಿ ಹೇಳಿತು: 'ಹೌದೋ ನರಿಯಣ್ಣಾ, ನನ್ನದೂ ಒಂದು ಕಣ್ಣನ್ನು ಕಿತ್ತು ನನ್ನಲ್ಲಿ ಕೊಡು. ನಾನೂ ತಿನ್ನುತ್ತೇನೆ.' ಕೂಡಲೇ ನರಿಯು ಮರದಿಂದ ಕೆಳಕ್ಕೆ ಇಳಿದು, ಹಂದಿಯ ಒಂದು ಕಣ್ಣನ್ನು ಕಿತ್ತು, ಹಂದಿಯ ಕೈಯಲ್ಲಿ ಕೊಟ್ಟಿತು. ಪೆದ್ದಹಂದಿಯು ಕಣ್ಣನ್ನು ಬಾಯಿಯಲ್ಲಿ ಹಾಕಿ, ಚಪ ಚಪ ಎಂದು ಜಗಿದು ತಿಂದಿತು. ಬುದ್ಧಿವಂತನಾದ ನರಿಯು ಮತ್ತೆ ಮರಕ್ಕೆ ಹತ್ತಿ, ಮತ್ತೊಂದು ದ್ರಾಕ್ಷಿ ಹಣ್ಣನ್ನು ಕೊಯಿದು ತಿಂದಿತು. ಅದನ್ನು ನೋಡಿದ ಹಂದಿಯು 'ನರಿಯಣ್ಣಾ ನರಿಯಣ್ಣಾ, ನೀನು ಮತ್ತೊಮ್ಮೆ ಏನನ್ನು ತಿಂದದ್ದು ?' ಎಂದು ಕೇಳಿತು. ಆಗ ನರಿಯು 'ನಾನು ನನ್ನ ಇನ್ನೊಂದು ಕಣ್ಣನ್ನೂ ತಿಂದೆನು' ಎಂದು ಹೇಳಿ, ತನ್ನ ಎರಡೂ ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡಿತು. ಅದನ್ನು ನೋಡಿದ ಪೆದ್ದಹಂದಿಯು 'ನರಿಯಣ್ಣಾ ನರಿಯಣ್ಣಾ, ನನ್ನ ಇನ್ನೊಂದು ಕಣ್ಣನ್ನೂ ಕಿತ್ತುಕೊಡು ನಾನೂ ತಿನ್ನುತ್ತೇನೆ' ಎಂದಿತು. ಕೂಡಲೇ ನರಿಯು ಮರದಿಂದ ಇಳಿದು, ಹಂದಿಯ ಇನ್ನೊಂದು ಕಣ್ಣನ್ನೂ ಕಿತ್ತು ಕೈಯಲ್ಲಿ ಕೊಟ್ಟಿತು. ಹಂದಿಯು ಅದನ್ನು ಜಗಿದು ತಿಂದಿತು.

ಪಾಪ, ಮೋಸಗಾರ ನರಿಯಣ್ಣನ ಕುತಂತ್ರದಿಂದಾಗಿ ಪೆದ್ದಹಂದಿಯ ಎರಡು ಕಣ್ಣುಗಳೂ ಹೋಯಿತು. ಕಣ್ಣುಗಳನ್ನು ಕಳೆದುಕೊಂಡು ಹಂದಿಗೆ ದಾರಿ ಕಾಣದೆಯೂ ಕಣ್ಣಿನ ನೋವಿನಿಂದಲೂ ನಿಂತಲ್ಲಿ ನಿಲ್ಲಲು ಆಗಲಿಲ್ಲ. ಹಂದಿಗೆ ಮೈನಡುಗಲು ಶುರುವಾಯಿತು. ಹೆದರಿ ಹೆದರಿ ಹಂದಿಯು–'ನರಿಯಣ್ಣಾ, ನರಿಯಣ್ಣಾ. ನಮಗೆ ಇಬ್ಬರಿಗೂ ಕಣ್ಣು ಇಲ್ಲ. ದಾರಿ ಕಾಣುವುದಿಲ್ಲ. ನಾವು ಹೇಗೆ ಹೋಗುವುದು?' ಆಗ ನರಿಯು ಹೇಳಿತು–'ಹೌದೋ ಹಂದಿಯಣ್ಣಾ, ನನಗೆ ಜ್ಞಾನ ಶಕ್ತಿಯಿಂದ ಸ್ವಲ್ಪ ಸ್ವಲ್ಪ ಕಾಣಿಸುತ್ತಿದೆ. ನಿನ್ನನ್ನು ನಾನು ಕರೆದುಕೊಂಡು ಹೋಗುತ್ತೇನೆ. ಆದರೆ ನಾನು ಹೇಳುವುದನ್ನು ಜ್ಞಾಪಕದಲ್ಲಿಟ್ಟುಕೋ. ಸಪೂರವಾದ ದಾರಿ ಇದ್ದಲ್ಲಿ ಮೆಲ್ಲನೆ ಬರಲು ಹೇಳುತ್ತೇನೆ. ಅಗಲವಾದ ದಾರಿ ಇರುವಲ್ಲಿ, ಓಡಿಕೊಂಡು ಬರಲು ಹೇಳುತ್ತೇನೆ. ನೀನು ನಾನು ಹೇಳಿದಂತೆ ಬರಬೇಕು' ಕಣ್ಣು ಇಲ್ಲದ ಹಂದಿಯು ನರಿಯ ಹಿಂದೆಯೇ ಹೋಯಿತು, ಆದರೆ ನರಿಯು ಏನು ಮಾಡಿತು ; ಅಗಲವಾದ ದಾರಿ ಇರುವಲ್ಲಿ 'ಇದು ಸಪೂರವಾದ ದಾರಿ, ಇದರಲ್ಲಿ ಮೆಲ್ಲನೆ ಬಾ' ಎಂದು ಹೇಳಿತು. ಸಪೂರವಾದ ದಾರಿ ಇರುವಲ್ಲಿ 'ಇದು ಅಗಲವಾದ ದಾರಿ, ಇದರಲ್ಲಿ

ಓಡಿಕೊಂಡು ಬಾ' ಎಂದು ಹೇಳಿತು. ನರಿಯು ಹೇಳಿದಂತೆಯೇ ಹಂದಿಯು ಸಪೂರವಾದ ದಾರಿಯಲ್ಲಿ ಓಡಿಕೊಂಡು ಹೋಯಿತು; ಹೋಗಿ ಒಂದು ದೊಡ್ಡ ಹಳ್ಳಕ್ಕೆ ಬಿದ್ದು ಸತ್ತೇ ಹೋಯಿತು. ಇದನ್ನು ನೋಡಿ ನರಿಯಣ್ಣನಿಗೆ ಬಹಳ ಸಂತೋಷವಾಯಿತು.

ಹಂದಿಯ ಮಾಂಸ ತಿನ್ನಲಿಕ್ಕೆಂದು ಹಳ್ಳಕ್ಕೆ ಇಳಿಯಿತು. ಮುದಿ ಹಂದಿಯ ಚರ್ಮವು ಆನೆಯ ಚರ್ಮದಂತೆ ಗಟ್ಟಿಯಾಗಿತ್ತು. ನರಿಗೆ ಹಂದಿಯ ಚರ್ಮವನ್ನು ಬಿಡಿಸಲು ಆಗಲಿಲ್ಲ, ಇದಕ್ಕಾಗಿ ಅದು ಒಂದು ಉಪಾಯ ಮಾಡಿತು. ಒಂದು ಗುಡ್ಡದ ತುದಿಗೆ ಹೋಗಿ ಊರಿನ ಜನರೆಲ್ಲರಿಗೂ ಕೇಳಿಸುವಂತೆ, 'ಇಲ್ಲೊಂದು ಹಂದಿ ಬಿದ್ದು ಸತ್ತಿದೆ. ಹಂದಿ ಬಿದ್ದು ಸತ್ತಿದೆ' ಎಂದು ಮೂರು ಬಾರಿ ಗಟ್ಟಿಯಾಗಿ ಬೊಬ್ಬೆ ಹಾಕಿ ಹೇಳಿತು. ಇದನ್ನು ಕೇಳಿದ ಊರವರು ಎಲ್ಲ ಜನರೂ - ಚಿಕ್ಕವರು, ದೊಡ್ಡವರು, ಗಂಡಸರು, ಹೆಂಗಸರು – ದೊಡ್ಡ ದೊಡ್ಡ ಕತ್ತಿ ತೆಗೆದುಕೊಂಡು ಹಂದಿ ಮಾಂಸದ ಆಸೆಗಾಗಿ ಓಡಿಕೊಂಡು ಬಂದರು. ಇದನ್ನು ನೋಡಿದ ನರಿಯು ಊರಿಗೆ ಓಡಿತು.

ಈ ಕಡೆ ಊರಿನವರೆಲ್ಲ ಸೇರಿ ಹಂದಿಯ ಮಾಂಸವನ್ನು ಪಾಲು ಮಾಡುವ ಕೆಲಸದಲ್ಲಿ ಮಗ್ನರಾದರು. ಆ ಕಡೆ ನರಿಯಣ್ಣನು ಪ್ರತಿಯೊಂದು ಮನೆಗೂ ನುಗ್ಗಿ, ಬೇಕಾದಷ್ಟು ತಿಂದು, ಪ್ರತಿಯೊಂದು ಮನೆಗೂ ಬೆಂಕಿ ಕೊಡಲು ಶುರುಮಾಡಿತು. ಈ ವಿಷಯ ಊರಿನವರಿಗೆ ಯಾರಿಗೂ ಗೊತ್ತಾಗಲಿಲ್ಲ. ಎಲ್ಲಾ ಮನೆಗಳೂ ಬೆಂಕಿಯಲ್ಲಿ ಉರಿಯುವುದನ್ನು ನೋಡಿ, ನರಿಯು ಗುಡ್ಡದ ತುದಿಗೆ ಹೋಗಿ, ಹಂದಿಯ ಮಾಂಸವನ್ನು ಪಾಲು ಮಾಡುವ ಜನರಿಗೆ ಕೇಳಿಸುವಂತೆ, 'ಇಲ್ಲಿ ಮನೆ ಉರಿಯುತ್ತಿದೆ, ಮನೆ ಉರಿಯುತ್ತಿದೆ, ಓಡಿ ಬನ್ನಿ, ಓಡಿ ಬನ್ನಿ' ಎಂದು ಬೊಬ್ಬೆ ಹಾಕಿತು. ಹಂದಿ ಮಾಂಸವನ್ನು ಪಾಲು ಮಾಡುವುದರಲ್ಲೇ ಮಗ್ನರಾಗಿದ್ದ ಜನರು ಇದನ್ನು ಕೇಳಿ, ಮಾಂಸವನ್ನು ಅಲ್ಲೇ ಬಿಟ್ಟು ಓಡಿಕೊಂಡು ಬಂದು, ಮನೆಗಳ ಬೆಂಕಿಯನ್ನು ಆರಿಸಲು ಶುರು ಮಾಡಿದರು. ಇದನ್ನು ನೋಡಿದ ನರಿಯಣ್ಣನು ಹಂದಿಯ ಹತ್ತಿರ ಬಂದು, ತುಂಡು ತುಂಡು ಮಾಡಿ ಇಟ್ಟ ಹಂದಿಯ ರುಚಿ ರುಚಿಯಾದ ಮಾಂಸವನ್ನು ಹೊಟ್ಟೆ ತುಂಬ ತಿಂದು, ಉಳಿದುದನ್ನು ತೆಗೆದುಕೊಂಡು ಕಾಡಿಗೆ ಹೋಯಿತು.

ನರಿಯ ಜಾಣತನವನ್ನು, ಕುತಂತ್ರವನ್ನು ಹೇಳುವ ಈ ಪ್ರಾಣಿ ಕಥೆಯಲ್ಲಿ ಎರಡು ಭಾಗಗಳಿವೆ. ಈ ಕಥೆಯನ್ನು ಎರಡು ಸರಳ ಕಥೆಗಳ ಸಂಯುಕ್ತ ರೂಪವೆಂದೂ ಕರೆಯಬಹುದು. ಮೊದಲನೆಯ ಭಾಗವು 1–99 ರ ವರ್ಗಕ್ಕೆ ಸೇರುವ ಕಾಡು ಪ್ರಾಣಿಗಳು (Wild Animals) ಎಂಬ ವಿಭಾಗದಲ್ಲಿ ಬರುತ್ತದೆ. ಇಲ್ಲಿ ಜಾಣನರಿ ಮತ್ತು ಹೆಡ್ಡುಹಂದಿಗಳೆಂಬ ಎರಡು ಕಾಡು ಪ್ರಾಣಿಗಳು ಮಾತ್ರ ಬರುತ್ತವೆ. ಹಂದಿಯನ್ನು ನರಿಯು ಎರಡು ಘಟನೆಗಳ ಮೂಲಕ ಮೋಸಗೊಳಿಸುತ್ತದೆ. 1. ಹಂದಿಯು ತನ್ನ ಕಣ್ಣುಗಳನ್ನು ತಾನೇ ತಿನ್ನುವಂತೆ ಮಾಡುವುದರ ಮೂಲಕ, 2. ಕಣ್ಣು ಕಳೆದುಕೊಂಡ ಹಂದಿಯು ನರಿಯ ತಪ್ಪು ಮಾರ್ಗದರ್ಶನದಲ್ಲಿ ಹಳ್ಳಕ್ಕೆ ಬೀಳುವಂತೆ ಮಾಡುವುದರ ಮೂಲಕ. ಈ ಎರಡು ಘಟನೆಗಳು ಹೋಲಿಕೆಯ ದೃಷ್ಟಿಯಿಂದ 1-99 ರ ವರ್ಗದಲ್ಲಿ ಪ್ರತ್ಯೇಕ ಸ್ಥಾನಗಳನ್ನು ಪಡೆದಿವೆ. ವರ್ಗ 21– ತೋಳವು ತನ್ನ ಕರುಳನ್ನು ತಾನೇ ತಿನ್ನುವಂತೆ ನರಿಯು ಮಾಡುವುದು. ವರ್ಗ 30 – ತೋಳವು ಹಳ್ಳಕ್ಕೆ ಬೀಳುವಂತೆ ನರಿಯು ತಂತ್ರ ಹೂಡುವುದು. ಕನ್ನಡ ಜನಪದ ಕಥೆಯೊಂದರಲ್ಲಿಯೂ ನರಿಯು ಇತರ ನರಿಗಳನ್ನು ವಂಚನೆಯ ಮೂಲಕ ಅವುಗಳು ತಮ್ಮ ಕರುಳನ್ನು ತಾವೇ ತಿನ್ನುವಂತೆ ಮಾಡುವ ಆಶಯವಿದೆ[1]

---

1 ಡಾ॥ ಜೀ. ಶಂ. ಪರಮಶಿವಯ್ಯ : ದ. ಕನ್ನಡ ಜನಪದ ಕಥೆಗಳು' ಈ ಸಂಕಲನದ 'ಗುಳ್ಳೇನರಿ' ಕಥೆ, ಪು. 245

(K 1025). ಹುಲಿಯು ತನ್ನ ಕಣ್ಣನ್ನು ತಾನೇ ತಿನ್ನುವಂತೆ ಪ್ರೇರೇಪಿಸುವ ಆಶಯ (K 1025·2) ಸಿಗುತ್ತದೆ.

'ನರಿಯಣ್ಣನ ಬುದ್ಧಿವಂತಿಕೆ ಕಥೆ'ಯ ಎರಡನೆಯ ಭಾಗವು 150-199 – ವರ್ಗದ, ಮನುಷ್ಯ ಮತ್ತು ಕಾಡು ಪ್ರಾಣಿಗಳು (Man and Wild Animals) ಎಂಬ ಗುಂಪಿಗೆ ಸೇರುತ್ತದೆ. ಇಲ್ಲಿ ನರಿಯು ಜಾಣತನದಿಂದ ಮನುಷ್ಯರನ್ನು ಮೋಸಗೊಳಿಸುತ್ತದೆ. ಸತ್ತುಹೋದ ಹಂದಿಯ ಮಾಂಸವನ್ನು ಕಿತ್ತು ತಿನ್ನಲು ಸಾಧ್ಯವಾಗದ ನರಿಯು ಅದಕ್ಕಾಗಿ ಉಪಾಯದಿಂದ ಮನುಷ್ಯರನ್ನು ಕರೆದು, ಅವರು ಅದರ ಮಾಂಸವನ್ನು ಸಿದ್ಧ ಮಾಡುವಷ್ಟರಲ್ಲಿ ಮತ್ತೆ ಅವರು ಅದನ್ನು ಅಲ್ಲೇ ಬಿಟ್ಟು ಮನೆಗಳಿಗೆ ಓಡುವಂತೆ ಮಾಡುವ ಘಟನೆ ಇಲ್ಲಿ ಇದೆ. ಈ ದೃಷ್ಟಿಯಿಂದ ಇದು ಹಿಂದಿನ ಘಟನೆಗೆ ಸಂಬಂಧಿಸಿ ಕಥೆಯ ಮುಂದುವರಿದ ಭಾಗವಾಗುತ್ತದೆ. ಆದರೆ ಪ್ರತ್ಯೇಕವಾಗಿಯೂ ಈ ಘಟನೆಯು ಸರಳ ಕಥೆಯ ರೂಪದಲ್ಲಿ ಸಿಗುತ್ತದೆ. ಮನುಷ್ಯರಂತೆಯೇ ಇಲ್ಲಿ ನರಿಯು ಜನರನ್ನು ಕೂಗಿ ಕರೆಯುತ್ತದೆ. ಮನೆಗಳಿಗೆ ಬೆಂಕಿ ಕೊಡುತ್ತದೆ. ಈ ಘಟನೆಗಳುಳ್ಳ ಎರಡನೆಯ ಭಾಗವು ಮೂಲರೂಪವಾಗಿರಬಹುದಾದ ಮೊದಲನೆಯ ಭಾಗಕ್ಕೆ ಅನಂತರದ ಸೇರ್ಪಡೆಯಾಗಿರಬಹುದು. ಕಥೆಯೊಂದನ್ನು ಮುಂದುವರಿಸುತ್ತಾ ಹೋಗುವ ಪ್ರವೃತ್ತಿ ಈ ಭಾಗದ ಸೃಷ್ಟಿಗೆ ಕಾರಣವಾಗಿರಬಹುದು.

## (೨) ನರಿಯಣ್ಣನ ತೀರ್ಪು

"ಒಂದು ಹುಲಿಯು ಒಂದು ಊರಿನ ಜನರಿಗೂ ಅವರ ಜಾನುವಾರುಗಳಿಗೂ ಬಹಳ ತೊಂದರೆ ಕೊಡುತ್ತಿತ್ತು. ಊರಿನ ಜನರು ಆ ಹುಲಿಯನ್ನು ಹಿಡಿಯಬೇಕು ಎಂದು ಒಟ್ಟಾಗಿ ಒಂದು ನಿರ್ಧಾರಕ್ಕೆ ಬಂದರು.

ಒಂದು ದಿನ ಆ ಹುಲಿ ಬರುವ ಹೊತ್ತಿನಲ್ಲಿ ಊರಿನ ಜನರೆಲ್ಲರೂ ಬಲೆ ಹಿಡಿದುಕೊಂಡು ಸಿದ್ಧರಾದರು. ಹಾಗೆಯೇ ಒಂದು ಪಂಜರವನ್ನೂ ತಯಾರು ಮಾಡಿದರು. ಅಷ್ಟಾಗುವಾಗ ಆ ಹುಲಿಯು ಬಂದಿತು. ಆ ಜನಗಳು ಬಲೆಯ ಆಚೆ ಬದಿಯಲ್ಲಿ ಒಂದು ದನವನ್ನು ಕಟ್ಟಿಹಾಕಿದರು. ಈ ಹುಲಿಯು ದನವನ್ನು ನೋಡಿ ಬಹಳ ಸಂತೋಷದಿಂದ ಓಡಿಕೊಂಡು ಬಂದಿತು. ಬರುವ ರಭಸದಲ್ಲಿ ಈ ಬಲೆ ಹಾಕಿ ಇಟ್ಟದ್ದನ್ನು ಹುಲಿ ನೋಡಲಿಲ್ಲ. ಓಡಿಕೊಂಡು ಬಂದು ಈ ಬಲೆಯ ಒಳಗೆ ಬಿದ್ದಿತು. ಆಗ ಹುಲಿಯನ್ನು ಹಿಡಿಯಲು ಸಿದ್ಧರಾಗಿದ್ದ ಜನರು ಬಂದು ಹುಲಿಯನ್ನು ಹಿಡಿದು, ಪಂಜರದೊಳಗೆ ಬಂಧಿಸಿದರು.

ಕೆಲವು ದಿನಗಳು ಕಳೆದುವು. ಆ ಹುಲಿಯ ಹತ್ತಿರ ಯಾವನೊಬ್ಬ ಮನುಷ್ಯನೂ ಸುಳಿಯಲಿಲ್ಲ. ಅದರ ಹೊಟ್ಟೆಗೆ ಒಂದು ಕಡ್ಡಿಯೂ ಸಿಗಲಿಲ್ಲ. ಹಸಿವೆಯಿಂದ ಹುಲಿಯು ಬಹಳ ಸೊರಗಿಹೋಯಿತು. ಹಸಿವೆಯನ್ನು ತಡೆದುಕೊಳ್ಳಲು ಅದಕ್ಕೆ ಸಾಧ್ಯವಾಗಲಿಲ್ಲ. ಆ ಪಂಜರದ ಬದಿಯಲ್ಲಿಯೇ ಒಂದು ದಾರಿ ಇತ್ತು. ಜನಗಳು ಪಂಜರವನ್ನು ದೂರದಿಂದಲೇ ನೋಡಿಕೊಂಡು ಹೋಗುತ್ತಿದ್ದರು. ಆದರೆ ಯಾರೂ ಹತ್ತಿರ ಬರುತ್ತಿರಲಿಲ್ಲ.

ಒಂದು ದಿನ ಆ ದಾರಿಯಲ್ಲಿ ಒಬ್ಬ ಬ್ರಾಹ್ಮಣ ಒಂದು ಔತಣಕ್ಕಾಗಿ ಹೋಗುತ್ತಿದ್ದನು. ಆಗ ಹುಲಿಯು ಬ್ರಾಹ್ಮಣನನ್ನು ಬೊಬ್ಬೆ ಹಾಕಿ ಕರೆಯಿತು. 'ದಯವಿಟ್ಟು ನನ್ನನ್ನು ಈ ಪಂಜರದಿಂದ ಒಮ್ಮೆ ಹೊರಗೆ ಬಿಡಿರಿ. ನಿಮ್ಮ ಉಪಕಾರವನ್ನು ನಾನು ಖಂಡಿತ ಮರೆಯುವುದಿಲ್ಲ. ನಾನು ನನ್ನಲ್ಲಿರುವ ದ್ರವ್ಯ, ಬಂಗಾರವನ್ನು

ತಂದು ಕೊಡುತ್ತೇನೆ' ಎಂದು ಹೇಳಿತು. ದ್ರವ್ಯ ಬಂಗಾರದ ಸುದ್ದಿ ಕೇಳಿದಾಗ ಬ್ರಾಹ್ಮಣನಿಗೆ ಹೆದರಿಕೆ ಯೆಂಬುದು ಮರೆತುಹೋಯಿತು. ಅವನು ಹುಲಿಯಲ್ಲಿ 'ದ್ರವ್ಯ ಬಂಗಾರ ಕೊಡುವುದಾದರೆ ಮಾತ್ರ ಪಂಜರದ ಬಾಗಿಲನ್ನು ತೆರೆಯುತ್ತೇನೆ' ಎಂದನು. 'ತಾನು ಖಂಡಿತ ಕೊಡುತ್ತೇನೆ' ಎಂದು ಹುಲಿಯು ಅವನಿಗೆ ಭಾಷೆ ಕೊಟ್ಟಿತು. ಇದನ್ನು ಕೇಳಿ ಬ್ರಾಹ್ಮಣನು ಪಂಜರದ ಬಾಗಿಲನ್ನು ತೆಗೆದನು. ಪಂಜರದಿಂದ ಹೊರಗೆ ಬಂದೊಡನೆಯೇ ಹಸಿವು ಬಾಯಾರಿಕೆಯಿಂದ ಸೊರಗಿ ಹೋಗಿದ್ದ ಹುಲಿಗೆ ಸ್ವರ್ಗವೇ ಸಿಕ್ಕಿದಂತಾಯಿತು. ಅದು ಆ ಬ್ರಾಹ್ಮಣನನ್ನು ಹಿಡಿದು ತಿನ್ನಲು ಬಂದಿತು. ಆಗ ಬ್ರಾಹ್ಮಣನು 'ನಿನ್ನನ್ನು ಪಂಜರದಿಂದ ಬಿಡಿಸಿದ ಉಪಕಾರಕ್ಕೆ ಇದೇನು ನೀನು ಮಾಡುತ್ತಿರುವುದು? ನನ್ನನ್ನು ಕೊಲ್ಲುತ್ತೀಯಾ?' ಎಂದು ಕೇಳಿದನು. ಆಗ ಹುಲಿಯು 'ನಿನ್ನಂತಹ ಮನುಷ್ಯರು ನನ್ನನ್ನು ಈ ಪಂಜರದಲ್ಲಿ ಸೆರೆಹಾಕಿ, ನನಗೆ ಈ ಗತಿ ಮಾಡಿದರು. ಆದ್ದರಿಂದ ನಿನ್ನನ್ನು ನಾನು ಈಗ ತಿಂದುಬಿಡುತ್ತೇನೆ' ಎಂದಿತು. ಆಗ ಬ್ರಾಹ್ಮಣನು 'ನೀನು ನನ್ನನ್ನು ಹೀಗೆ ತಿನ್ನುವುದು ನ್ಯಾಯವಲ್ಲ. ಯಾರಲ್ಲಾದರೂ ನಾವು ಇದರ ನ್ಯಾಯವನ್ನು ಕೇಳುವ' ಎಂದು ಹೇಳಿದನು. ಅದಕ್ಕೆ ಹುಲಿಯು ಒಪ್ಪಿತು. ಹುಲಿಯೂ ಬ್ರಾಹ್ಮಣನೂ ನ್ಯಾಯವನ್ನು ಕೇಳಲೆಂದು ಹೊರಟರು. ಸ್ವಲ್ಪ ದೂರ ಹೋಗುವಾಗ ಒಂದು ಗುಡ್ಡದಲ್ಲಿ ಒಂದು ಸಣಕಲು ಎತ್ತು ಹುಲ್ಲು ಮೇಯುತ್ತಿತ್ತು. ಈ ಎತ್ತನ್ನು ನೋಡಿ, ಇದರಲ್ಲಿ ನಮ್ಮ ನ್ಯಾಯ ಕೇಳುವ ಎಂದು ಹುಲಿಯು ಬ್ರಾಹ್ಮಣನಲ್ಲಿ ಹೇಳಿತು. ಅದಕ್ಕೆ ಬ್ರಾಹ್ಮಣ ಒಪ್ಪಿದ. ಅವನು ಎತ್ತಿನ ಹತ್ತಿರ ಹೋಗಿ, 'ಉಪಕಾರ ಮಾಡಿದ ನನ್ನನ್ನು ಹುಲಿಯು ತಿನ್ನುತ್ತೇನೆ ಎನ್ನುತ್ತದೆ. ಇದು ಸರಿಯೇ?' ಎಂದು ಕೇಳಿದನು. ಆಗ ಎತ್ತು ಹೇಳುತ್ತದೆ - 'ನಿನ್ನನ್ನು ಹುಲಿ ತಿನ್ನುವುದು ಸರಿ. ಏಕೆಂದರೆ ನಾನು ಶಕ್ತಿವಂತನಾಗಿ ಇದ್ದಾಗ ಚೆನ್ನಾಗಿ ದುಡಿಸಿ, ಹೊಟ್ಟೆಗೆ ಸರಿಯಾಗಿ ಆಹಾರ ಕೊಡದೆ, ನಾನು ಮುದಿಯಾದ ಮೇಲೆ ನನ್ನನ್ನು ಹೊರಗೆ ಅಟ್ಟಿದ ಮನುಷ್ಯ ಜಾತಿಯವರು ನೀವು. ಆದ್ದರಿಂದ ನಿಮ್ಮಂತಹವರನ್ನು ಹುಲಿ ತಿನ್ನುವುದು ಸರಿ,' ಎತ್ತಿನ ಮಾತು ಕೇಳಿ ಹುಲಿಗೆ ಬಹಳ ಸಂತೋಷವಾಗುತ್ತದೆ. ಅದು ಬ್ರಾಹ್ಮಣನನ್ನು ಹಿಡಿಯಲು ಬರುತ್ತದೆ. ಆಗ ಬ್ರಾಹ್ಮಣ ಹೇಳುತ್ತಾನೆ—'ಒಬ್ಬನಲ್ಲಿ ಕೇಳಿದರೆ ಸಾಕಾಗುವುದಿಲ್ಲ, ಇನ್ನೊಬ್ಬನಲ್ಲಿ ಕೇಳುವ ಅವನೂ ಹೀಗೆಯೇ ಹೇಳಿದರೆ ನನ್ನನ್ನು ನೀನು ತಿನ್ನಬಹುದು.'

ಅಲ್ಲಿಂದ ಹೊರಟು ಹುಲಿ ಮತ್ತು ಬ್ರಾಹ್ಮಣ ಮುಂದೆ ಹೋದಾಗ, ಒಂದು ಬೈಲಿನ ಬದಿಯಲ್ಲಿ ಮೀನು ('ತರು'ಮೀನು) ಹಿಡಿಯಲು ಬಂದ ಒಂದು ನರಿಯು ಇವರಿಗೆ ಎದುರಾಯಿತು. ಆಗ ಬ್ರಾಹ್ಮಣನು ಅಳುತ್ತಾ ನಡೆದ ಸಂಗತಿಯನ್ನು ಹೇಳಿದನು. ಆಗ ನರಿಯು ಉಪಾಯದಲ್ಲಿ 'ನನಗೆ ನೀವು ಇಲ್ಲಿ ಏನು ಹೇಳಿದರೂ ಅರ್ಥವಾಗುವುದಿಲ್ಲ. ನೀವು ಎಲ್ಲಿ ಇದ್ದಿರೊ ಅಲ್ಲಿಗೆ ಹೋಗುವ' ಎಂದು ಹೇಳುತ್ತದೆ. ಅದಕ್ಕೆ ಇಬ್ಬರೂ ಒಪ್ಪುತ್ತಾರೆ. ಹುಲಿ ಇದ್ದ ಪಂಜರದಲ್ಲಿಗೇ ನರಿಯನ್ನು ಕರೆದುಕೊಂಡು ಬರುತ್ತಾರೆ. 'ನಿಮಗೆ ನಾನು ನ್ಯಾಯವನ್ನು ಹೇಳಬೇಕಾದರೆ, ನೀವು ಎಲ್ಲಿ ಏನು ಮಾಡಿಕೊಂಡಿದ್ದಿರೋ ಹಾಗೆಯೇ ಮಾಡಿರಿ' ಎಂದು ನರಿಯು ಹೇಳಿತು. ಅದಕ್ಕೆ ಬ್ರಾಹ್ಮಣನೂ ಹುಲಿಯೂ ಒಪ್ಪಿದರು. ಮೊದಲು ಹುಲಿಯು ಹೇಳಿದಂತೆ ಕೇಳಬೇಕು, ಮತ್ತೆ ಬ್ರಾಹ್ಮಣ ಹೇಳಿದಂತೆ ಕೇಳಬೇಕು ಎಂದಿತು ನರಿ.

ನರಿಯು ಮೊದಲು ಹುಲಿಯಲ್ಲಿ - 'ನೀನು ಮೊದಲು ಎಲ್ಲಿ ಇದ್ದದ್ದು?' ಎಂದು ಕೇಳಿತು, 'ನಾನು ಪಂಜರದೊಳಗೆ ಇದ್ದೆ" ಎಂದಿತು ಹುಲಿ. 'ಹಾಗಾದರೆ, ಒಳಗೆ ಹೇಗೆ ಇದ್ದೆ ಎಂದು ಒಂದು ಬಾರಿ ತೋರಿಸು' ಎಂದಿತು ನರಿ. ಇದನ್ನು ಕೇಳಿದ ಹುಲಿಯು ಪಂಜರದ ಒಳಗೆ ಹೋಗಿ ಕುಳಿತುಕೊಂಡಿತು. ಆಮೇಲೆ ನರಿಯು ಬ್ರಾಹ್ಮಣನಲ್ಲಿ ಕೇಳಿತು—'ನೀನು ಬಾಗಿಲು ತೆರೆಯುವ ಮೊದಲು, ಅದರ ಕೀಲು ಹಾಕಿತ್ತೋ ಇಲ್ಲವೋ?' 'ಕೀಲು ಹಾಕಿತ್ತು' ಎಂದನು ಬ್ರಾಹ್ಮಣ. 'ನೋಡೋಣ, ಆ ಕೀಲನ್ನು ಒಮ್ಮೆ ಹಾಕಿ ತೋರಿಸು' ಎಂದಿತು ನರಿ. ಬ್ರಾಹ್ಮಣ ಹಾಗೆಯೇ ಬಾಗಿಲಿನ ಕೀಲು ಹಾಕಿದ. ಹುಲಿಯು ಪಂಜರದ ಒಳಗೆ ಆಯಿತು.

ಬ್ರಾಹ್ಮಣ ಹೊರಗೆ ಉಳಿದ. ಆಗ ನರಿಯು 'ಈ ಹುಲಿಯು ಇವತ್ತು ನಿನ್ನನ್ನು ತಿಂದರೆ, ನಾಳೆ ನನ್ನನ್ನೂ ತಿಂದೀತು. ಆದ್ದರಿಂದ ಈ ಹುಲಿಯು ಪಂಜರದ ಒಳಗೆಯೇ ಇರಲಿ. ನೀನು ನಿನ್ನ ದಾರಿ ಹಿಡಿದು ಹೋಗು' ಎಂದು ಬ್ರಾಹ್ಮಣನಲ್ಲಿ ಹೇಳಿ, ಪಂಜರದ ಒಳಗೆ ಇದ್ದ ಹುಲಿಗೆ ಒಂದು ನಮಸ್ಕಾರ ಮಾಡಿ, ಅಲ್ಲಿಂದ ಹೊರಟಿತು. ಬ್ರಾಹ್ಮಣನೂ ತನ್ನ ದಾರಿ ಹಿಡಿದ."

ಬಹಳ ಜನಪ್ರಿಯವಾದ ಈ ಪ್ರಾಣಿ ಕಥೆಯು ಜಗತ್ತಿನ ಅನೇಕ ಭಾಷೆಗಳಲ್ಲಿ ಸಿಗುತ್ತದೆ. ವರ್ಗ 155ರ 'The ungrateful serpent returned to captivity' ಕಥೆಯಲ್ಲಿ ಹುಲಿಯ ಬದಲು ಸರ್ಪವು ಕೃತಘ್ನ ಪ್ರಾಣಿಯಾಗಿ ಬರುತ್ತದೆ. ಕ್ರೂರ ಪ್ರಾಣಿಯೊಂದು ಸೆರೆ ಸಿಕ್ಕಿರುವುದು, ಅದರ ಮೇಲಿನ ಕನಿಕರದಿಂದ ಮನುಷ್ಯನು ಅದನ್ನು ಬಿಡಿಸುವುದು, ಅದು ತನ್ನನ್ನು ಸೆರೆಯಿಂದ ಬಿಡಿಸಿದ ಮನುಷ್ಯನನ್ನೇ ಕೊಲ್ಲಲು ಬರುವುದು, ಆಗ ತಮ್ಮ ನ್ಯಾಯ ತೀರ್ಮಾನಕ್ಕಾಗಿ ಅವರು ಬೇರೆ ಬೇರೆಯವರನ್ನು ಭೇಟಿಯಾಗುವುದು, ಎಲ್ಲರೂ ಆ ಕ್ರೂರಪ್ರಾಣಿಯ ಪರವಾಗಿಯೇ ತೀರ್ಪು ಹೇಳುವುದು, ಕೊನೆಗೆ ನರಿಯು ತೀರ್ಪುಗಾರನಾಗಿ ಜಾಣತನದಿಂದ ಕ್ರೂರಪ್ರಾಣಿಯು ತಾನು ಮೊದಲು ಇದ್ದ ಸೆರೆಯೊಳಗೆ ಮತ್ತೆ ಹೋಗುವಂತೆ ಮಾಡಿ, ಅದನ್ನು ಅಲ್ಲಿಯೇ ಬಂಧಿಸುವುದು. ಆ ಮೂಲಕ ಮನುಷ್ಯನನ್ನು ಕ್ರೂರಪ್ರಾಣಿಯ ಭಯದಿಂದ ಪಾರುಮಾಡುವುದು–ಇದು ಈ ಪ್ರಾಣಿಕಥೆಯ ಮುಖ್ಯ ಘಟನೆಗಳು. Type 155– 'The ungrateful serpent returned to captivity' ಕಥೆಯ ಬಗ್ಗೆ ಅಧ್ಯಯನ ಮಾಡಿದ Kaarle Krohn ಇದರ ಮೂಲವನ್ನು ಭಾರತದ ಸಾಹಿತ್ಯ ಪರಂಪರೆಯಲ್ಲಿ ಗುರುತಿಸಿದ್ದಾರೆ.

ಅಸ್ಸಾಮಿನ ಜನಪದ ಕಥೆಗಳಲ್ಲಿ ತುಳುವಿನ 'ನರಿಯಣ್ಣನ ತೀರ್ಪು' ಕಥೆಯನ್ನು ಹೋಲುವ ಕಥೆ ಇದೆ. 'The Tiger in the Trap '[1] ಇಲ್ಲಿ ತುಳುವಿನ ಕಥೆಯಂತೆಯೇ ಬೋನಿನಲ್ಲಿ ಬಿದ್ದ ಹುಲಿಯನ್ನು ಮನುಷ್ಯ ರಕ್ಷಿಸಿದ ಮೇಲೆ, ಅದು ಆತನನ್ನು ತಿನ್ನಲು ಬರುತ್ತದೆ. ಮೊದಲು ಬರುವ ಎರಡು ಸಾಕ್ಷಿಗಳು– ಮರ ಮತ್ತು ಹೊಳೆ. ಅವು ಎರಡೂ ಹುಲಿಯ ಪರ ಅಭಿಪ್ರಾಯವನ್ನು ಕೊಡುತ್ತವೆ. ಮೂರನೆಯ ಸಾಕ್ಷಿಯಾದ ನರಿಯು ಹುಲಿಯನ್ನು ಮತ್ತೆ ಬೋನಿನೊಳಗೆ ಪ್ರವೇಶಿಸುವಂತೆ ಮಾಡಿ, ಅದನ್ನು ಬಂಧನದಲ್ಲಿಯೇ ಉಳಿಸುತ್ತದೆ.

ತುಳು ಕಥೆಯಲ್ಲಿ ತೀರ್ಪು ಕೊಡಲು ಮೊದಲು ಸಿಗುವ ಎತ್ತು ಮನುಷ್ಯನ ವಿರುದ್ಧವಾಗಿ, ಹುಲಿಯ ಪರವಾಗಿ ಅಭಿಪ್ರಾಯ ಕೊಡುತ್ತದೆ. ಅದಕ್ಕೆ ಕಾರಣ, ಮನುಷ್ಯನು ಎತ್ತುಗಳಿಗೆ ದುಡಿಯಲು ಶಕ್ತಿ ಇರುವಷ್ಟು ಕಾಲ ಅವುಗಳನ್ನು ದುಡಿಸಿಕೊಂಡು, ಅವು ನಿಶ್ಶಕ್ತವಾದಾಗ ಹೊರಗೆ ಅಟ್ಟುತ್ತಾನೆ. ಪರೋಕ್ಷವಾಗಿ ಮನುಷ್ಯನ ಈ ಪ್ರವೃತ್ತಿಯನ್ನು ಇಲ್ಲಿ ವಿಡಂಬಿಸಲಾಗಿದೆ. ನರಿಯು ಮೀನು ಹಿಡಿಯುತ್ತಿತ್ತು ಎನ್ನುವ ಮಾತು ಬರುತ್ತದೆ. ನರಿಯ ಬಗೆಗಿನ ಅನೇಕ ಕಥೆಗಳಲ್ಲಿ ಅದು ಮೀನು ಹಿಡಿಯುವ ಕೆಲಸ ಮಾಡುವ ವಿಚಾರ ಬರುತ್ತದೆ.

ಈ ಕಥೆಯಲ್ಲಿ ಒಂದೇ ಆಶಯವಿರುವುದರಿಂದ ಇದು ಸ್ಪಷ್ಟವಾಗಿ ಸರಳಕಥೆಯಾಗಿದೆ. ಇಲ್ಲಿನ ಆಶಯ: J 1172.3.

---

1. P.D. Goswami, 'Ballads and Tales of Assam', P.91

## (3) ನರಿಯ ಬುದ್ಧಿವಾದ

"ಒಂದು ಊರಿನಲ್ಲಿ ಒಂದು ದೊಡ್ಡ ಕಾಡು. ಆ ಕಾಡಿನಲ್ಲಿ ಒಂದು ನರಿ ಇತ್ತು. ಒಂದು ದಿನ ಆ ನರಿಯು ತನ್ನ ಆಹಾರವನ್ನು ಹುಡುಕಿಕೊಂಡು ಹೋಗುವಾಗ, ನಡುದಾರಿಯಲ್ಲಿ ಒಂದು ದೊಡ್ಡ ಆನೆ ಸತ್ತು ಬಿದ್ದಿತ್ತು. ಇದನ್ನು ನೋಡಿದ ನರಿಯಣ್ಣನಿಗೆ ಬಹಳ ಸಂತೋಷವಾಯಿತು.

ಇನ್ನು ಹೀಗೆಯೇ ನೋಡಿಕೊಂಡು ಕೂತರೆ ಆಗದು. ಇನ್ನು ತಿನ್ನುವುದಕ್ಕೆ ಶುರು ಮಾಡಬೇಕು ಎಂದು ಹೇಳಿ, ಇದನ್ನು ಯಾವ ಬದಿಯಿಂದ ತಿನ್ನಲು ಶುರು ಮಾಡುವುದು ಎಂದು ಆಲೋಚನೆ ಮಾಡಿ, ಆನೆಯ ಬಾಲದ ಬದಿಯಿಂದ ತಿನ್ನಲು ಶುರುಮಾಡಿತು. ತಿಂದ ಜಾಗದಲ್ಲಿ ದೊಡ್ಡ ಬಿಲವೇ ಆಯಿತು. ಈ ನರಿ ತಿನ್ನುವುದರಲ್ಲೇ ಮಗ್ನವಾಗಿದ್ದುದರಿಂದ, ಅದು ಆನೆಯ ಹೊಟ್ಟೆಯ ಒಳಗೆ ಸೇರಿದ್ದು ಅದಕ್ಕೆ ಗೊತ್ತಾಗಲಿಲ್ಲ. ನರಿಯು ಆನೆಯ ಹೊಟ್ಟೆಯ ಒಳಗೆ ಸೇರಿದ್ದೇ ತಡ, ದೊಡ್ಡ ಬಿಲದ ಹಾಗೆ ಇದ್ದ ದ್ವಾರ ಕಿರಿದಾಯಿತು. ಆನೆಯ ಹೊಟ್ಟೆಯ ಒಳಗಿನಿಂದ ಹೊರಗೆ ಬರಲು ನರಿಯು ಎಷ್ಟು ಪ್ರಯತ್ನಿಸಿದರೂ ಸಫಲವಾಗಲಿಲ್ಲ.

ಹೀಗೆಯೇ ಸ್ವಲ್ಪ ವೇಳೆಯಾಗುವಾಗ, ದಾರಿಯಲ್ಲಿ ನಡೆದಾಡುವ ಮನುಷ್ಯನ ಪಾದರಕ್ಷೆಯ ಶಬ್ದವು ನರಿಗೆ ಕೇಳಿಸಿತು. ಆಗ ನರಿಯು 'ಓ ಅಣ್ಣಾ' ಎಂದು ಅವನನ್ನು ಕರೆಯಲು ಸುರು ಮಾಡಿತು. ದಾರಿಹೋಕನು 'ಯಾರು ಇದು ನನ್ನನ್ನು ಕರೆಯುವುದು' ಎಂದು ಸುತ್ತಲೂ ನೋಡಿ, ಯಾರೂ ಕಾಣದಾದಾಗ, 'ಯಾರೂ ಇಲ್ಲ' ಎನ್ನುತ್ತಾ ನೇರ ಹೊರಟನು. ನರಿಯು ಮತ್ತೆ ಜೋರಾಗಿ ಕರೆಯಲು ಸುರುಮಾಡಿತು. ಕರೆಯುವ ಧ್ವನಿಯು ಆನೆಯ ಹೊಟ್ಟೆಯೊಳಗಿನಿಂದ ಕೇಳಿಸುವುದು ಎಂದು ಅವನಿಗೆ ಗೊತ್ತಾಯಿತು. ಆನೆಯ ಹೆಣದ ಹತ್ತಿರ ಬಂದು 'ನಿನಗೆ ನನ್ನಿಂದ ಏನಾಗಬೇಕು?' ಎಂದು ಕೇಳಿದನು. ಆಗ ನರಿಯು 'ನನ್ನನ್ನು ಈ ಆನೆಯ ಹೊಟ್ಟೆಯಿಂದ ಹೇಗಾದರೂ ಮಾಡಿ ಹೊರಗೆ ಹಾಕು' ಎಂದು ಹೇಳಿತು. 'ಕಷ್ಟದಲ್ಲಿರುವವರಿಗೆ ಯಾವಾಗಲೂ ಸಹಾಯ ಮಾಡಬೇಕು' ಎನ್ನುತ್ತಾ ಆ ಮನುಷ್ಯನು ಆನೆಯ ಹೊಟ್ಟೆಯನ್ನು ಸಿಗಿದು ಹಾಕಿದನು. ನರಿಯಣ್ಣ ಮೆಲ್ಲನೆ ಹೊರಗೆ ಬಂದು ಆ ಮನುಷ್ಯನಲ್ಲಿ ಹೇಳಿತು : 'ಇಂತಹ ದೊಡ್ಡವರ ಹತ್ತಿರ ಎಂದೂ ಹೋಗಬೇಡ. ಹೋದರೆ ಒಂದಲ್ಲ ಒಂದು ದಿನ ನಿನಗೂ ನನ್ನದೇ ಗತಿ ಆಗುತ್ತದೆ' ಹೀಗೆಂದು ಹೇಳಿದ ನರಿಯು ತನ್ನ ದಾರಿ ಹಿಡಿದು ಹೋಯಿತು."

ಒಂದೇ ಆಶಯವಿರುವ ಇದು ಒಂದು ಸರಳ ಕಥೆ. ಇಲ್ಲಿನ ಆಶಯ K 1022.1.1 ಈ ಕಥೆಯ ಮೂಲ ಭಾರತದ ಬೌದ್ಧ ಪುರಾಣ ಕಥೆಗಳಲ್ಲಿ ಎಂದು ಗೊತ್ತಾಗುತ್ತದೆ. ಆ ಕಥೆಯ ಆಶಯ: ಆನೆಯ ಹೆಣವನ್ನು ನರಿಯು ತಿನ್ನುತ್ತಿರುವಾಗ, ಹೆಣವು ಒಣಗಿದಾಗ 'ಅದರ ಒಳಗಡೆ ನರಿಯು ಸೆರೆ ಸಿಕ್ಕುತ್ತದೆ' ಬಿರುಗಾಳಿಯಿಂದ ಹೆಣವು ಒದ್ದೆಯಾದಾಗ ನರಿಯು ಅದರೊಳಗಿನಿಂದ ಬಿಡುಗಡೆಯಾಗುತ್ತದೆ (Buddhist Myth : Malalalsekara II 1131).

ತುಳುವಿನ 'ನರಿಯ ಬುದ್ಧಿವಾದ' ಕಥೆಯಲ್ಲಿ ಮೊದಲಿನ ಭಾಗ ಬೌದ್ಧಕಥೆಯಂತೆಯೇ ಇದೆ. ಅಂದರೆ ಸತ್ತುಹೋದ ಆನೆಯ ಮಾಂಸವನ್ನು ತಿನ್ನುವ ಆಸೆಯಿಂದ ನರಿಯು ಅದರ ಹೊಟ್ಟೆಯೊಳಗೆ ಸೇರಿಬಿಟ್ಟು, ಬಂಧನಕ್ಕೆ ಒಳಗಾಗುತ್ತದೆ. ಆದರೆ ಅನಂತರದ ಭಾಗದಲ್ಲಿ ಮನುಷ್ಯನು ಒಂದು ಪಾತ್ರವಾಗಿ ಬರುತ್ತಾನೆ. ನರಿಯ ಕೇಳಿಕೆಯಂತೆ ದಾರಿಹೋಕ ಮನುಷ್ಯನು ನರಿಯನ್ನು ಆನೆಯ ಹೆಣದ ಹೊಟ್ಟೆಯೊಳಗಿನಿಂದ ಪಾರು

ಮಾಡುತ್ತಾನೆ. ಈ ದೃಷ್ಟಿಯಿಂದ ಈ ಕಥೆಯು 150 - 199. ವರ್ಗದ 'ಮನುಷ್ಯ ಮತ್ತು ಕಾಡ ಪ್ರಾಣಿಗಳು' ಎಂಬ ಗುಂಪಿಗೆ ಸೇರುತ್ತದೆ. ಈ ಕಥೆಯ ಕೊನೆಯಲ್ಲಿ ಬಿಡುಗಡೆಯಾದ ಮೇಲೆ ನರಿಯು ಬಿಡುಗಡೆ ಮಾಡಿದ ಮನುಷ್ಯನಲ್ಲಿ ತನ್ನ ಅನುಭವವನ್ನು ಬುದ್ಧಿವಾದದ ರೂಪದಲ್ಲಿ ಹೇಳುತ್ತದೆ, 'ನೀತಿಕಥೆ' (fable)ಯ ಲಕ್ಷಣವನ್ನು ಇಲ್ಲಿ ನೋಡಬಹುದು. "ದೊಡ್ಡವರ ಹತ್ತಿರ ಹೋದರೆ ಸಿಕ್ಕಿ ಬೀಳುತ್ತೇವೆ" ಎಂಬ ಬುದ್ಧಿವಾದವನ್ನು ಆನೆಯ ಹೊಟ್ಟೆಯೊಳಗಡೆ ಸಿಕ್ಕಿಬಿದ್ದ ನರಿಯು ಹೇಳುತ್ತದೆ. ಈ ನೀತಿ ವಾಕ್ಯದ ಸಮರ್ಥನೆಗಾಗಿಯೇ ನೀತಿ ಕಥೆಯ ರೂಪದಲ್ಲಿ ಬೌದ್ಧ ಸಾಹಿತ್ಯದಲ್ಲಿ ಈ ಕಥೆ ಹುಟ್ಟಿಕೊಂಡು, ಜಗತ್ತಿನಾದ್ಯಂತ ಪ್ರಸರಣಗೊಂಡಿರಬೇಕು.

## (4) ನರಿಯಣ್ಣನ ತುಪ್ಪ

"ಒಂದು ಊರಿನಲ್ಲಿ ನರಿಯಣ್ಣ ಬಹಳ ಉಪದ್ರ ಕೊಡುತ್ತಿದ್ದ. ಸಿಕ್ಕಿದ ಕಬ್ಬಿನ ತೋಟಗಳಿಗೆ ರಾತ್ರಿ ವೇಳೆ ಹೊಕ್ಕು, ಅರ್ಧ ಭಾಗ ತಿನ್ನುವುದು, ಅರ್ಧ ಭಾಗ ಹಾಳು ಮಾಡುವುದು. ನರಿಯಣ್ಣನಿಗೆ ಮುಳ್ಳುಸೌತೆ ಎಂದರೆ ಬಹಳ ಇಷ್ಟ. ಮುಳ್ಳುಸೌತೆಯ ಚಪ್ಪರವನ್ನೇ ಹುಡುಕಿಕೊಂಡು ಹೋಗಿ ಚೆನ್ನಾಗಿ ತಿನ್ನುತ್ತಿತ್ತು. ಈ ಕಳ್ಳ ನರಿಗೆ ಚೆನ್ನಾಗಿ ಬುದ್ಧಿ ಕಲಿಸಬೇಕೆಂದು ಒಬ್ಬನು ಕಬ್ಬಿಣದ ಸಟ್ಟುಗವನ್ನು ಚೆನ್ನಾಗಿ ಕಾಯಿಸಿ, ನರಿ ಬರುವ ದಾರಿಯನ್ನು ನೋಡುತ್ತಿದ್ದನು. ಎಂದಿನಂತೆಯೇ ನರಿಯಣ್ಣ ಬಂದು ಮುಳ್ಳುಸೌತೆಯನ್ನು ಕೊಯಿದು, ಕುಳಿತುಕೊಂಡು ತಿನ್ನುತ್ತಿರುವಾಗ, ಕಾದುಕೊಂಡಿದ್ದವನು ಹಿಂದಿನಿಂದ ಮೆಲ್ಲಗೆ ಬಂದು, ನರಿಯ ಕುಂಡೆಗೆ (ತಿಕಕ್ಕೆ) ಕಾಯಿಸಿದ ಸಟ್ಟುಗದಿಂದ ಚೆನ್ನಾಗಿ ಬರೆ ಹಾಕಿದನು. ನರಿಯು 'ಹೋ ಹೋ ಹೋ' ಎಂದು ಬೊಬ್ಬೆ ಹಾಕುತ್ತಾ, ಬದುಕಿದರೆ ಬೇಡಿ ತಿಂದೇನು ಎನ್ನುತ್ತಾ ಓಡಿತು.

ಮರುದಿನ ನರಿಗೆ ಸಟ್ಟುಗ ತಾಗಿದ ಜಾಗದಲ್ಲಿ ಹುಣ್ಣಾಯಿತು. ಒಂದು ಹಾಸುಕಲ್ಲಿನಲ್ಲಿ ನರಿಯು ಕುಳಿತುಕೊಂಡು 'ಅಯ್ಯೋ ದೇವರೇ, ನನ್ನ ಗ್ರಹಚಾರವೇ, ಹೀಗೆ ಆಗುತ್ತದೆ ಎಂದು ಗೊತ್ತಿದ್ದರೆ ನಾನು ಹೋಗುತ್ತಲೇ ಇರಲಿಲ್ಲ. ಎಲ್ಲಿ ಆ ಶನಿ ಕಾದು ಕುಳಿತಿದ್ದನೋ' ಎಂದು ಹೇಳುತ್ತಾ ದುಃಖ ಮಾಡುತ್ತಿತ್ತು. ಆಗ ಒಬ್ಬ ಬ್ರಾಹ್ಮಣನು ಆ ದಾರಿಯಲ್ಲಿ ಒಂದು ಖಾಲಿ ಚೆಂಬನ್ನು ಹಿಡಿದುಕೊಂಡು ಹೋಗುತ್ತಿದ್ದನು. ಆ ಬ್ರಾಹ್ಮಣನನ್ನು ನೋಡಿ, ನರಿಯಣ್ಣ ಕೇಳುತ್ತದೆ—'ಹೌದೋ ಬ್ರಾಹ್ಮಣ, ಖಾಲಿ ಚೆಂಬನ್ನು ಹಿಡಿದುಕೊಂಡು ಎಲ್ಲಿಗೆ ಹೊರಟೆ?' ಆಗ ಬ್ರಾಹ್ಮಣನು 'ಮನೆಯಲ್ಲಿ ಒಂದು ಸಮಾರಾಧನೆ ಆಗಬೇಕಾಗಿದೆ. ಅದಕ್ಕಾಗಿ ಎಲ್ಲಿಯಾದರೂ ಒಳ್ಳೆಯ ತುಪ್ಪ ಸಿಕ್ಕುತ್ತದೆಯೋ ಎಂದು ಹುಡುಕುತ್ತಾ ಹೊರಟೆ. ಇನ್ನು ಎಲ್ಲಿಗೆ ಹೋಗುವುದು?' ಎಂದು ಹೇಳಿದನು. ಆಗ ನರಿಯು 'ಅಯ್ಯೋ ಬ್ರಾಹ್ಮಣ, ಈ ತುಪ್ಪಕ್ಕಾಗಿ ಇಷ್ಟು ಕಷ್ಟ ಪಡುವುದೋ? ನಾನು ಬೇಕಾದಷ್ಟು ತುಪ್ಪ ಕೊಡುತ್ತೇನೆ. ಒಂದು ಪೈಯೂ ನೀನು ಕೊಡುವುದು ಬೇಡ. ನಾಳೆ ಬಾ' ಎಂದು ಹೇಳಿತು. ಆಗ ಬ್ರಾಹ್ಮಣನು ಈ ರೀತಿ ಬಿಟ್ಟಿಯಾಗಿ (ಧರ್ಮಕ್ಕೆ) ತುಪ್ಪ ಸಿಕ್ಕಿದರೆ, ಸೊಂಟದಲ್ಲಿದ್ದ ಹಣ ಉಳಿಯುತ್ತದೆ ಎಂದು ತಾನು ತಂದ ಚೆಂಬನ್ನು ನರಿಯಣ್ಣನಲ್ಲಿ ಕೊಟ್ಟನು.

ನರಿಯಣ್ಣನ ಹಾಳು ಬುದ್ಧಿ ಎಲ್ಲಿಯಾದರೂ ಹೋಗುತ್ತದೆಯೇ? ಮತ್ತೊಬ್ಬರು ತನ್ನಿಂದಾಗಿ ಕಷ್ಟಕ್ಕೆ ಸಿಲುಕಿದರೆ ಅಥವಾ ಇನ್ನೊಬ್ಬರನ್ನು ತಮಾಷೆ ಮಾಡಿ ಕೆಳಗೆ ಬೀಳಿಸಿದರೆ ನರಿಯಣ್ಣನಿಗೆ ಅಂದು ಹಾಲು ಕುಡಿದಂತೆ. ನರಿಯು ಆ ಚೆಂಬಿನಲ್ಲಿ ತನ್ನ ಗಾಯದ ರಸಿಗೆಯನ್ನು ತುಂಬಿಸಿತು, ಅದನ್ನು ಚೆನ್ನಾಗಿ ಬಾಯಿ

ಮುಚ್ಚಿ, ಮರುದಿನ ಬ್ರಾಹ್ಮಣ ಬಂದಾಗ ಕೊಟ್ಟಿತು"–ನೋಡು ಬ್ರಾಹ್ಮಣ, ದಾರಿಯಲ್ಲಿ ಹೋಗುವಾಗಲಾಗಲಿ ಅಥವಾ ಮನೆಗೆ ಹೋದ ಮೇಲೆ ಆಗಲೀ ಈ ಚೆಂಬಿನ ಮುಚ್ಚಳ ತೆಗೆಯಬೇಡ. ಸಮಾರಾಧನೆಯ ದಿನ ಬಡಿಸಲು ಸಿದ್ಧವಾಗುವಾಗಲೇ ಮುಚ್ಚಳ ತೆಗೆಯಬೇಕು. ಇಲ್ಲದಿದ್ದರೆ ತುಪ್ಪದ ಪರಿಮಳ ಪೂರ್ತಿ ಹಾರಿ ಹೋದೀತು' ಎಂದು ನರಿ ಹೇಳಿತು.

ಬ್ರಾಹ್ಮಣನು ನರಿಯಣ್ಣನ ಮಾತನ್ನು ನಂಬಿ ಮನೆಗೆ ಬಂದನು. ಸಮಾರಾಧನೆಯ ದಿನ ಬಡಿಸುವ ವೇಳೆಗೆ ತುಪ್ಪದ ಚೆಂಬಿನ ಮುಚ್ಚಳ ತೆಗೆದ ಕೂಡಲೇ ಅಲ್ಲಿ ನೆರೆದವರಿಗೆಲ್ಲ ದುರ್ವಾಸನೆಯಲ್ಲಿ ಕುಳಿತುಕೊಳ್ಳಲಾಗಲಿಲ್ಲ. ಈ ರೀತಿ 'ಏನು, ನರಿಯ ತುಪ್ಪವೋ' ಎಂಬ ಒಂದು ಗಾದೆಯೇ ಇದೆ."

"ನರಿಯಣ್ಣನ ತುಪ್ಪ" ಕಥೆಯಲ್ಲಿ ನರಿಯು ಕುತಂತ್ರಿಯಾಗಿಯೇ ಬರುತ್ತದೆ. ನರಿ ಮತ್ತು ಬ್ರಾಹ್ಮಣ–ಪಾತ್ರಗಳಾಗಿ ಬರುವುದರಿಂದ ಈ ಕಥೆಯೂ 150-199 ವರ್ಗದ "ಮನುಷ್ಯ ಮತ್ತು ಕಾಡು ಪ್ರಾಣಿಗಳು" ಎಂಬ ಗುಂಪಿಗೆ ಸೇರುತ್ತದೆ. ನರಿಯು ಸಾಂಪ್ರದಾಯಿಕವಾಗಿ, ಕಬ್ಬು ಮತ್ತು ಮುಳ್ಳು ಸೌತೆಗಳ ಕಳ್ಳ ಎನ್ನುವ ವಿಚಾರ ಈ ಕಥೆಯಲ್ಲಿ ಇದೆ. ನರಿಯ ಕಳ್ಳತನಕ್ಕೆ ಶಿಕ್ಷೆಯಾಗುವ ಜನಪ್ರಿಯ ಆಶಯ ಇಲ್ಲಿ ಇದೆ. ಇಲ್ಲಿ ಕಾಯಿಸಿದ ಸಟ್ಟುಗವನ್ನು ಕುಂಡೆಗೆ ಇಟ್ಟು ಬರೆ ಹಾಕುವ ಶಿಕ್ಷೆ ಇದೆ. ತುಳು ಸಂಸ್ಕೃತಿಯಲ್ಲಿ ಈ ರೀತಿಯ, ಶಿಕ್ಷೆಯ ಬಗ್ಗೆ ಆಡು ಮಾತು ಇದೆ.

ಕಥೆಯ ಉತ್ತರಾರ್ಧದಲ್ಲಿ ನರಿಯ ಕುತಂತ್ರ ಸ್ಪಷ್ಟವಾಗಿದೆ. ಸಮಾರಾಧನೆಗೆ ತುಪ್ಪ ಬೇಕಾಗುವ ಬ್ರಾಹ್ಮಣನಿಗೆ ಈ ನರಿಯು ತನ್ನ ಕುಂಡೆಯ ರಸಿಗೆಯನ್ನು ಚೆಂಬಿನಲ್ಲಿ ಹಾಕಿ ತುಪ್ಪವೆಂದು ಹೇಳಿ ಮೋಸ ಮಾಡುತ್ತದೆ. ಹಣದ ಉಳಿತಾಯಕ್ಕೆ ಹೋಗಿ ಬ್ರಾಹ್ಮಣನು ಮೋಸ ಹೋಗುತ್ತಾನೆ ಎಂಬ ವಿಡಂಬನೆಯೂ ಇಲ್ಲಿದೆ (ಈ ಕಥೆಯನ್ನು ಹೇಳಿದವರೂ ಬ್ರಾಹ್ಮಣರು). ರಸಿಗೆಯನ್ನು 'ನರಿಯ ತುಪ್ಪ' ಎಂದು ಹಾಸ್ಯ ಮಾಡುವ ಗಾದೆ ಮಾತು ಇದೆ. ಅದಕ್ಕೆ ಹಿನ್ನೆಲೆಯಾಗಿ ಇಂತಹ ಕಥೆಯನ್ನು ಸೃಷ್ಟಿ ಮಾಡಿರಬಹುದು.

## II ಸಾಮಾನ್ಯ ಜನಪದ ಕಥೆಗಳು (Ordinary Folktales)
## ( ವರ್ಗಗಳು 300 - 1199 )

### A ಮಾಂತ್ರಿಕ ಕಥೆಗಳು (Tales of Magic) (ವರ್ಗಗಳು 300 - 749)

ಸಂಕೀರ್ಣ ಜನಪದ ಕಥೆಗಳಲ್ಲಿ 'ಮಾಂತ್ರಿಕ ಕಥೆಗಳು' ಬಹಳ ಮುಖ್ಯವಾದವು. ತುಳು ಜನಪದ ಕಥೆಗಳಲ್ಲಿಯೂ "ಮಾಂತ್ರಿಕ ಕಥೆಗಳು" ಅಧಿಕ ಸಂಖ್ಯೆಯಲ್ಲಿ ಇರುತ್ತವೆ. ಅತಿಮಾನುಷ ವಿರೋಧಿಗಳು, ಅತಿಮಾನುಷ ಪತಿ (ಪತ್ನಿ) ಅಥವಾ ಇತರ ಸಂಬಂಧಿಕರು, ಅತಿಮಾನುಷ ಕಾರ್ಯಗಳು, ಅತಿಮಾನುಷ ಸಹಾಯಕರು, ಮಾಂತ್ರಿಕ ವಸ್ತುಗಳು, ಅತಿಮಾನುಷ ಶಕ್ತಿ ಅಥವಾ ಜ್ಞಾನ – ಈ ಎಲ್ಲಾ ವರ್ಗಗಳ ಲಕ್ಷಣಗಳು ತುಳು ಮಾಂತ್ರಿಕ ಕಥೆಗಳಲ್ಲಿ ಹೆಚ್ಚಾಗಿ ಇವೆ. ಆದರೆ ತೀರ ಸಂಕೀರ್ಣ ಮಾಂತ್ರಿಕ ಕಥೆಯೊಂದನ್ನು ಇವುಗಳಲ್ಲಿ ಯಾವುದೇ ಒಂದು ವರ್ಗಕ್ಕೆ ಸಮರ್ಪಕವಾಗಿ ಸೇರಿಸಲು ಅಸಾಧ್ಯವಾಗಿರುವ ಕಾರಣ, ತುಳು ಮಾಂತ್ರಿಕ ಕಥೆಗಳನ್ನು ಒಂದೊಂದಾಗಿ ನೋಡಿ, ಅವುಗಳಲ್ಲಿನ ಅತಿಮಾನುಷ, ಮಾಂತ್ರಿಕ ಅಂಶಗಳನ್ನೂ ಅವುಗಳ

ವೈಶಿಷ್ಟ್ಯಗಳನ್ನೂ ಅಂತಹ ಕಥೆಗಳ ಹೋಲಿಕೆಗಳನ್ನೂ ಇಲ್ಲಿ ಅಧ್ಯಯನ ಮಾಡಲಾಗಿದೆ. ಜಗತ್ತಿನ ಜನಪದ ಕಥೆಗಳ ವರ್ಗಗಳೊಡನೆ, ಪ್ರಧಾನವಾಗಿ ಕನ್ನಡ ಜನಪದ ಕಥೆಗಳೊಡನೆ ಸಾದೃಶ್ಯವನ್ನು ಆಯಾಯ ಕಥೆಯ ಸಂದರ್ಭದಲ್ಲಿ ಚರ್ಚಿಸಲಾಗಿದೆ.

ತುಳು ಮಾಂತ್ರಿಕ ಕಥೆಗಳಲ್ಲಿ Aaarne-Thompson ಅವರ ವರ್ಗಸೂಚಿಯ ಕಥಾ ವರ್ಗಗಳನ್ನು ಸಂಪೂರ್ಣವಾಗಿ ಹೋಲುವ ಕಥೆಗಳು ಕಾಣಿಸುವುದಿಲ್ಲ. ಆದರೆ ಭಾಗಶಃ ಅಂತಹ ಕಥಾ ವರ್ಗಗಳನ್ನು ಹೋಲುವ ಕಥೆಗಳನ್ನು ಆಯಾ ವರ್ಗಗಳ ಕೆಳಗೆ ಕೊಟ್ಟು, ಉಳಿದ ವರ್ಗಗಳ ಹೋಲಿಕೆಯನ್ನು ಅಲ್ಲೇ ಕೊಡಲಾಗಿದೆ. ಬೇರೆ ದೇಶಗಳ ಕಥೆಗಳ ಸಂಪೂರ್ಣ ಪಾಠ ಸಿಕ್ಕದೇ ಇರುವುದರಿಂದ, ಆಶಯಗಳ ಸೂಚನೆಯಂತೆ ಹೋಲಿಕೆಗಳನ್ನು ಗಮನಿಸಲಾಗಿದೆ.

## (1) ರಾಕ್ಷಸ ಮತ್ತು ಜಾಣ ಹುಡುಗ

"ಒಬ್ಬನಿಗೆ ಮೂವರು ಗಂಡು ಮಕ್ಕಳು. ಮೊದಲನೆಯ ಇಬ್ಬರಿಗಿಂತ ಮೂರನೆಯವನು ಹೆಚ್ಚು ಬುದ್ಧಿವಂತ. ಅವರು ಮನೆ ಬಿಟ್ಟು ಹೋಗುವಾಗ ಆನೆಗಳ ಮೂಲಕ ಹೊಲವನ್ನು ಉಳುತ್ತಿದ್ದ ಒಬ್ಬ ರಾಕ್ಷಸನನ್ನು ಭೇಟಿಯಾಗುತ್ತಾರೆ. ಆತನು ಉಣ್ಣಲು ಹೋಗುವಾಗ, ಇವರಲ್ಲಿ ಉಳಲು ಹೇಳುತ್ತಾನೆ. ಇವರಿಗೆ ರಾಕ್ಷಸನು ನೆಲದಲ್ಲಿ ಊರಿದ್ದ ಕೋಲನ್ನು ಎಳೆಯಲಿಕ್ಕೇ ಸಾಧ್ಯವಾಗುವುದಿಲ್ಲ. ಆಗ ಆನೆಗಳು ಅಲ್ಲಿಂದ ತಪ್ಪಿಸಿಕೊಳ್ಳುತ್ತವೆ. ರಾಕ್ಷಸನು ತನ್ನ ಮನೆಯಲ್ಲಿ ಹೆಂಡತಿಯೊಡನೆ 'ಮೂವರು ತರುಣರು ಹೊಲವನ್ನು ಉತ್ತು ಬರುತ್ತಾರೆ. ಅವರಿಗೆ ಊಟ ಸಿದ್ಧಮಾಡಬೇಕು' ಎಂದು ಹೇಳಿ, ಹೊಲದಲ್ಲಿಗೆ ಬಂದಾಗ, ಆನೆಗಳು ಇಲ್ಲದ್ದನ್ನು ತಿಳಿದು ಸಿಟ್ಟುಗೊಳ್ಳುತ್ತಾನೆ. ರಾಕ್ಷಸನು ಒಂದು ಚೀಟಿಯಲ್ಲಿ 'ಆ ಮೂವರು ತರುಣರನ್ನು ಕೊಂದು ಪದಾರ್ಥ ಮಾಡಿ ಇಡಬೇಕೆಂದು" ಬರೆದು, ಅವರ ಮೂಲಕವೇ ಹೆಂಡತಿಗೆ ಕಳುಹಿಸುತ್ತಾನೆ. ಕಿರಿಯ ತಮ್ಮನು ದಾರಿಯಲ್ಲಿ ಆ ಚೀಟಿಯನ್ನು ಓದಿ ನೋಡಿ, ಅದರ ಬದಲು ಬೇರೊಂದು ಚೀಟಿಯಲ್ಲಿ 'ಈ ತರುಣರಿಗೆ ಊಟ ಕೊಡಬೇಕು ಮತ್ತು ತನ್ನ ಮೂವರು ಹೆಣ್ಣು ಮಕ್ಕಳ ಕೋಣೆಗಳಲ್ಲಿ ಅವರನ್ನು ಮಲಗಿಸುವ ವ್ಯವಸ್ಥೆ ಮಾಡಬೇಕು' ಎಂದು ಬರೆಯುತ್ತಾನೆ. ಈ ಚೀಟಿಯನ್ನು ನೋಡಿದ ರಾಕ್ಷಸನ ಹೆಂಡತಿಯು ಅದೇ ರೀತಿ ಇವರಿಗೆ ಸತ್ಕಾರ ಮಾಡಿ, ಊಟ ಕೊಟ್ಟು ತನ್ನ ಹೆಣ್ಣು ಮಕ್ಕಳ ಕೋಣೆಯಲ್ಲಿ ಮಲಗುವ ವ್ಯವಸ್ಥೆ ಮಾಡುತ್ತಾಳೆ. ಹಿರಿಯವನು ಆ ಮೂವರು ಹೆಣ್ಣು ಮಕ್ಕಳ ಬಂಗಾರದ ಟೊಪ್ಪಿಗಳನ್ನು ತೆಗೆದುಕೊಂಡು, ತಾವು ಮೂವರು ಅಣ್ಣ ತಮ್ಮಂದಿರು ಇಟ್ಟುಕೊಂಡು ಮಲಗುವ ಏರ್ಪಾಡು ಮಾಡುತ್ತಾನೆ. ರಾಕ್ಷಸನು ಮನೆಗೆ ಬಂದಾಗ, ವಿಷಯ ಗೊತ್ತಾಗಿ, ಅವರು ಮಲಗಿದ್ದ ಕೋಣೆಗೆ ಬಂದು, ಟೊಪ್ಪಿ ಇಡದ ಮೂವರನ್ನು ಆ ತರುಣರು ಎಂದು ಭಾವಿಸಿ ಕೊಂದು ಹಾಕುತ್ತಾನೆ. ಬೆಳಿಗ್ಗೆ ಎದ್ದು ಸತ್ತವರನ್ನ ಪದಾರ್ಥ ಮಾಡಲು ಹೇಳಿ ಹೊಲಕ್ಕೆ ಹೋಗುತ್ತಾನೆ. ಈ ಕಡೆ ರಾಕ್ಷಸನ ಹೆಂಡತಿ ನೋಡುವಾಗ ಸತ್ತವರು ತನ್ನ ಹೆಣ್ಣು ಮಕ್ಕಳು ಎಂದು ಗೊತ್ತಾಗುತ್ತದೆ. ಅಷ್ಟರಲ್ಲಿ ಈ ಮೂವರು ತರುಣರು ಬಂಗಾರದ ಟೊಪ್ಪಿಗಳ ಸಹಿತ ಹೊಳೆಯ ಆಚೆ ಬದಿಯಲ್ಲಿ ಕುಳಿತುಕೊಳ್ಳುತ್ತಾರೆ. ಹೊಳೆಯ ಆ ಕಡೆ ಹೋಗುವುದು ರಾಕ್ಷಸನಿಗೆ ನಿಷಿದ್ಧ. ಅವನು ಸಂಗತಿ ಗೊತ್ತಾದಾಗ, ಅಲ್ಲಿಗೆ ಓಡಿಕೊಂಡು ಬರುತ್ತಾನೆ. ಹೊಳೆಯ ಈಚೆ ಬದಿಯಿಂದಲೇ ಕಿರಿಯವನನ್ನು (ಅವನ ಹೆಸರು ರುಕ್ಕು) ಕರೆದು 'ಅಯ್ಯೋ ರುಕ್ಕೂ ನನ್ನ ಮೂವರು ಮಕ್ಕಳನ್ನು ಕೊಂದೆ. ನನ್ನ ಮೂರು ಬಂಗಾರದ ಟೊಪ್ಪಿಗಳನ್ನೂ ಕೊಂಡುಹೋಗುವುದೇ?' ಎಂದು ಮರುಗುತ್ತಾನೆ. ಆಗ ರುಕ್ಕುವು 'ಅಷ್ಟೇ ಅಲ್ಲ, ನಿನ್ನನ್ನೂ ಕೊಲ್ಲುತ್ತೇನೆ" ಎನ್ನುತ್ತಾನೆ. ಆಮೇಲೆ ಅವರು ಮೂವರು ಅಲ್ಲಿನ ಅರಸನಲ್ಲಿಗೆ ಹೋಗುತ್ತಾರೆ. ಅರಸನು ಹಿರಿಯರಿಬ್ಬರಿಗೆ ಒಳ್ಳೆಯ ಕೆಲಸಗಳನ್ನು ಕೊಟ್ಟನು. ಕಿರಿಯವನಾದ ರುಕ್ಕುವಿಗೆ ದನ-ಕರು ಮೇಯಿಸುವ ಕೆಲಸ ಕೊಟ್ಟನು. ರುಕ್ಕುವು ಅಣ್ಣಂದಿರಿಂದ ಬಂಗಾರದ ಟೊಪ್ಪಿಗಳನ್ನು ತಾನು ತೆಗೆದು

ಇಟ್ಟುಕೊಂಡನು. ಅದನ್ನು ನೋಡಿದ ರಾಜಕುಮಾರಿಯು ತನಗೆ ಬೇಕೆಂದು ಹಠ ಮಾಡಿ, ಆ ಬಂಗಾರದ ಟೊಪ್ಪಿಗಳನ್ನು ತೆಗೆದುಕೊಂಡಳು. ಇದನ್ನು ನೋಡಿದ ರುಕ್ಕುವಿನ ಅಣ್ಣಂದಿರು ಮತ್ಸರದಿಂದ, ರಾಜನಲ್ಲಿ ದೂರು ಹೇಳಿ, ರಾಜಕುಮಾರಿಗೂ ರುಕ್ಕುವಿಗೂ ಪ್ರೇಮ ಸಂಬಂಧವಿದೆಯೆಂದು ಹೇಳಿ ಅವನನ್ನು ಕೊಲ್ಲಲು ಸಂಚು ಹೂಡಿದರು. ಅವರ ಮಾತಿನಂತೆ ರಾಜನು, ರುಕ್ಕುವನ್ನು ಕರೆದು ರಕ್ಕಸನಲ್ಲಿಗೆ ಹೋಗಿ, ಅಲ್ಲಿರುವ ಕಂಬಳಿಯನ್ನು ತರಲು ಹೇಳಿದನು. ರುಕ್ಕುವು ರಕ್ಕಸನಲ್ಲಿಗೆ ಹೋಗಿ, ಅವನು ಮಲಗುವ ಕೋಣೆಯಲ್ಲಿ ಅಡಗಿ ಕುಳಿತನು. ರಕ್ಕಸನು ಬಂದು ಉಂಡು, ಕಂಬಳಿ ಹೊದ್ದು ಅಲ್ಲಿ ಮಲಗಿದನು. ಅವನಿಗೆ ನಿದ್ದೆ ಬಂದಾಗ, ರುಕ್ಕುವು ಅವನ ಕಂಬಳಿಯನ್ನು ಜೋರಾಗಿ ಎಳೆದನು. ರಕ್ಕಸನು ನಿದ್ದೆಗಣ್ಣಿನಲ್ಲಿಯೇ ತನ್ನ ಹೆಂಡತಿ ಕಂಬಳಿ ಎಳೆಯುವುದು ಎಂದು ಭಾವಿಸಿ, ಅವಳನ್ನು ಬೈಯ್ದು, ಕಂಬಳಿಯನ್ನು ತೆಗೆದು ಎಸೆದನು. ರುಕ್ಕುವು ಅದನ್ನು ತೆಗೆದುಕೊಂಡು ಅರಸನಿಗೆ ತಂದು ಕೊಟ್ಟನು. ತಮ್ಮ ಸಂಚು ವಿಫಲವಾದಾಗ, ರುಕ್ಕುವಿನ ಅಣ್ಣಂದಿರು ಅರಸನಲ್ಲಿ ಹೇಳಿ, ರಕ್ಕಸನ ಉಂಗುರವನ್ನು ತರಲು ಅವನನ್ನು ಕಳುಹಿಸಿದರು. ರುಕ್ಕುವು ರಕ್ಕಸನಲ್ಲಿಗೆ ಬಂದು, ಅವನು ನಿದ್ರಿಸಿದ್ದಾಗ, ಅವನ ಉಂಗುರವನ್ನು ಎಳೆಯಲು ನೋಡಿದನು. ಆಗ ಎಚ್ಚರಗೊಂಡ ರಕ್ಕಸನು ರುಕ್ಕುವನ್ನು ಹಿಡಿದು, ಕಟ್ಟಿಹಾಕಿ, ಹೆಂಡತಿಯನ್ನು ಕರೆದು 'ರುಕ್ಕುವನ್ನು ಕೊಂದು ಪದಾರ್ಥ ಮಾಡಲು' ಹೇಳಿ ಹೊರಗೆ ಹೋದನು. ರಕ್ಕಸನ ಹೆಂಡತಿಯು ಅಡುಗೆಗಾಗಿ ಕಟ್ಟಿಗೆ ಒಡೆಯುತ್ತಿರುವಾಗ, ತಾನು ಕಟ್ಟಿಗೆ ಒಡೆಯುತ್ತೇನೆ ಎಂದು ಹೇಳಿ, ಕಟ್ಟಿನಿಂದ ಬಿಡಿಸಿಕೊಂಡನು. ಕೊಡಲಿಯಿಂದ ಕಟ್ಟಿಗೆಯನ್ನು ಕಡಿಯುತ್ತಿರುವಾಗ, ಕಟ್ಟಿಗೆಯನ್ನು ಹೆಕ್ಕುತ್ತಿದ್ದ ರಕ್ಕಸಿಯನ್ನು ಕೊಡಲಿಯಿಂದ ಕಡಿದು ಕೊಂದನು. ಅವಳನ್ನು ಮಾಂಸ ಮಾಡಿ, ಅಡುಗೆ ಮಾಡಿದನು. ಅವಳ ತಲೆಯನ್ನು ರಕ್ಕಸನು ಉಣ್ಣಲು ಕುಳಿತುಕೊಳ್ಳುವಲ್ಲಿ ಮೇಲ್ಗಡೆ ಕಟ್ಟಿ, ಇವನು ಹೋಗಿ ಹೊಳೆಯ ಆ ಕಡೆ ಕಟ್ಟೆಯಲ್ಲಿ ಕುಳಿತನು. ರಕ್ಕಸನು ಬಂದು, ತಯಾರಿಸಿ ಇಟ್ಟಿದ್ದ ಅಡುಗೆಯನ್ನು ಬಡಿಸಿಕೊಂಡು ಉಣ್ಣುವ ವೇಳೆಗೆ, ಮೇಲ್ಗಡೆಯಿಂದ ರಕ್ತ ತೊಟ್ಟಿಕ್ಕಿದಾಗ, ತನ್ನ ಹೆಂಡತಿಯ ರುಂಡವನ್ನು ನೋಡಿ. ವಿಷಯ ಅರ್ಥವಾಗಿ ಗೋಳಿಡುತ್ತಾ ರುಕ್ಕುವಿದ್ದ ಕಟ್ಟೆಯಲ್ಲಿನ ಈ ಬದಿಯಲ್ಲಿ ನಿಂತುಕೊಂಡನು. ರುಕ್ಕುವು ಹಲುಬುತ್ತಿದ್ದ ರಕ್ಕಸನಲ್ಲಿ 'ನಿನ್ನನ್ನೇ ಕೊಲ್ಲುತ್ತೇನೆ' ಎಂದು ಗದರಿಸಿದನು. ಅರಸನಲ್ಲಿಗೆ ಬಂದ ರುಕ್ಕುವು ಎರಡನೆಯ ಬಾರಿ ಯಶಸ್ವಿಯಾದುದನ್ನು ಕಂಡು, ಅವನ ಅಣ್ಣಂದಿರು ಅರಸನಲ್ಲಿ ಹೇಳಿ, ರಕ್ಕಸನನ್ನೇ ಹೊಳೆಯ ಈ ಬದಿಗೆ ತರುವಂತೆ ರುಕ್ಕುವಿಗೆ ಕೆಲಸ ವಹಿಸಿದರು. ರುಕ್ಕುವು ಒಂದು ದೊಡ್ಡ ಪೆಟ್ಟಿಗೆಯನ್ನು ತೆಗೆದುಕೊಂಡು, ರಕ್ಕಸನಲ್ಲಿಗೆ ಹೋಗುವಾಗ ನರ್ಸಣ್ಣನ ವೇಷವನ್ನು ಧರಿಸಿದನು. ಅಲ್ಲಿ ರಕ್ಕಸನಿಗೆ ಅಪಾಯವಿದೆಯೆಂದು ಭವಿಷ್ಯ ಹೇಳಿ, ಅವನನ್ನು ಪೆಟ್ಟಿಗೆಯೊಳಗೆ ಮಲಗುವಂತೆ ಮಾಡಿ, ಹೊಳೆಯ ಈ ಬದಿಗೆ ತಂದನು. ಈ ವರ್ತಮಾನ ಅರಸನಿಗೆ ಗೊತ್ತಾದಾಗ, ಹೆದರಿಕೆಯಿಂದ ಅರಸನು ಪ್ರಾಣ ಬಿಟ್ಟನು. ರಕ್ಕಸನು ಹೊಳೆಗೆ ಹಾರಿ ಜೀವಬಿಟ್ಟನು. ರುಕ್ಕುವು ಅರಮನೆಯನ್ನು ಸೇರಿ ಸುಖವಾಗಿ ಇದ್ದನು."

"ರಾಕ್ಷಸ ಮತ್ತು ಜಾಣಹುಡುಗ" ಕಥೆಯು ತುಳುವಿನಲ್ಲಿ ದೀರ್ಘವಾಗಿ ಸಿಗುತ್ತದೆ. ಅದರ ಸಂಕ್ಷಿಪ್ತ ಕನ್ನಡ ರೂಪವನ್ನಷ್ಟೇ ಇಲ್ಲಿ ಕೊಡಲಾಗಿದೆ. ಅದರ ಮೂಲ ತುಳುರೂಪವು ಇಲ್ಲಿ ಕೊಟ್ಟ ಕನ್ನಡ ರೂಪದ ನಾಲ್ಕು ಪಟ್ಟು ದೀರ್ಘವಾಗಿದೆ. ಇದು ಮಂಗಳೂರು ತಾಲೂಕಿನ ಕೊಣಾಜೆ ಗ್ರಾಮದಲ್ಲಿ ಸೀತು ಎಂಬ ಅನಕ್ಷರಸ್ಥ ಹೆಂಗಸಿನಿಂದ (ಪ್ರಾಯ 51 ವರ್ಷ - 1979ರಲ್ಲಿ) ಸಂಗ್ರಹಿಸಿದ್ದು (ಸಂಗ್ರಹ–1973ರಲ್ಲಿ. ಆಗ ಅವಳ ಪ್ರಾಯ ಸುಮಾರು 45 ವರ್ಷ). ಅವಳು ಈ ಕಥೆಯನ್ನು ತಾನು ಸುಮಾರು ಹತ್ತು ವರ್ಷದ ಹುಡುಗಿಯಾಗಿದ್ದಾಗ ತನ್ನ ತಾಯಿ ಮದನು ಎಂಬುವಳಿಂದ ಕಲಿತದ್ದು ಎಂದು ತಿಳಿಸಿದಳು (ಅಂದರೆ ಮದನು ಎಂಬ ಅನಕ್ಷರಸ್ಥ ಹೆಂಗಸು ಸುಮಾರು 1935ರಲ್ಲಿ ಈ ಕಥೆಯನ್ನು ಸೀತುವಿಗೆ ಹೇಳಿರಬೇಕು. ಮದನು ಹೆಂಗಸು ಕೂಡಾ ಕೊಣಾಜೆ ಊರಿನವಳು).

ಈ ವಿವರಗಳೆಲ್ಲ ಅಂತರರಾಷ್ಟ್ರೀಯ ವ್ಯಾಪ್ತಿಯುಳ್ಳ ಈ ಕಥೆಯ ಬಗ್ಗೆ ಕೆಲವು ಅಭಿಪ್ರಾಯಗಳನ್ನು ಕೊಡಲು ಸಹಾಯಕವಾಗುತ್ತವೆ.

"ರಾಕ್ಷಸ ಮತ್ತು ಜಾಣ ಹುಡುಗ" ಎಂಬುದು ಸುಮಾರು 20ರಷ್ಟು ಆಶಯಗಳುಳ್ಳ ಒಂದು ಸಂಕೀರ್ಣ ಕಥೆ. ವಸ್ತುವಿನ ದೃಷ್ಟಿಯಿಂದ ಇದು 'ಮಾಂತ್ರಿಕ ಕಥೆಗಳಲ್ಲಿ 300-399. ಅತಿಮಾನುಷ ವಿರೋಧಿಗಳು (Supernatural Adversaries) ಎಂಬ ವರ್ಗಗಳ ಗುಂಪಿಗೆ ಸೇರುತ್ತದೆ. ಈ ವಿಭಾಗದಲ್ಲಿ ಈ ಕಥೆಯನ್ನು ಮುಖ್ಯವಾಗಿ ಹೋಲುವುದು : ವರ್ಗ 327. ಮಕ್ಕಳು ಮತ್ತು ರಾಕ್ಷಸ (The Children and the Ogre) ಎಂಬ ಕಥೆಯನ್ನು ವರ್ಗ 327ರಲ್ಲಿ ಮೂರು ಮುಖ್ಯ ಕಥಾವ್ಯತ್ಯಯಗಳಿವೆ : 327 A. Hansel and Gretel: 327 B. The Dwarf and the Giant; 327 C. The Devil (with) Carries the Hero Home in a Sack. ಈ ಮೂರು ಕಥೆಗಳೂ 327–ಕಥಾ ವರ್ಗದ ಚಕ್ರದೊಳಗೆ ಸೇರ್ಪಡೆಯಾಗುತ್ತವೆ. ಈ ಕಥಾವರ್ಗದ ಚಕ್ರ 327ರಲ್ಲಿ ವರ್ಗ 327 B-'Le Petit Povcet' (The Dwarf and the Giant): ಈ ಕಥಾವರ್ಗದ ಕೆಲವು ಆಶಯಗಳು ತುಳುವಿನ "ರಾಕ್ಷಸ ಮತ್ತು ಜಾಣ ಹುಡುಗ" ಕಥೆಯ ಆಶಯಗಳನ್ನೇ ಹೋಲುತ್ತವೆ. ವರ್ಗ 327Bಯಲ್ಲಿ ಒಬ್ಬ ಚಿಕ್ಕ ನಾಯಕನು ತನ್ನ ಸಹೋದರರ ಸಂಗಡ ರಾಕ್ಷಸನ ಮನೆಗೆ ಬರುತ್ತಾನೆ. ಆ ರಾಕ್ಷಸನು ತಮ್ಮನ್ನು ಹಾಸಿಗೆಯಲ್ಲಿ ಮಲಗಿರುವಾಗ ಕೊಲ್ಲುತ್ತಾನೆ ಎಂಬುದನ್ನು ಅರಿತ ಆ ನಾಯಕನು ತನ್ನ ಮತ್ತು ತನ್ನ ಸಹೋದರರ ಟೊಪ್ಪಿಗಳನ್ನು ರಾಕ್ಷಸನ ಮಕ್ಕಳ ಟೊಪ್ಪಿಗಳೊಂದಿಗೆ ವಿನಿಮಯ ಮಾಡಿಕೊಳ್ಳುತ್ತಾನೆ. ಟೊಪ್ಪಿಗಳ ಗುರುತಿನಿಂದ ರಾಕ್ಷಸನು ಮಲಗಿದ್ದ ತನ್ನ ಮಕ್ಕಳನ್ನೇ ಕೊಲ್ಲುತ್ತಾನೆ. ನಾಯಕ ಮತ್ತು ಅವನ ಸಹೋದರರು ತಪ್ಪಿಸಿಕೊಳ್ಳುತ್ತಾರೆ. ವರ್ಗ 327Bಯ ಈ ಕಥಾವರ್ಗವನ್ನು ಅಧ್ಯಯನ ಮಾಡಿದ Perraultನ. "ಇದು ಯೂರೋಪಿನ ಹೆಚ್ಚಿನ ಎಲ್ಲಾ ಭಾಗಗಳಲ್ಲಿಯೂ ದೊರೆಯುತ್ತದೆ. ಬ್ರಿಟಿಷ್ ಕೊಲಂಬಿಯಾದ ಉತ್ತರ ಅಮೆರಿಕನ್ ಇಂಡಿಯನ್‌ಗೂ ಇದು ಹೋಗಿದೆ. ಆದರೆ ಬೇರೆ ಯಾವ ಪ್ರದೇಶಗಳಲ್ಲಿಯೂ ಇಲ್ಲ" ಎನ್ನುತ್ತಾನೆ. ಆದರೆ ಇದೇ ಆಶಯ ಮತ್ತು ಘಟನೆಯು ತುಳುವಿನ "ರಾಕ್ಷಸ ಮತ್ತು ಜಾಣ ಹುಡುಗ" ಕಥೆಯ ಒಂದು ಪ್ರಮುಖ ಭಾಗವಾಗಿ ಬರುತ್ತದೆ ಯಾದ್ದರಿಂದ Perraultನ ಅಭಿಪ್ರಾಯವು ಬದಲಾವಣೆಗೆ ಅರ್ಹವಾಗಿದೆ.

Stith Thompson ತಮ್ಮ 'Folktale'ನಲ್ಲಿ ಕಥಾವರ್ಗ 327A, 327B, 327Cಗಳ ಸಂಕೀರ್ಣ ಕಥಾ ವರ್ಗ 327ರ ಬಗ್ಗೆ ಹೇಳುತ್ತಾ ''ಈ ಇಡೀ ಸಂಕೀರ್ಣವು ಯೂರೋಪಿನದ್ದು ಎಂದು ಕಾಣಿಸುತ್ತದೆ. ರಾಕ್ಷಸ ಹಾಗೂ ಮಕ್ಕಳಿಗೆ ಸಂಬಂಧಿಸಿದ ಇಂತಹ ಕಥೆಗಳು ಬೇರೆ ಪ್ರದೇಶಗಳಲ್ಲಿಯೂ ಸಿಕ್ಕಿವೆ''[1] ಎಂದಿದ್ದಾರೆ. ಆದರೆ ಮುಂದೆ ಅವರೇ ಆಫ್ರಿಕದ, ಅಮೆರಿಕನ್ ನೀಗ್ರೋಗಳ ಮತ್ತು ಅಮೆರಿಕನ್ ಇಂಡಿಯನ್‌ರ ಕಥಾ ವರ್ಗಗಳಲ್ಲಿ ರಾಕ್ಷಸನ ಸೆರೆಯಿಂದ ಬಿಡಿಸಿಕೊಳ್ಳಲು ಒಂದು ವಸ್ತುವನ್ನೋ ಒಂದು ಪ್ರಾಣಿಯನ್ನೋ ಬದಲಿಯಾಗಿ ಇಡುವ ಘಟನೆಯನ್ನು ಗಮನಿಸಿ, ಇದು ಯೂರೋಪಿಯನ್ ಕಥೆಗಳಿಂದಲೇ ಹೋಗಿರಬೇಕಾಗಿಲ್ಲ. ಈ ಪ್ರದೇಶಗಳಲ್ಲಿ ಸ್ವತಂತ್ರವಾಗಿಯೇ ಉಗಮವಾಗಿರಬಹುದು ಎನ್ನುತ್ತಾರೆ.[2]

''ರಾಕ್ಷಸ ಮತ್ತು ಜಾಣಹುಡುಗ'' ಕಥೆಯ ಕೆಲವು ಘಟನೆಗಳನ್ನು ಹೋಲುವ ಇನ್ನೊಂದು ಕಥಾ ವರ್ಗ : 328 : 'Jack the Giant Killer'. ಇಂಗ್ಲಿಷ್ ಜನಪದ ಕಥೆಗಳಲ್ಲಿ ಇದು ಜನಪ್ರಿಯವಾದುದು. ಇದರಲ್ಲಿ ನಾಯಕನು ರಾಕ್ಷಸನ ಮಾಂತ್ರಿಕ ವಸ್ತುಗಳನ್ನು ಉಪಾಯದಿಂದ ಅಪಹರಿಸುತ್ತಾನೆ.

---

1. Folktale P, 37.
2. ಅದೇ P, 37- 38.

ಈ ರೀತಿ ಅಪಹರಿಸಲು ಕಾರಣಗಳು ಬೇರೆ ಬೇರೆ ಪಾಠಗಳಲ್ಲಿ ಬೇರೆ ಬೇರೆ ಸಿಗುತ್ತವೆ: ಕೆಲವೊಮ್ಮೆ ರಾಕ್ಷಸನು ತನಗೆ ಕೊಟ್ಟ ಹಿಂಸೆಗೆ ಪ್ರತೀಕಾರಕ್ಕಾಗಿ, ಕೆಲವೊಮ್ಮೆ ಒಬ್ಬ ಸ್ನೇಹಿತ ರಾಜನಿಗೆ ಸಹಾಯ ಮಾಡುವುದಕ್ಕಾಗಿ; ಕೆಲವೊಮ್ಮೆ ಮತ್ಸರಿಗಳಾದ ಸ್ಪರ್ಧಿಗಳ ಸೂಚನೆಯಂತೆ ರಾಜನು ನಾಯಕನಿಗೆ ಈ ಕೆಲಸವನ್ನು ಮಾಡಲು ವಹಿಸಿರುತ್ತಾನೆ. ತುಳು ಕಥೆಯಲ್ಲಿ ಕೊನೆಯ ಕಾರಣ ಸಿಗುತ್ತದೆ. ಅದರಲ್ಲಿ ನಾಯಕನ ಸಹೋದರರು ಮತ್ಸರದಿಂದ ರಾಜನಲ್ಲಿ ಹೇಳಿ, ನಾಯಕನು ರಾಕ್ಷಸನಿಂದ ಮಾಂತ್ರಿಕ ವಸ್ತುಗಳನ್ನು ತರುವ ಕೆಲಸವನ್ನು ಆತನಿಗೆ ವಹಿಸಲು ಕಾರಣರಾಗುತ್ತಾರೆ. ಈ ರೀತಿ ರಾಕ್ಷಸನಿಂದ ನಾಯಕನು ಮಾಂತ್ರಿಕ ವಸ್ತುಗಳನ್ನು ಅಪಹರಿಸುವ ಕಥಾವರ್ಗದ (328) ಬಗ್ಗೆ Stith Thompsonರು ಕೊಟ್ಟ ಅಭಿಪ್ರಾಯ ಈ ರೀತಿ ಇದೆ.[3] ''ರಾಕ್ಷಸನ ವಸ್ತುಗಳನ್ನು ಕಳವು ಮಾಡುವ ಈ ಕಥೆಯ ಪಾಠಗಳು ಮೂಲತಃ ಉತ್ತರ ಮಧ್ಯ ಯೂರೋಪಿನ ಕಡೆಯವು. ಅದು ಫಿನ್‌ಲೆಂಡ್ ಮತ್ತು ನಾರ್ವೆಯಲ್ಲಿ ಬಹಳ ಜನಪ್ರಿಯವಾಗಿದೆ. ದಕ್ಷಿಣದ ಸ್ಪೈನ್ ಮತ್ತು ರುಮೇನಿಯಾಗಳಿಂದಲೂ ಅದು ಸಂಗ್ರಹಿತವಾಗಿದೆ. ಆದರೆ ಇದು ರಷ್ಯಾ ಮತ್ತು ಅದರ ಪೂರ್ವದ ಯಾವುದೇ ಕಡೆಗಳಲ್ಲಿಯೂ ಅಸ್ತಿತ್ವದಲ್ಲಿ ಇಲ್ಲ.'' ಸ್ಟಿತ್ ಥಾಂಸನ್‌ರ ಹೇಳಿಕೆಯಲ್ಲಿ ಭಾರತದ ಮಾತು ಇಲ್ಲ. ಆದರೆ ತುಳುವಿನ ಈ ಕಥೆಯಲ್ಲಿ ಕಥಾವರ್ಗ 328 ಒಂದು ಭಾಗವಾಗಿ ಬರುವುದರಿಂದ ಮೇಲಿನ ಹೇಳಿಕೆಯು ತಿದ್ದುಪಡಿಗೆ ಅರ್ಹವಾಗಿದೆ.

ತುಳುವಿನ "ರಾಕ್ಷಸ ಮತ್ತು ಜಾಣ ಹುಡುಗ" ಕಥೆಯಲ್ಲಿ ನಾಯಕ–ಮೂವರು ಗಂಡು ಮಕ್ಕಳಲ್ಲಿ ಕಿರಿಯವನು (ಆಶಯ L 10. ಜಯಶಾಲಿಯಾದ ಕಿರಿಯ ಮಗ). ಕಥೆಯಲ್ಲಿ ಮುಖ್ಯ ತಿರುವು ಕೊಡುವ ಘಟನೆಗಳು: (1) ರಾಕ್ಷಸನು ಮೂವರು ತರುಣರನ್ನು ಕೊಲ್ಲಲು ತನ್ನ ಮಡದಿಗೆ ಬರೆದ ಪತ್ರವನ್ನು ದಾರಿಯಲ್ಲಿ ಕಿರಿಯವನು ಬದಲಾಯಿಸಿ, ತಮ್ಮನ್ನು ಸತ್ಕರಿಸುವಂತೆ ಮಾಡುವುದು (ಆಶಯ: K 511. ಪತ್ರವನ್ನು ಬದಲಾಯಿಸುವುದು, ಕೊಲ್ಲಲು ಬರೆದ ಪತ್ರವನ್ನು ಬದಲಾಯಿಸಿ, ಗೌರವಿಸುವಂತೆ ಬರೆಯುವುದು).

(2) ನಾಯಕನು ರಾಕ್ಷಸನ ಮಕ್ಕಳ ಟೊಪ್ಪಿಯನ್ನು ತಾನು ಮತ್ತು ತನ್ನ ಅಣ್ಣಂದಿರು ಧರಿಸಿ, ಆ ಮೂಲಕ ಮಲಗಿರುವಾಗ, ರಾಕ್ಷಸನು ಭ್ರಮೆಯಿಂದ ತನ್ನ ಮಕ್ಕಳನ್ನೇ ಕೊಲ್ಲುವಂತೆ ಮಾಡುವುದು (K 1611).

(3) ಮತ್ಸರಿಗಳಾದ ಅಣ್ಣಂದಿರು ರಾಜನ ಮೂಲಕ ನಾಯಕನನ್ನು ರಾಕ್ಷಸನ ಮಾಂತ್ರಿಕ ವಸ್ತುಗಳನ್ನು ತರಲು ಕಳುಹಿಸುವುದು (H 912).

(4) ನಾಯಕನು ರಾಕ್ಷಸನ ಹೆಂಡತಿಯನ್ನು ಉಪಾಯದಿಂದ ಕೊಲ್ಲುವುದು (G 519.1).

(5) ನಾಯಕನು ರಾಕ್ಷಸನನ್ನು ಪೆಟ್ಟಿಗೆಯಲ್ಲಿ ಸೆರೆಹಿಡಿದು ತರುವುದು (G 514.1).

## (2) ಬದಲಾದ ಮದುಮಗಳು

''ಒಂದೂರಿನ ಅರಸು–ಮಗನಿಗೆ ಮೂರುವರೆ ವರ್ಷ ಪ್ರಾಯವಾಗಿರುವಾಗ ಎರಡೂವರೆ ವರ್ಷದ ಅರಸು ಮಗಳೊಡನೆ ಬಾಲ್ಯವಿವಾಹ ಮಾಡುವುದು. ಮದುವೆಯಾದರೂ ಅವರು ಚಿಕ್ಕವರಾದುದರಿಂದ

3. ಅದೇ P, 39.

ಒಟ್ಟಿಗೆ ವಾಸಮಾಡದೆ ಅವರವರ ಮನೆಯಲ್ಲೇ ಇರುವುದು. ಅರಸು ಮಗನು ತರುಣನಾದಾಗ ತನಗೆ ಮದುವೆಯಾದ ಸಂಗತಿ ತಿಳಿದು ಬರುವುದು. ಆಗ ಅವನ ಹೆಂಡತಿಯನ್ನು ಸಿಂಗರಿಸಿ, ಒಬ್ಬಳು ಕೆಲಸದವಳ ಸಂಗಡ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ, ಅವನ ಮನೆಗೆ ಕಳುಹಿಸುವುದು. ದಾರಿಯಲ್ಲಿ ಅರಸು ಮಗಳು ಪಲ್ಲಕ್ಕಿಯಿಂದ ಇಳಿದು, ಮೂತ್ರ ಹೊಯ್ಯಲು ಹೋಗುವಾಗ, ಅವಳ ಕೆಲಸದವಳು ಅವಳ ವಸ್ತ್ರ, ಆಭರಣಗಳನ್ನು ಕಳಚಿ ಇಡಲು ಪ್ರೇರೇಪಿಸುವುದು. ಈ ರೀತಿ ಅರಸು ಮಗಳು ಕಳಚಿದಾಗ ಕೆಲಸದವಳು ಅವಳ ಎರಡು ಕಣ್ಣುಗಳನ್ನೂ ಕಿತ್ತು, ಅವಳನ್ನು ಹಾಳುಬಾವಿಗೆ ದೂಡಿ, ತಾನು ಅವಳ ವಸ್ತ್ರಾಭರಣಗಳನ್ನು ಧರಿಸಿ, ಅರಸು ಮಗನಲ್ಲಿಗೆ ಬರುವುದು. ಅಲ್ಲಿ ಅವನ ಪತ್ನಿಯಂತೆಯೇ ಇರುವುದು. ಈ ಕಡೆ, ಕಟ್ಟಿಗೆ ಮಾರುವವನೊಬ್ಬನು ರಾಜಕುಮಾರಿಯನ್ನು ಹಾಳುಬಾವಿಯಿಂದ ರಕ್ಷಿಸಿ, ತನ್ನ ಮನೆಯಲ್ಲಿ ಸಾಕುವುದು. ಅವಳು ಹಾಸಿಗೆ ದಿಂಬು ತಯಾರಿಸಿ, ತನ್ನನ್ನು ಸಾಕಿದವನಿಗೆ ಅದನ್ನು ಮಾರಿದ ಹಣ ಸಿಗುವಂತೆ ಮಾಡುವುದು. ಒಮ್ಮೆ ಅವಳು ತಯಾರಿಸಿದ ಸುಂದರವಾದ ಒಂದು ಹಾಸಿಗೆ ಮತ್ತು ದಿಂಬನ್ನು ಅವಳನ್ನು ಸಾಕಿದಾತನಲ್ಲಿ ಕೊಟ್ಟು, ಎರಡು ಕಣ್ಣುಗಳನ್ನು ಕೊಟ್ಟವರಿಗೆ ಮಾತ್ರ ಅದನ್ನು ಮಾರಲು ಹೇಳುವುದು. ರಾಜಕುಮಾರಿಯಂತೆ ನಟಿಸುತ್ತಿದ್ದ ಕೆಲಸದವಳು ಆ ಹಾಸಿಗೆ ದಿಂಬನ್ನು ಕೊಂಡುಕೊಂಡು, ತನ್ನ ಕರಡಿಗೆಯಲ್ಲಿದ್ದ ರಾಜಕುಮಾರಿಯ ಎರಡು ಕಣ್ಣುಗಳನ್ನು ಪ್ರತಿಯಾಗಿ ಕೊಡುವುದು. ಅವಳು ಹರಿಯುವ ನೀರಿನಲ್ಲಿ ನಿಂತು, ದೇವರನ್ನು ಧ್ಯಾನಿಸಿ, ಆ ಕಣ್ಣುಗಳನ್ನು ತನ್ನ ಕಣ್ಣ ಗುಡ್ಡೆಗಳಿಗೆ ಜೋಡಿಸಿದಾಗ, ಅವಳಿಗೆ ಮತ್ತೆ ದೃಷ್ಟಿ ಬರುವುದು. ಅವಳು ದೇವರನ್ನು ಮತ್ತೆ ಧ್ಯಾನಿಸಿ, ಅರಮನೆಯನ್ನು ಪಡೆಯುವುದು, ಅವಳು ಒಂದು ಕಲ್ಲಿನ ಗುಡಿಯನ್ನು ಕಟ್ಟಿಸಿ, ಅದರೊಳಗೆ ಬಿಳಿಬಟ್ಟೆಯನ್ನು ಹೊದ್ದುಕೊಂಡು ಮಲಗುವುದು. ತನ್ನ ಕೈ ಹಿಡಿದ ಗಂಡನು ಬಂದು ಬಾಗಿಲು ದೂಡಿದರೆ ಮಾತ್ರ ಅದು ತೆರೆದುಕೊಳ್ಳುವಂತೆಯೂ ಇಲ್ಲದಿದ್ದರೆ ಭದ್ರವಾಗಿ ಮುಚ್ಚಿರುವಂತೆಯೂ ಶಕ್ತಿಯನ್ನು ಪಡೆಯುವುದು. ರಾಜಕುಮಾರಿಯ ಜೀವವಿರುವ ಅವಳ ಗಿಳಿಯನ್ನು ಗಾಣಿ ವೇಷದ ಕೆಲಸದವರು ಕೊಂದಾಗ ರಾಜಕುಮಾರಿಯ ಜೀವ ಹೋಗುವುದು. ಆ ಗಿಳಿಯ ಎಲುಬನ್ನು ಕೆಲಸದವಳು ದೇಹದಲ್ಲಿ ಧರಿಸುವುದು. ಒಂದು ದಿನ ಅರಸುಮಗನು ಬೇಟೆಯಾಡುತ್ತಾ ಬಂದಾಗ, ಆ ಕಲ್ಲಿನ ಗುಡಿಯ ಬಾಗಿಲು ದೂಡಿದಾಗ, ಅದು ತೆರೆದುಕೊಳ್ಳುವುದು. ಅಲ್ಲಿದ್ದ ಹೆಣದ ಮುಸುಕು ತೆಗೆದಾಗ ಸುಂದರಿಯ ದೇಹ ಕಾಣಿಸುವುದು. ಇವನು ಅರಮನೆಗೆ ಬಂದು, ಸತ್ಯ ಸಂಗತಿ ತಿಳಿಯಲು, ಕೆಲಸದವಳ ದೇಹದ ಎಲುಬನ್ನು ತೆಗೆದಾಗ ಅಲ್ಲಿನ ರಾಜಕುಮಾರಿಯ ದೇಹಕ್ಕೆ ಜೀವ ಬರುವುದು. ನಿಜವಾದ ವಿಷಯ ಗೊತ್ತಾದ ರಾಜಕುಮಾರ, ಕೆಲಸದವಳನ್ನು ಕೊಂದು, ತನ್ನ ನಿಜವಾದ ಹೆಂಡತಿಯೊಡನೆ ಸುಖವಾಗಿ ಇರುವುದು.'

ಇದು "ಬದಲಾದ ಮದುಮಗಳು" ಕಥೆಯ ತುಳುವಿನ ಮೂಲ ರೂಪದ ಸಂಕ್ಷಿಪ್ತ ಕನ್ನಡ ರೂಪ. ಮೂಲ ತುಳು ರೂಪವು ಇಲ್ಲಿ ಕೊಟ್ಟ ಕನ್ನಡ ರೂಪದ ಆರುಪಟ್ಟು ದೀರ್ಘವಾಗಿದೆ. ಇದು ಬಂಟ್ವಾಳ ತಾಲೂಕಿನ ಪುಣಜಾ ಗ್ರಾಮದಲ್ಲಿ 'ತನಿಯಾರು' ಎಂಬ ಅನಕ್ಷರಸ್ಥ ಹರಿಜನ ಹೆಂಗಸಿನಿಂದ (ಪ್ರಾಯ 55 ವರ್ಷ 1979ರಲ್ಲಿ) ಸಂಗ್ರಹಿಸಿದ್ದು (ಸಂಗ್ರಹ 1974ರಲ್ಲಿ).

"ಬದಲಾದ ಮದುಮಗಳು" ಸುಮಾರು 15ರಷ್ಟು ಆಶಯಗಳುಳ್ಳ ಒಂದು ಸಂಕೀರ್ಣ ಕಥೆ. ವಸ್ತುವಿನ ದೃಷ್ಟಿಯಿಂದ ಇದು 'ಮಾಂತ್ರಿಕ ಕಥೆ'ಗಳಲ್ಲಿ 400–459 : ಅತಿಮಾನುಷ ಅಥವಾ ರೂಪ ಬದಲಿಸಿದ ಗಂಡ (ಹೆಂಡತಿ) ಅಥವಾ ಇತರ ಸಂಬಂಧಿಕರು (Supernatural or Enchanted Husband (Wife) or Other Relatives) ಎಂಬ ವರ್ಗಗಳ ಗುಂಪಿಗೆ ಸೇರುವಂತೆ ತೋರುತ್ತದೆ. ವರ್ಗ 408ರ 'The Three Oranges' ಎನ್ನುವ ಕಥೆಯಲ್ಲಿ ಕೆಲಸದ ಹೆಣ್ಣೊಬ್ಬಳು ನಾಯಕಿಯ ಬದಲಾಗಿ ವರ್ತಿಸುವ ಆಶಯವಿದೆ. ಆದರೆ ಈ 'Substituted bride by Servant Maid' ಎನ್ನುವ ಆಶಯವನ್ನು ಬಿಟ್ಟರೆ, ವರ್ಗ 408ರ ಕಥೆಗೂ ತುಳುವಿನ "ಬದಲಾದ ಮದುಮಗಳು" ಕಥೆಗೂ ಯಾವ ಸಾಮ್ಯವೂ ಇಲ್ಲ. ವರ್ಗ 533ರ 'The

Goose Girl' ಎನ್ನುವ ಕಥೆಯು "ಬದಲಾದ ಮದುಮಗಳು" ತುಳು ಕಥೆಯೊಡನೆ ಹೆಚ್ಚು ಹೋಲಿಕೆಯನ್ನು ಪಡೆದಿದೆ. ಈ ದೃಷ್ಟಿಯಿಂದ ಈ ತುಳು ಕಥೆಯನ್ನು ಮಾಂತ್ರಿಕ ಕಥೆಗಳಲ್ಲಿ 500 - 559 : ಅತಿಮಾನುಷ ಸಹಾಯಕರು (Supernatural Helpers) ಎಂಬ ಗುಂಪಿಗೆ ಸೇರಿಸಬಹುದು. 'The Goose Girl' (ವರ್ಗ 533) ಕಥೆಯಲ್ಲಿ ರಾಜಕುಮಾರಿಯೊಬ್ಬಳು ಕೆಲಸದ ಹೆಣ್ಣೊಬ್ಬಳ ಜೊತೆಗೆ ರಾಜಕುಮಾರನನ್ನು ಮದುವೆಯಾಗಲು ಹೋಗುತ್ತಿರುತ್ತಾಳೆ. ದಾರಿಯಲ್ಲಿ ಬಾಯಾರಿಕೆಗೊಂಡ ರಾಜಕುಮಾರಿಯು ನೀರು ಕುಡಿಯಲು ಹಳ್ಳಕ್ಕೆ ಇಳಿಯುವ ಸಂದರ್ಭದಲ್ಲಿ, ಸೇವಕಿಯು ಅವಳ ವಸ್ತ್ರಾಭರಣಗಳನ್ನು ತಾನು ಧರಿಸಿಕೊಂಡು, ಅವಳನ್ನು ಹಳ್ಳಕ್ಕೆ ದೂಡಿ, ರಾಜಕುಮಾರಿಯಂತೆ ನಟಿಸಿ ರಾಜಕುಮಾರನನ್ನು ಮದುವೆಯಾಗುತ್ತಾಳೆ. ಅವಳ ರಹಸ್ಯವನ್ನು ಬಯಲು ಮಾಡುತ್ತದೆ ಎಂಬ ಭಯದಿಂದ ನಿಜವನ್ನು ಹೇಳುವ ಕುದುರೆಯನ್ನು ಕೊಂದು, ಅದರ ತಲೆಯನ್ನು ಅರಮನೆಯ ದ್ವಾರದಲ್ಲಿ ಕಟ್ಟುತ್ತಾಳೆ. ಮುಂದೆ ಕೆಲವು ಘಟನೆಗಳ ಮೂಲಕ ಸೇವಕಿಯ ರಹಸ್ಯ ಬಯಲಾಗುತ್ತದೆ. ಆ ಕ್ರೂರಿಯಾದ ಸೇವಕಿಯನ್ನು ಕೊಂದು, ರಾಜಕುಮಾರನು ರಾಜಕುಮಾರಿಯನ್ನು ಮದುವೆಯಾಗುತ್ತಾನೆ.

'The Goose Girl' (533) ಕಥೆಯ ಹೆಚ್ಚಿನ ಘಟನೆಗಳು "ಬದಲಾದ ಮದುಮಗಳು" ಕಥೆಯಲ್ಲಿ ಬರುತ್ತವೆ. ಇಲ್ಲಿ ಮೂತ್ರ ಮಾಡಲು ಹೊರಟ ಸಂದರ್ಭದಲ್ಲಿ ರಾಜಕುಮಾರಿಯನ್ನು ಕೆಳಕ್ಕೆ ದೂಡಿ ಸೇವಕಿಯು ಅವಳ ವಸ್ತ್ರಾಭರಣಗಳನ್ನು ಧರಿಸಿ, ರಾಜಕುಮಾರಿಯಂತೆ ನಟಿಸುತ್ತಾಳೆ. ಹಾಗೆಯೇ ರಾಜಕುಮಾರಿಯು ಸಾಕಿದ ಗಿಳಿಯು ತನ್ನ ರಹಸ್ಯವನ್ನು ಬಯಲು ಮಾಡುತ್ತದೆ ಎಂಬ ಭಯದಿಂದ ಸೇವಕಿಯು ಅದನ್ನು ಕೊಲ್ಲುತ್ತಾಳೆ. ರಾಜಕುಮಾರನು ನಿಜವಾದ ರಾಜಕುಮಾರಿಯನ್ನು ಕಂಡುಹಿಡಿಯುವ ಸಂದರ್ಭದ ಘಟನೆಗಳು ಈ ಕಥೆಯಲ್ಲಿ ಮಾಂತ್ರಿಕ ಸ್ವರೂಪದ ವಾತಾವರಣದಲ್ಲಿ ಬರುತ್ತವೆ. ಈ ದೃಷ್ಟಿಯಿಂದ ಇದು ವಿಶಿಷ್ಟವಾಗಿದೆ. ಈ ಕಥೆಯ ಮುಖ್ಯ ಘಟನೆಗಳ ಭಾಗಗಳು :

(1) ರಾಜಕುಮಾರ ಮತ್ತು ರಾಜಕುಮಾರಿಯರ ಬಾಲ್ಯವಿವಾಹ. ಇಲ್ಲಿನ ಮುಖ್ಯ ಆಶಯ : T 51.3. ಚಿತ್ರಗಳ ಮೂಲಕ ಮದುವೆ ನಿಶ್ಚಯವಾಗುವುದು.

(2) ರಾಜಕುಮಾರಿಯನ್ನು ಸೇವಕಿಯು ದೂಡಿ ಹಾಕಿ, ಅವಳಂತೆ ನಟಿಸಿ, ರಾಜಕುಮಾರನ ಜೊತೆ ಇರುವುದು. ಇಲ್ಲಿನ ಮುಖ್ಯ ಆಶಯ : K 1911.1.1. ಮದುವೆಗೆ ಹೋಗುವ ದಾರಿಯಲ್ಲಿ ಸುಳ್ಳು ಮದುಮಗಳು ನಿಜವಾದ ಮದುಮಗಳ ಸ್ಥಾನವನ್ನು ಆಕ್ರಮಿಸುವುದು.

(3) ನಿಜವಾದ ರಾಜಕುಮಾರಿಯು ಮರೆಯಲ್ಲಿ ಇದ್ದು ಕಷ್ಟಪಡುತ್ತಾ, ಮರಳಿ ರಾಜಕುಮಾರನನ್ನು ಪಡೆಯಲು ಪ್ರಯತ್ನಿಸುವುದು.

(4) ಅನಿರೀಕ್ಷಿತ ಘಟನೆಯೊಂದರ ಮೂಲಕ ಸತ್ಯವು ಬಯಲಾಗಿ, ಅವರು ಒಟ್ಟಾಗುವುದು.

## (೩) ವಜ್ರಕುಮಾರ

"ಒಂದು ಊರಿನಲ್ಲಿ ಒಬ್ಬ ಅರಸು ಇದ್ದನು. ಆ ಅರಸನಿಗೆ ಏಳು ಮಂದಿ ಗಂಡು ಮಕ್ಕಳೂ, ಒಬ್ಬಳು ಹೆಣ್ಣು ಮಗಳೂ ಇದ್ದರು. ಅವರು ಏಳು ಮಂದಿ ಗಂಡು ಮಕ್ಕಳು ಏಳು ರೀತಿಯ ಬಂಗಾರದ ಒಡವೆಗಳನ್ನು ಮಾಡಿಸಿ ಇಟ್ಟುಕೊಂಡರು. ಆಗ ಸಣ್ಣ ತಮ್ಮ ಹೇಳಿದ—"ನಮಗೆಲ್ಲಾ ಬಂಗಾರದ ಒಡವೆ ಆಯಿತು. ಇನ್ನು

ತಂಗಿಯ ತಲೆ ಕೂದಲಿಗೆ ಬಂಗಾರದಲ್ಲಿ ಮುತ್ತು ಪೋಣಿಸಬೇಕು." ಅದಕ್ಕೆ ಎಲ್ಲರೂ ಒಪ್ಪಿದರು. ಅವರು ಏಳು ಜನರೂ ತಮ್ಮ ಹೆಂಡಂದಿರನ್ನು ಕರೆದು ಹೇಳಿದರು—''ನಮ್ಮ ತಂಗಿಗೆ ಮುತ್ತು ಪೋಣಿಸಲು ನಾವು ಹೋಗುತ್ತಿದ್ದೇವೆ. ಇವಳನ್ನು ನೀವು ಏಳು ಉಪ್ಪರಿಗೆಗಳ ಮೇಲಿನಿಂದ ಕೆಳಗೆ ಇಳಿಯಲು ಬಿಡಬೇಡಿರಿ, ಅವಳು ಮೇಲೆಯೇ ಇರಲಿ. ಅವಳಲ್ಲಿ ನೀರಿನ ಬಿಂದಿಗೆ ಕೊಟ್ಟು, ನೀರಿಗಾಗಿ ಕಳುಹಿಸಬೇಡಿರಿ. ಚೆನ್ನಾಗಿ ನೋಡಿಕೊಂಡು ಇರಿ" ಅದಕ್ಕೆ ಅವರ ಹೆಂಡತಿಯರು ಒಪ್ಪಿಕೊಂಡರು. ಗಂಡಂದಿರು ಹೋದ ಕೂಡಲೇ ಇವರು ಆ ನಾದಿನಿಯನ್ನು ಉಪ್ಪರಿಗೆಯಿಂದ ಇಳಿಯಲು ಹೇಳಿದರು. ಅವಳು ಪಾಪ, ಬೆದರಿಕೊಂಡು ಇಳಿದಳು. ಇಳಿದ ಕೂಡಲೇ ಅವಳಲ್ಲಿ ತೂತಾದ ಮಡಕೆಯನ್ನು ಕೊಟ್ಟು, ಹಗ್ಗ ಇಲ್ಲದೆ ನೀರು ತರಲು ಕಳುಹಿಸಿದರು. ಅವಳು ಹೊರಗೆ ಬಂದು ಒಂದು ಕಡೆ ಕುಳಿತುಕೊಂಡು, ಅಳುತ್ತಾ ಇದ್ದಳು. ಆಗ ಅಲ್ಲಿಗೆ ಒಂದು ಕೇರೆ ಹಾವು ಬಂತು. ಅದು ಬಂದು ಅವಳಲ್ಲಿ ''ನೀನು ಯಾಕೆ ಅಳುತ್ತಿರುವಿ?'' ಎಂದು ಕೇಳಿತು. ಆಗ ಅವಳು ಹೇಳಿದಳು—''ನನ್ನ ಅತ್ತಿಗೆಯರು ನನ್ನಲ್ಲಿ ಈ ತೂತು ಮಡಕೆಯಲ್ಲಿ ಹಗ್ಗ ಇಲ್ಲದೆ ನೀರು ತರಲು ಹೇಳಿದರು'' ಅಷ್ಟಾಗುವಾಗ ಅಲ್ಲಿಗೆ ಕಪ್ಪೆಗಳು ಬಂದು ಹೇಳಿದುವು—''ನೀನು ಅಳಬೇಡ ಅಕ್ಕ. ನಾವು ತೂತು ಮಡಕೆಯಲ್ಲಿ ಕುಳಿತುಕೊಳ್ಳುತ್ತೇವೆ.'' ಹಾಗೆಯೇ ಆ ಕಪ್ಪೆಗಳು ಮಡಕೆಯ ತೂತಿಗೆ ಅಡ್ಡವಾಗಿ ಕುಳಿತವು. ಕೇರೆ ಹಾವು ಅವಳಿಗೆ ಹೇಳಿತು–"ನೀನು ನನ್ನನ್ನು ಹಗ್ಗದ ಹಾಗೆ ಮಡಕೆಗೆ ಸುತ್ತಿ ನೀರು ತಾ." ಅವಳು ಹಾಗೆಯೇ ಕೇರೆಯನ್ನು ಹಗ್ಗದ ಹಾಗೆ ಮಡಕೆಗೆ ಸುತ್ತಿ ನೀರು ಎತ್ತಿಕೊಂಡು ಹೋದಳು. ಅವಳು ನೀರು ತಂದಾಗ, ಆ ಅತ್ತಿಗೆಯರು ''ಇನ್ನು ನೀನು ಒಂದು ಮುಡಿ ಅಕ್ಕಿಯ ಭತ್ತವನ್ನು ಒನಕೆ ಇಲ್ಲದೆ ಕುಟ್ಟಿಕೊಂಡು ಬರಬೇಕು" ಎಂದು ಹೇಳಿದರು. ಅವಳು ಒಂದು ಮುಡಿ ಅಕ್ಕಿಯ ಭತ್ತವನ್ನು ತೆಗೆದುಕೊಂಡು ಹೋದಳು. ಹೋಗಿ ಒಂದು ಬಯಲಿನಲ್ಲಿ ಕುಳಿತುಕೊಂಡು ಅತ್ತಳು. ಹೀಗೆ ಅಳುತ್ತಾ ಕೂತಿದ್ದಾಗ ಅಲ್ಲಿಗೆ ಒಂದು ಸಾವಿರ ಗುಬ್ಬಿ ಹಕ್ಕಿಗಳು ಬಂದವು, ಆ ಗುಬ್ಬಿ ಹಕ್ಕಿಗಳು ಅವಳಲ್ಲಿ "ನೀನು ಯಾಕೆ ಅಳುತ್ತಿದ್ದೀಯಾ" ಎಂದು ಕೇಳಿದವು. ''ನಾನು ಒನಕೆ ಇಲ್ಲದೆ ಭತ್ತವನ್ನು ಕುಟ್ಟಿಕೊಂಡು ಹೋಗಬೇಕಂತೆ. ನಾನು ಹೇಗೆ ಒನಕೆ ಇಲ್ಲದೆ ಭತ್ತವನ್ನುಕುಟ್ಟಲಿ" ಎಂದು ಹೇಳಿ ಅತ್ತಳು. ಆಗ ಗುಬ್ಬಿ ಹಕ್ಕಿಗಳು "ನೀನು ಅಳಬೇಡ" ಎಂದು ಹೇಳಿ, ಆ ಭತ್ತವನ್ನೆಲ್ಲಾ ಕೊಕ್ಕುಗಳಿಂದ ಕುಟುಕಿ ಒಂದು ಮುಡಿ ಅಕ್ಕಿ ಮಾಡಿಕೊಟ್ಟವು. ಈ ರೀತಿ ಮಾಡಿ ಕೊಡುವಾಗ ಒಂದು ಗರ್ಭಿಣಿ ಹಕ್ಕಿ ಒಂದು ಅಕ್ಕಿಯನ್ನು ನುಂಗಿತು. ಅವಳು ಈ ಅಕ್ಕಿಯನ್ನೆಲ್ಲಾ ಮನೆಗೆ ತಂದುಕೊಟ್ಟಳು. ಅವಳ ಅತ್ತಿಗೆಯರು ಏಳು ಸೇರುಗಳನ್ನು ತಂದು ಅಳೆಯುವಾಗ ಒಂದು ಅಕ್ಕಿ ಕಡಮೆ ಇರುವುದು ಗೊತ್ತಾಯಿತು. ''ಆ ಅಕ್ಕಿ ಕಾಳನ್ನು ಈಗಲೇ ಹೋಗಿ ತಾ'' ಎಂದು ಇವರು ಅವಳನ್ನು ಕಳುಹಿಸಿದರು. ಅವಳು ಹೋಗಿ, ಕುಳಿತುಕೊಂಡು ಅತ್ತಳು. ಆಗ ಆ ಅಕ್ಕಿಯನ್ನು ನುಂಗಿದ ಆ ಗರ್ಭಿಣಿ ಹಕ್ಕಿ ವಾಂತಿಮಾಡಿ ಅದನ್ನು ಕೊಟ್ಟಿತು. ಅವಳು ಅದನ್ನು ತೆಗೆದುಕೊಂಡು ಬಂದು ಅವರಿಗೆ ಕೊಟ್ಟಳು. ಆಗ ಇವರು ಇವಳಿಗೆ ಹುಳಿ ಹಿಡಿದ ಉಪ್ಪಿನಕಾಯಿ ಮತ್ತು ತಂಗುಳನ್ನವನ್ನು ಕೊಟ್ಟರು, ಇವಳು ಅದನ್ನು ಉಂಡಳು. ಆ ಮೇಲೆ ಅವರು ಇವಳಲ್ಲಿ ''ಕತ್ತಿ ಮತ್ತು ಹಗ್ಗ ಇಲ್ಲದೆ ಸೊಪ್ಪು ಕಡಿದುಕೊಂಡು ತಾ. ನಿನ್ನ ಚಾಕರಿ ನಾವು ಮಾಡಬೇಕಾದರೆ ನೀನು ಹುಲಿ ಬಣ್ಣದ ರವಿಕೆ ತೊಟ್ಟುಕೊಂಡು, ಬಲೆಪ ಬಣ್ಣದ ಸೀರೆ ಉಟ್ಟು ಕೊಂಡು, ವಜ್ರಕುಮಾರನನ್ನು ಪಡೆದುಕೊಂಡು ಬರಬೇಕು" ಎಂದು ಇವಳನ್ನು ಹೊರಗೆ ಅಟ್ಟಿದರು. ಇವಳು ಕತ್ತಿ ಇಲ್ಲದೆ, ಹಗ್ಗ ಇಲ್ಲದೆ ಗುಡ್ಡೆಗೆ ಹೋದಳು. ಹೋಗಿ ಒಂದು ಕಾಡಿನಲ್ಲಿ ಕುಳಿತು ಅಳುವಾಗ ಅವಳ ಕಣ್ಣಿಗೆ ಒಂದು ಕೋಟೆಯಂತಹದ್ದು ಕಾಣಿಸಿತು.

ಒಂದು ಊರಿನಲ್ಲಿ ಒಬ್ಬ ಅರಸುಮಗ ಸತ್ತಿದ್ದಾನೆ. ಅವನು ತನ್ನನ್ನು ಹೂಳಲೂ ಬಾರದು, ಸುಡಲೂ ಬಾರದು ಎಂದು ಹೇಳಿದ್ದನಂತೆ. ಅವನು ವಿಷ ತಾಗಿ ಸತ್ತದ್ದು. ತನ್ನನ್ನು ಒಂದು ತೊಟ್ಟಿಲಿನಲ್ಲಿ ಕೊಂಡು ಹೋಗಿ ಕಾಡಿನ ನಡುವಿನಲ್ಲಿ ಇಡಬೇಕೆಂದು ಅವನು ಹೇಳಿದ್ದಾನೆ. ಹಾಗೆಯೇ ಆತನನ್ನು ಕೊಂಡುಹೋಗಿ,

ಕಾಡಿನಲ್ಲಿ ಒಂದು ತೊಟ್ಟಿಲಿನಲ್ಲಿ ಇಟ್ಟಿದ್ದಾರೆ. ಅದು ಈ ಹೆಣ್ಣಿಗೆ ಒಂದು ಕೋಟೆಯ ಹಾಗೆ ಕಣ್ಣಿಗೆ ಕಾಣಿಸಿತು. ಇವಳು ಆ ಕೋಟೆಯ ಒಳಗಡೆ ಹೋದಳು. ಹೋಗಿ ಇವಳು ಅವನ ತಲೆಯನ್ನು ತನ್ನ ಮಡಿಲಿನಲ್ಲಿ ಇಟ್ಟುಕೊಂಡು ಹುಡುಕಿದಾಗ ಅವನಿಗೆ ಒಂದು ತಲೆ ಕೂದಲಿನಷ್ಟು ಆಯುಸ್ಸು ಇದೆಯೆಂದು ಅವಳಿಗೆ ಮನವರಿಕೆಯಾಯಿತು. ಮತ್ತೂ ಹುಡುಕಿದಾಗ ಅವನ ದೇಹದಲ್ಲಿ ಒಂದು ಮೊಳೆ ನೆಟ್ಟಿದ್ದು ಕಂಡು ಬಂತು. ಅವಳು ಆ ಮೊಳೆಯನ್ನು ಕಿತ್ತುತೆಗೆದಳು. ಕಿತ್ತುತೆಗೆದಾಗ ಅವನು ಮರಳಿ ಜೀವವನ್ನು ಪಡೆದನು. ಆಮೇಲೆ ಅವನು ತನ್ನ ತಂದೆತಾಯಿಯರ ಬಳಿಗೆ ಹೋಗಿ ನಡೆದ ಸಮಾಚಾರವನ್ನು ತಿಳಿಸಿದನು ಆಗ ಅವರು ಅವಳಲ್ಲಿಗೆ ಬಂದು, ಅವಳನ್ನು ಕರೆದುಕೊಂಡು ಹೋದರು. ಅಲ್ಲಿ ಅವನಿಗೆ ಅವಳ ಜೊತೆ ಮದುವೆ ಮಾಡಿಸಿದರು. ಮದುವೆ ಆದ ಮೇಲೆ ಅವಳು ಒಂದು ಗಂಡು ಮಗುವನ್ನು ಹೆತ್ತಳು. ಅವನೇ ವಜ್ರಕುಮಾರ.

ಈ ಕಡೆ ಆಕೆಯ ಅಣ್ಣಂದಿರು ಹೊರಊರಿನಿಂದ ಮನೆಗೆ ಬಂದವರು ತಂಗಿಯ ಬಗ್ಗೆ ಹೆಂಡಂದಿರಲ್ಲಿ ವಿಚಾರಿಸಿದರು. ಆಗ ಹೆಂಡಂದಿರು "ಅವಳು ನೀವು ಹೋದ ಮರುದಿನವೇ ಉಪ್ಪರಿಗೆಯಿಂದ ಇಳಿದು ಹೊರಟುಹೋಗಿದ್ದಾಳೆ" ಎಂದರು. ಆಗ ಗಂಡಂದಿರು "ನಮಗೆ ಇನ್ನು ಬದುಕೂ ಬೇಡ, ಮನೆಯೂ ಬೇಡ, ಏನೂಬೇಡ. ಯಾವಾಗ ನಮ್ಮ ತಂಗಿಹೊರಟುಹೋದಳೋ ನಾವು ಇನ್ನು ಎಲ್ಲಾದರೂ ಹೋಗಿ ದಿನ ಕಳೆಯುತ್ತೇವೆ. ಎಲ್ಲಾದರೂ ಕೆಲಸ ಮಾಡಿ ತಿನ್ನುತ್ತೇವೆ" ಎಂದು ಹೇಳಿ, ಅವರು ಮನೆ ಬಿಟ್ಟು ಹೊರಟುಹೋದರು. ಆಗ ಅವರ ಹೆಂಡಂದಿರೂ ಮನೆ ಬಿಟ್ಟು ಹೊರಟರು. ಈ ರೀತಿ ಮನೆ ಬಿಟ್ಟಮೇಲೆ ಇವರು ದಿನದಲ್ಲಿ ಒಂದು ಹೊರೆ ಸೌದೆಯನ್ನು ಎಲ್ಲಾದರೂ ಮಾರಿ ಊಟ ಮಾಡುತ್ತಿದ್ದರು. ಹಾಗೆಯೇ ಒಂದು ದಿನ ಅವರು—ಆ ಹುಡುಗಿಯ ಅಣ್ಣಂದಿರು ಮತ್ತು ಅತ್ತಿಗೆಯರು — ಒಂದು ಮನೆಗೆ ಕಟ್ಟಿಗೆ ಹೊತ್ತು ತರುತ್ತಾರೆ. ಅದು ಆ ಅಣ್ಣಂದಿರ ತಂಗಿ ಇರುವ ಮನೆಯೇ. ಅವಳು, ತಂಗಿ—ತನ್ನ ಗಂಡನಲ್ಲಿ ಹೇಳಿದಳು — "ನಮಗೆ ಒಂದು ಸಮಾರಾಧನೆ ತೆಗೆಯಬೇಕು". ಅವನು "ಆಗಬಹುದು" ಎಂದ. ಆಗ ಇವಳು ಹೇಳಿದಳು — ''ಅವರನ್ನು ಕಟ್ಟಿಗೆ ತರಲು ಹೇಳಬೇಕು" ಎಂದು. ಅವನು ಹಾಗೆಯೇ ಅವರನ್ನು ಕಟ್ಟಿಗೆ ತರಲು ಹೇಳಿದ. ಅವರು ಸಮಾರಾಧನೆಯ ಔತಣದಲ್ಲಿಗೆ ಮಧಾಹ್ನದ ಹೊತ್ತು ಕಟ್ಟಿಗೆ ತರಲು ಹೇಳಿದ. ಅವರು ಸಮಾರಾಧನೆಯ ಔತಣದಲ್ಲಿಗೆ ಮಧ್ಯಾಹ್ನದ ಹೊತ್ತು ಕಟ್ಟಿಗೆ ತೆಗೆದುಕೊಂಡು ಬಂದರು. ಬಂದು ಅಲ್ಲಿ ಕುಳಿತರು. ಕುಳಿತಾಗ ಊಟಕ್ಕೆ ಏಳುವುದಕ್ಕೆ ಅವರಿಗೆ ನೀರು ಕೊಡಲಾಯಿತು. ಅವರು ಊಟಕ್ಕೆ ಎದ್ದರು. ಊಟಕ್ಕೆ ಎದ್ದಾಗ ಅವರು ಏಳು ಜನ ಅಣ್ಣಂದಿರನ್ನೂ ಏಳು ಜನ ಅತ್ತಿಗೆಯರನ್ನೂ ಒಂದೇ ಸ್ಥಳದಲ್ಲಿ ಕುಳಿತುಕೊಳ್ಳಲು ಅವಳು ಹೇಳಿದಳು. ಅವರು ಹಾಗೆಯೇ ಕುಳಿತರು. ಆಗ ಇವಳು ಬಲೆಪ ಬಣ್ಣದ ಸೀರೆಯನ್ನು ಉಟ್ಟುಕೊಂಡಳು. ಹುಲಿಬಣ್ಣದ ರವಕೆ ತೊಟ್ಟುಕೊಂಡಳು. ಬೆಳ್ಳಿಯ ಪಾತ್ರೆಯಲ್ಲಿ ತುಪ್ಪ ಬಡಿಸುತ್ತಾ ಬಂದಳು ಅವಳು ಕಂಕುಳಲ್ಲಿ ಮಗ ವಜ್ರಕುಮಾರನನ್ನು ಎತ್ತಿಕೊಂಡಿದ್ದಳು. ಆ ರೀತಿ ಅವಳು ಬಂದಾಗ ಈ ಅಣ್ಣಂದಿರು ಸ್ಮೃತಿ ತಪ್ಪಿಬಿದ್ದರು. ಆಗ ನೆರೆದವರು 'ಇವರು ಯಾಕೆ ಸ್ಮೃತಿ ತಪ್ಪಿ ಬಿದ್ದದ್ದು ?" ಎಂದು ಕೇಳಿದರು. ಆಗ ಇವಳು ಅವರನ್ನು ಎಬ್ಬಿಸಿದಳು, ಎಬ್ಬಿಸಿ ಹೇಳಿದಳು — ''ನನ್ನಅಣ್ಣಂದಿರು ನೀವೇ. ನಿಮ್ಮ ತಂಗಿ ನಾನೇ. ನನ್ನ ಅತ್ತಿಗೆಯರು ಈ ರೀತಿ ಮಾಡಿದ್ದಕ್ಕೆ ನಾನು ಈ ರೀತಿ ಮಾಡಿದ್ದು'' ಎಂದು ಹೇಳಿದಳು. ಇದನ್ನು ಕೇಳಿದವರೇ ಈ ಏಳು ಜನ ಅಣ್ಣಂದಿರು ತಮ್ಮ ಏಳೂ ಜನ ಹೆಂಡಂದಿರನ್ನು ಕೊಂದರು. ಬಳಿಕ ತಂಗಿಯ ಜೊತೆಗೆ ಸುಖವಾಗಿ ಇದ್ದರು".

'ವಜ್ರಕುಮಾರ' ತುಳು ಜನಪದ ಕಥೆಯ ಸಂಪೂರ್ಣ ಕನ್ನಡ ಅನುವಾದವನ್ನು ಮೇಲೆ ಕೊಡಲಾಗಿದೆ. ಇದು ಮಂಗಳೂರು ತಾಲೂಕಿನ ಕೊಣಾಜೆ ಗ್ರಾಮದಲ್ಲಿ ಅಕ್ಕಮ್ಮ ಎಂಬ ಪುರುಷ ಜಾತಿಯ ಅನಕ್ಷರಸ್ಥ ಹೆಂಗಸಿನಿಂದ (ಪ್ರಾಯ 61 ವರ್ಷ-1979ರಲ್ಲಿ) ಸಂಗ್ರಹಿಸಿದ್ದು (ಸಂಗ್ರಹ-1973ರಲ್ಲಿ. ಆಗ ಅವಳ ಪ್ರಾಯ 55 ವರ್ಷ). ಅಕ್ಕಮ್ಮ ಈ ಕಥೆಯನ್ನು ಗೌರಿ ಮಡಿವಾಳಗಿತ್ತಿಯಿಂದ ಕಲಿತದ್ದು ಎಂದು ಹೇಳಿದಳು. (1973ರಲ್ಲಿ ಈ ಕಥೆಯನ್ನು ಸಂಗ್ರಹ ಮಾಡುವ ವೇಳೆಗೆ ಗೌರಿ ಮಡಿವಾಳಗಿತ್ತಿ ಜೀವಂತವಾಗಿದ್ದಳು. ಆಗ ಅವಳ ವಯಸ್ಸು 75 ವರ್ಷ).

'ವಜ್ರಕುಮಾರ' ಕಥೆಯು ಸುಮಾರು 20 ಆಶಯಗಳುಳ್ಳ ಒಂದು ಸಂಕೀರ್ಣ ಜನಪದ ಕಥೆ. ವಸ್ತುವಿನ ದೃಷ್ಟಿಯಿಂದ ಇದು 'ಮಾಂತ್ರಿಕ ಕಥೆ'ಗಳಲ್ಲಿ 500-559. ಅತಿಮಾನುಷ ಸಹಾಯಕರು (Supernatural Helpers) ಎಂಬ ವರ್ಗಗಳ ಗುಂಪಿಗೆ ಸೇರುತ್ತದೆ. 'ವಜ್ರಕುಮಾರ' ಕಥೆಯು ಜಗತ್ತಿನ ಜನಪದ ಕಥೆಗಳಲ್ಲಿ ಅತ್ಯಂತ ಜನಪ್ರಿಯವಾದ, ವ್ಯಾಪಕವಾಗಿ ದೊರೆಯುವ 'Cinderella' (ವರ್ಗ 510A)ವನ್ನು ಹೋಲುತ್ತದೆ. 'Cinderella Cycle'ನ್ನು Miss Cox ಎನ್ನುವವರು ವ್ಯಾಪಕವಾಗಿ ಅಧ್ಯಯನ ಮಾಡಿದ್ದಾರೆ. ಯೂರೋಪಿನಲ್ಲೇ 500ಕ್ಕಿಂತ ಕಡಮೆ ಇಲ್ಲದಷ್ಟು ಪಾಠಾಂತರಗಳು ಸಿಗುವ ಈ ಕಥೆಯ ಭಿನ್ನ ರೂಪಗಳು ಭಾರತ ಮತ್ತು ಭಾರತದ ಆಚೆಗೆ ಜನಪ್ರಿಯವಾಗಿವೆ ಎಂದು Stith Thompson ಹೇಳುತ್ತಾರೆ [1]

ಮಲತಾಯಿ ಅಥವಾ ಮಲಸಹೋದರಿಯರಿಂದ ಕಷ್ಟಪಡುವ ನಾಯಕಿ, ಅವಳು ಅತಿಮಾನುಷರಿಂದ ಸಹಾಯವನ್ನು ಪಡೆಯುವುದು, ರಾಜಕುಮಾರನನ್ನು ಮದುವೆಯಾಗುವುದು—ಇವು 'Cinderella Cycle'ನ ಕೆಲವು ಮುಖ್ಯ ಘಟನೆಗಳು.

'ವಜ್ರ ಕುಮಾರ' ಕಥೆಯಲ್ಲಿ : 1) ಕೆಟ್ಟ ಅತ್ತಿಗೆಯರು ನಾಯಕಿಯನ್ನು ಹಿಂಸಿಸುತ್ತಾರೆ. ಅಸಾಧ್ಯ ಕಾರ್ಯಗಳನ್ನು ಮಾಡಲು ಹೇಳುತ್ತಾರೆ. ಅವಳು ಪ್ರಾಣಿಗಳ, ಪಕ್ಷಿಗಳ ನೆರವಿನಿಂದ ಅವುಗಳನ್ನು ನೆರವೇರಿಸುತ್ತಾಳೆ. ಆಶಯಗಳು : S 55. ಕ್ರೂರಿಯಾದ ಅತ್ತಿಗೆಯರು : H 934.2 ; H 1023.2.1.2 ! H 1023.20 ; B 491.1 !; B 451.7. ಇಲ್ಲಿ ಸಹಾಯಕವಾಗುವ ಪ್ರಾಣಿಗಳು ; ಕಪ್ಪೆ, ಹಾವು, ಗುಬ್ಬಚ್ಚಿ. 2) ನಾಯಕಿಯು ಸತ್ತಂತೆ ಇದ್ದ ರಾಜಕುಮಾರನನ್ನು ಬದುಕಿಸುತ್ತಾಳೆ. ಅವನು ಅವಳನ್ನು ಮದುವೆಯಾಗುತ್ತಾನೆ. ಆಶಯಗಳು E 21. ಗಾಯಗೊಳಿಸಿದ ವಸ್ತುವನ್ನು ಕೀಳುವುದರ ಮೂಲಕ ಮತ್ತೆ ಜೀವ ತಾಳುವುದು ; T 121.8 ರಾಜನು ಸಾಮಾನ್ಯ ಹುಡುಗಿಯನ್ನು ಮದುವೆಯಾಗುವುದು. 3) ನಾಯಕಿಯ ಅತ್ತಿಗೆಯರು ನಾಯಕಿ ಇರುವಲ್ಲಿಗೆ ಬಡತನದ ಸ್ಥಿತಿಯಲ್ಲಿ ಬರುವುದು. ಅವರು ಹಿಂದೆ ಹೇಳಿದ ಹಂಗಿಸುವ ಮಾತನ್ನು ನಾಯಕಿ ಆಡಿ ತೋರಿಸುವುದು, ನಾಯಕಿಯ ಅಣ್ಣಂದಿರು ಕ್ರೂರಿಗಳಾದ ತಮ್ಮ ಪತ್ನಿಯರನ್ನು ಕೊಲ್ಲುವುದು. ಆಶಯ : Q 261.2.

'ವಜ್ರ ಕುಮಾರ' ಕಥೆಯನ್ನು ಹೋಲುವ ಕನ್ನಡ ಜನಪದ ಕಥೆಯೊಂದು ಸಿಗುತ್ತದೆ.[2] 'ಬಡತಂಗಿ' ಎಂಬ ಈ ಕನ್ನಡದ ಕಥೆಯಲ್ಲಿಯೂ ಕೆಟ್ಟ ಅತ್ತಿಗೆಯರು ನಾಯಕಿಗೆ ಹಿಂಸೆ ಕೊಡುತ್ತಾರೆ. ಅತ್ತಿಗೆಯರ ಹಂಗಿಸುವ ಮಾತನ್ನು ಕೇಳಿ, ಮನೆ ಬಿಟ್ಟು ಹೊರಟ ನಾಯಕಿಯು ರಾಕ್ಷಸಿಯರ ಮಾಂತ್ರಿಕ ವಸ್ತುಗಳಾದ ಬಳೆ, ಅಲಮೇಲಕ್ಕನ ಜಡೆಗಳನ್ನು ಪಡೆಯುತ್ತಾಳೆ. ಶ್ರೀಮಂತ ಹುಡುಗನನ್ನು ಮದುವೆಯಾಗುತ್ತಾಳೆ. ಮಗನನ್ನು ಹೆತ್ತು ಸುಖವಾಗಿರುತ್ತಾಳೆ. ಬಡತನದಿಂದ ಕೂಡಿದ ಅಣ್ಣ ಅತ್ತಿಗೆಯರು ತನ್ನ ಮನೆಯ ಗಹಾರಾಧನೆಗೆ ಬಂದಾಗ ಅವರು ಹೇಳಿದ ಹಂಗಿಸುವ ಮಾತನ್ನು ನಿಜ ಮಾಡಿ ತೋರಿಸುತ್ತಾಳೆ. ಹಂಗಿಸಿದವಳನ್ನು ಅವಳ ಗಂಡ ಕೊಲ್ಲುತ್ತಾನೆ. ಅಣ್ಣಂದಿರು ತಂಗಿಯೊಡನೆ ಸುಖವಾಗಿರುತ್ತಾರೆ.

'ವಜ್ರ ಕುಮಾರ' ಕಥೆಯಲ್ಲಿ ಅತ್ತಿಗೆಯರು ನಾಯಕಿಯನ್ನು ಹಂಗಿಸುವುದು : "ಹುಲಿ ಬಣ್ಣದ ರವಕೆ ತೊಟ್ಟುಕೊಂಡು, ಬಲೆಪ ಬಣ್ಣದ ಸೀರೆ ಉಟ್ಟುಕೊಂಡು, ವಜ್ರಕುಮಾರನನ್ನು ಹಡೆದುಕೊಂಡು ಬಾ." 'ಬಡತಂಗಿ' ಕಥೆಯಲ್ಲಿ ಅತ್ತಿಗೆಯು ನಾಯಕಿಯನ್ನು ಹಂಗಿಸುವುದು : "ನಿನ್ನ ಸತ್ತ ಗಂಡನ್ನ ಎಬ್ಬಿಸಿಕೊಂಡು ಬ್ರಹ್ಮರಾಕ್ಷಿ ಬಳೆ ಹಾಕಿಕೊಂಡು, ಅಲಮೇಲಕ್ಕನ ಜಡೆ ಹಾಕ್ಕೊಂಡು, ಗೆಜ್ಜೆಕಾಲ ಮಗನ ಮುಂದೆ ಬಿಟ್ಟುಕೊಂಡು ರನ್ನದ ಬಟ್ಲಲ್ಲಿ ಚಿನ್ನದ ಸೌಟು ಹಾಕ್ಕೊಂಡು ತುಪ್ಪ ಎರೆಯೋದು ಅಷ್ಟರಲ್ಲಿ ಅದೆ ಏಳು."

'ವಜ್ರಕುಮಾರ'ದಲ್ಲಿ ಅತ್ತಿಗೆಯರು ವಹಿಸುವ ಅಸಾಧ್ಯ ಕೆಲಸಗಳಿವೆ. 'ಬಡತಂಗಿ'ಯಲ್ಲಿ ಇದು ಇಲ್ಲ.

---

1 Folktale P. 127.
2 ಡಾ. ಜೀ. ಶಂ. ಪರಮಶಿವಯ್ಯ (ಸಂ.) 'ಬಡತಂಗಿ', 'ಕನ್ನಡ ಜನಪದ ಕಥೆಗಳು' ; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1970. ಪುಟ 94-93.

## (4) ಮಂಜಗ ಮತ್ತು ಅವಳ ಮಾವ

"ದರ್ಬೆಟ್ಟು ಬೀಡು ಬಹಳ ಪ್ರಸಿದ್ಧವಾದುದು. ಅಲ್ಲಿ ಒಬ್ಬ ರಾಜ. ಅವನಿಗೊಬ್ಬಳು ರಾಣಿ. ವಿಸ್ತಾರವಾದ ರಾಜ್ಯ. ಬೇಕಾದ ಸಂಪತ್ತು. ಆದರೇನು ಮಕ್ಕಳಿಲ್ಲ. ಈ ಕೊರತೆಯಿಂದ ರಾಜ ರಾಣಿ ಕೊರಗುತ್ತಿದ್ದರು.

ರಾಜನಿಗೆ ಒಂದು ದಿನ ಯೋಚನೆ ಬಂತು ; ತನ್ನ ತಂಗಿಯ ಮಗಳು ಮಂಜಗ ತಂದೆಯನ್ನೂ ತಾಯಿಯನ್ನೂ ಕಳೆದುಕೊಂಡು ತಬ್ಬಲಿಯಾಗಿ ತಂದೆಯ ಮನೆಯಲ್ಲಿ ಇದ್ದಳು. ಆಕೆಯನ್ನು ಕರೆದುಕೊಂಡುಬಂದು ಯಾಕೆ ಸಾಕಬಾರದು ? ಹೀಗೆ ಯೋಚಿಸಿದವನೇ ರಾಜ ತನ್ನ ತಂಗಿಯ ಗಂಡನ ಮನೆಗೆ ಹೋದ. ಅಲ್ಲಿಂದ ಮಂಜಗಳನ್ನು ಕರೆತಂದ. ಅವಳನ್ನು ಮಗಳಂತೆ ಸಾಕತೊಡಗಿದ.

ಆದರೆ ರಾಣಿಗೋ ಒಳಗೊಳಗೇ ಒಳಗುದಿ. ಮಂಜಗಳನ್ನು ಕಂಡರೆ ಕಣ್ಣಲ್ಲಿ ಕಿಸುರು. ಆದರೆ ತೋರಿಸಿಕೊಳ್ಳಲು ಧೈರ್ಯವಿಲ್ಲ. ಎದುರಲ್ಲಿ ಪ್ರೀತಿ, ಅತಿ ಪ್ರೀತಿ. ಒಳಗೊಳಗೇ ನಂಜು. ಅತಿ ನಂಜು, ರಾಜನೋ ಮಂಜಗಳನ್ನು ತಾನೇ ಮಿಾಯಿಸುತ್ತಿದ್ದ, ಉಡುಪು ತೊಡಿಸುತ್ತಿದ್ದ, ತಲೆ ಬಾಚುತ್ತಿದ್ದ, ಉಣ್ಣಿಸುತ್ತಿದ್ದ, ತಿನ್ನಿಸುತ್ತಿದ್ದ. ಮಂಜಗಳನ್ನು ಕೆಳಗಿಟ್ಟರೆ ಇರುವೆ ಎಳೆದೀತು, ಮೇಲಿಟ್ಟರೆ ಹಾತೆ ಹಾರಿಸೀತು ಎಂಬ ಭಯ ಅರಸನಿಗೆ.

ಮಂಜಗ ಬೆಳೆದಳು, ಹದಿನಾರರ ಹರಯ ತುಂಬಿಬಂತು. ರಾಜ ಸಾವಿರ ತೂಕದ ಬಂಗಾರ ತರಿಸಿದ. ತರತರದ ಆಭರಣ ಮಾಡಿಸಿದ. ಮದವೂರ ಪಟ್ಟೆ ತರಿಸಿದ. ಸಾಕುಮಗಳು ಮಂಜಗಳಿಗೆ ತೊಡಿಸಿ, ಉಡಿಸಿ, ಆಕೆಯ ಅಂದ ಚಂದ ನೋಡಿ ಸಂತಸಪಟ್ಟ.

ಹೀಗೆಯೇ ಇರುತ್ತಿರುವಾಗ ಒಂದು ದಿನ ಆತನಿಗೆ ದಂಡಿಗೆ ಹೋಗುವ ಅಗತ್ಯ ಬಿತ್ತು. ವೈರಿಗಳು ರಾಜ್ಯದ ಗಡಿಯನ್ನು ಆಕ್ರಮಿಸಿದ್ದರು. ರಾಜನಿಗೆ ದಂಡಿಗೆ ಹೋಗುವುದರಲ್ಲಿ ಹೆದರಿಕೆ ಇಲ್ಲ. ಆದರೆ ಸಾಕು ಮಗಳು ಮಂಜಗಳನ್ನು ಬಿಟ್ಟು ಹೋಗುವುದೆಂದರೆ ಎಲ್ಲಿಲ್ಲದ ವ್ಯಥೆ. ರಾಜ ಮಂಜಗಳನ್ನು ಬೆಳ್ಳಿಯ ಸರಪಳಿಯ ಬಂಗಾರದ ಜೋಕಾಲಿಯಲ್ಲಿ ಕುಳ್ಳಿರಿಸಿ ಕಣ್ಣೀರು ಕರೆಯುತ್ತಿದ್ದ.

ರಾಣಿಗೆ ಮಂಜಗಳ ಮೇಲಿನ ಹಗೆಯನ್ನು ಸಾಧಿಸಲು ಇದೇ ಸಮಯ ಎಂದು ತೋರಿತು. ಆಕೆ ಒಂದು ಉಪಾಯ ಮಾಡಿದಳು. ರಾಜನಿದ್ದಲ್ಲಿ ಬಂದಳು. ಮಂಜಗಳ ತಲೆ ನೇವರಿಸಿದಳು. ಕಣ್ಣೀರು ತುಂಬಿ ಹೇಳಿದಳು: ''ನೀವು ದುಃಖಿಸಬೇಡಿ. ನೀವು ವ್ಯಥೆ ಮಾಡದೆ ದಂಡಿಗೆ ಹೋಗಿ. ನಾನು ಮಂಜಗಳನ್ನು ಕರುಳ ಕುಡಿಯಂತೆ ಸಾಕುತ್ತೇನೆ''. ರಾಜ ರಾಣಿಯ ಮಾತನ್ನು ಕೇಳಿ ಸಮಾಧಾನ ತಾಳಿದ. ಮಗಳನ್ನು ನೇವರಿಸಿ, ಮಡದಿಗೆ ಎಚ್ಚರಿಕೆ ಹೇಳಿ, ದಂಡಿಗೆ ಹೊರಟುಹೋದ.

ರಾಜ ದಂಡಿಗೆ ಹೊರಟೊಡನೆ ಮಂಜಗಳಿಗೆ ರಾಣಿಯ ಕಿರುಕುಳ ಮೊದಲಾಯಿತು. ಬೆಳಗ್ಗಿನಿಂದ ಸಾಯಂಕಾಲದ ತನಕ ಮಂಜಗಳಿಂದ ಕೆಲಸ ಮಾಡಿಸಿದಳು. ಮನೆ ಸಾರಿಸುವುದು, ಹಟ್ಟಿ ಗುಡಿಸುವುದು, ವಸ್ತ್ರ ಒಗೆಯುವುದು, ದನ ಕಾಯಿಸುವುದು ಎಲ್ಲಾ ಕೆಲಸಗಳೂ ಮಂಜಗಳ ಪಾಲಿನದಾಯಿತು. ಹರಕು ವಸ್ತ್ರ ಉಡಿಸಿದಳು. ಮುರುಕು ಮಂಚದಲ್ಲಿ ಮಲಗಿಸಿದಳು.

ಹೀಗೆ ಬೆಳಗ್ಗಿನಿಂದ ರಾತ್ರಿಯ ತನಕದ ಕೆಲಸದಿಂದ ಮಂಜಗಳ ಮೈ ಸೊರಗಿತು. ಮನಸ್ಸು ಮುದುಡಿತು. ಕಣ್ಣೀರ ಬಾಳು ಬಾಳಿದಳು ಮಂಜಗ.

ಒಂದು ದಿನ ರಾಣಿಯು ಮಂಜಗಳನ್ನು ಕಾಪಿಕಾಡಿನಿಂದ ಸೊಪ್ಪು ತರಲು ಕಳುಹಿಸಿದಳು. ಕಾಡಿಗೆ ಬಂದ ಮಂಜಗಳಿಗೆ ಅರಮನೆಗೆ ಹಿಂತಿರುಗಲು ಮನಸ್ಸಾಗಲಿಲ್ಲ. ಈ ರೀತಿ ಬಾಳುವುದಕ್ಕಿಂತ ಸಾಯುವುದೇ ಲೇಸು ಎನಿಸಿತು ಮಂಜಗಳಿಗೆ. ತನ್ನನ್ನು ಹುಲಿಯಾದರೂ ತಿನ್ನಲಿ, ಹಾವಾದರೂ ಕಡಿಯಲಿ ಎಂದು ಮಂಜಗಳು ಕಾಡಿನ ಮಧ್ಯೆ ಮಲಗಿದಳು. ಒಂದು ದಿನ ಕಳೆಯಿತು, ಎರಡು ದಿನ ಕಳೆಯಿತು, ಏಳು ದಿನಗಳಾದುವು. ಮಂಜಗ ಉಣಲಿಲ್ಲ, ಉಡಲಿಲ್ಲ, ಕಣ್ಣೀರು ಕರೆಯುತ್ತಾ ಕಾಡಿನ ಮಧ್ಯೆ ಮಲಗಿದಳು.

ಹತ್ತಿರದಲ್ಲೇ ಇನ್ನೊಂದು ರಾಜ್ಯ. ಅಲ್ಲಿ ಒಬ್ಬ ರಾಜ. ಅವನಿಗೊಬ್ಬ ರಾಣಿ. ಅವರಿಗೆ ಏಳು ಜನ ಗಂಡು ಮಕ್ಕಳು. ಅವರಿಗೆ ಒಂದು ಹೆಣ್ಣುಮಗು ಬೇಕೆಂಬ ಬಯಕೆ. ಮದ್ದು ಮಾಡಿಸಿದ್ದಾಯಿತು. ಹರಕೆ ಹೇಳಿದ್ದಾಯಿತು. ಹೆಣ್ಣುಮಗು ಆಗಲಿಲ್ಲ. ಕೊನೆಗೆ ಯಾರೋ ಹೇಳಿದರು. ಮಲೆದೇವಿಗೆ ಹರಕೆ ಹೇಳಿದರೆ ಹೆಣ್ಣುಮಗು ಆಗುತ್ತದೆ ಎಂದು. ರಾಣಿಗೆ ಆಸೆ ಮೂಡಿತು. ಆಕೆ ಪಲ್ಲಕ್ಕಿಯಲ್ಲಿ ಕೂತು ಆಳುಗಳನ್ನು ಕರೆದುಕೊಂಡು ಮಲೆದೇವಿಯ ಆರಾಧನೆಗೆ ಹೊರಟಳು. ರಾಣಿಯ ಪಲ್ಲಕ್ಕಿಯು ಕಾಡಿನ ಮಧ್ಯೆ ಹೋಗುತ್ತಿರುವಾಗ ಮಂಜಗಳು ದೊಡ್ಡ ಮರ ಒಂದರ ಬುಡದಲ್ಲಿ ಮಲಗಿದ್ದುದನ್ನು ಕಂಡಳು. ಒಣಗಿದ ಮುಖದಲ್ಲಿ ರಾಜಕಳೆ. ರಾಣಿ ಮಂಜಗಳನ್ನು ಎಬ್ಬಿಸಿ ಪಲ್ಲಕಿಯಲ್ಲಿ ಕುಳ್ಳಿರಿಸಿಕೊಂಡು ಮಲೆದೇವಿಯ ಆರಾಧನೆ ಮಾಡಿ ತನ್ನೂರಿಗೆ ಹಿಂತಿರುಗಿದಳು. ಈ ಹುಡುಗಿಯನ್ನು ಮಲೆದೇವಿಯೇ ತನಗೆ ಕೊಟ್ಟುದ್ದಾಗಿ ರಾಣಿ ಯೋಚಿಸಿದಳು.

ಅರಮನೆಗೆ ಕರೆತಂದ ಮಂಜಗಳನ್ನು ರಾಜರಾಣಿಯರು ಸೊಗಸಾಗಿ ಸಾಕಿದರು. ರಾಜಪುತ್ರರು ಚೆಲುವಾಗಿ ನಡೆಸಿಕೊಂಡರು. ಪರಿವಾರದವರು ಒಲವಿನಿಂದ ನೋಡಿಕೊಂಡರು. ಮಂಜಗ ಮತ್ತೆ ಮೈ ತುಂಬಿ ಬಂದಳು. ಆದರೂ ಅವಳಿಗೆ ಮಾವನ ನೆನಪು ಮಾಸಲಿಲ್ಲ, ದುಃಖ ಆರಲಿಲ್ಲ. ದಿವಸಗಳು ಉರುಳಿದುವು. ಹೀಗಿರುತ್ತಾ ಒಂದು ದಿನ ಅರಮನೆಯ ಮಾಳಿಗೆಯಲ್ಲಿ ಮಂಜಗ ಕೂತಿದ್ದಾಗ ದಂಡನ್ನು ಜಯಿಸಿದ ಮಾವ ಕುದುರೆಯ ಮೇಲೆ ಕೂತು ಪರಿವಾರ ಸಮೇತವಾಗಿ ಊರಿಗೆ ಹಿಂದಿರುಗಿ ಹೋಗುತ್ತಿರುವುದನ್ನು ಕಂಡಳು.

ಮಂಜಗಳು ರಾಣಿಯನ್ನು ಕರೆದಳು. ಮಾವನನ್ನು ತೋರಿಸಿದಳು. ತನ್ನ ಕಥೆಯನ್ನೆಲ್ಲ ಹೇಳಿದಳು. ಮಾವನನ್ನು ಅರಮನೆಗೆ ಕರೆಸುವಂತೆ ಬೇಡಿಕೊಂಡಳು. ರಾಣಿಯು ಮಂಜಗಳ ಮಾವನನ್ನು ಅರಮನೆಗೆ ಕರೆತರಿಸಿದಳು. ಅರಮನೆಯಲ್ಲಿ ಮಂಜಗಳನ್ನು ಕಂಡಾಗ ಮಾವನಿಗೆ ಆಶ್ಚರ್ಯ ಮತ್ತು ಸಂತೋಷ ಎರಡೂ ಆಯಿತು. ಮಾವ 'ಏನು ವಿಚಾರ, ಮಂಜಗ ಇಲ್ಲಿ ಹೇಗೆ ಬಂದಳು' ಎಂಬುದನ್ನೆಲ್ಲ ಕೇಳಿದ. ಮಂಜಗ ಮತ್ತು ರಾಣಿ ನಡೆದ ವಿಚಾರವನ್ನೆಲ್ಲ ತಿಳಿಸಿದರು.

ವಿಚಾರವನ್ನು ತಿಳಿದ ರಾಜನಿಗೆ ತನ್ನ ರಾಣಿಯ ಮೇಲೆ ಸಿಟ್ಟು ಉಕ್ಕಿಬಂತು. ಆದರೆ ಆತ ಅದನ್ನು ತೋರಿಸಿಕೊಳ್ಳಲಿಲ್ಲ. ಆತ ಮಂಜಗಳನ್ನು ಸಾಕಿದ ರಾಣಿಗೆ ತುಂಬಾ ಕೃತಜ್ಞತೆ ಸಲ್ಲಿಸಿದ. ಸೊಸೆಯನ್ನು ಕರೆದುಕೊಂಡು ತನ್ನ ರಾಜ್ಯಕ್ಕೆ ಹೋಗುವುದಾಗಿ ತಿಳಿಸಿದ. ರಾಣಿ ಒಪ್ಪಲಿಲ್ಲ. ಆಕೆಗೂ ಮಂಜಗಳನ್ನು ಕಂಡರೆ ಮೋಹ, ಪ್ರೀತಿ. ತನ್ನ ಏಳು ಮಕ್ಕಳಲ್ಲಿ ಕಿರಿಯವನಿಗೆ ಮಂಜಗಳನ್ನು ಮದುವೆ ಮಾಡಿಸಲು ಆಕೆ ಯೋಚಿಸಿದ್ದಳು. ಮಂಜಗಳನ್ನು ಮನೆಯಲ್ಲೇ ಉಳಿಸಿಕೊಳ್ಳಬಯಸಿದ್ದಳು. ಈ ವಿಚಾರವನ್ನು ಮಂಜಗಳ ಮಾವನಿಗೆ ತಿಳಿಸಿದಾಗ ಆತನಿಗೂ ಸಂತೋಷವಾಯಿತು. ಆದರೂ ಮಾವ ಒಂದು ಶರ್ತದ ಮೇಲೆ ಈ ವಿಚಾರಕ್ಕೆ ಒಪ್ಪಿದ. ತಾನು ಈಗ ಮಂಜಗಳನ್ನು ತನ್ನೂರಿಗೆ ಕರೆದುಕೊಂಡು ಹೋಗುವುದಾಗಿಯೂ ದಿನ ನಿಶ್ಚಯಿಸಿ ಅಲ್ಲಿಗೆ ಗಂಡಿನ ದಿಬ್ಬಣ ತರಬೇಕೆಂದೂ ಹೇಳಿದ. ಗಂಡಿನ ಕಡೆಯವರು ಒಪ್ಪಿಗೆ ನೀಡಿದರು.

ರಾಜ ಮಂಜಗಳನ್ನು ಕರೆದುಕೊಂಡು ತನ್ನ ಊರಿಗೆ ಹೊರಟ.

ತನ್ನ ಅರಮನೆಗೆ ಬಂದಾಗ ರಾಣಿ ರಾಜನನ್ನು ಎದುರುಗೊಂಡಳು. ಆದರೆ ರಾಜನ ಜೊತೆ ಮಂಜಗಳನ್ನು ಕಂಡ ರಾಣಿಗೆ ಆಶ್ಚರ್ಯದ ಜೊತೆಗೆ ಭಯವೂ ಆಯಿತು. ಆದರೆ ರಾಜ ಮಾತೆತ್ತಲಿಲ್ಲ.

ಮಂಜಗಳ ಮದುವೆಗೆ ದಿನ ನಿಶ್ಚಯವಾಯಿತು. ಮಂಜಗಳ ಮಾವ ಊರನ್ನೆಲ್ಲ ಸಿಂಗರಿಸಿದ. ಅರಮನೆಯನ್ನು ಅಲಂಕರಿಸಿದ. ಊರ, ಪರವೂರವರನ್ನೆಲ್ಲ ನೆರೆ ಸೇರಿಸಿದ. ಗಂಡಿನ ದಿಬ್ಬಣ ಬಂತು. ವಾದ್ಯವಾದನಗಳು ಮೊಳಗಿದುವು. ಕದಿನ ಗರ್ನಾಲುಗಳು ಗುಡುಗಿದುವು. ಮದುವೆ ನಡೆಯಿತು. ಮಂಜಗ ನೆರೆ ರಾಜ್ಯದ ಸೊಸೆಯಾದಳು.

ಮದುವೆ ಕಳೆದು ಮದುಮಗ ಮದುಮಗಳು ಹೊರಡುವ ಹೊತ್ತು ಬಂತು. ಊರ, ಪರವೂರ ಜನರೆಲ್ಲ ಸೇರಿದ್ದರು. ಮದುಮಗ ಮದುಮಗಳು ಮಂಜಗಳ ಮಾವನ ಆಶೀರ್ವಾದ ಬೇಡಲು ಬಂದರು. ಮಂಜಗಳ ಮಾವ ತನ್ನ ಹೆಂಡತಿಯನ್ನು ಕರೆದು ನೆರೆದ ಸಾವಿರ ಮಂದಿಯ ಮುಂದೆ ಆಕೆಯ ತಲೆಯನ್ನು ಚಂದ್ರಾಯುಧದಿಂದ ಕಡಿದು ತುಂಡರಿಸಿದ. ಮದುಮಗ ಮದುಮಗಳನ್ನು ಆಶೀರ್ವದಿಸಿ ಕಣ್ಣೀರು ಕರೆಯುತ್ತ ಕಳುಹಿಸಿಕೊಟ್ಟ".

'ಮಂಜಗ ಮತ್ತು ಅವಳ ಮಾವ' ಎಂಬ ತುಳು ಜನಪದ ಕಥೆಯ ಸಂಪೂರ್ಣ ಕನ್ನಡ ಅನುವಾದವನ್ನು ಇಲ್ಲಿ ಕೊಡಲಾಗಿದೆ. ಇದು ಬಂಟ್ವಾಳ ತಾಲೂಕಿನ ಮೊಡಂಕಾಪು ಗ್ರಾಮದ ಅಮಟಾಡಿಯಲ್ಲಿ 'ಊವಯ್ಯ ಮೂಲ್ಯ' (ವಯಸ್ಸು–55 ವರ್ಷ) ಎಂಬವನಿಂದ ಸಂಗ್ರಹಿಸಿದ್ದು.

ಈ ಕಥೆಯು ಸುಮಾರು 15 ರಷ್ಟು ಆಶಯಗಳನ್ನು ಉಳ್ಳ ಒಂದು ಸಂಕೀರ್ಣ ಜನಪದ ಕಥೆ. ವಸ್ತುವಿನ ದೃಷ್ಟಿಯಿಂದ ಇದು 'ವಜ್ರಕುಮಾರ' ಕಥೆಯನ್ನು ಕೆಲವು ಘಟನೆಗಳ ಮೂಲಕ ಹೋಲುತ್ತದೆ : ಆದರೆ ಇಲ್ಲಿ ಅತಿಮಾನುಷ ವಾತಾವರಣವು ತೀರ ಕಡಮೆ ಇದೆ. ಆದರೆ ಇಲ್ಲಿ ಮಲೆದೇವಿಯ ಹರಕೆ, ಆರಾಧನೆಯಂತಹ ಅಲೌಕಿಕ ಸಂಗತಿಗಳು ಬರುತ್ತವೆ. ಈ ಕಥೆಯ ಮುಖ್ಯ ಘಟನೆಗಳು :

(1) ತಬ್ಬಲಿಯಾದ ಮಂಜಗಳನ್ನು ಅವಳ ಮಾವ ರಾಜ ಪ್ರೀತಿಯಿಂದ ಸಾಕುವುದು. ಆದರೆ ರಾಣಿಗೆ ಮಂಜಗಳ ಬಗ್ಗೆ ಮತ್ಸರ.

(2) ರಾಜನು ಇಲ್ಲದಿದ್ದಾಗ, ರಾಣಿಯು ಮಂಜಗಳನ್ನು ಕಷ್ಟದ ಕೆಲಸಗಳ ಮೂಲಕ ಹಿಂಸಿಸುವುದು, ಮಂಜಗಳು ಮನೆಬಿಟ್ಟು ಅನಾಥಳಂತೆ ಅಲೆಯುವುದು.

(3) ಇನ್ನೊಂದು ಊರಿನ, ಮಕ್ಕಳಿಲ್ಲದ ರಾಣಿಯು ಮಂಜಗಳನ್ನು ಪ್ರೀತಿಯಿಂದ ಸಾಕುವುದು. ಅವಳನ್ನು ತನ್ನ ಕಿರಿಯ ಮಗನಿಗೆ ಮದುವೆ ಮಾಡಿಸುವುದು.

(4) ಮಂಜಗಳ ಮಾವನಿಗೆ ನಿಜಸಂಗತಿ ಗೊತ್ತಾಗಿ, ತನ್ನ ಹೆಂಡತಿಯನ್ನು ಕೊಲ್ಲುವುದು.

'ವಜ್ರಕುಮಾರ' ಕಥೆಯಲ್ಲಿ ನಾಯಕಿಯು ಅತ್ತಿಗೆಯರಿಂದ ಕಷ್ಟಪಟ್ಟರೆ, ಈ ಕಥೆಯಲ್ಲಿ ನಾಯಕಿಯು ತನ್ನ ಅತ್ತೆ (ಅಥವಾ ಸಾಕುತಂದೆಯ ಪತ್ನಿ) ಯಿಂದ ಕಷ್ಟಪಡುತ್ತಾಳೆ. 'ವಜ್ರಕುಮಾರ' ದಲ್ಲಿ ಸತ್ತಂತೆ ಇದ್ದ ರಾಜಕುಮಾರನನ್ನು ಬದುಕಿಸಿದ ಕಾರಣ ಅವನೊಡನೆ ನಾಯಕಿಯ ವಿವಾಹವಾಗುತ್ತದೆ. ಈ ಕಥೆಯಲ್ಲಿ, ಅನಾಥೆಯಾಗಿದ್ದ ನಾಯಕಿಯನ್ನು ರಾಣಿಯೊಬ್ಬಳು ಸಾಕಿ, ತನ್ನ ಮಗನಿಗೆ ಮದುವೆ ಮಾಡಿಸುತ್ತಾಳೆ. ಎರಡೂ ಕಥೆಗಳ ಕೊನೆಯಲ್ಲಿ, ನಾಯಕಿಗೆ ಕಷ್ಟಕೊಟ್ಟವರನ್ನು ಅವರ ಗಂಡಂದಿರು ಕೊಲ್ಲುವುದರ ಮೂಲಕ ಶಿಕ್ಷಿಸುತ್ತಾರೆ.

ಆಶಯಗಳಲ್ಲಿ S 30. ಕೆಟ್ಟ ಸಾಕುಸಂಬಂಧಿಕರು — ಇಲ್ಲಿ ಪ್ರಧಾನವಾದುದು. ಈ ಕಥೆಯಲ್ಲಿ 'ದರ್ಬೆಟ್ಟು ಬೀಡು' ಎಂಬ ಮನೆತನದ ಹೆಸರನ್ನು ಕೊಡಲಾಗಿದೆ. ಇದು ತುಳುನಾಡಿನ ಸಂಸ್ಕೃತಿಯ 'ಬೀಡಿನ' ಬಗ್ಗೆ ಬಂದಿರುವ ನಂತರದ ಸೇರ್ಪಡೆಯಾಗಿರಬಹುದು. ಹಾಗೆಯೇ 'ಮಂಜಗ' ಎಂದು ನಾಯಕಿಯ ಹೆಸರನ್ನು ತುಳುನಾಡಿನ ಸಂಸ್ಕೃತಿಯಿಂದಲೇ ನಂತರ ಸೇರಿಸಿಕೊಂಡಿರಬಹುದು. ಏಕೆಂದರೆ ಜನಪದ ಕಥೆಗಳಲ್ಲಿ ಸ್ಥಳಗಳ ಹೆಸರು, ವ್ಯಕ್ತಿಗಳ ಹೆಸರು ಬರುವುದು ತೀರ ಪ್ರಾಚೀನವಾದ ರೂಪಗಳಲ್ಲಿ ಅಲ್ಲ. ಒಂದು ಜನಪದ ಕಥೆಯ ಹಂದರ (skeleton) ವನ್ನು ಸ್ಥಳೀಯಗೊಳಿಸಲು ಅನೇಕ ಬಾರಿ ಈ ರೀತಿ ಮಾಡುವುದನ್ನು ಕಾಣಬಹುದು.

## (5) ಹುಲಿಯು ತಿಂದ ಹುಡುಗಿ

"ಏಳು ಜನ ಅಣ್ಣಂದಿರಿಗೆ ಒಬ್ಬಳು ತಂಗಿ. ಅಣ್ಣಂದಿರು ಯುದ್ಧಕ್ಕೆ ಹೋಗುವಾಗ, ಮಡದಿಯರನ್ನು ಕರೆದು, ತಂಗಿಯನ್ನು ಚೆನ್ನಾಗಿ ನೋಡಿಕೊಳ್ಳಲು ಹೇಳುತ್ತಾರೆ. ಅವರು ಹೋದ ಮೇಲೆ, ಅತ್ತಿಗೆಯರು ಈ ಹುಡುಗಿಯನ್ನು ಸಂಪಗೆಯ ಮರಕ್ಕೆ ಹತ್ತಿಸಿ, ಏಣಿಯನ್ನು ತೆಗೆದು, ಅವಳನ್ನು ಕಾಡಿನಲ್ಲೇ ಬಿಟ್ಟು ಬರುತ್ತಾರೆ. ಅವಳು ಕೆಳಗೆ ಬಿದ್ದಾಗ, ಒಂದು ಹುಲಿಯು ಅವಳನ್ನು ತಿನ್ನುತ್ತದೆ. ಆಗ ಅವಳ ಕಿರುಬೆರಳೊಂದು ಉಳಿದು ಬಿಡುತ್ತದೆ. ಅಜ್ಜಿಯೊಬ್ಬಳು ಆ ಕಿರುಬೆರಳನ್ನು 'ಹಳದಿಯ ಕೊಂಬು' (ತುಂಡು) ಎಂದು ಭಾವಿಸಿ, ತೆಗೆದು ಕೊಂಡು ಬಂದು, ಮನೆಯಲ್ಲಿ ಜೋಪಾನವಾಗಿಡುವುದು. ಅಜ್ಜಿ ಹಗಲು ಹೊತ್ತು ಬೇಡಲು ಹೋದಾಗ, ಈ ಕಿರುಬೆರಳು ಹುಡುಗಿಯ ರೂಪವನ್ನು ತಾಳಿ, ಅಡುಗೆ ಮಾಡಿ ಇಡುವುದು. ಕೊನೆಗೆ ಈ ರೂಪಾಂತರದ ರಹಸ್ಯ ಅಜ್ಜಿಗೆ ಗೊತ್ತಾಗುವುದು. ಆ ಹುಡುಗಿಯು ಅರಸು ಮಗಳಿಗೆ ಹೂಕಟ್ಟಿ ಕೊಂಡೊಯ್ಯಲು ಅಜ್ಜಿಗೆ ನೆರವಾಗುವುದು. ಆ ಹೂವಿನ ದಂಡೆಯನ್ನು ಕಂಡ ಅರಸು ಮಗನು ಆ ಹುಡುಗಿಯನ್ನು ಮೋಹಿಸಿ, ಮತ್ತೆ ಮದುವೆಯಾಗುವುದು. ಈ ಕಡೆ ಅಣ್ಣಂದಿರು ಬಂದು ಹೆಂಡಂದಿರಲ್ಲಿ ತಮ್ಮ ತಂಗಿಯ ಬಗ್ಗೆ ಕೇಳಿದಾಗ, 'ಅವಳು ಸೊಕ್ಕಿನಿಂದ ಹೊರಗೆ ಹೋದವಳು ಬಂದಿಲ್ಲ' ಎಂದು ಅವರು ಸುಳ್ಳು ಹೇಳುವುದು. ಆಗ ಅವರು ತಂಗಿಯನ್ನು ಹುಡುಕುತ್ತಾ ಹೋಗುವುದು. ಕೊನೆಗೆ ಅವರಿಗೆ ತಂಗಿಯು ಸಿಕ್ಕುವುದು, ಅವಳು ಎಲ್ಲ ವೃತ್ತಾಂತವನ್ನೂ ತಿಳಿಸುವುದು. ಆಗ ಅಣ್ಣಂದಿರು ತಮ್ಮ ಹೆಂಡತಿಯರನ್ನು ಕೊಂದು ಹಾಕಿ, ತಂಗಿಯನ್ನು ಚೆನ್ನಾಗಿ ನೋಡಿಕೊಳ್ಳುವುದು".

'ಹುಲಿಯು ತಿಂದ ಹುಡುಗಿ' ತುಳು ಜನಪದ ಕಥೆಯ ಮೂಲ ತುಳು ರೂಪದ ಸಂಕ್ಷಿಪ್ತ ಕನ್ನಡ ರೂಪಾಂತರವನ್ನು ಇಲ್ಲಿ ಕೊಡಲಾಗಿದೆ. ಮೂಲ ತುಳು ರೂಪವು ಈ ಕನ್ನಡ ರೂಪಾಂತರದ ಸುಮಾರು ನಾಲ್ಕು ಪಟ್ಟು ದೀರ್ಘವಾಗಿದೆ. ಈ ಕಥೆಯನ್ನು ಮಂಗಳೂರು ತಾಲೂಕಿನ ಕೊಣಾಜೆ ಗ್ರಾಮದ ಮೂಲ್ಯ ಜಾತಿಯ 'ಮದನು' ಎಂಬ ಅನಕ್ಷರಸ್ಥ ಹೆಂಗುಸಿನಿಂದ (ವಯಸ್ಸು–81ವರ್ಷ–1979 ರಲ್ಲಿ) ಸಂಗ್ರಹಿಸಿದ್ದು. (ಕಥೆಯ ಸಂಗ್ರಹ 1973 ರಲ್ಲಿ. ಆಗ ಅವಳ ಪ್ರಾಯ 75 ವರ್ಷ).

'ಹುಲಿಯು ತಿಂದ ಹುಡುಗಿ' ಕಥೆಯು ಸುಮಾರು 10 ಆಶಯಗಳುಳ್ಳ ಒಂದು ಸಂಕೀರ್ಣ ಜನಪದ ಕಥೆ. ವಸ್ತುವಿನ ದೃಷ್ಟಿಯಿಂದ ಇದು ಕೂಡಾ 'Cinderella Cycle' ಗೇ ಸೇರುತ್ತದೆ. ಆದರೆ ವಿವರಗಳಲ್ಲಿ ಬಹಳ ವ್ಯತ್ಯಾಸವಿದೆ. 'ವಜ್ರಕುಮಾರ' ಕಥೆಯ ಆರಂಭವನ್ನು ಈ ಕಥೆಯ ಆರಂಭವು ಹೋಲುತ್ತದೆ. ಆದರೆ ನಂತರದ ಘಟನೆಗಳು ಭಿನ್ನವಾಗಿದ್ದು, ವೈವಿಧ್ಯಮಯವಾಗಿವೆ. ಈ ಕಥೆಯ ಮುಖ್ಯ ಘಟನೆಗಳು :

(1) ಕೆಟ್ಟ ಅತ್ತಿಗೆಯರು ನಾಯಕಿಯನ್ನು ಹಿಂಸಿಸಿ, ದೂರ ಮಾಡುವುದು.

(2) ನಾಯಕಿಯನ್ನು ಹುಲಿಯು ತಿಂದು ಬರೇ ಕಿರುಬೆರಳು ಮಾತ್ರ ಉಳಿಯುವುದು.

(3) ಈ ಕಿರುಬೆರಳನ್ನು ಜೋಪಾನವಾಗಿಟ್ಟ ಅಜ್ಜಿಗೆ, ನಾಯಕಿಯು ತನ್ನ ನಿಜವಾದ ರೂಪವನ್ನು ತಾಳಿ, ಅಡುಗೆ ಮಾಡುವ, ಹೂ ಕಟ್ಟುವ ಕೆಲಸಗಳಲ್ಲಿ ಸಹಾಯಮಾಡುವುದು.

(4) ನಾಯಕಿಯನ್ನು ರಾಜಕುಮಾರನು ಮದುವೆಯಾಗುವುದು.

(5) ನಾಯಕಿಯ ಬಳಿಗೆ ಬಂದ ಅವಳ ಅಣ್ಣಂದಿರು, ನಿಜ ಸಂಗತಿ ತಿಳಿದಾಗ, ತಮ್ಮ ಹೆಂಡಂದಿರನ್ನು ಕೊಲ್ಲುವ ಮೂಲಕ ಶಿಕ್ಷಿಸುವುದು.

ಇಲ್ಲಿನ ಮೊದಲನೆಯ ಮತ್ತು ಕೊನೆಯ ಘಟನೆಗಳು 'ವಜ್ರಕುಮಾರ' ಕಥೆಯ ಹಾಗೇಯೇ ಇವೆ. ಆದರೆ 2, 3, 4ನೇ ಘಟನೆಗಳು ಭಿನ್ನವಾಗಿವೆ. ಈ ಮಾದರಿಯ ಹೆಚ್ಚಿನ ಎಲ್ಲ ಕಥೆಗಳಲ್ಲಿಯೂ ಕಥೆಯ ಆರಂಭ ಮತ್ತು ಅಂತ್ಯದಲ್ಲಿ ಹೆಚ್ಚಿನ ಹೋಲಿಕೆ ಕಂಡುಬರುತ್ತದೆ. ಮಾಂತ್ರಿಕ ಬೆರಳು ಆಹಾರವನ್ನು ಒದಗಿಸುವಲ್ಲಿ D 1472·1·34·1· ಎಂಬ ಆಶಯವೂ ಮನುಷ್ಯನ ದೇಹದ ಅಂಗವು ಮನುಷ್ಯನಾಗಿ ಪರಿವರ್ತನೆಗೊಳ್ಳುವಲ್ಲಿ D 437 ಎಂಬ ಆಶಯವೂ ಇಲ್ಲಿ ವಿಶಿಷ್ಟವಾಗಿವೆ.

ನಾಯಕಿಗೆ ಇಲ್ಲಿ ಸಹಾಯಕಳಾಗಿ 'ಅಜ್ಜಿ' ಬರುತ್ತಾಳೆ. ತುಳು ಮತ್ತು ಕನ್ನಡ ಜನಪದ ಕಥೆಗಳಲ್ಲಿ ಇಂತಹ ಅಜ್ಜಿಯ ಪಾತ್ರವು ಕಥೆಯ ನಾಯಕ ಅಥವಾ ನಾಯಕಿಗೆ ಸಹಾಯಕ ಪಾತ್ರವಾಗಿ ಬರುತ್ತದೆ. ಅರಮನೆಯಲ್ಲಿ ರಾಜಕುಮಾರಿಗೆ ಹೂಮಾಲೆ ಕಟ್ಟಿಕೊಡುವ ವ್ಯಕ್ತಿ ಈ ಕಥೆಯಲ್ಲಿ ಅಜ್ಜಿಯ ವೃತ್ತಿಯಾಗಿ ಕಾಣಿಸಿಕೊಂಡಂತೆಯೇ ಇನ್ನೂ ಅನೇಕ ತುಳು ಜನಪದ ಕಥೆಗಳಲ್ಲಿ ಸಿಗುತ್ತದೆ.

## (6) ಕುದುರೆ ಮತ್ತು ಹುಡುಗ

"ಒಂದೂರಿನಲ್ಲಿ ಒಬ್ಬ ಅರಸು. ಅವನಿಗೊಬ್ಬ ಮಗ. ಅವನ ತಾಯಿ ತೀರಿಹೋಗಿದ್ದಳು. ಮಗನ ಒತ್ತಾಯದ ಮೇರೆಗೆ, ತಂದೆಯು ಕೆಲಸದವಳೊಬ್ಬಳನ್ನು ಎರಡನೆಯ ಮದುವೆಯಾದ. ದೂರದ ಸಾಲೆಗೆ

ಹೋಗುತ್ತಿದ್ದ ಮಗ ಒಂದು ಕುದುರೆಯನ್ನು ಕೊಂಡುಕೊಂಡ. ಅದು ಒಂದು ಕರು ಹಾಕಿ ಸತ್ತುಹೋಯಿತು. ಆ ಚಿಕ್ಕ ಕುದುರೆಯು ಇವನನ್ನು ದೇವರಲ್ಲಿಗೆ ಕೊಂಡುಹೋಯಿತು. ದೇವರು ಇವನನ್ನೂ ಆ ಕುದುರೆಯನ್ನೂ ಬಂಗಾರದ ನೀರಿನಲ್ಲಿ ಮುಳುಗಿಸಿ, ಅವರಿಗೆ ವಜ್ರಾಯುಷ್ಯವನ್ನು ಕೊಟ್ಟರು. ಅವರಿಗೆ ಒಂಟೆಯ ಚರ್ಮವನ್ನು ಹಾಕಿದರು. ಈ ರೀತಿ ಇರುವಾಗ ಮಲತಾಯಿಯು ಈ ಹುಡುಗನನ್ನು ಮೋಹಿಸಿದಳು. ಇವನು ಅದಕ್ಕೆ ಒಪ್ಪಲಿಲ್ಲ. ಇದರಿಂದ ಸಿಟ್ಟುಗೊಂಡ ಮಲತಾಯಿಯು ಇವನನ್ನು ಕೊಲ್ಲಲು ಅನ್ನಕ್ಕೆ ವಿಷಬೆರೆಸಿ ಇಟ್ಟಳು. ಕುದುರೆಯು ಇವನಿಗೆ ಈ ವಿಚಾರವನ್ನು ತಿಳಿಸಿತು. ಇವನು ಆ ಆಹಾರವನ್ನು ಕೋಳಿ ಕಾಗೆಗಳಿಗೆ ಹಾಕಿದಾಗ, ಅವು ಸತ್ತವು. ಮಲತಾಯಿ ಇವನನ್ನು ಕೊಲ್ಲುವುದಕ್ಕಾಗಿ ಅವನು ಉಣ್ಣಲು ಕುಳಿತುಕೊಳ್ಳುವಲ್ಲಿ ಒಂದು ದೊಡ್ಡ ಹೊಂಡವನ್ನು ತೋಡಿ, ಅದರ ಮೇಲೆ ಹೊಂಡ ಕಾಣದಂತೆ ತೆಳುವಾದ ಹಲಗೆಯನ್ನು ಇಟ್ಟಳು. ಈ ವಿಚಾರವೂ ಕುದುರೆಯಿಂದ ಹುಡುಗನಿಗೆ ತಿಳಿಯಿತು. ಅವನು ಅದರಿಂದಲೂ ತಪ್ಪಿಸಿಕೊಂಡನು. ಆಗ ಮಲತಾಯಿಯು ಅವನ ಕುದುರೆಯನ್ನೇ ಕೊಲ್ಲಲು ಯೋಚಿಸಿದಳು. ನಿಮಿತ್ತ ಹೇಳುವವನಿಗೆ ಹಣ ಕೊಟ್ಟು, ತನಗೆ ಹೊಟ್ಟೆನೋವಿನಂತೆ ನಟಿಸಿ, ಅದಕ್ಕೆ ಔಷಧವಾಗಿ ಹುಡುಗನ ಆ ಕುದುರೆಯನ್ನು ಕೊಂದು ಅದರ ರಕ್ತವನ್ನು ಹಚ್ಚಬೇಕೆಂದು, ನಿಮಿತ್ತದವನಿಂದ ಹೇಳಿಸಿದಳು. ಅರಸನು ಮಗನಲ್ಲಿ ಇದನ್ನು ತಿಳಿಸಿ, ಅವನ ಕುದುರೆಯನ್ನು ಕೊಲ್ಲಲು ಸಿದ್ಧತೆ ಮಾಡಿದನು. ಅದನ್ನು ಕೊಲ್ಲುವ ಮೊದಲು ಈ ಹುಡುಗನು ಕೊನೆಯ ಬಾರಿ ಅದನ್ನು ಏರುತ್ತೇನೆ ಎಂದು ಹೇಳಿ, ಅದರಲ್ಲಿ ಹತ್ತಿಕುಳಿತುಕೊಂಡು, ಅಲ್ಲಿಂದ ಪರಾರಿಯಾದನು. ಒಂದು ಅಜ್ಜಿಯ ಮನೆಯಲ್ಲಿಗೆ ಬಂದಾಗ, ಕುದುರೆಯನ್ನು ಮಾಯಮಾಡಿ, ಅವನು ಅಜ್ಜಿ ಮನೆಗೆ ಬಂದನು. ಆ ಊರಿನ ಅರಸನ ಏಳು ಮಂದಿ ಹೆಣ್ಣು ಮಕ್ಕಳಿಗೆ ಹೂವಿನ ಮಾಲೆ ಕಟ್ಟಿಕೊಡುವುದು ಅಜ್ಜಿಯ ಉದ್ಯೋಗ. ಇವನು ಅವಳ ಸಹಾಯಕನಾಗಿ ಹೂ ಕೊಯ್ಯಲು ಅರಸನ ಹೂದೋಟಕ್ಕೆ ಬಂದವನು ತನ್ನ ಕುದುರೆಯನ್ನು ಬರಹೇಳಿ, ಅದರಲ್ಲಿ ಕುಳಿತುಕೊಂಡು, ಹೂದೋಟದ ಸುತ್ತ ಹಾರಿದನು. ಅವನನ್ನು ಕಂಡ ಕಿರಿಯ ರಾಜಕುಮಾರಿ ಆಕರ್ಷಿತಳಾಗಿ, 'ತಮಗೆ ವಯಸ್ಸಾಗುತ್ತಾ ಬಂತು, ಮದುವೆ ಮಾಡಬೇಕು' ಎಂಬುದನ್ನು ಕೊಳೆತ ಹಣ್ಣುಗಳ ರೂಪದಲ್ಲಿ ತಂದೆಗೆ ಮನವರಿಕೆಮಾಡಿಸುವುದು, ಕೊನೆಯ ರಾಜಕುಮಾರಿಯು ಕುದುರೆಯುಳ್ಳ ಹುಡುಗನನ್ನು ಮದುವೆಯಾಗುವುದು. ಅವನ ಬಡತನದ ರೂಪವನ್ನು ನೋಡಿ ಉಳಿದವರು ಅವಳನ್ನು ಮೂದಲಿಸುವುದು, ಇವಳು ಅವನೊಡನೆ ಒಂದು ಗುಡಿಸಲಲ್ಲಿ ವಾಸಮಾಡುವುದು. ಒಮ್ಮೆ ಅರಸನ ಅಳಿಯಂದಿರೆಲ್ಲಾ ಬೇಟೆಗೆ ಹೋಗುವಾಗ, ಕಿರಿಯ ಅಳಿಯ (ಕುದುರೆಯ ಹುಡುಗ)ನು ತಾನೂ ಬೇಟೆಗೆ ಹೋಗುತ್ತೇನೆ ಎಂದು ಹೆಂಡತಿಯಿಂದ ಹೇಳಿಸುವುದು. ರಾಜನು ಅಸಡ್ಡೆಯಿಂದ ಒಂದು ಮುರುಕು ಕೋವಿಯನ್ನೂ ಮೂರು ಕಾಲಿನ ಕುದುರೆಯನ್ನೂ ಅವನಿಗೆ ಕೊಡುವುದು. ಇವನು ಕಾಡಿಗೆ ಹೋಗಿ, ತನ್ನ ಕುದುರೆಯನ್ನು ಬರಹೇಳಿ, ಮೂರು ಕಲ್ಲುಗಳಿಂದ ಕಾಡಿನ ನಡುವಿನಲ್ಲಿ ಒಂದು ಕೋಟೆ, 'ಒಂದು ಅರಮನೆಯನ್ನು ನಿರ್ಮಿಸಿ, ಎಲ್ಲಾ ಕಾಡುಗಳ ಮೃಗಪಕ್ಷಿಗಳನ್ನು ಅದರೊಳಗೆ ಬರಿಸುವುದು. ಅರಸನ ಉಳಿದ ಅಳಿಯಂದಿರು ಬೇಟೆಗೆ ಯಾವ ಪ್ರಾಣಿಯೂ ಕಾಣಸಿಗದೆ, ಇವನ ಅರಮನೆಗೆ ಬಂದು, ಇವನಲ್ಲಿ ಮೃಗಗಳನ್ನು ಯಾಚಿಸುವುದು. ಕಿರಿಯ ಅಳಿಯನು ಅವರಿಗೆ ಬೇಕಾದ ಮೃಗಗಳನ್ನು ಕೊಟ್ಟು, ಗುರುತಿಗಾಗಿ ಅವರ ಕಿರುಬೆರಳುಗಳ ತಂದಿಗಳನ್ನು ಪಡೆದುಕೊಳ್ಳುವುದು. ಅವರೆಲ್ಲರೂ ಹಾಗೆಯೇ ಮಾಡಿ, ಮಾವನಾದ ಅರಸನಿಗೆ ಮೃಗಗಗಳನ್ನು ತಂದು ಒಪ್ಪಿಸುವುದು. ಕಿರಿಯವನು ಅರಮನೆ, ಕೋಟೆ, ತನ್ನ ಕುದುರೆ ಎಲ್ಲವನ್ನೂ ಮಾಯಮಾಡಿ, ತನಗೆ ಬೇಕಾದ ಕೆಲವು ಮೃಗಗಳನ್ನು ತಂದು ಪದಾರ್ಥ ಮಾಡಿಸಿ, ಅರಸನಿಗೆ ಕಳುಹಿಸುವುದು. ಅದನ್ನು ತಿಂದ ಅರಸ ಅದರ ರುಚಿಯನ್ನು ಮೆಚ್ಚುವುದು. ಇನ್ನೊಂದು ಬಾರಿ, ಶತ್ರುಗಳ ಸೈನ್ಯ ರಾಜ್ಯಕ್ಕೆ ಬರುವ ಸಂದರ್ಭದಲ್ಲಿ ಅಳಿಯಂದಿರು ಯುದ್ಧ ಜಯಿಸಲು ಹೋಗುವುದು. ಕಿರಿಯವನ್ನು ಹೊರಟಾಗ ಅರಸನು ಮೂದಲಿಸಿ, ಮುರುಕು ಕೋವಿಯನ್ನೂ ಮೂರು ಕಾಲಿನ ಕುದುರೆಯನ್ನೂ ಕೊಡುವುದು. ಉಳಿದ ಅಳಿಯಂದಿರು ಯುದ್ಧದಲ್ಲಿ ಸೋತುಹೋಗಿದ್ದಾಗ, ಕಿರಿಯವನು ಯುದ್ಧವನ್ನು ಜಯಿಸಿಕೊಡುವುದು.

ಉಳಿದ ಅಳಿಯಂದಿರಿಂದ ಯುದ್ಧ ಜಯಿಸಿಕೊಟ್ಟಿದ್ದಕಾಗಿ, ಅವರ ಮೂಗಿನ ತುದಿಗಳನ್ನು ಗುರುತಾಗಿ ಪಡೆಯುವುದು. ಇವರು ಹೋಗಿ ತಾವೇ ಯುದ್ಧ ಜಯಿಸಿದ್ದು ಎಂದು ಅರಸನಲ್ಲಿ ತಿಳಿಸುವುದು. ಕಿರಿಯವನು ಸ್ನಾನ ಮಾಡುವಾಗ, ಅವನ ಒಂಟೆಯ ಚರ್ಮವನ್ನು ಅವನ ಹೆಂಡತಿಯು ಬೆಂಕಿಗೆ ಹಾಕುವುದು. ಅವಳಿಗೆ ಅವನ ನಿಜ ಸಂಗತಿ ಗೊತ್ತಾಗುವುದು. ಅವನು ತನ್ನ ಅರಸುಕುಮಾರನ ನಿಜರೂಪದಲ್ಲಿ ಪತ್ನಿಯೊಂದಿಗೆ ತನ್ನ ಕುದುರೆಯಲ್ಲಿ ಕುಳಿತುಕೊಂಡು, ಅರಸನಲ್ಲಿಗೆ ಹೋಗುವುದು. ಅವನ ಹಿರಿಯ ಅಳಿಯಂದಿರ ಪರಾಕ್ರಮದ ನಿಜಸಂಗತಿಯನ್ನು ತಿಳಿಸಿ, ಅವರ ಕಿರುಬೆರಳಿನ ತುದಿ ಮತ್ತು ಮೂಗಿನ ತುಂಡಿನ ತುದಿಗಳನ್ನು ತೋರಿಸುವುದು. ಆ ಮೇಲೆ ಸುಖವಾಗಿ ಇರುವುದು".

'ಕುದುರೆ ಮತ್ತು ಹುಡುಗ' ಕಥೆಯು ತುಳುವಿನ ಮೂಲ ರೂಪದ ಸಂಕ್ಷಿಪ್ತ ಕನ್ನಡ ರೂಪಾಂತರವನ್ನು ಇಲ್ಲಿ ಕೊಡಲಾಗಿದೆ. ಈ ಕಥೆಯ ತುಳು ಮೂಲ ರೂಪವು ಇಲ್ಲಿ ಕೊಟ್ಟ ಸಂಕ್ಷಿಪ್ತ ಕನ್ನಡ ರೂಪಾಂತರದ ಏಳುಪಟ್ಟು ದೀರ್ಘವಾಗಿದೆ. ನನ್ನ ಸಂಗ್ರಹದಲ್ಲಿ ಇರುವ ತುಳು ಜನಪದ ಕಥೆಗಳಲ್ಲಿ ಅತ್ಯಂತ ದೀರ್ಘವಾಗಿ ಇರುವುದು ಈ ಕಥೆ. ಇದನ್ನು ಮಂಗಳೂರು ತಾಲೂಕಿನ ಕೊಣಾಜೆ ಗ್ರಾಮದ ಸೀತು ಎಂಬ ಮೂಲ್ಯ ಜಾತಿಯ ಅಕ್ಷರಜ್ಞಾನವಿಲ್ಲದ ಹೆಂಗಸಿನಿಂದ (ಪ್ರಾಯ 51 ವರ್ಷ–1979ರಲ್ಲಿ) ಸಂಗ್ರಹಿಸಲಾಯಿತು. (ಸಂಗ್ರಹ—1973ರಲ್ಲಿ). ಸೀತುವು ಈ ಕಥೆಯನ್ನು ತಾನು ಹತ್ತು ವರ್ಷದವಳಿದ್ದಾಗ ತನ್ನ ತಾಯಿ ಮದನುವಿನಿಂದ ಕಲಿತದ್ದು ಎಂದು ತಿಳಿಸಿದಳು. ಮದನು ಕೂಡಾ ಇದೇ ಕೊಣಾಜೆ ಗ್ರಾಮದವಳು. ಅಂದರೆ ಮದನುವಿನಿಂದ ಸೀತುವಿಗೆ ಈ ಕಥೆ ವರ್ಗಾವಣೆಗೊಂಡದ್ದು ಸುಮಾರು 1940ರ ಸುಮಾರಿಗೆ ಇರಬಹುದು.

'ಕುದುರೆ ಮತ್ತು ಹುಡುಗ' ಎಂಬ ತುಳು ಜನಪದ ಕಥೆಯು ಸುಮಾರು 30 ಆಶಯಗಳುಳ್ಳ ದೀರ್ಘವಾದ ಒಂದು ಸಂಕೀರ್ಣ ಕಥೆ. ವಸ್ತುವಿನ ದೃಷ್ಟಿಯಿಂದ ಇದು 'ಮಾಂತ್ರಿಕ ಕಥೆ'ಗಳಲ್ಲಿ 500-559; ಅತಿಮಾನುಷ ಸಹಾಯಕರು (Supernatural Helpers) ಎಂಬ ವರ್ಗಗಳ ಗುಂಪಿಗೆ ಬರುತ್ತದೆ. ಈ ಕಥೆಯಲ್ಲಿ ಪ್ರಧಾನವಾಗಿ ಎರಡು ಸಂಕೀರ್ಣ ಮಾಂತ್ರಿಕ ಕಥೆಗಳು ಒಟ್ಟು ಸೇರಿವೆ.

ಭಾಗ 1 : ಮಲತಾಯಿಯಿಂದ ನಾನಾ ಕಷ್ಟಗಳಿಗೆ ಒಳಗಾದ ನಾಯಕನು ತನ್ನ ಮಾಂತ್ರಿಕ ಕುದುರೆಯ ಸಹಾಯದಿಂದ ಅವುಗಳಿಂದ ಪಾರಾಗುವುದು.

ಭಾಗ 2 : ನಾಯಕನು ವೇಷಪಲ್ಲಟದಿಂದ ಬಡವನಂತೆ ಕಾಣಿಸಿಕೊಂಡು, ರಾಜನೊಬ್ಬನ ಕಿರಿಯ ಅಳಿಯನಾಗಿದ್ದುಕೊಂಡು, ಎಲ್ಲ ಸಾಹಸಗಳಲ್ಲಿಯೂ ತನ್ನ ಮಾಂತ್ರಿಕ ಶಕ್ತಿಯಿಂದ ಜಯಶಾಲಿಯಾಗುವುದು.

ಭಾಗ 1ರ ಪ್ರಮುಖ ಘಟನೆಗಳು :

1) ನಾಯಕನು ಮಾಂತ್ರಿಕ ಕುದುರೆಯನ್ನು ದೇವರಿಂದ ಪಡೆಯುವುದು.

2) ಮಲತಾಯಿಯು ನಾಯಕನನ್ನು ಕಾಮಿಸುವುದು; ಅವನು ನಿರಾಕರಿಸುವುದು.

3) ಮಲತಾಯಿಯು ತನ್ನ ಇಚ್ಛೆ ಈಡೇರದ ಕಾರಣ, ನಾಯಕನನ್ನು ಕೊಲ್ಲಲು ಬೇರೆ ಬೇರೆ ಉಪಾಯಗಳನ್ನು ಮಾಡುವುದು : (i) ಅನ್ನಕ್ಕೆ ವಿಷ ಹಾಕುವುದು. (ii) ನಾಯಕನು ಉಣ್ಣುವ ಸ್ಥಳದಲ್ಲಿ ದೊಡ್ಡ ಹೊಂಡ ತೋಡುವುದು. (iii) ಮಾಂತ್ರಿಕ ಕುದುರೆಯು ನಾಯಕನಿಗೆ ಒದಗುವ ಅಪಾಯಗಳ ಬಗ್ಗೆ ಸೂಚನೆ ಕೊಡುವುದು, ಅವನು ಪಾರಾಗುವುದು,

4) ನಾಯಕನ ಕುದುರೆಯನ್ನು ಕೊಲ್ಲಲು, ಮಲತಾಯಿಯು ಕಾಯಿಲೆಯ ನಟನೆ ಮಾಡಿ, ಅದಕ್ಕೆ ಔಷಧವಾಗಿ ಆ ಕುದುರೆಯ ರಕ್ತವನ್ನು ಬಯಸುವುದರ ಮೂಲಕ ಸಂಚು ಹೂಡುವುದು. ಕುದುರೆಯ ಮೂಲಕ ಈ ಸಂಗತಿಯನ್ನು ತಿಳಿದ ನಾಯಕನು ಕುದುರೆಯಲ್ಲಿ ಕೊನೆಯ ಬಾರಿ ಏರುವ ನೆಪದಿಂದ, ಕುದುರೆಯಲ್ಲಿ ಕುಳಿತು, ಹಾರಿ ಅಲ್ಲಿಂದ ತಪ್ಪಿಸಿಕೊಂಡು ಹೋಗುವುದು.

ಭಾಗ 2ರ ಘಟನೆಗಳು :

(1) ನಾಯಕನು ಕುದುರೆಯನ್ನು ಮಾಯ ಮಾಡಿ, ಬಡವನಂತೆ ಒಂದು ಅಜ್ಜಿಯ ಮನೆಯನ್ನು ಸೇರಿ, ರಾಜಕುಮಾರಿಯರಿಗೆ ಹೂಕಟ್ಟಿ ಕೊಡುತ್ತಿದ್ದ ಅಜ್ಜಿಗೆ ಆ ಕೆಲಸದಲ್ಲಿ ಸಹಾಯ ಮಾಡುವುದು.

(2) ನಾಯಕನು ತನ್ನ ನಿಜ ವೇಷದಲ್ಲಿ ಕುದುರೆಯ ಮೇಲೆ ತಿರುಗಾಡುವುದನ್ನು ಕಂಡ, ಕಿರಿಯ ರಾಜಕುಮಾರಿಯು ಅವನನ್ನು ಮದುವೆಯಾಗುವುದು.

3) ಬಡವನಂತೆ ಕಾಣುತ್ತಿದ್ದ ಕಿರಿಯ ಅಳಿಯನಾದ ನಾಯಕನನ್ನು ರಾಜನು ಉಳಿದ ಅಳಿಯರಿಗಿಂತ ಕೀಳಾಗಿ ಹೀನಾಯಮಾನವಾಗಿ ನೋಡುವುದು.

(4) ರಾಜನ ಅಳಿಯಂದಿರು ಮೃಗ ಬೇಟೆಗೆ ಹೋಗುವಾಗ, ಬಡವನಂತಿದ್ದ ನಾಯಕನು ತಾನೂ ಹೋಗಿ ತನ್ನ ಮಾಂತ್ರಿಕಶಕ್ತಿಯಿಂದ ಅರಮನೆ ನಿರ್ಮಿಸಿ, ಮೃಗಗಳನ್ನು ಒಟ್ಟುಗೂಡಿಸುವುದು. ಉಳಿದ ಅಳಿಯಂದಿರು ಅವನಿಗೆ ತಮ್ಮ ಕಿರುಬೆರಳಿನ ತುದಿಗಳನ್ನು ಗುರುತಿಗೆ ಕೊಟ್ಟು, ಅವನಿಂದ ಮೃಗಗಳನ್ನು ತೆಗೆದುಕೊಳ್ಳುವುದು.

(5) ವೈರಿಗಳೊಡನೆ ಯುದ್ಧ ಮಾಡಬೇಕಾಗಿ ಬಂದಾಗ, ಹಿರಿಯ ಅಳಿಯಂದಿರೆಲ್ಲ ಸೋಲುವುದು. ಕಿರಿಯ ಅಳಿಯನಾದ ನಾಯಕನು ತನ್ನ ಮಾಂತ್ರಿಕ ಶಕ್ತಿಯಿಂದ ಜಯಿಸಿ, ಹಿರಿಯ ಅಳಿಯಂದಿರಿಂದ ಮೂಗಿನ ತುದಿಗಳನ್ನು ಗುರುತಿಗಾಗಿ ತೆಗೆದುಕೊಳ್ಳುವುದು.

(6) ನಾಯಕನು ಸ್ನಾನ ಮಾಡುತ್ತಿರುವಾಗ, ಅವನ ನಿಜರೂಪವನ್ನು ಅಡಗಿಸುತ್ತಿದ್ದ, ಒಂಟೆಯ ಚರ್ಮವನ್ನು ಅವನ ಪತ್ನಿಯು ಬೆಂಕಿಗೆ ಹಾಕುವುದು. ನಾಯಕನ ನಿಜಸ್ವರೂಪ ಎಲ್ಲರಿಗೂ ಗೊತ್ತಾಗಿ, ಅವನು ರಾಜನ ನೆಚ್ಚಿನ ಅಳಿಯನಾಗುವುದು.

ನಾಯಕನ ಮಾಂತ್ರಿಕ ಕುದುರೆಯು ಮೊದಲನೆಯ ಭಾಗದಲ್ಲಿ ಹೆಚ್ಚಾಗಿ ಭವಿಷ್ಯವನ್ನು ತಿಳಿಸಿ, ನಾಯಕನನ್ನು ಪಾರುಮಾಡುವ ಸಹಾಯಕ ಪ್ರಾಣಿಯಾಗಿ ಬರುತ್ತದೆ (ಆಶಯಗಳು : B 401; B 520; B 133.1; B 133.2). ಎರಡನೆಯ ಭಾಗದಲ್ಲಿ ಅಂತಹ ಕ್ರಿಯಾಶೀಲತೆ ಮಾಂತ್ರಿಕ ಕುದುರೆಗೆ ಇಲ್ಲ. ಇಲ್ಲಿ ಅರಮನೆಯ ಸೃಷ್ಟಿ, ಮೃಗಗಳನ್ನು ಒಂದುಗೂಡಿಸುವುದು. ಮಾಂತ್ರಿಕ ಕಲ್ಲುಗಳಿಂದ ನಾಯಕನು ಯುದ್ಧವನ್ನು ಜಯಿಸಿಕೊಡುವಾಗಲೂ ಮಾಂತ್ರಿಕ ಕುದುರೆಯ ಪಾತ್ರವೇನೂ ಇಲ್ಲ. ಆದರೆ ಈ ಎರಡು ಸಂದರ್ಭಗಳಲ್ಲಿಯೂ ನಾಯಕನು ಮಾಂತ್ರಿಕ ಕುದುರೆಯ ಮೇಲೆ ಕುಳಿತುಕೊಂಡು ಬಂದ ಎಂಬ ಮಾತು ಮಾತ್ರ ಕಥೆಯಲ್ಲಿ ಸಿಗುತ್ತದೆ. ಈ ಎರಡನೆಯ ಭಾಗದಲ್ಲಿ D 1337.2.5. ಮಾಂತ್ರಿಕ ಚರ್ಮವು ಮನುಷ್ಯನನ್ನು ಕುರೂಪಿಯನ್ನಾಗಿ ಕಾಣಿಸುತ್ತದೆ ಎನ್ನುವ ಆಶಯ, D 931. ಮಾಂತ್ರಿಕ ಕಲ್ಲು ಎಂಬ ಆಶಯ–ಇವು ಪ್ರಧಾನವಾಗಿವೆ.

ಮಾಂತ್ರಿಕ ಕುದುರೆಗೆ ಸಂಬಂಧಿಸಿದ ಮೂಲತಃ ಭಿನ್ನವಾಗಿದ್ದ ಎರಡು ಕಥೆಗಳು ಸಂಯೋಗವಾಗಿ ಈಗಿನ ಸಂಕೀರ್ಣ ಕಥೆಯ ರೂಪವನ್ನು ತಾಳಿರಬಹುದು.

ಅಂತಾರಾಷ್ಟ್ರೀಯ ಜನಪದ ಕಥಾವರ್ಗದಲ್ಲಿ ಚಿನ್ನದ ಕೂದಲಿನ ನಾಯಕ ಮತ್ತು ಅವನ ಕುದುರೆಗೆ ಸಂಬಂಧಿಸಿದ ಎಲ್ಲ ಕಥೆಗಳೂ ವರ್ಗ 502ರಲ್ಲಿ ಬರುತ್ತವೆ. ಗ್ರಿಮ್ ಸಹೋದರರ ಸಂಗ್ರಹದಲ್ಲಿ 'The Iron Man' (No. 136) ಎಂಬುದು ಈ ವರ್ಗವನ್ನು ಪ್ರತಿನಿಧಿಸುತ್ತದೆ. ಮಾಂತ್ರಿಕ ಕುದುರೆಗೆ ಸಂಬಂಧಿಸಿದ ಎಲ್ಲ ಕಥೆಗಳಲ್ಲಿಯೂ ಎರಡು ಭಾಗಗಳಿವೆ: 1. ಆ ಕುದುರೆಯು ಸಿಕ್ಕಿದ ಸಂದರ್ಭ. 2. ಕುದುರೆಯ ಮೂಲಕ ಅದ್ಭುತ ಕಾರ್ಯಗಳು. ಈ ಎರಡು ಭಾಗಗಳ ವಿವರಗಳಲ್ಲಿಯೂ ಸಾಕಷ್ಟು ವೈವಿಧ್ಯಗಳು ದೊರೆಯುತ್ತವೆ.

ಜರ್ಮನಿಯಲ್ಲಿ ಜನಪ್ರಿಯವಾಗಿ ಸಿಗುವ 'Goldener Marchen' (ವರ್ಗ 314) ಕಥೆಯ ಉತ್ತರ ಭಾಗವು ಸ್ವಲ್ಪಮಟ್ಟಿಗೆ ತುಳುವಿನ ಈ ಕಥೆಯನ್ನು ಹೋಲುತ್ತದೆ. 'Goldener Marchen'ನ ಈ ಭಾಗದಲ್ಲಿ ನಾಯಕನು ಯಾವುದೇ ಸಾಹಸವನ್ನು ತನ್ನ ಮಾಂತ್ರಿಕ ಕುದುರೆಯ ಮೂಲಕ ಮಾಡುತ್ತಾನೆ. ಆದರೆ ಅವನ ಭಾವಂದಿರಿಗೆ ಯಾವ ಸಾಹಸ ಕಾರ್ಯದಲ್ಲೂ ಜಯಶಾಲಿಗಳಾಗಲು ಸಾಧ್ಯವಾಗುವುದಿಲ್ಲ. ಅವನು ತನ್ನ ಭಾವಂದಿರಿಗೆ ಸಹಾಯ ಮಾಡಿ, ಅವರಿಂದ ಗುರುತುಗಳನ್ನು ತೆಗೆದುಕೊಂಡು, ಅವುಗಳನ್ನು ಮಾವನಿಗೆ ತೋರಿಸಿ ಅಚ್ಚುಮೆಚ್ಚಿನ ಅಳಿಯನಾಗುತ್ತಾನೆ.

'I Don't know' (ವರ್ಗ 532) ಎಂಬ ಕಥೆಯಲ್ಲಿ ನಾಯಕನನ್ನು ಮಲತಾಯಿಯು ಮನೆಯಿಂದ ಓಡಿಸುತ್ತಾಳೆ. ಅವನು ಒಂದು ಮಾಂತ್ರಿಕ ಕುದುರೆಯನ್ನು ಪಡೆಯುತ್ತಾನೆ. ನಾಯಕ ಮತ್ತು ಮಲತಾಯಿಯ ಸಂಬಂಧದ ದೃಷ್ಟಿಯಿಂದ ತುಳುಕಥೆಯನ್ನು ಇದು ಆ ಸಂದರ್ಭದಲ್ಲಿ ಹೋಲುತ್ತದೆ.

ಕನ್ನಡದಲ್ಲಿ ತುಳುವಿನ ಈ 'ಕುದುರೆ ಮತ್ತು ಹುಡುಗ' ಎಂಬ ಕಥೆಯನ್ನು ಬಹಳವಾಗಿ ಹೋಲುವ ಕಥೆಯೊಂದು ಸಿಗುತ್ತದೆ,[1] ಕನ್ನಡದ ಕಥೆಯಲ್ಲಿ ತುಳುವಿನ ಕಥೆಯ ಮೊದಲನೆಯ ಭಾಗವು ಕೆಲವು ವ್ಯತ್ಯಾಸಗಳ ಮೂಲಕ ಸಿಗುತ್ತದೆ. ಕನ್ನಡದ 'ಕುದುರೆ ಮತ್ತು ಹುಡುಗ' ಕಥೆಯ ಮುಖ್ಯ ಘಟನೆಗಳು :

(1) ಮಲತಾಯಿಯ ಮಗ ನಾಯಕ. ಆತ ಕುದುರೆ ಸಾಕಿರುವುದು, ಶಾಲೆಗೆ ಹೋಗುತ್ತಿರುವುದು.

(2) ಪಕ್ಕದ ಮನೆಯ ಹೆಂಗುಸು ಮಲತಾಯಿಗೆ ಹೇಳಿ, ನಾಯಕನನ್ನು ಕೊಲ್ಲಲು ಸಂಚು ಹೂಡುವುದು;

(3) ಆಹಾರದಲ್ಲಿ ವಿಷ ಹಾಕಿ ನಾಯಕನನ್ನು ಕೊಲ್ಲಲು ಮಲತಾಯಿ ಮಾಡುವ ಸಂಚು, ಕುದುರೆಯ ಮೂಲಕ ನಾಯಕನಿಗೆ ಗೊತ್ತಾಗಿ, ವಿಫಲವಾಗುವುದು.

(4) ಮಲತಾಯಿಯು ಕುದುರೆಯನ್ನೇ ಕೊಲ್ಲಲು ಸಿದ್ಧತೆ ಮಾಡುವುದು. ನಾಯಕನು ಆ ಸಂದರ್ಭದಲ್ಲಿ ಅಲ್ಲಿಗೆ ಓಡಿಬಂದು ತಡೆಯುವುದು. ಅದೇ ವೇಳೆಗೆ ಅಲ್ಲಿಗೆ ಬಂದ ಅವನ ತಂದೆ ತನ್ನ ಎರಡನೆಯ ಹೆಂಡತಿಯನ್ನು (ಹುಡುಗನ ಮಲತಾಯಿ) ಕೊಂದು, ಕುದುರೆಯನ್ನು ರಕ್ಷಿಸುವುದು.

ತುಳು ಮತ್ತು ಕನ್ನಡದ ಕಥೆಗಳಲ್ಲಿ ಕುದುರೆಯ ಒಡೆಯನಾದ ನಾಯಕನು ಶಾಲೆಗೆ (ಸ್ಕೂಲಿಗೆ) ಹೋಗುತ್ತಿರುತ್ತಾನೆ. ಆದ್ದರಿಂದ ಭಾಗ ಒಂದೇ ಮೂಲದಿಂದ ಬಂದಿರಬಹುದು.

---

1. ರಾಗೌ : (ಸಂ). 'ಕುದುರೆ ಮತ್ತು ಹುಡುಗ'- 'ಕರ್ನಾಟಕ ಜನಪದ ಕಥೆಗಳು', ತ. ವೆಂ. ಸ್ಮಾರಕ ಗ್ರಂಥ ಮಾಲೆ, ಮೈಸೂರು, 1970. ಪು. 132 - 133.

## (7) ಅಣ್ಣ – ತಂಗಿ

"ಒಂದೂರಿನಲ್ಲಿ ಒಬ್ಬ ಅರಸ. ಅವನು ಎರಡು ಮದುವೆಯಾದರೂ ಮಕ್ಕಳಾಗಲಿಲ್ಲ. ಮನುಷ್ಯ ರೂಪವನ್ನು ಧರಿಸಿದ ದೇವರು ಅವನಿಗೆ ಮೂರು ಕಲ್ಲುಗಳನ್ನು ಕೊಟ್ಟು, ಅವುಗಳಿಂದ ಒಂದು ಮಾವಿನ ಮರ ಸೃಷ್ಟಿಯಾಗಿ ಅದರ ಹಣ್ಣನ್ನು ತಿಂದರೆ ಅವನ ಹೆಂಡತಿಯರು ಗರ್ಭ ಧರಿಸುತ್ತಾರೆ ಎಂದು ತಿಳಿಸುವುದು. ರಾಜನು ಅದೇ ರೀತಿ ಆ ಮಾಂತ್ರಿಕ ಕಲ್ಲುಗಳಿಂದ ಮರವನ್ನು ಸೃಷ್ಟಿಮಾಡಿ, ಸಿಕ್ಕಿದ ಹಣ್ಣನ್ನು ಹೆಂಡಂದಿರಿಗೆ ಸರಿಯಾಗಿ ಹಂಚಲು ಎರಡನೆಯ ಹೆಂಡತಿಯಲ್ಲಿ ಕೊಡುವುದು. ಅವಳು ಹಿರಿಯವಳಿಗೆ ಕೊಡದೆ ಹಣ್ಣನ್ನು ಪೂರ್ತಿ ತಿಂದು, ಅದರ ಗೊರಟೆಯನ್ನು ಹೊರಗೆ ಎಸೆಯುವುದು. ಈ ಗೊರಟೆಯನ್ನು ತಿಂದ ಮೊದಲನೆಯ ಹೆಂಡತಿ ಗರ್ಭಿಣಿಯಾಗುವುದು: ಗಂಡನು ಯುದ್ಧಕ್ಕೆ ಹೋದ ವೇಳೆಯಲ್ಲಿ, ಅವಳು ಒಂದು ಗಂಡುಮಗು ಮತ್ತು ಒಂದು ಹೆಣ್ಣುಮಗುವನ್ನು ಹೆತ್ತಾಗ, ಎರಡನೆಯ ಹೆಂಡತಿಯು ಆ ಮಕ್ಕಳನ್ನು ಹಟ್ಟಿಯಲ್ಲಿ ಕಪಿಲೆ ದನದ ಬಳಿ ಅಡಗಿಸಿ ಇಟ್ಟು, ಅರಸನ ಹೆಂಡತಿಯು ಹಲ್ಲಿ ಕಪ್ಪೆಗಳನ್ನು ಹೆತ್ತಳು ಎಂದು ಸುಳ್ಳು ವಿಚಾರವನ್ನು ಪ್ರಚಾರ ಮಾಡುವುದು. ಅರಸನು ತನ್ನ ಹೆಂಡತಿ ಹಲ್ಲಿ ಕಪ್ಪೆಗಳನ್ನು ಹೆತ್ತದ್ದಕ್ಕೆ ನಾಚಿಗೆಪಟ್ಟು, ತನ್ನ ಮೊದಲನೆಯ ಹೆಂಡತಿಯನ್ನು ಹೂದೋಟಕ್ಕೆ ನೀರು ಹೊಯ್ಯುವ ಕೆಲಸಕ್ಕೆ ನೇಮಿಸುವುದು. ಕಪಿಲೆ ದನವು ಹಾಲು ಕರೆಯಲು ಬಂದಾಗ, ಹಾಲಿನ ಚೆಂಬನ್ನು ಬೀಳಿಸಿ, ಆ ಹಾಲು ಹಟ್ಟಿಯಲ್ಲಿ ಮರೆಯಾಗಿದ್ದ ಮಕ್ಕಳಿಗೆ ಸಿಗುವಂತೆ ಮಾಡುವುದು. ಒಮ್ಮೆ ಅರಸನು ತನ್ನ ಹಟ್ಟಿಯ ಗೊಬ್ಬರ ತೆಗೆಸಲು ಯೋಚಿಸಿದಾಗ, ತನ್ನ ತಂತ್ರ ಬಯಲಾಗುವುದೆಂದು ಗೊತ್ತಾದ ಎರಡನೆಯ ಹೆಂಡತಿ ಅಲ್ಲಿದ್ದ ಮಕ್ಕಳನ್ನು ಒಂದು ಕೊಡದಲ್ಲಿ ಹಾಕಿ ಕಡಲಿನಲ್ಲಿ ಬಿಡುವುದು. ಅದು ಒಬ್ಬ ಸನ್ಯಾಸಿಗೆ ಸಿಗುವುದು. ಅವನು ಆ ಮಕ್ಕಳನ್ನು ಸಾಕುವುದು. ಅವನು ತಾನು ಸಾಯುವ ಕಾಲಕ್ಕೆ ಆ ಮಕ್ಕಳಿಗೆ ಒಂದು ಮಾಯದ ಕಂಬಳಿ, ಒಂದು ಮಾಯದ ಪಾತ್ರೆ, ಒಂದು ಮಾಯದ ಬೆತ್ತವನ್ನು ಕೊಡುವುದು. ಬೇಕಾದಲ್ಲಿಗೆ ಪ್ರಯಾಣ ಮಾಡುವ ಮಾಯದ ಕಂಬಳಿ, ಎಷ್ಟೇ ಜನರಿಗಾದರೂ ಅಡುಗೆ ಮಾಡಿಕೊಡುವ ಮಾಯದ ಪಾತ್ರೆ, ಬಂಗಾರದ ಅರಮನೆಯನ್ನು ಸೃಷ್ಟಿಸುವ ಮಾಯದ ಬೆತ್ತ–ಇವು ಆ ಮಕ್ಕಳಿಗೆ ಸಿಕ್ಕಿದುವು. ಅವರು ಆ ಕಂಬಳಿಯಲ್ಲಿ ಕುಳಿತು ತಮ್ಮ ತಂದೆಯಿದ್ದ ಊರಿಗೆ ಬಂದರು ಅಲ್ಲಿ ಬಂಗಾರದ ಅರಮನೆಯನ್ನು ಸೃಷ್ಟಿಸಿದರು. ಈ ಮಕ್ಕಳು ಮತ್ತೆ ಬಂದ ವಿಚಾರವು ಅರಸನ ಎರಡನೆಯ ಹೆಂಡತಿಗೆ ಗೊತ್ತಾಯಿತು. ಹೇಗಾದರೂ ಮಾಡಿ ಈ ಮಕ್ಕಳನ್ನು ಮುಗಿಸಿಬಿಡಬೇಕು ಎಂದು ಒಬ್ಬಳು ಅಜ್ಜಿಯನ್ನು ಕರೆದು ಒಂದು ತಂತ್ರ ಹೂಡಿದಳು. ಅಜ್ಜಿಯು ಅಣ್ಣನಿಲ್ಲದ ವೇಳೆ ತಂಗಿಯಲ್ಲಿಗೆ ಬಂದು, ಅವಳನ್ನು ಒಲಿಸಿಕೊಂಡು, ಅವಳ ಅಣ್ಣನು ಏಳು ಸಮುದ್ರದ ಆಚೆಗೆ ಇರುವ ಜಟಾಯುವನ್ನು ತಂದುಕೊಡಲು ಹಠ ಹಿಡಿಯುವಂತೆ ಪ್ರೇರೇಪಿಸಿದಳು. ಅದೇ ರೀತಿ ತಂಗಿಯು ಅಣ್ಣನಲ್ಲಿ ಜಟಾಯುವನ್ನು ತರಲು ಒತ್ತಾಯಿಸಿದಳು. ಅಣ್ಣನು ಕಂಬಳಿಯಲ್ಲಿ ಕುಳಿತುಕೊಂಡು ಏಳು ಸಮುದ್ರಗಳನ್ನು ದಾಟಿ, ಜಟಾಯುವಿನ ಎರಡು ಮರಿಗಳಿದ್ದಲ್ಲಿಗೆ ಬಂದನು. ಆ ಮರಿಗಳನ್ನು ತಿನ್ನಲು ಬಂದ ಸರ್ಪವನ್ನು ಅಣ್ಣನು ಕೊಂದು ಹಾಕಿದ. ಹೊರಗಿನಿಂದ ಬಂದ ಜಟಾಯುವು ತನ್ನ ಮರಿಗಳನ್ನು ಉಳಿಸಿದ ಅಣ್ಣನಿಗೆ ಏನು ಬೇಕೆಂದು ಕೇಳಿತು. ಅವನು "ಒಂದು ದಿನದ ಮಟ್ಟಿಗೆ ನಮ್ಮಲ್ಲಿಗೆ ಬರಬೇಕು" ಎಂದ. ಹಾಗೆಯೇ ಜಟಾಯುವು ಅಣ್ಣನೊಡನೆ ಬಂದಿತು. ಎರಡನೆಯ ಹೆಂಡತಿಯ ಸಂಚು ಫಲಕಾರಿಯಾಗಲಿಲ್ಲ. ಆಗ ಅವಳು ಇನ್ನೊಂದು ಉಪಾಯ ಹೂಡುತ್ತಾಳೆ. ಅಜ್ಜಿಯನ್ನು ಕರೆದು ತಂಗಿಯನ್ನು ಪ್ರೇರೇಪಿಸಿ, ಅಣ್ಣನು ಏಳು ಸಮುದ್ರಗಳ ಆಚೆಗೆ ಇರುವ 'ಪಾತಾಳ ಸಿಂಗಿ' ಎನ್ನುವವಳನ್ನು ತರಬೇಕೆಂದು ಒತ್ತಾಯಿಸುವಂತೆ ಮಾಡುತ್ತಾಳೆ. ತಂಗಿಯ ಒತ್ತಾಯದಂತೆ ಕಂಬಳಿಯಲ್ಲಿ ಕುಳಿತುಕೊಂಡು ಏಳು ಸಮುದ್ರಗಳನ್ನು ದಾಟಿ ಹೋಗುತ್ತಾನೆ.

ಹೋಗುವ ಮೊದಲು ಒಂದು ತುಳಸಿ ಗಿಡವನ್ನು ತಂಗಿಯಲ್ಲಿ ಕೊಟ್ಟು 'ಈ ಗಿಡ ಸತ್ತರೆ ನಾನೂ ಸತ್ತೆನೆಂದು ಅರ್ಥ, ಬದುಕಿದರೆ ನಾನೂ ಜೀವಂತನಾಗಿದ್ದೇನೆ ಎಂದು ಅರ್ಥ' ಎಂದು ಹೇಳಿ ಹೋಗುತ್ತಾನೆ. ಇವನು ಏಳು ಸಮುದ್ರಗಳಾಚೆ ತಲುಪಿ, 'ಪಾತಾಳ ಸಿಂಗಿ' ಎಂದು ಕರೆದು, ಮೂರನೆಯ ಬಾರಿ ಕರೆಯುವ ವೇಳೆಗೆ ಈ ಕಡೆಗೆ ತಂಗಿಯ ಬಳಿಯಿದ್ದ ತುಳಸಿಗಿಡ ಬಾಡಿ ಸಾಯುತ್ತದೆ. ತಂಗಿಯು ತನ್ನ ಅಣ್ಣನು ಸತ್ತನೆಂದು ಬಹಳ ದುಃಖಿಸುತ್ತಾಳೆ. ಆದರೆ ಅಣ್ಣನ ಸ್ವರವನ್ನು ಕೇಳಿದ ಪಾತಾಳಸಿಂಗಿಯು ಹೊರಗೆ ಬಂದು, ಕಲ್ಲಾಗಿ ಬಿದ್ದಿದ್ದ ಅಣ್ಣನನ್ನು ಬದುಕಿಸುತ್ತಾಳೆ. ಅವಳು ಈ ಹಿಂದೆ ಕರೆದು, ಕಲ್ಲಾಗಿ ಬಿದ್ದಿದ್ದ ಅರಸುಕುಮಾರನನ್ನು ಬದುಕಿಸಿದಳು. ಈ ಕಡೆ ತುಳಸಿಗಿಡ ಮತ್ತೆ ಚಿಗುರಿದ್ದನ್ನು ಕಂಡು ತಂಗಿ ಸಂತೋಷಪಡುತ್ತಾಳೆ. ಅಣ್ಣನ ಮಾತಿನಂತೆ 'ಪಾತಾಳ ಸಿಂಗಿ' ಅವನ ಜೊತೆಗೆ ಊರಿಗೆ ಬರುತ್ತಾಳೆ. ಅರಸನ ಎರಡನೆಯ ಹೆಂಡತಿಯ ಈ ಸಂಚೂ ವಿಫಲವಾಯಿತು. ಈಗ ಅವಳು ಒಂದು ಸಮಾರಾಧನೆಯ ಏರ್ಪಾಡು ಮಾಡುತ್ತಾಳೆ. ಎಲ್ಲರಿಗೂ ಕರೆ ಕಳುಹಿಸುತ್ತಾಳೆ. ಅಣ್ಣ, ತಂಗಿ, ಜಟಾಯು ಮತ್ತು ಪಾತಾಳಸಿಂಗಿಯರಿಗೂ ಕರೆ ಹೋಗುತ್ತದೆ. ಆದರೆ ಅವರು ನಾಲ್ವರ ಅಡುಗೆಗೆ ಮಾತ್ರ ಕನ್ನಡಿ ಹಾವಿನ ವಿಷದ ತುಪ್ಪವನ್ನು ಹಾಕಿ ಇಡುತ್ತಾಳೆ. ಇವರು ಅಲ್ಲಿಗೆ ಹೋಗುತ್ತಾರೆ. ಮುಖ ತೊಳೆಯಲು ನೀರು ಬಂತು; ಇವರು ಬೇಡ ಅಂದರು. ಬಾಯಾರಿಕೆ ಬಂತು; ಇವರು ಬೇಡ ಅಂದರು. ಊಟಕ್ಕೆ ಏಳಲು ಹೇಳಿದರು. ಆಗ ಜಟಾಯು ಮತ್ತು ಪಾತಾಳಸಿಂಗಿಯರು ಅರಸನನ್ನು ಕರೆದು ಅವನಲ್ಲಿ ಈ ಅಣ್ಣ–ತಂಗಿಯರ ಸಂಪೂರ್ಣ ಕಥೆಯನ್ನು ಹೇಳುತ್ತಾರೆ. ಅವರಿಗಾಗಿ ಮಾಡಿದ ಅಡುಗೆಯನ್ನು ನಾಯಿಗೆ ಹಾಕಲು ಹೇಳುತ್ತಾರೆ, ನಾಯಿ ಸತ್ತು ಹೋಗುತ್ತದೆ. ಊದೋಟಕ್ಕೆ ನೀರು ಹೊಯ್ಯುವ ಕೆಲಸಕ್ಕೆ ನೇಮಿಸಿದ್ದ ಹಿರಿಯ ಹೆಂಡತಿಯನ್ನು ಕರೆಸುತ್ತಾರೆ. ದೂರದಲ್ಲಿ ಗಂಡುಮಗ ಮತ್ತು ಹೆಣ್ಣುಮಗಳನ್ನು ನಿಲ್ಲಿಸಿ, ಅವಳು ತನ್ನ ಬಲಮೊಲೆಯನ್ನು ಹಿಂಡುವಂತೆ ಹೇಳುತ್ತಾರೆ. ಅದರ ಹಾಲು ಮಗನ ಬಾಯಿಗೆ ಹೋಗಿ ಬೀಳುತ್ತದೆ. ಎಡದ ಮೊಲೆಯನ್ನು ಹಿಂಡಲು ಹೇಳುತ್ತಾರೆ. ಅದರ ಹಾಲು ಮಗಳ ಬಾಯಿಗೆ ಹೋಗಿ ಬೀಳುತ್ತದೆ. ರಾಜನಿಗೆ ಸತ್ಯ ಸಂಗತಿ ತಿಳಿಯುತ್ತದೆ. ಎರಡನೆಯ ಹೆಂಡತಿಯನ್ನು ಕೊಂದು, ಸಿಗಿದು ಏಳು ಬಾಗಿಲುಗಳಿಗೆ ತೋರಣ ಕಟ್ಟುತ್ತಾನೆ; ಹಿರಿಯ ಹೆಂಡತಿ ಮತ್ತು ಮಕ್ಕಳೊಡನೆ ಸುಖವಾಗಿ ಇರುತ್ತಾನೆ."

'ಅಣ್ಣ–ತಂಗಿ' ಕಥೆಯ ತುಳುವಿನ ಮೂಲರೂಪದ ಸಂಕ್ಷಿಪ್ತ ಕನ್ನಡ ರೂಪಾಂತರವನ್ನು ಇಲ್ಲಿ ಕೊಡಲಾಗಿದೆ. ಈ ಕಥೆಯ ತುಳು ಮೂಲರೂಪವು ಇಲ್ಲಿ ಕೊಟ್ಟ ಸಂಕ್ಷಿಪ್ತ ಕನ್ನಡ ರೂಪಾತರದ ಸುಮಾರು ನಾಲ್ಕು ಪಟ್ಟು ದೀರ್ಘವಾಗಿದೆ. ಇದನ್ನು ಮಂಗಳೂರು ತಾಲೂಕಿನ ಕೋಣಾಜೆ ಗ್ರಾಮದ 'ಅಕ್ಕಮ್ಮ' ಎಂಬ ಪುರುಷರ ಜಾತಿಯ ಅನಕ್ಷರಸ್ಥ ಹೆಂಗುಸಿನಿಂದ (ಪ್ರಾಯ 61 ವರ್ಷ–1979ರಲ್ಲಿ) ಸಂಗ್ರಹಿಸಿದ್ದು. (ಸಂಗ್ರಹ 1973ರಲ್ಲಿ, ಆಗ ಅವಳ ಪ್ರಾಯ 55 ವರ್ಷ.) ಅಕ್ಕಮ್ಮ ಈ ಕಥೆಯನ್ನು ಗೌರಿ ಮಡಿವಾಳಗಿತ್ತಿಯಿಂದ ಕಲಿತದ್ದು ಎಂದು ತಿಳಿಸಿದಳು. (1973ರಲ್ಲಿ ಈ ಕಥೆಯನ್ನು ಸಂಗ್ರಹ ಮಾಡುವ ವೇಳೆಗೆ ಗೌರಿ ಮಡಿವಾಳಗಿತ್ತಿ ಜೀವಂತವಾಗಿದ್ದಳು. ಆಗ ಅವಳ ಪ್ರಾಯ 75 ವರ್ಷ.)

'ಅಣ್ಣ–ತಂಗಿ' ಕಥೆಯು ಸುಮಾರು 22 ಆಶಯಗಳುಳ್ಳ ಒಂದು ಸಂಕೀರ್ಣ ಜನಪದ ಕಥೆ. ವಸ್ತುವಿನ ದೃಷ್ಟಿಯಿಂದ ಇದು 'ಮಾಂತ್ರಿಕ ಕಥೆ'ಗಳಲ್ಲಿ 700–749 : ಅತಿಮಾನುಷತೆಯುಳ್ಳ ಇತರ ಕಥೆಗಳು (Other tales of the Supernatural) ಎಂಬ ವರ್ಗಗಳ ಗುಂಪಿಗೆ ಸೇರುತ್ತದೆ. ಈ ಕಥೆಯಲ್ಲಿ ಬರುವ ಮುಖ್ಯ ಘಟನೆಗಳನ್ನು ಹೀಗೆ ಗುರುತಿಸಬಹುದು :

1. ಮಕ್ಕಳಿಲ್ಲದ ರಾಜನಿಗೆ ದೇವರು ಮಾಂತ್ರಿಕ ಕಲ್ಲುಗಳನ್ನು ಕೊಡುವುದು, ಅವುಗಳಿಂದ ಮಾವಿನ ಮಗದ ಸೃಷ್ಟಿ. ಅದರ ಗೊರಟೆಯನ್ನು ತಿಂದ ಮೊದಲನೆಯ ಹೆಂಡತಿ ಗರ್ಭಿಣಿಯಾಗುವುದು.

2. ರಾಜನ ಮೊದಲನೆಯ ಹೆಂಡತಿಯು ಒಂದು ಗಂಡು ಮತ್ತು ಒಂದು ಹೆಣ್ಣುಮಗುವನ್ನು ಹೆರುವುದು, ಆಗ ಎರಡನೆಯ ಹೆಂಡತಿಯು ಆ ಮಕ್ಕಳನ್ನು ಹಟ್ಟಿಯಲ್ಲಿ ಅಡಗಿಸಿ ಇಟ್ಟು, ಮಕ್ಕಳ ಬದಲು ಹಲ್ಲಿ ಕಪ್ಪೆಗಳನ್ನು ಅಲ್ಲಿ ಇಡುವುದು, ತನ್ನ ಹೆಂಡತಿ ಹಲ್ಲಿ ಕಪ್ಪೆಗಳನ್ನು ಹೆತ್ತಳೆಂಬ ವರ್ತಮಾನ ಕೇಳಿದ ರಾಜನು ಅವಳನ್ನು ಹೂದೋಟದ ಕೆಲಸಕ್ಕೆ ನೇಮಿಸುವುದು.

3. ಆ ಮಕ್ಕಳನ್ನು ಕಪಿಲೆ ದನ ಪೋಷಿಸುವುದು. ಆಗ ಮಲತಾಯಿಯು ಮಕ್ಕಳನ್ನು ಕಡಲಿನಲ್ಲಿ ತೇಲಿ ಬಿಡುವುದು.

4. ಸನ್ಯಾಸಿಯೊಬ್ಬನು ಆ ಮಕ್ಕಳಿಗೆ ಮಾಂತ್ರಿಕ ಕಂಬಳಿ, ಮಾಂತ್ರಿಕ ಪಾತ್ರೆ, ಮಾಂತ್ರಿಕ ಬೆತ್ತ ಕೊಡುವುದು.

5. ಮಲತಾಯಿಯು ಮಕ್ಕಳಿಗೆ ಕೆಲಸ ವಹಿಸಿಕೊಡುವುದು. ಮಾಂತ್ರಿಕ ವಸ್ತುಗಳ ಮತ್ತು ತನ್ನ ಉಪಕಾರ ಬುದ್ಧಿಯಿಂದ ನಾಯಕನು (ಅಣ್ಣ) ಅವುಗಳಲ್ಲಿ ಜಯಶಾಲಿಯಾಗುವುದು.

1. ಏಳು ಕಡಲಿನಾಚೆಯ ಜಟಾಯುವನ್ನು ತರುವುದು.
2. ಏಳು ಕಡಲಿನಾಚೆಯ ಪಾತಾಳಸಿಂಗಿಯನ್ನು ತರುವುದು.

6. ತನ್ನ ಮಕ್ಕಳಿಗೆ ತನ್ನ ಎರಡನೆಯ ಹೆಂಡತಿಯು ಕಷ್ಟಕೊಟ್ಟ ವಿಚಾರವು ರಾಜನಿಗೆ ತಿಳಿಯುವುದು. ರಾಜನು ಅವಳನ್ನು ಕೊಲ್ಲುವುದು. ಹಿರಿಯ ಹೆಂಡತಿಯನ್ನು ಆದರಿಸಿ, ಮಕ್ಕಳೊಡನೆ ಸುಖವಾಗಿರುವುದು.

'The Maiden without Hands' (ವರ್ಗ 706) ಮತ್ತು 'The Three Golden Sons' (ವರ್ಗ 707)–ಈ ಕಥೆಗಳಲ್ಲಿ ಪತ್ನಿಯೊಬ್ಬಳು ಪ್ರಾಣಿಗಳಿಗೆ ಜನ್ಮವಿತ್ತಳೆಂಬ ಆಪಾದನೆಗೆ ಒಳಗಾಗುವ ಆಶಯವಿದೆ. (K 2115-Animal birth slander). ವರ್ಗ 706, ವರ್ಗ 707, ವರ್ಗ 710 (Our Lady's Child), ವರ್ಗ 705 (Born from a Fish.) ಎಂಬ ಈ ನಾಲ್ಕು ಕಥೆಗಳಲ್ಲಿಯೂ ಮಕ್ಕಳ ಬದಲು ಪ್ರಾಣಿಗಳನ್ನು ಹೆತ್ತದ್ದು, ವಂಚನೆ, ಮಕ್ಕಳನ್ನು ತಪ್ಪಿಸುವುದು, ರಾಣಿಯನ್ನು ದೂರಮಾಡುವುದು ಕ್ರಮೇಣ ಸತ್ಯ ಸಂಗತಿಯು ಬೆಳಕಿಗೆ ಬರುವುದು, ಕುಟುಂಬವು ಮತ್ತೆ ಒಟ್ಟಾಗುವುದು–ಈ ಘಟನೆಗಳಿವೆ. 'The Three Golden Sons' (ವರ್ಗ 707) ಕಥೆಯಲ್ಲಿ–ರಾಣಿಯ ಸಹೋದರಿಯರು ಅವಳು ಹೆತ್ತ ಮಕ್ಕಳ ಬದಲು ನಾಯಿಯನ್ನು ತಂದಿರಿಸುವುದು, ಮಕ್ಕಳನ್ನು ಹೊಳೆಯಲ್ಲಿ ಬಿಡುವುದು, ರಾಜನು ತನ್ನ ಹೆಂಡತಿಯನ್ನು ಸೆರೆಮನೆಗೆ ಹಾಕುವುದು ಅಥವಾ ಹೊರದೂಡುವುದು. ಮಕ್ಕಳಲ್ಲಿ ಗಂಡು ಮಗನು ಅನೇಕ ಅಸಾಧ್ಯ ಕೆಲಸಗಳನ್ನು ಮಾಡಬೇಕಾಗಿ ಬರುವುದು, ಅತನಿಗೆ ಮಾಂತ್ರಿಕ ವಸ್ತುಗಳು ಸಹಾಯಕವಾಗುವುದು, ಹಕ್ಕಿಯು ನಿಜಸಂಗತಿಯನ್ನೆಲ್ಲಾ ತಿಳಿಸುವುದು, ರಾಜನು ರಾಣಿ ಮತ್ತು ಮಕ್ಕಳನ್ನು ಕಾಪಾಡುವುದು, ಕೆಟ್ಟ ನಾದಿನಿಯನ್ನು ಶಿಕ್ಷಿಸುವುದು— ಈ ಘಟನೆಗಳು ಮುಖ್ಯವಾಗಿ ಬರುತ್ತವೆ.

'ಅಣ್ಣ-ತಂಗಿ' ಕಥೆಯನ್ನು ಬಹಳವಾಗಿ ಹೋಲುವ ಇನ್ನೊಂದು ತುಳು ಜನಪದ ಕಥೆ 'ಅವಳಿ ಮಕ್ಕಳು'. ಮೂಲದ ತುಳು ರೂಪದ ಸಂಕ್ಷಿಪ್ತ ಕನ್ನಡ ರೂಪಾಂತರವನ್ನು ಮುಂದೆ ಕೊಡಲಾಗಿದೆ. ಈ ಸಂಕ್ಷಿಪ್ತ ಕನ್ನಡ ರೂಪಾಂತರದ ಮೂರುಪಟ್ಟು ಮೂಲದ ತುಳು ರೂಪವು ಇದೆ.

'ಅಣ್ಣ–ತಂಗಿ' ಕಥೆಯ ಪ್ರಮುಖ ಘಟನೆಗಳನ್ನೂ ಅದನ್ನು ಹೋಲುವ ಕಥಾವರ್ಗಗಳನ್ನೂ ಚರ್ಚಿಸಿರುವುದರಿಂದ ಮತ್ತೆ ಅದನ್ನು ಇಲ್ಲಿ ಪ್ರಸ್ತಾಪಿಸಿಲ್ಲ. ಆದರೆ ಈ ಕಥೆಯ ಘಟನೆಗಳು 'ಅಣ್ಣ-ತಂಗಿ' ಕಥೆಗಿಂತ ಹೇಗೆ ಭಿನ್ನವಾಗಿವೆ ಎಂಬುದನ್ನು ಮಾತ್ರ ಕಥೆಯ ನಂತರ ಅಧ್ಯಯನ ಮಾಡಲಾಗಿದೆ.

## (8) ಅವಳಿ ಮಕ್ಕಳು

"ಒಬ್ಬ ಅರಸನಿಗೆ ಮೂವರು ಹೆಂಡಂದಿರು. ಅವನಿಗೆ ಮಕ್ಕಳಿರಲಿಲ್ಲ. ಕೊನೆಗೆ, ಮೂರನೆಯ ಹೆಂಡತಿ ಸುಮಿತ್ರ ಗರ್ಭಿಣಿಯಾಗುತ್ತಾಳೆ. ಆ ವೇಳೆಗೆ ಅರಸನು ಯುದ್ಧಕ್ಕೆ ಹೋಗುತ್ತಾನೆ. ಅವನ ಕಿರಿಯ ಹೆಂಡತಿಗೆ ಹಿರಿಯ ಹೆಂಡತಿಯರಿಬ್ಬರೂ ಕಷ್ಟ ಕೊಡುತ್ತಾರೆ. ಅವಳು ಒಂದು ಗಂಡು ಮತ್ತು ಒಂದು ಹೆಣ್ಣು ಮಗುವಿಗೆ ಜನ್ಮ ಕೊಡುತ್ತಾಳೆ. ಆಗ ಅರಸನ ಹಿರಿಯ ಹೆಂಡಂದಿರು ಆ ಮಕ್ಕಳನ್ನು ಪೆಟ್ಟಿಗೆಯಲ್ಲಿ ಹಾಕಿ ಹೊಳೆಯಲ್ಲಿ ಬಿಡುತ್ತಾರೆ. ಕಿರಿಯ ಹೆಂಡತಿ ನಾಯಿಮರಿಗಳನ್ನು ಹೆತ್ತದ್ದು ಎಂದು ತೋರಿಸಿ, ಪ್ರಚಾರ ಮಾಡುತ್ತಾರೆ. ಅರಸನು ಹಿಂದಿರುಗಿದಾಗ, ತನ್ನ ಕಿರಿಯ ಹೆಂಡತಿಯು ನಾಯಿ ಮರಿಗಳನ್ನು ಹೆತ್ತಳೆಂದು ಭಾವಿಸಿ, ಅವಳನ್ನು ಹೂದೋಟಕ್ಕೆ ನೀರು ಹೊಯ್ಯುವ ಕೆಲಸಕ್ಕೆ ನೇಮಿಸುತ್ತಾನೆ. ಅವಳನ್ನು ಸಾಮಾನ್ಯ ಕೆಲಸದ ಹೆಣ್ಣಿನಂತೆ ಕಾಣುತ್ತಾನೆ. ಹೊಳೆಯಲ್ಲಿ ಬಿಟ್ಟ ಮಕ್ಕಳು ಒಬ್ಬ ಮರಕಲನಿಗೆ (ಮೀನುಗಾರ) ಸಿಗುತ್ತವೆ. ಅವನು ಅವರನ್ನು ಬಹಳ ಸಂತೋಷದಿಂದ ಸಾಕುತ್ತಾನೆ. ಅವನು ತೀರಿ ಹೋದಾಗ, ಈ ಅಣ್ಣ ತಂಗಿ ಅಲ್ಲಿಂದ ಹೊರಟು, ರಾಜನ ಅರಮನೆಯ ಪಕ್ಕದಲ್ಲೇ ಒಂದು ಮನೆ ಮಾಡಿ, ಕೂಲಿ ಕೆಲಸ ಮಾಡಿ ಬದುಕುತ್ತಾರೆ. ಇವರು ಬದುಕುವ ವಿಚಾರ ರಾಜನ ಹಿರಿಯ ಮಡದಿಯರಿಗೆ ಗೊತ್ತಾಗುತ್ತದೆ. ಅವರು ದಾಸಿಯೊಬ್ಬಳ ಮೂಲಕ ಆ ತಂಗಿಯಲ್ಲಿ ಅಣ್ಣನನ್ನು ಏಳು ಕಡಲಿನಾಚೆ ಇರುವ ರಕ್ಕಸನೂರಿನಿಂದ ರಾಜಕುಮಾರಿಯನ್ನು ತರಲು, ಪ್ರೇರೇಪಿಸುತ್ತಾರೆ. ತಂಗಿಯ ಒತ್ತಾಯದಿಂದ ಅಣ್ಣನು ಈ ಸಾಹಸಕ್ಕೆ ಹೊರಡುತ್ತಾನೆ. ಹೋಗುವಾಗ ಒಂದು ದೀಪವನ್ನು ಉರಿಸಿ ಇಡಲು ತಂಗಿಯಲ್ಲಿ ಹೇಳಿ, 'ದೀಪವು ನಂದಿ ಹೋದರೆ ತಾನು ಹಿಂದಕ್ಕೆ ಬರುವುದಿಲ್ಲ'ವೆಂದು ತಿಳಿಸಿ ಹೋಗುತ್ತಾನೆ. ಕಡಲ ಬದಿಯಲ್ಲಿ ಸಿಕ್ಕಿದ, ರೆಕ್ಕೆಯುಳ್ಳ ಕುದುರೆಯಲ್ಲಿ ಕುಳಿತು, ಏಳು ಸಮುದ್ರಗಳನ್ನು ದಾಟುತ್ತಾನೆ. ಇವನ ಚೆಲುವನ್ನು ಕಂಡು ಆಕರ್ಷಿತನಾದ ರಕ್ಕಸನು ತಾನು ಹೇಳಿದ ಕೆಲಸವನ್ನು ಮಾಡಿದ ಅವನಿಗೆ ಒಂದು ಮಾಂತ್ರಿಕ ಬೆತ್ತವನ್ನು ಕೊಡುತ್ತಾನೆ. ಆ ಮಾಂತ್ರಿಕ ಬೆತ್ತವು ಬಂಗಾರದ ಅರಮನೆಯನ್ನು ಮಾಡುವ ಶಕ್ತಿ ಪಡೆದಿರುತ್ತದೆ. ಅಲ್ಲಿಂದ ಅವನು ರಾಜಕುಮಾರಿಯಲ್ಲಿಗೆ ಬಂದು ಅವಳನ್ನು ಮೂರು ಬಾರಿ ಕರೆಯುತ್ತಾನೆ. ಅವಳನ್ನು ಕರೆದ ರಾಜಕುಮಾರರೆಲ್ಲಾ ಕಲ್ಲಾಗಿರುತ್ತಾರೆ. ಇವನೂ ಅರ್ಧ ಕಲ್ಲಾಗುತ್ತಾನೆ. ಆಗ ರಾಜಕುಮಾರಿಯು ಬಂದು, ಮಾಂತ್ರಿಕ ನೀರು ಚಿಮುಕಿಸಿ ಇವನನ್ನು ಬದುಕಿಸುತ್ತಾಳೆ. ಆ ಮೇಲೆ ಅವನು ತನ್ನ ಕುದುರೆಯ ಮೇಲೆ ಆ ರಾಜಕುಮಾರಿಯನ್ನು ಕುಳಿತುಕೊಳ್ಳಿಸಿ ಕೊಂಡು ತನ್ನ ಊರಿಗೆ ಬರುತ್ತಾನೆ. ಆ ರಾಜಕುಮಾರಿಗೆ ಮುಂದೆ ನಡೆಯುವ ಸಂಗತಿಗಳನ್ನೆಲ್ಲಾ ತಿಳಿದು ಕೊಳ್ಳುವ ಶಕ್ತಿ ಇರುತ್ತದೆ. ರಾಜಕುಮಾರನು ರಕ್ಕಸನು ಕೊಟ್ಟ ಮಾಂತ್ರಿಕ ಬೆತ್ತದಿಂದ ಬಂಗಾರದ ಅರಮನೆಯನ್ನು ಸೃಷ್ಟಿಸಿ, ತಂಗಿ ಮತ್ತು ಹೆಂಡತಿಯೊಡನೆ ಇರುತ್ತಾನೆ. ಆಗ ಅರಸನ ಹಿರಿಯ ಹೆಂಡಂದಿರು ರಾಜಕುಮಾರನನ್ನು ಕೊಲ್ಲುವುದಕ್ಕಾಗಿ ಒಂದು ಸಂಚು ಹೂಡುತ್ತಾರೆ. ಅವನನ್ನು ತಮ್ಮಲ್ಲಿಗೆ ಊಟಕ್ಕೆ ಬರಹೇಳಿ, ವಿಷ ಮಿಶ್ರಿತ ಆಹಾರವನ್ನು ಆತನಿಗೆ ಸಿದ್ಧಮಾಡುತ್ತಾರೆ. ಈ ವಿಚಾರ ಅವನಿಗೆ ರಾಜಕುಮಾರಿಯಿಂದ ತಿಳಿಯುತ್ತದೆ. ಅವನು ಅಲ್ಲಿ ಊಟದ ವೇಳೆ, ಆ ಅನ್ನವನ್ನು ನಾಯಿಗೆ ಹಾಕಿದಾಗ ಅದು ಸಾಯುತ್ತದೆ. ಹೂ ದೋಟದಲ್ಲಿ ಕೆಲಸದವಳಂತೆ ಇದ್ದ ತನ್ನ ತಾಯಿಯನ್ನು ಭೇಟಿಯಾಗುತ್ತಾನೆ. ತನ್ನ ತಂದೆ ಅರಸನಿಗೆ ನಿಜ ಸಂಗತಿಯನ್ನು ತಿಳಿಸುತ್ತಾನೆ. ಅರಸನು ತನ್ನ ಹಿರಿಯ ಹೆಂಡತಿಯರನ್ನು ಕೊಂದು, ಉಳಿದವರೊಡನೆ ಸುಖವಾಗಿರುತ್ತಾನೆ."





'ಅವಳಿ ಮಕ್ಕಳು' ಕಥೆಯಲ್ಲಿ ಕಿರಿಯ ರಾಣಿಯು ವಿರುದ್ಧ ಹಿರಿಯರು ಮತ್ಸರ ತಾಳುತ್ತಾರೆ. ಅವಳು ಹೆತ್ತ ಮಕ್ಕಳ ಬದಲು ಇಲ್ಲಿ ಇಡುವ ಪ್ರಾಣಿಗಳೆಂದರೆ ನಾಯಿ ಮರಿಗಳು. ಇಲ್ಲಿ ಹೊಳೆಯಲ್ಲಿ ಮಕ್ಕಳು ಸಿಕ್ಕುವುದು ಬೆಸ್ತನಿಗೆ. 'ಅಣ್ಣ-ತಂಗಿ' ಕಥೆಯಂತೆಯೇ ಇಲ್ಲಿಯೂ ಗಂಡು ಮಗನು ಏಳು ಸಮುದ್ರಗಳಾಚೆ ಹೋಗಿ ಹೆಣ್ಣನ್ನು ತರುವ ಸಾಹಸ ಮಾಡಬೇಕಾಗುತ್ತದೆ. ಇಲ್ಲಿಯೂ ಮಾಂತ್ರಿಕ ವಸ್ತುಗಳು ಈ ಕೆಲಸದಲ್ಲಿ ಅವನಿಗೆ ನೆರವಾಗುತ್ತವೆ. ಇಲ್ಲಿ ಮಾಂತ್ರಿಕ ವಸ್ತುವನ್ನು ಕೊಡುವವನು ರಾಕ್ಷಸ. ಆ ಕಥೆಯಂತೆ ಇಲ್ಲಿಯೂ ಅವರ ಆಹಾರಕ್ಕೆ ವಿಷ ಬೆರೆಸಿರುತ್ತಾರೆ. ಈ ವಿಚಾರ ಇಲ್ಲಿ ಅವನಿಗೆ ಗೊತ್ತಾಗುವುದು ರಾಜಕುಮಾರಿಯಿಂದ. ಕಥೆಯ ಕೊನೆಯ ಭಾಗ ಹಿಂದಿನ ಕಥೆಯಂತೆಯೇ ಇದೆ.

ಕೆಲವು ವಿವರಗಳನ್ನು ಬಿಟ್ಟರೆ 'ಅಣ್ಣ-ತಂಗಿ' ಮತ್ತು "ಅವಳಿ ಮಕ್ಕಳು' ಒಂದೇ ಕಥಾವರ್ಗದವು. ಭಿನ್ನರೂಪಗಳು ಎನ್ನುವಷ್ಟು ವ್ಯತ್ಯಾಸಗಳೂ ಈ ಪಾಠಗಳಲ್ಲಿ ಇಲ್ಲ.

## (9) ಪ್ರಧಾನಿಯ ಮಗಳು

"ಒಬ್ಬ ಅರಸನಿಗೆ ಒಂದು ಗಂಡು ಮತ್ತು ಒಂದು ಹೆಣ್ಣು-ಎರಡು ಮಕ್ಕಳು. ಅವನ ಪ್ರಧಾನಿಗೆ ಒಬ್ಬಳ ಮಗಳು. ಒಮ್ಮೆ ರಾಜನ ಮಗಳೂ ಪ್ರಧಾನಿಯ ಮಗಳೂ ಆಟವಾಡುತ್ತಿದ್ದಾಗ ಪ್ರಧಾನಿ ಮಗಳು ಕುತ್ತಿಗೆ ತಿರುಗಿಸುವುದನ್ನು ಕಂಡ ರಾಜಕುಮಾರ, ಅವಳು ಹೋಗುವ ದಾರಿಯ ಬಾಗಿಲುಗಳನ್ನು ಮುಚ್ಚಿದ. ಪ್ರಧಾನಿ ಮಗಳು ಬಂದು ರಾಜಕುಮಾರನನ್ನು ಹಂಗಿಸಿದಳು. ಇವಳನ್ನು ಹೇಗಾದರೂ ಮದುವೆಯಾಗಬೇಕೆಂದು ಹಠ ಹಿಡಿದ ರಾಜಕುಮಾರ, ಅಪ್ಪನಲ್ಲಿ ಒತ್ತಾಯ ಮಾಡಿ, ಮದುವೆಯಾದ. ಮದುವೆಯಾದರೂ ಪ್ರಧಾನಿ ಮಗಳು ಮನೆಯಲ್ಲಿ ಕುಳಿತುಕೊಳ್ಳುವುದಿಲ್ಲ. ಅವನು ಏಳು ಕಡಲುಗಳ ಆಚೆಗೆ ಹೋಗಿ, ಅಲ್ಲಿ ನಲ್ವತ್ತು ಸಿರಿಗಳ ಜೊತೆಗೆ ಕುಣಿಯಲು, ನಾಟಕವಾಡಲು ಹೋಗುವುದು. ಸನ್ಯಾಸಿಯೊಬ್ಬನು ಅವಳನ್ನು ಅಲ್ಲಿಗೆ ಕರೆದುಕೊಂಡು ಹೋಗುವುದು. ಇದು ರಾಜಕುಮಾರನಿಗೆ ಗೊತ್ತಾಗಿ, ನಾಚಿಕೆಯಿಂದ ಅವನು ಊರು ಬಿಟ್ಟು ಹೋಗುತ್ತಾನೆ. ದಾರಿಯಲ್ಲಿ ಅಶ್ವತ್ಥ ಮರವೊಂದು ಅವನನ್ನು ಮಾತನಾಡಿಸಿ, ಭಸ್ಮವನ್ನು ಕೊಡುವುದು. 'ಆ ಭಸ್ಮವನ್ನು ಅವನ ಹೆಂಡತಿಯ ನೆತ್ತಿಗೆ ಹಾಕಿದಾಗ, ಇವನು ಅವಳಿಗೆ ಕಾಣಿಸುವುದಿಲ್ಲ. ಅವಳು ಹೋಗುವ ಕಡೆಗಳಿಗೆಲ್ಲಾ ಇವನು ಹೋಗಬಹುದು' ಎಂದು ಆ ಮರದ ಧ್ವನಿ ತಿಳಿಸುವುದು. ಅದೇ ರೀತಿ ತನ್ನ ಹೆಂಡತಿಯ ನೆತ್ತಿಗೆ ಆ ಭಸ್ಮವನ್ನು ಹಾಕಿ, ಅವಳಿಗೆ ಕಾಣದಂತೆ ಅವಳ ಜೊತೆಗೇ ಏಳು ಕಡಲುಗಳಾಚೆ, ನಾಲ್ವತ್ತು ಸಿರಿಗಳ ಜೊತೆಗೆ ಕುಣಿಯುವಲ್ಲಿಗೆ ಹೋದ. ಅಲ್ಲಿ ಅವಳಿಗೆ ಮೂರು ಪೆಟ್ಟು ಹೊಡೆದ. ಆಗ ಅವಳಿಗೆ 'ತನಗೆ ಮದುವೆ ಯಾದದ್ದು, ಗಂಡನು ಅಲ್ಲಿ ಇರುವುದು' ಎಲ್ಲಾ ನೆನಪಾಗುತ್ತದೆ. ಅವಳ ಕೇಳಿಕೆಯಂತೆ ಸನ್ಯಾಸಿ ಅವಳನ್ನು ಆಗಲೇ ಹಿಂದಕ್ಕೆ ಕರೆತರುತ್ತಾನೆ. ಅವಳಿಗಿಂತ ಮೊದಲೇ ಅಲ್ಲಿಗೆ ತಲುಪಿದ ರಾಜಕುಮಾರ, ಅವಳು ಬಂದಾಗ ಎಚ್ಚರ ವಾದವನಂತೆ ನಟಿಸಿ, ಅವಳು ಏಳು ಕಡಲಿನಾಚೆ ಹೋದ ಸಂಗತಿಯನ್ನು, ಸಿರಿಗಳು, ನಾಟಕದ ಸಂಗತಿಯನ್ನು ಕನಸಿನಲ್ಲಿ ಕಂಡಂತೆ ಹೇಳುವುದು. ಆಗ ಅವಳು "ಏಳು ಕಡಲಿನ ಆಚೆ ಇರುವ ರಾಣಿಯ ವಿಚಾರ ತಿಳಿಸುವುದು. ಆಗ ರಾಜಕುಮಾರನು ಹಠದಿಂದ ಆ ರಾಣಿಯನ್ನು ತರಲು ಹೋಗುವುದು. ಹಡಗಿನಲ್ಲಿ ರಾಣಿಯಲ್ಲಿಗೆ ಬಂದ ಈತನನ್ನು ಆಕೆ ಮೂರು ಆಟ ಚೆನ್ನೆಯಾಡಲು ಕರೆದು, ಆಡಿ ಸೋಲಿಸುವುದು. ಪಣವಾಗಿ ಅವನನ್ನು ಹೂದೋಟಕ್ಕೆ ನೀರು ಹೊಯ್ಯಲು ನೇಮಿಸುವುದು. ಇವನಿಗಿಂತ ಹಿಂದೆ ಹೋಗಿ, ಆ ರಾಣಿಯೊಡನೆ ಚೆನ್ನೆಯಾಟವಾಡಿ ಸೋತವರೆಲ್ಲರೂ ಅವಳ ಹೂದೋಟದಲ್ಲಿ ನೀರು ಹೊಯ್ಯುವ ಕೆಲಸ ಮಾಡುತ್ತಿದ್ದರು. ಈ ಕಡೆ ತಾನು ಸೋತರೆ ಬಾಡುವ, ಗೆದ್ದರೆ ಚಿಗುರುವ ಒಂದು ತುಳಸಿ ಗಿಡವನ್ನು ಹೋಗುವ ಮೊದಲು

ರಾಜಕುಮಾರ ನೆಟ್ಟು ಹೋಗಿದ್ದನು. ಇವನು ಅಲ್ಲಿ ಸೋತೊಡನೆಯೇ ಆ ಗಿಡ ಬಾಡಿತು. ಆಗ ಅವನ ಹೆಂಡತಿ—ಪ್ರಧಾನಿ ಮಗಳು—ಗಂಡು ವೇಷ ಧರಿಸಿಕೊಂಡು ರಾಣಿಯಲ್ಲಿಗೆ ಹೊರಟಳು. ಹೋಗುವಾಗ ಮೂರು ಇಲಿಮರಿಗಳನ್ನು ಕೊಂಡು ಹೋಗಿದ್ದಳು. ರಾಣಿಯು ಗಂಡು ವೇಷದ ಪ್ರಧಾನಿ ಮಗಳೊಡನೆ ಚೆನ್ನೆ ಯಾಟಕ್ಕೆ ಕುಳಿತಳು. ಬೆಕ್ಕಿನ ತಲೆಯ ಮೇಲೆ ದೀಪವಿಟ್ಟು ಅಲ್ಲಿ ಚೆನ್ನೆಯಾಟವಾಡುವುದು. ಪ್ರಧಾನಿ ಮಗಳು ಸೋಲುತ್ತಾ ಬಂದ ಹಾಗೇಯೇ ತಾನು ತಂದಿದ್ದ ಒಂದು ಇಲಿ ಮರಿಯನ್ನು ಬಿಟ್ಟಳು. ಬೆಕ್ಕು ಇಲಿ ಹಿಡಿಯಲು ಓಡಿದಾಗ, ದೀಪ ಕೆಳಗೆ ಬಿತ್ತು. ಜಾಣತನದಿಂದ ಆ ಆಟವನ್ನು ಪ್ರಧಾನಿ ಮಗಳು ಗೆದ್ದಳು. ಇದೇ ರೀತಿ ಇನ್ನು ಎರಡು ಇಲಿಮರಿಗಳನ್ನು ಬಿಟ್ಟು, ಉಳಿದ ಎರಡು ಆಟಗಳನ್ನೂ ಗೆದ್ದಳು. ರಾಣಿ ಸೋತಳು. ಗಂಡು ವೇಷದ ಪ್ರಧಾನಿ ಮಗಳು ಆ ರಾಣಿಯನ್ನೂ ಹೂವಿನ ತೋಟಕ್ಕೆ ನೀರು ಹೊಯ್ಯುತ್ತಿದ್ದ ತನ್ನ ಗಂಡನನ್ನೂ ಹಡಗಿನಲ್ಲಿ ಕರೆದುಕೊಂಡು, ಊರಿನ ಕಡೆಗೆ ಹೊರಟಳು. ಊರು ಸಮೀಪವಾಗುತ್ತಾ ಬಂದಾಗ, ಪ್ರಧಾನಿ ಮಗಳು ತನ್ನ ರಹಸ್ಯವನ್ನು ಗಂಡನಲ್ಲಿ ಬಯಲು ಮಾಡಿ, ತನ್ನ ಗೆಲುವನ್ನೂ ಆತನ ಸೋಲನ್ನೂ ತಿಳಿಸಿ, ಅವನನ್ನು ಹಂಗಿಸಿದಳು. ಈ ಸುದ್ದಿ ಅರಮನೆಯಲ್ಲಿ ಗೊತ್ತಾದರೆ ತನಗೆ ನಾಚಿಕೆಗೇಡು ಎಂದು ಭಾವಿಸಿದ ರಾಜಕುಮಾರನು ತನ್ನ ಹೆಂಡತಿಯನ್ನು—ಪ್ರಧಾನಿಮಗಳನ್ನು—ಕಡಲಿಗೆ—ದೂಡಿ—ಹಾಕಿ, ರಾಣಿಯೊಡನೆ ಅರಮನೆಗೆ ಹೋದ. ತನ್ನ ಸನ್ಯಾಸಿಯ ಸಹಾಯದಿಂದ ಆವೇಳೆಗೆ ಅಲ್ಲಿಗೆ ಮುಟ್ಟಿದ ಪ್ರಧಾನಿ ಮಗಳು ಅರಸನಿಗೆ ನಡೆದ ವೃತ್ತಾಂತವನ್ನೆಲ್ಲಾ ತಿಳಿಸಿದಳು. ರಾಣಿಯನ್ನೂ ರಾಜಕುಮಾರನಿಗೆ ಮದುವೆ ಮಾಡಿಸಿದರು. ಇಬ್ಬರು ಹೆಂಡಿರೊಡನೆ ಅವನು ಸುಖವಾಗಿದ್ದನು'.

'ಪ್ರಧಾನಿಯ ಮಗಳು' ಕಥೆಯ ತುಳುವಿನ ಮೂಲರೂಪದ ಸಂಕ್ಷಿಪ್ತ ಕನ್ನಡ ರೂಪಾಂತರವನ್ನು ಇಲ್ಲಿ ಕೊಡಲಾಗಿದೆ. ಈ ಕಥೆಯ ತುಳು ಮೂಲರೂಪವು ಇಲ್ಲಿ ಕೊಟ್ಟ ಸಂಕ್ಷಿಪ್ತ ಕನ್ನಡ ರೂಪಾಂತರದ 'ಮೂರು ಪಟ್ಟು ದೀರ್ಘ'ವಾಗಿದೆ. ಇದನ್ನು ಮಂಗಳೂರು ತಾಲೂಕಿನ ಬೆಳ್ಮ ಗ್ರಾಮದ ಮಾಗಣ್ತಡಿ ಕಲ್ಲಹಿತ್ಲಿನ 'ಮುಂಡ್ಯಪ್ಪು' ಎಂಬ ಕ್ಷೌರಿಕ ಜಾತಿಯ ಅಕ್ಷರಜ್ಞಾನವಿಲ್ಲದ ಹೆಂಗುಸಿನಿಂದ ಸಂಗ್ರಹಿಸಲಾಯಿತು. (ಪ್ರಾಯ 73 ವರ್ಷ. 1979 ರಲ್ಲಿ ಸಂಗ್ರಹ 1976ರಲ್ಲಿ. ಆಗ ಅವಳ ಪ್ರಾಯ—70 ವರ್ಷ). ಅವಳು ಈ ಕಥೆಯನ್ನು ತನ್ನ ತಾಯಿಯಿಂದ ಕಲಿತುಕೊಂಡಳಂತೆ. ಅವಳ ತಾಯಿಯ ಮನೆ ಅಲ್ಲಿಂದ ಸುಮಾರು 15 ಮೈಲು ದೂರವಿರುವ ಪಾತೂರಿನ ಬಳಿ ಇದೆ.

'ಪ್ರಧಾನಿಯ ಮಗಳು' ಎಂಬ ತುಳು ಜನಪದ ಕಥೆಯು ಸುಮಾರು 20 ಆಶಯಗಳಿರುವ ಒಂದು ಸಂಕೀರ್ಣ ಜನಪದ ಕಥೆ. ವಸ್ತುವಿನ ದೃಷ್ಟಿಯಿಂದ ಇದು ಮಾಂತ್ರಿಕ ಕಥೆಗಳಲ್ಲಿ 650—699. ಅತಿಮಾನುಷ ಶಕ್ತಿ ಅಥವಾ ಜ್ಞಾನ (Supernatural Power or Knowledge) ಎಂಬ ವರ್ಗಗಳ ಗುಂಪಿಗೆ ಸೇರುತ್ತದೆ. ಈ ಕಥೆಯ ಮುಖ್ಯ ಘಟನೆಗಳನ್ನು ಹೀಗೆ ಗುರುತಿಸಬಹುದು :

1. ನಾಯಕನು ಪ್ರಧಾನಿಯ ಮಗಳ ದಿಟ್ಟತನವನ್ನು ಕಂಡು, ಅವಳನ್ನು ಹಟದಿಂದ ಮದುವೆಯಾಗುವುದು;
2. ಪ್ರಧಾನಿಯ ಮಗಳು ಏಳು ಕಡಲಿನಾಚೆ ನಾಲ್ವತ್ತು ಸಿರಿಗಳ ಜೊತೆಗೆ ನಾಟಕವಾಡಲು ಹೋಗುವುದು. ಸನ್ಯಾಸಿಯು ಅವಳನ್ನು ಕರೆದುಕೊಂಡು ಹೋಗುವುದು;
3. ಮಾಂತ್ರಿಕ ಮರವು ನಾಯಕನಿಗೆ ಮಾಂತ್ರಿಕ ಭಸ್ಮವನ್ನು ಕೊಟ್ಟು, ಅವನು ತನ್ನ ಹೆಂಡತಿಯ ಚಲನವಲನಗಳನ್ನು ಪತ್ತೆ ಹಚ್ಚಲು ಸಹಾಯಕವಾಗುವುದು;

4. ಪ್ರಧಾನಿಯ ಮಗಳ ಮಾತಿನಂತೆ ನಾಯಕನು ಏಳು ಕಡಲಿನಾಚೆ ಇರುವ ರಾಣಿಯನ್ನು ತರಲು ಹೋಗುವುದು, ಅವಳ ಜೊತೆಗೆ ಚೆನ್ನೆಯಾಟದಲ್ಲಿ ಸೋತು, ಅವಳ ಹೂದೋಟಕ್ಕೆ ನೀರು ಹೊಯ್ಯುವ ಕೆಲಸದಾಳು ಆಗುವುದು;

5. ಪ್ರಧಾನಿಯ ಮಗಳು ಗಂಡುವೇಷದಲ್ಲಿ ರಾಣಿಯಲ್ಲಿಗೆ ಬಂದು, ಇಲಿಮರಿಗಳ ತಂತ್ರದಿಬಂದ, ರಾಣಿಯನ್ನು ಚೆನ್ನೆಯಾಟದಲ್ಲಿ ಸೋಲಿಸಿ, ತನ್ನ ಗಂಡನನತಬಿಡಿಸಿಕೊಂಡು, ರಾಣಿಸಹಿತ ಹಿಂದಕ್ಕೆ ಬರುವುದು.

6. ನಾಯಕನು ತನ್ನಿಂದಾಗದ ಕಾರ್ಯವನ್ನು ಹೆಂಡತಿ ಮಾಡಿದ್ದಕ್ಕಾಗಿ ನಾಚಿಕೆ ಮತ್ತು ಮತ್ಸರದಿಂದ ದಾರಿಯಲ್ಲಿ ಅವಳನ್ನು ನೀರಿಗೆ ನೂಕಿ, ರಾಣಿ ಸಹಿತ ಬರುವುದು. ಪ್ರಧಾನಿಮಗಳು ತನ್ನ ಮಾಂತ್ರಿಕ ಶಕ್ತಿಯಿಂದ ಅಲ್ಲಿಗೆ ಬಂದು ನಿಜಸಂಗತಿಯನ್ನು ತಿಳಿಸುವುದು.

'ಪ್ರಧಾನಿಯ ಮಗಳು' ಕಥೆಯನ್ನು ಹೋಲುವ ಕನ್ನಡ ಕಥೆಯೊಂದು ಸಿಗುತ್ತದೆ.[1] ಉತ್ತರ ಕನ್ನಡ ಜಿಲ್ಲೆಯ ಕಥೆಗಳಲ್ಲಿ ಬರುವ ಈ 'ಮಂತ್ರಿಯ ಮಗಳು' ಕಥೆ (ಸಂಗ್ರಾಹಕ : ಎಲ್. ಆರ್. ಹೆಗಡೆ) ಕೆಲವು ವಿವರಗಳಲ್ಲಿ 'ಪ್ರಧಾನಿಯಮಗಳು' ತುಳು ಕಥೆಯನ್ನು ಹೋಲುತ್ತದೆ. ಈ ಹೋಲಿಕೆಯು 'ಮಂತ್ರಿಯ ಮಗಳು' ಕಥೆಯ ಆರಂಭದ ಭಾಗಕ್ಕೆ ಮಾತ್ರ ಸಂಬಂಧಿಸಿದೆ. ಇಲ್ಲಿ ಮಂತ್ರಿಯ ಮಗಳು ಗಂಡಸಿನ ವೇಷವನ್ನು ಧರಿಸಿ, ಹಡಗಿನಲ್ಲಿ ನೋಡಿ, ಒಂದು ಪಟ್ಟಣದಿಂದ ಕಾಮತುಲಸಿಯ ಗಿಡವನ್ನು ತರುತ್ತಾಳೆ. ಈ ಕಥೆಯಲ್ಲಿ ರಾಜಕುಮಾರನು ಪ್ರಧಾನಿಯ ಮಗಳೊಡನೆ ಪಣತೊಡುವುದು ಈ ಘಟನೆಯ ನಂತರ. ಆ ವಿವರಗಳು ಯಾವುವೂ ತುಳುಕಥೆಯಲ್ಲಿ ಇಲ್ಲ.

'ಪ್ರಧಾನಿಯ ಮಗಳು' ತುಳು ಕಥೆಯಲ್ಲಿ ವಿಶಿಷ್ಟವಾಗಿ ನಾಲ್ವತ್ತು ಸಿರಿಗಳ ವಿಚಾರ ಬಂದಿದೆ. ಸಾಮಾನ್ಯವಾಗಿ ತುಳು ಕಥೆಗಳಲ್ಲಿ ಬರುವ ಸನ್ಯಾಸಿಯು ಇಲ್ಲಿ ಪ್ರಧಾನಿಯ ಮಗಳಿಗೆ ಸಹಾಯಕನಾಗಿ ಬರುತ್ತಾನೆ. ಮಾಂತ್ರಿಕ ವಸ್ತುಗಳಲ್ಲಿ ಮಾಂತ್ರಿಕ ಭಸ್ಮ (D1246), ಮಾತನಾಡುವ ಮಾಂತ್ರಿಕ ಮರ (D 1311.4.2) ಮುಖ್ಯವಾಗಿವೆ. ದೂರದಲ್ಲಿ ಯಾರಿಗಾದರೂ ಸಂಕಷ್ಟ ಬಂದಾಗ ಊರಿನಲ್ಲಿ ನೆಟ್ಟ ಗಿಡವು ಬಾಡುವುದು ಅಥವಾ ಸಾಯುವುದು ಎಂಬ ಆಶಯ (F 979.23) ಇಲ್ಲಿ ಕಾಣಿಸಿಕೊಂಡಿದೆ.

ರಾಜನ ಮಗಳಿಗಿಂತ ಪ್ರಧಾನಿಯ ಮಗಳು ಯಾವಾಗಲೂ ಹೆಚ್ಚು ಬುದ್ಧಿವಂತಳು ಎನ್ನುವ ಜನಪದ ಕಥೆಗಳ ಅಂಶ ಇಲ್ಲಿಯೂ ವ್ಯಕ್ತವಾಗಿದೆ. ಪ್ರಧಾನಿಯು ರಾಜನಿಗಿಂತ ಹೆಚ್ಚು ಬುದ್ಧಿವಂತನಾಗಿರುವುದರಿಂದ ಈ ಕಲ್ಪನೆ ಜನಪದದಲ್ಲಿ ಬಂದಿರಬಹುದು. ಆದ್ದರಿಂದ 'ಪ್ರಧಾನಿಯ ಜಾಣ ಮಗಳು' ಎಂಬ ಆಶಯ (J 1111.5) ಇಂತಹ ಕಥೆಗಳ ಮೂಲದ್ರವ್ಯ.

---

1. ಎಚ್. ಎಲ್. ನಾಗೇಗೌಡ (ಸಂ) : ಮಂತ್ರಿಯ ಮಗಳು. 'ಕರ್ನಾಟಕ ಜಾನಪದ ಕಥೆಗಳು' ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1977. ಪು. 546—554.

## (10) ಹೆಣ್ಣು ಮತ್ತು ಹಾವು

''ಒಂದಾನೊಂದು ಊರಿನಲ್ಲಿ ಒಂದಾನೊಂದು ಕಾಲದಲ್ಲಿ ಒಬ್ಬ ರಾಜನಿದ್ದ. ಅವನಿಗೆ ಒಬ್ಬಳು ಮಡದಿ, ಒಬ್ಬ ಮಗ, ಒಬ್ಬಳು ಮಗಳು.

ರಾಣಿಗೆ ರಾಜನಲ್ಲಿ ಪ್ರೀತಿಯಿಲ್ಲ. ಅವಳು ಬೇರೊಬ್ಬನ ಜೊತೆ ಒಲುಮೆ ಬೆಳೆಸಿದ್ದಳು; ಕೂಡುತ್ತಿದ್ದಳು.

ಮಕ್ಕಳು ಬೆಳೆದು ಬಂದರು. ಮಗಳಿಗೆ ಮದುವೆಯಾಯಿತು. ಮಗನಿಗೆ ಬುದ್ಧಿ ಬಲಿಯಿತು. ತನ್ನ ತಾಯಿ ಇನ್ನೊಬ್ಬನೊಡನೆ ಒಲುಮೆ ಬೆಳೆಸಿರುವುದನ್ನು ಕಂಡು ಆತನಿಗೆ ನಾಚಿಕೆಯಾಯಿತು, ಕೂಡುವುದನ್ನು ಕಂಡು ರೋಸಿ ಹೋಯಿತು, ಆತ ತಾಯಿಯನ್ನು ಕೊಂದ. ಆ ಬಳಿಕ ತಂದೆಯ ಬಳಿ ಬಂದು ತಾಯಿಯನ್ನು ಕೊಂದ ತನ್ನನ್ನು ಎರಡು ಸೀಳಾಗಿ ಸಿಗಿದು ಒಂದು ಮರದ ಪೆಟ್ಟಿಗೆಯಲ್ಲಿ ಉಪ್ಪು ಹಾಕಿ ಇಡುವಂತೆ ಕೇಳಿಕೊಂಡ. ಆರು ತಿಂಗಳ ನಂತರ ಪೆಟ್ಟಿಗೆಯ ಬಾಯಿ ತೆರೆಯುವಂತೆ ಹೇಳಿದ. ತಂದೆಗೆ ಬಹಳ ದುಃಖ ವಾಯಿತು. ಮಗನ ನಿಶ್ಚಯವನ್ನು ಬದಲಿಸುವಂತೆ ಕೇಳಿಕೊಂಡ. ಮಗ ಒಪ್ಪಲೇ ಇಲ್ಲ. ಕೊನೆಗೆ ತಂದೆಯು ಮಗನ ಮಾತಿನಂತೆಯೇ ನಡೆದುಕೊಂಡ. ಮಗನ ದೇಹವನ್ನು ಎರಡು ಸೀಳಾಗಿ ಸಿಗಿಸಿದ. ಒಂದು ಮರದ ಪೆಟ್ಟಿಗೆಯಲ್ಲಿ ಈ ಎರಡೂ ಸೀಳುಗಳನ್ನು ಹಾಕಿಸಿ ಉಪ್ಪು ಬೆರೆಸಿ ಬಾಯಿ ಮುಚ್ಚಿಸಿದ. ಪೆಟ್ಟಿಗೆಯನ್ನು ಜೋಪಾನವಾಗಿ ಅರಮನೆಯಲ್ಲಿ ಕಾದಿರಿಸಿದ.

ಆರು ತಿಂಗಳುಗಳು ಕಳೆದವು. ಮಗ ತಿಳಿಸಿದಂತೆ ಅರಸ ಪೆಟ್ಟಿಗೆಯನ್ನು ತರಿಸಿ ಬಾಯಿ ತೆರೆಸಿದ. ಆಶ್ಚರ್ಯ! ಅರಸು-ಮಗನ ಬಲಭಾಗವು ಗಂಡಾಗಿಯೂ ಎಡಭಾಗವು ಹೆಣ್ಣಾಗಿಯೂ ಜೀವ ತಳೆದು ನಿಂತಿದ್ದವು. ಅರಸನಿಗೆ ಸಂತೋಷವಾಯಿತು. ಆತ ಆ ಇಬ್ಬರು ಮಕ್ಕಳನ್ನೂ ಸಾಕಿ ಸಲಹಿದ, ಮಕ್ಕಳು ಬೆಳೆದವು. ಬಾಲ್ಯ ಕಳೆಯಿತು. ಯೌವ್ವನ ತುಂಬಿ ಬಂತು. ಅರಸು ಈ ಗಂಡು-ಹೆಣ್ಣುಗಳೊಳಗೇ ಮದುವೆ ಮಾಡಿಸಿದ. ಹೀಗೆ ಆ ಗಂಡು ಹೆಣ್ಣುಗಳು ಸತಿಪತಿಗಳಾಗಿ ಸುಖಸಂತೋಷದಿಂದ ಸಂಸಾರವನ್ನು ಸಾಗಿಸುತ್ತಾ ಬಾಳಿ ಬರುತ್ತಿದ್ದರು.

ಒಂದು ದಿನ ರಾಜಕುಮಾರನ ಹೆಂಡತಿ ತಿರುಗಾಡಲೆಂದು ಉದ್ಯಾನವನಕ್ಕೆ ಹೋಗಿದ್ದಳು. ಅಲ್ಲಿ ಒಬ್ಬ ಅತ್ಯಂತ ಸುಂದರನಾದ ಯುವಕನನ್ನು ಕಂಡಳು. ಆ ಯುವಕ ನಾಗರಾಜನಾಗಿದ್ದ. ಆಕೆ ಅವನಲ್ಲಿ ಮೋಹ ಗೊಂಡಳು. ಅವನೂ ಅವಳಿಗೆ ಮನಸೋತ. ಇಬ್ಬರಲ್ಲೂ ಮಾತು ಬೆಳೆದು, ಮನಸ್ಸು ಕೂಡಿ, ದೇಹ ಬೆಸೆಯಿತು. ಹೀಗೆ ಅಂದು ಮೊದಲಾದುದು ಮತ್ತೆ ದಿನಾಲೂ ನಡೆಯಿತು. ಆಕೆ ದಿನಾ ಉದ್ಯಾನವನಕ್ಕೆ ಹೋಗುತ್ತಾಳೆ. ನಾಗರಾಜ ನಿತ್ಯ ಅಲ್ಲಿ ಬರುತ್ತಾನೆ. ಸಂಭೋಗ ನಡೆಯುತ್ತದೆ. ಹೀಗೆ ಕೆಲವು ಸಮಯ ಕಳೆಯಿತು. ನಾಗರಾಜ ಮತ್ತು ರಾಜಕುಮಾರಿ ಸೇರಿ ರಾಜಕುಮಾರನನ್ನು ಕೊಂದು ತಾವು ಪರಸ್ಪರ ಕೂಡಿ ಬಾಳುವ ಯೋಚನೆ ಮಾಡಿದರು. ರಾಜಕುಮಾರಿ ರಾಜಕುಮಾರನನ್ನು ಕೊಲ್ಲುವ ಸಂಧಿಯನ್ನು ಕಾಯುತ್ತಾ ಇದ್ದಳು, ರಾಜಕುಮಾರನಿಗೆ ಇದಾವುದೂ ತಿಳಿದೇ ಇರಲಿಲ್ಲ.

ಹೀಗಿರುತ್ತಾ ನಾಗರಾಜ ರಾಜಕುಮಾರಿಗೆ ರಾಜಕುಮಾರನನ್ನು ಕೊಲ್ಲುವ ಒಂದು ಉಪಾಯವನ್ನು ಹೇಳಿಕೊಟ್ಟ. ರಾಜಕುಮಾರಿ ಅದಕ್ಕೆ ಸಮ್ಮತಿಸಿದಳು.

ಒಂದು ದಿನ ರಾಜಕುಮಾರ ಕುದುರೆ ಸವಾರಿ ಮುಗಿಸಿ ಅರಮನೆಗೆ ಬಂದ. ರಾಣೀವಾಸಕ್ಕೆ ಬಂದಾಗ ಆತನ ಮಡದಿ ರಾಜಕುಮಾರಿ ಹೊಟ್ಟೆನೋವಿನಿಂದ ನರಳುತ್ತಿದ್ದಳು. ಪತ್ನಿಯ ಅಳಲನ್ನು ಕಂಡು ರಾಜಕುಮಾರನಿಗೆ ದುಃಖವಾಯಿತು. ವೈದ್ಯರನ್ನು ಕರೆತರಲೆಂದು ಅವಳನ್ನು ಕರೆದ, ಆಗ ರಾಜಕುಮಾರಿ ಹೇಳಿದಳು: "ವೈದ್ಯರು ಬೇಡ. ಗಂಜ್ಜರೆಕೆರೆಯಲ್ಲಿ ಬೆಳೆದ ತಾವರೆ ಹೂವನ್ನು ನೀನೇ ತಂದು ಅದನ್ನು ಹಿಂಡಿ ರಸ ತೆಗೆದು ಆ ರಸವನ್ನು ಹೊಕ್ಕುಳಿಗೆ ಬಿಟ್ಟರೆ ನನ್ನ ಹೊಟ್ಟೆ ನೋವು ಗುಣವಾಗುತ್ತದೆ."

ರಾಜಕುಮಾರ ಮಡದಿಯ ಮಾತನ್ನು ನಂಬಿದ. ಕೂಡಲೇ ಚಂದ್ರಾಯುಧವನ್ನು ಹಿಡಕೊಂಡು, ಕುದುರೆಯನ್ನು ಏರಿದ. ಗುಜ್ಜರೆಯ ಕಡೆ ನಾಗಾಲೋಟದಿಂದ ನಡೆದ. ಗುಜ್ಜರೆಕೆರೆ ಬಂತು. ಕೆರೆಯಲ್ಲಿ ಒಂದೇ ತಾವರೆ ಹೂ ಅರಳಿ ನಗುತ್ತಿತ್ತು, ಅರಸುಕುಮಾರ ಮುಂದೆ ಮುಂದೆ ಹೋದ. ಮೊಣಕಾಲಿಗಿದ್ದ ನೀರು ಸೊಂಟಕ್ಕೆ ಬಂತು. ಸೊಂಟದಿಂದ ಏರಿ ಎದೆಗೆ ಬಂತು. ಎದೆಯಿಂದ ಕುತ್ತಿಗೆಗೆ ಏರಿತು. ಕೈ ಚಾಚಿದಂತೆಲ್ಲ ಹೂವು ಮತ್ತೂ ಮುಂದೆ ಹೋಗುತ್ತಿತ್ತು. ಕೊನೆಗೆ ಅರಸುಕುಮಾರನ ತಾಳ್ಮೆ ತಪ್ಪಿತು. ಕೈಯಲ್ಲಿದ್ದ ಚಂದ್ರಾಯುಧದಿಂದ ಹೂವಿನ ಬುಡವನ್ನೇ ಕಡಿದ, ಹೂವಿನ ಬುಡದಲ್ಲಿ ನಾಗರಾಜ ಅಡಗಿ ಕುಳಿತಿದ್ದ. ಹೂವನ್ನು ರಾಜಕುಮಾರ ಕೊಯ್ಯುವಾಗ ಆತನ ಕೈಯನ್ನು ಕಚ್ಚಿ ಕೊಲ್ಲುವುದು ನಾಗರಾಜನ ಉದ್ದೇಶವಾಗಿತ್ತು. ಆದರೆ ಚಂದ್ರಾಯುಧದ ಪೆಟ್ಟಿಗೆ ತಾವರೆದಂಟಿನೊಡನೆ ನಾಗರಾಜನೂ ತುಂಡಾಗಿ ಸತ್ತುಹೋದ.

ಸತ್ತ ಹಾವನ್ನು ದೂರ ಸರಿಸಿ ರಾಜಕುಮಾರ ಹೂವನ್ನು ಎತ್ತಿಕೊಂಡು ಕುದುರೆಯನ್ನು ಏರಿದ. ವೇಗವಾಗಿ ಅರಮನೆಯತ್ತ ನಡೆದು ರಾಣಿವಾಸವನ್ನು ಹೊಕ್ಕ. ತಾವರೆ ಹೂವನ್ನು ಹಿಂಡಿದ. ರಸ ತೆಗೆದ. ಹೊಕ್ಕುಳಿಗೆ ರಸವನ್ನು ಬಿಟ್ಟ. ರಾಣಿಗೆ ಹೊಟ್ಟೆನೋವು ವಾಸಿಯಾಯಿತು.

ರಾಜಕುಮಾರಿ ಒಳಗಿಂದೊಳಗೆ ತಳಮಳಿಸಿದಳು. ಹೂವನ್ನು ಕೊಯ್ಯುವಾಗ ರಾಜಕುಮಾರನನ್ನು ಕಚ್ಚಿ ಕೊಲ್ಲುತ್ತೇನೆ ಎಂದ ನಾಗರಾಜನ ಮಾತು ಏನಾಯಿತು ? ನಾಗರಾಜ ಈಗ ಏಕೆ ಕಾಣಿಸುತ್ತಿಲ್ಲ ?

ದಿನಗಳು ಕಳೆದವು, ಒಂದು ದಿನ ಗಂಡ ಹೆಂಡಿರು ಕೂತು ಮಾತಾಡುವಾಗ ತಾವರೆ ಹೂವನ್ನು ತಂದ ಮಾತು ಬಂತು. ತಾವರೆ ಹೂವಿನ ದಂಟನ್ನು ಕಡಿಯುವಾಗ ಅದರೊಡನೆ ಒಂದು ಸರ್ಪವೂ ತುಂಡಾಗಿ ಸತ್ತ ವಿಚಾರ ರಾಜಕುಮಾರ ಹೇಳಿದ.

ಮರುದಿನವೆ ರಾಜಕುಮಾರಿ ಗುಜ್ಜರೆಕೆರೆಗೆ ತನ್ನ ವಿಶ್ವಾಸಿ ಗೊಲ್ಲರನ್ನು ಕಳುಹಿಸಿದಳು. ಸತ್ತ ಹಾವಿನ ಎಲುಬನ್ನು ತರಿಸಿದಳು. ಆ ಎಲುಬನ್ನು ಬಂಗಾರದ ಸರಪಳಿಗೆ ಸಿಕ್ಕಿಸಿ, ತನ್ನ ಕೊರಳಲ್ಲಿ ಧರಿಸಿಕೊಂಡಳು. ಎದೆಯೊಳಗೆ ನಾಗರಾಜನ ನೆನಪು, ಹೊರಗೆ ಆತನ ಎಲುಬು.

ಹೀಗೆ ಕೆಲವು ಕಾಲ ಕಳೆಯಿತು, ಅವರಿಗೊಂದು ಮಗುವಾಯಿತು. ಆದರೂ ರಾಣಿಗೆ ನಾಗರಾಜನ ನೆನಪು ಮಾಸಲಿಲ್ಲ. ರಾಜಕುಮಾರನಲ್ಲಿ ಪ್ರೀತಿ ಬೆಳೆಯಲಿಲ್ಲ. ಒಂದು ದಿನ ಅವಳು ಗಂಡನೊಡನೆ "ನಾನು ಒಂದು ಒಡಪು ಹೇಳುತ್ತೇನೆ. ಆ ಒಡಪನ್ನು ಏಳು ದಿನಗಳೊಳಗೆ ಬಿಡಿಸದಿದ್ದರೆ ನೀ ಸಾಯಬೇಕು–ಬಿಡಿಸಿದ್ದಾದರೆ ನಾನು ಸಾಯುವೆ" ಎಂದು ಹೇಳಿದಳು. ಹೆಂಡತಿಯ ಒತ್ತಾಯಕ್ಕೆ ರಾಜಕುಮಾರ ಒಪ್ಪಿದ.

ರಾಜಕುಮಾರಿ ಒಡಪನ್ನು ಹೇಳಿದಳು : "ಬಲದಲ್ಲಿ ಗಂಡ; ಎಡದಲ್ಲಿ ಮಗ; ನಡುವಿನಲ್ಲಿ ಮಿಂಡ" ರಾಜಕುಮಾರನಿಗೆ ಒಡಪಿನ ಅರ್ಥವಾಗಲಿಲ್ಲ.

ಒಂದು....ಎರಡು....ಮೂರು ದಿನಗಳು ಉರುಳಿದುವು. ರಾಜಕುಮಾರನಿಗೆ ಒಡಪಿನ ಅರ್ಥ ಆಗಲೇ ಇಲ್ಲ. ಹೆಂಡತಿಗೆ ಕೊಟ್ಟ ಮಾತಿನಂತೆ ರಾಜಕುಮಾರ ತಾನು ಸಾಯುವುದೆಂದೇ ನಿಶ್ಚಯಿಸಿಕೊಂಡ. ಸಾಯುವ ಮೊದಲು, ತನ್ನ ಮೊದಲ ತಂಗಿಯನ್ನೊಮ್ಮೆ ನೋಡುವ ಆಶೆಯಾಯಿತು. ಆತ ಓಲೆಯನ್ನು ಬರೆದು ವಿಚಾರ ತಿಳಿಸಿ. ಆಳಿನೊಡನೆ ಕೊಟ್ಟು ತಂಗಿಯನ್ನು ಬರುವಂತೆ ತಿಳಿಸಿದ.

ತಂಗಿಗೆ ಅಣ್ಣನ ಓಲೆಯನ್ನು ಓದಿ ದುಃಖವಾಯಿತು. ಆಕೆ ತನ್ನ ಏಳು ಮಕ್ಕಳನ್ನು ಕರಕೊಂಡು ಉಟ್ಟ ಬಟ್ಟೆಯಲ್ಲೇ ತವರೂರಿಗೆ ಹೊರಟಳು. ಆಕೆ ಮಕ್ಕಳನ್ನು ಕರೆದುಕೊಂಡು ನಡೆಯುತ್ತಾ ನಡೆಯುತ್ತಾ ಬರುವಾಗ ಒಂದೆಡೆ ಕತ್ತಲಾಯಿತು. ಅಲ್ಲಿಯೇ ದೊಡ್ಡದೊಂದು ಆಲದ ಮರ ಇತ್ತು. ಆ ಮರಕ್ಕೆ ಕಟ್ಟೆಯನ್ನು ಕಟ್ಟಿಸಿದ್ದರು. ಆಕೆ ತನ್ನ ಏಳು ಮಕ್ಕಳನ್ನು ಆ ಕಟ್ಟೆಯಲ್ಲಿ ಮಲಗಿಸಿ, ತಾನೂ ಮಲಗಿದಳು. ಮಕ್ಕಳು ನಿದ್ದೆ ಹೋದರು. ಅವಳಿಗೆ ನಿದ್ದೆಯೇ ಬರಲಿಲ್ಲ.

ಆ ಮರದ ಕಟ್ಟೆ ರಾತ್ರಿಯ ಹೊತ್ತಿನಲ್ಲಿ ಆ ಊರಿನ ಎಲ್ಲಾ ಮನೆಗಳ ದೀಪಗಳೂ ಸೇರುವ ಸ್ಥಳವಾಗಿತ್ತು. ರಾತ್ರಿಯಾಗುತ್ತಾ ಬರುತ್ತಿದ್ದಂತೆ ಆ ಊರಿನ ಎಲ್ಲಾ ಮನೆಗಳ ಬೆಳಕುಗಳೂ ಒಂದೊಂದೇ ಕಟ್ಟೆಗೆ ಬರತೊಡಗಿದವು. ಅಲ್ಲಿ ಸೇರಿ ಸಲ್ಲಾಪಿಸತೊಡಗಿದವು, ಆಯಾಯ ಮನೆಯ ಅಂದಂದಿನ ವಿಶೇಷವನ್ನು ಅವು ಪರಸ್ಪರ ಹೇಳತೊಡಗಿದವು. ಅರಮನೆಯ ಬೆಳಕು ರಾಜಕುಮಾರನಿಗೆ ಆತನ ಮಡದಿ ಹೇಳಿದ ಒಡಪನ್ನು ತಿಳಿಸಿ ಈ ತನಕವೂ ಆತನಿಗೆ ಅದರ ಅರ್ಥ ಆಗಿಲ್ಲವೆಂದೂ ಅದರಿಂದಾಗಿ ರಾಜಕುಮಾರ ನಾಳೆ ಸಂಜೆ ಸಾಯಲಿರುವನೆಂದೂ ತಿಳಿಸಿತು. ಉಳಿದ ಎಲ್ಲಾ ಬೆಳಕುಗಳೂ ಸೇರಿ, ಕುತೂಹಲದಿಂದ ಆ ಒಡಪಿನ ಅರ್ಥವೇನು ಎಂದು ಅರಮನೆಯ ಬೆಳಕನ್ನು ಕೇಳಿದವು. ಅರಮನೆಯ ಬೆಳಕು ಹೇಳಿತು. ಆ ಒಡಪು ಆ ಹೆಣ್ಣಿಗೇ ಸಂಬಂಧಪಟ್ಟುದು. ಬಲದಲ್ಲಿ ಗಂಡ ಎಂದರೆ ರಾಜಕುಮಾರ–ಆಕೆಯ ಪತಿ. ಎಡದಲ್ಲಿ ಮಗ ಎಂದರೆ ಆಕೆಯ ಮಗು. ನಡುವಿನಲ್ಲಿ ಮಿಂಡ ಎಂದರೆ ಆಕೆಯ ಎದೆಯಲ್ಲಿ ಇರುವ ನಾಗರಾಜನ ನೆನಪು ಮತ್ತು ಆಕೆ ತೂಗುಹಾಕಿಕೊಂಡಿರುವ ನಾಗರಾಜನ ಎಲುಬು. ಅರಮನೆಯ ಬೆಳಕಿನ ಮಾತು ಕೇಳಿ ಉಳಿದ ಎಲ್ಲಾ ಬೆಳಕುಗಳೂ ಗಹಗಹಿಸಿ ನಕ್ಕವು.

ಈ ಎಲ್ಲಾ ಮಾತುಕತೆಗಳನ್ನೂ ಕಟ್ಟೆಯ ಮೇಲೆ ಮಲಗಿದ್ದ ರಾಜಕುಮಾರನ ತಂಗಿ ಕೇಳಿದಳು. ಇನ್ನೂ ಕೋಳಿ ಕೂಗುವ ಮೊದಲೇ ಆಕೆ ಎದ್ದಳು. ಏಳು ಮಕ್ಕಳನ್ನೂ ಎಬ್ಬಿಸಿದಳು. ತವರು ಮನೆಯ ಕಡೆಗೆ ವೇಗವಾಗಿ ನಡೆದಳು.

ಅರಮನೆಗೆ ಬರುವಾಗ ಅರಮನೆ ಸೂತಕದ ಮನೆಯಂತೆ ಶೋಕಪೂರಿತವಾಗಿತ್ತು. ಆಳುಕಾಳುಗಳು ನಿರ್ಜೀವರಾಗಿದ್ದರು. ರಾಜಕುಮಾರ ಮುಸುಕೆಳೆದು ಮಂಚದಲ್ಲಿ ಮಲಗಿದ್ದ. ತಂಗಿ ಮಂಚದ ಬಳಿ ಬಂದಳು. ಅಣ್ಣನ ಸ್ಥಿತಿಯನ್ನು ಕಂಡಳು. ಅಣ್ಣನನ್ನು ಎಬ್ಬಿಸಿದಳು. ಮೈ ತೊಳೆಯಿಸಿದಳು. ಊಟ ಮಾಡಿಸಿದಳು. ಆ ಬಳಿಕ ಗುಟ್ಟಿನ ಮನೆಗೆ ಕರೆದೊಯ್ದು ಒಗಟಿನ ಅರ್ಥವನ್ನು ತಿಳಿಸಿದಳು.

ಒಗಟಿನ ಅರ್ಥ ಕೇಳಿ ರಾಜಕುಮಾರನಿಗೆ ಸಂತೋಷವಾಯಿತು. ಹೆಂಡತಿಯ ನಡತೆ ತಿಳಿದು ಅವಳ ಮೇಲೆ ಕೋಪ ಬಂತು. ತಡೆಯಲಾರದ ಕೋಪ ಬಂತು. ಆತ ಹೆಂಡತಿಯನ್ನು ಕರೆತರಿಸಿದ. ಒಗಟಿನ ಅರ್ಥವನ್ನು ಹೇಳಿದ. ಮತ್ತೆ ಒಮ್ಮೆಲೇ ಈಕೆಯ ತಲೆಯನ್ನು ಚಂದ್ರಾಯುಧದಿಂದ ಕತ್ತರಿಸಿದ."

'ಹೆಣ್ಣು ಮತ್ತು ಹಾವು' ಕಥೆಯ ತುಳುವಿನ ಮೂಲರೂಪದ ಸಂಪೂರ್ಣ ಕನ್ನಡ ಅನುವಾದವನ್ನು ಇಲ್ಲಿ ಕೊಡಲಾಗಿದೆ. ಇದನ್ನು ಬಂಟ್ವಾಳ ತಾಲೂಕಿನ ಮೊಡಂಕಾವು ಎಂಬಲ್ಲಿ 'ಮುಂಡಪ್ಪ' ಎಂಬ

ಹೆಂಗಸಿನಿಂದ (ಪ್ರಾಯ–83 ವರ್ಷ) ಸಂಗ್ರಹಿಸಲಾಗಿದೆ. ಈ ತುಳು ಜನಪದ ಕಥೆಯು ಸುಮಾರು 17 ಆಶಯಗಳುಳ್ಳ ಒಂದು ಸಂಕೀರ್ಣ ಕಥೆ.

"ಒಗಟು ಕಥೆ" (Riddle Story)ಯ ರೂಪದಲ್ಲಿ ಇರುವ ಈ ಕಥೆಯು ಬರೀ ಗಂಡು ಹೆಣ್ಣಿನ ಸಂಬಂಧದ ಬಗ್ಗೆ ಸಂಬಂಧಿಸಿದ್ದರೆ 850-999, Novelle (Romantic Tales) ವರ್ಗಗಳ ಗುಂಪಿಗೆ ಸೇರುತ್ತಿತ್ತು. ಆದರೆ ಇಲ್ಲಿ ಅತಿಮಾನುಷ ಸಂಗತಿಗಳೂ ಬರುವುದರಿಂದ ಇದನ್ನು "ಮಾಂತ್ರಿಕ ಕಥೆಗಳ" ವರ್ಗಕ್ಕೆ ಸೇರಿಸಬೇಕಾಗುತ್ತದೆ. "ಹೆಣ್ಣು ಮತ್ತು ಹಾವು" ಕಥೆಯನ್ನು ಹೋಲುವ ಕಥೆಗಳು ತುಳುವಿನಲ್ಲೂ ಕನ್ನಡದಲ್ಲೂ ಸಿಗುತ್ತವೆ.

'ಹೆಣ್ಣು ಮತ್ತು ಹಾವು' ಒಗಟು ಕಥೆಯು ಸುಮಾರು 17 ಆಶಯಗಳುಳ್ಳ ಒಂದು ಸಂಕೀರ್ಣ ಕಥೆ, ಈ ವರ್ಗದ ಎಲ್ಲಾ ಕಥೆಗಳಲ್ಲಿಯೂ ಇರುವ ಮುಖ್ಯ ಘಟನೆಗಳು ;

(1) ಹೆಂಡತಿಯು ಗಂಡನಿಗೆ ತಿಳಿಯದಂತೆ ಒಂದು ಹಾವಿನ ಜೊತೆಗೆ ಅನೈತಿಕ ಸಂಬಂಧವಿರಿಸಿಕೊಂಡಿರುವುದು (ಕೆಲವು ಪಾಠಗಳಲ್ಲಿ ಈ ಪ್ರೇಮಿಯು ಹಾವಿನ ರೂಪದ ಮನುಷ್ಯನಾಗಿರುತ್ತಾನೆ).

(2) ಗಂಡನು ಅಕಸ್ಮಾತ್ತಾಗಿ ಅರಿವಿಲ್ಲದೆಯೇ ಆ ಹಾವನ್ನು ಕೊಲ್ಲುವುದು;

(3) ಹೆಂಡತಿಯು ಆ ಹಾವಿನ ಮೂಳೆಗಳನ್ನು ಧರಿಸುವುದು (ಮೂಳೆಗಳ ಹುಡಿಯನ್ನು ತಿನ್ನುವ ಒಂದು ಪಾಠವೂ ತುಳುವಿನಲ್ಲಿ ಇದೆ);

(4) ಹೆಂಡತಿಯು ತನ್ನ ಮಿಂಡ, ಅವನ ಎಲುಬು ಮತ್ತು ತನ್ನ ಗಂಡನಿಗೆ ಸಂಬಂಧಿಸಿದಂತೆ ಗಂಡನಲ್ಲಿ ಒಂದು ಒಗಟು ಹೇಳುವುದು. ಅದಕ್ಕೆ ಉತ್ತರಿಸಲು ವಿಫಲನಾದರೆ ಗಂಡನು ಸಾಯಬೇಕೆಂಬ ಷರತ್ತನ್ನು ಒಡ್ಡುವುದು (ಬೆಂಕಿಗೆ, ಅಗ್ನಿಕೊಂಡಕ್ಕೆ ಬಿದ್ದು ಸಾಯಬೇಕು ಎನ್ನುವ ಪಾಠ ಹೆಚ್ಚು ಜನಪ್ರಿಯವಾಗಿದೆ.);

(5) ಗಂಡನು ಆ ಒಗಟನ್ನು ಉತ್ತರಿಸಲಾರದೆ, ಸಾಯಲು ಸಿದ್ಧವಾಗುವುದು. ಆದರೆ ಸಾಯುವ ಮೊದಲು ತಂಗಿಯನ್ನು ಕಾಣಲು ಅವಳ ಊರಿಗೆ ಹೇಳಿ ಕಳಿಸುವುದು.

(6) ಅಣ್ಣನನ್ನು ಕಾಣಲು ಬರುವ ತಂಗಿಗೆ ದಾರಿಯಲ್ಲಿ ಅಕಸ್ಮಾತ್ತಾಗಿ ಆ ಒಗಟಿನ ಉತ್ತರ ತಿಳಿಯುವುದು. (1) ಅವಳು ತಂಗಿದ್ದ ಮರದ ಮೇಲೆ ಬಂದು ಸೇರಿದ ಹಣತೆಗಳ ಮೂಲಕ ಎನ್ನುವುದು ತುಳು ಜನಪದ ಕಥೆಗಳಲ್ಲಿ ಜನಪ್ರಿಯವಾದ ಪಾಠ. (2) 'ತಂಗಿಯು ತಂಗಿದ್ದ ಮರದ ಮೇಲೆ ಕುಳಿತಿದ್ದ ಗಂಡಭೇರುಂಡಗಳ ಸಂಭಾಷಣೆಯಿಂದ' ಎಂದು ಕನ್ನಡ ಜನಪದ ಕಥೆಯ ಒಂದು ಪಾಠದಲ್ಲಿ ಇದೆ.

(7) ತಂಗಿಯು ಬಂದು ಒಗಟಿನ ಉತ್ತರವನ್ನು ಹೇಳಿ, ಅಣ್ಣನನ್ನು ಸಾಯುವುದರಿಂದ ಪಾರು ಮಾಡುವುದು. ಹೆಂಡತಿಯನ್ನು ಬೆಂಕಿಗೆ ಹಾಕುವುದರ ಮೂಲಕ ಶಿಕ್ಷಿಸುವುದು.

'ಹೆಣ್ಣು ಮತ್ತು ಹಾವು' ತುಳು ಜನಪದ ಕಥೆಯಲ್ಲಿ ಮೇಲಿನ ಎಲ್ಲ ಘಟನೆಗಳೂ ವಿವರವಾಗಿ ಬಂದಿವೆ. ಈ ಕಥೆಯ ವೈಶಿಷ್ಟ್ಯವೆಂದರೆ, ಗಂಡಹೆಂಡತಿಯರು ಒಂದೇ ದೇಹದ ಎರಡು ಭಾಗಗಳಿಂದ ಸೃಷ್ಟಿಯಾದವರು ಎಂಬ ಆಶಯ (A 1296. Multiplication of man by fragmentation). ಈ ರೀತಿ ಒಂದೇ ದೇಹದ ಎರಡು ಭಾಗಗಳಿಂದ ಹುಟ್ಟಿದ ಗಂಡು ಹೆಣ್ಣುಗಳ ತಾಯಿಯೂ ತನ್ನ ಗಂಡನಲ್ಲಿ ಪ್ರೀತಿಯಿಲ್ಲದೆ

ಬೇರೊಬ್ಬನೊಡನೆ ಕೂಡುತ್ತಿದ್ದಳು ಎಂದು ಈ ಕಥೆಯಲ್ಲಿ ಬರುತ್ತದೆ. ಆದ್ದರಿಂದ ಆ ಸ್ತ್ರೀಯ ಹೆಣದ ಒಂದು ಭಾಗದಿಂದ ಉತ್ಪನ್ನವಾದ ಹೆಣ್ಣು ಕೂಡಾ ಅದೇ ರೀತಿ ತನ್ನ ಗಂಡನಲ್ಲಿ ಪ್ರೀತಿ ಇಲ್ಲದೆ ಬೇರೊಬ್ಬನನ್ನು (ಇಲ್ಲಿ 'ನಾಗರಾಜ') ಕೂಡುತ್ತಿರುತ್ತಾಳೆ.

ಹೆಂಡತಿಯು ತನ್ನ ಮಿಂಡ ನಾಗರಾಜನೊಡನೆ ಸೇರಿ ತನ್ನ ಗಂಡನನ್ನು ಕೊಲ್ಲುವಂತೆ ಮಾಡುವ ಸಂಚು ಕೂಡಾ ಇಲ್ಲಿ ವಿಶಿಷ್ಟವಾಗಿದೆ. ತಾವರೆಯ ಬುಡದಲ್ಲಿ ಅವಿತುಕೊಂಡು ರಾಜಕುಮಾರನನ್ನು ಕೊಲ್ಲಲು ಬಯಸಿದ ನಾಗರಾಜನು ರಾಜಕುಮಾರನಿಂದಲೇ ಸಾಯುತ್ತಾನೆ. (ಇಲ್ಲಿ ತಾವರೆ ಹೂವು ಇರುವ ಕೆರೆ "ಗುಜ್ಜರಕೆರೆ" ಎಂದು ಹೇಳಲಾಗಿದೆ. ಇದು ಮಂಗಳೂರಿನಲ್ಲಿ ಇರುವ ಒಂದು ಕೆರೆ. ಇದರ ಹೆಸರು ತುಳುವಿನ ಪಾಡ್ದನಗಳಲ್ಲಿ, ಐತಿಹ್ಯಗಳಲ್ಲಿ ಬರುತ್ತದೆ, ಜನಪದ ಕಥೆಯೊಂದನ್ನು ಸ್ಥಳೀಯಗೊಳಿಸುವಲ್ಲಿ ಈ 'ಗುಜ್ಜರಕೆರೆ'ಯ ಹೆಸರು ನಂತರ ಬಂದಿರಬಹುದು).

ರಾಜಕುಮಾರಿ ಹೇಳಿದ ಒಗಟು–'ಬಲಡಲ್ಲಿ ಗಂಡ, ಎದದಲ್ಲಿ ಮಗ, ನಡುವಿನಲ್ಲಿ ಮಿಂಡ.' ಇದು ಹೆಚ್ಚು ಜನಪ್ರಿಯವಾದ ಇಂತಹ ಒಗಟಿನ ಪಾಠ. ಈ ಕಥೆಯಲ್ಲಿ ಗಂಡನು ಒಗಟನ್ನು ಬಿಡಿಸದಿದ್ದರೆ ಸಾಯುವ ವಿಧಾನವನ್ನು ಸ್ಪಷ್ಟವಾಗಿ ತಿಳಿಸಿದ. (ಅಗ್ನಿಕೊಂಡದ ಮಾತು ಇಲ್ಲಿ ಇಲ್ಲ,) ಕಥೆಯ ಕೊನೆಯಲ್ಲಿ ಗಂಡನು ಹೆಂಡತಿಯನ್ನು ಚಂದ್ರಾಯುಧದಿಂದ ಕಡಿದು ಕೊಲ್ಲುತ್ತಾನೆ. ಈ 'ಚಂದ್ರಾಯುಧ' ಎನ್ನುವುದು ತುಳು ಜನಪದ ಕಥೆಗಳಲ್ಲಿ ಸಾಮಾನ್ಯವಾಗಿ ರಾಜಕುಮಾರರ ಆಯುಧವಾಗಿ ಬರುತ್ತದೆ. ತುಳು ಪಾಡ್ದನಗಳಲ್ಲಿಯೂ ಅನೇಕ ಕಡೆ 'ಚಂದ್ರಾಯುಧ'ದ ಹೆಸರು ಬರುತ್ತದೆ. ಕನ್ನಡ ಜನಪದ ಕಥೆಗಳಲ್ಲಿಯೂ 'ಚಂದ್ರಾಯುಧ'ದ ಹೆಸರು ಪ್ರಯೋಗವಾಗಿದೆ,

'ಹೆಣ್ಣು ಮತ್ತು ಹಾವು' ಕಥೆಯಲ್ಲಿ ಒಗಟಿನ ಅರ್ಥವು ತಂಗಿಗೆ ತಾನು ವಿಶ್ರಮಿಸಿದ್ದ ಮರದ ಮೇಲೆ ಬಂದು ಸೇರಿದ ಹಣತೆಗಳ ಸಂಭಾಷಣೆಗಳ ಮೂಲಕ ತಿಳಿಯುತ್ತದೆ.

'ಹೆಣ್ಣು ಮತ್ತು ಹಾವು' ಕಥೆಯನ್ನು ಬಹಳವಾಗಿ ಹೋಲುವ. ಆದರೆ ಕಡಮೆ ವಿವರಗಳು ಉಳ್ಳ ಸಂಕ್ಷಿಪ್ತವಾದ ಒಂದು ಒಗಟು ಕಥೆ 'ಹಣತೆ'.

## (11) ಹಣತೆ

"ಒಂದೂರಿನಲ್ಲಿ ಗಂಡ-ಹೆಂಡತಿ ಇದ್ದರು. ಅವರಿಗೆ ಮಕ್ಕಳಿರಲಿಲ್ಲ. ಒಂದು ದಿನ ಹೆಂಡತಿ ಗುಡ್ಡಕ್ಕೆ ಹೋಗಿ ತರಗೆಲೆ ಆರಿಸುವಾಗ ಒಂದು ಸರ್ಪದ ಮರಿ ಅವಳಿಗೆ ಸಿಕ್ಕಿತು. ಅವಳು ಅದನ್ನು ಮಡಿಲಲ್ಲಿ ಹಾಕಿ ಕೊಂಡಳು. ಮಕ್ಕಳು ಮರಿ ಇಲ್ಲದವಳು ಅಲ್ಲವೇ? ಗಂಡನಿಗೆ ಈ ವಿಚಾರ ಗೊತ್ತಾಗಲಿಲ್ಲ. ಅವಳು ಆ ಸರ್ಪದ ಮರಿಯನ್ನು ಬಹಳ ಮುದ್ದಿನಿಂದ ಸಾಕಿದಳು, ಅದು ಬೆಳೆದು ದೊಡ್ಡದಾಯಿತು, ಇಷ್ಟರವರೆಗೂ ಅವಳ ಗಂಡನಿಗೆ ಆ ಸರ್ಪದ ಮರಿ ಇದ್ದುದು ಗೊತ್ತಾಗಲಿಲ್ಲ. ಅವಳು ಒಳಗಡೆ ಅಡಿಗೆ ಮಾಡುವಾಗ ಅದು ಅವಳ ಹತ್ತಿರವೇ ಆಡುತ್ತಾ, ಹೊರಳಾಡುತ್ತಾ, ಇರುತ್ತಿತ್ತು. ಒಂದು ದಿನ ಅವಳಿಗೆ ಒಂದು ಮದುವೆಗೆ ಹೋಗಬೇಕಾಯಿತು, ಅವಳು ಬಂದಳು. ಅವಳ ಕೆಲಸ ಮಾಡಿದಳು. ಗಂಜಿ ಮಾಡಿದಳು. ಗಂಜಿಯ ಮಡಕೆಯನ್ನು ಕೆಳಗೆ ಇಳಿಸಿದಳು. ಬಳಿಕ ಪಲ್ಯ ಮಾಡಿದಳು. ಆಗ ಸರ್ಪದ ಮರಿ ವೃತ್ತಾಕಾರವಾಗಿ ಒಲೆಯ

ಬಾಗಿಲಲ್ಲಿ ಮಲಗಿತ್ತು. ಅವಳು ಅಡಿಗೆ ಮಾಡುವಾಗ ಅದು ಯಾವಾಗಲೂ ಮಲಗಿಕೊಂಡಿರುತ್ತಿತ್ತು. ಅವಳಿಗೆ ಆ ದಿನ ಅದರ ಪರಿವೆಯೇ ಇರಲಿಲ್ಲ. ಅವಳು ಪಲ್ಯವನ್ನು ಇಳಿಸಿ, ವೃತ್ತಾಕಾರವಾಗಿದ್ದ ಹಾವಿನ ಮರಿಯನ್ನೇ ಮಡಕೆ ಇಡುವ ಸಿಂಬಿ ಎಂದು ಭಾವಿಸಿ, ಅದರ ಮೇಲೆ ಮಡಕೆಯನ್ನು ಇಟ್ಟಳು. ಬಳಿಕ ಅವಳು ಮದುವೆಗೆ ಹೋಗುವುದಕ್ಕಾಗಿ ಆಭರಣ ಕೇಳಲು ಹೋದಳು. ಆಭರಣ ಕೇಳಿ ಹಿಂದಿರುಗಿ ಬಂದಾಗ ಸರ್ಪದ ಮರಿ ಕಾಣಿಸಲಿಲ್ಲ. ಯಾವಾಗಲೂ ಆಟ ಆಡುತ್ತಾ ನಲಿಯುತ್ತಾ ಬರುತ್ತಿತ್ತು. ಇಂದು ಅವಳು ಬರುವಾಗ ಅದು ಅಲ್ಲಿ ಇರಲಿಲ್ಲ. ಎಲ್ಲಿ ಹೋಯಿತಪ್ಪಾ ಎಂದು ಹುಡುಕಿದಳು. ಹುಡುಕಿ, ಹುಡುಕಿ ಕೊನೆಗೆ ಪಲ್ಯದ ಮಡಕೆಯ ಹತ್ತಿರ ನೋಡುವಾಗ, ಅಲ್ಲಿ ಅದು ಸತ್ತು ಹೋಗಿತ್ತು, ಇದು ಸತ್ತಿದೆ ಎಂದು ಹೇಳಿ, ಅದನ್ನು ತಂದು ಕಲ್ಲಿನ ಒರಳಿನಲ್ಲಿ ಹಾಕಿದಳು, ಹಾಕಿ ಕುಟ್ಟಿದಳು. ಅದರ ಎಲುಬನ್ನು ಪೋಣಿಸಿ ಸೊಂಟದಲ್ಲಿ ಕಟ್ಟಿಕೊಂಡಳು, ಅದರ ಧೂಳನ್ನು ತೆಗೆದುಕೊಂಡು ಮುಕ್ಕಿದಳು. ತಿಂದು ಸುಮ್ಮನೆ ಕುಳಿತಳು. ಅಷ್ಟರಲ್ಲಿ ಅವಳ ಗಂಡ ಬಂದ. ಅವನು ಬಹಳ ಸಜ್ಜನ. ಅವನು ಬಂದಾಗ ಅವಳು ಹೇಳುತ್ತಾಳೆ,—''ನೋಡಿ ನಾನೊಂದು ಒಗಟು ಹೇಳುತ್ತೇನೆ, ಅದಕ್ಕೆ ಉತ್ತರ ಹೇಳಿದರೆ ಸರಿ. ಇಲ್ಲದಿದ್ದರೆ ನಾಳೆ ಹತ್ತು ಗಂಟೆಗೆ ನಿಮ್ಮ ತಲೆಗೆ ಅಪ್ಪಣೆ, ನಿಮ್ಮನ್ನು ಫಾಶಿಗೆ ಕೊಡುವುದು." ಅವಳು ಹೇಳಿದ ಒಗಟು ಏನೆಂದರೆ- ''ಸಾಕಿದ್ದೇನೆ ಸಲಹಿದ್ದೇನೆ, ಕುಟ್ಟಿದ್ದೇನೆ ಪೋಣಿಸಿದ್ದೇನೆ, ಮುಕ್ಕಿದ್ದೇನೆ, ಕಟ್ಟಿದ್ದೇನೆ.'' ಇದಕ್ಕೆ ಉತ್ತರಿಸಲು ಅವನಿಂದ ಆಗಲಿಲ್ಲ. ಎಷ್ಟೆಷ್ಟು ಸಭೆ ಕೂಡಿದರೂ ಅದಕ್ಕೆ ಉತ್ತರಿಸಲು ಸಾಧ್ಯವಾಗಲಿಲ್ಲ. ''ನಾಳೆ ನಿಮ್ಮನ್ನು ಹತ್ತು ಗಂಟೆಗೆ ಫಾಶಿಗೆ ಕೊಡುವುದು" ಎಂದು ಗಂಡನಿಗೆ ಹೇಳಿದಳು. ಆಗ ಅವನು ಹೇಳಿದ—''ನನ್ನನ್ನು ಫಾಶಿಗೆ ಕೊಡುವುದಕ್ಕೆ ನನಗೆ ಚಿಂತೆ ಇಲ್ಲ. ಆದರೆ ನನ್ನದೊಂದು ಚಿಕ್ಕ ಅರಿಕೆ ಇದೆ. ನನ್ನ ತಂಗಿಯನ್ನು ವಿಟ್ಲಕ್ಕೆ ಮದುವೆ ಮಾಡಿ ಕೊಟ್ಟದ್ದು. ಅವಳನ್ನು ನನಗೊಮ್ಮೆ ಕಣ್ಣಿನಿಂದ ನೋಡಬೇಕು. ಮತ್ತೆ ನನ್ನನ್ನು ಫಾಶಿಗೆ ಕೊಡಲು ಅಡ್ಡಿ ಇಲ್ಲ.'' ಹಾಗೆಯೇ ಅವನ ತಂಗಿಯಲ್ಲಿಗೆ ಜನ ಕಳುಹಿಸಿದ. ಅವನ ತಂಗಿಗೆ ಚಿಕ್ಕ ಚಿಕ್ಕ ಮಕ್ಕಳು, ಸಂಜೆ ಸಂಜೆ ಆಗುವಾಗ ಆ ಜನ ಹೋಗಿ ಅಲ್ಲಿಗೆ ಮುಟ್ಟಿತು. 'ಈ ರೀತಿ ಸಂಗತಿ, ನೀನು ಬರಬೇಕಂತೆ. ನಿನ್ನ ಅಣ್ಣನನ್ನು ಫಾಶಿಗೆ ಕೊಡುತ್ತಾರಂತೆ. ಎಂದು ಹೋದ ಆಳು ಹೇಳಿದ. ಇದನ್ನು ಕೇಳಿದೊಡನೆಯೇ ತಂಗಿ ತನ್ನ ಚಿಕ್ಕ ಚಿಕ್ಕ ಮಕ್ಕಳನ್ನು ಎತ್ತಿಕೊಂಡು ಅಣ್ಣನಲ್ಲಿಗೆ ಹೊರಟಳು. ಬಂದು ಬಂದು ಊರು ಹತ್ತಿರ ಆಗುವಾಗ ರಾತ್ರಿ ಆಯಿತು. ರಾತ್ರಿ ಆಯಿತು ಎಂದು ಅವಳು ಒಂದು ಅಶ್ವತ್ಥಕಟ್ಟೆಯಲ್ಲಿ ತಂಗಿದಳು. ''ಇನ್ನು ಎಲ್ಲಿ ಹೋಗುವುದು ಮಕ್ಕಳೇ. ನಾವು ಈಗ ಇಲ್ಲೇ ತಂಗುವ. ನನಗೆ ಅಣ್ಣನ ಮುಖವನ್ನು ನೋಡುವ ಭಾಗ್ಯ ಇದ್ದರೆ ಅವನನ್ನು ನೋಡುತ್ತೇನೆ.'' ಹೀಗೆಂದು ಆ ಮಕ್ಕಳ ಒಟ್ಟಿಗೆ ಆ ಅಶ್ವತ್ಥಕಟ್ಟೆಗೆ ಒರಗಿ ಕುಳಿತಳು, ಊರಲ್ಲಿರುವ ಹಣತೆಗಳೆಲ್ಲಾ ರಾತ್ರಿ ಹೊತ್ತು ಅಲ್ಲಿ ಒಟ್ಟು ಸೇರುತ್ತವೆ. ಆದರೆ ಆ ದಿನ, ಗಂಡನನ್ನು ಫಾಶಿಗೆ ಕೊಡುವ ಮನೆಯ ಹಣತೆ ಮಾತ್ರ ಬಂದಿರಲಿಲ್ಲ. ಅಲ್ಲಿ ಸೇರಿದ್ದ ಹಣತೆಗಳೆಲ್ಲಾ ತಮ್ಮಷ್ಟಕ್ಕೇ ಮಾತಾಡಿಕೊಂಡವು: ಈ ಹೆಂಗಸಿಗೂ ನಿದ್ರೆ ಬಂದಿರಲಿಲ್ಲ. ಮಕ್ಕಳೆಲ್ಲ ನಿದ್ರೆ ಮಾಡಿದ್ದವು. ಕಟ್ಟೆಯಲ್ಲಿದ್ದ ಹಣತೆಗಳು ಈ ರೀತಿ ಮಾತಾಡಿಕೊಂಡವು— "ಆ ಹಣತೆಯನ್ನು ನಾವು ಈ ಕಟ್ಟೆಗೆ ಬರಲು ಬಿಡಬಾರದು. ಅವನನ್ನು ನಮ್ಮ ಕುಟುಂಬಕ್ಕೆ ಸೇರಿಸಬಾರದು.''

ಈ ಕಡೆ ಅಣ್ಣನು ತಂಗಿಯನ್ನು ಕಾದ. ರಾತ್ರಿಯಾದರೂ ಅವಳು ಬಾರದಿದ್ದನ್ನು ಕಂಡು, ಹಣತೆಯನ್ನು ಆರಿಸಿದ. ಆ ಹಣತೆಯು ಕಟ್ಟೆಗೆ ಬಂದು ತಲುಪಿತು. 'ನೀನು ಕಟ್ಟೆಗೆ ಹತ್ತಬಾರದು, ಏನು ಇಷ್ಟು ತಡವಾದದ್ದು?" ಎಂದು ಉಳಿದ ಹಣತೆಗಳು ಅದನ್ನು ವಿಚಾರಣೆ ಮಾಡಿದವು. ಆಗ ಆ ಹಣತೆ ಹೇಳಿತು- "ನನ್ನನ್ನು ನೀವು ನಿಮ್ಮ ಕೂಟಕ್ಕೆ ಸೇರಿಸದಿದ್ದರೂ ಪರವಾ ಇಲ್ಲ. ನನ್ನ ಮೂರು ಮಾತುಗಳಿವೆ. ಅದನ್ನು ಹೇಳಿ ಬಿಡುತ್ತೇನೆ''. "ಏನು ಹೇಳು" ಎಂದುವು ಉಳಿದ ಹಣತೆಗಳು. ಆ ಹಣತೆ ಹೇಳಿತು—''ನಾನು ಇರುವ ಮನೆಯಲ್ಲಿ ಇಬ್ಬರು ಗಂಡ-ಹೆಂಡತಿ ಇದ್ದಾರೆ. ಹೆಂಡತಿಗೆ ಒಂದು ಸರ್ಪದ ಮರಿ ಇತ್ತು. ಅವಳು ಅದನ್ನು ಸಾಕುತ್ತಾ ಸಲಹುತ್ತಾ ಇದ್ದಳು. ಅವಳ ಕೈಯಲ್ಲೇ ಅದರ ಜೀವ

ಹೋಯಿತು'' —ಈ ರೀತಿ ಆರಂಭಿಸಿ ಎಲ್ಲಾ ಕತೆಯನ್ನೂ ಆ ಹಣತೆ ಹೇಳಿತು– ''ಅವನ ತಂಗಿಯನ್ನು ವಿಟ್ಲಕ್ಕೆ ಮದುವೆ ಮಾಡಿಕೊಟ್ಟಿದೆ. ಅವಳಿಗೆ ಚಿಕ್ಕ ಚಿಕ್ಕ ಮಕ್ಕಳು. ಅವಳಿಗೆ ಕರೆ ಹೋಗಿದೆ. ಅವಳಿಗಾಗಿ ಈಗ ಕಾಯುತ್ತಿದ್ದಾರೆ. ಈ ಕಾರಣದಿಂದ ಅವನನ್ನು ಫಾಶಿಗೆ ಕೊಡುವುದನ್ನು ಇವತ್ತಿಗೆ ತಡೆಹಿಡಿದಿದ್ದಾರೆ. ನಾಳೆ ಹತ್ತು ಗಂಟೆಗೆ ಫಾಶಿಗೆ ಕೊಡುವುದೆಂದು ತೀರ್ಮಾನಿಸಿದ್ದಾರೆ. ರಾತ್ರಿವರೆಗೆ ತಂಗಿಗಾಗಿ ಕಾದು, ಬಳಿಕ ನನ್ನನ್ನು ಆರಿಸಿದರು. ಹಾಗಾಗಿ ನಾನು ಬರುವುದು ತಡವಾಯಿತು.'' ಕಟ್ಟೆಯಲ್ಲಿ ಕುಳಿತಿದ್ದ ತಂಗಿಯು ಹಣತೆಯ ಈ ಮಾತುಗಳೆಲ್ಲವನ್ನೂ ಕೇಳಿದಳು, ಅಷ್ಟರಲ್ಲಿ ಬೆಳಗಾಯಿತು. ಬೆಳಗಾದಾಗ ಮಕ್ಕಳನ್ನು ಎತ್ತಿ ಕೊಂಡು, ಅಣ್ಣನ ಮನೆಗೆ ಹೊರಟಳು. ಬಂದು ಅಣ್ಣನ ಮನೆಗೆ ಮುಟ್ಟಿದಾಗ, ಅವಳ ಅತ್ತಿಗೆ ಅಂದರೆ ಅಣ್ಣನ ಹೆಂಡತಿ ಅವಳನ್ನು ಜೋರುಮಾಡಿದಳು, ''ಬರಲು ಏನು ಇಷ್ಟು ತಡವಾಯಿತು?'' ಎಂದು ಜೋರು ಮಾಡಿದಳು. ''ನನ್ನ ಚಿಕ್ಕ ಚಿಕ್ಕ ಮಕ್ಕಳನ್ನು ಕರೆದುಕೊಂಡು ಬರುವಾಗ ತಡವಾಯಿತು'' ಎಂದು ಇವಳು ಉತ್ತರ ಕೊಟ್ಟಳು. ''ಸರಿ ನೋಡಿ ಆಯಿತಲ್ಲ, ಇನ್ನು ಅವನನ್ನು ಫಾಶಿಗೆ ಕೊಡುವ" ಎಂದು ಹೆಂಡತಿ ಅವಸರ ಮಾಡಿದಳು. ಆಗ ಅವನ ತಂಗಿ ''ನಾನು ಮೂರು ಮಾತುಗಳನ್ನು ಹೇಳುತ್ತೇನೆ, ಆಮೇಲೆ ಬೇಕಾದರೆ ಅವನನ್ನು ಫಾಶಿಗೆ ಕೊಡಬಹುದು'' ಎಂದಳು. ಅದಕ್ಕೆ ಒಪ್ಪಿಗೆ ದೊರೆತಾಗ, ತನ್ನ ಅಣ್ಣನ ಹೆಂಡತಿಯ ವೃತ್ತಾಂತವೆಲ್ಲವನ್ನೂ ತಿಳಿಸಿದಳು. ಪೂರ್ತಿ ಸಂಗತಿ ಗೊತ್ತಾದಾಗ, ತುಂಬಿದ ಸಭೆ ಅವನ ಹೆಂಡತಿಯನ್ನೇ ಮೂರು ದಾರಿಗಳು ಸೇರುವಲ್ಲಿ ತಲೆ ಬೋಳಿಸಿ, ಅದರ ಮೇಲೆ ದೀಪವನ್ನು ಇಟ್ಟು, ಅವಳನ್ನು ಅಲ್ಲಿಯೇ ಬಿಟ್ಟರು, ಗಂಡನನ್ನು ಫಾಶಿಗೆ ಕೊಡುವುದನ್ನು ತಪ್ಪಿಸಿದರು.''

'ಹಣತೆ' ಎಂಬ ಈ ಕಥೆಯ ತುಳುವಿನ ಮೂಲರೂಪದ ಸಂಪೂರ್ಣ ಕನ್ನಡ ಅನುವಾದವನ್ನು ಇಲ್ಲಿ ಕೊಡ ಲಾಗಿದೆ. ಇದನ್ನು ಮಂಗಳೂರು ತಾಲೂಕಿನ ಕೊಣಾಜೆ ಗ್ರಾಮದ ಕಾಟಕೋಡಿಯ ಮದನು ಎಂಬ ಮೂಲ್ಯ ಜಾತಿಯ ಅನಕ್ಷರಸ್ಥ ಹೆಂಗಸಿನಿಂದ (ಪ್ರಾಯ 81 ವರ್ಷ — 1979ರಲ್ಲಿ) ಸಂಗ್ರಹಿಸಲಾಗಿದೆ. (ಸಂಗ್ರಹ 1974ರಲ್ಲಿ. ಆಗ ಅವಳ ಪ್ರಾಯ 75 ವರ್ಷ). ಮದನು ಈ ಕಥೆಯನ್ನು 10-12 ವರ್ಷಗಳಿದ್ದಾಗ ತನ್ನ ತಾಯಿ ಪೊನ್ನಕ್ಕುವಿನಿಂದ ಕಲಿತದ್ದು ಎಂದು ತಿಳಿಸಿದಳು. ಪೊನ್ನಕ್ಕುವಿನ ಊರು ಒರೆಕ್ಕಾಡಿ ಪಾವೂರು. ಮಂಜೇಶ್ವರ, ಕಾಸರಗೋಡು ತಾಲೂಕು. ಮದನು ಈ ಕಥೆಯನ್ನು ಪೊನ್ನಕ್ಕುವಿನಿಂದ ಕಲಿತದ್ದು ಸುಮಾರು 1910ರಲ್ಲಿ ಎಂದು ಭಾವಿಸಬಹುದು.

'ಹಣತೆ' ಎಂಬ ಈ ಕಥೆಯು ಮೇಲೆ ವಿವರಿಸಿದ 'ಹೆಣ್ಣು ಮತ್ತು ಹಾವು' ಎಂಬ ಕಥೆಯ ವರ್ಗದ್ದು. ಇಲ್ಲಿಯೂ ಅದೇ ರೀತಿ ಹೆಂಡತಿ - ಸರ್ಪದ ಸಂಬಂಧ, ಸರ್ಪಕ್ಕೆ ಸಂಬಂಧಿಸಿದಂತೆ ಹೆಂಡತಿಯು ಗಂಡನಿಗೆ ಒಗಟು ಹೇಳುವುದು, ಹಣತೆಗಳ ಮೂಲಕ ತಂಗಿಗೆ ಒಗಟಿನ ಉತ್ತರ ತಿಳಿಯುವುದು, ಹೆಂಡತಿಯನ್ನು ಕೊಲ್ಲುವುದು— ಈ ಮುಖ್ಯ ಘಟನೆಗಳು ಬರುತ್ತದೆ. 'ಹಣತೆ' ಕಥೆಯ ಪಾಠದಲ್ಲಿ ಸರ್ಪ ಮತ್ತು ಹೆಂಡತಿಯ ಅನೈತಿಕ ಸಂಬಂಧವು ಸ್ಪಷ್ಟವಾಗಿ ಇಲ್ಲ. ಹೆಂಡತಿಯು ಸರ್ಪದ ಮರಿಯನ್ನು ಸಾಕಿದಳು ಎಂದಷ್ಟೇ ಇದೆ. ಇಲ್ಲಿ ಗಂಡನು ಸರ್ಪವನ್ನು ಕೊಲ್ಲುವ ವಿಚಾರ ಬರುವುದಿಲ್ಲ. ಆಕಸ್ಮಾತ್ತಾಗಿ ಗೊತ್ತಿಲ್ಲದೆಯೇ ಹೆಂಡತಿಯ ಅಜಾಗ ರೂಕತೆಯಿಂದ ಸರ್ಪವು ಸಾಯುತ್ತದೆ. ಇಲ್ಲಿ ಸರ್ಪದ ಎಲುಬನ್ನು ಆಕೆ ಕಟ್ಟಿಕೊಳ್ಳುವುದರ ಜೊತೆಗೆಯೇ ಅದನ್ನು ಕುಟ್ಟಿ, ಪುಡಿ ಮಾಡಿ ಅದರ ಧೂಳನ್ನು ಮುಕ್ಕುತ್ತಾಳೆ. ಆದ್ದರಿಂದ ಅವಳ ಒಗಟಿನ ಸ್ವರೂಪವು ಇಲ್ಲಿ ಸ್ವಲ್ಪ ಭಿನ್ನವಾಗಿದೆ—"ಸಾಕಿದ್ದೇನೆ, ಸಲಹಿದ್ದೇನೆ; ಕುಟ್ಟಿದ್ದೇನೆ, ಪೋಣಿಸಿದ್ದೇನೆ; ಮುಕ್ಕಿದ್ದೇನೆ, ಕಟ್ಟಿದ್ದೇನೆ." ಗಂಡನ ತಂಗಿಯು ಒಗಟಿನ ಉತ್ತರವನ್ನು ಹಣತೆಗಳಿಂದ ತಿಳಿಯುವ ಕ್ರಮ ಹಿಂದಿನ ಕಥೆಯಂತೆಯೇ ಇದೆ. ಕಥೆಯಲ್ಲಿ ಒಗಟಿಗೆ ಉತ್ತರ ಹೇಳಲು ಅಸಾಧ್ಯವಾದುದಕ್ಕೆ ಶಿಕ್ಷೆ—ಫಾಶಿಗೆ ಕೊಡುವುದು. ಕಥೆಯ ಕೊನೆಯಲ್ಲಿ ಹೆಂಡತಿಯನ್ನು ಫಾಶಿಗೆ ಕೊಡುತ್ತಾರೆ.

ತುಳುವಿನ ಹೆಣ್ಣು ಮತ್ತು ಹಾವು ಹಾಗೂ ಹಣತೆ ಕಥೆಗಳನ್ನು ಹೋಲುವ ಕನ್ನಡ ಜನಪದ ಕಥೆಯೊಂದು ಪ್ರಕಟವಾಗದೆ. [1] ಈ 'ಅಗ್ನಿಕುಂಡ' ಎಂಬ ಕನ್ನಡ ಜನಪದ ಒಗಟು ಕಥೆ ಇಂತಹ ಕಥೆಗಳ ಎಲ್ಲ ಘಟನೆಗಳನ್ನೂ ಒಳಗೊಂಡಿದೆ. ಇಲ್ಲಿ ಹೆಂಡತಿಯ ಮಿಂಡನಾಗಿರುವ ಸರ್ಪವನ್ನು ಗಂಡನು ಆ ವಿಚಾರ ಗೊತ್ತಿಲ್ಲದೆಯೇ ಕೊಲ್ಲುತ್ತಾನೆ.

ಈ ವಿಚಾರ ತಿಳಿದ ಹೆಂಡತಿಯು ಹುಡುಗರಿಗೆ ಒಂದಾಣೆ ಕೊಟ್ಟು ಅವರನ್ನು ಬರೆಸಿ, ಅವರಿಗೆ ಎರಡಾಣೆ ಕೊಟ್ಟು ಸರ್ಪದ ಮೂಳೆಗಳನ್ನು ಪತ್ತೆ ಮಾಡಿಸಿ, ಅವರಿಗೆ ಮೂರಾಣೆ ಕೊಟ್ಟು ಆ ಮೂಳೆಗಳನ್ನು ತರಿಸಿ ನಾಲ್ಕಾಣೆ ಕೊಟ್ಟು ಆ ಮೂಳೆಗಳಿಂದ ತಾಯಿತಿ ಮಾಡಿಸಿ, ತೋಳಿಗೆ ಕಟ್ಟಿಕೊಳ್ಳುತ್ತಾಳೆ. ಆದ್ದರಿಂದಲೇ ಇಲ್ಲಿ ಹೆಂಡತಿಯು ಗಂಡನಿಗೆ ಹೇಳುವ ಒಗಟಿನ ಸ್ವರೂಪ ವಿವರಣಾತ್ಮಕವಾಗಿದೆ ಮತ್ತು ಪದ್ಯರೂಪದಲ್ಲಿದೆ :

"ಒಂದಾಣೆ ಕೊಟ್ಟು ಬರಿಸ್ತಿ ಎರಡಾಣೆ ಕೊಟ್ಟು ನೋಡಿಸ್ತಿ
ಮೂರಾಣೆ ಕೊಟ್ಟು ತರಿಸ್ತಿ ನಾಲ್ಕಾಣೆ ಕೊಟ್ಟು ಮಾಡಿಸ್ತಿ
ತೋಳಿನಲ್ಲಿ ಮಿಂಡ ತೊಡೆ ಮೇಲೆ ಗಂಡ
ಬಿಡಿಸಲಾರದವನಿಗೆ ಅಗ್ನಿಕೊಂಡ"

ಇಲ್ಲಿ ಒಗಟನ್ನು ಬಿಡಿಸದಿದ್ದರೆ ಅಗ್ನಿಕೊಂಡಕ್ಕೆ ಬೀಳುವ ಷರತ್ತು ಇರುತ್ತದೆ. ಒಗಟಿನ ಉತ್ತರವು ತಂಗಿಗೆ ಇಲ್ಲಿ ಗೊತ್ತಾಗುವುದು, ಆಕೆ ದಾರಿಯಲ್ಲಿ ತಂಗಿದ್ದ ಮರದ ಮೇಲೆ ಕುಳಿತ ಒಂದು ಗಂಡು ಮತ್ತು ಹೆಣ್ಣು ಗಂಡಭೇರುಂಡ ಹಕ್ಕಿಗಳ ಸಂಭಾಷಣೆಯ ಮೂಲಕ ಒಗಟಿನ ರಹಸ್ಯ ಬಯಲಾದಾಗ. ಇಲ್ಲಿ ಹೆಂಡತಿಗೆ ಅಗ್ನಿಕೊಂಡಕ್ಕೆ ಬೀಳುವ ಶಿಕ್ಷೆ ಸಿಗುತ್ತದೆ.

ತುಳು ಮತ್ತು ಕನ್ನಡದ ಇಂತಹ ಒಗಟು ಕಥೆಯನ್ನು ನೋಡಿದರೆ, ಇವುಗಳ ಮೂಲ ಕರ್ನಾಟಕದಲ್ಲಿ ಎಂಬ ಊಹೆಯನ್ನು ಮಾಡಬಹುದು. ಕರ್ನಾಟಕದಲ್ಲಿ ಇನ್ನೂ ಹೆಚ್ಚಿನ ಪಾಠಗಳು ಸಿಕ್ಕಿದಾಗ, ಈ ಕಥೆಯ ಮೂಲ ಮತ್ತು ಪ್ರಸರಣದ ಬಗ್ಗೆ ಹೇಳಲು ಸಾಧ್ಯವಾಗಬಹುದು.

## (12) ಜಾಣ ಮಂಗ

"ಒಬ್ಬ ಬಡವ. ಅವನು ಒಂದು ಮಂಗವನ್ನು ಕೊಂಡುಕೊಳ್ಳುವುದು, ಅದು ಅವನಿಗೆ ಮದುವೆ ಮಾಡಿಸುತ್ತೇನೆ ಎನ್ನುವುದು. ಆ ಮಂಗ ಒಬ್ಬ ರಾಜನ ಆಸ್ಥಾನಕ್ಕೆ ಹೋಗಿ, 'ನಮ್ಮ ಊರಿನಲ್ಲಿ ಒಬ್ಬ ರಾಜ ಇದ್ದಾನೆ, ಅವನಿಗೆ ನಿನ್ನ ಮಗಳನ್ನು ಮದುವೆ ಮಾಡಿಕೊಡುತ್ತೀಯೋ?" ಎಂದು ಕೇಳುವುದು, ರಾಜನು ಮಂಗನ ಮಾತನ್ನು ಲಘುವಾಗಿ ಪರಿಗಣಿಸಿ, ಒಂದು ನಿಶ್ಚಿತ ದಿನದಂದು ಬರಲು ಹೇಳುವುದು, ತನ್ನ ಯಜಮಾನನು ರಾಜಕುಮಾರಿಯಲ್ಲಿಗೆ ಹೋಗುವಾಗ ಒಳ್ಳೆಯ ವಸ್ತ್ರಭೂಷಣಗಳು ಬೇಕೆಂದು ಮಂಗವು ಉಪಾಯದಿಂದ ಒಂದು ಅಂಗಡಿಗೆ ಹೋಗಿ, ಬಂಗಾರ ವಸ್ತ್ರ ಮುಂತಾದುವನ್ನು ಕದ್ದು ತಂದು ಕೊಡುವುದು. ಈ ವೇಷ ಭೂಷಣಗಳಿಂದ ಯಜಮಾನ ಮತ್ತು ಮಂಗ ಕತ್ತಲೆ ಮಾಡಿಕೊಂಡು ರಾಜನ ಅರಮನೆಗೆ ಹೋಗುವುದು. ಹೋಗುವಾಗ ಮಂಗವು ನರಿಗಳ ಒಂದು ಹಿಂಡನ್ನು ಕರೆದುಕೊಂಡು ಬರುವುದು. ಅರಮನೆ ಹತ್ತಿರವಾಗುವಾಗ, ನರಿಗಳ ಬಾಲಕ್ಕೆ ಬಟ್ಟೆ ಸುತ್ತಿ ಎಣ್ಣೆ ಹೊಯ್ದು, ಬೆಂಕಿ ಉರಿಸುವುದು. ಅವುಗಳನ್ನು ಸ್ವಲ್ಪ ದೂರದಲ್ಲಿ ನಿಲ್ಲಿಸಿ, ಮಂಗವು ಅರಮನೆಗೆ ಹೋಗಿ ನೋಡುವಾಗ, ರಾಜನು ಮದುವೆಗೆ ಸಿದ್ಧವಾಗದೆ ಇರುವುದನ್ನು ನೋಡಿ, ರಾಜನಲ್ಲಿ "ನಮ್ಮ ದಿಬ್ಬಣ ಬರುತ್ತಿದೆ" ಎಂದು ನರಿಗಳ ಬೆಂಕಿಯನ್ನು ತೋರಿಸುವುದು. ಗಡಿಬಿಡಿಗೊಂಡ ರಾಜನಲ್ಲಿ ಮಂಗವು "ನೀವೇನೂ ಹೆದರಬೇಡಿ" ನಾನು ಮತ್ತು ಮದುಮಗ ಇಬ್ಬರೇ ಈಗ ಬರುತ್ತೇವೆ. ಮದುವೆಯನ್ನು ಸರಳವಾಗಿ ಮುಗಿಸಿಬಿಡುವ" ಎಂದು ಉಪಾಯ ಹೇಳುವುದು. ಮದುವೆಯಾದ ಮೇಲೆ, ಮದುಮಗನನ್ನು ಮದುಮಗಳು ಮತ್ತು ಅವಳ ಪರಿವಾರ ಸಹಿತ ಕಾಡಿನಲ್ಲಿ ಕರೆದುಕೊಂಡನ ಬರುವುದು. ರಾತ್ರಿಯಾದಾಗ ಮಂಗವು ಕಾಡಿನಲ್ಲಿ ರಾಮಧ್ಯಾನ ಮಾಡಿ, ರಾಮದೇವರನ್ನು ಸ್ಮರಿಸುವುದು. ಪ್ರತ್ಯಕ್ಷವಾದ ರಾಮದೇವರಲ್ಲಿ ಒಂದು ರಾತ್ರಿಯ ಮಟ್ಟಿಗೆ ತಾತ್ಕಾಲಿಕವಾಗಿ ಅರಮನೆ ಮತ್ತು ವೈಭವ

1. ರಾಗೌ. : (ಸಂ) ಅಗ್ನಿಕೊಂಡ ಕರ್ನಾಟಕ ಜನಪದ ಕಥೆಗಳು, ಮೈಸೂರು 1970. ಪುಟ 193–194

ಕೇಳುವುದು. ಆ ರೀತಿ ಸಿಕ್ಕಿದ ಅರಮನೆಯಲ್ಲಿ ಆ ರಾತ್ರಿ ಕಳೆಯುವುದು. ಬೆಳಿಗ್ಗೆ ಎಲ್ಲವೂ ಮಾಯವಾಗಿ ಬರೇ ಗುಡ್ಡದಲ್ಲಿ ಅವರು ಉಳಿಯುವುದು. ಆಗ ಮಂಗವು ಆಶ್ಚರ್ಯವನ್ನು ನಟಿಸಿ, ರಾಜನಲ್ಲಿ 'ನಿಮ್ಮ ಮಗಳನ್ನು ಮದುವೆಯಾದುದರಿಂದ ನನ್ನ ಯಜಮಾನನ ಅರಮನೆ, ಸಂಪತ್ತೆಲ್ಲವೂ ಮಾಯವಾಯಿತು' ಎಂದು ಗದರಿಸುವುದು. ಅದು ಸತ್ಯವೆಂದೇ ನಂಬಿದ ರಾಜ, ಅದಕ್ಕೆ ಸಮಾಧಾನ ಹೇಳಿ, ತನ್ನ ಅರ್ಧರಾಜ್ಯವನ್ನೂ ಅರಮನೆಯನ್ನೂ ಆ ಮದುಮಗನಿಗೆ ಕೊಡುವುದು. ಅವನು ಮಂಗನ ಉಪಚಾರಕ್ಕಾಗಿ ಅದಕ್ಕೆ ದೇವರ ರೀತಿಯಲ್ಲಿ ನಮಸ್ಕರಿಸುವುದು.

'ಜಾಣ ಮಂಗ' ಎಂಬ ತುಳು ಜನಪದ ಕಥೆಯ ಸಂಕ್ಷಿಪ್ತ ಕನ್ನಡ ರೂಪಾಂತರವನ್ನು ಇಲ್ಲಿ ಕೊಡಲಾಗಿದೆ. ಮೂಲ ತುಳುರೂಪವು ಈ ಕನ್ನಡ ರೂಪಾಂತರದ ಎರಡು ಪಟ್ಟು ದೀರ್ಘವಾಗಿದೆ. ವಸ್ತುವಿನ ದೃಷ್ಟಿಯಿಂದ ಜಾಣ ಮಂಗ ಕಥೆಯು ಮಾಂತ್ರಿಕ ಕಥೆಗಳಲ್ಲಿ 500-559 ಅತಿ ಮಾನುಷ ಸಹಾಯಕರು (Supernatural Helpers) ಎಂಬ ವರ್ಗಗಳ ಗುಂಪಿಗೆ ಸೇರುತ್ತದೆ. ಇದೇ ರೀತಿಯ ಇನ್ನೊಂದು ತುಳುಕಥೆ 'ದೂಮನ ಮದುವೆ'ಯನ್ನು ಮುಂದೆ ಕೊಡಲಾಗಿದೆ. ಈ ಕಥೆಗಳು ಸ್ಪಷ್ಟವಾಗಿ ವರ್ಗ 545 ಬಿ 'Puss in Boots' ಎನ್ನುವ ಕಥಾವರ್ಗವನ್ನು ಹೋಲುತ್ತವೆ.

'ಜಾಣ ಮಂಗ' ಕಥೆಯಲ್ಲಿ ಮಂಗವು ಸಹಾಯಕ ಪ್ರಾಣಿ (Helpful animal) ಯಾಗಿ ಬರುತ್ತದೆ. ಇಲ್ಲಿ ಮಂಗವು ಜಾಣತನದಿಂದ ತನ್ನ ಒಡೆಯನಿಗೆ ರಾಜನ ಮಗಳನ್ನು ಮದುವೆ ಮಾಡಿಸುವ ವಸ್ತು ಇದೆ. ಇಲ್ಲಿನ ಮುಖ್ಯ ಘಟನೆಗಳು :

1. ಸಹಾಯಕ ಮಂಗವು ರಾಜನೊಬ್ಬನಲ್ಲಿಗೆ ಹೋಗಿ ತನ್ನ ಒಡೆಯನನ್ನು ಶ್ರೀಮಂತನೆಂದು ಹೇಳಿ ರಾಜಕುಮಾರಿಯನ್ನು ಆತನಿಗೆ ವಿವಾಹಮಾಡಿಸಲು ಹೇಳುವುದು.

2. ಮಂಗವು ಅಂಗಡಿಯಿಂದ ಕದ್ದು ತಂದ ವಸ್ತ್ರಾಭರಣಗಳ ಮೂಲಕ, ನರಿಗಳ ಬಾಲದ ಕೊಳ್ಳಿಯ ಮೂಲಕ ತನ್ನ ಒಡೆಯನ ವೈಭವವನ್ನು ರಾಜನಿಗೆ ಭ್ರಮೆ ಬರಿಸುವಂತೆ ಅಭಿಪ್ರಾಯ ಮೂಡಿಸುವುದು.

3. ಮಾಂತ್ರಿಕತೆಯಿಂದ ಮಂಗವು ತಾತ್ಕಾಲಿಕ ಅರಮನೆಯನ್ನು ನಿರ್ಮಿಸುವುದು.

4. ಮಂಗದ ಒಡೆಯ ಮತ್ತು ರಾಜಕುಮಾರಿಯರ ಮದುವೆಯ ಬಳಿಕ, ಮರುದಿನ ಮಾಂತ್ರಿಕ ಅರಮನೆ ಮಾಯವಾಗುವುದು. ರಾಜಕುಮಾರಿಯನ್ನು ತನ್ನ ಒಡೆಯ ಮದುವೆಯಾದ ದುರದೃಷ್ಟದಿಂದ ಅರಮನೆ, ಸಂಪತ್ತು ಮಾಯವಾಯಿತು ಎಂದು ಮಂಗವು ರಾಜನನ್ನು ನಂಬಿಸುವುದು. ರಾಜನು ತನ್ನ ಅರಮನೆ, ರಾಜ್ಯದಲ್ಲಿ ಮಂಗದ ಒಡೆಯನಿಗೆ ಪಾಲು ಕೊಡುವುದು. 'ಜಾಣ ಮಂಗ' ಕಥೆಯನ್ನು ಬಹಳವಾಗಿ ಹೋಲುವ 'ದೂಮನ ಮದುವೆ' ಕಥೆಯ ಸಂಕ್ಷಿಪ್ತ ಕನ್ನಡ ರೂಪಾಂತರ ಈ ರೀತಿ ಇದೆ :

## (13) ದೂಮನ ಮದುವೆ

ಒಂದು ಊರಿನಲ್ಲಿ ದೂಮ ಎನ್ನುವ ಒಬ್ಬ ಬಡವನಿದ್ದನು. ಅವನಿಗೆ ಮದುವೆಯಾಗಲು ಮನಸ್ಸಿದ್ದರೂ ಕೈಯಲ್ಲಿ ಹಣವಿರಲಿಲ್ಲ. ಅವನು ಹಣವನ್ನು ಸಂಪಾದಿಸುವುದಕ್ಕಾಗಿ ಸೌತೆಕಾಯಿ ನೆಟ್ಟು ಬೆಳೆಸುತ್ತಿದ್ದ. ಅದನ್ನು ಒಂದು ನರಿಯು ಕದ್ದುಕೊಂಡು ಬಂದು ತಿನ್ನುತ್ತಿತ್ತು. ದೂಮನು ಅದನ್ನು ಹಿಡಿಯುವುದಕ್ಕಾಗಿ ಒಂದು ಬೆರ್ಚಪ್ಪ (ಬೆದರುಗೊಂಬೆ) ನನ್ನು ಮಾಡಿ, ಅದಕ್ಕೆ ಮಯಣ ಅಂಟಿಸಿ ಇಟ್ಟನು.

ಸೌತೆಕಾಯಿ ಕದಿಯಲು ಬಂದ ನರಿಯು ಬೆರ್ಚಪ್ಪನ ಮಯಣಕ್ಕೆ ಅಂಟಿಕೊಂಡು ಸಿಕ್ಕಿಬಿತ್ತು. ದೂಮನು ಆ ನರಿಯನ್ನು ಕೊಲ್ಲಲು ಬಂದಾಗ, ಅದು "ನಿನಗೆ ನಾನು ಮದುವೆ ಮಾಡಿಸುತ್ತೇನೆ" ಎಂದು ಅವನಿಗೆ ಮಾತು ಕೊಟ್ಟಿತು. ಆ ನರಿಯು ನೆರೆಯೂರಿನ ಒಬ್ಬ ಗುತ್ತಿನವನ(ಶ್ರೀಮಂತ) ಬಳಿಗೆ ಹೋಗಿ, 'ನನ್ನ ಧನಿಗೆ ಚಿನ್ನವನ್ನು ಅಳೆಯಲು ನಿಮ್ಮ ಕಳಸಿಗೆಯನ್ನು ಕೊಡಿರಿ' ಎಂದು ಹೇಳಿ ಕಳಸಿಗೆಯನ್ನು ತೆಗೆದುಕೊಂಡಿತು. ಅದರ ತಳಕ್ಕೆ ಸ್ವಲ್ಪ ಮಯಣ ಹಚ್ಚಿ, ಅದಕ್ಕೆ ದೂಮಣ್ಣನ ಸೌತೆ ಮಾರಿದ ಹಣದಿಂದ ಎರಡು ಚಿನ್ನದ ನಾಣ್ಯಗಳನ್ನು ತೆಗೆದು ಕೊಂಡು ಹಚ್ಚಿತು. ಅದನ್ನು ಗುತ್ತಿನವನಿಗೆ ಹಿಂದಕ್ಕೆ ಕೊಟ್ಟಾಗ, ಆ ಚಿನ್ನದ ನಾಣ್ಯಗಳನ್ನು ನೋಡಿದ ಅವನು ನರಿಯ ಧನಿಯು ದೊಡ್ಡ ಶ್ರೀಮಂತನೆಂದು ಭಾವಿಸಿದನು. ಆದ್ದರಿಂದ ತನ್ನ ಮಗಳನ್ನು ದೂಮನಿಗೆ ಕೊಡಲು ನರಿಯ ಮೂಲಕ ಸಂಧಾನ ನಡೆಸಿದನು. ಮದುವೆಯನ್ನು ಬೇಗನೆ ನಡೆಸಬೇಕೆಂದು ನಿರ್ಧರಿಸಿದ ನರಿಗೆ ಮತ್ತು ದೂಮನಿಗೆ ತಮ್ಮ ಅಂತಸ್ತು, ನಿಜಸಂಗತಿ ಗೊತ್ತಾಗುತ್ತದೆ ಎಂದು ಭಯವಾಯಿತು. ನರಿಯು ಒಬ್ಬ ಋಷಿಯಲ್ಲಿಗೆ ಹೋಗಿ, ಅವನನ್ನು ಬೇಡಿ ಮರ್ಯಾದೆ ಉಳಿಸುವುದಕ್ಕಾಗಿ ಮೂರು ಮಾಂತ್ರಿಕ ಕಲ್ಲುಗಳನ್ನು ತಂದಿತು. ಮದುವೆಯ ದಿನ ನರಿಯು ಗುಡ್ಡದಲ್ಲಿ ನಿಂತು, ಮೂರು ಮಾಂತ್ರಿಕ ಕಲ್ಲುಗಳಿಂದ ಅರಮನೆ ಸಂಪತ್ತು ಮತ್ತು ವಸ್ತ್ರಾಭರಣಗಳನ್ನು ನಿರ್ಮಿಸಿ, ವೈಭವದಿಂದ ದೂಮನ ಮದುವೆ ಮಾಡಿಸಿತು. ಋಷಿಯ ಮಾಂತ್ರಿಕತೆಯಂತೆ ಬೆಳಿಗ್ಗೆ ಆಗುವಾಗ ಈ ಅರಮನೆ, ಸಂಪತ್ತು ಎಲ್ಲಾ ಮಾಯವಾಯಿತು. ಆಗ ನರಿಯು ಉಪಾಯಮಾಡಿ, ಗುತ್ತಿನವನಲ್ಲಿ "ನಿಮ್ಮ ಮಗಳು ನಮ್ಮ ಧನಿಯ ಕೈಹಿಡಿದುದರಿಂದ ನಮಗೆ ಈ ಅನಿಷ್ಟ ಬಂತು. ನಮ್ಮ ಸಂಪತ್ತೆಲ್ಲಾ ನಿಮ್ಮ ಮಗಳಿಂದ ಮಾಯವಾಯಿತಲ್ಲಾ" ಎಂದು ನಟನೆಯ ಗೋಳಿಟ್ಟಿತು. ಗುತ್ತಿನವನು ತನ್ನ ಆಸ್ತಿ ಮನೆಗಳನ್ನು ದೂಮನಿಗೆ ಕೊಟ್ಟನು.

'ದೂಮನ ಮದುವೆ' ಕಥೆಯೂ 'ಜಾಣ ಮಂಗ' ಕಥೆಯ ಎಲ್ಲ ಪ್ರಮುಖ ಘಟನೆಗಳನ್ನು ಒಳಗೊಂಡಿದೆ. ಅಲ್ಲಿ ಮಂಗವು ಸಹಾಯಕ ಪ್ರಾಣಿಯಾಗಿ ತನ್ನ ಒಡೆಯನಿಗೆ ರಾಜನ ಮಗಳನ್ನು ಜಾಣತನದಿಂದ ಮದುವೆ ಮಾಡಿಸಿದರೆ, ಈ ಕಥೆಯಲ್ಲಿ ನರಿಯು ಸಹಾಯಕ ಪ್ರಾಣಿಯಾಗಿ ತನ್ನ ಒಡೆಯನಿಗೆ (ಅವನ ಹೆಸರು 'ದೂಮ') ಗುತ್ತಿನವನ (ಶ್ರೀಮಂತ) ಮಗಳನ್ನು ಉಪಾಯದಿಂದ ಮದುವೆ ಮಾಡಿಸುತ್ತದೆ. ಈ ಎರಡು ಕಥೆಗಳ ಕೆಲವು ವಿವರಗಳಲ್ಲಿ ವ್ಯತ್ಯಾಸಗಳಿವೆ. 'ದೂಮನ ಮದುವೆ' ಕಥೆಯಲ್ಲಿ ಸೌತೆಕಾಯಿ ಕದಿಯಲು ಬಂದ ನರಿ ಸಿಕ್ಕಿಬಿದ್ದು, ದೂಮನಿಗೆ ಮದುವೆ ಮಾಡಿಸುವ ಕೆಲಸಕ್ಕೆ ತೊಡಗುತ್ತದೆ. ಶ್ರೀಮಂತನಿಗೆ ತನ್ನ ಒಡೆಯನು ಶ್ರೀಮಂತನೆಂದು ತೋರಿಸಲು, ಇಲ್ಲಿ ನರಿಯು ಮಾಡುವ ಉಪಾಯವು ಭಿನ್ನವಾಗಿದೆ : ಕಳಸಿಗೆಯ ಅಡಿಗೆ ಮಯಣ ಹಚ್ಚಿ, ಅದಕ್ಕೆ ಚಿನ್ನದ ನಾಣ್ಯಗಳನ್ನು ಅಂಟಿಸಿ, ಶ್ರೀಮಂತನೆಂದು ನಟಿಸುವುದು. 'ಜಾಣ ಮಂಗ' ಕಥೆಯಲ್ಲಿ ಮಂಗವು ರಾಮಧ್ಯಾನ ಮಾಡಿ, ರಾಮದೇವರನ್ನು ಪ್ರಾರ್ಥಿಸಿ, ಮಾಂತ್ರಿಕ ಅರಮನೆ, ಸಂಪತ್ತನ್ನು ಪಡೆಯುತ್ತದೆ. (ಮಂಗಗಳು ರಾಮದೇವರ ಭಕ್ತರು ಎಂಬ ರಾಮಾಯಣದ ಕಲ್ಪನೆಯ ಪ್ರಭಾವ ಇರಬಹುದು). "ದೂಮನ ಮದುವೆ" ಕಥೆಯಲ್ಲಿ ನರಿಯು ಋಷಿಯಲ್ಲಿ ಬೇಡಿ, ಮಾಂತ್ರಿಕ ಕಲ್ಲುಗಳಿಂದ ಅರಮನೆ ಸಂಪತ್ತು ನಿರ್ಮಿಸುತ್ತದೆ. ಉಳಿದ ವಿವರಗಳಲ್ಲಿ ಹೆಚ್ಚಿನ ವ್ಯತ್ಯಾಸ ಕಂಡು ಬರುವುದಿಲ್ಲ. ಈ ಎರಡು ಕಥೆಗಳೂ ಒಂದೇ ಕಥಾವರ್ಗದ ಭಿನ್ನರೂಪಗಳು ಎನ್ನುವುದು ಸ್ಪಷ್ಟವಾಗುತ್ತದೆ.

ಈ ಕಥೆಗಳನ್ನು ಹೋಲುವ ಕಥಾವರ್ಗ— 545 B 'Puss in Boots' ಇಲ್ಲಿ ಬೆಕ್ಕು ಸಹಾಯಕ ಪ್ರಾಣಿಯಾಗಿ ಬರುತ್ತದೆ. ಸಹಾಯಕನ ಬೆಕ್ಕು ಅದ್ಭುತ ಶಕ್ತಿಯುಳ್ಳದ್ದು ಆಗಿರುತ್ತದೆ. ಆ ಬೆಕ್ಕು ಅವನನ್ನು ಒಂದು ಅರಮನೆಗೆ ಕೊಂಡು ಹೋಗಿ, ಅಲ್ಲಿನ ರಾಜನಲ್ಲಿ ಈತನು ಒಬ್ಬ ರಾಜಕುಮಾರ ಎಂದು ತಿಳಿಸುತ್ತದೆ. ತನ್ನ ಒಡೆಯನಿಗಾಗಿ ಆ ಬೆಕ್ಕು ರಾಜಕುಮಾರಿಯೂ ಅವನನ್ನು ಮೋಹಿಸುವಂತೆ ಮಾಡುತ್ತದೆ. ರಾಜನು ನಾಯಕನ ಅರಮನೆ ನೋಡಬೇಕೆಂದು ಬಂದಾಗ, ತಮ್ಮ ತಮ್ಮ ಹೊಲಗಳಲ್ಲಿ ಕೆಲಸ ಮಾಡುತ್ತಿದ್ದ ರೈತರಲ್ಲಿ

ಬೆಕ್ಕು 'ನೀವೆಲ್ಲರೂ ನನ್ನ ಒಡೆಯನಿಗಾಗಿ ಕೆಲಸ ಮಾಡುವವರು" ಎಂದು ರಾಜನಿಗೆ ತಿಳಿಸಬೇಕೆಂದು ಹೇಳಿ, ಆ ರೀತಿ ಮಾಡಿಸುತ್ತದೆ. ಬೆಕ್ಕು ಒಬ್ಬ ದೈತ್ಯನ ಅರಮನೆಗೆ ಹೋಗಿ, ಉಪಾಯದಿಂದ ದೈತ್ಯನನ್ನು ಕೊಂದು, ಅವನ ಅರಮನೆಯನ್ನೇ ತನ್ನ ಒಡೆಯನ ಅರಮನೆಯೆಂದು ರಾಜನಿಗೆ ತೋರಿಸುತ್ತದೆ. ಆ ಮೂಲಕ ರಾಜ ಕುಮಾರಿಯೊಡನೆ ತನ್ನ ಒಡೆಯನ ಮದುವೆ ನೆರವೇರಿಸುತ್ತದೆ. ಕೊನೆಯಲ್ಲಿ ಬೆಕ್ಕಿನ ತಲೆಯನ್ನು ಕತ್ತರಿಸಿದಾಗ ಅದರ ರೂಪ ಬದಲಾವಣೆಯಾಗಿ, ಒಬ್ಬ ರಾಜಕುಮಾರನು ತನ್ನ ಪೂರ್ವ ರೂಪವನ್ನು ಪಡೆಯುತ್ತಾನೆ.

ಈ ಕಥಾವರ್ಗವು (545 B) ಜಗತ್ತಿನ ಹೆಚ್ಚಿನ ದೇಶಗಳಲ್ಲಿ ಸಿಗುತ್ತದೆ. ಭಾರತದಲ್ಲಿ ಬಹಳ ಜನ ಪ್ರಿಯವಾಗಿರುವ ಈ ಕಥಾವರ್ಗವು ಇತರ ದೇಶಗಳಿಗೆ ಪ್ರಸರಣಗೊಂಡಿರಬಹುದು ಎಂಬ ಅಭಿಪ್ರಾಯವನ್ನು ಸ್ಟಿತ್ ಥಾಮ್ಸನ್ ಕೊಟ್ಟಿದ್ದಾರೆ.[1] ಈ ಕಥಾವರ್ಗವು ಸಾಹಿತ್ಯಕ ಪರಂಪರೆಗಳಲ್ಲಿಯೂ ಸಿಗುತ್ತದೆ. ಸಹಾಯಕ ಪ್ರಾಣಿಯು ಬೇರೆಯಾಗುವುದು ಭಿನ್ನಪಾಠಗಳ ವೈಶಿಷ್ಟ್ಯ.

## (14) ಉಗುರಿನ ಮರ

"ಒಂದೂರಿನ ಅರಸನಿಗೆ ಒಬ್ಬಳು ಮಗಳು. ಅವನು ತನ್ನ ಅರಮನೆಯ ಎದುರಿನಲ್ಲಿ ಒಂದು ದೊಡ್ಡ ಹೊಂಡವನ್ನು ತೆಗೆಸಿ, ಅದರಲ್ಲಿ ದಿನಾಲೂ ಮಗಳು ತನ್ನ ಉಗುರನ್ನು ಕೀಸಿಹಾಕುವಂತೆ ಮಾಡಿದನು. ಅಲ್ಲಿ ಒಂದು ಮರ ಬೆಳೆಯಿತು. ಯಾರು ಈ ಮರದ ಹೆಸರನ್ನು ಹೇಳುತ್ತಾರೋ ಅವರಿಗೆ ನನ್ನ ಮಗಳನ್ನು ಮದುವೆ ಮಾಡಿಕೊಡುತ್ತೇನೆ ಎಂದು ರಾಜ ಡಂಗುರ ಸಾರುತ್ತಾನೆ. ರಾಜಕುಮಾರಿಯನ್ನು ಮದುವೆ ಯಾಗಲು ರಾಜಕುಮಾರರು ಅರಮನೆಗೆ ಬರುತ್ತಿರುವಾಗ, ಅವಳು ಅರಮನೆಯ ಮೇಲುಪ್ಪರಿಗೆಯ ಮೇಲಿಂದ ಅವರನ್ನು ಗಮನಿಸುತ್ತಿರುತ್ತಾಳೆ. ಒಬ್ಬ ಸುಂದರ ರಾಜಕುಮಾರನು ಬರುವುದನ್ನು ನೋಡಿದ ರಾಜ ಕುಮಾರಿಯು ಅವನಿಗೆ ಕೇಳಿಸುವಂತೆ ಆ ಮರದ ಹೆಸರು "ಉಗುರಿನ ಮರ" ಎನ್ನುತ್ತಾಳೆ. ಅದು ಆ ರಾಜ ಕುಮಾರನಿಗೆ ಕೇಳಿಸುವುದಿಲ್ಲ. ಬದಲಾಗಿ ಒಬ್ಬ ರಾಕ್ಷಸ ಇದನ್ನು ಕೇಳಿಸಿಕೊಳ್ಳುತ್ತಾನೆ. ಅವನು ರಾಜನಲ್ಲಿಗೆ ಬಂದು ಆ ಮರದ ಹೆಸರು 'ಉಗುರು ಸುತ್ತಿನ ಮರ' ಎನ್ನುತ್ತಾನೆ. ಬಹಳ ದುಃಖಗೊಂಡರೂ ತನ್ನ ಮಾತನ್ನು ಮೀರಲಾರದೆ, ಅರಸನು ರಕ್ಕಸನಿಗೆ ತನ್ನ ಮಗಳನ್ನು ಮದುವೆಮಾಡಿಕೊಡುತ್ತಾನೆ. ಏಳು ಗಾಡಿ ಗಳಲ್ಲಿ ಅಕ್ಕಿ, ಸಾಮಾನು ಸಹಿತ ರಾಜಕುಮಾರಿಯನ್ನು ರಾಕ್ಷಸನೊಟ್ಟಿಗೆ ಕಳುಹಿಸುತ್ತಾನೆ. ದಾರಿಯಲ್ಲಿ ರಾಕ್ಷಸನು ಹಸಿವೆಯಿಂದ ಅಕ್ಕಿ, ಸಾಮಾನು, ಗಾಡಿಯ ಎತ್ತುಗಳು ಮತ್ತು ಗಾಡಿಯನ್ನು ತಿನ್ನುತ್ತಾನೆ. ರಾಕ್ಷಸನು ತನ್ನ ಮನೆಗೆ ಬಂದು, ರಾಜಕುಮಾರಿಯನ್ನು ಒಂದು ಕುರ್ಚಿಯಲ್ಲಿ ಕುಳಿತುಕೊಳ್ಳಿಸಿ, ತಾನು ತಾಳೇ ಮರವನ್ನು ಕಿತ್ತು ಹಲ್ಲುಜ್ಜಲು ಹೋಗುತ್ತಾನೆ. ಆಗ ರಾಜಕುಮಾರಿಯು ದೇವರನ್ನು ಧ್ಯಾನಿಸಿ, ಮಾಯವಾಗಿ, ಕುರ್ಚಿಯ ಕಾಲಿನಲ್ಲಿ ಸೇರಿಹೋಗುತ್ತಾಳೆ. "ರಾಜಕುಮಾರಿಯನ್ನು ಕಾಣದ ರಾಕ್ಷಸನು ಸಿಟ್ಟಿನಿಂದ ಕುರ್ಚಿಯನ್ನು ಪುಡಿಮಾಡಿ ಹೊಳೆಗೆ ಎಸೆಯುತ್ತಾನೆ. ಒಂದು ದಿನ ಅರಸುಕುಮಾರನೊಬ್ಬನು ಹೊಳೆಯಲ್ಲಿ ಈ ಕುರ್ಚಿಯ ಕಾಲನ್ನು ಕಂಡು, ಅದರ ಸೌಂದರ್ಯದಿಂದ ಆಕರ್ಷಣೆಗೊಂಡು, ಅದನ್ನು ತನ್ನ ಮಂಚದ ಅಡಿಯಲ್ಲಿ ಇಡು ತ್ತಾನೆ. ರಾತ್ರಿಯ ವೇಳೆ ರಾಜಕುಮಾರಿಯು ನಿಜರೂಪವನ್ನು ತಾಳಿ, ರಾಜಕುಮಾರನು ತಂದಿಟ್ಟ ಹಾಲು ಹಣ್ಣುಗಳನ್ನು ಸೇವಿಸುತ್ತಾಳೆ. ಅವನು ಸತ್ಯಸಂಗತಿ ತಿಳಿಯಲು ಹೊಂಚುಹಾಕಿ ಕುಳಿತು, ಮರುದಿನ ರಾಜ ಕುಮಾರಿ ನಿಜರೂಪಿನಲ್ಲಿ ಬಂದಾಗ, ಅವಳ ಕೈಯನ್ನು ಹಿಡಿದು, ಅವಳನ್ನು ಮದುವೆಯಾಗುತ್ತಾನೆ.

"ಉಗುರಿನ ಮರ" ಕಥೆಯು ಮೂಲ ತುಳುರೂಪದ ಸಂಕ್ಷಿಪ್ತ ಕನ್ನಡ ರೂಪಾಂತರ. ಇದು ಮಾಂತ್ರಿಕ ಕಥೆಗಳಲ್ಲಿ 460-499 ಅತಿಮಾನುಷ ಕಾರ್ಯಗಳ ವರ್ಗಗಳ ಗುಂಪಿಗೆ ಸೇರುತ್ತದೆ. ಕಥೆಯ ಮೊದಲನೆಯ

---

1. Stith Thompson : Fokltale, P. 59.

ಭಾಗದಲ್ಲಿ ಮರವೊಂದರ ಗುಪ್ತನಾಮವನ್ನು ಸರಿಯಾಗಿ ಊಹಿಸಿದವನಿಗೆ ಹೆಣ್ಣನ್ನು ಕೊಡುವ ಆಶಯಗಳು (H 511 ಮತ್ತು H 522) ಮತ್ತು ಅಂತಹ ಹೆಸರನ್ನು ಅನರ್ಹನೊಬ್ಬನು ಕೇಳುವುದು (ಆಶಯ N 475) ಮತ್ತು ಆ ಮೂಲಕ ಅವಳನ್ನು ತಡೆಯುವುದು (G 463) ಈ ಎರಡು ಘಟನೆಗಳು ಪ್ರಧಾನವಾಗಿ ಬರುತ್ತವೆ. ಕತೆಯ ಎರಡನೆಯ ಭಾಗದಲ್ಲಿ, ರಾಜಕುಮಾರಿಯು ವಸ್ತುವಾಗಿ ರೂಪಾಂತರಗೊಳ್ಳುವುದು (ಆಶಯ D 642·6) ಮತ್ತು ಆ ಮೂಲಕ ರಾಕ್ಷಸನಿಂದ ತಪ್ಪಿಸಿಕೊಳ್ಳುವುದು ; ರಾಜಕುಮಾರನು ಆ ವಸ್ತುವನ್ನು ಪಡೆದು, ಆಮೇಲೆ ರೂಪಾಂತರಗೊಂಡ ರಾಜಕುಮಾರಿಯನ್ನು ಮದುವೆಯಾಗುವುದು ಈ ಘಟನೆಗಳು ಬರುತ್ತವೆ.

ಉಗುರನ್ನು ಕೀಳಿಸಿ ಹಾಕಿದಲ್ಲಿ ಬೆಳೆದ ಮರವಾದ ಕಾರಣ ಆ ಮರಕ್ಕೆ 'ಉಗುರಿನ ಮರ' ಎಂಬ ಹೆಸರು ಬರುತ್ತದೆ. ಇದು ಒಂದು ಅಪೂರ್ವವಾದ ಹೆಸರು. ಯಾವುದೇ ಮರಕ್ಕೆ ಈ ಹೆಸರು ಇರುವುದಿಲ್ಲ. ಆದ್ದರಿಂದಲೇ ರಾಜಕುಮಾರಿಯ ವಿವಾಹಕ್ಕೆ ಪರೀಕ್ಷೆಯಾಗಿ ಈ ಮರದ ಹೆಸರನ್ನು ಹೇಳುವ ಪಣವನ್ನು ಒಡ್ಡುತ್ತಾರೆ. ರಾಜಕುಮಾರಿಯು ರೂಪಾಂತರಗೊಂಡು; ಕುರ್ಚಿಯ ಕಾಲಿನಲ್ಲಿ ಲೀನವಾದಳು ಎನ್ನುವಲ್ಲಿ. ಕುರ್ಚಿಯೆನ್ನುವ ಮರದ ಪೀಠದ ಹೆಸರು ಬಹಳ ಪ್ರಾಚೀನವಾದುದು ಅಲ್ಲ ಎನ್ನಿಸುತ್ತದೆ. ವ್ಯಕ್ತಿಯು ವಸ್ತುವಾಗಿ ರೂಪಾಂತರಗೊಳ್ಳುವ ಆಶಯಕ್ಕೆ ಕ್ರಮೇಣ ಕುರ್ಚಿಯಂತಹ ಹೊಸ ವಸ್ತುಗಳು ಸೇರ್ಪಡೆಯಾಗಿರಬಹುದು.

ರಾಕ್ಷಸನು 'ತಾಳೆ ಮರ'ದಲ್ಲಿ ಹಲ್ಲು ಉಜ್ಜುತ್ತಿದ್ದನು ಎನ್ನುವಲ್ಲಿ ತುಳು ಸಂಸ್ಕೃತಿಯಲ್ಲಿ ಜನಪ್ರಿಯವಾದ ತಾಳೆ ಮರವನ್ನು ಈ ಕಥೆಯಲ್ಲಿ ಗಾತ್ರದ ಕಲ್ಪನೆಗೆ ಬಳಸಿಕೊಳ್ಳಲಾಗಿದೆ.

## (೧೫) ಒಮ್ಮೆ ಇಳಿಯೋ ಜಂಬುನೇರಳೆಯೋ

ಒಂದು ಊರಿನಲ್ಲಿ ಗಂಡ ಹೆಂಡತಿಯರಿದ್ದರು. ಅವರಿಗೆ ಮೊದಲನೆಯ ಗಂಡು ಮಗ, ಬಳಿಕ ಮೂವರು ಹೆಣ್ಣು ಮಕ್ಕಳು. ಒಂದು ದಿನ ಮಗ ಒಂದು ಮಲ್ಲಿಗೆ ದಂಡೆ ತಂದು, ಬಾಗಿಲ ಮೇಲ್ಭಾಗದಲ್ಲಿ ಇಟ್ಟು ತಾಯಿಯಲ್ಲಿ ಹೇಳಿದ, "ಇದನ್ನು ಯಾರು ಮುಡಿಯುತ್ತಾರೋ ಅವರನ್ನು ನಾನು ಮದುವೆಯಾಗುತ್ತೇನೆ." ಅವನು ಹೊರಗೆ ಹೋದ ಮೇಲೆ ತಂಗಿಯರು ಬಂದು ಆ ಹೂವಿಗೆ ಕೈ ಹಾಕಿದರು. ಆ ತಾಯಿಯು ಮಗನು ಹೇಳಿದ ವಿಚಾರವನ್ನು ಅವರಲ್ಲಿ ತಿಳಿಸಿದಳು. ಮೊದಲ ಇಬ್ಬರು ತಂಗಿಯರು ಹೂವನ್ನು ಬಿಟ್ಟು ಹೋದರು. ಕಿರಿಯ ತಂಗಿ ಹಟದಿಂದ "ಅಣ್ಣನು ತಂಗಿಯನ್ನು ಮದುವೆಯಾಗಲಾರ" ಎಂದು ಹೇಳಿ, ಆ ಹೂವನ್ನು ತೆಗೆದು ಮುಡಿದುಕೊಂಡಳು. ಅಣ್ಣ ಬಂದ, ವಿಷಯ ತಿಳಿಯಿತು. ತನ್ನ ನಿರ್ಧಾರ ಬದಲಿಸಲಿಲ್ಲ. ಕಿರಿಯ ತಂಗಿಯೊಡನೆ ಆತನ ಮದುವೆಗೆ ಸಿದ್ಧತೆಗಳಾದುವು. ಮದುಮಗಳು ತಪ್ಪಿಸಿಕೊಂಡಾಳೆಂದು, ಆಕೆಯನ್ನು ಒಂದು ಕೋಣೆಯಲ್ಲಿ ಹಾಕಿ, ಆಕೆಗೆ ತೆಂಗಿನಕಾಯಿ ಹೆರೆಯುವ ಕೆಲಸಕೊಟ್ಟರು. ಆಕೆ ಒಂದು ಹೆಗ್ಗಣಕ್ಕೆ ಕಾಯಿಯ ತುರಿಯ ಆಸೆ ತೋರಿಸಿ, ಅದರಿಂದ ಒಂದು ಸುರಂಗಮಾರ್ಗವನ್ನು ತೋಡಿಸಿ, ಅಲ್ಲಿಂದ ತಪ್ಪಿಸಿಕೊಂಡು ಬಂದು, ಒಂದು ಜಂಬುನೇರಳೆ ಮರದ ಮೇಲೆ ಹತ್ತಿ ಕುಳಿತಳು. ಮನೆಯವರೆಲ್ಲಾ ಆಕೆಯನ್ನು ಹುಡುಕಿದರು. ಆಕೆ ಸಿಗಲಿಲ್ಲ. ಆಕೆಯ ಹಿರಿಯ ಅಕ್ಕ ಮುಖ ತೊಳೆಯಲೆಂದು, ಚಿಲುಮೆಯ ಬಳಿಗೆ ಬಂದಾಗ, ಅವಳ ಮೈ ಮೇಲೆ ಒಂದು ಹನಿ ನೀರು ಬಿತ್ತು. ಆಕೆ ತಲೆ ಎತ್ತಿ ನೋಡಿದಾಗ ಜಂಬುನೇರಳೆ ಮರದ ಮೇಲೆ ತನ್ನ ಕಿರಿಯ ತಂಗಿ ಕುಳಿತುಕೊಂಡು ಅಳುತ್ತಿದ್ದಾಳೆ. ಆಗ ಅಕ್ಕ ತಂಗಿಗೆ ಹೇಳುತ್ತಾಳೆ;

'ಒರೊ ಜಪ್ಪ್ಯ ಜಮಾನೇರೊಳೊ ॥ಪ॥
ಪಾಡಿ ದೊಂಪೊ ಮಾಲೊಂಡೆ
ಕಡ್ತಿ ಇರೆ ಬಾಡೊಂಡೆ
ಅಡಿ ಉನ್ಪು ಸೆಟ್ಟ್ಂಡೆ
ಮುತ್ತಿಬಚ್ಚಿರೆ ಉಲುಂಗುಂಡೆ
ಕೂಡಿ ಸಭೆ ಬಿರಿಪ್ಪ್ಂಡೆ
ಬತ್ತಿ ಬಿನ್ನೆರ್ ಬರಳಬೆರ್
ಒರೊ ಜಪ್ಪೊ ಜಮನೇರೊಳೊ"

ಆ ಮೇಲೆ ಇನ್ನೊಬ್ಬಳು ಅಕ್ಕ ಬರುತ್ತಾಳೆ. ಅವಳ ಮಾತಿಗೆ ಹಿಂದಿನಂತೆಯೇ ತಂಗಿ ಉತ್ತರ ಕೊಡುತ್ತಾಳೆ. ಆ ಮೇಲೆ ತಾಯಿ ಬರುತ್ತಾಳೆ. ಅವಳು ಮಗಳಲ್ಲಿ:

"ಒರೊ ಜಪ್ಪೊ ಜಮನೇರಳೊ
ಪಾಡಿ ದೊಂಪೊ ಮಾಲೊಂಡೆ
ಕಡ್ತಿ ಇರೆ ಬಾಡೊಂಡೆ
ಅಡಿ ಉನ್ಪು ಸೆಟ್ಟ್ಂಡೆ
ಮುತ್ತಿ ಬಚ್ಚಿರೆ ಉಲುಂಗುಂಡೆ
ಕೂಡಿ ಸಭೆ ಬಿರಿಪ್ಪ್ಂಡೆ
ಬತ್ತಿ ಬಿನ್ನೆರ್ ಬರೆಳಬೆರ್
ಒರೊ ಜಪ್ಪ್ಯ ಜಮನೇರಳೊ" ಎನ್ನುತ್ತಾಳೆ.
(ಒಮ್ಮೆ ಇಳಿಯೋ ಜಂಬುನೇರಳೆಯೋ
ಹಾಕಿದ ಚಪ್ಪರ ಮಾಲುತ್ತಿದೆ
ಕಡಿದ ಎಲೆ ಬಾಡುತ್ತಿದೆ
ಅಟ್ಟ ಅನ್ನ ಕೆಡುತ್ತಿದೆ
ಕಿತ್ತ ವೀಳ್ಯದೆಲೆ ಒಣಗುತ್ತಿದೆ
ಕೂಡಿದ ಸಭೆ ಚೆದರುತ್ತಿದೆ
ಬಂದ ನೆಂಟರು ಹಸಿದಿದ್ದಾರೆ
ಒಮ್ಮೆ ಇಳಿಯೋ ಜಂಬುನೇರಳೆಯೇ)

ಆಗ ಮರದ ಮೇಲಿದ್ದ ಮಗಳು ಹೇಳುತ್ತಾಳೆ:

"ಪಾಡಿ ದೊಂಪೊ ಮಾಲಡ್
ಕಡ್ತಿ ಇರೆ ಬಾಡಡ್
ಅಡಿ ಉನ್ಪು ಸೆಟ್ಟಿಡ್
ಮುತ್ತಿ ಬಚ್ಚಿರೆ ಉಲುಂಗಡ್
ಕೂಡಿ ಸಭೆ ಬಿಲಿಯಡ್
ಬತ್ತಿ ಬಿನ್ನೆರ್ ಬರೆಲಡ್

ದುಂಬುದ ಕಾಲೊಡ್ ಅಪ್ಪೇಂಡ್ ಲೆತ್ತೆನೆ
ನನದ ಕಾಲೊಡ್ ಮೂವೀಂಡ್ ಲೆಪ್ಪೊಡೆ
ಯಾನ್ ಜಪ್ಪುಬಿ"

ಕೊನೆಗೆ ಅಣ್ಣ ಬರುತ್ತಾನೆ. ಅವನು ತಂಗಿ (ಅಂದರೆ ಈಗ ಮದುಮಗಳು) ಯಲ್ಲಿ–

"ಒರೊ ಜಪ್ಪೋ ಜಮುನೇರಳೋ
ಪಾಡಿ ದೊಂಡೊ ಮಾಲೂಂಡೇ
ಕಡ್ತಿ ಇರೆ ಬಾಡೂಂಡೇ
ಅಡಿ ಉನ್ಪು ಸೆಟ್ಟುಂಡೇ
ಮುತ್ತಿ ಬಚ್ಚಿರೆ ಉಲುಂಗುಂಡೇ
ಕೂಡಿ ಸಭೆ ಬರಿಪ್ಪುಂಡೇ
ಬತ್ತಿ ಬಿನ್ನೆರ್ ಬರಳಬೆರ್
ಒರೊ ಜಪ್ಪು ಜಮುನೇರಳೊ" ಎನ್ನುತ್ತಾನೆ.
(ಒಮ್ಮೆ ಇಳಿಯೋ ಜಂಬುನೇರಳೆಯೇ
ಹಾಕಿದ ಚಪ್ಪರ ಮಾಲುತ್ತಿದೆ
ಕಡಿದ ಎಲೆ ಬಾಡುತ್ತಿದೆ
ಅಟ್ಟ ಅನ್ನ ಕೆಡುತ್ತಿದೆ
ಕಿತ್ತ ವೀಳ್ಯದೆಲೆ ಒಣಗುತ್ತಿದೆ
ಕೂಡಿದ ಸಭೆ ಚೆದರುತ್ತಿದೆ
ಬಂದ ನೆಂಟರು ಹಸಿದಿದ್ದಾರೆ
ಒಮ್ಮೆ ಇಳಿಯೋ ಜಂಬುನೇರಳೆಯೇ)

ಆಗ ಮರದ ಮೇಲಿದ್ದ ತಂಗಿ ಹೇಳುತ್ತಾಳೆ:

ಪಾಡಿ ದೊಂಪೊ ಮಾಲಡ್
ಕಡ್ತಿ ಇರೆ ಬಾಡಡ್
ಅಡಿ ಉನ್ಪು ಸೆಟ್ಟಡ್
ಮುತ್ತಿ ಬಚ್ಚಿರೆ ಉಲುಂಗಡ್
ಕೂಡಿ ಸಭೆ ಬಿರಿಯಡ್
ಬತ್ತಿ ಬಿನ್ನೆರ್ ಬರೆಲಡ್
ದುಂಬುದ ಕಾಲೊಡು ಅಣ್ಣಾಂದ್ ಲೆತ್ತೆನೆ
ನನದ ಕಾಲೊಡು ಕಂಡನೀಂದ್ ಲೆಪ್ಪೊಡ
ಯಾನ್ ಜಪ್ಪುಜಿ"
(ಹಾಕಿದ ಚಪ್ಪರ ಮಾಲಲಿ
ಕಡಿದ ಎಲೆ ಬಾಡಲಿ
ಅಟ್ಟ ಅನ್ನ ಕೆಡಲಿ

ಕಿತ್ತ ವೀಳ್ಯದೆಲೆ ಒಣಗಲಿ
ಕೂಡಿದ ಸಭೆ ಚೆದರಲಿ
ಬಂದ ನೆಂಟರು ಹಸಿಯಲಿ
ಹಿಂದಿನ ಕಾಲದಲಿ ಅಣ್ಣಾಯೆಂದು ಕರೆದೆ
ಮುಂದಿನ ಕಾಲದಲಿ ಗಂಡಾಯೆಂದು ಕರೆಯಬೇಕಲ್ಲ
ನಾನು ಇಳಿಯುವುದಿಲ್ಲ)

ಆಗ ಅಣ್ಣನು ಮರಕ್ಕೆ ಹತ್ತುತ್ತಾನೆ. ತಂಗಿ ಮರದ ಎಲೆ ಎಲೆಗೆ ಹೋಗುತ್ತಾಳೆ. ಆತನೂ ಅಲ್ಲಿಗೆ ಬರುತ್ತಾನೆ. ಆಕೆ ಕೆಳಗಿನ ಮಡುವಿಗೆ ಹಾರಿ, "ಬಾಲೆ" ಮೀನು ಆಗುತ್ತಾಳೆ. ಆತನು ಕೆಳಗೆ ಮಡುವಿಗೆ ಹಾರಿ, "ಮುಗುಡು" ಮೀನು ಆಗುತ್ತಾನೆ. "ಮುಗುಡು" ಮೀನು "ಬಾಲೆ" ಮೀನನ್ನು ನುಂಗುತ್ತದೆ. ಒಬ್ಬ ಒಂದು ಗಾಳ ಹಾಕಿ ಆ ಮುಗುಡು ಮೀನನ್ನು ಹಿಡಿದು, ಮನೆಗೆ ಕೊಂಡುಹೋಗುತ್ತಾನೆ. ಅಲ್ಲಿ ಮುಗುಡುವನ್ನು ಕೊಯ್ಯುವಾಗ, ಅದರೊಳಗೆ "ಬಾಲೆ" ಮೀನು ಇರುತ್ತದೆ. ಆಗ ಬಾಲೆ ಹೇಳುತ್ತದೆ–ಇವನನ್ನು ಹಾಕಿದ ಪಾತ್ರೆಯಲ್ಲಿ ನನ್ನನ್ನು ಹಾಕಬೇಡ. ಇವನನ್ನು ಬೇಯಿಸಿದ ಪಾತೆಯಲ್ಲಿ ನನ್ನನ್ನು ಬೇಯಿಸಬೇಡ. ಹಾಗೆಯೇ "ಬಾಲೆ" ಮತ್ತು "ಮುಗುಡು" ಮೀನುಗಳನ್ನು ಬೇರೆ ಬೇರೆ ಪಾತ್ರೆಗಳಲ್ಲಿ ಹಾಕಿ ಬೇಯಿಸುತ್ತಾರೆ. ಈಗಲೂ ಹಳ್ಳಿಗಳಲ್ಲಿ ಈ ಪದ್ಧತಿ ಇದೆ. ಇದು ಯಾಕೆ ಎಂದು ಕೇಳಿದರೆ, ಅದಕ್ಕೆ ಮೇಲಿನ ಕಥೆಯನ್ನು ಹೇಳುತ್ತಾರೆ."

ತುಳು ಜನಪದ ಕಥೆಗಳಲ್ಲಿ ಬಹಳ ಜನಪ್ರಿಯವಾಗಿರುವ ಒಂದು ಕಥೆ "ಒರೊ ಜಪ್ಪು ಜಮನೇರಳೋ" (ಒಮ್ಮೆ ಇಳಿಯೋ ಜಂಬುನೇರಳೆಯೋ) ಎಂಬ ಕಥೆ. ಇಲ್ಲಿನ ಗದ್ಯ ಭಾಗ ಮೂಲ ತುಳು ಕಥೆಯ ಸಂಕ್ಷಿಪ್ತ ಕನ್ನಡ ರೂಪಾಂತರ. ಪದ್ಯ ಭಾಗದಲ್ಲಿ ಮೂಲ ಮತ್ತು ಕನ್ನಡ ಅನುವಾದವನ್ನು ಯಥಾವತ್ತಾಗಿ ಕೊಡಲಾಗಿದೆ. ಈ ಕಥೆಯನ್ನು ಯಮುನಾ ಎಂಬ ಬಂಟ ಜಾತಿಯ ಅಕ್ಷರಸ್ಥ ಹೆಂಗಸಿನಿಂದ ಸಂಗ್ರಹಿಸಲಾಗಿದೆ. (ಸಂಗ್ರಹ 1972. ಯಮುನಾ ಪ್ರಾಯ 52, ವರ್ಷ-1979, ಬಂಟ್ವಾಳ ತಾಲೂಕಿನ ಪುಣಚಾ ಗ್ರಾಮ)

ವಸ್ತುವಿನ ದೃಷ್ಟಿಯಿಂದ ಇದು A 2110. Creation of Particular fishs ಮತ್ತು A 1710. Creation of animals through transformation ಎಂಬ ಆಶಯಗಳುಳ್ಳ ಐತಿಹ್ಯದ ಗುಂಪಿಗೆ ಸೇರುತ್ತದೆ. ತುಳುನಾಡಿನ ಎರಡು ಪ್ರಸಿದ್ಧ ಮೀನುಗಳಾದ "ಮುಗುಡು" ಮತ್ತು "ಬಾಲೆ" ಮೀನುಗಳ ಹುಟ್ಟನ್ನು ಕುರಿತ ಐತಿಹ್ಯದಂತೆ ಈ ಕಥೆ ವರ್ತಿಸುತ್ತದೆ. ಆ ಎರಡು ಮೀನುಗಳನ್ನು ಒಟ್ಟಿಗೆ ಬೇಯಿಸದೆ ಇರುವ ಜನಪದ ಸಂಪ್ರದಾಯವೊಂದರ ವಿವರಣೆಯ ಐತಿಹ್ಯವಾಗಿಯೂ ಈ ಕಥೆ ಇದೆ. ಅಣ್ಣ ತಂಗಿಯರಾಗಿ ಇದ್ದವರು ಈ ಮೀನುಗಳಾಗಿ ಪರಿವರ್ತನೆಗೊಂಡ ಕಾರಣ, ಅವುಗಳನ್ನು ಒಟ್ಟಿಗೆ ಬೇಯಿಸಬಾರದು ಎನ್ನುವ ಕಾರಣವನ್ನು ಕೊಡಲಾಗುತ್ತದೆ.

ಕನ್ನಡದಲ್ಲೆ ಇದೇ ಆಶಯವುಳ್ಳ ಜನಪದ ಕಥೆಯೊಂದು ಸಿಗುತ್ತದೆ.[1] ಇಲ್ಲಿಯೂ ಅಣ್ಣನು ತಂಗಿಯನ್ನು ಮದುವೆಯಾಗಬೇಕೆಂದು ಹಟ ಹಿಡಿಯುತ್ತಾನೆ, ತಂಗಿ ಹೊಳೆಗೆ ಹಾರಿದಾಗ ಅಣ್ಣನೂ ಹೊಳೆಗೆ ಹಾರುತ್ತಾನೆ. ಅವರು ಗಂಡು ಮತ್ತು ಹೆಣ್ಣು ಮೀನು ಆಗುತ್ತಾರೆ. ಮುಂದೆ ಅವರ ಬೇರೆ ಬೇರೆ ರೂಪಾಂತರಗಳು ಬರುತ್ತವೆ. ಈ ಭಾಗ ತುಳುವಿನ ಕಥೆಯಲ್ಲಿ ಇಲ್ಲ.

ಅಣ್ಣ–ತಂಗಿಯರ ಮದುವೆಯ ನಿಷಿದ್ಧತೆ (Taboo)ಯನ್ನು ಗಮನಿಸಿಕೊಂಡು ಇಂತಹ ಕಥೆಯನ್ನು ಐತಿಹ್ಯದ ರೂಪದಲ್ಲಿ ನಿರ್ಮಿಸಿರಬಹುದು.

'ರಚನೆ'ಯ ದೃಷ್ಟಿಯಿಂದ ಈ ತುಳು ಕಥೆಯಲ್ಲಿ ಗದ್ಯದ ನಡುವೆ ಪದ್ಯಗಳ ತುಣುಕುಗಳು ಬರುತ್ತವೆ. ಲಯಬದ್ಧವಾಗಿ ಹಾಡಲು ಯೋಗ್ಯವಾದ ಹಾಡಿನ ರೂಪದಲ್ಲಿ ಅವು ಇವೆ. ಈ ರಚನೆಯು ಸ್ಕಾಂಡಿನೇವಿಯನ್, ಬ್ರಿಟನ್, ಅಮೆರಿಕಾ, ಆಫ್ರಿಕಾದ ಜನಪದ ಸಾಹಿತ್ಯದಲ್ಲಿ ವಿಶೇಷವಾಗಿ ಕಾಣಸಿಗುವ 'Cante Fable ನ್ನು ಹೋಲುತ್ತದೆ. Cante Fable : "This is a prose narrative which contains elements of chant or song, sometimes only a line. (A narrative form in which a story is told partly in a song or two, sometimes much more)"1

C. Novelle (Romantic Tales) ರಮ್ಯ ಕಥೆಗಳು ವರ್ಗಗಳು 850–999

ಸಂಕೀರ್ಣ ಜನಪದ ಕಥೆಗಳಲ್ಲಿ 'ರಮ್ಯ ಕಥೆಗಳು' ಇನ್ನೊಂದು ಮುಖ್ಯ ಭಾಗ. ತುಳು ಜನಪದ ಕಥೆಗಳಲ್ಲಿ ಮಾಂತ್ರಿಕ ಕಥೆಗಳಷ್ಟು ಅಧಿಕ ಸಂಖ್ಯೆಯಲ್ಲಿ ರಮ್ಯಕಥೆಗಳು ಸಿಕ್ಕುವುದಿಲ್ಲ. ಕೆಲವೊಂದು ಬಾರಿ ಒಂದು ಕಥೆಯಲ್ಲಿನ ಮಾಂತ್ರಿಕ ಕಥೆಯ ಭಾಗ ಮತ್ತು ರಮ್ಯ ಕಥೆಯ ಭಾಗಗಳು ಸ್ಪಷ್ಟವಾಗಿ ಬೇರ್ಪಡಿಸಲಾರದಷ್ಟು ಒಂದುಗೂಡಿರುತ್ತವೆ, ಇಂತಹ ಸಂದರ್ಭಗಳಲ್ಲಿ ಸ್ಥೂಲವಾಗಿ ಅವುಗಳಲ್ಲಿನ ಮುಖ್ಯ ಆಶಯಗಳ ಆಧಾರದ ಮೇಲೆ ಅವುಗಳನ್ನು ರಮ್ಯಕಥೆಗಳ ವರ್ಗಗಳಿಗೆ ಸೇರಿಸಲಾಗಿದೆ. ಮಾಂತ್ರಿಕತೆಯ ಆಶಯಗಳು ತೀರ ಅಸ್ಪಷ್ಟವಾದ ಕಡೆಗಳಲ್ಲಿ ಹೆಚ್ಚಾಗಿ ಈ ರೀತಿ ಮಾಡಲಾಗಿದೆ,

ರಮ್ಯ ಕಥೆಗಳ ಗುಂಪಿನಲ್ಲಿ ಒಳವಿಭಾಗಗಳು ಯಾವುದೂ ಇಲ್ಲ. ವರ್ಗಗಳ ವ್ಯಾಪ್ತಿಯೂ (850–999) ತೀರ ಕಡಿಮೆ. ಆದ್ದರಿಂದಲೇ ಹೆಚ್ಚು ನಿಖರವಾದ ರೂಪಗಳು ಕಾಣಿಸುವ ಬದಲು ವ್ಯತ್ಯಾಸಗಳು ಹೆಚ್ಚು ಇರುವ ಕಥಾರೂಪಗಳೆಲ್ಲಾ ಈ ಗುಂಪಿನ ಒಳಗಡೆ ಸ್ಥಾನ ಪಡೆಯುತ್ತವೆ.

ತುಳು ಜನಪದ ಕಥೆಗಳಲ್ಲಿ ಮುಖ್ಯವಾಗಿ ಈ ಕಥೆಗಳನ್ನು ರಮ್ಯ ಕಥೆಗಳ ವರ್ಗಕ್ಕೆ ಸೇರಿಸಲಾಗಿದೆ.

1. ದಿಕ್ಕಿಲ್ಲದ ಮಕ್ಕಳು ದಿಕ್ಕುಗಾಣದ ದೇಶಕ್ಕೆ.
2. ಒಗಟು ಮಾತು.
3. ದಾಸಯ್ಯನ ಮಗಳು
4. ಅನರ್ಥದ ಒಳತಿರುಳು
5. ಅದೃಷ್ಟದ ಪಾಠ
6. ಒಂದು ಮುಕ್ಕಾಲಿನ ಕಥೆ
7. ಅತ್ತೆ ಸೊಸೆ

---

1. ರಾಗಾ ; (ಸಂ) 'ಅಣ್ಣ ತಂಗಿ'. "ಕರ್ನಾಟಕ ಜನಪದ ಕಥೆಗಳು" ಮೈಸೂರು 1970. ಪು. 65-66
1, Kenneth and Marry clarke : 'Introducing Folklore', p, 56

ಈ ಕಥೆಗಳಲ್ಲಿ ಹಾಸ್ಯ ಮತ್ತು ವಿನೋದ ವೃತ್ತಾಂತಗಳ ಛಾಯೆ ಇದ್ದರೂ ಪ್ರಧಾನವಾಗಿ ಇವು ರಮ್ಯಕಥೆಗಳ ಸ್ವರೂಪದವು.

## (1) ದಿಕ್ಕಿಲ್ಲದ ಮಕ್ಕಳು ದಿಕ್ಕುಗಾಣದ ದೇಶಕ್ಕೆ

"ಬಡಗು ದೇಶದಲ್ಲಿ ತಂದೆ ತಾಯಿಗಳನ್ನು ಕಳಕೊಂಡು ಅನಾಥ ಮಕ್ಕಳಿಬ್ಬರಿದ್ದರು. ಅವರಿಗೆ ಗತಿ ಗೋತ್ರ ಇರಲಿಲ್ಲ. ಇದರಿಂದಾಗಿ ಊರ ಗುರಿಕಾರನು ಅವರನ್ನು ತೆಂಕುದೇಶಕ್ಕೆ ಕಳುಹಿಸಿಕೊಟ್ಟನು. ಹುಡುಗಿಗೆ ಹತ್ತು ವರ್ಷ, ಹುಡುಗನಿಗೆ ಏಳು ವರ್ಷ. ತೆಂಕುದಿಕ್ಕಿಗೆ ಬಂದ ಮಕ್ಕಳಿಗೆ ಊರಿನ ಪರಿಚಯ ವಿಲ್ಲ. ಜನರ ಗುರುತಿಲ್ಲ. ಹಸಿವು, ಬಳಲಿಕೆ, ಬೆದರಿಕೆಗಳಿಂದ ಅವರು ಒಂದೆಡೆ ಅಳುತ್ತಾ ಕುಳಿತಿದ್ದರು,

ಆ ಊರಿನ ದೋಗುಶೆಟ್ಟಿ ಎಂಬಾತನು ಪೇಟೆಗೆ ಹೋಗಿ ವ್ಯಾಪಾರ ಮುಗಿಸಿ ಆ ಹಾದಿಯಾಗಿ ಹಿಂದಿರುಗುತ್ತಿದ್ದಾಗ ಆ ಮಕ್ಕಳನ್ನು ನೋಡಿದ. ಅಳುತ್ತಿರುವ ಅವರನ್ನು ಸಂತೈಸಿ, ಅವರ ವಿಚಾರವನ್ನು ಕೇಳಿ ತಿಳಿದ. ತಿಳಿದು ಕನಿಕರಪಟ್ಟು ಅವರನ್ನು ಊರ ದೇವಸ್ಥಾನದವರೆಗೆ ಕರೆತಂದು ದೇವಸ್ಥಾನದ ಜಗಲಿ ಯಲ್ಲಿ ಮಲಗುವಂತೆ ಹೇಳಿ ತಾನು ತನ್ನ ಮನೆಗೆ ಹೋದ. ಆ ರಾತ್ರಿ ಮಕ್ಕಳು ದೇವಸ್ಥಾನದ ಜಗಲಿಯಲ್ಲಿ ಉಪವಾಸ ಮಲಗಿದವು.

ಮರುದಿನ ಬೆಳಿಗ್ಗೆ ದೇವರ ಪೂಜೆಗೆಂದು ಪೂಜಾರಿ ಬಂದಾಗ ಜಗಲಿಯಲ್ಲಿ ಮಲಗಿದ್ದ ಮಕ್ಕಳನ್ನು ಕಂಡ. ಉಪವಾಸದಿಂದ ಸೊರಗಿದ್ದ ಮಕ್ಕಳನ್ನು ನೋಡಿ ಅವನಿಗೆ ವ್ಯಥೆಯಾಯಿತು. ಅವರ ಕಥೆಯನ್ನು ಕೇಳಿ ಕರುಳು ಕರಗಿತು. ದೇವರ ನೈವೇದ್ಯವನ್ನು ಅವರಿಗೆ ಉಣ್ಣಲು ಕೊಟ್ಟ. ಮಕ್ಕಳು ದೇವಸ್ಥಾನದಲ್ಲೇ ಉಳಿಯುವಂತೆ ತಿಳಿಸಿದ ಮತ್ತು ದೇವರ ದನವನ್ನು ಮೇಯಿಸುವ ಕೆಲಸ ಹೇಳಿದ.

ಪೂಜಾರಿ ತಿಳಿಸಿದಂತೆ ಮಕ್ಕಳು ದೇವರ ದನವನ್ನು ಅಟ್ಟಿಕೊಂಡು ಕಾಡಿಗೆ ಹೋದರು. ದನವನ್ನು ಮೇಯಿಸಿದರು. ದನ ಮೇಯುವುದನ್ನು ಕಂಡು ಮಕ್ಕಳು ಆಡಲು ತೊಡಗಿದರು. ಹೊತ್ತು ಕಳೆಯಿತು. ಮಕ್ಕಳು ಆಟವನ್ನು ನಿಲ್ಲಿಸಿ ದನವನ್ನು ಹಿಂದಕ್ಕೆ ಅಟ್ಟಿಕೊಂಡು ಹೋಗಲೆಂದು ನೋಡುವಾಗ ದನ ಕಾಣಲಿಲ್ಲ. ಮಕ್ಕಳು ಅಳುತ್ತಾ ಅಳುತ್ತಾ ದನವನ್ನು ಹುಡುಕುತ್ತಾ ಗುಡ್ಡಬೆಟ್ಟ ಅಲೆದರು. ದನ ಸಿಗಲಿಲ್ಲ.

ಪೂಜಾರಿ ಬೈಯುವನೋ ಬಡಿಯುವನೋ ಎಂಬ ಹೆದರಿಕೆಯಿಂದ ಮಕ್ಕಳಿಗೆ ಊರಿಗೆ ಹಿಂತಿರುಗಲು ಹೆದರಿಕೆಯಾಯಿತು. ಅಲೆದು ಅಲೆದು ಆಯಾಸವಾಗಿ, ಕಾಡಿನ ನಡುವೆ ದೊಡ್ಡ ಅರಳಿ ಮರ ಒಂದರ ಅಡಿ ಯಲ್ಲಿ ಮಲಗಿಕೊಂಡರು. ಮಕ್ಕಳಿಗೆ ಅಲ್ಲೇ ನಿದ್ದೆ ಹತ್ತಿತು.

ಹೊತ್ತು ಮಾಲಿತು. ಸಂಜೆಯಾಗ ಹತ್ತಿತು. ಮಕ್ಕಳು ಬರಲಿಲ್ಲ. ದನವೂ ಹಿಂದಿರುಗಲಿಲ್ಲ. ಪೂಜಾರಿಗೆ ಹೆದರಿಕೆಯಾಯಿತು. ಆತ ಮಕ್ಕಳನ್ನೂ ಹಸುವನ್ನೂ ಹುಡುಕುತ್ತಾ ಕಾಡಿಗೆ ಬಂದ. ಅರಸುತ್ತ ಅರಸುತ್ತ ಅಲೆಯುತ್ತಿರುವಾಗ ದೊಡ್ಡ ಅರಳಿಮರದ ಬುಡದಲ್ಲಿ ಮಲಗಿದ ಮಕ್ಕಳನ್ನು ಕಂಡ. ಆದರೆ ಆಶ್ಚರ್ಯ ಏಳು ಹೆಡೆಯ ಸರ್ಪವೊಂದು ತನ್ನ ಏಳೂ ಹೆಡೆಗಳನ್ನೂ ಬಿಡಿಸಿ ಹಿಡಿದು ಆ ಮಕ್ಕಳಿಗೆ ನೆರಳು ಮಾಡಿತ್ತು. ಇವನನ್ನು ಕಂಡು ಹಾವು ಹೆಡೆಮುಡಿಸಿ ಹೊರಟುಹೋಯಿತು. ಇದನ್ನು ಕಂಡ ಪೂಜಾರಿಗೆ ಮಕ್ಕಳ ಕುರಿತು ಭಕ್ತಿ ಹುಟ್ಟಿತು. ಮುಮತೆ ಬೆಳೆಯಿತು.

ಆತ ಆ ಇಬ್ಬರು ಮಕ್ಕಳನ್ನು ಎಬ್ಬಿಸಿದ. ತನ್ನನ್ನು ಕಂಡು ಹೆದರಿದ ಮಕ್ಕಳನ್ನು ಸಂತೈಸಿದ. ಅವರನ್ನು ಮಲ್ಲಿಗೆ ಹೂವಿನಂತೆ ಮೃದುವಾಗಿ ನೇವರಿಸಿ ಮನೆಗೆ ಕರೆತಂದ. ಮನೆಯಲ್ಲಿ ಉಳಿಸಿ ಚೆನ್ನಾಗಿ ಸಾಕಿ ಸಲಹಿ ಬೆಳೆಸಿದ.

ಹೀಗಿರುತ್ತಾ ಒಂದು ದಿನ ಹತ್ತಿರದ ಊರಿನ ಮಾನಿ ಮಂಗಮದರಸು ಬಾಲೇಂದುಮನಿಗೆ ಒಂದು ಕನಸು ಬಿತ್ತು. ಆತನ ಎಲ್ಲಾ ಸಂಪತ್ತನ್ನೂ ಸತ್ಪಾತ್ರರಿಗೆ ದಾನಮಾಡಿ ದೇವರ ಸೇವೆ ಮಾಡದಿದ್ದರೆ ಆತನಿಗೆ ಸಾವು ಬರುವುದೆಂದು ಕನಸಿನಲ್ಲಿ ಹೇಳಿದಂತಾಯಿತು. ಬಾಲೇಂದುಮನು ಭಯದಿಂದಲೂ ಭಕ್ತಿಯಿಂದಲೂ ಆತನ ಸಂಪತ್ತೆಲ್ಲವನ್ನೂ ಸೇವಕರ ತಲೆಯಲ್ಲಿ ಹೊರಿಸಿಕೊಂಡು ದೇವಸ್ಥಾನದ ಹಾದಿಯಾಗಿ ಬರುತ್ತಿರುವಾಗ ಪೂಜಾರಿಯ ಮನೆಯಲ್ಲಿದ್ದ ಈ ಎರಡು ಮಕ್ಕಳನ್ನು ಕಂಡ. ಅವರ ಕಥೆಯನ್ನು ಕೇಳಿದ. ಇವರೇ ನಿಜವಾದ ಸತ್ಪಾತ್ರರೆಂಬ ನಂಬಿಕೆ ಅವನಲ್ಲಿ ಬಂತು. ಆತ ಆಳುಗಳೊಡನೆ ಹೊರಿಸಿಕೊಂಡು ಬಂದಿದ್ದ ಎಲ್ಲಾ ಸಂಪತ್ತನ್ನೂ ಆ ಮಕ್ಕಳಿಗೆ ದಾನವಿತ್ತು ತಾನು ದೇವಸ್ಥಾನಕ್ಕೆ ಹೋದ.

ಈ ರೀತಿಯಲ್ಲಿ ಮಕ್ಕಳು ಎಲ್ಲರ ಪ್ರೀತಿಗೂ ಪಾತ್ರರಾಗಿ ತಾವು ಪರಸ್ಪರ ಪ್ರೀತಿಸಿಕೊಂಡು ಸುಖವಾಗಿ ಬಾಳುತ್ತಿದ್ದರು. ಪೂಜಾರಿಯೂ ಅವರನ್ನು ಸೊಗಸಾಗಿ ನೋಡಿಕೊಳ್ಳುತ್ತಿದ್ದ. ಹೀಗಿರುತ್ತಿರುವಾಗ ಹತ್ತಿರದ ಊರು ಅಡಿದೊಡ್ಡಜದ ನಾಡಬಂಟನ್ನೇಸು ಬಂಟನಿಗೆ ರಾತ್ರಿ ಮಲಗಿದ್ದಾಗ ಒಂದು ಕನಸು ಬಿತ್ತು. ಆತನ ಕನಸಿನಲ್ಲಿ ಒಂದು ಹರಿವಾಣ ಬಂತು. ಹರಿವಾಣದಲ್ಲಿ ಒಂದು ಭೂತ ಉದ್ಭವವಾಯಿತು. ಆ ಭೂತ ದೇವಸ್ಥಾನದ ಪೂಜಾರಿಯ ಬಳಿಯಿದ್ದ ಹೆಣ್ಣುಮಗಳ ವಿಚಾರ ತಿಳಿಸಿ, ಅವಳನ್ನು ಮದುವೆಯಾಗು ಎಂತೆ ಅಪ್ಪಣೆ ಕೊಟ್ಟಿತು.

ಮರುದಿನ ಬೆಳಿಗ್ಗೆ ಎದ್ದ ನೇಸು ಬಂಟ ಊರ ಗುರಿಕಾರರನ್ನು ಕರೆತರಿಸಿದ. ನಡೆದ ಸಂಗತಿಯನ್ನು ತಿಳಿಸಿದ. ಪೂಜಾರಿಯ ಬಳಿ ಹೋಗಿ ತನಗೆ ಹೆಣ್ಣು ಕೇಳುವಂತೆ ಹೇಳಿದ. ಬಂಟನ ಮಾತಿಗೆ ಗುರಿಕಾರರು ಒಪ್ಪಿದರು. ಪೂಜಾರಿಯ ಬಳಿ ಹೋದರು. ನೇಸು ಬಂಟನ ಕನಸಿನ ವಿಚಾರವನ್ನು ತಿಳಿಸಿ, ಹೆಣ್ಣು ಕೇಳಿದರು. ಕನಸಿನ ವಿಚಾರ ದೈವದ ಮಾತು. ಒಲ್ಲೆ ಎನ್ನಲಾಗಲಿಲ್ಲ ಪೂಜಾರಿಗೆ. ಆತ ಒಪ್ಪಿಗೆ ಕೊಟ್ಟ. ಆದರೆ ತಾನು ಇಷ್ಟು ಕಾಲ ಸಾಕಿ ಸಲಹಿದ ಮಗುವನ್ನು ಅಗಲಬೇಕಲ್ಲಾ ಎಂದು ದುಃಖವಾಯಿತು.

ಗುರಿಕಾರರು ಸೇರಿ ಮದುವೆಗೆ ದಿನ ನಿಶ್ಚಯಿಸಿದರು. ನಿಶ್ಚಯಿಸಿದ ದಿನ ಪೂಜಾರಿ ಹೆಣ್ಣು ಮಗಳನ್ನು ಸಿಂಗರಿಸಿದ. ಊರಿನವರನ್ನು ಸೇರಿಸಿದ. ವಾದ್ಯ ವಾಲಗದವರನ್ನು ಬರಮಾಡಿಸಿದ. ಸಕಲ ಸಂಭ್ರಮದೊಡನೆ ದಿಬ್ಬಣ ಅಡಿದೊಡೆಂಜಕ್ಕೆ ಹೋಯಿತು. ಬಹಳ ವಿಜೃಂಭಣೆಯಿಂದ ಮದುವೆಯಾಯಿತು.

"ಹುಡುಗಿ ಇನ್ನೂ ಚಿಕ್ಕವಳು. ಮೈ ನೆರೆದಿಲ್ಲ. ಹುಡುಗಿಗೆ ಪ್ರಾಯತುಂಬುವವರೆಗೆ ಆಕೆ ನನ್ನಲ್ಲೇ ಇರಲಿ. ಆ ಬಳಿಕ ನೀವು ಕರಕೊಂಡು ಹೋಗಿ" ಎಂದ ಪೂಜಾರಿ. ನೇಸು ಬಂಟ ಒಪ್ಪಿದ. ಮತ್ತೆ ಹುಡುಗಿ ಪೂಜಾರಿಯ ಮನೆಯಲ್ಲೇ ಬೆಳೆಯ ತೊಡಗಿದಳು. ಅಕ್ಕ ತಮ್ಮರು ಜೊತೆಗೂಡಿ ಬಾಳಿದರು.

ಕಾಲ ಕಳೆಯಿತು. ಹುಡುಗಿ ಹೆಣ್ಣಾದಳು. ನೇಸು ಬಂಟನಿಗೆ ಓಲೆ ಕಳುಹಿಸಲಾಯಿತು. ನೇಸು ಬಂಟ ಮಡದಿಯನ್ನು ಕರಕೊಂಡು ಹೋಗಲು ಬರುವುದಾಗಿ ಆಳು ಕಳುಹಿಸಿದ. ನಿಶ್ಚಯಿಸಿದ ದಿನ ನೇಸು ಬಂಟ ತನ್ನ ಇಬ್ಬರು ಆಳುಗಳನ್ನು ತನ್ನ ಹಾಗೆಯೇ ಸಿಂಗರಿಸಿದ. ನೇಸು ಬಂಟನು ಯಾರು, ಆಳುಗಳು

ಯಾರು ಎಂದು ತಿಳಿಯದಂತಾಯಿತು. ಹೀಗೆ ಈ ಇಬ್ಬರನ್ನು ಎಡಬಲದಲ್ಲಿರಿಸಿಕೊಂಡು ನೇಸು ಬಂಟ ಪೂಜಾರಿಯ ಮನೆಗೆ ಬಂದ. ಹೊಸದಾಗಿ ಬಂದ ಗಂಡನಿಗೆ ಹುಡುಗಿ ಹಾಲು ಕೊಡಬೇಕು. ಹುಡುಗಿ ಬೆಳ್ಳಿಯ ಲೋಟದಲ್ಲಿ ಹಾಲು ಹಿಡಕೊಂಡು ಬಂದಳು. ಚಾವಡಿಗೆ ಬಂದು ನೋಡುವಾಗ ಒಂದೇ ತರದ ವೇಷ ಭೂಷಣದಲ್ಲಿ ಮೂವರು ಸಾಲಾಗಿ ಕುಳಿತಿದ್ದರು. ಈ ಮೂವರಲ್ಲಿ ತನ್ನ ಗಂಡ ಯಾರು ? ಯಾರಿಗೆ ಹಾಲು ಕೊಡುವುದು ? ಅವಳು ದೇವರನ್ನು ಧ್ಯಾನಿಸಿದಳು. ಒಮ್ಮೆಲೇ ತನ್ನ ಗಂಡ ನೇಸು ಬಂಟನನ್ನು ಬಿಟ್ಟು ಉಳಿದಿಬ್ಬರು ಅವಳಿಗೆ ಮೊಸಳೆಗಳಾಗಿ ಕಂಡರು. ನೇರವಾಗಿ ನೇಸು ಬಂಟನ ಬಳಿ ಬಂದು ಹಾಲು ಕೊಟ್ಟಳು. ನೇಸು ಬಂಟನಿಗೆ ಮಡದಿಯ ಸತ್ಯವನ್ನು ಕಂಡು ಸಂತೋಷವಾಯಿತು.

ನೇಸು ಬಂಟ ಮಡದಿಯನ್ನು ಕರೆದುಕೊಂಡು ತನ್ನೂರಿಗೆ ಹೊರಟ. ಪೂಜಾರಿಯ ಮನೆಯಿಂದ ಹೊರಡುವಾಗ ಹುಡುಗಿಗೆ ದುಃಖ ಉಕ್ಕಿ ಬಂತು. ಪೂಜಾರಿಯ ಕಾಲು ಹಿಡಿದು ಕಣ್ಣೀರು ಕರೆದಳು. ತಮ್ಮನನ್ನು ತಬ್ಬಿಕೊಂಡು ಗೋಳಿಟ್ಟಳು. ತಮ್ಮನನ್ನು ಬಿಟ್ಟು ಹೋಗವುದೆಂದರೆ ಪ್ರಾಣವನ್ನೇ ಬಿಟ್ಟು ಹೋದಂತೆ ಅನ್ನಿಸಿತು. ಕೊನೆಗೂ ರೀತಿ ರಿವಾಜಿನಂತೆ ಅವಳು ಗಂಡನ ಮನೆಗೆ ಹೊರಟು ಹೋದಳು.

ದಿನಗಳು ಉರುಳಿದವು. ಆದರೆ ಅವಳ ದುಃಖ ಕಡಿಮೆಯಾಗಲಿಲ್ಲ. ತಮ್ಮನ ನೆನಪು ಮಾಸಲಿಲ್ಲ. ದಿನಾ ಕಣ್ಣೀರು ಹರಿಯುತ್ತಿತ್ತು. ಒಂದು ದಿನ ನೇಸು ಬಂಟ ಹೆಂಡತಿಯನ್ನು ಏಳು ಮಾಳಿಗೆಯ ಮೇಲೆ ಕುಳಿರಿಸಿ ಪರವೂರಿಗೆ ಹೋಗಿದ್ದ. ಒಬ್ಬಂಟಿಯಾಗಿ ಕುಳಿತಿದ್ದ ಅವಳಿಗೆ ತಮ್ಮನ ನೆನಪಿನಿಂದ ಕಣ್ಣೀರು ಉಕ್ಕಿ ಬಂತು. ದುಃಖ ತಡೆಯಲಾಗಲಿಲ್ಲ. ತಮ್ಮನನ್ನು ಅಗಲಿ ತಾನಿರುವುದಕ್ಕಿಂತ ಸಾಯುವುದೇ ಮೇಲು ಎಂದು ನಿಶ್ಚಯಿಸಿದಳು.

ಹೀಗೆ ನಿಶ್ಚಯಿಸಿದವಳೇ ಏಳು ಮಾಳಿಗೆಯ್ರ ಮೇಲಿಂದ ಮಾಯವಾಗಿ ಕಾಡಿನ ಮಧ್ಯೆ ಇರುವ ಕೆರೆಯ ಬಳಿ ಬಂದಳು. ಕೆರೆಗೆ ಹಾರಿ ಪ್ರಾಣ ಕಳಕೊಳ್ಳುವುದೆಂದು ನಿಶ್ಚಯಿಸಿ ಸಿದ್ದಳಾದಾಗ ಅಲ್ಲಿ ಅವಳ ತಮ್ಮನೂ ಬಂದಿರುವುದನ್ನು ಕಂಡಳು. ಅವಳಿಗೆ ತಮ್ಮನನ್ನು ಕಂಡು ತುಂಬಾ ಸಂತೋಷವಾಯಿತು. ಅವಳು ತಮ್ಮನನ್ನು ತಬ್ಬಿಕೊಂಡು ತಾನು ಬಂದಿರುವ ವಿಚಾರ ತಿಳಿಸಿದಳು. ಅಕ್ಕನನ್ನು ಅಗಲಿ ಬಾಳಲಾರದೆ ತಾನೂ ಸಾಯಲು ಬಂದಿರುವುದಾಗಿ ತಮ್ಮನೂ ತಿಳಿಸಿದ.ಅಕ್ಕ ತಮ್ಮಂದಿರು ಪರಸ್ಪರ ತಬ್ಬಿಕೊಂಡರು. ಒಮ್ಮೆಲೇ ಇಬ್ಬರೂ ಕೆರೆಗೆ ಹಾರಿದರು. ಕೆರೆಯಲ್ಲಿದ್ದ ಎರಡು ಮೊಸಳೆಗಳು ಇಬ್ಬರನ್ನೂ ನುಂಗಿದವು. ಹೀಗೆ ದಿಕ್ಕಿಲ್ಲದ ಮಕ್ಕಳು ದಿಕ್ಕುಗಾಣದ ದೇಶಕ್ಕೆ ಹೋದರು.

ಈ ಕಥೆಯನ್ನು ಬಂಟ್ವಾಳ ತಾಲೂಕಿನ ಗೋಳಿನೆಲ್ಲಿ ಊರಿನ ಚೆನ್ನಮ್ಮ ಎಂಬ ಹೆಂಗಸಿನಿಂದ (ಪ್ರಾಯ 65 ವರ್ಷ) ಸಂಗ್ರಹಿಸಲಾಗಿದೆ. ಇದು ಸುಮಾರು 15 ಆಶಯಗಳುಳ್ಳ ಸಂಕೀರ್ಣ ಕಥೆ. ವಸ್ತುವಿನ ದೃಷ್ಟಿಯಿಂದ ಈ ಕಥೆಯಲ್ಲಿ ಮಾಂತ್ರಿಕ ಅಂಶಗಳು ಇಲ್ಲದ ಕಾರಣ, ಇದನ್ನು ಮಾಂತ್ರಿಕ ಕಥೆಗಳ ವರ್ಗಗಳಿಗೆ ಸೇರಿಸಿಲ್ಲ. ಆಶಯಗಳ ದೃಷ್ಟಿಯಿಂದ ಹಿಂದೆ ನೋಡಿದ ಮಾಂತ್ರಿಕ ಕಥೆಗಳ ಕೆಲವು ಆಶಯಗಳು ಇಲ್ಲಿ ಸಿಗುತ್ತವೆ. ಇಬ್ಬರು ಅನಾಥ ಮಕ್ಕಳ ದುರಂತ ಕಥೆಯ ವಿವರಣೆಯು ಇಲ್ಲಿ ಬರುತ್ತದೆ. ಸಾಮಾನ್ಯ ಜನಪದ ಕಥೆಗಳ ಲಕ್ಷಣ ಅಷ್ಟೊಂದು ಸಮರ್ಪಕವಾಗಿ ಇಲ್ಲಿ ಕಾಣಿಸುವುದಿಲ್ಲ. ಕಥೆಯ ರಚನೆಯೂ ಬಹಳ ಸಡಿಲವಾಗಿದೆ. ಆದರೆ ಅನಾಥ ಮಕ್ಕಳಿಗೆ ಸರ್ಪದ ರಕ್ಷಣೆ ಕನಸು ಬೀಳುವುದು, ಮಕ್ಕಳಿಲ್ಲದವರಿಗೆ ಮಕ್ಕಳು ಸಿಗುವುದು, ಒಂದೇ ರೀತಿಯ ವ್ಯಕ್ತಿಗಳಲ್ಲಿ ಒಬ್ಬರನ್ನು ಗುರುತಿಸುವ ಪರೀಕ್ಷೆ (ಆಶಯ H 161-0-1), ಅಕ್ಕತಮ್ಮ ಒಬ್ಬರ

ನ್ನೊಬ್ಬರು ಅಗಲಲಾರದೆ ಆತ್ಮಹತ್ಯೆ ಮಾಡುವುದು-ಈ ಘಟನೆಗಳು ಜನಪದ ಕಥೆಗಳ ಆವರಣದಲ್ಲಿಯೇ ನಡೆಯುತ್ತವೆ. ದೋಗುಸೆಟ್ಟಿ, ಮಂಗ ಮುಂದರಸು ಬಾಲೇಂದುಮ, ಭೂತ, ನೇಸು ಬಂಟ ಈ ಪಾತ್ರಗಳ ಮೂಲಕ ಈ ಕಥೆಗೆ ತುಳುಸಂಸ್ಕೃತಿಯ ವಾತಾವರಣ ಪ್ರಾಪ್ತವಾಗಿದೆ. ಇಲ್ಲಿ ಮಕ್ಕಳ ದುಃಖಕ್ಕೆ ಮಲತಾಯಿ ಅಥವಾ ಇತರರು ಯಾರೂ ಕಾರಣವಾಗದಿರುವುದು ಉಳಿದ ಜನಪದ ಕಥೆಗಳಿಂದ ಇದನ್ನು ಪ್ರತ್ಯೇಕಿಸುತ್ತದೆ. ಇಂತಹ ಇನ್ನೂ ಕೆಲವು ಕಥೆಗಳು ಸಿಕ್ಕಿದರೆ, ಇವುಗಳನ್ನೇ ಒಂದು ಗುಂಪನ್ನಾಗಿ ಪರಿಗಣಿಸಿ, ಪ್ರತ್ಯೇಕವಾಗಿ ಅಧ್ಯಯನ ಮಾಡಬಹುದು.

## (2) ಒಗಟು ಮಾತು

"ಗಂಡ ಹೆಂಡತಿಯರು ಇರುತ್ತಾರೆ. ಹೆಂಡತಿಗೆ ಒಬ್ಬ ಮಿಂಡ ಇರುತ್ತಾನೆ. ಅವನು ಮನೆಗೆ ಬರುವ ವಿಚಾರ ಗಂಡನಿಗೆ ಗೊತ್ತಾಗುತ್ತದೆ. ಹೆಂಡತಿಯು ತನ್ನ ಮಿಂಡನಿಗೆ ಎಲೆ ಹಾಕಿ ಬಡಿಸುತ್ತಿರುವಾಗ, ಗಂಡನು ಅಟ್ಟದಲ್ಲಿ ಹೊಂಚು ಹಾಕಿ ಇವರನ್ನು ಹಿಡಿಯಲು ಕಾದಿರುತ್ತಾನೆ. ಆಗ ಹೆಂಡತಿಯು ಗಂಡನನ್ನು ನೋಡಿಯೂ ನೋಡದಂತೆ ಬಡಿಸುತ್ತಿದ್ದಳು. ಏನು ಮಾಡುವುದು ? ಈ ಕಡೆಯಿಂದ ಮಿಂಡ ಬಂದಿದ್ದಾನೆ ಆ ಕಡೆಯಿಂದ ಗಂಡನು ಇರುವುದೂ ಅವನಿಗೆ ಗೊತ್ತಿಲ್ಲ. ಹೀಗಾಗಿ ಬಡಿಸುತ್ತಾ ಈ ಒಗಟು ಪದ್ಯ ಹೇಳುತ್ತಾಳೆ:

"ಸುತ್ತುತ್ತಾ ಇದೆ ನಿನಗಾಗಿ
ಮೇಲೆ ಕುಳಿತುಕೊಂಡಿದ್ದಾನೆ ನನಗಾಗಿ
ಸುತ್ತುತ್ತಾ ಮೀನು ಬೀಳುತ್ತದೆ ಗಾಳಕ್ಕೆ
ಮೇಲೆ ಕುಳಿತವನಿಗೆ ಗೊತ್ತಾಯಿತು"

ಆಗ ಮಿಂಡನು ಇದು ಯಾವ ಪದ್ಯವೆಂದು ಕೇಳಿದ. "ಅದು ನನಗೆ ತಂದೆ ಕಲಿಸಿದ್ದು, ಮೀನು ಗಾಳಕ್ಕೆ ಬೀಳುವ ಪದ್ಯ" ಎನ್ನುತ್ತಾಳೆ.

ಇಲ್ಲಿ ಒಂದು ಒಗಟು ಘಟನೆಯೊಂದರ ರೂಪದಲ್ಲಿ ವ್ಯಕ್ತವಾಗಿದೆ. ಅದು ಘಟನಾರೂಪದ ಒಗಟಿಗೂ ಉದಾಹರಣೆಯಾಗುತ್ತದೆ. ಇಲ್ಲಿನ ಒಗಟು ಚಿಕ್ಕಪದ್ಯವೊಂದರ ರೂಪದಲ್ಲಿ ಇದೆ. ಹಿಂದೆ ನೋಡಿದ, ಹೆಣ್ಣಿನ ಜಾಣತನಕ್ಕೆ ಸಂಬಂಧಿಸಿದ ವಸ್ತು ಇಲ್ಲಿ ಇದೆ. ಆದರೆ ಇಲ್ಲಿ ಯಾವ ಮಾಂತ್ರಿಕ ಆವರಣವೂ ಇಲ್ಲ. ಬರೇ ಜಾಣತನವು ಪ್ರಧಾನವಾಗಿರುವ ಸಂದರ್ಭ ಮಾತ್ರ ಇದೆ. ಗಂಡ-ಹೆಂಡತಿ-ಮಿಂಡ-ಒಗಟುಮಾತು : ಈ ಸೂತ್ರಕ್ಕೆ ಅಳವಟ್ಟ ಮನೋರಂಜಕ ಗುಣವುಳ್ಳ ಒಗಟು ಕಥನ ಎಂದು ಕರೆಯಬಹುದು.

ಇಲ್ಲಿನ ಮೀನು ಮತ್ತು ಗಾಳದ ಕಲ್ಪನೆಯುಲ್ಲಿ ತುಳುವ ಸಂಸ್ಕೃತಿಯ ಅಭಿವ್ಯಕ್ತಿಯ ಜೊತೆಗೆ, ಒಗಟಿನ ಸಾಂಕೇತಿಕ ಗುಣದ ಸಮರ್ಥ ನಿರೂಪಣೆಯನ್ನೂ ಕಾಣಬಹುದು.

## ದಾಸಯ್ಯನ ಮಗಳು

"ಒಂದು ಊರಿನಲ್ಲಿ ಒಬ್ಬ ಅರಸು ಇದ್ದನು. ಅರಮನೆಯ ಹತ್ತಿರವೇ ಒಬ್ಬ ದಾಸಯ್ಯನ ಮನೆಯೂ ಇದ್ದಿತು. ದಾಸಯ್ಯನ ಹೆಂಡತಿಗೂ ದಾಸಯ್ಯನಿಗೂ ಒಂದೇ ನಕ್ಷತ್ರ. ಯಾವಾಗ ನೋಡಿದರೂ ಜಗಳ.

ಜಗಳ ಮಾಡಿ ಅವನು ಪೆಟ್ಟುಕೊಟ್ಟ ಕೂಡಲೇ ಅವಳು ಮಗುವನ್ನು ಹಿಡಿದುಕೊಂಡು ತಾಯಿ ಮನೆಗೆ ಹೋಗುತ್ತಾಳೆ. ಅವಳು ಹೋಗಿ ಏಳೆಂಟು ದಿವಸ ಆಗುವಾಗ ದಾಸಯ್ಯನಿಗೆ ಮಗುವಿನ ನೆನಪು ಕಾಡುತ್ತದೆ. ಮತ್ತೆ ಜಗಳವಾದ ಕೂಡಲೇ ಅವಳು ಮತ್ತೆ ತಾಯಿ ಮನೆಗೆ ಓಡುತ್ತಾಳೆ. ಒಂದು ಬಾರಿ ದಾಸಯ್ಯನು ಹೆಂಡತಿಗೆ ಚೆನ್ನಾಗಿ ಬೆನ್ನು ಪುಡಿಯಾಗುವಂತೆ ಪೆಟ್ಟು ಕೊಟ್ಟನು. ಅವಳು ತಡೆಯಲಾರದೆ ಮಗುವನ್ನು ಹಿಡಿದು ಹೊರಟಾಗ, ದಾಸಯ್ಯನು "ಮಗುವನು ಎಲ್ಲಿಗೆ ಕೊಂಡು ಹೋಗುತ್ತಿ ? ಮಗು ನನಗೆ ಬೇಕು" ಎಂದು ಎಳೆದುಕೊಂಡನು. ಅವಳಿಗೆ ಮಗುವನ್ನು ಬಿಟ್ಟುಹೋಗಲು ಮನಸ್ಸಿಲ್ಲ.

ಅವಳು ಇದನ್ನು ಅರಸನಲ್ಲಿ ತಿಳಿಸಿ, ನ್ಯಾಯತೀರ್ಮಾನ ಮಾಡಿಕೊಡಬೇಕು ಎಂದು ಹೇಳಿದರು. ಅರಸನು ದಾಸಯ್ಯನನ್ನು ಆಳುಕಳುಹಿಸಿ ತರಿಸಿದನು. "ನಿಮ್ಮದೇನು ನ್ಯಾಯ ? ನಿನ್ನ ಹೆಂಡತಿ ನನ್ನಲ್ಲಿ ಬಂದು ದೂರು ಕೊಟ್ಟಿದ್ದಾಳೆ" ಎಂದು ಅರಸು ಕೇಳಿದನು. "ನನಗೂ ಅವಳಿಗೂ ಸರಿಹೋಗುವುದಿಲ್ಲ. ಅವಳು ತಾಯಿಯ ಮನೆಗೆ ಹೋಗುತ್ತಾಳಂತೆ. ಮಗುವನ್ನು ನಾನು ಇರಿಸಿಕೊಂಡಿದ್ದೇನೆ. ಅವಳು ಹೋಗುವುದಾದರೆ ಹೋಗಲಿ" ಎಂದನು ದಾಸಯ್ಯ. ಆಗ ದಾಸಯ್ಯನ ಹೆಂಡತಿಯು ಅರಸನಲ್ಲಿ ತನ್ನ ಮಗನನ್ನು ತನಗೆ ಕೊಡಿಸಿ ಎಂದು ಅತ್ತು ಹೇಳಿದಳು, ಅದಕ್ಕೆ ಅರಸು "ಮಗು ನಿನ್ನದು ಹೇಗೆ ಆಗುವುದು ? ನೀನು ಬರುವಾಗ ಮಗುವನ್ನು ತಂದಿದ್ದೀಯಾ ? ನಿನಗೆ ಮಗುವನ್ನು ಕೊಡಿಸಲು ಆಗುವುದಿಲ್ಲ" ಎಂದನು. ಆಗುವುದಿಲ್ಲ ಎಂದು ತೀರ್ಮಾನ ಮಾಡಿದ ಮೇಲೆ, ಮಗುವಿಲ್ಲದಿದ್ದರೆ ಪರವಾಗಿಲ್ಲ ಎಂದು ಹೇಳಿ ಅವಳು ಕೋಪದಿಂದಲೇ ತಾಯಿ ಮನೆಗೆ ಹೋದಳು.

ತಾಯಿ ಹೋದ ಮೇಲೆ ಮಗು ಹಠಮಾಡಲು ಸುರುಮಾಡಿತು. ಹಠ ಹಿಡಿದಾಗ ದಾಸಯ್ಯನು ಚಿಲ್ಲರೆ ಹಣ ಕೊಟ್ಟರೆ ಸುಮ್ಮನೆ ಕುಳಿತುಕೊಳ್ಳುತ್ತಿತ್ತು. ಹೀಗೆಯೇ ಹಠ ಮಾಡುತ್ತಾ ಇರುತ್ತಿತ್ತು. ಚಿಲ್ಲರೆ ಹಣ ಕೊಟ್ಟಾಗ ಸುಮ್ಮನಾಗುತ್ತಿತ್ತು. ಮಗು ಆ ಚಿಲ್ಲರೆ ಹಣವನ್ನೆಲ್ಲಾ ಅಟ್ಟಕ್ಕೆ ಬಿಸಾಡುತ್ತಿತ್ತು. ಒಂದು ವರ್ಷ ಕಳೆಯುವಾಗ, ದಾಸಯ್ಯನು ಅಟ್ಟವನ್ನು ಗುಡಿಸಲು ಹೋದಾಗ, ಅಟ್ಟದಲ್ಲಿ ತುಂಬಾ ಹಣವನ್ನು ನೋಡಿ, ಮಗಳಲ್ಲಿ ಕೇಳಿದನು. ಆಗ ಅವಳು "ನೀವು ಕೊಟ್ಟ ಹಣವನ್ನೆಲ್ಲಾ ನಾನು ಅದಕ್ಕೆ ಬಿಸಾಡಿದ್ದೇನೆ. ಷಷ್ಠಿಯ ಸಮಯದಲ್ಲಿ ಸುಬ್ರಹ್ಮಣ್ಯಕ್ಕೆ ಹೋಗಿ ಒಂದು ಜೊತೆ ಬೆಳ್ಳಿ ಎತ್ತುಗಳನ್ನು ತರಬೇಕು ಅಪ್ಪಾ" ಎಂದಳು.

ಮಗಳು ಹೇಳಿದಂತೆಯೇ ಒಂದು ಜೊತೆ ಬೆಳ್ಳಿ ಎತ್ತುಗಳನ್ನು ತಂದು, ಒಂದು ದೊಡ್ಡ ಹಟ್ಟಿಯಲ್ಲಿ ಕಟ್ಟಿದನು. ಮಗಳಿಗೆ ಹತ್ತು ಹನ್ನೆರಡು ವರ್ಷ ಆದಾಗ, ಅವಳು ಈ ಎತ್ತುಗಳನ್ನು ಗುಡ್ಡಕ್ಕೆ ಮೇಯಲು ಬಿಟ್ಟಳು. ಅರಸನ ಹಸುಗಳೂ ಅದೇ ಗುಡ್ಡಕ್ಕೆ ಮೇಯಲು ಬರುತ್ತಿದ್ದವು, ಈ ಎತ್ತಿನಿಂದಾಗಿ ಆ ಹಸುಗಳಿಗೆ ಗರ್ಭ ನಿಂತಿತು. ಅವುಗಳಿಗೆ ಬೆಳ್ಳಿ ಬೆಳ್ಳಿ ಕರುಗಳು ಹುಟ್ಟಿದವು. ಈ ಕರುಗಳು ದೊಡ್ಡದಾದಾಗ ಅರಸನು ಅವುಗಳನ್ನು ಗುಡ್ಡಕ್ಕೆ ಬಿಡಲು ಹೇಳಿದನು. ದಾಸಯ್ಯನ ಮಗಳು ಈ ಬೆಳ್ಳಿ ಕರುಗಳನ್ನೆಲ್ಲಾ ಅಟ್ಟಿಕೊಂಡು ಬಂದು, ತನ್ನ ಹಟ್ಟಿಯಲ್ಲಿ ಕಟ್ಟಿದಳು. ಅದು ಅವನಿಗೆ ಗೊತ್ತಾಯಿತು. ಅವನು ದಾಸಯ್ಯನ ಮಗಳನ್ನು ಕರೆಸಿ ವಿಚಾರಣೆ ಮಾಡಿದನು.

"ಹೌದೇನೇ, ಅರಮನೆಯ ಕರುಗಳನ್ನು ಯಾಕೆ ಕಟ್ಟಿ ಹಾಕಿದೆ ? ಹೇಳು" ಎಂದನು ಅರಸು. ಅದಕ್ಕೆ ಅವಳು "ಆ ಕರುಗಳೆಲ್ಲಾ ನನ್ನ ಎತ್ತಿಗೆ ಹುಟ್ಟಿದವುಗಳು. ಅವುಗಳನ್ನು ಬಿಡಲು ಸಾಧ್ಯವಿಲ್ಲ. ಅಂದು ನನ್ನ ತಾಯಿ "ಮಗುವನ್ನು ಕಳುಹಿಸಿರಿ" ಎಂದು ನಿಮ್ಮಲ್ಲಿ ಕೇಳಿದಾಗ, ನೀವು "ನೀನು ಬರುವಾಗ ಮಗುವನ್ನು ತಂದಿದ್ದಿಯಾ" ಎಂದು ಕೇಳಲಿಲ್ಲವೇ ? ಹಾಗೆಯೇ, ನಾನು ಹೋರಿಯನ್ನು ತರುವುದಕ್ಕೆ ಮೊದಲು ಈ ದನಗಳು ಕರುಹಾಕಿದ್ದು ಅಲ್ಲ. ಈ ಕರುಗಳೆಲ್ಲಾ ಈ ಎತ್ತಿನದು. ಆದ್ದರಿಂದ ಅವುಗಳನ್ನು ಬಿಡುವುದಿಲ್ಲ" ಎಂದು ಹೇಳಿದಳು.

ಅರಸನಿಗೆ ಏನೂ ಮಾಡಲೂ ಆಗಲಿಲ್ಲ. ಇವಳನ್ನು ಹೇಗಾದರೂ ಮಾಡಿ ಸೋಲಿಸಬೇಕೆಂದು ಆಲೋಚನೆ ಮಾಡಿ, ಒಂದು ದಿನ ದಾಸಯ್ಯನನ್ನು ಬರಹೇಳಿದ. ದಾಸಯ್ಯನಲ್ಲಿ 'ಒಂದು ಕೊಡದಲ್ಲಿ ಒಂದು ದೊಡ್ಡ ಚೀನಿಕಾಯಿ (ಸಿಹಿ ಕುಂಬಳಕಾಯಿ)ಯನ್ನು ತುಂಬಿಸಿಕೊಡಬೇಕು' ಎಂದು ಅಪ್ಪಣೆ ಮಾಡಿದ. ದಾಸಯ್ಯನಿಗೆ ತಲೆ ಬಿಸಿಯಾಯಿತು. ಮನೆಗೆ ಬಂದು ಬಟ್ಟೆ ಮುಸುಕು ಹಾಕಿ ಮಲಗಿದನು. ಮಗಳು ಬಂದು ಊಟ ಮಾಡಲು ಕರೆಯುವಾಗ, ಅಳುತ್ತಾ ಈ ಸಂಗತಿಯನ್ನು ಹೇಳಿದ. ಅವಳು "ಅಪ್ಪಾ, ನೀವು ಇದಕ್ಕೆ ಯಾಕೆ ಹೆದರುತ್ತೀರಿ? ಈಗ ಊಟ ಮಾಡಿರಿ. ಆಮೇಲೆ ಅರಸನಲ್ಲಿಗೆ ಹೋಗಿ ಎರಡು ತಿಂಗಳ ವಾಯಿದೆಯನ್ನೂ ಎರಡು ಸಾವಿರ ರೂಪಾಯಿಗಳನ್ನೂ ತನ್ನಿರಿ" ಎಂದು ಹೇಳಿದಳು.

ದಾಸಯ್ಯನು ಹಾಗೆಯೇ ಕೇಳಿ ತಂದನು. ಮಗಳು ಹಣವನ್ನು ತೆಗೆದುಕೊಂಡು, ಒಳಗೆ ಇಟ್ಟು, ಚೀನೀ ಕಾಯಿಯನ್ನು ಬೀಜಹಾಕಿ ಬಳ್ಳಿಯನ್ನು ಚೆನ್ನಾಗಿ ಸಾಕಿದಳು. ಚೀನೀಕಾಯಿಯ ಮಿಡಿ ಆಗುವಾಗ, ಒಂದು ಮಡಕೆಯ ಒಳಗೆ ಇಟ್ಟು ಬಿಟ್ಟಳು. ಮಿಡಿಯು ದೊಡ್ಡದಾಯಿತು, ಮಡಕೆಯೊಳಗೆ ತುಂಬಿತು. ಚೀನೀಕಾಯಿಯನ್ನು ಮಡಕೆಯ ಸಹಿತ ತಂದೆಯಲ್ಲಿ ಕೊಟ್ಟು, "ಈ ಚೀನಿಕಾಯಿಯನ್ನು ತೆಗೆದು, ಮಡಕೆಯನ್ನು ಹಿಂದಕ್ಕೆ ಕೊಡಬೇಕಂತೆ" ಎಂದು ಹೇಳಿ ಕಳುಹಿಸಿದಳು. ಇದನ್ನು ಕೇಳಿ ಅರಸನಿಗೆ ತಲೆಬಿಸಿ ಆಯಿತು, ಅದಕ್ಕಾಗಿ ಅವನು ಈ ಮಣ್ಣಿನ ಮಡಕೆಯ ಬದಲು ಒಂದು ಚಿನ್ನದ ಕೊಡವನ್ನು ಕೊಟ್ಟನು.

ಹೇಗಾದರೂ ಇವಳನ್ನು ಸೋಲಿಸಬೇಕೆಂದು ಅರಸನು ದಾಸಯ್ಯನನ್ನು ಮತ್ತೆ ಬರಹೇಳಿದನು. "ಅರಮನೆಯ ಬಾವಿಯಲ್ಲಿ ನೀರಿಲ್ಲ. ಅದಕ್ಕಾಗಿ ವಿಟ್ಲದಿಂದ ಒಂದು ಬಾವಿಯನ್ನು ತಂದುಕೊಡಬೇಕು" ಎಂದು ಅಪ್ಪಣೆ ಮಾಡಿದನು. ದಾಸಯ್ಯನು ಮತ್ತೆ ತಲೆಬಿಸಿಯಲ್ಲಿ ಬಟ್ಟೆಯ ಮುಸುಕು ಹಾಕಿ ಮನೆಯಲ್ಲಿ ಮಲಗಿದನು. ಮಗಳು ತಂದೆಯನ್ನು ಊಟಕ್ಕೆ ಕರೆಯುವಾಗ ಈ ಸಂಗತಿಯನ್ನು ಅಳುತ್ತಾ ಹೇಳಿದ. ಅದಕ್ಕೆ ಮಗಳು "ಅಷ್ಟೇ ಅಲ್ಲವೇ, ನೀವು ಈಗ ಊಟ ಮಾಡಿರಿ. ಮತ್ತೆ ಅರಮನೆಗೆ ಹೋಗಿ, ಒಂದು ತಿಂಗಳಿನ ವಾಯಿದೆಯನ್ನೂ ನಾಲ್ಕು ಸಾವಿರ ರೂಪಾಯಿಯನ್ನೂ ತೆಗೆದುಕೊಂಡು ಬನ್ನಿರಿ" ಎಂದಳು.

ದಾಸಯ್ಯನು ಹಾಗೆಯೇ ಮಾಡಿದನು. ನಾಲ್ಕು ತಿಂಗಳು ಕಳೆದು, ಕೊನೆಯ ದಿನದಂದು, ಮಟ ಮಟ ಮಧ್ಯಾಹ್ನದ ಬಿಸಿಲಿಗೆ ಬಿಸಿ ಬಿಸಿ ಗಂಜಿ ಉಂಡು, ಬೆವರು ಇಳಿಸಿಕೊಂಡು "ವಿಟ್ಲದ ಬಾವಿಯು ನೆಲದ ಒಳಗೆಯೇ ಅರಮನೆಗೆ ಬರುತ್ತಾ ಇದೆ. ಅರಮನೆಯ ಹೊಟ್ಟು ಬಾವಿಯನ್ನು ವಿಟ್ಲಕ್ಕೆ ಕಳುಹಿಸಬೇಕಂತೆ" ಎಂದು ತಂದೆಯಲ್ಲಿ ಅರಮನೆಗೆ ಹೋಗಿ ಹೇಳಲು ತಿಳಿಸಿದಳು. ಹಾಗೆಯೇ ದಾಸಯ್ಯನು ಬಿಸಿ ಬಿಸಿ ಗಂಜಿ ಉಂಡು, ಬೆವರು ಇಳಿಸಿಕೊಂಡು ಓಡಿದನು.

ಇದನ್ನು ಕೇಳಿ ಅರಸನಿಗೆ ತಲೆ ಬಿಸಿಯಾಯಿತು. "ಅರಮನೆಯ ಬಾವಿಯಲ್ಲಿ ಈಗ ನೀರು ಇದೆ. ವಿಟ್ಲದ ಬಾವಿಯು ಹಿಂದಕ್ಕೆ ಹೋಗಲಿ" ಎಂದನು ಅರಸ. ದಾಸಯ್ಯನು ಈ ಸಂಗತಿಯನ್ನು ಮಗಳಲ್ಲಿ ಹೇಳಿದಾಗ, ಅವಳು ಜೋರಾಗಿ ನಕ್ಕಳು"

"ದಾಸಯ್ಯನ ಮಗಳು" ಕಥೆಯು ತುಳುವಿನ ಮೂಲರೂಪದ ಸಂಪೂರ್ಣ ಕನ್ನಡ ಅನುವಾದವನ್ನು ಇಲ್ಲಿ ಕೊಡಲಾಗಿದೆ. ಸುಮಾರು 10 ಆಶಯಗಳುಳ್ಳ ಇದು ಒಂದು ಸಂಕೀರ್ಣ ಜನಪದ ಕಥೆ. ವಸ್ತುವಿನ ದೃಷ್ಟಿಯಿಂದ ಇದು ಸ್ಪಷ್ಟವಾಗಿ 850–999 ವರ್ಗಗಳ ಗುಂಪಿನ ರಮ್ಯ ಕಥಾ ವರ್ಗಕ್ಕೆ ಸೇರುತ್ತದೆ. "ಒಗಟು ಬಿಡಿಸುವ ಜಾಣರು" (Clever riddle solvers) ಎನ್ನುವಲ್ಲಿನ ಬಹಳ ಜನಪ್ರಿಯ ಗುಂಪಾದ 'The Clever peasent girl' (ವರ್ಗ 875) ಎನ್ನುವುದಕ್ಕೆ ಈ ಕಥೆ ಸೇರುತ್ತದೆ.

'ದಾಸಯ್ಯನ ಮಗಳು' ಕಥೆಯಲ್ಲಿನ ಮುಖ್ಯ ಘಟನೆಗಳು :

1) ದಾಸಯ್ಯ ಮತ್ತು ಅವನ ಹೆಂಡತಿಯ ಜಗಳ. ಅದರ ನ್ಯಾಯತೀರ್ಮಾನ ಮಾಡಿದ ಅರಸನು ಅವರು ಬೇರೆಯಾಗಲು ಒಪ್ಪಿಗೆ ನೀಡಿ, ಮಗುವನ್ನು ದಾಸಯ್ಯನಿಗೆ ಕೊಡುವುದು.

2) ದಾಸಯ್ಯನ ಮಗಳು ತನ್ನ ಎತ್ತುಗಳು ಮತ್ತು ಅರಸನ ದನಗಳು ಇವುಗಳ ಸಂಬಂಧದ ವೃತ್ತಾಂತದ ಮೂಲಕ ಅರಸನು ಹಿಂದೆ ಮಾಡಿದ ನ್ಯಾಯ ತೀರ್ಮಾನದ ಅಸಂಗತತೆಯನ್ನು ತೋರಿಸಿಕೊಡುವುದು. ಮುಖಭಂಗ ಮಾಡುವುದು.

3) ಅರಸನು ದಾಸಯ್ಯನ ಮಗಳ ಬುದ್ಧಿವಂತಿಕೆಯನ್ನು ಪರೀಕ್ಷಿಸಲು, ದಾಸಯ್ಯನಿಗೆ ಒಡ್ಡುವ ಎಲ್ಲ ಪರೀಕ್ಷೆಗಳನ್ನೂ ದಾಸಯ್ಯನ ಮಗಳು ತನ್ನ ಜಾಣತನದಿಂದ ನೆರವೇರಿಸಿ ಅಥವಾ ಅದರ ಅಸಂಗತತೆಯನ್ನು ತೋರಿಸಿಕೊಟ್ಟು, ರಾಜನ ಮುಗಭಂಗ ಮಾಡುವುದು.

i) ಮಡಕೆಯೊಳಗೆ ಚೀನೀಕಾಯಿ ತುಂಬಿಸುವುದು. (ಆಶಯ : H 1023.11)

ii) ಬಾವಿಯನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸ್ಥಳಾಂತರಿಸುವುದು.

(ಆಶಯ : H 1023.25)

ಕಥಾವರ್ಗ 875ರ 'The clever peasent girl' ಎನ್ನುವ ಕಥೆಯಲ್ಲಿ ರೈತನ ಮಗಳೊಬ್ಬಳು ರಾಜನ ಬೇರೆ ಬೇರೆ ಪ್ರಶ್ನೆಗಳಿಗೆ ಜಾಣತನದಿಂದ ಉತ್ತರಿಸುತ್ತಾಳೆ. ರಾಜನು ಒಡ್ಡಿದ ಅಸಾಧ್ಯ ಕಾರ್ಯಗಳನ್ನು ಜಾಣತನದಿಂದ ನೆರವೇರಿಸುತ್ತಾಳೆ. ಈ ಕಥೆಗೆ ಜಗತ್ತಿನಾದ್ಯಂತ ಭಿನ್ನ ಪಾಠಗಳು ಸಿಕ್ಕಿವೆ. ಇದರ ಜೊತೆಗೆ 'The Son of the King and of the Smith' (ವರ್ಗ 920) ಮತ್ತು 'The King and the peasent's son' (ವರ್ಗ 921) ಎಂಬ ಎರಡು ಕಥೆಗಳನ್ನೂ ಅಧ್ಯಯನ ಮಾಡಲಾಗಿದೆ. De vries ಎನ್ನುವವರು ವರ್ಗ 875 ಯುರೋಪಿಯನ್ ಮೂಲದ್ದೆಂದೂ ಉಳಿದ ಎರಡು ಭಾರತ ಮೂಲದ್ದೆಂದೂ ಅಭಿಪ್ರಾಯ ಪಡುತ್ತಾರೆ.[1] ಹೆಣ್ಣು ಜಾಣಪಾತ್ರವಾಗಿ ಬರುವ "ದಾಸಯ್ಯನ ಮಗಳು" ಕಥೆಯನ್ನು ಇಟ್ಟುಕೊಂಡು ಅಧ್ಯಯನ ಮಾಡಿದಾಗ, ವರ್ಗ 875ರ ಮೂಲ ಭಾರತವೇ ಎಂಬುದನ್ನು ಶೋಧಿಸಬಹುದು.

## (4) ಅನರ್ಥದ ಒಳತಿರುಳು

"ಒಂದೂರಿನಲ್ಲಿ ತಂದೆ, ತಾಯಿ, ಮಗ, ಮಗಳು ಇರುತ್ತಾರೆ. ಒಂದು ದಿನ ತಂದೆ ಕೊಡೆ ರಿಪೇರಿ ಮಾಡಿಸಲು ಹೋಗುತ್ತಾನೆ. ಮಗನು ಬದನೆಯ ಸಸಿಗಳಿಗೆ ಮುಳ್ಳುಬೇಲಿ ಕಟ್ಟಲು ಹೋಗುತ್ತಾನೆ. ತಾಯಿಯು ಕಳ್ಳು ಕುಡಿಯಲು ಹೋಗುತ್ತಾಳೆ. ಮಗಳೊಬ್ಬಳೇ ಮನೆಯಲ್ಲಿ ಉಳಿಯುತ್ತಾಳೆ. ಆಗ ಅಲ್ಲಿಗೆ ಹೆಣ್ಣು ನೋಡಲು ಒಂದು ಕಡೆಯವರು ಬರುತ್ತಾರೆ. ಮನೆಯಲ್ಲಿದ್ದ ಹೆಣ್ಣಿನಲ್ಲಿ ತಂದೆ, ತಾಯಿ, ಅಣ್ಣ ಎಲ್ಲಿಗೆ ಹೋಗಿದ್ದಾರೆ ಎಂದು ವಿಚಾರಿಸುತ್ತಾರೆ. ಅದಕ್ಕೆ ಅವಳು "ತಂದೆಯು ಸೂರ್ಯನಿಗೆ ಮರೆಮಾಡಲು ಹೋಗಿದ್ದಾರೆ. ತಾಯಿಯು ಅಕ್ಕಿ ಕೊಟ್ಟು ಅನರ್ಥ ತರಲು ಹೋಗಿದ್ದಾಳೆ. ಅಣ್ಣನು ಮುಳ್ಳಿಗೆ ಮುಳ್ಳು

---

1 Stith Thompson : 'The Folktale. p. 160.

ಹಾಕಲು ಹೋಗಿದ್ದಾನೆ "ಎಂದು ಹೇಳಿದಳು. ಮನೆಯಲ್ಲಿ ಏನು ಪಲ್ಯವೆಂದು ಕೇಳಿದಾಗ, "ಕಾಲ ಸಂದಿನ ಅಡ್ಯೆ (ಅಕ್ಕಿ ತಿಂಡಿ), ಕುಂಡೆಯಿಂದ ಬರುವ ಪಲ್ಯ" ಎನ್ನುತ್ತಾಳೆ. ಈ ಹೆಣ್ಣಿನ ಈ ಮಾತುಗಳನ್ನು ಕೇಳಿ, ಅವಳಿಗೆ ಅಹಂಕಾರವೆಂದು ಭಾವಿಸಿ, ಬಂದವರು ಈ ಹೆಣ್ಣು ಬೇಡವೆಂದು ಬಿಟ್ಟು ಹೋದರು. ಹೋಗು ವಾಗ ದಾರಿಯಲ್ಲಿ ಅವಳ ತಂದೆ ಮತ್ತು ಅಣ್ಣ ಸಿಗುತ್ತಾರೆ. ಸಂಗತಿ ತಿಳಿಯುತ್ತದೆ. ಆಗ ಅವರು ಬಂದ ವರಿಗೆ ಹೆಣ್ಣಿನ ನುಡಿಗಳ ಗೂಢಾರ್ಥವನ್ನು ಈ ರೀತಿ ತಿಳಿಸುತ್ತಾರೆ." ಸೂರ್ಯನಿಗೆ ಮರೆ ಮಾಡಲು, ಅಂದರೆ ಕೊಡೆ ರಿಪೇರಿ ಮಾಡಲು, ಮುಳ್ಳಿಗೆ ಮುಳ್ಳು ಹಾಕಲು, ಅಂದರೆ ಬದನೆ ಸಸಿಗೆ ಬೇಲಿ ಹಾಕಲು. ಅಕ್ಕಿ ಕೊಟ್ಟು ಅನರ್ಥ ತರಲು, ಅಂದರೆ ಅಕ್ಕಿಯನ್ನು ಮಾರಿ ಕಳ್ಳು ಕುಡಿಯಲು, ಕಾಲ ಸಂದಿನ ಅಡ್ಯವೆಂದರೆ, ಸೇಮಗೆ ಮಣೆಯಿಂದ ಸೇಮಗೆ ಅಡ್ಯೆ, ಕುಂಡೆಯಿಂದ ಬರುವುದರ ಪಲ್ಯವೆಂದರೆ, ಹೇಂಟೆಯ ಕುಂಡೆಯಿಂದ ಬರುವ ಮೊಟ್ಟೆಯ ಪಲ್ಯ...ಹುಡುಗಿಯ ಜಾಣತನಕ್ಕೆ ಮೆಚ್ಚಿದ ಆಗಂತುಕರು ಆ ಹುಡುಗಿಯ ಮದುವೆಗೆ ಒಪ್ಪಿಕೊಂಡರು..

"ಅನರ್ಥದ ಒಳತಿರುಳು" ಎನ್ನುವುದು ತುಳು ಜನಪದ ಕಥೆಯೊಂದರ ಸಂಕ್ಷಿಪ್ತ ಕನ್ನಡ ರೂಪಾಂತರ. ರಮ್ಯ ಕಥೆಗಳ ವರ್ಗಕ್ಕೆ ಸೇರುವ ಈ ಕಥೆ ಬಹುಮಟ್ಟಿಗೆ "ದಾಸಯ್ಯನ ಮಗಳು" ಕಥೆಯ ಕೆಲವು ಅಂಶಗಳನ್ನು ಹೊಂದಿದೆ. ಆದರೆ ಕಥೆಯ ರೀತಿ ಅಲ್ಲಿಗಿಂತ ಇಲ್ಲಿ ಭಿನ್ನ. ಇಲ್ಲಿ ಜಾಣ ಹುಡುಗಿಯೊಬ್ಬಳು ತನ್ನ ಒಗಟು ರೂಪದ ಮಾತುಗಳಿಂದ, ಮೊದಲು ತಪ್ಪು ಅಭಿಪ್ರಾಯವನ್ನು ಹುಟ್ಟಿಸಿ, ಮತ್ತೆ ಮೆಚ್ಚುಗೆಗೆ ಪಾತ್ರವಾಗಿ ಗಂಡನ್ನು ಪಡೆಯುತ್ತಾಳೆ.

ಇದು ರಮ್ಯ ಕಥೆಯ ಸ್ವರೂಪದ್ದಾದರೂ ಒಂದೇ ಆಶಯ ಪ್ರಧಾನವಾಗಿದ್ದು, ಸರಳ ಕಥೆಯ ಮಾದರಿ ಯಾಗಿದೆ. ಈ ಕಥೆಯ ಪ್ರಧಾನ ಆಶಯ : H 580. Enigmatic statements. Apparently senseless remarks interpreted figuratively prove wise.

ಇಲ್ಲಿನ ಒಗಟುಮಾತುಗಳು ತುಳು ಒಗಟುಗಳ ಲಕ್ಷಣಗಳನ್ನು ಮತ್ತು ವಸ್ತು ಸ್ವರೂಪವನ್ನು ಬಹಳವಾಗಿ ಹೋಲುತ್ತವೆ. "ಕಾಲು ಸಂದಿನಿಂದ ಬರುವ ಅಡ್ಯೆ (ಅಕ್ಕಿ ತಿಂಡಿ) ಸೇಮಗೆ ಅಡ್ಯೆ : ಕುಂಡೆಯಿಂದ ಬರುವ ಪಲ್ಯ–ಹೇಂಟೆಯಿಂದ ಸಿಗುವ ಮೊಟ್ಟೆ : ಇದು ತುಳು ಒಗಟುಗಳಲ್ಲಿಯೂ ಸಿಗುತ್ತದೆ.

ಇಲ್ಲಿ ಹೆಣ್ಣಿನ ಪರೀಕ್ಷೆಗಾಗಿ ಗಂಡಿನ ಕಡೆಯವರು ಒಗಟನ್ನು ಒಡ್ಡುವುದಿಲ್ಲ, ಹೆಣ್ಣು ಅವರನ್ನು ಪರೀಕ್ಷಿ ಸಲು ಒಗಟನ್ನು ಒಡ್ಡುವುದೂ ಅಲ್ಲ. ಜಾಣ ಹೆಣ್ಣು ತನ್ನ ಮಾತುಗಳನ್ನು ಒಗಟುರೂಪದ ಮಾತುಗಳಲ್ಲಿ ಹೇಳಿ ಜಾಣತನವನ್ನು ಮೆರೆಯುತ್ತಾಳೆ.

## (5) ಅದೃಷ್ಟದ ಪಾಠ

"ಒಂದು ಊರಿನಲ್ಲಿ ಕಷ್ಟದಲ್ಲಿರುವ ಇಬ್ಬರು ಅಣ್ಣತಮ್ಮಂದಿರು. ಅಣ್ಣನು ದೇವರ ಸೇವೆ ಮಾಡು ತ್ತಿದ್ದ. ತಮ್ಮನು ರಾಜನ ಸೇವೆ ಮಾಡುತ್ತಿದ್ದ. "ರಾಜನು ಕೊಡಬೇಕು, ತಾನು ಉಣ್ಣಬೇಕು" ಎನ್ನುವುದು ತಮ್ಮನ ಮಾತು. "ದೇವರು ಕೊಡಬೇಕು, ತಾನು ಉಣ್ಣಬೇಕು" ಎನ್ನುವುದು ಅಣ್ಣನ ಮಾತು. ಇವರ ಮಾತುಗಳನ್ನು ಪರೀಕ್ಷಿಸಲು ರಾಜನು ಒಂದು ಕುಂಬಳ ಕಾಯಿಯ ಒಳಗಡೆ ನಾಣ್ಯಗಳನ್ನು ಇಟ್ಟು ತಮ್ಮನಿಗೆ ಕೊಡುವುದು. "ಇಷ್ಟು ದೊಡ್ಡ ಕುಂಬಳಕಾಯಿ ತಮಗೆ ಬೇಡ"ವೆಂಬ ಹೆಂಡತಿಯ ಮಾತಿನಂತೆ ಅವನು ಅದನ್ನು ಮಾರಾಟ ಮಾಡುವುದು. ಅಣ್ಣನ ಮನೆಗೆ ನೆಂಟರು ಬಂದಾಗ, ಆತ ಪಲ್ಯಕ್ಕಾಗಿ, ಪೇಟೆಗೆ ಹೋಗಿ

ಕುಂಬಳಕಾಯಿಯನ್ನು ತರುವುದು. ಅದು ತಮ್ಮನು ಮಾರಿದ ಕುಂಬಳಕಾಯಿ. ಅದನ್ನು ಮನೆಗೆ ತಂದು ಕೊಯ್ಯುವಾಗ, ಅದರೊಳಗಿದ್ದ ನಾಣ್ಯಗಳು ಅವರಿಗೆ ಸಿಗುವುದು. ಆ ಹಣ ನಮಗೆ ದೇವರು ಕೊಟ್ಟದ್ದು ಎಂದು ಅಣ್ಣ ಭಾವಿಸುವುದು" ವಿಚಾರಿಸಿದಾಗ ಈ ಸಂಗತಿ ರಾಜನಿಗೆ ಗೊತ್ತಾಗುವುದು."

ಇದು ತುಳುವಿನ ಮೂಲರೂಪದ ಸಂಕ್ಷಿಪ್ತ ಕನ್ನಡ ರೂಪಾಂತರ. ವಿನಯವು ಬಹುಮಾನವನ್ನು ತರುತ್ತದೆ. (ಆಶಯ L 200) ಮತ್ತು ಅದೃಷ್ಟ ಯಾರೂ ಊಹಿಸಲು ಅಸಾಧ್ಯವಾದದ್ದು, ದೇವರು ಮನುಷ್ಯನಿಗೆ ಅದೃಷ್ಟವನ್ನು ತಂದು ಕೊಡುತ್ತಾನೆ. ಮನುಷ್ಯನು ಎಷ್ಟೇ ಸಂಪತ್ತನ್ನು ಕೊಟ್ಟರೂ ಅದೃಷ್ಟ ಹೀನನಿಗೆ ಅದು ದಕ್ಕುವುದಿಲ್ಲ, ಅದೃಷ್ಟವಂತನಿಗೆ ಮಾತ್ರ ಸಲ್ಲುತ್ತದೆ ಎನ್ನುವ ಜನಪದ ನಂಬಿಕೆಯು ಇಲ್ಲಿ ಕಥೆಯು ರೂಪವನ್ನು ಪಡೆದಿದೆ.

ಇದನ್ನು ಹೋಲುವ ಕಥೆಯೊಂದು ಕನ್ನಡದಲ್ಲಿಯೂ ಸಿಗುತ್ತದೆ,[1]

"ಯಾರು ಹೆಚ್ಚು" ಕನ್ನಡ ಜನಪದ ಕಥೆಯಲ್ಲಿ ವಿನಯವಂತನು ಹೇಳುವ ಮಾತು "ಶಿವಕೊಟ್ಟರೆ ಉಂಟು, ಶಿವ ಕೊಡದಿದ್ದರೆ ಇಲ್ಲ" ಇನ್ನೊಬ್ಬನ ಮಾತು "ದೊರೆ ಕೊಟ್ಟರೆ ಉಂಟು, ದೊರೆ ಕೊಡದಿದ್ದರೆ ಇಲ್ಲ" ಕುಂಬಳ ಕಾಯಿಯ ಹಣವನ್ನು ಪರೀಕ್ಷಿಸುವುದು ತುಳು ಕಥೆಯಂತೆ ಇಲ್ಲಿಯೂ ಇದೆ. "ದೇವರು ಹೆಚ್ಚೇ ಹೊರ್ತು ದೊರೆಯೇನೂ ಹೆಚ್ಚಲ್ಲ" ಎಂದು ಕಥೆಯ ಕೊನೆಯಲ್ಲಿ ದೊರೆ ಹೇಳುವ ಮೂಲಕ ಅದೇ ರೀತಿಯಲ್ಲಿ ದೇವರ ಶ್ರೇಷ್ಠತೆ ಮತ್ತು ಅದೃಷ್ಟದ ಕೈವಾಡವನ್ನು ಇಲ್ಲಿಯೂ ಸಾರಲಾಗಿದೆ.

## (6) ಒಂದು ಮುಕ್ಕಾಲಿನ ಕತೆ

"ಒಬ್ಬ ರಾಜನು ಒಂದು ಮುಕ್ಕಾಲಿನ (ಕಾಲಾಣೆ) ಬೆಲೆ ಎಷ್ಟು ಎಂದು ಕೇಳಿದನು. ಎಲ್ಲರೂ ಒಂದು ಮುಕ್ಕಾಲಿಗೆ ಅಷ್ಟೇ ಬೆಲೆ ಎಂದರು, ಆಗ ರಾಜನ ಮಂತ್ರಿಯು "ಬಡವನ ಒಂದು ಮುಕ್ಕಾಲಿಗೆ ಒಂದು ಮುಕ್ಕಾಲಿನದ್ದೇ ಬೆಲೆ. ಆದರೆ ನಿಮ್ಮ ಒಂದು ಮುಕ್ಕಾಲಿಗೆ ಬೆಲೆ ಕಟ್ಟಲೇಸಾಧ್ಯವಿಲ್ಲ. ಆ ಮುಕ್ಕಾಲಿನಿಂದ ಏನು ಆದೀತು ಎಂದು ಹೇಳಲೂ ಸಾಧ್ಯವಿಲ್ಲ "ಎಂದನು. ಅಗ ರಾಜನು "ಅದು ಹೇಗೆ ? ತೋರಿಸಿ ಕೊಡು" ಎಂದನು. ಮಂತ್ರಿಯು ರಾಜನ ಕೈಯಿಂದ ಒಂದು ಮುಕ್ಕಾಲನ್ನು ತೆಗೆದುಕೊಂಡು, ಕಡಲೆ ಮಾರುವನೊಬ್ಬನಲ್ಲಿಗೆ ಹೋಗಿ, "ರಾಜರು ಹೇಳಿದರು–ಒಂದು ಮುಕ್ಕಾಲಿನ ಕಡಲೆ ಕೊಡಬೇಕಂತೆ" ಎಂದನು. ಆಗ ಕಡಲೆಯವನು ಬಹಳ ಆಶ್ಚರ್ಯಗೊಂಡು" ರಾಜರಿಗೆ ಏಕಪ್ಪಾ ಒಂದು ಮುಕ್ಕಾಲಿನ ಕಡಲೆ : ಏನೋ ಕಡಲೆ ತಿನ್ನಲು ಆಸೆಯಾಗಿರಬಹುದು. ಇಗೋ. ರಾಜರ ಒಂದು ಮುಕ್ಕಾಲಿಗೆ ಒಂದು ಗೋಣಿ ಕಡಲೆ, ಉಳಿದವರಿಗಾದರೆ ಒಂದು ಮುಕ್ಕಾಲಿಗೆ ಒಂದೇ ಪಾವು" ಎಂದು ಗೋಣಿ ಕಡಲೆಯನ್ನು ಕೊಟ್ಟನು. ಮಂತ್ರಿಯು ಆ ಕಡಲೆಯನ್ನು "ಇದು ರಾಜರು ನಿಮಗೆ ಕೊಟ್ಟ ಕಡಲೆ" ಎಂದು ಊರಿನವರಿಗೆಲ್ಲಾ ಹಂಚಿದನು. ರಾಜನ ಕಡಲೆ ತೆಗೆದುಕೊಂಡ ಊರವರೆಲ್ಲಾ "ರಾಜನು ಪ್ರೀತಿಯಿಂದ ನಮಗೆಲ್ಲಾ ಕಡಲೆಯನ್ನು ಕೊಡುವಾಗ, ನಾವು ಅವರಿಗೆ ಏನಾದರೂ ಕಾಣಿಕೆ ಕೊಡಬೇಕು" ಎಂದು ಒಂದೊಂದು ಕಾಣಿಕೆಯನ್ನು ಕೊಂಡು ಹೋಗಿ ರಾಜನಿಗೆ ಕೊಟ್ಟರು. ಮಂತ್ರಿಯು ಆ ಕಾಣಿಕೆಗಳನ್ನೆಲ್ಲಾ ರಾಜನಿಗೆ ತೋರಿಸಿ, "ಸ್ವಾಮಿ. ಈಗ ಗೊತ್ತಾಯಿತಲ್ಲ ನಿಮ್ಮ ಒಂದು ಮುಕ್ಕಾಲಿನ ಬೆಲೆ ಎಷ್ಟು ಎಂಬುದನ್ನು ಎಂದನು, ರಾಜನು ಮಂತ್ರಿಯ ಬುದ್ಧಿವಂತಿಕೆಗೆ ಸಂತೋಷಗೊಂಡನು.

---

1. ಧವಳಶ್ರೀ ; (ಸಂ) ಯಾರು ಹೆಚ್ಚು; ಜನಪದ ಕಥಾಮೃತ (ಸಂಪುಟ) 1) ಪದ್ಮಶ್ರೀ ಪ್ರಕಾಶನ, ದೊಡ್ಡಬೆಲೆ 1967 ಪುಟ 79-80

ಇದು ತುಳು ಜನಪದ ಕತೆಯೊಂದರ ಸಂಕ್ಷಿಪ್ತ ಕನ್ನಡ ರೂಪಾಂತರ. ವಸ್ತುವಿನ ದೃಷ್ಟಿಯಿಂದ ಸರಳ ಕಥೆಯು ಸಾಲಿನಲ್ಲಿ ಬರುತ್ತದೆ. ಇಲ್ಲಿ ಮುಖ್ಯವಾಗಿ ಜಾಣ ಮಂತ್ರಿ (J 1115.10-2) ಎಂಬ ಆಶಯವಿದೆ. ಅವನು ರಾಜನ ಪ್ರಶ್ನೆಗೆ ಉಳಿದವರಿಗಿಂತ ಭಿನ್ನವಾಗಿ ಉತ್ತರ ಕೊಡುತ್ತಾನೆ. ಅದರ ಸಮರ್ಥನೆಗಾಗಿ ಕೆಲವು ಜಾಣತನದ ಕೆಲಸಗಳನ್ನು ಮಾಡುತ್ತಾನೆ. ರಾಜನೊಬ್ಬನ 'ಮುಕ್ಕಾಲು ನಾಣ್ಯದ (ಒಂದಾಣೆಯ ನಾಲ್ಕನೇ ಒಂದು ಭಾಗದ ನಾಣ್ಯ) ಬೆಲೆ. ಅದು ಮುಕ್ಕಾಲಿನಂತಹ ಕನಿಷ್ಟ ನಾಣ್ಯವೇ ಆಗಿದ್ದರೂ. ರಾಜನದ್ದು ಎನ್ನುವ ದೃಷ್ಟಿಯಿಂದ ಉಳಿದವರ ಮುಕ್ಕಾಲುಗಳಿಗಿಂತ ಹೆಚ್ಚು ಬೆಲೆಯನ್ನು ಪಡೆಯುತ್ತದೆ. ಎನ್ನುವ ವಾಸ್ತವಿಕ ವ್ಯಾವಹಾರಿಕ ಸಂಗತಿಯನ್ನು ಜಾಣಮಂತ್ರಿಯೊಬ್ಬನು ತೋರಿಸಿಕೊಡುತ್ತಾನೆ. ಆ ಮೂಲಕ ಅಧಿಕಾರದಲ್ಲಿ ಇರುವವರಿಗೆ ಜನರು ಯಾವಾಗಲೂ ಅವರ ಯೋಗ್ಯತೆ, ಅರ್ಹತೆಗಳಿಗಿಂತ ಹೆಚ್ಚಿನ ಗೌರವವನ್ನು ಕೊಡುತ್ತಾರೆ ಎನ್ನುವ ತತ್ವ ಮತ್ತು ವಿಡಂಬನೆ ಈ ಕಥೆಯಲ್ಲಿದೆ. ಇಲ್ಲಿ ಹಾಸ್ಯ ನೇರವಾಗಿ ಇಲ್ಲ, ಆದರೆ ವ್ಯಂಗ್ಯದ ಛಾಯೆ ಇದೆ. 'Clever riddle solvers' ಎನ್ನುವ ವಿಭಾಗದಲ್ಲಿ ಈ ಕಥೆಯನ್ನು ಇಡಬಹುದು. ಆದರೆ ಇಲ್ಲಿ ಒಗಟಿನ ನೇರವಾದ ಸ್ವರೂಪ ಇಲ್ಲ. ಜೀವನದ ವಾಸ್ತವಿಕತೆಯ ಸ್ವರೂಪವನ್ನು ತಿಳಿಸುವ ಜಾಣತನದ ಕೆಲಸ ಇದೆ.

## (1) ಅತ್ತೆ-ಸೊಸೆ

"ಒಂದೂರಿನಲ್ಲಿ ಅತ್ತೆ ಮತ್ತು ಸೊಸೆ ಇದ್ದರು, ಸೊಸೆಗೆ ಅತ್ತೆಯನ್ನು ಕಂಡರೆ ಆಗುತ್ತಿರಲಿಲ್ಲ. ಅವಳನ್ನು ಗುಳಿ ತೆಗೆದು ಅದರಲ್ಲಿ ಹೂಳಲು ಸೊಸೆಯು ತನ್ನ ಗಂಡನಿಗೆ ತಿಳಿಸುತ್ತಾಳೆ. ಹೆಡ್ಡ ಗಂಡನು ತನ್ನ ತಾಯಿಯನ್ನು ಒಂದು ಗೋಣಿಯಲ್ಲಿ ಕಟ್ಟಿ ಹೂಳಲು ಕೊಂಡು ಹೋದನು. ದಾರಿಯಲ್ಲಿ ತಾನು ಹಾರೆ ಪಿಕ್ಕಾಸುಗಳನ್ನು ಮರೆತದ್ದು ಗೊತ್ತಾಗಿ, ಅದನ್ನು ತರಲು ಮನೆಗೆ ಓಡಿದನು. ಆ ಗೋಣಿ ಕಟ್ಟನ್ನು ಅಲ್ಲಿಯೇ ದನ ಮೇಯಿಸುತ್ತಿದ್ದ ಹುಡುಗರು ಕುತೂಹಲದಿಂದ ನೋಡಿ, ಅದನ್ನು ಬಿಚ್ಚಿದರು, ಆದರೊಳಗಿನಿಂದ ಹೊರಬಂದ ಮುದುಕಿಯು, ಮಕ್ಕಳ ಕೈಯಲ್ಲೇ ಆ ಗೋಣಿಗೆ ಕಲ್ಲುಮುಳ್ಳು ತುಂಬಿಸಿ, ತಾನು ತಪ್ಪಿಸಿಕೊಂಡಳು. ಹಾರೆ ಪಿಕ್ಕಾಸು ತೆಗೆದುಕೊಂಡು ಬಂದ ಮಗ, ಆ ಗೋಣಿ ಕಟ್ಟನ್ನು ಕೊಂಡು ಹೋಗಿ ಹೂತು ಬಿಟ್ಟನು, ಈ ಕಡೆ ಕಾಡಿಗೆ ಹೋದ ಅತ್ತೆಯು ತನ್ನ ತಲೆಯಲ್ಲಿದ್ದ ಹೇನನ್ನು ಹಿಡಿಯುತ್ತಾ "ಹೋ ಸಿಕ್ಕಿದನೋ ಕಳ್ಳ" ಎಂದಳು. ಅದು ಅಲ್ಲೇ ಸಮೀಪದಲ್ಲಿ ಕಳ್ಳತನದ ಚಿನ್ನವನ್ನು ಹಂಚುತ್ತಿದ್ದ ಕಳ್ಳರಿಗೆ ಕೇಳಿಸಿತು. ತಮ್ಮನ್ನು ಕುರಿತೇ ಈಕೆ ಈ ಮಾತು ಆಡಿರಬಹುದು ಎಂದು ಅವರು ಭಾವಿಸಿ, ಚಿನ್ನವನ್ನು ಬಿಟ್ಟು ಓಡಿದರು, ಈ ಸಂಗತಿ ಗೊತ್ತಾದ ಅತ್ತೆಯು ಆ ಚಿನ್ನವನ್ನು ತೆಗೆದುಕೊಂಡು ಮನೆಗೆ ಬಂದಳು. ಚಿನ್ನವನ್ನು ನೋಡಿ ಸೊಸೆಗೆ ಬಹಳ ಆಸೆಯಾಯಿತು. ಆಗ ಅತ್ತೆಯು ತನ್ನನ್ನು ಹೊಂಡದಲ್ಲಿ ಹೂತ ಮೇಲೆ ತಾನು ಸ್ವರ್ಗಕ್ಕೆ ಹೋಗಿ, ಚಿನ್ನವನ್ನು ತಂದದ್ದು ಎಂದಳು. ಕೂಡಲೇ ಸೊಸೆಯೂ ಇದೇ ರೀತಿ ಚಿನ್ನ ತರಲು ಸಿದ್ಧಳಾದಳು. ಅವಳದೇ ಒತ್ತಾಯದಿಂದ ಅವಳ ಗಂಡ ಅವಳನ್ನು ಗೋಣಿಚೀಲದಲ್ಲಿ ಕಟ್ಟಿ, ಹೊಂಡದಲ್ಲಿ ಹೂತು ಬಂದನು. ಕೆಲವು ದಿನಗಳಾದರೂ ಹೆಂಡತಿ ಹಿಂದಕ್ಕೆ ಬಾರದುದನ್ನು ನೋಡಿ. ಮಗನು ತಾಯಿಯಲ್ಲಿ ವಿಚಾರಿಸಿದನು, ಆಗ ತಾಯಿಯು ಮಗನಲ್ಲಿ ನಿಜ ಸಂಗತಿಯನ್ನು ಹೇಳುತ್ತಾಳೆ. 'ನೀನು ಯಾರಲ್ಲಾದರೂ ಹೋಗಿ ಒಂದು ತಾಯಿಯನ್ನು ಕೇಳು, ಒಂದು ಹೆಂಡತಿಯನ್ನು ಕೇಳು, ಯಾವುದು ಸಿಗುತ್ತದೆ ನೋಡು' ಎಂದಳು. ಮಗನಿಗೆ ಹೆಂಡತಿಯಾಗಲು ಅನೇಕರು ಮುಂದೆ ಬಂದರು. ಆದರೆ ತಾಯಿ ಎಲ್ಲೂ ಸಿಗಲಿಲ್ಲ, ಅವನಿಗೆ ಆಗ ತಾಯಿಯ ಮಹತ್ವ ಗೊತ್ತಾಯಿತು.

"ಅತ್ತೆ-ಸೊಸೆ" ತುಳು ಮೂಲರೂಪದ ಸಂಕ್ಷಿಪ್ತ ಕನ್ನಡ ರೂಪಾಂತರವನ್ನು ಇಲ್ಲಿ ಕೊಡಲಾಗಿದೆ. ತಮ್ಮ ಕಥೆಗಳ ವರ್ಗಕ್ಕೆ ಸೇರುವ ಇದರಲ್ಲಿ ಅತ್ತೆ ಸೊಸೆಯರ ನಡುವಿನ ಸಾಂಪ್ರದಾಯಿಕ ವೈಷಮ್ಯ, ಅತ್ತೆಯ

ಜಾಣತನ, ತಾಯಿಯ ಮಹತ್ವ-ಈ ವಿಚಾರಗಳು ಪ್ರತಿಪಾದಿತವಾಗಿದೆ. ಆಶಯದ ದೃಷ್ಟಿಯಿಂದ ಎರಡು ಆಶಯಗಳು ಬರುವುದರಿಂದ ಇದನ್ನು ಸರಳ ಕಥೆಯ ಗುಂಪಿಗೇ ಸೇರಿಸಬಹುದು ;

K 525 Escape by use of substituted object
K 526 Captor's bag felled with animals or objects while captivics escape

ಒಬ್ಬ ವ್ಯಕ್ತಿ ಅನಿರೀಕ್ಷಿತವಾಗಿ ಸಂಪತ್ತನ್ನು ತಂದಾಗ, ಇನ್ನೊಂದು ವ್ಯಕ್ತಿ ಅದನ್ನು ಅನುಕರಿಸುವುದು. ಆದರೆ ಸಂಪತ್ತನ್ನು ಪಡೆಯುವ ಬದಲು ಕಷ್ಟಕ್ಕೆ ಒಳಗಾಗುವುದು. ಈ ಕಥಾಸೂತ್ರ "ಅತ್ತೆ ಸೊಸೆ" ಕಥೆಯಲ್ಲಿಯೂ ಇದೆ. ಕಥೆಯ ಮುಕ್ತಾಯವನ್ನು ಸ್ವಲ್ಪ ಹಿಗ್ಗಿಸಿ. ಒಂದು ನೀತಿ ಪಾಠ್ಯವನ್ನು ಸಾರಲು ಅನುಕೂಲವಮಾಡಿಕೊಡಲಾಗಿದೆ. ಗಂಡಿಗೆ ಹೆಂಡತಿಯರು ಎಷ್ಟು ಬೇಕಾದರೂ ಸಿಗುತ್ತಾರೆ; ಆದರೆ ತಾಯಿಯು ಎಲ್ಲಿಯೂ ಸಿಗುವುದಿಲ್ಲ–ಎನ್ನುವ ವಿಚಾರವನ್ನು ಅಲ್ಲಿ ಪ್ರತಿಪಾದಿಸಿ, ನೀತಿ ಕಥೆ (fable)ಯೊಂದರ ರೀತಿಯಲ್ಲಿ ಮುಕ್ತಾಯ ಮಾಡಲಾಗಿದೆ.

## III ತಮಾಷೆ ಮತ್ತು ವಿನೋದ ವೃತ್ತಾಂತಗಳು (ವರ್ಗಗಳು 1200-1299) (Jokes and Anecdotes)

ತುಳು ಜನಪದ ಕಥೆಗಳಲ್ಲಿ ಈ ವರ್ಗಗಳ ಗುಂಪಿಗೆ ಸೇರಿದ ಕಥೆಗಳು ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತವೆ. ಮಾಂತ್ರಿಕ ಕಥೆಗಳ ಬಳಿಕ ಇವೇ ಅಧಿಕ ಸಂಖ್ಯೆಯಲ್ಲಿ ಸಿಗುವ ಕಥೆಗಳು, ಇಲ್ಲಿನ 20 ಕಥೆಗಳಲ್ಲಿ 1200–1349ರ ಮೂರ್ಖರ ಕಥೆಗಳು-1; 1350–1439ರ ದಂಪತಿಗಳನ್ನು ಕುರಿತ ಕಥೆಗಳು–2; 1525–1874ರ ಗಂಡನನ್ನು ಕುರಿತ ಕಥೆಗಳು–15; 1875–1999ಸ ಸುಳ್ಳಿನ ಕಥೆಗಳು–1.

ಹಾಸ್ಯವೇ ಇಂತಹ ಕಥೆಗಳ ಮೂಲದ್ರವ್ಯ ಆಗಿರುವುದರಿಂದ, ಇವುಗಳಲ್ಲಿ ಸ್ವೀಕರಣಕ್ಕೆ ಹೆಚ್ಚು ಅವಕಾಶವಿದೆ. ಇಂತಹ ಕಥೆಗಳ ಉಗಮ ಮತ್ತು ಪ್ರಸರಣವನ್ನು ನಿರ್ಧರಿಸುವುದು ಬಹಳ ಕಷ್ಟದ ವಿಚಾರ. ಮಾತ್ರವಲ್ಲದೆ ಹೆಚ್ಚಾಗಿ ಇಂತಹ ಹಾಸ್ಯ ಕಥೆಗಳು ಒಂದು ಅಥವಾ ಎರಡು ಆಶಯವಿರುವ ಸರಳ ಕಥೆಗಳು. ಈ ದೃಷ್ಟಿಯಿಂದ ಇವುಗಳ ಸ್ಮರಣೆ ಮತ್ತು ಪ್ರಸರಣ ಬಹಳ ಬೇಗನೆ ಆಗುತ್ತದೆ. ಇಲ್ಲಿನ ಕೆಲವು ತುಳು ಹಾಸ್ಯ ಕಥೆಗಳು 'ತುಳು ಕೂಟ' ಪತ್ರಿಕೆಯ ಸಂಚಿಕೆಗಳಲ್ಲಿ ಕಾಣಿಸಿಕೊಂಡವು. ಕೆಲವೊಮ್ಮೆ ಜನಪದ ಸ್ವರೂಪಕ್ಕೆ ಶಿಷ್ಟ ರೂಪವನ್ನು ಕೊಟ್ಟಿರುವುದನ್ನೂ ಕಾಣಬಹುದು. ಆದರೆ ಹೆಚ್ಚಾಗಿ ಇವೆಲ್ಲಾ ತುಳು ಜನಪದ ಸಾಹಿತ್ಯದಲ್ಲಿ ಪ್ರಚಲಿತವಾಗಿರುವ ಜನಪ್ರಿಯವಾದ ಕಥೆಗಳು.

ಇಂತಹ ಹಾಸ್ಯ ಕಥೆಗಳನ್ನು ಪ್ರಧಾನವಾಗಿ ಕನ್ನಡದ ಜನಪದ ಕಥೆಗಳ ಜೊತೆಗೆ ಜೋಡಿಸಲಾಗಿದೆ. ಸಾಧ್ಯವಾದ ಕಡೆಗಳಲ್ಲಿ ಬೇರೆ ದೇಶಗಳ ಕಥಾರೂಪಗಳ ಸಾಮ್ಯವನ್ನು ಗುರುತಿಸಲಾಗಿದೆ. ಈ ಸಂದರ್ಭಗಳಲ್ಲಿ ಇಂತಹ ಕಥೆಗಳ ಆಶಯಗಳ ಹೋಲಿಕೆಯೇ ಮುಖ್ಯವಾದುದು.

### 1200–1349. ಮೂರ್ಖರ ಕಥೆಗಳು. (Numskull Stories)

**(1) ಆಸೆಯ ಅಂತ್ಯ:**

"ಒಂದೂರಿನಲ್ಲಿ ತೋಮ ಎನ್ನುವ ಒಬ್ಬ ರೈತ. ಅವನು ತನ್ನ ಗದ್ದೆಯಲ್ಲಿ ಹುರುಳಿ ಗಿಡ ಹಾಕಿದನು. ಅದನ್ನು ಯಾವುದೋ ಒಂದುಪ್ರಾಣಿ ತಿಂದುಕೊಂಡು ಹೋಗುತ್ತಿತ್ತು. ರಾತ್ರಿ ಹೊತ್ತು ಕಾದುಕುಳಿತ ತೋಮನು

ಆ ಪ್ರಾಣಿ ತನ್ನ ಹೊಲಕ್ಕೆ ಬಂದಾಗ, ಅದರ ಬಾಲವನ್ನು ಗಟ್ಟಿಯಾಗಿ ಹಿಡಿದುಕೊಳ್ಳುತ್ತಾನೆ. ಅದು ಅವನನ್ನು ಆಕಾಶದಲ್ಲಿ ಮೇಲಕ್ಕೆ ಕೊಂಡುಹೋಗುತ್ತದೆ. ಅದು ದೇವಲೋಕದ ಆನೆ. ಆನೆಯು ಇವನಿಗೆ ಬೇಕಾದಷ್ಟು ಚಿನ್ನದ ನಾಣ್ಯಗಳನ್ನು ಕೊಟ್ಟು, ಇವನನ್ನು ಕೆಳಗೆ ಬಿಟ್ಟು ಹೋಗುತ್ತದೆ. ತೋಮನು ಆ ನಾಣ್ಯಗಳನ್ನು ತಿನ್ನುವ ವಸ್ತು ಎಂದು ಭಾವಿಸಿ, ಮಡಕೆಯಲ್ಲಿ ಹಾಕಿ ಚೆನ್ನಾಗಿ ಬೇಯಿಸಿದರೂ. ಬೇಯದೆ ಇರುವುದನ್ನು ಕಂಡು ಹೊರಗೆ ಎಸೆಯುತ್ತಾನೆ. ಈ ವರ್ತಮಾನ ಗೊತ್ತಾದ ನೆರೆಮನೆಯ ಶುಕ್ರನು ಆ ನಾಣ್ಯಗಳನ್ನು ಹೆಕ್ಕಿದ್ದು ಅಷ್ಟೇ ಅಲ್ಲ, ಮರುದಿನ ರಾತ್ರಿ ಆನೆಯ ಜೊತೆಗೆ ತೋಮನ ಸಂಗಡ ಹೋಗಿ ಚಿನ್ನದ ನಾಣ್ಯಗಳನ್ನು ತರುತ್ತಾನೆ. ಈ ನಾಣ್ಯಗಳನ್ನು ಅಳೆಯಲು ತೋಮನು ಧನಿಗಳ ಮನೆಯಿಂದ 'ಸೇರು' (ಅಳತೆಯ ಪಾತ್ರೆ) ತರುತ್ತಾನೆ. ಧನಿಗಳ ಹೆಂಡತಿ ಸೇರಿನ ತಳಕ್ಕೆ ಹಚ್ಚಿದ ಮಯಣಕ್ಕೆ ಅಂಟಿಕೊಂಡ ಚಿನ್ನದ ನಾಣ್ಯದಿಂದಾಗಿ, ಶುಕ್ರನಿಗೆ ಚಿನ್ನದ ನಾಣ್ಯ ಸಿಕ್ಕಿದ ಸಂಗತಿ ಧನಿಗೆ ಗೊತ್ತಾಗುತ್ತದೆ. ಮರುದಿನ ತೋಮ, ಶುಕ್ರ ಮತ್ತು ಧನಿ ಚಿನ್ನದ ನಾಣ್ಯಗಳಿಗಾಗಿ ಆನೆಯಲ್ಲಿಗೆ ಬರುತ್ತಾರೆ. ಆನೆಯ ಬಾಲವನ್ನು ತೋಮ, ತೋಮನ ಕಾಲನ್ನು ಶುಕ್ರ, ಶುಕ್ರನ ಕಾಲನ್ನು ಧನಿ ಹಿಡಿದುಕೊಂಡು ನೇತಾಡುತ್ತಾ ಮೇಲಕ್ಕೆ ಹೋಗುತ್ತಿರುತ್ತಾರೆ. ದಾರಿಯಲ್ಲಿ ಆಕಾಶ ಮಧ್ಯದಲ್ಲಿ ಧನಿಯು ತೋಮನಲ್ಲಿ "ನಿನಗೆ ಮೊದಲನೆಯ ದಿನ ಎಷ್ಟು ನಾಣ್ಯ ಸಿಕ್ಕಿತು ?" ಎಂದು ಕೇಳುತ್ತಾರೆ. ಕೂಡಲೇ ತೋಮನು ಬಹಳ ಸಂತೋಷದಿಂದ ನಾಣ್ಯದ ಮೊತ್ತವನ್ನು ಕೈ ಸನ್ನೆಯಿಂದ ತೋರಿಸಲು, ಆನೆಯ ಬಾಲವನ್ನು ಬಿಡುತ್ತಾನೆ. ಹಿಡಿತ ತಪ್ಪಿದ ಮೂವರೂ ಆಕಾಶದಿಂದ ಕೆಳಕ್ಕೆ ಬೀಳುತ್ತಾರೆ. ಆಸೆಯ ಅಂತ್ಯ ಈ ರೀತಿ ಆಗುತ್ತದೆ."

ತುಳು ಜನಪದ ಕಥೆಯ ಸಂಕ್ಷಿಪ್ತ ಕನ್ನಡ ರೂಪಾಂತರವನ್ನು ಇಲ್ಲಿ ಕೊಡಲಾಗಿದೆ. ಪ್ರಧಾನವಾಗಿ ಎರಡು ಆಶಯಗಳಿರುವ ಸರಳ ಕಥೆ. ಇಲ್ಲಿನ ಪ್ರಧಾನ ಆಶಯ : J 2133 5.2. Numskull going to heaven holding on tail of divine elephant, looses his hold to make gesture. Hs and all holding on to him fall,

"ಆಸೆಯ ಅಂತ್ಯ" ಕಥೆಯು ಕಥಾವರ್ಗ 1025ನ್ನು ಹೋಲುತ್ತದೆ. ಈ ಕಥಾವರ್ಗದ ಪ್ರಕಾರ, ಅನೇಕ ಮಂದಿ ಒಬ್ಬರನ್ನೊಬ್ಬರು ಹಿಡಿದುಕೊಂಡು ಸರಪಳಿಯಂತೆ ನೇತಾಡುತ್ತಾರೆ. ಮೇಲಿನ ತುದಿಯಲ್ಲಿದ್ದವನು ತನ್ನ ಕೈಯ ಮೇಲೆ ಉಗುಳುತ್ತಾನೆ. ಆಗ ಹಿಡಿತ ಸಡಿಲವಾಗಿ ಎಲ್ಲರೂ ಕೆಳಕ್ಕೆ ಬೀಳುತ್ತಾರೆ, ಹಾಸ್ಯಕಥಾ ಸಂಕಲನಗಳಲ್ಲಿ ಈ ರೀತಿಯ ಕಥೆಗಳು ಸಿಗುತ್ತವೆ. ಆದರೆ ಇವು ಜನಪದ ಪರಂಪರೆಯಿಂದ ಬಂದಿವೆ ಎನ್ನುವುದು ಸ್ಪಷ್ಟ.

"ಆಸೆಯ ಅಂತ್ಯ" ಕಥೆಯಲ್ಲಿ ಹೆಡ್ಡನಾಗಿ ತೋಮ ಎನ್ನುವ ರೈತ, ಅವನನ್ನು ಅನುಸರಿಸುವವ ಶುಕ್ರ ಈ ಹೆಸರುಗಳು ತುಳುನಾಡಿನ ಸಂಸ್ಕೃತಿಗೆ ಸಂಬಂಧಿಸಿವೆ.

ಹೆಚ್ಚಾಗಿ ಇಂತಹ ಕಥೆಗಳಲ್ಲಿ ಕಾಣಿಸುವಂತೆಯೇ ಇಲ್ಲಿಯೂ ದ್ರವ್ಯ ಕೊಡುವ ಮತ್ತು ಮೇಲಕ್ಕೆ ಕೊಂಡೊಯ್ಯುವ ಪ್ರಾಣಿಯಾಗಿ "ಆನೆ"ಯೇ ಬರುತ್ತದೆ.

(ಆಸಯ : B 45 Airgoing elephent)

1350–1439. ದಂಪತಿಗಳನ್ನು ಕುರಿತ ಕಥೆಗಳು. (Stories about Married couples)

ಗಂಡಹೆಂಡತಿಯರ ಜಗಳ ಮತ್ತು ಅದರಿಂದ ಉಂಟಾಗುವ ಹಾಸ್ಯ ಇದು ಇಂತಹ ಕಥೆಗಳ ವಸ್ತು. ಇಲ್ಲಿ

ಅತ್ಯಾಸೆ, ಜಾರತನ, ಸೊಕ್ಕು, ಮುಂತಾದ ಗುಣಗಳು ಹೆಚ್ಚಾಗಿ ಹೆಂಡತಿಯಲ್ಲಿಯೇ ಕಾಣಿಸಿಕೊಂಡು ಹಾಸ್ಯ ಹೊರಹೊಮ್ಮುತ್ತದೆ. ಕೆಲವೊಂದು ಬಾರಿ ಗಂಡ ಮತ್ತು ಹೆಂಡತಿಯ ಸಮಾನ ಗುಣ ಜಗಳಕ್ಕೆ ಕಾರಣವಾಗಿ ಹಾಸ್ಯವನ್ನು ತರುತ್ತದೆ.

ಇಲ್ಲಿ ಮುಖ್ಯವಾಗಿ ಗಮನಿಸಿದ ಇಂತಹ ಕಥೆಗಳು :—3.

1. ರೊಟ್ಟಿಯ ಜಗಳ.
2. ಪ್ರಮಾಣ.
3. ಸೊಕ್ಕು ಇಳಿಯಿತು.

## (1) ರೊಟ್ಟಿ ಜಗಳ

"ಒಂದಾನೊಂದು ಊರಿನಲ್ಲಿ ಗಂಡ ಹೆಂಡತಿ ಇಬ್ಬರು ಇದ್ದರು. ಯಾರಿಗಾದರೂ ಮೋಸ ಮಾಡುವು ದೆಂದರೆ ಅವರಿಗೆ ಬಹಳ ಖುಷಿ. ಒಂದು ದಿನ ಇವರಿಗೆ ರೊಟ್ಟಿ ತಿನ್ನಲು ಆಸೆ ಆಯಿತು. ಆದರೆ ರೊಟ್ಟಿ ಮಾಡಲು ಅಕ್ಕಿಯ ಹುಡಿ ಆಗಬೇಕಲ್ಲ ? ಗಂಡನಿಗೆ ಒಂದು ಉಪಾಯ ಹೊಳೆಯಿತು. ಹೆಂಡತಿಯಲ್ಲಿ ಕೇಳಿ ಒಂದು ಬೈರಾಸು (ಚಿಕ್ಕ ವಸ್ತ್ರ) ತೆಗೆದುಕೊಂಡ. ಅದನ್ನು ನೀರಿನಲ್ಲಿ ಮುಳುಗಿಸಿ, ಸ್ವಲ್ಪ ಹಿಂಡಿಕೊಂಡು, ಒಂದು ಅಂಗಡಿಗೆ ಹೋಗಿ, ಅಂಡಿಯವನಲ್ಲಿ ನನಗೆ ಒಂದು ಕಿಲೋ ಅಕ್ಕಿ ಹುಡಿ ಹಾಕಿ ಎಂದ. ಅಂಗಡಿಯ ವನು ಒಂದು ಕಿಲೋ ಅಕ್ಕಿ ಹುಡಿಯನ್ನು ಆ ಬೈರಾಸಿಗೆ ಹಾಕಿದ. ಆಗ ಇವನು ಹಣ ನಂತರ ಕೊಡುತ್ತೇನೆ ಎಂದು ಹೇಳಿದ. ಅಂಗಡಿಯವನಿಗೆ ಇವರ ಪರಿಚಯವಿಲ್ಲ. ಆದ್ದರಿಂದ "ಮತ್ತೆ ಹಣ ತಂದಾಗ ಅಕ್ಕಿ ಹುಡಿ ಕೊಡುತ್ತೇನೆ. ಈಗ ಆ ಹುಡಿಯನ್ನು ಮತ್ತೆ ಡಬ್ಬಿಗೆ ಹಾಕು" ಎಂದು ಅಂಗಡಿಯವನು ಜೋರುಮಾಡಿದ. ಇವನು ಸಿಟ್ಟು ಬಂದವನಂತೆ ನಟಿಸಿ, "ಯಾರಿಗೆ ಬೇಕು. ತಗೋ ನಿನ್ನ ಹುಡಿ" ಎಂದು ಬೈರಾಸಿನಲ್ಲಿದ್ದ ಅಕ್ಕಿ ಹುಡಿಯನ್ನು ಅಂಗಡಿಯವನ ಡಬ್ಬಿಗೆ ಹಾಕಿದ. ಬೈರಾಸು ಒದ್ದೆಯಾಗಿದ್ದುದರಿಂದ ಅರ್ಧಪಾವಿನಷ್ಟು ಅಕ್ಕಿ ಹುಡಿ ಬೈರಾಸಿನಲ್ಲೇ ಉಳಿಯಿತು. ಅದನ್ನು ಕೊಂಡು ಹೋಗಿ ಮನೆಯಲ್ಲಿ ಇಟ್ಟು ಮತ್ತೆ ಬೈರಾಸನ್ನು ಒದ್ದೆ ಮಾಡಿಕೊಂಡು, ಹಾಗೆಯೇ ನಾಲ್ಕು ಅಂಗಡಿಗಳಿಗೆ ಹೋಗಿ, ಒಂದು ಸೇರಿನಷ್ಟು ಅಕ್ಕಿ ಹುಡಿ ಸಂಗ್ರಹಿಸಿದನು. ಅದರಿಂದ ಅವನ ಹೆಂಡತಿ ರೊಟ್ಟಿ ಮಾಡಿದಳು. ಅದರಲ್ಲಿ ಐದು ರೊಟ್ಟಿಗಳು ಆದುವು. ಆಗ ಗಂಡ ಹೇಳಿದ "ನಾನು ಕಷ್ಟಪಟ್ಟು ಅಕ್ಕಿ ಹುಡಿ ತಂದವನು. ನನಗೆ ಮೂರು ರೊಟ್ಟಿ, ನಿನಗೆ ಎರಡು ರೊಟ್ಟಿ." ಆಗ ಹೆಂಡತಿ ಹೇಳಿದಳು. "ನಾನು ಕಷ್ಟಪಟ್ಟು ರೊಟ್ಟಿ ಮಾಡಿದವಳು, ನನಗೆ ಮೂರು ರೊಟ್ಟಿ, ನಿಮಗೆ ಎರಡು ರೊಟ್ಟಿ." ಹೀಗೆಯೇ ಗಂಡ ಹೆಂಡತಿಯರಿಗೆ ಸ್ವಲ್ಪ ಹೊತ್ತು ಜಗಳ ಆಯಿತು. ಆಗ ಹೆಂಡತಿ ಹೇಳಿ ದಳು–"ನಾವು ಈಗ ಜಗಳ ಮಾಡುವುದು ಬೇಡ. ನಮ್ಮಿಬ್ಬರಲ್ಲಿ ಯಾರು ಮೊದಲು ಮಾತಾಡುತ್ತಾರೆಯೋ ಅವರಿಗೆ ಎರಡು ರೊಟ್ಟಿ, ಮತ್ತೆ ಮಾತಾಡಿದವರಿಗೆ ಮೂರು ರೊಟ್ಟಿ," ಗಂಡನು ಅದಕ್ಕೆ ಒಪ್ಪಿದ.

ಇಬ್ಬರೂ ರೊಟ್ಟಿಯನ್ನು ಹಾಗೆಯೇ ಇಟ್ಟು ಚಾಪೆ ಹಾಕಿ ಮಲಗಿದರು. ರಾತ್ರಿ ಆಯಿತು. ಗಂಡ ನಿಗೆ ಹಸಿವು ಜೋರಾಯಿತು. ಆದರೆ ಏನು ಮಾಡುವುದು ? ಮಾತಾಡಿದರೆ ಎರಡೇ ರೊಟ್ಟಿ ಸಿಗುವುದು; ಅವಳಿಗೆ ಮೂರು ರೊಟ್ಟಿ ಸಿಗುತ್ತದೆ. ಏನಾದರೂ ಆಗಲಿ, ಮಾತಾಡಬಾರದು ಎಂದು ಮುಸುಕು ಹಾಕಿ ಮಲಗಿದನು. ಹೆಂಡತಿಗೂ ಮನಸ್ಸಿನಲ್ಲಿ ಹಾಗೆಯೇ ಆಗುತ್ತದೆ. ರಾತ್ರಿ ಕಳೆದು ಬೆಳಗಾಯಿತು. ಇವರು ಇಬ್ಬರೂ ಮಾತಾಡುವುದಿಲ್ಲ. ಮಧ್ಯಾಹ್ನದವರೆಗೂ ಮನೆಯ ಬಾಗಿಲು ತೆರೆಯದಿರುವುದನ್ನು ನೋಡಿ, ನೆರೆ

ಕರೆಯುವವರು ಬಂದು ಬಾಗಿಲು ಬಡಿದರು. ಸದ್ದಿಲ್ಲ. ಅವರಿಗೆಲ್ಲಾ ಹೆದರಿಕೆಯಾಯಿತು. ಒಬ್ಬನು ಮನೆಯ ಮಾಡಿಗೆ ಹತ್ತಿ ನೋಡಿದನು. ನೋಡುವಾಗ ಇಬ್ಬರೂ ಮಲಗಿದ್ದಾರೆ. ಇವರಿಗೆ ನಿದ್ದೆ ಏನಾದರೂ ಬಂದಿದೆಯೋ ಎಂದು ನೋಡಲು ನೀರು ಹೊಯ್ದು ನೋಡಿದನು ; ದೊಣ್ಣೆಯಲ್ಲಿ ಕುಟ್ಟಿ ನೋಡಿದನು. ಇವರು ಅಲ್ಲಾಡುವುದಿಲ್ಲ. ಅವನು ತಿಳಿಸಿದನು–"ಇವರು ಸತ್ತಿದ್ದಾರೆ." ಜನರೆಲ್ಲರಿಗೂ ಆಶ್ಚರ್ಯ ಆಯಿತು. "ನಿನ್ನೆ ಇಬ್ಬರೂ ಹುಷಾರಾಗಿದ್ದರು. ಇಂದು ಇವರಿಗೆ ಏನು ಆಯಿತು" ಎಂದು ಹೇಳಿ, "ಇನ್ನು ಏನು ಮಾಡುವುದು ? ಹೆಣಗಳನ್ನು ಹಾಗೆಯೇ ಬಿಡಲು ಆಗುವುದಿಲ್ಲ. ನಾವೆಲ್ಲರೂ ಸೇರಿ ಈ ಹೆಣಗಳನ್ನು ಸುಡುವ" ಎಂದು ಒಬ್ಬನು ಹೇಳಿದಾಗ. ಎಲ್ಲರೂ ಒಪ್ಪಿದರು. ನಾಲ್ಕು ಮಂದಿ ಸ್ಮಶಾನಕ್ಕೆ ಹೋಗಿ ಹೊಂಡವನ್ನು ತೆಗೆದು, ಚಟ್ಟವನ್ನು ಕಟ್ಟಿದರು. ಕೆಲವರು ಇವರಿಬ್ಬರನ್ನೂ ಮೀಯಿಸಿದರು. ಇಬ್ಬರಿಗೂ ಮಾತಾಡಲು ಬಾಯಿ ಬರುತ್ತದೆ. ಆದರೆ. ಏನು ಮಾಡುವುದು. ಮೊದಲು ಮಾತಾಡಿದರೆ ಎರಡೇ ರೊಟ್ಟಿ ಸಿಗುವುದಲ್ಲವೇ ? ಇಬ್ಬರ ಮನಸ್ಸಿನಲ್ಲೂ ಸಮಾಧಾನವಿರಲಿಲ್ಲ. ಗಂಡಸು ಒಮ್ಮೆ ಮಾತಾಡಲು ಎಂದು ಬಾಯಿ ತೆರೆದ. ಆದರೆ ಮತ್ತೆ, ಹೆಂಗುಸಿಗಿಂತಲೂ ಕೀಳು ಆಗುತ್ತೇನೆ. ಎಂದು ಬಾಯಿ ಮುಚ್ಚಿದ. ಹೆಂಡತಿಗೂ ತಾನು ಜೀವಂತವಿದ್ದೇನೆಂದು ಹೇಳಲು ಆಸೆ ಉಂಟು, ಆದರೆ ಏನು ಮಾಡುವುದು. ಎರಡು ರೊಟ್ಟಿ ಮಾತ್ರ ಸಿಗುವುದು ! ಹೀಗೆಂದು ಇಬ್ಬರೂ ಮನಸ್ಸಿನಲ್ಲಿಯೇ ಭಾವಿಸಿದರು.

ನೆರೆದವರಲ್ಲಿ ಕೆಲವರು ಬಿದಿರು ತಂದರು. ಎಲ್ಲರೂ ಕೈ ಕೈ ಕೊಟ್ಟು. ಹೆಣಗಳನ್ನು ಸ್ಮಶಾನಕ್ಕೆ ತಂದು ಹಾಕಿ, ಚಿತೆಯ ಮೇಲೆ ಮಲಗಿಸಿದರು. ಹೆಣಗಳಿಗೆ ಮಕ್ರಿಯೆಗಳನ್ನು ಮಾಡಿದರು. ಚಿತೆಗೆ ಬೆಂಕಿಯನ್ನೂ ಕೊಟ್ಟರು. ಗಂಡನ ಕಾಲಿಗೆ ಸ್ವಲ್ಪ ಬೆಂಕಿಯ ಬಿಸಿ ತಗಲಿತು. ಅವನಿಗೆ ಸಹಿಸಲು ಆಗಲಿಲ್ಲ. ಅವನು ಮನಸ್ಸಿನಲ್ಲೇ ಅಂದುಕೊಂಡ-"ಮೂರು ರೊಟ್ಟಿ ಸಿಗದಿದ್ದರೂ ಬೇಡ, ಎರಡು ಸಿಕ್ಕಿದರೂ ಸಾಕು. ಈಗ ಜೀವವೇ ಹೋಗುತ್ತಿದೆಯಲ್ಲ. ಏನಾದರೂ ಆಗಲಿ...ಹೀಗೆಂದು ಆತ ಒಮ್ಮೆಲೇ ಬೊಬ್ಬೆ ಹಾಕಿದ–"ನಾನು ಜೀವಂತ ಇದ್ದೇನೆ" ಎಂದ. ಆಗ ಅವನ ಹೆಂಡತಿ ಹೇಳಿದಳು–"ಹಾ; ನೀವು ಮೊದಲು ಮಾತಾಡಿದ್ದು. ನಿಮಗೆ ಎರಡು ರೊಟ್ಟಿ, ನನಗೆ ಮೂರು ರೊಟ್ಟಿ" ಅಲ್ಲಿ ನೆರೆದ ಜನರಿಗೆ ಇವರ ಅವಸ್ಥೆಯನ್ನು ನೋಡಿ ವಿಚಿತ್ರವೆಂದು ಅನ್ನಿಸಿತು, ಒಬ್ಬ ಮುದುಕನು "ಅವರನ್ನು ಮೊದಲು ಚಿತೆಯಿಂದ ಹೊರಗೆ ಎಳೆದು ಹಾಕಿ" ಎಂದನು. ಕೆಲವರು ಸೇರಿ, ಚಿತೆಯಿಂದ ಅವರನ್ನು ಎಳೆದು ಹಾಕಿದರು, ಜನರಿಗೆ ಮತ್ತೂ ಒಂದು ಹೆದರಿಕೆ. ಏಕೆಂದರೆ, ಸತ್ತವರ ಪ್ರೇತ ಏನಾದರೂ ಬಂದಿದೆಯೋ ಎಂದು. ಮತ್ತೆ ಇವರನ್ನು ವಿಚಾರಿಸುವಾಗ, "ರೊಟ್ಟಿಗೆ ಬೇಕಾಗಿ ಮೌನವ್ರತ ಮಾಡಿದ್ದಾರೆ" ಎಂದು ತಿಳಿಯಿತು. ನೆರೆದವರಲ್ಲಿ ಒಬ್ಬನು ಹೇಳಿದ–"ನಿಮ್ಮಲ್ಲಿ ಒಬ್ಬರು ಮೂರು ರೊಟ್ಟಿ, ಇನ್ನೊಬ್ಬರು ಎರಡು ರೊಟ್ಟಿ ತಿನ್ನಬೇಡಿ. ಇಬ್ಬರೂ ಸಮಾನವಾಗಿ ಎರಡೂವರೆ ರೊಟ್ಟಿಗಳನ್ನು ಹಂಚಿಕೊಂಡು ತಿನ್ನಿರಿ...ಆ ಗಂಡ ಹೆಂಡತಿಯರಿಗೆ ನಾಚಿಕೆ ಆಯಿತು, ಅವರಿಗೆ ಆಹಾರವಿಲ್ಲದೆ ನಡೆದಾಡಲೂ ಶಕ್ತಿ ಇರಲಿಲ್ಲ. ಹೆಣವನ್ನು ಹೊತ್ತುಕೊಂಡು ಬರುವಂತೆ, ಇವರನ್ನು ಹೊತ್ತುಕೊಂಡು ತಂದು ಮನೆಯಲ್ಲಿ ಬಿಟ್ಟರು. ಮತ್ತೆ ಆ ಗಂಡ ಹೆಂಡತಿ ಆ ಐದು ರೊಟ್ಟಿಗಳನ್ನು ಸಮಪಾಲು ಮಾಡಿಕೊಂಡು ತಿಂದರು.

"ರೊಟ್ಟಿಯ ಜಗಳ" ಕಥೆಯಲ್ಲಿ ಮೂಲ ತುಳುರೂಪದ ಸಂಪೂರ್ಣವಾದ ಕನ್ನಡ ಅನುವಾದವನ್ನು ಕೊಡಲಾಗಿದೆ. ಪ್ರಧಾನವಾಗಿ ಎರಡೇ ಆಶಯಗಳಿರುವ ಈ ಸರಳ ಕಥೆ ಬಹಳ ಜನಪ್ರಿಯವಾಗಿದ್ದು, ಜಗತ್ತಿನ ಅನೇಕ ಭಾಷೆಗಳಲ್ಲಿ ಸಿಗುತ್ತದೆ. ವರ್ಗ 1351 The Silence Wager ಇದು 'ರೊಟ್ಟಿಯ ಜಗಳ' ಕಥೆಯನ್ನು ಹೋಲುವ ಕಥಾವರ್ಗ; ಒಬ್ಬ ಗಂಡಸು ಮತ್ತು ಅವನ ಹೆಂಡತಿ ತಮ್ಮಲ್ಲಿ ಯಾರು ಮೊದಲು ಮಾತಾಡುವುದು ಎಂಬ ಪಣ ತೊಡುತ್ತಾರೆ. ಬಹಳ ಸಮಯದ ವರೆಗೆ ಅವರಲ್ಲಿ ಯಾರೊಬ್ಬರೂ ಮಾತಾಡದೆ ಮೌನವಾಗಿರುತ್ತಾರೆ. ಕೊನೆಗೆ ಹೆಂಡತಿಯು ಗಂಡನನ್ನು ಮತ್ಸರ ತಾಳುವಂತೆ ಮಾಡಿ, ಆ ಮೂಲಕ ತನ್ನನ್ನು

ಬೈಯ್ಯುವಂತೆ ಮಾಡಿ, ಪಣದಲ್ಲಿ ಅವನು ಸೋಲುವಂತೆ ಮಾಡುತ್ತಾಳೆ. ಈ ಕಥಾವರ್ಗದ ಮೂಲವು ಸಾಹಿತ್ಯಿಕ ಬೌದ್ಧ ಪರಂಪರೆಯಲ್ಲಿ ಎಂದು ಭಾವಿಸಲಾಗಿದೆ. ಇದು ಅನೇಕ ಸಾಹಿತ್ಯಿಕ ಹಾಸ್ಯ ಸಂಕಲನಗಳಲ್ಲಿ ದೊರೆಯುತ್ತದೆ. ಆದರೆ ಜನಪದ ಪರಂಪರೆಯಲ್ಲಿ ಅಷ್ಟೇನೂ ಜನಪ್ರಿಯವಾಗಿಲ್ಲ.[1]

ಈ ಕಥಾವರ್ಗದ ಮುಖ್ಯ ಆಶಯ. J 2511 1 Wager as to who shall speak first in in the morning (last up-to get reward) They are carried to funeral pyre before they will give in.

ಈ ಕಥಾವರ್ಗವನ್ನು ಹೋಲುವ ಕಥೆಗಳು ಕನ್ನಡದ ಎರಡು ಜನಪದ ಸಂಕಲನಗಳಲ್ಲಿ ದೊರೆಯುತ್ತವೆ.[1 2].

ನನಗೆರಡು ನಿನಗೊಂದು' ಕನ್ನಡ ಜನಪದ ಕಥೆಯಲ್ಲಿ, ಗಂಡ ಹೆಂಡತಿಯ ನಡುವೆ ಹಂಚುವ ತಿಂಡಿಯಾಗಿ 'ಕಡುಬು' ಬರುತ್ತದೆ. ಕಡುಬು ಮಾಡುವುದಕ್ಕೆ ಹಿನ್ನೆಲೆಯಾಗಿ ಬರುವ ಘಟನೆ ಹಾಸ್ಯಮಯವಾಗಿದ್ದು ವಿಶಿಷ್ಟವಾಗಿದೆ : ಊರಿನ ಗೌಡರ ಮನೆಯಲ್ಲಿ ಕಡುಬು ತಿಂದ ತಿಮ್ಮಣ್ಣ ತನ್ನ ಮನೆಯಲ್ಲೂ ಅದನ್ನು ಮಾಡಬೇಕೆಂದು ಹೆಂಡತಿಯಲ್ಲಿ ಹೇಳುವ ವೇಳೆಗೆ, ಅದರ ಹೆಸರು ಮರೆತುಹೋಗಿ. ಅವಳು ಗಂಡನ ಕೆನ್ನೆಗೆ ಹೊಡೆದು ಅದು ಊದಿಕೊಂಡು, ಅಜ್ಜಿಯೊಬ್ಬಳು "ಕೆನ್ನೆ ಕಡುಬಿನಂತೆ ಊದಿದೆ" ಎನ್ನುವಾಗ ಆತನಿಗೆ ಅದರ ಹೆಸರು ನೆನಪಿಗೆ ಬರುವುದು. ಕಥೆಯ ಕೊನೆಯ ಭಾಗದಲ್ಲಿ ಇಬ್ಬರೂ ಮೌನವಾಗಿ ಇದ್ದಾಗ, ಊರವರು ಅವರು ಸತ್ತಿದ್ದಾರೆ ಎಂದು ಭಾವಿಸಿ, ಹೊಂಡದಲ್ಲಿ ಹಾಕಿ ಮಣ್ಣು ಮುಚ್ಚುವ ವೇಳೆಗೆ, ಮೊದಲು ಗಂಡ 'ನಾನು ಸತ್ತಿಲ್ಲ' ಎಂದು ಮಾತಾಡುತ್ತಾನೆ.

"ದಾಸಯ್ಯನ ದೋಸೆ" ಕಥೆಯಲ್ಲಿ ಗಂಡ ಹೆಂಡತಿಯ ನಡುವೆ ಹಂಚುವ ತಿಂಡಿಯಾಗಿ 'ದೋಸೆ' ಇದೆ. ದೋಸೆಗಾಗಿ ದಾಸಯ್ಯನು ತಿಕಕ್ಕೆ ಮೇಣ ಮೆತ್ತಿಕೊಂಡು ಅಂಗಡಿಯ ಅಕ್ಕಿ ಮೂಟೆಯ ಮೇಲೆ ಕುಳಿತು ಉಪಾಯದಿಂದ ಅಕ್ಕಿ ಸಂಪಾದಿಸುವುದು ; ಹಾಗೆಯೇ ಪೇಟವನ್ನು ಬೆರಕೆ ಎಣ್ಣೆಯಲ್ಲಿ ಮುಡಗಿ ಉಪಾಯದಿಂದ ಎಣ್ಣೆ ಸಂಪಾದಿಸುವುದು– ಈ ಘಟನೆಗಳಲ್ಲಿ ತುಳುವಿನ ಕಥೆಗೂ ಇದಕ್ಕೂ ಸಾಮ್ಯವಿದೆ. ಹಾಗೆಯೇ ಕಥೆಯ ಕೊನೆಯೂ ತುಳು ಕಥೆಯ ಕೊನೆಯಂತೆಯೇ ಇದೆ. ದಾಸಯ್ಯ ಮತ್ತು ಅವನ ಹೆಂಡತಿ ಸತ್ತಿದ್ದಾರೆ ಎಂದು ಊರವರು ಭಾವಿಸಿ, ಅವರನ್ನು ಸುಡಲು ಬೆಂಕಿಯ ಮೇಲೆ ಇಡುವಾಗ ನಿಜಸಂಗತಿ ತಿಳಿಯುತ್ತದೆ. ಇಲ್ಲಿ ಮೊದಲು ಮಾತಾಡುವುದು ಹೆಂಡತಿ. ತುಳು ಕಥೆಯಲ್ಲಿ ಮೊದಲು ಮಾತಾಡುವುದು "ಗಂಡ" "ನನಗೆರಡು ನಿನಗೊಂದು" ಕಥೆಯಲ್ಲಿಯೂ ಮೊದಲು ಮಾತಾಡುವವನು ಗಂಡ.

## (2) ಪ್ರಮಾಣ

"ಒಂದು ಊರಿನಲ್ಲಿ ಗಂಡ ಹೆಂಡತಿ ಇದ್ದರು. ಹೆಂಡತಿ ಹಾದರ ಮಾಡುವ ಸುದ್ದಿ ಗಂಡನ ಕಿವಿಗೆ ಬಿದ್ದಿತು. ಗಂಡನು ಇದನ್ನು ಪ್ರತ್ಯಕ್ಷವಾಗಿ ನೋಡದಿದ್ದರೂ, ಈ ವಿಚಾರದಲ್ಲಿ ಸಂಶಯ ಉಳಿಯುವುದು ಬೇಡ ಎಂದು, ಈ ವಿಷಯವನ್ನು ಮಾತನಾಡಲು ಅತ್ತೆಯ ಮನೆಗೆ ಬಂದನು. ಅವನು ಅತ್ತೆಯಲ್ಲಿ "ಅತ್ತೆಯೇ ನನ್ನ ಹೆಂಡತಿಯ ಬಗ್ಗೆ ಊರಿನ ಜನರು ಅಪಚಾರದ ಮಾತುಗಳನ್ನು ಹೇಳುತ್ತಿದ್ದಾರೆ. ಇದು ನನಗೂ

1 Stith Thompson: 'The Folktale' P 185

1 ಡಾ। ಜೀ. ಶಂ. ಪರಮಶಿವಯ್ಯ (ಸಂ); 'ನನಗೆರಡು ನಿನಗೊಂದು; 'ಕನ್ನಡದ ಜನಪದ ಕಥೆಗಳು ಪು. 552-227

2 ರಾಗೌ (ಸಂ); 'ದಾಸಯ್ಯನ ದೋಸೆ , 'ಕರ್ನಾಟಕ ಜನಪದ ಕಥೆಗಳು ಪು 183-184

ಒಳ್ಳೆಯದಲ್ಲ. ನಿಮಗೂ ಒಳ್ಳೆಯದಲ್ಲ. ಒಂದೋ ಅವಳು ವ್ಯಭಿಚಾರ ಮಾಡುತ್ತೇನೆ ಎಂದು ನನ್ನನ್ನು ಬಿಡಬೇಕು. ಇಲ್ಲವಾದರೆ, ನಾಲ್ಕು ಜನರ ಎದುರಿನಲ್ಲಿ ನಮ್ಮ ಕುಲದೇವರ ಮುಂದೆ ಸತ್ಯದ ಪ್ರಮಾಣ ಮಾಡ ಬೇಕು" ಎಂದು ಹೇಳಿದನು. ಆಗ ಅತ್ತೆಯು ಅದಕ್ಕೆ ಸಮ್ಮತಿಸಿ, ಇಂತಹ ದಿವಸ ಪ್ರಮಾಣ ಮಾಡುವುದೆಂದು ನಿಶ್ಚಯಮಾಡಿದಳು.

ಒಂದು ದಿನ ಹೆಂಡತಿಯೊಡನೆಯೂ ಹಾಗೆಯೇ ಹೇಳಿದ್ದಕ್ಕೆ, ಅವಳು "ಊರಿನವರ ಮಾತನ್ನು ನಂಬ ಬೇಡಿರಿ. ದೇವರ ಎದುರು ಹೇಳುವ ಮಾತನ್ನು ನಂಬಿರಿ. ನಾನು ವ್ಯಭಿಚಾರ ಮಾಡಿಲ್ಲವೆಂದು ಎಲ್ಲಿ ಬೇಕಾ ದರೂ ಪ್ರಮಾಣ ಮಾಡುತ್ತೇನೆ" ಎಂದಳು.

ಸರಿ, ಒಂದು ದಿನ ಕುಲದೇವರಲ್ಲಿಗೆ ಪ್ರಮಾಣ ಮಾಡಲು ಹೋಗುವುದೆಂದು ನಿಶ್ಚಯವಾಯಿತು. ಹೋಗಲು ಹೊರಡುವಾಗ ಅವಳು ತಾಯಿಯಲ್ಲಿ "ನೋಡಿ ಅಮ್ಮಾ, ನನ್ನ ಸೊಂಟದ ನೂಲು ಕಡಿಯಿತು, ಕಟ್ಟಿರಿ" ಎಂದು ಹೇಳಿದಳು. ತಾಯಿಯು ಬೇರೆ ಏನೂ ಆಲೋಚನೆ ಮಾಡದೆ ಪ್ರೀತಿಯಿಂದ ಕಟ್ಟಿದಳು. ಅವರು ಹೊರಟು ದೇವಸ್ಥಾನಕ್ಕೆ ಹೋಗುತ್ತಿರುವಾಗ, ದಾರಿಯಲ್ಲಿ ದಾಟಲು ಒಂದು ತೋಡು ಸಿಕ್ಕಿತು. ಗಂಡನು ತೋಡನ್ನು ದಾಟಿ ಮುಂದೆ ಹೋದರೂ, ಇವಳು ತೋಡಿನ ಬದಿಯಲ್ಲಿ ನಿಂತು, "ಇಲ್ಲಿ ಬನ್ನಿರಿ, ಸ್ವಲ್ಪ ಕೈ ಹಿಡಿದು ದಾಟಿಸಿರಿ" ಎಂದು ಕರೆದು ಹೇಳಿದಳು. ಗಂಡನು ಹಾಗೆಯೇ ಅವಳ ಕೈ ಹಿಡಿದು ದಾಟಿಸಿದನು.

ಅವರು ದೇವಸ್ಥಾನಕ್ಕೆ ಬಂದರು. ಊರಿನ ನಾಲ್ಕು ಮಂದಿ ಸೇರಿದ್ದಾರೆ. ಪ್ರಮಾಣ ಮಾಡಬೇಕು ಎಂದು ನಿರ್ಧಾರವಾಯಿತು. ಇವಳು ಧೈರ್ಯದಲ್ಲಿ ಹೋಗಿ, ದೇವರ ಎದುರಿನಲ್ಲಿ ನಿಂತು ಹೇಳಿದಳು" ತಾಯಿಯು ಸೊಂಟದ ನೂಲು ಕಟ್ಟಿದ ಮೇಲೆ, ಗಂಡನು ಕೈ ಹಿಡಿದ ಮೇಲೆ ನಾನು ವ್ಯಭಿಚಾರ ಮಾಡಿಲ್ಲ. ಹೀಗೆಂದು ಮೂರು ಮೂರು ಬಾರಿ ಹೇಳಿದಳು. ಪ್ರಮಾಣ ಆಯಿತು. ಮಾತಿನಲ್ಲೇ ಎಲ್ಲವನ್ನೂ ಹಾರಿ ಸುವ ಹೆಂಡತಿಯ ಪ್ರಮಾಣವನ್ನು ಕೇಳಿ, ಎಲ್ಲರೂ ಸತ್ಯವೆಂದು ಭಾವಿಸಿದರು. ಗಂಡ ಹೆಂಡತಿ ಒಟ್ಟಾದರು."

ಇದು ತುಳು ಕಥೆಯ ಮೂಲ ಸ್ವರೂಪದ ಸಂಪೂರ್ಣವಾದ ಕನ್ನಡ ಅನುವಾದ. ಪ್ರಧಾನವಾಗಿ ಎರಡೇ ಆಶಯಗಳಿರುವ ಇದು ಸರಳ ಕಥೆ. ಜಾರ ಹೆಂಡತಿಯು ಜಾಣತನದಿಂದ ತನ್ನ ವ್ಯಭಿಚಾರವನ್ನು ಗಂಡ ನಿಗೆ ತಿಳಿಯದಂತೆ, ದ್ವಂದ್ವಾರ್ಥದ ಪ್ರಮಾಣ ಮಾತಿನ ಮೂಲಕ ವಂಚಿಸುವ ವಸ್ತುವಿದೆ. ಕಥಾವರ್ಗ 1418 ಇಲ್ಲಿನ ಪ್ರಧಾನ ಆಶಯ K1513. ಹೆಂಡತಿಯ ದ್ವಂದ್ವಾರ್ಥದ ಪ್ರಮಾಣ ಮಾತು. (The wife's equivocal oath.) "ಗಂಡನೊಬ್ಬನು ತನ್ನ ಹೆಂಡತಿಯು ತನ್ನನ್ನು ಬಿಟ್ಟು ಬೇರೆ ಯಾರ ಜೊತೆಗೂ ಸಂಬಂಧವಿರಿಸಿಕೊಂಡಿಲ್ಲವೆಂದು ಪ್ರಮಾಣ ಮಾಡಬೇಕೆಂದು ಒತ್ತಾಯಿಸುತ್ತಾನೆ. ಆಗ ಹೆಂಡತಿಯ ಮಿಂಡನು ಕತ್ತೆ ಸವಾರನ ವೇಷ ಹಾಕುತ್ತಾನೆ. ಹೆಂಡತಿಯು ಆತನಿಂದ ಒಂದು ಕತ್ತೆಯನ್ನು ಬಾಡಿಗೆಗೆ ಪಡೆಯುತ್ತಾಳೆ. ಅವಳು ಬೇಕೆಂದೇ ಆ ಕತ್ತೆಯ ಮೇಲಿನಿಂದ ಕೆಳಕ್ಕೆ ಬಿದ್ದು, ಆ ಕತ್ತೆ ಸವಾರನ ವೇಷದ ಮಿಂಡನು ತನ್ನನ್ನು ಮೇಲಕ್ಕೆ ಎತ್ತುವುದಕ್ಕೆ ಅವಕಾಶ ಮಾಡಿಕೊಡುತ್ತಾಳೆ. ಆ ಮೇಲೆ ಅವಳು ತನ್ನ ಗಂಡನ ಎದುರು "ತನ್ನನ್ನು ತನ್ನ ಗಂಡ ಮತ್ತು ಆ ಕತ್ತೆ ಸವಾರ ಬಿಟ್ಟರೆ ಬೇರೆ ಯಾರೂ ಮುಟ್ಟಿಲ್ಲ"ವೆಂದು ಬಹಿರಂಗ ವಾಗಿ ಆಣೆ ಮಾಡುತ್ತಾಳೆ.

ತುಳು ಜನಪದ ಕಥೆಯು ಮೇಲಿನ ಕಥಾ ವರ್ಗವನ್ನು (1418) ಬಹಳವಾಗಿ ಹೋಲುತ್ತದೆ. ಇಲ್ಲಿ ಹೆಂಡತಿಯ ಮಿಂಡನು ಪಾತ್ರವಾಗಿ ಬರುವುದಿಲ್ಲ. ಹೆಂಡತಿಯು ತನಗೆ ಬಾಲ್ಯದಲ್ಲಿ ತಾಯಿ ನೂಲು ಕಟ್ಟಿದ ಕ್ರಿಯೆಯನ್ನು ಮತ್ತು ಗಂಡನು ವಿವಾಹದ ವೇಳೆ ಕೈ ಹಿಡಿದ ವಿಧಿವತ್ತಾದ ಕ್ರಿಯೆಗಳನ್ನು, ಬೇರೆ ಬೇರೆ ನೆಪಗಳ ಮೂಲಕ ಮತ್ತೆ ಮಾಡಿಸುತ್ತಾಳೆ. ಪ್ರಮಾಣ ಮಾಡುವಾಗ ಅವಳು ಆ ಕ್ರಿಯೆಗಳ ಬಳಿಕ ವ್ಯಭಿಚಾರ ಮಾಡಿಲ್ಲ

ಎನ್ನುತ್ತಾಳೆ. ಬೇರೆಯವರ ದೃಷ್ಟಿಯಲ್ಲಿ ಆ ಕ್ರಿಯೆಗಳು ಬಾಲ್ಯದವು ಮತ್ತು ವಿವಾಹದ ಕಾಲದವು. ಆದರೆ ಅವಳ ಪಾಲಿಗೆ ಅವು ಪ್ರಮಾಣ ಮಾಡುವುದಕ್ಕಿಂತ ಸ್ವಲ್ಪ ಹಿಂದಿನವು. ಅಷ್ಟೇ 'ದ್ವಂದ್ವಾರ್ಥದ ಮಾತಿನ ಮೂಲಕ ಮೋಸಮಾಡುವ ಆಶಯ' (K 2310) ಇಲ್ಲಿ ಕಾಣಿಸುತ್ತದೆ.

### (3) ಸೊಕ್ಕು ಇಳಿಯಿತು

ಒಬ್ಬ ಅಣ್ಣನಿಗೆ ಇಬ್ಬರು ತಂಗಿಯರು ಇದ್ದರು. ಇಬ್ಬರನ್ನು ಒಳ್ಳೆಯ ಕಡೆ ಹುಡುಕಿ ಮದುವೆ ಮಾಡಿಕೊಟ್ಟ. ಒಂದು ಬಾರಿ ಒಬ್ಬಳ ಗಂಡ ತನ್ನ ಹೆಂಡತಿಗೆ ರಸಬಾಳೆಯ ಹಣ್ಣನ್ನು ತಂದುಕೊಟ್ಟ. ಬೇರೆ ಏನೂ ಹೇಳಲಿಲ್ಲ. ಆಗ ಅವಳು ತಂಗಿಯ ಮನೆಗೆ ಬಂದು ಹೇಳಿದಳು–'ತಂಗಿಯೇ, ನನ್ನ ಗಂಡ ಬಂಗಾರದಂತೆ ಇರುವ ರಸಬಾಳೆಯ ಹಣ್ಣನ್ನು ನನಗೆ ತಂದು ಕೊಟ್ಟರು. ಆದರೆ, 'ಅದನ್ನು ತಿಂದೆಯಾ ಮಡದಿಯೇ, ತಿನ್ನಲಿಲ್ಲವೇ ಮಡದಿಯೇ, ಸಿಹಿ ಇತ್ತೇ, ಕಹಿ ಇತ್ತೇ, ಗಂಟಲಲ್ಲಿ ಇಳಿಯಿತೇ ಮಡದಿಯೇ, ಇಳಿಯಲಿಲ್ಲವೇ ಮಡದಿಯೇ ಎಂದು ಒಂದು ಮಾತನ್ನೂ ಕೇಳಲಿಲ್ಲ. ನನ್ನಲ್ಲಿ ಅವರಿಗೆ ಪ್ರೀತಿ ಇದ್ದರೆ, ಕೇಳದೇ ಇರುತ್ತಿದ್ದರೇ ?' ಆಗ ತಂಗಿಯು ಅಕ್ಕನಲ್ಲಿ ಹೇಳಿದಳು-'ನಿನ್ನ ಗಂಡ ಆ ರೀತಿ ಆದರೆ, ನನ್ನ ಗಂಡನೂ ಹಾಗೆಯೆ. ತೆಂಗಿನ ಕೊಂಬು ಅರಳಿದಂತಹ ನಾಲ್ಕು ಎಳೆಯ ಬಂಗಾರದ ಸರ ನನಗೆ ತಂದುಕೊಟ್ಟರು. ಅದು ಕಷ್ಟಪಟ್ಟು ಮಾಡಿಸಿದ ದೊಡ್ಡ ಆಭರಣ. ಆದರೂ, 'ಆ ಚಿನ್ನದ ಸರವನ್ನು ಇಟ್ಟುಕೊಂಡೆಯಾ ಮಡದಿಯೇ, ಅದು ನಿನಗೆ ಚೆನ್ನಾಗಿ ಕಾಣುತ್ತದೆಯೇ ಮಡದಿಯೇ ಎಂದು ಒಂದು ಮಾತನ್ನೂ ಕೇಳಲಿಲ್ಲ. ಹೀಗೆಲ್ಲ ಇರುವುದಾದರೆ ನಾವು ಇನ್ನು ಇಲ್ಲಿ ಇರುವುದು ಬೇಡ. ನಮಗೆ ಏನು ಕೇಳುವವರು ಯಾರೂ ಇಲ್ಲವೆ ? ನಮ್ಮ ಅಣ್ಣನಲ್ಲಿಗೆ ಹೋಗುವ'. ಈ ರೀತಿ ಮಾತಾಡಿಕೊಂಡು ಅಕ್ಕ ತಂಗಿ ಇಬ್ಬರೂ ಅಣ್ಣನ ಮನೆಗೆ ಬಂದರು. ಬಂದು ದೊಡ್ಡವಳು ಹೇಳಿದಳು-"ನೋಡು ಅಣ್ಣ, ನನ್ನ ಗಂಡನು ರಸಬಾಳೆಯ ಹಣ್ಣನ್ನು ನನಗೆ ತಂದು ಕೊಟ್ಟನು. ಆದರೆ ತಿಂದೆಯಾ ಮಡದಿಯೇ, ಸಿಹಿ ಉಂಟಾ ಮಡದಿಯೇ ಎಂದು ಕೇಳಲಿಲ್ಲ. ಅಂತಹ ಪ್ರೀತಿ ಇಲ್ಲದ ಗಂಡ ಬೇಡ ಎಂದು ಇಲ್ಲಿಗೆ ಬಂದೆ." ಅಷ್ಟರಲ್ಲಿ ಕಿರಿಯವಳು ಹೇಳಿದಳು—"ನೋಡು ಅಣ್ಣ, ನನ್ನ ಗಂಡನು ತೆಂಗಿನ ಕೊಂಬು ಅರಳಿದಂತಹ ನಾಲ್ಕು ಎಳೆಯ ಬಂಗಾರದ ಸರ ನನಗೆ ತಂದು ಕೊಟ್ಟರು. ಆದರೆ ಅದನ್ನು ಧರಿಸಿದೆಯಾ ಮಡದಿಯೇ, ಚೆನ್ನಾಗಿ ಕಾಣುತ್ತದೆಯೇ ಮಡದಿಯೇ ಎಂದು ಒಂದು ಮಾತನ್ನೂ ಆಡಲಿಲ್ಲ. ಪ್ರೀತಿ ಇದ್ದರೆ ಕೇಳದೆ ಇರುತ್ತಿದ್ದರೇ ? ಅಂತಹವರು ಬೇಡವೆಂದು ಇಲ್ಲಿಗೆ ಬಂದೆ."

ಅಷ್ಟರಲ್ಲಿ ಅಣ್ಣ ಹೇಳಿದ ; "ಹೌದೋ ತಂಗಿಯರೇ, ಬನ್ನಿ. ಆಗಲಿ ಕುಳಿತುಕೊಳ್ಳಿ. ಬಾಯಾರಿಕೆ ಬೇಕೋ ? ಕುಡಿಯಿರಿ". ಇಬ್ಬರೂ ಬೆಲ್ಲವನ್ನೂ ತಿನ್ನದೆ ಬಾಯಾರಿಕೆ (ನೀರು) ಕುಡಿದರು. ಆಮೇಲೆ ಸ್ವಲ್ಪ ಸಮಯದ ಬಳಿಕ ಅಣ್ಣ ಹೇಳಿದ—"ತಂಗಿಯರೇ, ಮೇಲಿನ ಬಾಕಿಮಾರುಗದ್ದೆಯ ಹುರುಳಿ ಗಿಡಗಳು ಬೆಳೆದು, ಬಿಸಿಲಿಗೆ ಸಿಡಿಯುತ್ತಿವೆ. ಸ್ವಲ್ಪ ಹೋಗಿ ಗಿಡ ಕೀಳೋಣವೇ ?" ಹಾಗೆಯೇ ಅವರು ಹೋಗಿ ಹುರುಳಿ ಗಿಡ ಕೀಳಲು ಸುರುಮಾಡಿದರು. ಮಧ್ಯಾಹ್ನ ಒಂದು ಗಂಟೆಯಾದರೂ ಅಣ್ಣನು ಹಿಂದೆ ತಿರುಗಿಯೂ ನೋಡಲಿಲ್ಲ. ಅಷ್ಟಲ್ಲದೆ ಮನೆಯಲ್ಲಿ ತನ್ನ ಹೆಂಡತಿಯೊಡನೆ "ನುಚ್ಚಕ್ಕಿಯನ್ನು ತಂದು ಗಂಜಿ ಮಾಡು" ಎಂದು ಹೇಳಿಯೂ ಹೋಗಿರುತ್ತಾನೆ. ರಣರಣ ಬಿಸಿಲಿನಲ್ಲಿ ಒಬ್ಬರ ಮುಖವನ್ನು ಒಬ್ಬರು ನೋಡಿಕೊಂಡು ಗಿಡ ಕೀಳುತ್ತಾರೆ. ಬೆಳಿಗ್ಗೆಯಿಂದ ಅವರ ಹೊಟ್ಟೆಗೆ ಏನೂ ಬಿದ್ದಿಲ್ಲ, ಪಾಪ, ಇವರು ಇಷ್ಟರವರೆಗೆ ಇಂತಹ ಕೆಲಸಕ್ಕೆ ಇಳಿದವರೇ ಅಲ್ಲ. ಹೇಗೂ, ಗಿಡ ಕಿತ್ತು ಮುಗಿಯಿತು. ಆಮೇಲೆ ಅವರು ಮನೆಗೆ ಬಂದರು ಅವರ ಗಂಟಲಿನ ಪಸೆ ಆರಿ ಹೋಗಿದ್ದರೂ, ನೀರು ಬೇಕೋ ಎಂದು ಅವರಲ್ಲಿ ಕೇಳದೆ, ಕೋಳಿಗೆ

ಹಾಕುವ ಅಕ್ಕಿಯ ಬಿಸಿ ಬಿಸಿ ಗಂಜಿಯನ್ನು ಒಂದೊಂದು ಬಟ್ಟಲು ಅವರಿಗೆ ಬಡಿಸಿದಳು ಅವರ ಅತ್ತಿಗೆ. ಬಿಸಿಲಿನಿಂದ ಬಂದವರು ಈ ಬಿಸಿ ಬಿಸಿ ಗಂಜಿಯನ್ನು ಹೇಗೆ ಉಣ್ಣುವುದು ? ರುಚಿ ನೋಡಿದಾಗ. ಎರಡು ತುತ್ತು ಬಾಯಿಗೆ ಹಾಕಿದಾಗಲೇ ಅವರಿಗೆ ವಾಂತಿ ಬರುವಂತೆ ಆಯಿತು. ಆ ತಂಗಿಯರು ಒಬ್ಬಳ ಮುಖವನ್ನು ಇನ್ನೊಬ್ಬಳು ನೋಡಿಕೊಂಡು, ಸುದ್ದಿ ಹೇಳದೆ, ಹಾಗೆಯೇ ಕೊಂಡು ಹೋಗಿ, ನಾಯಿಯ ಮಂಡಕೆಗೆ ಹಾಕಿದರು. ಈ ಅಣ್ಣನ ಮನೆಯಿಂದ ತಮ್ಮ ತಮ್ಮ ಮನೆಗಳೇ ವಾಸಿ ಎಂದುಕೊಂಡು ಆಲೋಚನೆ ಮಾಡಿ, ಸಣ್ಣ ಸ್ವರದಲ್ಲಿ "ಅಣ್ಣ, ನಾವು ಇನ್ನು ನಮ್ಮ ಮನೆಗೆ ಹೋಗುತ್ತೇವೆ" ಎಂದು ಹೇಳಿದಾಗ, ಅಣ್ಣ ಹೇಳಿದ– "ಹೋಗುತ್ತೀರಾ ತಂಗಿಯರೇ, ಆದೀತು. ನೀವು ಬಂದದ್ದರಲ್ಲಿ ಬಾಕಿಮಾರು ಗದ್ದೆಯ ಹುರುಳಿ ಗಿಡವನ್ನು ಕೀಳುವ ಕೆಲಸ ಒಂದು ಚೆನ್ನಾಗಿ ಆಯಿತು. ಹೋಗುತ್ತೀರಾದರೆ ಹೋಗಿರಿ." 'ನಿಮ್ಮನ್ನು ಬರಲು ಯಾರು ಹೇಳಿದ್ದಾರೆ ?' ಎಂದು ಮನಸ್ಸಿನಲ್ಲಿಯೇ ಅಣ್ಣನು ನಕ್ಕು, "ಸೊಕ್ಕಿಕೊಂಡು ಬಂದವರು ಬಡಕಲಾಗಿ ಹೋದರು" ಎಂದು ಹೆಂಡತಿಯಲ್ಲಿ ಹೇಳಿದ.

ಇದು ಮೂಲ ತುಳು ಕಥೆಯ ರೂಪದ ಸಂಪೂರ್ಣವಾದ ಕನ್ನಡ ಅನುವಾದ. ಇದು ದಂಪತಿಗಳನ್ನು ಕುರಿತ ಕಥೆಯಾದರೂ, ಇಲ್ಲಿ ಹೆಂಡತಿಯರೇ ಪ್ರಧಾನವಾಗಿದ್ದಾರೆ. ಅವರ ಗಂಡಂದಿರ ಸೂಚನೆ ಪ್ರಧಾನವಾಗಿದೆ. ಆದರೆ ಅವು ಹೆಚ್ಚು ಕ್ರಿಯಾತ್ಮಕ ಪಾತ್ರಗಳಾಗಿ ಬರುವುದಿಲ್ಲ. ಹೆಂಗಸರ ಸೊಕ್ಕು, ಮೂರ್ಖತನವನ್ನು ವಿಡಂಬಿಸುತ್ತದೆ ಈ ಸರಳ ಕಥೆ.

ಕೆಲವು ಹೆಂಗಸರಿಗೆ ಗಂಡಂದಿರು ತಿನ್ನಲು, ಉಡಲು ತೊಡಲು ಎಷ್ಟು ಕೊಟ್ಟರೂ ತಮ್ಮನ್ನು ಸರಿಯಾಗಿ ಮಾತಾಡಿಸಲಿಲ್ಲ ಎನ್ನುವ ಭಾವನೆ ಇರುತ್ತದೆ. ಆದರೆ ಇಲ್ಲಿ ಅಂತಹ ಆಹಾರವನ್ನು ತಿಂದೆಯೋ, ಇಂತಹ ತೊಡುಗೆಯನ್ನು ತೊಟ್ಟೆಯೋ ಎನ್ನುವ ಸಾಂಪ್ರದಾಯಿಕ ಔಪಚಾರಿಕ ಮಾತುಗಳಿಗೆ ಬಹಳ ಮಾನ್ಯತೆ ಕೊಡುವ ಹೆಂಡಂದಿರು ಗಂಡನ ಮನೆಯನ್ನು ಬಿಟ್ಟು ಬಂದಾಗ, ಅಣ್ಣ ಅವರಿಗೆ ಸರಿಯಾದ ಪಾಠ ಕಲಿಸುತ್ತಾನೆ. ದಿನವಿಡೀ ದುಡಿದಾಗ, ಔಪಚಾರಿಕ ಮಾತುಗಳು ಬರುವುದಿಲ್ಲ ಎನ್ನುವುದನ್ನು ತೋರಿಸಿಕೊಡುತ್ತಾನೆ. ಅನುಭವವೊಂದಕ್ಕೆ ಹಾಸ್ಯದ ಸ್ವರೂಪವನ್ನು ಇಲ್ಲಿ ಕೊಡಲಾಗಿದೆ.

## 1525–1874, ಗಂಡಸು ಅಥವಾ ಹುಡುಗನನ್ನು ಕುರಿತ ಕಥೆಗಳು

(Stories about a man or boy)

ಗಂಡಸು ಅಥವಾ ಹುಡುಗನೊಬ್ಬನಿಗೆ ಸಂಬಂಧಿಸಿದ ಘಟನೆಗಳುಳ್ಳ ಹಾಸ್ಯ ಕಥೆಗಳು ಇಲ್ಲಿ ಬರುತ್ತವೆ. ಇಲ್ಲಿನ ಹಾಸ್ಯ ಘಟನೆಗಳು ಹುಡುಗ ಅಥವಾ ಗಂಡಸೊಬ್ಬನ ಹೆಡ್ಡತನ, ಮೂರ್ಖತನಗಳಿಂದ ಹೆಚ್ಚಾಗಿ ಬರುತ್ತವೆ. ಒಂದು ಮಾತಿನ ವಾಚ್ಯಾರ್ಥವನ್ನಷ್ಟೇ ಗ್ರಹಿಸುವುದರಿಂದಲೂ ಅವಾಂತರಗಳಾಗಿ ಹಾಸ್ಯ ಕಾಣಿಸುತ್ತದೆ. ಕೆಲವೊಮ್ಮೆ ಸಾಮಾನ್ಯ ವ್ಯಕ್ತಿಯೊಬ್ಬನು ತನ್ನ ಜಾಣತನದಿಂದ ಸಾಹಸಿಯಂತೆ ತೋರ್ಪಡಿಸುವ ಕಥೆಗಳೂ ಇಲ್ಲಿ ಬರುತ್ತವೆ. ಹೆಸರುಗಳ ದ್ವಂದ್ವಾರ್ಥಗಳಿಂದಲೂ ಹಾಸ್ಯ ಘಟನೆಗಳು ನಡೆಯುತ್ತವೆ.

ತುಳು ಜನಪದ ಕಥೆಗಳಲ್ಲಿ ಇಂತಹ ಹಾಸ್ಯ ಕಥೆಗಳ ಹೆಚ್ಚಿನ ಎಲ್ಲಾ ರೂಪಗಳೂ ಸಿಗುತ್ತವೆ. ಆದರೆ ಹೆಚ್ಚಿನ ಹಾಸ್ಯ ಕಥೆಗಳು ಹೆಡ್ಡರಿಗೆ ಸಂಬಂಧಿಸಿದವು. ಇಲ್ಲಿ ಗಮನಿಸಿದ ಮುಖ್ಯ ಹಾಸ್ಯ ಕಥೆಗಳು:

1. ಕೆಲಸದ ಹುಡುಗ
2. ತಂದೆಯ ಸಾಲಕ್ಕೆ ತಿಮ್ಮನ ಕೋಲ
3. ಜಾಣ ಮಾತು
4. ಸಕೋಟು ಸಂಕ್ರಾಂತಿ
5. ಹೆಡ್ಡ ಕುಂಬಾರ
6. ಒಂದು ಪೆಟ್ಟಿಗೆ ಏಳು
7. ಉಗ್ರಾಣಿ ಬೊಮ್ಮಯ
8. ಅಜ್ಜ ಮೊಮ್ಮಗ
9. ಹೆಡ್ಡತಿಮ್ಮನ ಮಂತ್ರ ಶಕ್ತಿ
10. ಉಪಾಯಕ್ಕೆ ಹೋಗಿ ಅಪಾಯ
11. ಕೊಟ್ಟಿಗೆಯ ಮರ
12. ದರ್ಜಿಯ ಟೊಪ್ಪಿ
13. ಹೆಡ್ಡ ಕುಮಾರ
14. ಅಂಜುಬುರುಕ ನೆಂಟ
15. ಹೆಡ್ಡ ದೂಮ

## 1. ಕೆಲಸದ ಹುಡುಗ

ಒಂದು ಮನೆಯಲ್ಲಿ ಅಣ್ಣ ತಮ್ಮ ಇಬ್ಬರು ಇದ್ದರು. ಅಣ್ಣನು ಮನೆಯ ಯಜಮಾನ. ತಮ್ಮನು ಹೆಡ್ಡ. ಅಲ್ಲಿ ಕೆಲಸ ಮಾಡಿ ಅಕ್ಕಿ ತಂದರೆ ಮಾತ್ರ ಮಡಕೆಯಲ್ಲಿ ಅನ್ನ ಬೆಂದೀತು. ಇಲ್ಲದಿದ್ದರೆ ಬರೇ ನೀರು ಕುಡಿಯಬೇಕಾದೀತು. ತಮ್ಮನಿಗೆ ಕೆಲಸ ಮಾಡಲು ಎಂದೂ ಬೆನ್ನು ಬಾಗುತ್ತಿರಲಿಲ್ಲ. ಆದರೆ ಹೊಟ್ಟೆಗೆ ಭರ್ತಿ ಒಂದು ಸೇರು ಅಕ್ಕಿಯ ಅನ್ನ ಬೇಕು. ಅಣ್ಣನು ಹತ್ತು ಬಾರಿ ಹೇಳಿದರೆ, ತಮ್ಮನು ಒಂದು ಬಾರಿ ಕೆಲಸ ಮಾಡುತ್ತಾನೆ. ಅದೂ ಕೆಲಸ ಮಾಡುವುದನ್ನು ನೋಡುತ್ತಿದ್ದರೆ, ಇಲ್ಲವಾದರೆ ಒಂದಕ್ಕೆ ಎರಡು ಮಾಡುತ್ತಿದ್ದನು. ಬಹಳ ದಿನಗಳಿಂದ ಇದನ್ನು ನೋಡುತ್ತಿದ್ದ ಅಣ್ಣ. ಒಂದು ದಿನ ಬಾಯಿ ಬಿಟ್ಟು ಹೇಳಿದ–"ನಿನಗೆ ಅನ್ನ ಹಾಕಿ ಸಾಕಲು ನನಗೆ ಸಾಧ್ಯವಿಲ್ಲ ಎಲ್ಲಿಗಾದರೂ ಹೋಗಿ ಕೆಲಸ ನೋಡಿ, ನಿನ್ನ ಹೊಟ್ಟೆಯನ್ನು ನೀನು ತುಂಬಿಸಿಕೋ ; ದಾರಿಯಲ್ಲಿ ಬಿದ್ದು ಸಾಯುವ ಸ್ಥಿತಿ ಬಂದಾಗ, ಹಿಂದಕ್ಕೆ ಬಾ. ಆ ಒಂದು ಅಪಕೀರ್ತಿ ಬೇಡ ಹೋಗು". ಹೀಗೆಂದು ಹೇಳಿ ಅಣ್ಣನು ತಮ್ಮನನ್ನು ಮನೆಯಿಂದ ಹೊರಗೆ ಅಟ್ಟಿದ. ತಮ್ಮನು ಅಣ್ಣ ಹೇಳಿದ ಮಾತಿಗೆ ಎರಡು ಹೇಳದೆ ಮನೆಯಿಂದ ಹೊರಟ.

ಹೋಗಿ,ಹೋಗಿ, ಸುಮಾರು ಕಡೆಗಳಲ್ಲಿ ಕೆಲಸ ಕೇಳಿದ. ಎಲ್ಲೂ ಕೆಲಸವಿಲ್ಲ ಎಂದರು. 'ಇನ್ನು ಎಲ್ಲಪ್ಪಾ ನನಗೆ ಕೆಲಸ ಸಿಕ್ಕೀತು' ಎಂದು ಬಹಳ ದುಃಖವಾಯಿತು. ಅತ್ತನು. ಅಳುತ್ತಾ ಬಂದನು. ಒಂದು ಮನೆಗೆ ಬಂದು, ಮನೆಯ ಒಡತಿಯಲ್ಲಿ "ಎಲ್ಲಾದಗೂ ಕೆಲಸ ನೋಡು ಎಂದು ಅಣ್ಣನು ನನ್ನನ್ನು ಮನೆಯಿಂದ ಹೊರಗೆ ಹಾಕಿದ. ದಾರಿಯಲ್ಲಿ ಬಿದ್ದು ಸಾಯುವುದಾದರೆ ಹಿಂದಕ್ಕೆ ಬಾ ಎಂದು ಹೇಳಿದ್ದಾನೆ. ಕೆಲಸ ಇದೆಯೋ ?" ಎಂದು ಕೇಳಿದ. ಆ ಹೆಂಗಸಿಗೆ ಇದನ್ನು ನೋಡಿ, ಅಯ್ಯೋ ಪಾಪ ಅನ್ನಿಸಿತು. "ಯಜಮಾನ ಬಂದ ಮೇಲೆ ಅವರಲ್ಲಿ ಹೇಳುತ್ತೇನೆ. ನೀನು ಅಳಬೇಡ. ಕೆಲಸ ಕೊಡುವ" ಎಂದು ಅವಳು ಹೇಳಿದಳು. ಯಜಮಾನ ಬಂದ ಮೇಲೆ ವಿಚಾರ ತಿಳಿಸಿ, ಒತ್ತಾಯ ಮಾಡಿ, ಆ ಹುಡುಗನನ್ನು ಕೆಲಸಕ್ಕೆ ಇಟ್ಟುಕೊಂಡಳು. ಏನು ಕೆಲಸ

ಕೊಡುವುದು ಇವನಿಗೆ ? "ಗುಡ್ಡದಲ್ಲಿ ಬೇಕಾದಷ್ಟು ಸೊಪ್ಪು ಇದೆ. ಹಟ್ಟಿಗೆ ಅದೇನೂ ಹೆಚ್ಚಾಗದು" ಎಂದು ಹೇಳಿ, ಸೊಪ್ಪನ್ನು ಕಡಿದು ತಂದುಹಾಕುವ ಕೆಲಸವನ್ನು ಕೊಟ್ಟರು. ಅಂದೇ ಸೊಪ್ಪು ತರಲು ಸುರು ಮಾಡಿದನು. ಗುಡ್ಡಕ್ಕೆ ಹೋಗಿ, ಮುಳ್ಳನ್ನೂ ಬಿಡದೆ ಸೊಪ್ಪನ್ನು ಕಡಿದು, ಹಟ್ಟಿಗೆ ತಂದು ಚೆಲ್ಲಿದನು. ಮನೆಯ ಒಡತಿಯು ಹಾಲು ಕರೆಯಲೆಂದು ಹಟ್ಟಿಗೆ ಹೋದಾಗ, ಅಲ್ಲಿ ಸೊಪ್ಪನ್ನು ಹರಡಿದ್ದು ನೋಡಿ ಬಹಳ ಸಂತೋಷವಾಯಿತು. ಆದರೆ ಹಾಲು ಕರೆಯಲೆಂದು ಹಟ್ಟಿಗೆ ಒಂದು ಕಾಲನ್ನು ಇಡುವಾಗಲೇ ಎರಡು ಮುಳ್ಳು ತಾಗಿತು. "ಇದೇನು ಮುಳ್ಳನ್ನೆಲ್ಲಾ ಹಟ್ಟಿಗೆ ತಂದು ಹಾಕಿದ್ದು ?" ಎಂದು ಆ ಹುಡುಗನಲ್ಲಿ ಕೇಳಿದಾಗ, "ನೀವು ಸೊಪ್ಪು ತಂದು ಹಾಕಲು ಹೇಳಿದಿರಿ. ಮುಳ್ಳನ್ನು ಒಟ್ಟಿಗೆ ತಂದೆ" ಎಂದು ಅವನು ಹೇಳಿದನು. ಆಗ ಅವಳು "ಮುಳ್ಳನ್ನೆಲ್ಲಾ ಕಡಿಯಬಾರದು. ತೋಟದ ಮರಗಳನ್ನೂ ಕಡಿಯಬಾರದು. ಚಿಕ್ಕ ಚಿಕ್ಕ ಮತ್ತು ಎಳೆಯ ಸೊಪ್ಪನ್ನು ಹುಡುಕಿ, ಕಡಿಯಬೇಕು" ಎಂದು ಹೇಳಿ ಚೆಲ್ಲಿದ ಸೊಪ್ಪನ್ನು ಎಲ್ಲವನ್ನೂ ತೆಗೆಸಿದಳು. ಅಲ್ಲಿಗೆ ಒಂದಕ್ಕೆ ಎರಡು ಕೆಲಸವಾಯಿತು.

ಮರುದಿನ ಆ ಕೆಲಸದ ಹುಡುಗ ಏನು ಮಾಡಿದನೆಂದರೆ, ಚಿಕ್ಕ ಚಿಕ್ಕ ಮತ್ತು ಎಳೆಯ ಸೊಪ್ಪನ್ನು ಸ್ವಲ್ಪ ತಂದು, ತೆಳುವಾಗಿ ಚೆಲ್ಲಿದನು. ಇದು ಏನು ಮಾಡಿದ್ದು ಎಂದು ಕೇಳಿದಾಗ, "ನೀವು ಹೇಳಿದಿರಿ, ಹಾಗೆಯೇ ಮಾಡಿದೆ" ಎಂದನು ಆ ಹುಡುಗ. ಇನ್ನು ಇವನನ್ನು ಈ ಕೆಲಸಕ್ಕೆ ಬಿಟ್ಟರೆ ಉಳಿಗಾಲವಿಲ್ಲ ಎಂದು, ಇವನಿಗೆ ಉಳುವ ಕೆಲಸವನ್ನು ಕೊಟ್ಟರು. ಒಂದೆರಡು ದಿನ ಚೆನ್ನಾಗಿ ಹೊಲವನ್ನು ಉತ್ತನು. ಮೂರನೆಯ ದಿನ ಯಜಮಾನನು "ನೋಡು, ಆ ಕೊಕ್ಕರೆ ಕುಳಿತ ಹೊಲವನ್ನು ಉಳು" ಎಂದು ಒಂದು ಹೊಲವನ್ನು ತೋರಿಸಿ ಹೇಳಿದನು. ಕೆಲಸದವನು ಎತ್ತುಗಳನ್ನು ಉಳಲು ಹೊಡೆದುಕೊಂಡು ಹೋದನು. ಹೋಗುವಾಗ ಆ ಹೊಲದಲ್ಲಿದ್ದ ಕೊಕ್ಕರೆಯು ಹಾರಿ ಹೋಗಿ, ಮತ್ತೊಂದು ಹೊಲದಲ್ಲಿ ಕುಳಿತುಕೊಂಡಿತು. ಅಲ್ಲಿಗೂ ಇವನು ಹೋದಾಗ, ಅಲ್ಲಿಂದಲೂ ಆಚೆ ಹಾರಿ, ಕೊನೆಯ ಹೊಳೆಯ ಆಚೆ ಬದಿಗೆ ಹಾರಿತು. ಹೆಡ್ಡನು ಕೊಕ್ಕರೆಯ ಬೆನ್ನು ಬಿಡಲಿಲ್ಲ. ಹೊಳೆಯ ಆಚೆ ಬದಿಗೂ ಎತ್ತುಗಳನ್ನು ಹೊಡೆದುಕೊಂಡು ಹೋದನು. ಆಗ ಕೊಕ್ಕರೆಯು ಒಂದು ಹೊಲದ ಬದಿಯ ಮರದ ಮೇಲೆ ಕುಳಿತುಕೊಂಡಿತು. ಇದೇ ಹೊಲವನ್ನು ಉಳಲು ಹೇಳಿದ್ದು ಎಂದು, ಅದರಲ್ಲಿ ನೀರು ಇದೆಯೋ ಇಲ್ಲವೋ ಎಂದೂ ನೋಡದೆ, ನೀರಿನ ಪಸೆಯೇ ಇಲ್ಲದ ಹೊಲವನ್ನು ಉಳಲು ಸುರುಮಾಡಿದನು. ಉಳಲು ಹೋದವನು ಇಷ್ಟು ಹೊತ್ತು ಎಲ್ಲಿ ಹೋದ ಎಂದು ಮನೆಯ ಯಜಮಾನನು ಬಂದು ನೋಡುವಾಗ ಅವನು ಈ ಹೊಲವನ್ನು ಉಳುತ್ತಿದ್ದನು. "ನಿನಗೆ ತಲೆ ಸರಿಯಿಲ್ಲವೋ" ಎಂದು ಹುಡುಗನನ್ನು ಬೈಯ್ದಾಗ, ಅವನು "ನೀವು ಕೊಕ್ಕರೆ ಕುಳಿತ ಹೊಲವನ್ನು ಉಳಲು ಹೇಳಿದಿರಿ" ಎಂದನು. ಯಜಮಾನನಿಗೆ ಸಿಟ್ಟು ತಡೆಯಲಾಗದೆ, ಪೆಟ್ಟು ಹೊಡೆಯಲು ಬಂದಾಗ, ಹುಡುಗ ಅಳುತ್ತಾ ಕಾಲು ಹಿಡಿದನು.

ಮನೆಗೆ ಬಂದು, ಅವನಿಗೆ ಬೇರೆ ಕೆಲಸ ಕೊಡುವ ಎಂದು, "ಇವತ್ತು ಮನೆಯ ಮುದುಕಿಯ ಮೈಮೇಲೆ ನೊಣ ಕುಳಿತುಕೊಳ್ಳದಂತೆ ಓಡಿಸುತ್ತಿರು. ಮತ್ತೆ ಎಲ್ಲಾ ನಾಳೆ ನೋಡುವ" ಎಂದು ಹೇಳಿದ. ಹೆಡ್ಡನು ಯಜಮಾನ ಹೇಳಿದ್ದಕ್ಕೆ ಚಾಚೂ ಹೇಳದೆ ಮುದುಕಿ ಇದ್ದಲ್ಲಿಗೆ ಬಂದನು. ಕೈಯಲ್ಲಿ ಒಂದು ಕೋಲು ಹಿಡಿದು ಕೊಂಡು ಕುಳಿತನು. ಮಲಗಿಕೊಂಡಿದ್ದ ಮುದುಕಿಗೆ ಇವನು ಬಂದದ್ದು ಗೊತ್ತೇ ಇಲ್ಲ. ಪಾಪ, ಅದು ಗೊರಕೆ ಹೊಡೆಯುತ್ತಿತ್ತು. ಮುದುಕಿಯ ಕಾಲಿನಲ್ಲಿದ್ದ ಕಜ್ಜಿಯೊಂದರ ಮೇಲೆ ನೊಣವೊಂದು ಬಂದು ಕುಳಿತ ಕೂಡಲೇ, ಕೋಲಿನಲ್ಲಿ ಒಂದು ಪೆಟ್ಟು ಹೊಡೆದನು. ಮುದುಕಿಗೆ ಪೆಟ್ಟು ಬಿದ್ದದ್ದೇ ಗೊತ್ತು. ಮಲಗಿದ ಲ್ಲಿಂದಲೇ ಬೊಬ್ಬೆ ಹೊಡೆಯಲು ಸುರುಮಾಡಿತು. ಯಜಮಾನ, ಒಡತಿ ಓಡಿ ಬಂದು ನೋಡುವಾಗ, ಇವನು ಕೋಲು ಹಿಡಿದುಕೊಂಡು ಕುಳಿತಿದ್ದಾನೆ. ಅವರಿಗೆ ನಗಲೂ ಅಲ್ಲ, ಅಳಲೂ ಅಲ್ಲದ ಸ್ಥಿತಿಯಾಯಿತು. "ಏಳು, ನೀನು ಏನೂ ಮಾಡಬೇಡ. ದೇವರಂತೆ ಒಳಗೆ ಕುಳಿತುಕೋ" ಎಂದು ಕಣ್ಣು ಕೆಂಪು ಮಾಡಿ ಯಜಮಾನನು

ಹೇಳಿದ ಕೂಡಲೇ, ಹುಡುಗನು ಹೆದರಿಕೊಂಡು ಒಳಗೆ ಬಂದನು. ಒಂದಕ್ಕೆ ಎರಡು ಕೆಲಸ ತಂದು ಹಾಕಿದೆ ಯೆಂದು ಹೇಳುತ್ತಾ, ಮುದುಕಿಯನ್ನು ಸಮಾಧಾನ ಮಾಡಿ, ಒಳಗೆ ಬರುವಾಗ, ಈ ಹುಡುಗನು ದೇವರ ಪಟದ ಎದುರು ಕೈಕಟ್ಟಿ, ಅಲ್ಲಾಡದೆ ಕುಳಿತುಕೊಂಡಿದ್ದಾನೆ. "ನೀನು ಇಲ್ಲಿ ಏಕೆ ಕುಳಿತುಕೊಂಡದ್ದು?" ಎಂದು ಯಜಮಾನ ಕೇಳಿದಾಗ, "ನೀವು ಹೇಳಿದ್ದು ಅಲ್ಲವೇ, ದೇವರಂತೆ ಕುಳಿತುಕೊಳ್ಳಬೇಕೆಂದು" ಎಂದು ಅಂಜುತ್ತಾ ಅಂಜುತ್ತಾ ಹೇಳಿದ. "ಅಯ್ಯೋ ಮಹಾರಾಯಾ, ನೀನು ಹೆಡ್ಡನೆಂದರೆ ಶತ ಹೆಡ್ಡ. ಏಳು ಹೋಗು. ನೀನೊಬ್ಬನು ಹೇಗೆ ಬಂದು ನನಗೆ ಗಂಟುಬಿದ್ದೆಯೋ ? ನಿನ್ನನ್ನು ಕೆಲಸಕ್ಕೆ ಇಟ್ಟುಕೊಂಡರೆ ನನಗೆ ಉಳಿಗಾಲ ವಿಲ್ಲ. ಇಂದಿನಿಂದ ನೀನು ನಮಗೆ ಕೆಲಸಕ್ಕೆ ಬೇಡ. ನಿನ್ನ ದಾರಿ ನೀನು ನೋಡಿಕೋ." ಹೀಗೆ ಯಜಮಾನನು ಅವನನ್ನು ಬೈಯ್ದು ಹೊರಗೆ ಅಟ್ಟಿದ.

ಹೆಡ್ಡ ಹುಡುಗನು ಅಳುತ್ತಾ ಅಲ್ಲಿಂದ ಹೊರಟನು. ಆಗ ಮನೆಯೊಡತಿಯು "ಅಳುತ್ತಾ ಬಂದವನು ಹೋಗುವಾಗಲೂ ಅಳುತ್ತಾ ಹೋಗಬೇಡ" ಎಂದು ತಿನ್ನಲು ಕೊಟ್ಟು, "ಬೇರೆ ಎಲ್ಲೂ ಹೋಗುವುದು ಬೇಡ. ನೇರವಾಗಿ ಅಣ್ಣನಿದ್ದಲ್ಲಿಗೇ ಹೋಗು'' ಎಂದಳು. ಹೆಡ್ಡನು ಬಂದಲ್ಲಿಗೇ ಹಿಂದಕ್ಕೆ ಹೋದನು.

ಇಲ್ಲಿ ತುಳುಕಥೆಯನ್ನು ಸಂಪೂರ್ಣವಾಗಿ ಕನ್ನಡದಲ್ಲಿ ಅನುವಾದ ಮಾಡಿಕೊಡಲಾಗಿದೆ. ಈ ಹಾಸ್ಯ ಕಥೆಯು ಹೆಡ್ಡನೊಬ್ಬನ ಬೇರೆ ಬೇರೆ ಹೆಡ್ಡು ಕೆಲಸಗಳನ್ನು ತಿಳಿಸುತ್ತದೆ. ಇಲ್ಲಿನ ಮುಖ್ಯ ಆಶಯ : J 2461. 1. Literal following of instructions about actions. (ಕೆಲಸಗಳ ಬಗೆಗಿನ ಸೂಚನೆ ಗಳನ್ನು ಪದಶಃ ಅನುಸರಿಸುವುದು).

ಇಲ್ಲಿನ ಮುಖ್ಯ ಹಾಸ್ಯ ಘಟನೆಗಳು :

1. ಹಟ್ಟಿಗೆ ಸೊಪ್ಪು ತಂದು ಹಾಕು ಎಂದಾಗ, ಮುಳ್ಳು ಸಹಿತ ಸೊಪ್ಪು ತಂದು ಹಾಕುವುದು.

2. ಬರೇ ಸೊಪ್ಪನ್ನು ಹಾಕು ಎಂದಾಗ, ಚಿಗುರು ಸೊಪ್ಪನ್ನು ತಂದು ಹಾಕುವುದು.

3. ಕೊಕ್ಕರೆ ಇದ್ದ ಹೊಲವನ್ನು ಉಳು ಎಂದಾಗ, ಕೊಕ್ಕರೆ ಯಾವ ಯಾವ ಹೊಲದಲ್ಲಿ ಕುಳಿತು ಕೊಳ್ಳುತ್ತದೆಯೋ ಆ ಎಲ್ಲಾ ಹೊಲಗಳನ್ನು ಉಳುವುದು. ಕೊಕ್ಕರೆಯು ಮರದಲ್ಲಿ ಕುಳಿತಾಗ, ಅಲ್ಲಿಯೂ ಉಳಲು ಪ್ರಯತ್ನಿಸುವುದು.

(ಈ ಆಶಯ ಬೇರೆ ಹಾಸ್ಯ ಕಥೆಗಳಲ್ಲಿಯೂ ಇದೆ. J 2465.12. Ploughing above the tree)

4. ಮುದುಕಿಯ ಮೈಮೇಲಿನ ನೊಣ ಓಡಿಸಲು ಹೇಳಿದಾಗ, ನೊಣ ಕುಳಿತ ಮುದುಕಿಗೂ ಹೊಡೆ ಯುವುದು.

5. ದೇವರಂತೆ ಸುಮ್ಮನೆ ಕುಳಿತುಕೋ ಎಂದಾಗ, ದೇವರ ಪಟದ ಬಳಿ ಅದೇ ರೀತಿ ಕುಳಿತು ಕೊಳ್ಳುವುದು.

## 2. ತಂದೆಯ ಸಾಲಕ್ಕೆ ತಿಮ್ಮನ ಕೋಲ

ಒಂದೂರಿನಲ್ಲಿ ಗಂಡ ಹೆಂಡತಿಯರಿಗೆ ಮೂವರು ಮಕ್ಕಳು—ಸೋಮು, ದೂಮು ಮತ್ತು ತಿಮ್ಮ. ತಂದೆ

ತೀರಿಹೋದಾಗ ಧನಿಗಳಲ್ಲಿ ಸಾಲ ಮಾಡಿದ್ದ. ಅದನ್ನು ತೀರಿಸುವುದಕ್ಕಾಗಿ ಸೋಮನು ಧನಿಗಳಲ್ಲಿ ಕೆಲಸಕ್ಕೆ ಸೇರಿದನು. ಧನಿಯ ಕಿರಿ ಕಿರಿ, ಬೈಯ್ಗಳನ್ನು ತಡೆಯಲಾರದೆ ಸೋಮು ಹಿಂದಕ್ಕೆ ಬಂದ. ದೂಮನು ಹಾಗೆಯೇ ಮಾಡಿದ. ಕೊನೆಗೆ ಬುದ್ಧಿವಂತನಾದ ಕೊನೆಯ ಮಗ ತಿಮ್ಮನು ಧನಿಗಳಲ್ಲಿ ಕೆಲಸಕ್ಕೆ ಹೋದ. ಧನಿಯು ತಿಮ್ಮನಲ್ಲಿ ಕೊಕ್ಕರೆ ಕುಳಿತಿದ್ದ ಒಂದು ಹೊಲವನ್ನು ತೋರಿಸಿ "ಕೊಕ್ಕರೆ ಕುಳಿತ ಹೊಲವನ್ನು ಉಳಬೇಕು" ಎಂದ. ತಿಮ್ಮನು ಎತ್ತುಗಳನ್ನು ತೆಗೆದುಕೊಂಡು ಕೊಕ್ಕರೆ ಕುಳಿತಿದ್ದ ಆ ಹೊಲದ ಹತ್ತಿರ ಹೋದಾಗ, ಅಲ್ಲಿದ್ದ ಕೊಕ್ಕರೆ ಹಾರಿ ಹೋಗಿ, ನಾಟಿ ಮಾಡಿದ್ದ ಒಂದು ಹೊಲದಲ್ಲಿ ಕುಳಿತಿತು. ತಿಮ್ಮನು ಆ ಹೊಲವನ್ನು ಉತ್ತನು. ಅದು ಕುಳಿತ ಗದ್ದೆಯ ಹುಣಿಯನ್ನೂ ಉತ್ತನು. ಅಲ್ಲಿಂದ ಕೊಕ್ಕರೆಯು ಹಾರಿಹೋಗಿ ಒಂದು ಹೊನ್ನೆ ಮರದ ಮೇಲೆ ಕುಳಿತಿತು. ಆಗ ತಿಮ್ಮನು ಎತ್ತುಗಳ ಕುತ್ತಿಗೆಗೆ ಹಗ್ಗ ಹಾಕಿ, ಅವುಗಳನ್ನು ಮರದ ಮೇಲಕ್ಕೆ ಎಳೆಯುತ್ತಾನೆ. ಎತ್ತುಗಳ ಗಲಾಟೆ ಕೇಳಿ ಓಡಿ ಬಂದು ನೋಡಿದ ಧನಿಯು ತಿಮ್ಮನನ್ನು "ಏನು ಮಾಡುತ್ತಿರುವಿ ?" ಎಂದು ಗದರಿಸಿದನು. ಆಗ ತಿಮ್ಮನು "ನೀವು ಕೊಕ್ಕರೆ ಕುಳಿತ ಜಾಗವನ್ನು ಉಳಲು ಹೇಳಿದ್ದೀರಿ. ಕೊಕ್ಕರೆ ಎಲ್ಲಿ ಎಲ್ಲಿ ಕುಳಿತಿತೋ, ಆ ಎಲ್ಲಾ ಜಾಗವನ್ನು ಉಳುತ್ತೇನೆ" ಎಂದನು. ಧನಿಯು ಅವನನ್ನು ಬೈದು ಅವನಿಗೆ ಬೇರೆ ಕೆಲಸ ಕೊಟ್ಟನು. ಅವನು ತಿಮ್ಮನಲ್ಲಿ 'ಯಾರೂ ನೋಡದ, ಜಾನುವಾರುಗಳು ಬಾರದ ಜಾಗದಲ್ಲಿ ಸೌತೆಕಾಯಿಯ ಸಾಲುಗಳನ್ನು ಮಾಡು' ಎಂದನು. ಧನಿ ಹೊರಗಿನಿಂದ ಬಂದು ನೋಡುವಾಗ, ತನ್ನ ಅಡುಗೆ ಮನೆಯಲ್ಲಿ ಮೂರು ಸಾಲುಗಳನ್ನು ಅಗೆದು ಹಾಕಿದ್ದುದನ್ನು ಕಂಡು, ತಿಮ್ಮನನ್ನು ಗದರಿಸಿ ಕೇಳಿದನು. ತಿಮ್ಮನು ಧನಿಯಲ್ಲಿ "ಅಡಿಗೆ ಮನೆಯಲ್ಲಿ ಹೊರಗಿನವರು ಯಾರೂ ನೋಡುವುದಿಲ್ಲ, ಜಾನುವಾರುಗಳೂ ಬರುವುದಿಲ್ಲ. ಅದಕ್ಕೇ ಅಲ್ಲಿ ಸಾಲುಗಳನ್ನು ಅಗೆದೆ" ಎಂದನು. ಅವನನ್ನು ಗದರಿಸಿದ ಧನಿ, ಇನ್ನೊಂದು ದಿನ, ಅಪರೂಪಕ್ಕೆ ತನ್ನ ಅತ್ತೆಯ ಮನೆಗೆ ಹೊರಟನು. ಅಲ್ಲಿಗೆ ಹೋಗುವಾಗ ಒಂದು ಬಾಳೆಹಣ್ಣಿನ ಗೊನೆಯನ್ನು ತಿಮ್ಮನ ಕೈಯಲ್ಲಿ ಹಿಡಿಸಿಕೊಂಡು ಹೊರಟನು. ತನ್ನ ಹಿಂದುಗಡೆ ಬರುತ್ತಿರುವ ತಿಮ್ಮನು ಬಾಳೆ ಹಣ್ಣನ್ನು ತಿಂದಾನು ಎಂದು ಎಚ್ಚರಿಸುವುದಕ್ಕಾಗಿ, "ತಿಮ್ಮಾ ನನಗೆ ಬೆನ್ನಿನಲ್ಲೂ ಕಣ್ಣು ಇದೆ. ಹಣ್ಣು ತಿನ್ನಬೇಡ" ಎಂದನು. ತಿಮ್ಮನು ಒಂದೊಂದೇ ಹಣ್ಣನ್ನು ಧನಿಯ ಬೆನ್ನಿಗೆ ತೋರಿಸಿ, ದಾರಿಯುದ್ದಕ್ಕೂ ತಿನ್ನುತ್ತಾ ಹೋದನು. ಧನಿಯು ಅತ್ತೆಯ ಮನೆಯ ಸಮೀಪ ಬಂದಾಗ, ಬಾಳೆಗೊನೆ ಅರ್ಧ ಖಾಲಿಯಾಗಿತ್ತು. ಧನಿಯು ಗದರಿಸಿದಾಗ ತಿಮ್ಮನು "ನಾನು ನಿಮಗೆ ತಿಳಿಸಿಯೇ ಹಣ್ಣುಗಳನ್ನು ತಿಂದದ್ದು. ನೀವು ನಿಮಗೆ ಬೆನ್ನಿನಲ್ಲಿ ಕಣ್ಣು ಇದೆ ಎಂದು ಹೇಳಿದ್ದೀರಿ. ನಾನು ನಿಮ್ಮ ಬೆನ್ನಿನಲ್ಲಿದ್ದ ಕಣ್ಣಿಗೆ ತೋರಿಸಿದಾಗ ನೀವೇನೂ ಆಕ್ಷೇಪಣೆ ಮಾಡಲಿಲ್ಲ. ಆದ್ದರಿಂದ ಹಣ್ಣು ತಿಂದೆ" ಎಂದನು. ಧನಿಗೆ ಏನು ಹೇಳಲೂ ಸಾಧ್ಯವಾಗಲಿಲ್ಲ. ಅಪರೂಪಕ್ಕೆ ಮನೆಗೆ ಬಂದ ಅಳಿಯನಿಗೆ ಏನು ಸತ್ಕಾರ ಮಾಡಬೇಕೆಂದು ಧನಿಯ ಅತ್ತೆಯು ಧನಿಯ ಸೇವಕನಾದ ತಿಮ್ಮನಲ್ಲಿ ಕೇಳಿದಳು. ಆದಕ್ಕೆ ತಿಮ್ಮನು "ನಮ್ಮ ಧನಿಗೆ ಅಡ್ಯೆಗಳಲ್ಲಿ ತೌಡಿನ ರೊಟ್ಟಿ ಮತ್ತು ಮೆಣಸಿನ ಕಷಾಯ ಎಂದರೆ ಬಹಳ ಇಷ್ಟ. ನನಗೆ ಕೋಳಿ ರೊಟ್ಟಿ ಆದೀತು" ಎಂದನು. ಅದೇ ರೀತಿ ಅಡುಗೆ ಮಾಡಿ ಅತ್ತೆ ಅಳಿಯನಿಗೆ ತೌಡಿನ ರೊಟ್ಟಿ, ಮೆಣಸಿನ ಕಷಾಯ ಕೊಟ್ಟಳು. ತಿಮ್ಮನ ಧನಿ ದಾಕ್ಷಿಣ್ಯದಿಂದ ಬಹಳ ಕಷ್ಟಪಟ್ಟು ಅದನ್ನು ತಿಂದನು. ತಿಮ್ಮನು ಕೋಳಿ ರೊಟ್ಟಿ ಚೆನ್ನಾಗಿ ಹೊಡೆದನು. ರಾತ್ರಿ ಹೊತ್ತು ಧನಿಗೆ ಜುಲಾಬು ಸುರುವಾಯಿತು. ಅವನು ತಿಮ್ಮನಲ್ಲಿ ತನ್ನ ಸಂಕಟವನ್ನು ಗುಟ್ಟಿನಲ್ಲಿ ಹೇಳಿಕೊಂಡಾಗ, ತಿಮ್ಮನು ಧನಿಯನ್ನು ಜಬರ್‌ದಸ್ತು ಮಾಡಿ, ಜುಲಾಬು ಹೋಗುವುದಕ್ಕೆ ಒಂದು ಬಾಲ್ದಿ ನೀರು ಕೊಟ್ಟನು. ಮರುದಿನ ಮುಂಜಾನೆ ಧನಿ ಎದ್ದು ತನ್ನ ಮನೆಗೆ ಓಡಿದನು. ಒಂದು ಬಾರಿ ಧನಿಯ ಮಗಳು ಮೈ ನೆರೆಯುತ್ತಾಳೆ. ಆಗ ಧನಿಯು ಪೇಟೆಯ ಅಂಗಡಿಯಲ್ಲಿ ಕುಳಿತಿದ್ದನು. ತಿಮ್ಮನು ಅಲ್ಲಿಗೆ ಓಡಿ ಬಂದು ಎಲ್ಲ ಜನರ ಎದುರು ಗಟ್ಟಿಯಾಗಿ "ನಿನ್ನ ಮಗಳು ಹೆಂಗುಸಾಗಿದ್ದಾಳೆ" ಎಂದು ಬೊಬ್ಬೆ ಹಾಕಿ ಹೇಳಿದನು. ಧನಿಯು ಅವನನ್ನು ಪ್ರತ್ಯೇಕವಾಗಿ ಕರೆದು ಗದರಿಸಿ, ಮನೆಯ ಸಮಾಚಾರವನ್ನು ಎಲ್ಲರ ಎದುರು ಗಟ್ಟಿಯಾಗಿ ಹೇಳಬಾರದು, ಏಕಾಂತವಾಗಿ ಹೇಳಬೇಕು ಎಂದನು. ಇನ್ನೊಂದು ಬಾರಿ ಧನಿಯ ಮನೆಗೆ ಬೆಂಕಿ ಬಿತ್ತು.

ಆಗಲೂ ಧನಿಯು ಪೇಟೆಯಲ್ಲಿ ಅಂಗಡಿಯಲ್ಲಿ ಇದ್ದನು. ಈ ಸುದ್ದಿಯನ್ನು ಹೇಳಲು ಅಲ್ಲಿಗೆ ತಿಮ್ಮನು ಬಂದಾಗ, ಅಲ್ಲಿ ಅನೇಕ ಜನರಿದ್ದರು. ಅವರೆಲ್ಲರೂ ಅಲ್ಲಿಂದ ಹೊರಟು ಹೋಗುವವರೆಗೆ ಬಹಳ ಹೊತ್ತು ಕಾದು, ಧನಿಯು ಒಬ್ಬನೇ ಉಳಿದಾಗ ತಿಮ್ಮನು ನಿಧಾನವಾಗಿ ಮನೆಗೆ ಬೆಂಕಿ ಬಿದ್ದ ವಿಚಾರ ತಿಳಿಸಿದನು. ಧನಿಯು ಓಡಿಕೊಂಡು ಬರುವಾಗ ಮನೆ ಬೂದಿಯಾಗಿತ್ತು. ಇಂತಹ ತಿಮ್ಮನನ್ನು ಇಟ್ಟುಕೊಂಡರೆ ಬಹಳ ಅಪಾಯವೆಂದು ಭಾವಿಸಿದ ಧನಿಯು ತಿಮ್ಮನಲ್ಲಿ "ನಿನ್ನ ಅಪ್ಪ ಮಾಡಿದ ಸಾಲ ತೀರಿತು" ಎಂದು ಅವನನ್ನು ಮನೆಗೆ ಕಳುಹಿಸಿದನು.

ಇದು ತುಳುವಿನ ಮೂಲರೂಪದ ಸಂಕ್ಷಿಪ್ತ ಕನ್ನಡ ರೂಪಾಂತರ. ಇಲ್ಲಿನ ಕೆಲವು ಘಟನೆಗಳು ಹಿಂದಿನ ಕಥೆಯಾದ 'ಕೆಲಸದ ಹುಡುಗ'ದಲ್ಲಿ ಬರುವವುಗಳೇ ಆಗಿವೆ. ಆದರೆ ಕಥೆಯ ದೃಷ್ಟಿಯಲ್ಲಿ ಆ ಕಥೆಗೂ ಈ ಕಥೆಗೂ ವ್ಯತ್ಯಾಸಗಳಿವೆ. ಅಲ್ಲಿ ಹೆಡ್ಡನೊಬ್ಬನು ತನ್ನ ಹೆಡ್ಡುತನದಿಂದಾಗಿ ಹೇಳಿದ ಮಾತುಗಳಿಗೆ ಪದಶಃ ಅರ್ಥ ಕಲ್ಪಿಸಿ, ಅವಾಂತರಕ್ಕೆ ಮತ್ತು ಆ ಮೂಲಕ ಹಾಸ್ಯಕ್ಕೆ ಕಾರಣನಾಗುತ್ತಾನೆ. ಈ ಕಥೆಯಲ್ಲಿ ಜಾಣನೊಬ್ಬನು ಹೆಡ್ಡನಂತೆ ನಟಿಸಿ, ಒಡೆಯನ ಮಾತುಗಳಿಗೆ ಪದಶಃ ಅರ್ಥ ಕಲ್ಪಿಸಿ, ಅವಾಂತರ ಮಾಡಿ, ಹಾಸ್ಯದ ಮೂಲಕ ಒಡೆಯನಿಗೆ ಬುದ್ಧಿ ಕಲಿಸುತ್ತಾನೆ. ಇಲ್ಲಿನ ಮುಖ್ಯ ಆಶಯ: J 1500 Clever practical retorts.

ಇಲ್ಲಿನ ಮುಖ್ಯ ಘಟನೆಗಳು:

1. ಕೊಕ್ಕರೆ ಇರುವ ಹೊಲವನ್ನು ಉಳುವುದು. ('ಕೆಲಸದ ಹುಡುಗ' ಕಥೆಯ ಹಾಗೆಯೇ);

2. ಯಾರೂ ನೋಡದಲ್ಲಿ ತರಕಾರಿಗೆ ಅಗೆಯ ಸಾಲು ತೆಗೆಯಲು ಹೇಳಿದಾಗ, ಅಡುಗೆಮನೆಯೊಳಗೆ ತರಕಾರಿಗೆ ಅಗೆಯ ಸಾಲು ತೆಗೆಯುವುದು.

3. ಧನಿಯು ತನಗೆ ಬೆನ್ನಿನಲ್ಲೇ ಕಣ್ಣು ಇದೆ, ಬಾಳೆಹಣ್ಣು ತಿನ್ನಬೇಡ ಎಂದಾಗ, ಹಿಂದಿನಿಂದ ಬರುತ್ತಿದ್ದ ತಿಮ್ಮನು ಧನಿಯ ಬೆನ್ನಿಗೆ ತೋರಿಸಿ, ಬಾಳೆಹಣ್ಣನ್ನು ತಿನ್ನುವುದು. (ಆಶಯ J 1511.9. Master says that he has eyes in back of head : servant cheats him. Holds up food to master's back and then not having objection raised, eats it.)

4. ಧನಿಯ ಅತ್ತೆಮನೆಯಲ್ಲಿ ಧನಿಗೆ ಸರಳವಾದ, ಔಷಧದಂತಹ ಆಹಾರವನ್ನು ಮಾಡಲು ಹೇಳುವುದು; ತಾನು ಒಳ್ಳೆಯ ಆಹಾರವನ್ನು ತಿನ್ನುವುದು.

5. ಧನಿಯ ಮಗಳು ಋತುಮತಿಯಾದ ರಹಸ್ಯ ವಿಚಾರವನ್ನು ಎಲ್ಲರ ಮುಂದೆ ಗಟ್ಟಿಯಾಗಿ ಹೇಳುವುದು.

6. ಧನಿಯ ಮನೆಗೆ ಬೆಂಕಿ ಬಿದ್ದ ವಿಚಾರವನ್ನು ನಿಧಾನವಾಗಿ ತಿಳಿಸುವುದು.

ಜಾಣನೊಬ್ಬನು ಸಾಲ ತೀರಿಸುವ ನೆಪದಲ್ಲಿ ಧನಿಗೆ ಬುದ್ಧಿ ಕಲಿಸುವ ಹಾಸ್ಯ ಕಥೆ.

### 3. ಜಾಣ ಮಾತು

ಒಬ್ಬ ತಂದೆಗೆ ಇಬ್ಬರು ಗಂಡು ಮಕ್ಕಳು. ಅವನು ಸಾಯುವ ಕಾಲಕ್ಕೆ ಮಕ್ಕಳನ್ನು ಕರೆದು, "ಸುರ್ ಎಂದು ಶಬ್ದ ಮಾಡಿ ಉಣ್ಣಬೇಕು, ಗೊರಕೆ ಹೊಡೆದು ನಿದ್ರೆ ಮಾಡಬೇಕು, ಇದೇ ನಿಮಗೆ ಜೀವನಕ್ಕೆ ದಾರಿ" ಎಂದು ಹೇಳಿ ಪ್ರಾಣ ಬಿಟ್ಟ. ದೊಡ್ಡಮಗನು ತಂದೆ ಹೇಳಿದ ಮಾತಿಗೆ ಹೀಗೆ ಅರ್ಥ ಮಾಡಿದ—''ಸುರ್ ಎಂದು ಶಬ್ದ ಮಾಡಿ ಉಣ್ಣುವುದು ಪಾಯಸವನ್ನು. ಚೆನ್ನಾಗಿ ಪಾಯಸ ಸೇವಿಸಿದರೆ ಚೆನ್ನಾಗಿ ನಿದ್ರೆ ಖಂಡಿತ ಬರುತ್ತದೆ. ಹೀಗೆ ಆಲೋಚನೆ ಮಾಡಿ, ಹೆಂಡತಿಯಲ್ಲಿ ಹೇಳಿ, ದಿನಾಲೂ ಪಾಯಸ ಮಾಡಿಸಿ, ಸುರ್ ಎಂದು ಉಣ್ಣುತ್ತಾ, ಚೆನ್ನಾಗಿ ನಿದ್ರಿಸುತ್ತಾ ಕಾಲ ಕಳೆಯುತ್ತಿದ್ದ. ತಂದೆಯ ಮಾತಿಗೆ ಚಿಕ್ಕಮಗನು ಹೀಗೆ ಅರ್ಥ ಮಾಡಿದ-

"ಬೇಸಾಯದ ವೃತ್ತಿಯ ಈ ಮನೆಯಲ್ಲಿ ಸುರ್ ಎಂದು ಶಬ್ದ ಮಾಡಿ ಉಣ್ಣುವುದೆಂದರೆ, ಹೊಲದಲ್ಲಿ ಚೆನ್ನಾಗಿ ಕೆಲಸ ಮಾಡಿ, ಮನೆಗೆ ಬಂದು ತಿಳಿಯುಳ್ಳ ಗಂಜಿಯನ್ನು ಸುರ್ ಎಂದು ಶಬ್ದ ಮಾಡಿ ಉಣ್ಣುವುದು. ಇದರಿಂದ ದೇಹಕ್ಕೂ ಹಿತವಾಗುತ್ತದೆ ಚೆನ್ನಾಗಿ ನಿದ್ರೆಯೂ ಬರುತ್ತದೆ. ಮನೆಯಲ್ಲಿ ಸಂಪತ್ತೂ ಬೆಳೆಯುತ್ತದೆ..." ಹೀಗೆ ಆಲೋಚನೆ ಮಾಡಿದ ಆ ಬುದ್ಧಿವಂತ ತಮ್ಮನು ಬೆಳಿಗ್ಗೆಯಿಂದ ಸಂಜೆಯವರೆಗೆ ಹೊಲದಲ್ಲಿ ಚೆನ್ನಾಗಿ ದುಡಿದು, ಮನೆಗೆ ಬಂದು, ತಿಳಿಯುಳ್ಳ ಗಂಜಿಯನ್ನು ಸುರ್ ಎಂದು ಉಂಡು, ಚೆನ್ನಾಗಿ ನಿದ್ರೆ ಮಾಡುತ್ತಿದ್ದನು. ಇವನ ಪರಿಶ್ರಮದಿಂದಾಗಿ ಮನೆಯಲ್ಲಿ ಸಂಪತ್ತು ಬೆಳೆಯುತ್ತಾ ಬಂತು. ಆದರೆ ಇವನ ಅಣ್ಣನು ದಿನಾಲೂ ಪಾಯಸ ಮಾಡಿ ತಿಂದು, ದುಡಿಯದೆ ಕಾಲ ಕಳೆದ ಕಾರಣ, ಅವನಿಗೆ ಬಡತನ ಹೆಚ್ಚುತ್ತಾ ಬಂತು. ಅವನ ಹೆಂಡತಿಯು ಅವನಲ್ಲಿ ಮೈದುನ ಮತ್ತು ಅವನ ಹೆಂಡತಿಯ ಸಂಪತ್ತನ್ನೂ ತಮ್ಮ ಬಡತನವನ್ನೂ ತೋರಿಸಿ, ದಳು. ಅಣ್ಣನು ಬಂದು ತಮ್ಮನಲ್ಲಿ ಈ ಕುರಿತು ವಿಚಾರಿಸಿದಾಗ, ತಮ್ಮನು ತಂದೆಯ ಮಾತಿನ ಅಂತರಂಗವನ್ನು ತಿಳಿದುಕೊಂಡು ತಾನು ದುಡಿದು ಸಂಪಾದನೆ ಮಾಡಿದ ವಿಚಾರ ತಿಳಿಸಿದನು. ಅಣ್ಣನಿಗೆ ತಾನು ಜಾಣ ಮಾತನ್ನು ತಪ್ಪಾಗಿ ಅರ್ಥ ಮಾಡಿಕೊಂಡೆನೆಂದು ಗೊತ್ತಾಯಿತು. ಆ ಮೇಲೆ ಅವನೂ ತಮ್ಮನಂತೆ ದುಡಿದು ಜೀವನ ಸಾಗಿಸಿದನು.

ತುಳು ಜನಪದ ಕಥೆಯ ಮೂಲರೂಪದ ಸಂಕ್ಷಿಪ್ತ ಕನ್ನಡ ರೂಪಾಂತರವನ್ನು ಇಲ್ಲಿ ಕೊಡಲಾಗಿದೆ. ಒಂದು ನೀತಿ ಮಾತನ್ನು ಇಬ್ಬರು ಅರ್ಥಮಾಡಿಕೊಂಡ ಬಗೆಯನ್ನೂ, ಆ ಮೂಲಕದ ಹಾಸ್ಯವನ್ನೂ ಇಲ್ಲಿ ತಿಳಿಸಲಾಗಿದೆ ಒಬ್ಬನು ಆ ನೀತಿಮಾತಿನ ಪದಶಃ ಅರ್ಥವನ್ನು ಮಾಡಿ ಹಾಳಾಗುತ್ತಾನೆ, ಇಲ್ಲಿನ ಮುಖ್ಯ ಆಶಯಗಳು :

J 154, ಸಾಯುವ ವೇಳೆಗೆ ತಂದೆಯ ಜಾಣಮಾತು.

H 588. Enigmatic counsels of a father. Taken literally brings trouble, but when properly interpreted are valuable.

ನೀತಿಕಥೆ (fable)ಯೊಂದರ ಸ್ವರೂಪವನ್ನು ಇಲ್ಲಿ ಕಾಣಬಹುದು. ಈ ತುಳುಕಥೆಯು ಬ್ರಾಹ್ಮಣ ಸಮಾಜದವರಿಂದ ಸಂಗ್ರಹಿಸಿದ್ದು. ಆದ್ದರಿಂದ ಇಲ್ಲಿನ ಉದಾಹರಣೆಯು ಭೋಜನದ ಒಂದು ಕ್ರಿಯೆಯಾದ "ಸುರ್" ಎಂದು ಎಳೆದು ಆಹಾರ ಸೇವಿಸುವುದಕ್ಕೆ ಸಂಬಂಧಿಸಿದೆ. ಹೆಚ್ಚಾಗಿ ಪಾಯಸವನ್ನು ಈ ರೀತಿ "ಸುರ್" ಎಂದು ಎಳೆದು ಸೇವಿಸುತ್ತಾರೆ.

## 4. ಸಕೋಟು ಸಂಕ್ರಾಂತಿ

ಒಂದು ಊರಿನಲ್ಲಿ ಒಬ್ಬ ಬ್ರಾಹ್ಮಣನು ಇದ್ದನು. ಆ ಬ್ರಾಹ್ಮಣನಿಗೆ ಕೆಲಸ ಏನು ಎಂದರೆ, ಆ ಊರಿನ ರಾಜನ ಅರಮನೆಯಲ್ಲಿ ಪಂಚಾಂಗ ಪಠನ ಮಾಡಿ ಬರುವುದು. ಪರಂಪರಾಗತವಾಗಿ ಬಂದ ಈ ಕೆಲಸದ ಸಂಬಳದಿಂದ ಅವನ ಜೀವನ ಸಾಗುತ್ತಿತ್ತು. ಆ ಬಡ ಬ್ರಾಹ್ಮಣನಿಗೆ ಒಬ್ಬನೇ ಮಗ. ಅವನು ಸ್ವಲ್ಪ ಹೆಡ್ಡ. ವಿದ್ಯಾವಂತನಲ್ಲ. ಅವನಿಗೆ ಪಂಚಾಂಗವನ್ನು ಸುಟ್ಟು ತಿನ್ನಲೂ ಗೊತ್ತಿಲ್ಲ. ಹೀಗಿರುವಾಗ ಆ ಬಡ ಬ್ರಾಹ್ಮಣ ಸತ್ತ. ಮಗನು ತಂದೆಯ ಅಂತ್ಯಕ್ರಿಯೆಯನ್ನು ಚೆನ್ನಾಗಿ ಮಾಡಿಸಿದ. ಆದರೆ ಪರಂಪರಾನುಗತವಾಗಿ ಬಂದ ಪಂಚಾಂಗ ಪಠನವನ್ನು ಬಿಡಲು ಸಾಧ್ಯವಿಲ್ಲ. ಅದಕ್ಕಾಗಿ ಮನೆಗೆ ಬಂದ ಪುರೋಹಿತನಲ್ಲಿ "ಏನು ಮಾಡುವುದು" ಎಂದು ಕೇಳಿದನು. ಆಗ ಪುರೋಹಿತನು ಏಳು ವಾರ. ಹದಿನೈದು ತಿಥಿ; ಇಪ್ಪತ್ತೇಳು ನಕ್ಷತ್ರ, ಇಪ್ಪತ್ತೇಳು ಯೋಗ, ಹನ್ನೊಂದು ಕರಣ–ಇದಕ್ಕೆಲ್ಲಾ ಪ್ರತ್ಯೇಕ ಪ್ರತ್ಯೇಕವಾಗಿ ಗುರುತು ಹಿಡಿಯುವ ಕಲ್ಲುಗಳನ್ನು ಇಟ್ಟು,

ಲೆಕ್ಕವನ್ನು ಹೇಳಿ ಹೋದನು. ಪುರೋಹಿತನು ಹೇಳಿದ ರೀತಿಯಲ್ಲಿಯೇ ಬ್ರಾಹ್ಮಣನ ಮಗನು ಲೆಕ್ಕ ಮಾಡುತ್ತಾ ಅರಮನೆಗೆ ಹೋಗಿ ಪಂಚಾಂಗ ಪಠನ ಮಾಡುತ್ತಿದ್ದನು. ಯಾವಾಗ ನೋಡಿದರೂ ಇವನ ಒಂದು ಕೋಣೆಯ ಬಾಗಿಲು ಮುಚ್ಚಿಕೊಂಡೇ ಇರುತ್ತಿತ್ತು.

ಒಂದು ದಿನ ಏಳುವಾಗ ತಡವಾಯಿತು. ಅರಮನೆಗೆ ಹೋಗುವುದಕ್ಕೆ ಅವಸರವಾಯಿತು. ಅವಸರ ದಲ್ಲಿ ಹೋಗುವಾಗ ಕೋಣೆಗೆ ಬಾಗಿಲು ಹಾಕುವುದಕ್ಕೆ ಮರೆತುಬಿಟ್ಟನು. ಅವನು ಹೋದ ಮೇಲೆ, ಅವನ ತಾಯಿ ಈ ಕೋಣೆಯನ್ನು ಗುಡಿಸದೆ ಬಹಳ ದಿನವಾಯಿತು ಎಂದು ಹೇಳಿ ಅದನ್ನು ಗುಡಿಸಿ, ಆ ಕಲ್ಲುಗಳನ್ನೆಲ್ಲಾ ತುಂಬಿ ಹೊರಗೆ ಎಸೆದಳು. ಮನೆಗೆ ಬಂದು ಮಗನು ನೋಡುವಾಗ ಕೋಣೆಯಲ್ಲಿ ಒಂದು ಕಲ್ಲೂ ಇಲ್ಲ. ಮರುದಿನ ಅರಮನೆಗೆ ಹೋಗಿ ಏನು ಹೇಳುವುದು ? ವಾರ ಇಲ್ಲ, ತಿಥಿ ಇಲ್ಲ, ನಕ್ಷತ್ರ ಇಲ್ಲ, ಯೋಗ, ಕರಣ ಒಂದೂ ಇಲ್ಲ. ಹೀಗೆಯೇ ಆಲೋಚನೆ ಮಾಡಿ, ಮರುದಿನ ಅರಮನೆಗೆ ನೇರವಾಗಿ ಹೋಗಿ ರಾಜನಲ್ಲಿ ಹೇಳುತ್ತಾನೆ. "ಇವತ್ತು ಬಹಳ ವಿಶೇಷವಾದ ಪರ್ವದಿನ. ಇದಕ್ಕೆ 'ಸಕೋಟು ಸಂಕ್ರಾಂತಿ' ಎಂದು ಹೆಸರು. ಇಂದಿನ ದಿನದಲ್ಲಿ ಒಂದು ಪಾವಾಣೆ ಕೊಟ್ಟರೆ ಒಂದು ರೂಪಾಯಿ ಕೊಟ್ಟಿದ್ದಕ್ಕೆ ಸಮಾನ. ಒಬ್ಬ ಬ್ರಾಹ್ಮಣನಿಗೆ ಅನ್ನ ಹಾಕಿದರೆ, ನೂರು ಬ್ರಾಹ್ಮಣರಿಗೆ ಅನ್ನ ಹಾಕಿದ್ದಕ್ಕೆ ಸಮಾನ. ಆದ್ದರಿಂದ ಎಲ್ಲರೂ ಸ್ನಾನ ಮಾಡಿ, ದಾನ ಮಾಡಬೇಕು." ಹಾಗೆಯೇ ರಾಜನು ಊರಿಗೆಲ್ಲ ಡಂಗುರ ಸಾರುತ್ತಾನೆ. ಪುರೋಹಿತನಾಗಿ ಸಂಕಲ್ಪಕ್ಕೆ ಇವನನ್ನೇ ನೇಮಿಸಿದರು. ಇವನಿಗೆ ಸಂಕಲ್ಪ ಮಾಡುವುದರಲ್ಲಿ ಪುರುಸೊತ್ತು ಇಲ್ಲ. "ಸಕೋಟು ಸಂಕ್ರಾಂತಿ ಮಹಾ ಕನಿಷ್ಟೆ" ಎಂದು ಹೇಳುವುದು, ದಾನ ತೆಗೆದುಕೊಳ್ಳುವುದು ಅಷ್ಟೆ. ಅಕ್ಕಿ ತೆಂಗಿನಕಾಯಿ ದಕ್ಷಿಣೆ ಇತ್ಯಾದಿ ಮನೆಗೆ ಸಾಗುತ್ತಾ ಇತ್ತು.

ಆ ಸಂದರ್ಭದಲ್ಲಿ ಪಕ್ಕದ ಊರಿನ ರಾಜನು ತನ್ನ ಊರಿನ ಪುರೋಹಿತರನ್ನು ಕರೆದು, 'ದೇವರುಗಳ ಏಳು ತಲೆಮಾರಿನ ಹೆಸರು ಹೇಳಬೇಕು, ಒಂದು ವೇಳೆ ಹೇಳಲು ಸಾಧ್ಯವಾಗದವರು ರಾಜ್ಯವನ್ನು ಬಿಟ್ಟು ಹೋಗ ಬೇಕು' ಎಂದು ಅಪ್ಪಣೆ ಕೊಡಿಸುತ್ತಾನೆ. ಅಲ್ಲಿನ ಇಬ್ಬರು ಪುರೋಹಿತರು ಅದಕ್ಕೆ ಉತ್ತರ ತಿಳಿಯದೆ ಈಚೆಯ ನಾಡಿಗೆ ಬರುತ್ತಾರೆ. ಅಲ್ಲಿನ ದಾನಧರ್ಮ ನೋಡಿ, 'ಸಕೋಟು ಸಂಕ್ರಾಂತಿ'ಯ ಅರ್ಥ ಗೊತ್ತಾಗದೆ, ಈ ಊರಿನ ಪುರೋಹಿತ ಮಹಾವಿದ್ವಾಂಸ ಆಗಿರಬೇಕು, ಅವನಲ್ಲಿ ನಮ್ಮ ಸಮಸ್ಯೆಗೆ ಉತ್ತರ ಸಿಗಬಹುದು ಎಂದು ಈ ಬ್ರಾಹ್ಮಣನಲ್ಲಿಗೆ ಬರುತ್ತಾರೆ. ಮಿಂದು, ದಾನ ದಕ್ಷಿಣೆ ಎಲ್ಲಾ ಕೊಡುತ್ತಾರೆ. ಸಂಜೆಯವರೆಗೆ ಕುಳಿತು, ಇವನ ಜೊತೆಗೇ ಮನೆಗೆ ಬರುತ್ತಾರೆ. ಇವನೂ ಅವರಿಗೆ ದಕ್ಷಿಣೆ ಕೊಟ್ಟು ಅನ್ನ ಹಾಕುತ್ತಾನೆ. ಆಗ ಅವರು ತಾವು ಬಂದ ಉದ್ದೇಶವನ್ನು ಹೇಳುತ್ತಾರೆ. "ದೇವರ ಏಳು ತಲೆಮಾರಿನ ಹೆಸರು ಹೇಳದಿದ್ದರೆ ರಾಜನು ನಮ್ಮನ್ನು ರಾಜ್ಯದಿಂದ ಹೊರಗೆ ಅಟ್ಟುತ್ತಾನೆ. ನೀನು ಬಂದು ಇದಕ್ಕೆ ಉತ್ತರ ಹೇಳಿದರೆ, ನಾವು ಊರಲ್ಲಿ ಉಳಿಯುವಂತಾಗುತ್ತದೆ." ಆಗ ಇವನು ಅವರನ್ನು ಜೋರು ಮಾಡುತ್ತಾನೆ - "ನೀವು ಈ ರೀತಿ ಬಂದರೆ ನಮ್ಮ ಉತ್ತರವನ್ನು ಹೇಳಲು ಸಾಧ್ಯವಿಲ್ಲ. ಆ ರಾಜನು ನಮ್ಮ ರಾಜನಿಗೆ ಪತ್ರವನ್ನು ಕೊಡಬೇಕು. ರಾಜ ಮರ್ಯಾದೆಯಲ್ಲಿ ನನ್ನನ್ನು ಕರೆದುಕೊಂಡು ಹೋಗಬೇಕು. ಹಾಗಾದರೆ ಮಾತ್ರ ಉತ್ತರ ಕೊಡುತ್ತೇನೆ, ಇಲ್ಲದಿದ್ದರೆ ಬರಲಾರೆ." ಇದನ್ನು ಕೇಳಿ ಅವರು ತಮ್ಮ ಊರಿಗೆ ಹೋದರು. ಅಲ್ಲಿ ರಾಜನಲ್ಲಿ ಉತ್ತರ ಹೇಳು ವವನು ಈ ರೀತಿ ಒಬ್ಬನು ಇದ್ದಾನೆ ಎಂದು ತಿಳಿಸುತ್ತಾರೆ. ಅದೇ ರೀತಿ ಆ ರಾಜನು ಈ ಪುರೋಹಿತನನ್ನು ಪತ್ರ ಬರೆದು, ಸತ್ತಿಗೆ, ದೀವಟಿಕೆ, ಪಲ್ಲಕಿ ಮುಂತಾದುವನ್ನು ಕಳುಹಿಸಿ, ಗೌರವದಿಂದ ಕರೆದುಕೊಂಡುಬರುತ್ತಾನೆ. ಬೇಕಾದ ಮರ್ಯಾದೆಯನ್ನೆಲ್ಲಾ ಮಾಡುತ್ತಾನೆ. ಮರುದಿನ ಈತ ಸಭೆಯಲ್ಲಿ ಉತ್ತರ ಹೇಳುತ್ತಾನೆ ಎಂದು ಸಾರಲಾಗುತ್ತದೆ.

ಕುಳಿತುಕೊಳ್ಳುವುದು. ಕಾಡಿನಿಂದ ಹೊರ ಬಂದ ಮೃಗವು ಮರದ ಅಡ್ಡದಲ್ಲಿ ಕುಳಿತಿದ್ದ ಟೈಲರ್‌ನನ್ನು ನೋಡಿ ಅವನ ಕಡೆಗೆ ನುಗ್ಗುವುದು. ಆಗ ಅದರ ಕೊಂಬು ನುಗ್ಗಿ ಮರದೊಳಗೆ ಸಿಕ್ಕಿಕೊಳ್ಳುವುದು. ಅದು ಹೊರಬರಲು ಸಾಧ್ಯವಾಗದೆ ಒದ್ದಾಡುತ್ತಿರುವಾಗ, ಟೈಲರ್ ತಾನು ಕೊಂಡು ಹೋದ ಕಬ್ಬಿಣದ ಈಟಿಯಿಂದ ಅದರ ಹೊಟ್ಟೆಗೆ ಬಲವಾಗಿ ಇರಿಯುವುದು. ಈ ರೀತಿ ಸತ್ತ ಮೃಗವನ್ನು ಟೈಲರ್ ಊರಿಗೆ ಕೊಂಡು ಹೋಗಿ, ತನ್ನ ಪರಾಕ್ರಮದ ಪ್ರದರ್ಶನ ಮಾಡುವುದು. ಅದೇ ಸಮಯದಲ್ಲಿ ರಾಜನ ಅರಮನೆಯಲ್ಲಿ ಆಗುತ್ತಿದ್ದ ಕಳ್ಳತನವನ್ನು ಪತ್ತೆ ಹಚ್ಚಲು ಟೈಲರಿಗೆ ತಿಳಿಸುವುದು. ಜಾಣನಾದ ಟೈಲರ್ ರಾಜನ ಅರಮನೆಯ ಬದಿಯಲ್ಲೇ ವಾಸ ಹೂಡಿ, ಕಳ್ಳನು ಹತ್ತಿರ ಬಂದ ಸುಳಿವು ಸಿಕ್ಕಿದಾಗ, ಕಳ್ಳನಿಗೆ ಕೇಳಿಸುವಂತೆ ಹೆಂಡತಿಗೆ ಹೇಳುವಂತೆ "ನಮ್ಮ ಮಗಳು ಕಳ್ಳನನ್ನೇ ಮದುವೆಯಾಗುತ್ತೇನೆ ಎಂದು ಹಠ ಹಿಡಿದಿದ್ದಾಳೆ" ಎಂದು ಮಾತಾಡುವುದು. ಇದನ್ನು ಸತ್ಯವೆಂದು ಭಾವಿಸಿದ ಕಳ್ಳ ಮರುದಿನ ಟೈಲರ್‌ನಲ್ಲಿಗೆ ಬಂದು ತಾನು ಆತನ ಮಗಳನ್ನು ಮದುವೆ ಆಗುತ್ತೇನೆ ಎಂದು ತಿಳಿಸುವುದು. ಅದಕ್ಕೆ ಟೈಲರ್ ಅವನಲ್ಲಿ ರಾಜನ ಅರಮನೆಯಿಂದ ರಾಣಿಯ ವಜ್ರದ ಉಂಗುರವನ್ನು ತರಲು ಹೇಳುವುದು. ಕಳ್ಳನು ಅದಕ್ಕಾಗಿ ಕಳ್ಳತನಕ್ಕೆ ಹೊರಟಾಗ, ಟೈಲರ್ ಈ ವಿಷಯವನ್ನು ರಾಜನಿಗೆ ಮೊದಲೇ ತಿಳಿಸಿ, ಅವನನ್ನು ಬಂಧಿಸುವುದು. ಆ ಊರಿನಲ್ಲಿ ತೊಂದರೆ ಕೊಡುತ್ತಿದ್ದ ದರೋಡೆಕೋರರನ್ನು ಕೊಂದು ಅಥವಾ ಹಿಡಿದುಕೊಟ್ಟವರಿಗೆ ತನ್ನ ಮಗಳನ್ನು ಮದುವೆಮಾಡಿಕೊಡುತ್ತೇನೆ ಎಂದು ರಾಜನು ಡಂಗುರ ಸಾರುವುದು. ಈ ಸಾಹಸಕ್ಕೆ ಟೈಲರ್ ಹೊರಡುವುದು. ದರೋಡೆಕೋರರಿರುವ ಸ್ಥಳವನ್ನು ಪತ್ತೆ ಹಚ್ಚಿ, ದೂರದಲ್ಲಿ ಸಿಪಾಯಿಗಳನ್ನು ನಿಲ್ಲಿಸಿ, ತಾನು ಮೂರು ಕಲ್ಲುಗಳನ್ನು ಹಿಡಿದುಕೊಂಡು ಮರವನ್ನು ಹತ್ತಿ ಕುಳಿತುಕೊಳ್ಳುವುದು. ಆ ಮರದ ಕೆಳಗೆ ದರೋಡೆಕೋರರು ದ್ರವ್ಯಗಳನ್ನು ಪಾಲು ಮಾಡಿಕೊಂಡು ಮಲಗುವುದು. ನಿದ್ರಿಸಿದ ಒಬ್ಬನ ಮೇಲೆ ಟೈಲರ್ ಮೇಲಿನಿಂದ ಒಂದು ಕಲ್ಲು ಎಸೆಯುವುದು. ತನ್ನ ಸಂಗಡಿಗನ ಬಗ್ಗೆ ಸಂಶಯ ತಾಳಿದ ದರೋಡೆಕೋರ ಅವನೊಡನೆ ಜಗಳ ಮಾಡಿದಾಗ ಒಬ್ಬನು ಸಾಯುವುದು. ಇನ್ನೊಂದು ಕಲ್ಲಿನ ಮೂಲಕ ಉಳಿದ ಇನ್ನಿಬ್ಬರು ದರೋಡೆಕೋರರ ನಡುವೆ ವೈಷಮ್ಯ ತಂದು, ಅವರೊಳಗಿನ ಜಗಳದಲ್ಲಿ ಒಬ್ಬನು ಸಾಯುವಂತೆ ಮಾಡುವುದು. ಉಳಿದ ಮೂರನೆಯ ದರೋಡೆಕೋರನು ಟೈಲರಿನ ಮೂರನೆಯ ಕಲ್ಲಿನ ಪೆಟ್ಟಿನಿಂದ ತಲೆ ತಿರುಗಿ ಬೀಳುವುದು. ಆಗ ಟೈಲರ್ ದೂರದಲ್ಲಿದ್ದ ಸಿಪಾಯಿಗಳನ್ನು ಕರೆದು, ಆ ದರೋಡೆಕೋರನನ್ನು ಬಂಧಿಸಿ, ರಾಜನಿಗೆ ಒಪ್ಪಿಸುವುದು. ಸಾಹಸವನ್ನು ಮಾಡಿದರೂ, ನೋಡಲು ಸುಂದರನಲ್ಲದ ಟೈಲರ್‌ಗೆ ರಾಜನು ಮನ್ನಸಿಲ್ಲದ ಮನಸ್ಸಿನಿಂದ ತನ್ನ ಮಗಳನ್ನು ಮದುವೆ ಮಾಡಿಕೊಡುವುದು. ನಿದ್ರೆಯಲ್ಲಿ ಟೈಲರ್ ತನ್ನ ವೃತ್ತಿಯ ಬಗ್ಗೆ ಬಡಬಡಿಸುತ್ತಿದ್ದುದನ್ನು ಕೇಳಿದ ರಾಜಕುಮಾರಿಯು ಗಾಬರಿಯಿಂದ ತನ್ನ ತಂದೆಗೆ ವರ್ತಮಾನ ತಿಳಿಸುವುದು. ಆಗ ಎಚ್ಚರಗೊಂಡ ಟೈಲರ್ ರಾಜನಲ್ಲಿ "ಅದು ರಾಜಕುಮಾರಿ ನಿದ್ರೆಯಲ್ಲಿ ಮಾತಾಡಿದ್ದು" ಎಂದು ತಿಳಿಸುವುದು. ಇಂತಹ ಸಾಮಾನ್ಯವ್ಯಕ್ತಿ ತನ್ನ ಮಗಳ ಗಂಡನಾಗಲು ಯೋಗ್ಯನಲ್ಲ ಎಂದು ಭಾವಿಸಿದ ರಾಜನು ಆ ಟೈಲರ್‌ನನ್ನು ಕೊಲ್ಲಲು ಭಟರನ್ನು ಕಳುಹಿಸುವುದು. ಈ ಸಂಚು ಗೊತ್ತಾದ ಟೈಲರ್ ತನ್ನ ಕೋಣೆಯ ಬಾಗಿಲು ಬಡಿದ ಭಟರಲ್ಲಿ "ತಾನು ಒಂದು ಪೆಟ್ಟಿಗೆ ಏಳು ಕೊಂದವನು" ಎಂದು ಹೇಳಿ, ಅವರನ್ನು ಹೆದರಿಸುವುದು. ಅಳಿಯ ಟೈಲರ್ ಮಹಾಬುದ್ಧಿವಂತನೆಂದು ಗೊತ್ತಾದ ರಾಜನು ಅವನನ್ನು ಸಂತೋಷದಿಂದ ನೋಡಿಕೊಳ್ಳುವುದು.

ತುಳು ಜನಪದ ಕಥೆಯ ಸಂಕ್ಷಿಪ್ತ ಕನ್ನಡ ರೂಪಾಂತರವನ್ನು ಇಲ್ಲಿ ಕೊಡಲಾಗಿದೆ. ಇದು ಹಾಸ್ಯ ಕಥೆಗಳಲ್ಲಿ ಬಹಳ ಜನಪ್ರಿಯವಾದ ಒಂದು ಕಥೆ. ಟೈಲರ್ (ದರ್ಜಿ)ಯಂತಹ ಒಬ್ಬ ಸಾಮಾನ್ಯ ಮನುಷ್ಯನು ತನ್ನ ಜಾಣತನದಿಂದ ಪರಾಕ್ರಮಶಾಲಿಯಂತೆ ಜನರ ಕಣ್ಣಿಗೆ ಕಾಣಿಸುವ ಘಟನೆಗಳು ಇಲ್ಲಿ ನಡೆಯುತ್ತವೆ. ಅಂತರರಾಷ್ಟ್ರೀಯ ಜನಪದ ಕಥೆಗಳಲ್ಲಿ ಸ್ಪಷ್ಟವಾಗಿ ಈ ಕಥೆಯ ವರ್ಗ ಸಿಗುತ್ತದೆ: ವರ್ಗ 1640. Clever tailor.

ಈ ಕಥೆಯ ಪ್ರಧಾನ ಆಶಯ: K 1951.1 Boastful fly-killer: "seven at a blow", A tailor who has killed seven flies writes on a placard : "Seven at a blow": He is received as a great warrior.

ತುಳು ಕಥೆಯಲ್ಲಿ ಟೈಲರ್‌ನ ಜಾಣತನದ ಸಾಹಸಗಳನ್ನು ತಿಳಿಸುವ ಘಟನೆಗಳು :

1. ಭಯಂಕರವಾದ ಕೊಂಬಿನ ಮೃಗವನ್ನು ಕೊಲ್ಲಲು ಬಂದು, ನುಗ್ಗಿ ಮರದಲ್ಲಿ ಅದರ ಕೊಂಬು ಸಿಕ್ಕಿಕೊಂಡಾಗ, ಕಬ್ಬಿಣದ ಈಟಿಯಿಂದ ಅದನ್ನು ಇರಿಯುವುದು.

2. ಕಳ್ಳರನ್ನು ಪತ್ತೆ ಹಚ್ಚಬೇಕಾಗಿ ಬಂದಾಗ, ಕಳ್ಳನಿಗೆ ಕೇಳಿಸುವಂತೆ ತನ್ನ ಮಗಳನ್ನು ಆತನಿಗೆ ಕೊಡುತ್ತೇನೆ ಎಂದು ಹೇಳಿ, ಆತನನ್ನು ನಂಬಿಸಿ, ಉಪಾಯದಿಂದ ಹಿಡಿಸಿಕೊಡುವುದು.

3. ದರೋಡೆಕೋರರನ್ನು ಹಿಡಿಯಲು ಹೋಗಿ, ಅವರು ಮಲಗಿದ್ದಾಗ ಅವರಿಗೆ ತಿಳಿಯದಂತೆ, ಕಲ್ಲುಗಳನ್ನು ಎಸೆದು, ಅವರೊಳಗೆ ವೈಷಮ್ಯ ಉಂಟು ಮಾಡಿ, ಅವರು ಸಾಯುವಂತೆ ಮತ್ತು ಸೆರೆ ಸಿಕ್ಕುವಂತೆ ಮಾಡುವುದು.

4. ರಾಜನ ಭಟರು ತನ್ನನ್ನು ಕೊಲ್ಲಲು ಬಂದಾಗ 'ತಾನು ಒಂದು ಪೆಟ್ಟಿಗೆ ಏಳು ಕೊಂದವನು' ಎಂದು ಹೆದರಿಸುವುದು.

ತುಳುವಿನ 'ಒಂದು ಪೆಟ್ಟಿಗೆ ಏಳು' ಕಥೆಯನ್ನು ಹೋಲುವ ಕಥೆಗಳು ಕನ್ನಡದ ಬೇರೆ ಬೇರೆ ಪ್ರದೇಶಗಳಲ್ಲಿ ಸಿಗುತ್ತವೆ[1,2].

## (7) ಉಗ್ರಾಣಿ ಬೊಮ್ಮಯ

ಒಂದೂರಿನ ಒಬ್ಬ ಪಟೇಲರಿಗೆ ಬೊಮ್ಮಯನೆಂಬ ಉಗ್ರಾಣಿ (ತಳವಾರಿ) ಇದ್ದ. ಅವನಿಗೆ ಕೋಳಿ ಅಂಕದ ಹುಚ್ಚು. ತನ್ನ ಹೆಂಡತಿ ದುಗ್ಗು ಸೂಳೆಗಾರಿಕೆ ಮಾಡುತ್ತಿದ್ದಾಳೆ ಎಂಬ ಸಂಶಯದಿಂದ ಉಗ್ರಾಣಿ ಬೊಮ್ಮಯ ಒಂದು ದಿನ ರಾತ್ರಿ ಅವಳಿಗೆ ಗೊತ್ತಾಗದಂತೆ ಮನೆಯ ಅಟ್ಟದಲ್ಲಿ ಅಡಗಿ ಕುಳಿತ. ಪಟೇಲರು ಅದೇ ವೇಳೆಗೆ ಬೊಮ್ಮಯನ ಮನೆಗೆ ಬಂದು, ಬೊಮ್ಮಯನ ಹೆಂಡತಿಯೊಡನೆ ಸಲ್ಲಾಪಕ್ಕೆ ಸುರು ಮಾಡಿದರು. ಅಲ್ಲಿ ಇದ್ದ ಅಂಕದ ಕೋಳಿಯೊಂದನ್ನು ಕೊಂದು ಪದಾರ್ಥ ಮಾಡಿ, ರೊಟ್ಟಿಯನ್ನು ಮಾಡಿ, ಪಟೇಲರು ಮತ್ತು ಬೊಮ್ಮಯನ ಹೆಂಡತಿ ಉಂಡು, ಸಲ್ಲಾಪ ಮಾಡುತ್ತಾ ಮಲಗಿದರು. ಅವರಿಗೆ ನಿದ್ರೆ ಬಂದಾಗ, ಅಟ್ಟದಲ್ಲಿದ್ದ ಬೊಮ್ಮಯ ಇಳಿದು, ಉಳಿದಿದ್ದ ಕೋಳಿ ಪದಾರ್ಥವನ್ನೂ ರೊಟ್ಟಿಯನ್ನೂ ಬೇಕಾದಷ್ಟು ತಿಂದು, ಇನ್ನೂ ಉಳಿದ ಕೋಳಿ ಪದಾರ್ಥಕ್ಕೆ ಹೇಸಿಗೆ ಮಾಡಿ ಹಾಗೆಯೇ ಇರಿಸಿದ. ಬೆಳಿಗ್ಗೆ ಪಟೇಲರು ಆ ಕೋಳಿ ಪದಾರ್ಥವನ್ನು ತಿಂದಾಗ ಹುಳಿ ಹುಳಿಯ ರುಚಿಯಾಯಿತು. ಪಟೇಲರು ಅಲ್ಲಿಂದ ಹೋದ ಮೇಲೆ, ಮರೆಯಾಗಿ ಹೊರಗೆ ಹೋದ ಬೊಮ್ಮಯನು, ಹಿಂದಕ್ಕೆ ಮನೆಗೆ ಬಂದ. ಅವನು ಒಂದು ಸಣ್ಣ ಬೆತ್ತವನ್ನು ತೆಗೆದುಕೊಂಡು, ತನ್ನ ಮನೆಯ ಬೆಕ್ಕನ್ನು ಕರೆದು, ಅದರಲ್ಲಿ

1. ಧವಳ ಶ್ರೀ (ಸಂ) : 'ಒಣ್ಣೇಕ್ಯಾತನ ಕೊಂದ ಶೂರ', 'ಜಾನಪದ ಕಥಾಮೃತ', ಸಂಪುಟ 2.

2. ಎಚ್. ಎಲ್. ನಾಗೇಗೌಡ : 'ತೀಸ್ ಮಾರ್‌ಖಾ ಜಂಬದ ಕೋಳಿ' (ಬೀದರ್ ಜಿಲ್ಲೆಯ ಜನಪದ ಕಥೆ), 'ಕರ್ನಾಟಕ ಜನಪದ ಕಥೆಗಳು'.

ಸಂಭಾಷಣೆ ಮಾಡುವ ರೀತಿಯಲ್ಲಿ, ಹಿಂದಿನ ರಾತ್ರಿ ಮನೆಗೆ ಪಟೇಲರು ಬಂದ ಮತ್ತು ನಡೆದ ಸಂಗತಿ ಎಲ್ಲವನ್ನೂ ಗಟ್ಟಿಯಾಗಿ ಹೇಳುತ್ತಾನೆ. ಬೆಕ್ಕು ಯಾವ ಮಾತಿಗೂ ಮಿಯಾವ್ ಅನ್ನುತ್ತದೆ. ತಾವು ಮಾಡಿದ ಎಲ್ಲ ಕೆಲಸಗಳೂ ಬೆಕ್ಕಿನಿಂದ ರಟ್ಟಾದಂವು ಎಂದು ಭಾವಿಸುತ್ತಾರೆ. ಬೊಮ್ಮಯನ ಹೆಂಡತಿ ಮತ್ತು ಪಟೇಲರಿಂದ ಬೊಮ್ಮಯನು ಬೆಕ್ಕು ನೋಡಿ ಭವಿಷ್ಯ ಹೇಳುತ್ತಾನೆ ಎನ್ನುವ ಸಂಗತಿ ಪ್ರಚಾರ ಪಡೆಯುತ್ತದೆ. ಒಂದು ಊರಿನ ಅರಸನ ಪಲ್ಲಕಿಯ ಚಿನ್ನದ ನಾಲ್ಕು ಕಾಲುಗಳನ್ನು ಯಾರೋ ಕಳ್ಳರು ಕದ್ದಿರುತ್ತಾರೆ. ಆ ಕಳ್ಳರನ್ನು ಹುಡುಕಿ ಕೊಡುವ ಭಾರವನ್ನು ಬೆಕ್ಕು ನೋಡಿ ಭವಿಷ್ಯ ಹೇಳುವ ಬೊಮ್ಮಯನಿಗೆ ಒಪ್ಪಿಸಿ, ಅವನಿಗೆ ಒಂದು ಕಳಸಿ ಚಿನ್ನದ ಬಹುಮಾನವನ್ನು ಸಾರುತ್ತಾರೆ. ಬೊಮ್ಮಯನು ಒಂದು ಗುಡಿಸಲಿನಲ್ಲಿ ಬಿಡಾರ ಹೂಡಿ ರೊಟ್ಟಿ ಮತ್ತು ಕೋಳಿ ಪದಾರ್ಥ ಮಾಡಿಸಿ, ಅಲ್ಲಿ ಇಟ್ಟುಕೊಳ್ಳುತ್ತಾನೆ. ಅವನು ತನ್ನ ಬೆಕ್ಕನ್ನು ಸಂಬೋಧಿಸಿ, 'ನಿನಗೆ ಕಾಲೋ ಕಣ್ಣೋ' (ಕಾರೋ ಕಣ್ಣೋ) ಎಂದು ಕೇಳುತ್ತಾನೆ. ಆಗ ಅಲ್ಲಿಯೇ ಕುಳಿತಿದ್ದ, ಚಿನ್ನದ ಕಾಲುಗಳನ್ನು ಕದ್ದ ಕಳ್ಳರಿಗೆ ಈ ಮಾತು ಕೇಳಿಸುತ್ತದೆ. ಅವರ ಹೆಸರು "ಕಾರೇ" (ಕಾಲೇ) ಮತ್ತು "ಕಣ್ಣೇ" ಎಂದು. ಅವರು ತಮ್ಮ ಹೆಸರು ಇವನಿಗೆ ತನ್ನ ಮಾಂತ್ರಿಕ ಬೆಕ್ಕಿನಿಂದ ಗೊತ್ತಾಯಿತು ; ಎಂದು ಭಾವಿಸಿ, ಇವನ ಬಳಿ ಬಂದು ತಪ್ಪೊಪ್ಪಿಕೊಂಡು ಕ್ಷಮಾಯಾಚನೆ ಮಾಡುತ್ತಾರೆ. ಬೊಮ್ಮಯನು ಅವರು ಕದ್ದ ಪಲ್ಲಕಿಯ ಚಿನ್ನದ ಕಾಲುಗಳನ್ನು ತೆಗೆದುಕೊಂಡು, ಅವುಗಳನ್ನು ಊರಿನ ಪಟೇಲರ ಮನೆಯಲ್ಲಿ ಅವರಿಗೆ ಗೊತ್ತಾಗದಂತೆ ಬಚ್ಚಿಡುವಂತೆ ಮಾಡುತ್ತಾನೆ. ಬಳಿಕ ಅರಸನ ಬಳಿಗೆ ಬಂದು ಪಟೇಲರೇ ಕಳ್ಳರೆಂದು ಹೇಳಿ, ಅವರ ಮನೆಯಲ್ಲಿ ಹುಡುಕುವಂತೆ ಮಾಡಿ, ಪಲ್ಲಕಿಯ ಚಿನ್ನದ ಕಾಲುಗಳು ಸಿಗುವಂತೆ ಮಾಡುತ್ತಾನೆ. ಪಟೇಲರಿಗೆ ಫಾಶಿ ಶಿಕ್ಷೆಯೆಂದು ಅರಸ ಆಜ್ಞೆ ಮಾಡುತ್ತಾನೆ. ಈ ಕಥೆ ಈ ವರ್ತಮಾನವನ್ನು ತನ್ನ ಹೆಂಡತಿಗೆ ತಿಳಿಸಿದ ಬೊಮ್ಮಯನು "ಕೊನೆಯ ಬಾರಿ ನಿನ್ನ ಇನಿಯ ಪಟೇಲರನ್ನು ರಾತ್ರಿ ಹೋಗಿ ನೋಡು" ಎಂದು ಹೇಳಿ, ನಿರ್ದಿಷ್ಟ ಸ್ಥಳವನ್ನು ಹೇಳುತ್ತಾನೆ. ಆ ಸ್ಥಳದಲ್ಲಿ ತಾನೇ ಮುಸುಕು ಹಾಕಿಕೊಂಡು ಮಲಗಿದ್ದ ಬೊಮ್ಮಯನು ತನ್ನ ಹೆಂಡತಿಯು ಪಟೇಲರೆಂದು ಭಾವಿಸಿ ತನಗೆ ಮುತ್ತು ಕೊಡಲು ಬಂದಾಗ, ಅವಳ ಮೂಗನ್ನು ಕಚ್ಚಿ ತುಂಡು ಮಾಡುತ್ತಾನೆ. ಬೊಮ್ಮಯನ ಅನಾರೋಗ್ಯದ ಅತ್ತೆಯ ಕಾಯಿಲೆಯ ಕಾರಣವನ್ನು ಬೊಮ್ಮಯನಲ್ಲಿ ಕೇಳಿದಾಗ, ಅವನು "ಅದು ಬ್ರಹ್ಮರಾಕ್ಷಸನ ಉಪದ್ರವ ; ಅದು ಇವತ್ತು ರಾತ್ರಿ ನಿಮ್ಮ ಮನೆಯ ಮೆಟ್ಟಿಲ ಹತ್ತಿರ ಬರುವಾಗ ನೀವು ಆ ಕಡೆ ಈ ಕಡೆ ನೋಡದೆ ಅದನ್ನು ಕತ್ತಿಯಿಂದ ಕಡಿಯಬೇಕು" ಎಂದು ತನ್ನ ಭಾವಮೈದುನನಲ್ಲಿ ಹೇಳುತ್ತಾನೆ. ಆಮೇಲೆ ತನ್ನ ಹೆಂಡತಿಯನ್ನು ಪ್ರತ್ಯೇಕವಾಗಿ ಕರೆದು "ನಿನ್ನ ತಾಯಿಯ ಕಾಯಿಲೆ ಗುಣವಾಗಬೇಕಾದರೆ, ರಾತ್ರಿ ಹೊತ್ತು ನೀನು ತಲೆ ಕೆದರಿಕೊಂಡು, ಕೈಯಲ್ಲಿ ದೀವಟಿಗೆಗಳನ್ನು ತೆಗೆದುಕೊಂಡು ಮನೆಗೆ ನುಗ್ಗಬೇಕು" ಎನ್ನುತ್ತಾನೆ. ಅವಳು ಅದೇ ರೀತಿ ಭಯಂಕರ ರೂಪದಲ್ಲಿ ಅಲ್ಲಿಗೆ ಹೋದಾಗ, ಅವಳ ಸಹೋದರರು "ಇದೇ ಬೊಮ್ಮಯನು ಹೇಳಿದ ಬ್ರಹ್ಮರಾಕ್ಷಸ" ಎಂದು ಭಾವಿಸಿ ಅವಳನ್ನು ಕಡಿದು ಹಾಕುತ್ತಾರೆ. ಆಮೇಲೆ ಬೊಮ್ಮಯನಿಗೆ ಅವನ ನಾದಿನಿಯನ್ನು ಕೊಟ್ಟು ಮದುವೆ ಮಾಡುತ್ತಾರೆ.

ಇದು ತುಳು ಜನಪದ ಕಥೆಯ ಮೂಲರೂಪದ ಸಂಕ್ಷಿಪ್ತ ಕನ್ನಡ ರೂಪಾಂತರ. "ಉಗ್ರಾಣಿ ಬೊಮ್ಮಯ" ಕಥೆಯು 'ಒಂದು ಪೆಟ್ಟಿಗೆ ಏಳು' ಕಥೆಯನ್ನು ಬಹಳವಾಗಿ ಹೋಲುವ ಆ ವರ್ಗಕ್ಕೆ (1640) ಹತ್ತಿರವಾದ ವರ್ಗದ ಕಥೆ (Type 1641. Sham wise man.). ಇದನ್ನು ಆ ಕಥೆಯ ಭಿನ್ನರೂಪ ಎಂದೂ ಕರೆಯಬಹುದು. ಅಲ್ಲಿ 'ಟೈಲರ್' ಕಥಾನಾಯಕನಾಗಿ ಬಂದರೆ ಇಲ್ಲಿ 'ಉಗ್ರಾಣಿ ಬೊಮ್ಮಯ'ನೂ ಅದೇ ರೀತಿಯ ಕಥಾನಾಯಕನಾಗಿ ಬರುತ್ತಾನೆ. 'ಉಗ್ರಾಣಿ ಬೊಮ್ಮಯ' ಕಥೆಯಲ್ಲಿ ಬರುವ ಉಗ್ರಾಣಿ, ಪಟೇಲರು, ಕೋಳಿ ಅಂಕ ಮುಂತಾದ ವೃತ್ತಿ ಕಸುಬುಗಳಿಂದಾಗಿ ಈ ಕಥೆಗೆ ತುಳು ಸಂಸ್ಕೃತಿಯ ಆವರಣ ಹೆಚ್ಚು ಸಿಗುತ್ತದೆ. ಇಲ್ಲಿ ಬೊಮ್ಮಯನು ಬೆಕ್ಕಿನ ನೆಪದಲ್ಲಿ ಭವಿಷ್ಯ ಹೇಳುವ ಮತ್ತು ಸಾಹಸಗಳನ್ನು ಮಾಡುವ ನಟನೆ ಮಾಡುತ್ತಾನೆ.

ಇಲ್ಲಿನ ಮುಖ್ಯ ಘಟನೆಗಳು :

1. ಪಟೇಲರು ಮತ್ತು ತನ್ನ ಹೆಂಡತಿಯ ಅನೈತಿಕ ಸಂಬಂಧವನ್ನು ಬೊಮ್ಮಯನು ಬಯಲು ಮಾಡುವುದು.

2. ಅರಸನ ಪಲ್ಲಕಿಯ ಚಿನ್ನದ ಕಾಲುಗಳನ್ನು ಕದ್ದ ಕಳ್ಳರನ್ನು ಆಕಸ್ಮಾತ್ತಾಗಿ ಹಿಡಿದು, ಅದು ತನ್ನ ಸಾಹಸವೆಂದು ಸಾರುವುದು.

3. ಪಟೇಲರ ಲಂಪಟತನಕ್ಕಾಗಿ ಅವರನ್ನೇ ಕಳ್ಳರೆಂದು ರಾಜನಲ್ಲಿ ನಂಬಿಸುವುದು.

4. ತನ್ನ ಜಾರೆ ಹೆಂಡತಿಯನ್ನು ಉಪಾಯದಿಂದ ಕೊಲ್ಲುವುದರ ಮೂಲಕ ಶಿಕ್ಷಿಸುವುದು.

ಉಗ್ರಾಣಿ ಬೊಮ್ಮಯನ ಕಥೆಯಲ್ಲಿ ಹಿಂದಿನ ಕಥೆಗಿಂತ ಭಿನ್ನವಾದ ಮುಖ್ಯ ಆಶಯಗಳು: 2241. Adultery punished. K 1956. Sham wise man. ಹಾಗೆಯೇ K 401. Blame of theft fastened on dupes N 611.1.1. Name of the crimina accidentally spoken out, (identical with ordinary word in speech).

## (8) ಹೆಡ್ಡ ತಿಮ್ಮನ ಮಂತ್ರಶಕ್ತಿ

ಒಂದೂರಿನಲ್ಲಿ ಗಂಡ ಹೆಂಡತಿಯರಿಗೆ ಗೌರಿ ಎಂಬ ಮಗಳು, ತಿಮ್ಮನೆಂಬ ಸೋದರಳಿಯ; ಆತ ಬಹಳ ಹೆಡ್ಡ. ಚಿಕ್ಕಂದಿನಲ್ಲಿ ತಿಮ್ಮನಿಗೆ ಗೌರಿಯನ್ನು ಮದುವೆ ಮಾಡಿಕೊಡುವುದು ಎಂದು ಅವಳ ಅಪ್ಪ ಅಮ್ಮ ಹೇಳುತ್ತಿದ್ದರು. ಆದರೆ ದೊಡ್ಡವನಾದ ಮೇಲೆಯೂ ತಿಮ್ಮನು ಹೆಡ್ಡನಾಗಿಯೇ ಇದ್ದುದರಿಂದ, ಅವನಿಗೆ ಗೌರಿಯನ್ನು ಕೊಡಲು ಅವರಿಗೆ ಇಷ್ಟವಿರಲಿಲ್ಲ. ಆದ್ದರಿಂದ, ತಿಮ್ಮನಿಗೆ ಗೊತ್ತಾಗದಂತೆ ಗೌರಿಗೆ ಬೇರೆ ಗಂಡು ನೋಡಿ, ಮದುವೆಯ ಸಿದ್ಧತೆ ಮಾಡಿದರು. ಮದುವೆಯ ದಿನ ತಿಮ್ಮನನ್ನು ಉಪಾಯದಿಂದ, ಹೊಲವನ್ನು ಉಳಲು ದೂರಕ್ಕೆ ಕಳುಹಿಸಿದರು. ಅಲ್ಲಿಗೆ ಹೋದಾಗ ತಾನು ನೊಗ ನೇಗಿಲನ್ನು ಕಟ್ಟಲು, ಹಗ್ಗ ತಂದಿಲ್ಲ ವೆಂದು ತಿಮ್ಮನಿಗೆ ಗೊತ್ತಾಯಿತು ಅಕ್ಕಪಕ್ಕದಲ್ಲಿ ನೋಡಿದಾಗ, ಹಗ್ಗದಂತೆ ಏನೋ ಬೀಳಲು ಕಾಣಿಸಿತು. ಅದನ್ನು ತುಂಡು ಮಾಡಲೆಂದು ಹಿಡಿದುಕೊಂಡು, ಅದರ ಬುಡವನ್ನು ಹುಡುಕಿದಾಗ, ಅದು ಬಹಳ ಉದ್ದ ವಾಗಿತ್ತು. ಅದರ ಬುಡ ತಲುಪಿದಾಗ ಅದು ಮರದ ಬೀಳಲು ಆಗಿರಲಿಲ್ಲ. ಅದು ತಪಸ್ಸಿಗೆ ಕುಳಿತ ಒಬ್ಬ ಋಷಿಯ ಗಡ್ಡವಾಗಿತ್ತು. ಹೆದರಿಕೊಂಡ ತಿಮ್ಮನು ಋಷಿಯಲ್ಲಿ ತಾನು ಹಗ್ಗವಿಲ್ಲದೆ, ಬೀಳಲೆಂದು ಭ್ರಮಿಸಿ, ಗಡ್ಡವನ್ನು ಹಿಡಿದದ್ದು ಎಂದು ತಿಳಿಸಿದನು. ಆಗ ಋಷಿಯು ಅವನಿಗೆ ಹಗ್ಗವಿಲ್ಲದೆಯೇ ಜೋಡಿಸುವ ಒಂದು ಮಂತ್ರವನ್ನು ಹೇಳಿಕೊಟ್ಟನು. "ಪತಂಗೆಲ್" (ಹಿಡಿದುಕೊಳ್ಳುವುದು) ಎಂದಾಗ ಯಾವುದೇ ವಸ್ತುವೂ ತನ್ನಿಂದ ತಾನೇ ಹಿಡಿದುಕೊಳ್ಳುತ್ತದೆ; "ಬುಡಂಗೆಲ್" (ಬಿಡಲಿ) ಎಂದಾಗ ತನ್ನಿಂದ ತಾನೇ ಬೇರೆಯಾಗುತ್ತದೆ. ತಿಮ್ಮನು ಎತ್ತುಗಳ ಮೇಲೆ ನೊಗ ಇಟ್ಟು, ನೇಗಿಲನ್ನು ಅದಕ್ಕೆ ತಾಗಿಸಿ ಇಟ್ಟು, "ಪತಂಗೆಲ್" ಎಂದಾಗ ಅದು ತನ್ನಿಂದ ತಾನಾಗಿಯೇ ಅಂಟಿಕೊಂಡಿತು. ಉತ್ತು ಆದ ಮೇಲೆ, "ಬುಡಂಗೆಲ್" ಎಂದಾಗ, ತನ್ನಷ್ಟಕ್ಕೆ ಬಿಚ್ಚಿಕೊಂಡಿತು. ತಿಮ್ಮನು ಮನೆಗೆ ಬಂದಾಗ, ಗೌರಿಯ ಮದುವೆ ಮುಗಿದು, ಬಂದವರೆಲ್ಲಾ ಹೊರಟು ಹೋಗಿದ್ದರು. ಮದುಮಗ, ಅವನ ತಂದೆ, ತಾಯಿ ಇದ್ದರು. ತಿಮ್ಮನು ಹೆಡ್ಡನಾದರೂ ವಿಷಯವೆಲ್ಲಾ ಅವನಿಗೆ ಗೊತ್ತಾಯಿತು. ಆದರೆ ಏನೂ ಗೊತ್ತಾಗದವನಂತೆ ನಟಿಸಿ, ರಾತ್ರಿಯಾದಾಗ ಮದುಮಗ, ಮದುಮಗಳು ಮಲಗುವ ಕೋಣೆಯ ಅಟ್ಟದಲ್ಲಿ ಯಾರಿಗೂ ತಿಳಿಯದಂತೆ ಅಡಗಿ ಕುಳಿತ. ರಾತ್ರಿಯ ವೇಳೆ ಮದುಮಗ, ಮದುಮಗಳು ಆ ಕೋಣೆಯಲ್ಲಿ ಮಲಗಿದ್ದಾಗ, ಮದುಮಗನಿಗೆ ಮೂತ್ರ ಹೊಯ್ಯಬೇಕಾಯಿತು. ಅವನು ಅಲ್ಲಿಯೇ ಇದ್ದ ಪಾತ್ರೆಯಲ್ಲಿ ಮೂತ್ರ ಹೊಯ್ಯತೊಡಗಿದ. ಇನ್ನೇನು ಮೂತ್ರ ಹೊಯ್ದು

ಮುಗಿಯಿತು ಎನ್ನುವಾಗ, ಅಟ್ಟದ ಮೇಲಿದ್ದ ತಿಮ್ಮನು "ಪಂತಗೆಲ್" ಎಂದ. ಕೂಡಲೇ ಆ ಪಾತ್ರೆಯು ಮದುಮಗನಿಗೆ ಅಂಟಿಕೊಂಡಿತು. ಅವನು ಗಡಿಬಿಡಿಗೊಂಡಾಗ ಮದುಮಗಳು ಗೌರಿ ಬಂದು ಆ ಪಾತ್ರೆಯನ್ನು ಎಳೆದು ತೆಗೆಯಲು ಹಿಡಿದುಕೊಂಡಾಗ, ತಿಮ್ಮನು "ಪತಂಗೆಲ್" ಎಂದ. ಅವಳೂ ಪಾತ್ರೆಗೆ ಅಂಟಿಕೊಂಡಳು. ಇವರ ಗಲಾಟೆಯನ್ನು ಕೇಳಿ ಅಲ್ಲಿಗೆ ಬಂದ ಗೌರಿಯ ತಾಯಿ, ಪಾತ್ರೆಯನ್ನು ಎಳೆದು ತೆಗೆಯಲು ಹಿಡಿದು ಕೊಂಡಾಗ, ತಿಮ್ಮನು 'ಪತಂಗೆಲ್' ಎಂದ. ಅವಳೂ ಅದಕ್ಕೆ ಅಂಟಿಕೊಂಡಳು. ಈ ರೀತಿ, ಮದುಮಗನ ತಂದೆ, ತಾಯಿ ಕೂಡಾ ಆ ಪಾತ್ರೆಗೆ ಅಂಟಿಕೊಂಡರು. ಆಗ ಗೌರಿಯ ತಂದೆಯು ಇದು ತಿಮ್ಮನದ್ದೇ ಮಂತ್ರ ಶಕ್ತಿಯೆಂದು ತಿಳಿದು, ತಾನು ಗೌರಿಯನ್ನು ತಿಮ್ಮನಿಗೆ ಮದುವೆ ಮಾಡಿಕೊಡುತ್ತೇನೆ ಎಂದು ಅವರು ಚಿಕ್ಕವರಿರುವಾಗ ಹೇಳಿದ್ದನ್ನು ಬೀಗರಿಗೂ ತಿಳಿಸಿದ. ಆಗ ಬೀಗರು, ನಮಗೆ ಈ ಹೆಣ್ಣು ಬೇಡ, ಒಂದು ಬಾರಿ ಈ ತೊಂದರೆಯಿಂದ ಪಾರಾದರೆ ಸಾಕು ಎಂದು ಗೋಳಿಟ್ಟರು. ಅಷ್ಟು ಹೊತ್ತಿಗೆ, ಅಟ್ಟದಿಂದ ಇಳಿದ ತಿಮ್ಮನು ಗೌರಿಯನ್ನು ತನಗೆ ಮದುವೆ ಮಾಡಿಕೊಡುವ ಶರ್ತದಲ್ಲಿ 'ಬುಡಂಗೆಲ್' ಎಂದು ಹೇಳಿ, ಅವರೆಲ್ಲರನ್ನೂ ಪಾತ್ರೆಯ ಹಿಡಿತದಿಂದ ಪಾರು ಮಾಡಿದ. ತಿಮ್ಮನನ್ನು ಗೌರಿಗೆ ಮದುವೆ ಮಾಡಿಕೊಟ್ಟರು.

ಒಮ್ಮೆ ಪಾಯಸಕ್ಕೆ ಬಂದು ಕುಳಿತಿದ್ದ ನೊಣಗಳನ್ನು ತಿಮ್ಮ ಹೊಡೆದು ಹಾಕಿದ. ಒಂದೇ ಏಟಿಗೆ ಹತ್ತು ನೊಣಗಳು ಸತ್ತುವು. ಅದನ್ನೇ ತಿಮ್ಮ 'ಒಂದು ಪೆಟ್ಟಿಗೆ ಹತ್ತು ಜೀವ ತೆಗೆದವನು' ಎಂದು ತನ್ನ ಪರಾಕ್ರಮವನ್ನು ಪ್ರಚಾರ ಮಾಡಿದ. ಅವನು ತಾನು ಒಂದೇ ಏಟಿಗೆ ಹತ್ತು ಜೀವ ತೆಗೆದವನು ಎಂದು ಊರಿನ ಪಟೇಲರಲ್ಲಿ ತನ್ನ ಪರಾಕ್ರಮವನ್ನು ಹೇಳಿಕೊಂಡಾಗ, ಅವರು ಈತನ ಬಗ್ಗೆ ಮೆಚ್ಚುಗೆಯಾಗಿ, ಇವನು ಕೊಡಬೇಕಾದ ಗೇಣಿಯನ್ನು ಕಡಿಮೆ ಮಾಡಿದರು. ಆ ಊರಿನಲ್ಲಿ ಕಳ್ಳರ ಹಾವಳಿ ಜಾಸ್ತಿಯಾದಾಗ, ಅವರನ್ನು ಹಿಡಿಯುವ ಹೊಣೆಯನ್ನು ಪಟೇಲರು ತಿಮ್ಮನಿಗೆ ವಹಿಸಿದರು. ಇದರಿಂದ ಹೆದರಿದ ತಿಮ್ಮನು ಹೆಂಡತಿಯೊಡನೆ ಗಂಟು ಮೂಟೆ, ಊಟವನ್ನು ಕಟ್ಟಿಕೊಂಡು ಊರು ಬಿಟ್ಟು ಹೊರಟ. ದಾರಿಯಲ್ಲಿ ಆ ಕಳ್ಳರು ಸಿಕ್ಕಿ, ತಿಮ್ಮನ ಗಂಟು ಮೂಟೆಗಳನ್ನು ಕಿತ್ತುಕೊಂಡರು. ಅವನ ಗಂಟಿನಲ್ಲಿದ್ದ ಗಂಜಿ ಚಟ್ನಿಯನ್ನು ಉಂಡಾಗ, ಅವರೆಲ್ಲಾ ಹೊರಳಿ ಹೊರಳಿ ಸತ್ತು ಹೋದರು. ಇದನ್ನು ನೋಡಿ ತಿಮ್ಮನಿಗೂ ಅವನ ಹೆಂಡತಿಗೂ ಆಶ್ಚರ್ಯವಾಯಿತು. ತಿಮ್ಮನ ಹೆಂಡತಿ ಆಲೋಚಿಸಿ, ಚಟ್ನಿ ಕಡೆಯುವಾಗ (ಅರೆಯುವಾಗ) ಕಲ್ಲಿನಲ್ಲಿ ವಿಷದ ಚಿಕ್ಕ ಹಾವು ಇದ್ದಿರಬೇಕು. ಆ ವಿಷದ ಚಟ್ನಿಯನ್ನು ತಿಂದು ಕಳ್ಳರು ಸತ್ತರು ಎಂದು ಊಹಿಸಿದಳು. ಆಗ ತಿಮ್ಮನು ಆ ಕಳ್ಳರ ಕುತ್ತಿಗೆಗಳನ್ನು ತುಂಡರಿಸಿ, ಪಟೇಲರಲ್ಲಿ ತಾನೇ ಆ ಕಳ್ಳರನ್ನು ಕೊಂದೆನು ಎಂದು ತಿಳಿಸಿದನು. ಪಟೇಲರು ತಿಮ್ಮನಿಗೆ ವಿಶೇಷ ಸನ್ಮಾನಗಳನ್ನು ಕೊಟ್ಟರು. ಒಮ್ಮೆ ಆ ಊರಿಗೆ ಹುಲಿಯೊಂದರ ಉಪದ್ರ ಕಂಡು ಬಂದಿತು. ಪಟೇಲರು ಆ ಹುಲಿಯನ್ನು ಕೊಲ್ಲಲು ತಿಮ್ಮನನ್ನು ನೇಮಿಸಿದರು. ತಿಮ್ಮನು ಉದ್ದವಾದ ಒಂದು ಕಬ್ಬಿಣದ ಸಲಾಕೆಯನ್ನು ತುದಿಯಲ್ಲಿ ಬಗ್ಗಿಸಿ ತೆಗೆದುಕೊಂಡು ಹೊರಟನು. ಹುಲಿಯನ್ನು ಕಂಡಾಗ ತಿಮ್ಮನು ಅದರ ಕುತ್ತಿಗೆಗೆ ಡೊಂಕಾದ ಸಲಾಕೆಯನ್ನು ಸಿಕ್ಕಿಸಿ, 'ಪತಂಗೆಲ್' ಎಂದ. ಹುಲಿಯು ಸಲಾಕೆಗೆ ಅಂಟಿಕೊಂಡಿತು. ಆ ಸಲಾಕೆಯಲ್ಲಿ ಹಿಡಿದುಕೊಂಡು, ಅದನ್ನು ಒಂದು ಗೂಡಿನೊಳಗೆ ಹಾಕಿ, ಪಟೇಲರಿಗೆ ತಂದು ತೋರಿಸಿದನು. ತಿಮ್ಮನ ಈ ಸಾಹಸಕ್ಕೆ ಮೆಚ್ಚಿದ ಧನಿಗಳು ಅವನ ವಶವಿದ್ದ ಭೂಮಿಯನ್ನು ಅವನಿಗೇ ಉಂಬಳಿಯಾಗಿ ಬಿಟ್ಟು ಗೌರವಿಸಿದರು.

ತುಳು ಜನಪದ ಕಥೆಯ ಮೂಲರೂಪದ ಸಂಕ್ಷಿಪ್ತ ಕನ್ನಡ ರೂಪಾಂತರವನ್ನು ಇಲ್ಲಿ ಕೊಡಲಾಗಿದೆ. ಈ ಹಾಸ್ಯಕಥೆಯಲ್ಲಿ ಎರಡು ಸರಳ ಕಥೆಗಳು ಒಟ್ಟು ಸೇರಿ, ಇದಕ್ಕೆ ಸಂಕೀರ್ಣ ಕಥೆಯ ಸ್ವರೂಪ ಬಂದಿದೆ. ಕಥೆಯ ಎರಡನೆಯ ಭಾಗವು 'ಒಂದು ಪೆಟ್ಟಿಗೆ ಏಳು' (Clever Tailor) ವರ್ಗ 1640 ಕಥೆಯನ್ನು ಹೋಲು.

ತ್ತದೆ. ಕಥೆಯ ಮೊದಲನೆಯ ಭಾಗವು ಮಾಂತ್ರಿಕ ಕಥೆಯ ಮಾದರಿಯಲ್ಲಿದೆ. ಆದರೆ ಒಟ್ಟು ಕಥೆಯಲ್ಲಿ ಮಾಂತ್ರಿಕತೆಗಿಂತ, ಜಾಣತನ—ಹಾಸ್ಯಕ್ಕೆ ಮಹತ್ವವಿರುವುದರಿಂದ ಇದನ್ನು ಹಾಸ್ಯಕಥೆಗಳ ವರ್ಗಕ್ಕೆ ಸೇರಿಸ ಲಾಗಿದೆ.

**ಕಥೆಯ ಮೊದಲನೆಯ ಭಾಗದ ಘಟನೆಗಳು :**

1. ಹೆಡ್ಡ ತಿಮ್ಮನಿಗೆ ಅವನ ಸೋದರತ್ತೆಯ ಮಗಳು ಗೌರಿಯನ್ನು ಮದುವೆ ಮಾಡಿಕೊಡದೆ, ಬೇರೆಯವರ ಜೊತೆಗೆ ಅವಳ ಮದುವೆಯನ್ನು ನಿಶ್ಚಯಿಸುವುದು.

2. ಹೊಲ ಉಳಲು ಹೋದ ತಿಮ್ಮನು ಹಗ್ಗವೆಂದು ಸನ್ಯಾಸಿಯ ಗಡ್ಡವನ್ನು ಹಿಡಿಯುವುದು, ಸನ್ಯಾಸಿ ಯಿಂದ 'ಪತಂಗೆಲ್, ಬುಡಂಗೆಲ್' ಮಂತ್ರವನ್ನು ಪಡೆಯುವುದು,

   (1722. Magic formula from saint.)

3. ತಿಮ್ಮನು ಮಾಂತ್ರಿಕ ಸೂತ್ರದಿಂದ ಗೌರಿಯ ಗಂಡ, ಗೌರಿ ಮತ್ತು ಉಳಿದವರನ್ನು ಒಂದು ಪಾತ್ರೆಗೆ ಅಂಟಿಸುವುದು. ಕೊನೆಗೆ ಗೌರಿಯನ್ನು ಮದುವೆ ಮಾಡಿಕೊಡುವ ಶರ್ತದಲ್ಲಿ ಅವರನ್ನು ಬಿಡಿಸುವುದು.

   (D 1413.7. Basin to which one sticks)

   K 1217. Tale of the basin. Lover caught on magic basin and left in embarrasing position.)

ಕಥೆಯ ಎರಡನೆಯ ಭಾಗದಲ್ಲಿ ಮಾಂತ್ರಿಕತೆಗಿಂತ ವಾಸ್ತವಿಕ ಹಾಸ್ಯ ಘಟನೆಗಳೇ ಪ್ರಧಾನವಾಗಿವೆ. ವರ್ಗ 1640 ರ 'ಜಾಣ ದರ್ಜಿ' ಕಥೆಯನ್ನು ಹೋಲುತ್ತದೆ.

1. ತಿಮ್ಮನು ಪಾಯಸದ ಮೇಲಿದ್ದ ನೊಣಗಳಿಗೆ ಹೊಡೆದಾಗ ಹತ್ತು ನೊಣಗಳು ಸಾಯುವುದು. ಇವನು ಅದನ್ನೇ 'ಒಂದು ಪೆಟ್ಟಿಗೆ ಹತ್ತು ಕೊಂದವನು' ಎಂದು ಸಾರುವುದು (ಟೈಲರನ ಕಥೆಯಲ್ಲಿ 'ಏಳು ನೊಣಗಳು').

2. ಕಳ್ಳರನ್ನು ಹಿಡಿಯುವ ಕೆಲಸವನ್ನು ವಹಿಸಿದಾಗ, ಆಕಸ್ಮಿಕವಾಗಿ ಆಹಾರದಲ್ಲಿನ ವಿಷದಿಂದ ಕಳ್ಳರು ಸಾಯುವುದು (ಇಲ್ಲಿ ತಿಮ್ಮನ "ಮಾಂತ್ರಿಕ ಸೂತ್ರ" ಪ್ರಯೋಗವಾಗದೆ ಇರುವುದು ಗಮನಾರ್ಹ).

3. ಹುಲಿಯನ್ನು ಹಿಡಿಯುವ ಕೆಲಸವನ್ನು ವಹಿಸಿದಾಗ, ತಿಮ್ಮನು ತನ್ನ "ಪತಂಗೆಲ್, ಬುಡಂಗೆಲ್" ಮಾಂತ್ರಿಕ ಸೂತ್ರವನ್ನು ಬಳಸಿ, ಅದನ್ನು ಹಿಡಿದುಕೊಡುವುದು.

   (ಇಲ್ಲಿ "ಮಾಂತ್ರಿಕ ಸೂತ್ರ" ಬಳಕೆಯಾಗುವುದು ನಂತರದ ಸೇರ್ಪಡೆಯಾಗಿರಬಹುದು.)

ಮೂಲತಃ ಮೊದಲನೆಯ ಭಾಗ ಮಾಂತ್ರಿಕ ಕಥೆಯಾಗಿದ್ದು, ಎರಡನೆಯ ಭಾಗ ಹಾಸ್ಯ ಕಥೆ (Clever tailor ವರ್ಗದ್ದು) ಯಾಗಿದ್ದು, ಪ್ರತ್ಯೇಕವಾಗಿ ಇದ್ದಿರಬೇಕು. ಅವೆರಡನ್ನೂ, ಒಂದುಗೂಡಿಸಿ ದಾಗ, ಕ್ರಮೇಣ ಎರಡನೆಯ ಭಾಗಕ್ಕೂ ಮೊದಲಿನ ಭಾಗದ "ಮಾಂತ್ರಿಕ ಸೂತ್ರ"ವನ್ನು ಬಳಸುವ ತಂತ್ರವನ್ನು ಅಳವಡಿಸಿರಬಹುದು.

## (9) ಅಜ್ಜಿ ಮೊಮ್ಮಗ

ಒಂದೂರಿನಲ್ಲಿ ಒಬ್ಬಳು ಅಜ್ಜಿ. ಅವಳಿಗೆ ತಿಮ್ಮ ಎನ್ನುವ ಒಬ್ಬ ಮೊಮ್ಮಗ. ಅವನು ಹೆಡ್ಡ. ಒಮ್ಮೆ ಅಜ್ಜಿಯು 'ಅಪ್ಪ' (ತಿಂಡಿ) ಗಳನ್ನು ಮಾಡಿ, ಮಾರಾಟಮಾಡಲು ತಿಮ್ಮನಲ್ಲಿ ಕೊಡುವುದು. ಅದನ್ನು ಅವನು ಮಾರಲು ಹೋಗುವಾಗ ನಾಯಿ ಸಿಗುವುದು. ಅವನು ಆ ಅಪ್ಪವನ್ನೆಲ್ಲಾ ನಾಯಿಗೆ ಕೊಡುವುದು. ಅದರಲ್ಲಿ ದುಡ್ಡು ಕೇಳಿದಾಗ, ಅದು ಬಾಲ ಅಲ್ಲಾಡಿಸುತ್ತದೆ. 'ಇವತ್ತು ಅದರಲ್ಲಿ ಹಣವಿಲ್ಲವೆಂದು ಹೇಳುತ್ತಿದೆ' ಎಂದು ಭಾವಿಸಿದ ಹೆಡ್ಡ ತಿಮ್ಮ ಬರಿಗೈಯಲ್ಲಿ ಮನೆಗೆ ಹಿಂದಿರುಗುವುದು. ಅದಕ್ಕಾಗಿ ಅಜ್ಜಿ ಅವನನ್ನು ಬೈಯುವುದು. ಮರುದಿನವೂ ಇದೇ ರೀತಿಯ ಘಟನೆ ಪುನರಾವರ್ತನೆಯಾಗುವುದು. ಮೂರನೆಯ ದಿನ ಅಜ್ಜಿಯು ಬೆದರಿಕೆಯಿಂದಾಗಿ, ಅಪ್ಪವನ್ನು ಮಾರಲು ತಂದವನು, ಮತ್ತೆ ಅದೇ ನಾಯಿ ಕಾಣಿಸಿಕೊಂಡಾಗ, ಅದಕ್ಕೆ ಎಲ್ಲವನ್ನೂ ಕೊಡುವುದು. ಹಣಕ್ಕಾಗಿ ತಿಮ್ಮನು ನಾಯಿಗೆ ಕೋಲಿನಿಂದ ಹೊಡೆಯುವುದು. ಅದು ಕೂಗುತ್ತಾ ಓಡಿ, ಒಂದು ಕಡೆ ಮೂತ್ರ ಹೊಯ್ಯುವುದಕ್ಕಾಗಿ ನೆಲವನ್ನು ಮೂಸುವುದು. ತಿಮ್ಮನು ಆ ಜಾಗ ದಲ್ಲಿ ಹಣವಿದೆಯೆಂದು ನಾಯಿ ಹೇಳುತ್ತಿದೆ ಎಂದು ಭಾವಿಸಿ, ಅಲ್ಲಿ ನೆಲವನ್ನು ಅಗೆಯುವುದು. ಅಕಸ್ಮಾತಾಗಿ ನೆಲದಲ್ಲಿ ಹುಗಿದಿಟ್ಟದ್ದ ಹಣ ಅಲ್ಲಿ ಅವನಿಗೆ ಸಿಗುವುದು. ಇವನು ಆ ಹಣವನ್ನು ಗಾಳಿಗೆ ಹಿಡಿದಾಗ ನೋಟು ಗಳೆಲ್ಲಾ ಹಾರಿ ಹೋಗಿ, ಚಿಕ್ಕ ಚಿಕ್ಕ ನಾಣ್ಯಗಳು ಮಾತ್ರ ಉಳಿಯುವುದು. ಹಾರಿಹೋದದ್ದೆಲ್ಲಾ ಹೊಟ್ಟು ಹಣ, ಉಳಿದದ್ದು ಮಾತ್ರ ಒಳ್ಳೆಯ ಹಣ ಎಂದು ಭಾವಿಸಿದ ಹೆಡ್ಡ ತಿಮ್ಮ ಆ ನಾಣ್ಯಗಳನ್ನು ತಂದು ಅಜ್ಜಿಗೆ ತೋರಿಸುವುದು. ಅಜ್ಜಿಯು ಹಣವಿದ್ದಲ್ಲಿಗೆ ಬಂದಾಗ, ಇವನು ಗಾಳಿಗೆ ಹಾರಿಸಿದ ನೋಟುಗಳು ನೂರು ರೂಪಾಯಿ ನೋಟು ಎಂಬುದನ್ನು ತಿಳಿದುಕೊಂಡು, ಅವುಗಳನ್ನು ಆರಿಸಿಕೊಂಡು ಹೋಗುವುದು.

ತುಳು ಜನಪದ ಕಥೆಯೊಂದರ ಸಂಕ್ಷಿಪ್ತ ಕನ್ನಡ ರೂಪಾಂತರವನ್ನು ಇಲ್ಲಿ ಕೊಡಲಾಗಿದೆ. ಇಲ್ಲಿ ಅಜ್ಜಿ ಸಾಕಿದ ಮೊಮ್ಮಗನೊಬ್ಬನ ಹೆಡ್ಡು ವರ್ತನೆಯನ್ನು ಹಾಸ್ಯಮಯವಾಗಿ ತಿಳಿಸಲಾಗಿದೆ. ಪ್ರಧಾನವಾಗಿ ಒಂದೇ ಆಶಯವಿರುವ ಇದು, ಸರಳ ಕಥೆಯ ಸ್ವರೂಪದ ಹಾಸ್ಯಕಥೆ.

ಇಲ್ಲಿ ಪ್ರಧಾನ ಆಶಯ : J 1852.1 Numskull sells cow to bird· when he comes for his money the bird flies to a trash pile, where the fool finds a treasure.

"ಅಜ್ಜಿ ಮೊಮ್ಮಗ" ತುಳು ಕಥೆಯಲ್ಲಿ ಈ ಆಶಯದ ವಿವರಗಳು ಸ್ವಲ್ಪ ಭಿನ್ನವಾಗಿವೆ. ಇಲ್ಲಿ ಹೆಡ್ಡನು 'ಅಪ್ಪ'ವೆಂಬ ಅಡ್ಯೆ (ತಿಂಡಿ) ಯನ್ನು ನಾಯಿಗೆ ಮಾರುತ್ತಾನೆ. ಅವನು ನಾಯಿಯಲ್ಲಿ ಹಣ ಕೇಳಲು ಬಂದಾಗ, ಅದು ಅಲ್ಲಿಂದ ಓಡಿ ಹೋಗಿ, ಒಂದು ಕಡೆ ಮೂತ್ರ ಹೊಯ್ಯುವುದಕ್ಕಾಗಿ ನೆಲವನ್ನು ಕೆರೆಯುತ್ತದೆ. ಹೆಡ್ಡನು ಆ ಸ್ಥಳವನ್ನು ಅಗೆದಾಗ ಅಕಸ್ಮಿಕವಾಗಿ ಅಲ್ಲಿ ಹಣ ಸಿಗುತ್ತದೆ.

ಜನಪ್ರಿಯವಾದ ಈ ಆಶಯಕ್ಕೆ ತುಳು ಕಥೆಯ ಕೊನೆಯಲ್ಲಿ ಇನ್ನೊಂದು ಚಿಕ್ಕ ಘಟನೆಯು ಬಂದು ಹೆಡ್ಡನ ಹೆಡ್ಡುತನಕ್ಕೆ ಪುಷ್ಟಿಕೊಡುತ್ತದೆ. ನೆಲವನ್ನು ಅಗೆದಾಗ ಸಿಕ್ಕಿದ ಹಣವನ್ನು ಗಾಳಿಗೆ ಹಿಡಿದಾಗ ನೂರು ರೂಪಾಯಿ ನೋಟುಗಳು ಹಾರಿಹೋಗುತ್ತವೆ, ಚಿಲ್ಲರೆ ನಾಣ್ಯಗಳು ಕೈಯಲ್ಲಿ ಉಳಿಯುತ್ತವೆ. ಕೈಯಲ್ಲಿ ಉಳಿದದ್ದು ಒಳ್ಳೆಯ ಹಣ ಎಂದು ಹೆಡ್ಡನು ಭಾವಿಸುತ್ತಾನೆ.

ತುಳುವಿನ ಈ "ಅಜ್ಜ-ಮೊಮ್ಮಗ" ಕಥೆಯನ್ನೇ ಹೋಲುವ ಜನಪದ ಕಥೆಯೊಂದು ಕನ್ನಡದಲ್ಲಿ ಸಿಗುತ್ತದೆ.[1]

## (10) ಉಪಾಯಕ್ಕೆ ಹೋಗಿ ಅಪಾಯ

ಒಂದೂರಿನಲ್ಲಿ ತಟಪಟ ರಾಮಣ್ಣ ಎನ್ನುವವನೊಬ್ಬನಿದ್ದ. ಅವನ ಸಂಗಡಿಗರೆಂದರೆ ಒಂದು ಹಸು ಮತ್ತು ಮುಳಿಹುಲ್ಲಿನ ಒಂದು ಮನೆ. ಒಂದು ಬಾರಿ ತನ್ನ ಹಸು ಕಾಣೆಯಾದಾಗ, ಅದನ್ನು ಹುಡುಕುತ್ತಾ ರಾಮಣ್ಣ ಕಾಡಿಗೆ ಹೋಗುತ್ತಾನೆ. ರಾತ್ರಿಯ ವೇಳೆಯಾದಾಗ ಒಬ್ಬಳು ಅಜ್ಜಿಯ ಮನೆಯಲ್ಲಿ ತಂಗುತ್ತಾನೆ. ಅಲ್ಲಿ ರಾತ್ರಿಯ ಹೊತ್ತು ಜಗಲಿಯಲ್ಲಿ ಮಲಗಿದ ರಾಮಣ್ಣನು ಯಾವುದೋ ಒಂದು ಪ್ರಾಣಿಯನ್ನು ನೋಡುತ್ತಾನೆ. ಕತ್ತಲೆಯಲ್ಲಿ ಸರಿಯಾಗಿ ಕಾಣಿಸದೆ, ಅದು ತನ್ನ ಹಸುವೆಂದು ಭಾವಿಸಿ, ಅದರ ಬಾಲವನ್ನು ಹಿಡಿದುಕೊಳ್ಳುತ್ತಾನೆ. ಅದು ಓಡತೊಡಗುತ್ತದೆ. ಇವನು ಅದಕ್ಕೆ ಗುದ್ದುತ್ತಾನೆ ; ಚಿವುಟುತ್ತಾನೆ ; ಕಚ್ಚುತ್ತಾನೆ. ಆದರೆ ಅದು ಇವನನ್ನು ಎತ್ತಿಕೊಂಡು ಓಡುತ್ತಾ ಇರುತ್ತದೆ. ಬೆಳಕು ಹರಿದು ನೋಡುವಾಗ ಆ ಪ್ರಾಣಿ ಹುಲಿಯೆಂದು ರಾಮಣ್ಣನಿಗೆ ಗೊತ್ತಾಗುತ್ತದೆ. ಬದುಕಿದರೆ ಬೇಡಿ ತಿಂದೇನು ಎಂದು ಒಂದು ಮರದಲ್ಲಿ ಕುಳಿತುಕೊಳ್ಳುತ್ತಾನೆ. ಅವನನ್ನು ಬಿಟ್ಟು ಓಡಿದ ಹುಲಿಗೆ ಕರಡಿಯೊಂದು ಎದುರಾಗುತ್ತದೆ. ಹುಲಿಯು ಅದರಲ್ಲಿ ತನಗೆ ಗುದ್ದಿದ, ಚಿವುಟಿದ, ಕಚ್ಚಿದ ಪರಾಕ್ರಮಿಯನ್ನು ವರ್ಣಿಸುತ್ತದೆ. ಹುಲಿಯನ್ನು ಕರೆದುಕೊಂಡು ಕರಡಿಯು ರಾಮಣ್ಣನಿದ್ದ ಮರದಲ್ಲಿಗೆ ಬರುತ್ತದೆ. ಹೆದರಿಕೆಯಿಂದ ರಾಮಣ್ಣ ಮರದ ಮೇಲೆ ಗಡಗಡನೆ ನಡುಗುತ್ತಾನೆ. ಅವನ ಕೈಯಲ್ಲಿ ಇದ್ದ ಉರಿಯುತ್ತಿದ್ದ ಬೀಡಿ ಕೆಳಗೆ ಕರಡಿಯ ಮೇಲೆ ಬಿದ್ದು, ಕರಡಿ ಸುಟ್ಟು ಸತ್ತುಹೋಗುತ್ತದೆ. ಇದನ್ನು ನೋಡಿದ ಹುಲಿಯು ಇನ್ನೂ ಹೆದರಿ ಓಡಿದಾಗ ನರಿಯು ಸಿಗುತ್ತದೆ. ನಡೆದ ವೃತ್ತಾಂತವನ್ನು ಕೇಳಿದ ನರಿಯು ಹುಲಿಯನ್ನು ಕರೆದುಕೊಂಡು, ಅದರ ಬಾಲಕ್ಕೆ ತನ್ನ ಬಾಲವನ್ನು ಗಂಟು ಹಾಕಿಕೊಂಡು, ಬರುತ್ತದೆ. ಮರದ ಬುಡಕ್ಕೆ ಮತ್ತೆ ಹುಲಿ ಬಂದಾಗ ರಾಮಣ್ಣನು ಹೆದರಿಕೆಯಿಂದ ಕಂಗಾಲಾಗುತ್ತಾನೆ. ಆದರೆ ಇದ್ದ ಧೈರ್ಯವನ್ನೆಲ್ಲ ಉಪಯೋಗಿಸಿ, ಕೊನೆಯ ಪ್ರಯತ್ನವೆಂಬಂತೆ ಹುಲಿಯಲ್ಲಿ "ಖರ್ಚಿಗೆ ಏನಾದರೂ ಬೇಕೋ" ಎಂದು ಗದರಿಸುತ್ತಾನೆ. ಮೊದಲೇ ಹೆದರಿದ ಹುಲಿಯು ಈ ಮಾತನ್ನು ಕೇಳುತ್ತಲೇ, ಸಂಪೂರ್ಣ ಧೈರ್ಯಗುಂದಿ ದಿಕ್ಕಾಪಾಲಾಗಿ ಓಡುತ್ತದೆ. ಅದರ ಬಾಲಕ್ಕೆ ಗಂಟು ಹಾಕಿಕೊಂಡಿದ್ದ ನರಿಯು ಸತ್ತುಹೋಗುತ್ತದೆ.

ತುಳು ಜನಪದ ಕಥೆಯ ಸಂಕ್ಷಿಪ್ತ ಕನ್ನಡ ರೂಪಾಂತರವನ್ನು ಇಲ್ಲಿ ಕೊಡಲಾಗಿದೆ. ಈ ಹಾಸ್ಯಕಥೆಯಲ್ಲಿ ಹುಲಿ, ಕರಡಿ, ನರಿಯಂತಹ ಪ್ರಾಣಿಗಳು ಬಂದರೂ, ಇದು ಪ್ರಾಣಿಕಥೆಗಿಂತ ಹೆಚ್ಚಾಗಿ ಹಾಸ್ಯಕಥೆಯ ವರ್ಗಕ್ಕೆ ಸಮೀಪವಾಗಿದೆ. ಮನುಷ್ಯನೊಬ್ಬನು ಜಾಣತನದಿಂದ ಕ್ರೂರಪ್ರಾಣಿಗಳನ್ನು ಹೆದರಿಸುವ, ಓಡಿಸುವ ತಂತ್ರ ಇಲ್ಲಿದೆ. ಇಲ್ಲಿನ ಮುಖ್ಯ ಆಶಯ : J 17.1. Tiger, jackal and bear each learn to fear man. J . 1706.1. Tiger as stupid beast ಎನ್ನುವ ಆಶಯವೂ ಅಲ್ಲಿ ಕಾಣಿಸುತ್ತದೆ.

ಈ ಕಥೆಯ ಇನ್ನೊಂದು ಪಾಠದಲ್ಲಿ "ತಟಪಟ ಹನಿಯಪ್ಪ" ಎನ್ನುವಾತನು ಅದೇ ರೀತಿ ಜಾಣತನದಿಂದ ಹುಲಿಯಂತಹ ಕಾಡುಮೃಗಗಳನ್ನು ಹೆದರಿಸುತ್ತಾನೆ, ಈ ಕಥೆಯು ಕನ್ನಡ ಬಾಲಸಾಹಿತ್ಯದಲ್ಲಿ ಸೇರ್ಪಡೆಯಾಗಿ ಸಾಹಿತ್ಯಿಕ ಪರಂಪರೆಯಲ್ಲಿ ಕಾಣಿಸಿಕೊಂಡಿದೆ.

---

1. ರಾಗೌ : (ಸಂ) : "ಪೆದ್ದನ ಬುದ್ಧಿವಂತಿಕೆ", "ಕರ್ನಾಟಕ ಜನಪದ ಕಥೆಗಳು".

## (11) ಕೊಟ್ಟಿಗೆಯ ಮರ

ಒಂದು ಊರಿನಲ್ಲಿ 'ಇಟ್ಟು' ಎನ್ನುವವನು ಇದ್ದನು. ಅವನಿಗೆ ತನ್ನವರು ಎನ್ನುವವರು ಯಾರು ಇರಲಿಲ್ಲ. ಆದ್ದರಿಂದ ತನ್ನ ಜೀವನ ಸಾಗಿಸಲು, 'ಸದ್ದು' ಎಂಬ ಸಾಹುಕಾರನಲ್ಲಿ ಸಾವಿರ ರೂಪಾಯಿ ಸಾಲ ತೆಗೆದುಕೊಂಡನು. ಸಾಲ ತೀರಿಸಲು ಸಾಧ್ಯವಾಗದೆ ಇರುವ ಸಂದರ್ಭದಲ್ಲಿ 'ಸದ್ದು' ಸಾಹುಕಾರನ ಕಟ್ಟಪ್ಪಣೆಗೆ ಬೇಕಾಗಿ ಅವನು ಆ ಊರನ್ನು ಬಿಟ್ಟನು.

ಹಾಗೆ ಊರು ಬಿಟ್ಟು ಹೊರಟ 'ಇಟ್ಟು' ಸಂಜೆಯವರೆಗೂ ನಡೆದು, ರಾತ್ರಿಗೆ ಒಂದು ಮನೆಗೆ ಹೋದನು. ಆ ಮನೆಯಲ್ಲಿ ಒಂದು ಅಜ್ಜಿಯೂ ಮೊಮ್ಮಗಳೂ ಇದ್ದರು. 'ಇಟ್ಟು'ವು ಅವರಲ್ಲಿ "ನಾನು ದೂರದ ಊರಿಗೆ ಹೋಗುವವನು. ನಾನು ಇವತ್ತು ಇಲ್ಲಿ ತಂಗಿ, ನಾಳೆ ಬೆಳಿಗ್ಗೆ ಊರಿಗೆ ಹೋಗುತ್ತೇನೆ" ಎಂದನು. ಅಜ್ಜಿಯು ಇದನ್ನು ಕೇಳಿ, ರಾತ್ರಿ ಅಲ್ಲಿಯೇ ನಿಲ್ಲಲು ಹೇಳಿ, ಅವನಿಗೆ ಬೇಕಾದ ವ್ಯವಸ್ಥೆಯನ್ನೆಲ್ಲಾ ಮಾಡಿದಳು. ರಾತ್ರಿ ಮಲಗಿರುವ ವೇಳೆಯಲ್ಲಿ 'ಇಟ್ಟು'ವಿಗೆ ಊರು ಬಿಟ್ಟ ತಲೆಬಿಸಿಯಲ್ಲಿ ನಿದ್ರೆಯೇ ಬರಲಿಲ್ಲ. ಮುಂಜಾವದ ವೇಳೆ ಅಜ್ಜಿಯು ಮೊಮ್ಮಗಳಲ್ಲಿ "ಅಪ್ಪದ ತಿಂಡಿ ಹೊಯ್ಯಲು ಹೇಳಿ, ತಾನು ಮಲಗಿದಳು. ನಿದ್ರೆ ಬಾರದ ಸಮಯದಲ್ಲಿ ಇಟ್ಟುವೂ ಎದ್ದು, ಅಡಿಗೆ ಮನೆಗೆ ಹೋದನು. ಹೀಗೆಯೇ ಊರಿನ ಸಂಗತಿ ಮಾತಾಡುತ್ತಿರುವಾಗ, ಮೊಮ್ಮಗಳು ಇವನ ಹೆಸರು ಕೇಳಿದಳು. ಆಗ 'ಇಟ್ಟು'ವು ತನ್ನ ಹೆಸರು 'ಸುಮ್ಮನೆ' (ಪೊಕ್ಕದೆ) ಎಂದನು. ಪೂರ್ತಿಯಾಗಿ "ಅಪ್ಪ" ಸಿದ್ಧವಾದಾಗ, ಇಟ್ಟುವು ಅಪ್ಪದ ಕುಕ್ಕೆಯನ್ನು ಎತ್ತಿಕೊಂಡು ಓಡಿದನು. ಮೊಮ್ಮಗಳು ಅಜ್ಜಿಯನ್ನು ಕರೆದು ಹೇಳುತ್ತಾಳೆ-"ಅಜ್ಜಿ, ಅಜ್ಜೀ 'ಅಪ್ಪ'ವನ್ನೆಲ್ಲಾ ಕೊಂಡು ಹೋದ", ಅಜ್ಜಿಯು "ಯಾರು ಕೊಂಡು ಹೋದದ್ದು ?" ಎಂದು ಕೇಳಿದಾಗ. ಮೊಮ್ಮಗಳು 'ಸುಮ್ಮನೆ' ಎಂದಳು. ಆಗ ಅಜ್ಜಿಯು "ಈ ಮೊಮ್ಮಗಳು ತಮಾಷೆಗೆ ಹೇಳುವುದು" ಎಂದು ಭಾವಿಸಿ, ಅವಳನ್ನು ಗದರಿಸಿ, ಮಲಗಿದಳು. ಆಗ ಮೊಮ್ಮಗಳು ಅಜ್ಜಿಗೆ ಹೇಳಿ ಹೇಳಿ ಸಾಕಾಗಿ, ಅಜ್ಜಿಯನ್ನು ಎಳೆದು ಕೊಂಡು ತಂದು ತೋರಿಸಿದಳು. ನೋಡಿದಾಗ, ಅಜ್ಜಿಗೆ ನಡೆದ ಸಂಗತಿ ಎಲ್ಲಾ ಗೊತ್ತಾಗಿ, ತಲೆಗೆ ಕೈ ಇಟ್ಟು ಕುಳಿತುಕೊಂಡಳಂತೆ.

'ಅಪ್ಪ'ವನ್ನು ತೆಗೆದುಕೊಂಡು ಹೋದ 'ಇಟ್ಟು'ವು ದಾರಿಯಲ್ಲಿ ಸ್ವಲ್ಪ ಅಪ್ಪವನ್ನು ಚೆಲ್ಲುತ್ತಾ, ಸ್ವಲ್ಪ ಕುಕ್ಕೆಯಲ್ಲಿ ಇಟ್ಟು, ಆ ಊರಿನ ಅರಸನ ಬಟ್ಟೆಗಳನ್ನು ಮಡಿ ಮಾಡುವ ಮಡಿವಾಳನಲ್ಲಿ ಹೇಳಿದ- "ಹೌದೋ, ಮಹಾರಾಯ, ನಿನ್ನೆ ನಮ್ಮ ಊರಿನಲ್ಲಿ 'ಅಪ್ಪ'ದ ಮಳೆ ಬಂದದ್ದು ನಿನಗೆ ಗೊತ್ತಿಲ್ಲವೋ? ಇದೋ, ಇದು ನನಗೆ ಹೆಕ್ಕಿ ಸಿಕ್ಕಿದ್ದು, ಇನ್ನೂ ಬೇಕಾದಷ್ಟು ಬಿದ್ದುಕೊಂಡು ಇದೆ". ಇದನ್ನು ಕೇಳಿದ ಮಡಿವಾಳನ ಬಾಯಿಯಲ್ಲಿ ತನ್ನಷ್ಟಕ್ಕೆ ನೀರು ಇಳಿಯಲು ಸುರುವಾಯಿತು. ಮಡಿವಾಳನು ತನಗೂ ಸ್ವಲ್ಪ ಹೆಕ್ಕಬೇಕು ಎಂಬ ಆಸೆಯಲ್ಲಿ ಇಟ್ಟುವಿನ ಹೆಸರು ಕೇಳಿದ. ಅದಕ್ಕೆ ಇಟ್ಟು "ನನ್ನ ಹೆಸರು ಸುಳಿಗಾಳಿ" ಎಂದು ಹೇಳಿದ. ಮಡಿವಾಳನು ಅಪ್ಪದ ಆಸೆಯಿಂದ, 'ಸುಳಿಗಾಳಿ'ಯಲ್ಲಿ ಬಟ್ಟೆಗಳನ್ನು ನೋಡಿಕೊಳ್ಳಲು ಹೇಳಿ, 'ಅಪ್ಪ'ವನ್ನು ಹೆಕ್ಕಲು ಓಡಿದನು. ಮಡಿವಾಳನು ಹಿಂದಕ್ಕೆ ಬಂದು ನೋಡುವಾಗ, ಬಟ್ಟೆಗಳು ಇಲ್ಲದನ್ನು ಗಮನಿಸಿದನು. ಅವನಿಗೆ ಇಟ್ಟುವಿನ ಉಪಾಯ ತಿಳಿಯಿತು. ಓಡಿ ಹೋಗಿ ಅರಸನಲ್ಲಿ ಹೇಳಿದ-"ಅರಸರೇ, ಬಟ್ಟೆಗಳನ್ನೆಲ್ಲಾ ಪೂರ್ತಿ ಕೊಂಡು ಹೋದ." "ಯಾರು ಕೊಂಡು ಹೋದದ್ದು" ಎಂದು ರಾಜ ಕೇಳಿದಾಗ, 'ಸುಳಿಗಾಳಿ' ಎಂದು ಹೇಳಿದ ಮಡಿವಾಳ. ಅದಕ್ಕೆ ಅರಸ ಹೇಳಿದ "ಸುಳಿಗಾಳಿ ಕೊಂಡುಹೋದರೆ ಅಲ್ಲಿ ಎಲ್ಲಾದರೂ ಹಾಕೀತು ಹೋಗಿ ನೋಡು." ಆಗ ಮಡಿವಾಳನು ನಡೆದ ವೃತ್ತಾಂತವನ್ನೆಲ್ಲಾ ಹೇಳಿದ. ಅಷ್ಟರಲ್ಲಿ ಇಟ್ಟು ಆ ಊರು ಬಿಟ್ಟು ತನ್ನ ಊರಿಗೆ ಹೋಗಿದ್ದ.

ಊರಿಗೆ ಬಂದ 'ಇಟ್ಟು'ವಿಗೆ ಒಂದು ಉಪಾಯ ಹೊಳೆಯಿತು. ಆ ಬಟ್ಟೆಗಳನ್ನೆಲ್ಲಾ ಮಾರಿ, ಎರಡು ಮುಡಿ ಅಕ್ಕಿ ತೆಗೆದುಕೊಂಡ. ಅದರಲ್ಲಿ ಕೆಲವು ಬೇಯಿಸಿದ ಮತ್ತು ಕೆಲವು ಹಸಿ ಕೊಟ್ಟಿಗೆಗಳನ್ನು ಕಟ್ಟಿದ. ಅದನ್ನು ತೆಗೆದುಕೊಂಡು ಹೋಗಿ, ಒಂದು ದೊಡ್ಡ ಮರಕ್ಕೆ ಕಟ್ಟಿ, ಅದಕ್ಕೆ ಯಾವಾಗಲೂ ನೀರು ಹೊಯ್ಯಲು ಸುರುಮಾಡಿದನು. ಅಷ್ಟೇ ಅಲ್ಲದೆ, ಅದಕ್ಕೆ ಒಂದು ದೊಡ್ಡ ಕಟ್ಟೆಯನ್ನೂ ಕಟ್ಟಿಸಿದನು. ಒಂದು ದಿನ 'ಸದ್ದು' ಸಾಹುಕಾರನು ಅಲ್ಲೇ ಬರುವಾಗ, 'ಇಟ್ಟು'ವು ಮರಕ್ಕೆ ನೀರು ಹೊಯ್ಯುತ್ತಿದ್ದುದನ್ನು ನೋಡಿ, ಅವನು ಕೊಡಬೇಕಾದ ಸಾಲದ ಹಣಕ್ಕಾಗಿ ಅವನನ್ನು ಹಿಡಿದುಕೊಂಡನು. ಅಷ್ಟೇ ಅಲ್ಲದೆ, ಇವನಿಗೆ ಹುಚ್ಚು ಹಿಡಿದಿದೆಯೆಂದು ಗ್ರಹಿಸಿದನು. ಮತ್ತೆ ಕೇಳಿದನು 'ಹೌದೋ ಇಟ್ಟು, ಮರಕ್ಕೆ ಯಾಕೆ ನೀರು ಹೊಯ್ಯುತ್ತಿ?' ಎಂದು. ಅದಕ್ಕೆ ಇಟ್ಟುವು 'ಇದು ಕೊಟ್ಟಿಗೆ ಆಗುವ ಮರ. ಇದರಲ್ಲಿ ದಿನಕ್ಕೆ ಐವತ್ತು ಬೇಯಿಸಿದ ಕೊಟ್ಟಿಗೆ ಸಿಕ್ಕುತ್ತದೆ. ಉಳಿದದ್ದು ಹಸಿ ಇರುತ್ತದೆ' ಎಂದನು. ಇದನ್ನು ಸರಿಯಾಗಿ ನಂಬದ 'ಸದ್ದು' ಸಾಹುಕಾರನು ಇಟ್ಟುವಿನಲ್ಲಿ ಒಂದು ಬೇಯಿಸಿದ ಕೊಟ್ಟಿಗೆಯನ್ನು ಕೊಯ್ಯಲು ಹೇಳಿದನು. ಇಟ್ಟುವು ಮರಕ್ಕೆ ಹತ್ತಿ, ಎಲ್ಲವನ್ನೂ ಹೊಡೆದು ನೋಡಿ, ಒಂದು ಬೇಯಿಸಿದ ಕೊಟ್ಟಿಗೆಯನ್ನು ತೆಗೆದುಕೊಂಡು ಇಳಿದನು. ಅದನ್ನು ತಿಂದ 'ಸದ್ದು' ಸಾಹುಕಾರನು 'ಮರವನ್ನು ಎಷ್ಟು ಕ್ರಯವಾದರೂ ತೆಗೆದುಕೊಳ್ಳಬೇಕು' ಎಂದು ಯೋಚಿಸಿದನು. ಅದಕ್ಕಾಗಿ ಇಟ್ಟುವಿನಲ್ಲಿ 'ಇದಕ್ಕೆ ಎಷ್ಟು ಕ್ರಯ ? ಎಂದು ಕೇಳಿದನು. ಅದಕ್ಕೆ ಇಟ್ಟುವು ಹೇಳಿದನು. 'ನಿಮ್ಮ ಇಡೀ ಆಸ್ತಿ ಕೊಟ್ಟರೂ ನಾನು ಈ ಮರವನ್ನು ಕೊಡಲಾರೆ.' ಮತ್ತೆಯೂ 'ಸದ್ದು' ಸಾವುಕಾರನ ಒತ್ತಾಯಕ್ಕೆ 'ಐದು ಸಾವಿರ ರೂಪಾಯಿ ಕೊಡಬೇಕು' ಎಂದು ಹೇಳಿದನು. ಸಾಹುಕಾರನು ಹಿಂದು ಮುಂದು ನೋಡದೆ, ಕಟ್ಟಿ ಇಟ್ಟಿದ ತನ್ನ ಗಂಟನ್ನು ಪೂರ್ತಿಯಾಗಿ ಬಿಚ್ಚಿದನು. ಮಾತ್ರವಲ್ಲದೆ, ಇಟ್ಟುವಿನ ಸಾಲವನ್ನೂ ತೀರಿಸಿದನು. ಆ ಹಣವನ್ನು ತೆಗೆದುಕೊಂಡು ಬಂದ 'ಇಟ್ಟು', ಆ ಊರಿನಿಂದ ಬಹಳ ದೂರ ಹೋಗಿ, ಒಂದು ಊರಿಗೆ ಬಂದು, ದೊಡ್ಡ ಕೂಟದ ಒಂದು ಹೆಣ್ಣನ್ನು ಮದುವೆ ಆಗಿ, ದೊಡ್ಡ ಮನೆ ಕಟ್ಟಿಸಿ, ಸುಖವಾಗಿ ಕಾಲ ಕಳೆಯುತ್ತಿದ್ದನು.

ಮರವನ್ನು ತೆಗೆದುಕೊಂಡ 'ಸದ್ದು' ಸಾಹುಕಾರ ತನ್ನ ಎಲ್ಲ ಆಳುಗಳಿಂದಲೂ ಮರಕ್ಕೆ ನೀರು ಹೊಯ್ಯಿಸಿದನು. ಎಷ್ಟು ದಿನಗಳಾದರೂ, ಆ ಮರದಲ್ಲಿದ್ದ ಕೊಟ್ಟಿಗೆ ಹೆಚ್ಚಾಗದೆ ಇರುವುದನ್ನು ನೋಡಿ, 'ಇಟ್ಟು'ವಿನ ಮೋಸ ಗೊತ್ತಾಗಿ, ಊರು ಇಡೀ ಅವನನ್ನು ಹುಡುಕಲು ಆಳುಗಳನ್ನು ಕಳುಹಿಸಿದನು. ಆದರೆ ದೂರದ ಊರಿನಲ್ಲಿದ್ದ ಶ್ರೀಮಂತ 'ಇಟ್ಟಣ್ಣ' ಅವರಿಗೆ ಹೇಗೆ ತಾನೆ ಸಿಗುತ್ತಾನೆ ?

'ಕೊಟ್ಟಿಗೆಯ ಮರ' ಎಂಬ ತುಳು ಜನಪದ ಕಥೆಯ ಸಂಪೂರ್ಣ ಕನ್ನಡ ಅನುವಾದವನ್ನು ಇಲ್ಲಿ ಕೊಡಲಾಗಿದೆ. ವಂಚನೆಯ ವ್ಯಾಪಾರ, ದ್ವಂದ್ವಾರ್ಥದ ಹೆಸರಿನಿಂದ ಆ ವಂಚನೆ–ಈ ಸಂಗತಿಗಳು ಈ ಹಾಸ್ಯ ಕಥೆಯಲ್ಲಿ ಮುಖ್ಯವಾಗಿದ್ದು, ಇಲ್ಲಿನ ಆಶಯಗಳು ಜಗತ್ತಿನ ಬೇರೆ ಬೇರೆ ಕಡೆಯ ಕಥೆಗಳಲ್ಲಿ ಸಿಗುತ್ತವೆ. ಇಲ್ಲಿನ ಮುಖ್ಯ ಆಶಯಗಳು :

K 193. Deceptive bargain based on an unusual name.

K 602. "Noman", Escape by assuming an equivocal name.

K. 359.2. Thief beguiles guardian of goods by assuming equivocal name.

K 112.3. Sale of psuedo-magic cake tree.

ಈ ಎಲ್ಲಾ ಆಶಯಗಳೂ 'ಕೊಟ್ಟಿಗೆಯ ಮರ' ಕಥೆಯಲ್ಲಿ ಬಹುಮಟ್ಟಿಗೆ ಅದೇ ರೀತಿಯಲ್ಲಿ ಬಂದಿವೆ.

1. "ಪೊಕ್ಕದೆ" (ಸುಮ್ಮನೆ), "ಸುಳಿಗಾಳಿ", ಇವು ದ್ವಂದ್ವಾರ್ಥವುಳ್ಳ ಮೋಸ ಮಾಡುವ ಹೆಸರುಗಳು.

2. ಇಟ್ಟುವು ಸಾಹುಕಾರನಿಗೆ ಕೊಟ್ಟಿಗೆಯು ಮರವೆಂಬ ಸುಳ್ಳು ಮರವನ್ನು ಮಾರಾಟ ಮಾಡುತ್ತಾನೆ.

ಈ ದೃಷ್ಟಿಯಿಂದ ಈ ಕಥೆಗೆ ಎರಡು ಭಾಗಗಳಿವೆ. (1) ಸುಳ್ಳು ಹೆಸರುಗಳಿಂದ ವಂಚಿಸುವುದು. (2) ಸುಳ್ಳು ವ್ಯಾಪಾರದಿಂದ ವಂಚಿಸುವುದು.

ಇಲ್ಲಿ ತುಳುನಾಡಿನ ತಿಂಡಿಗಳಾದ 'ಅಪ್ಪ' ಮತ್ತು 'ಕೊಟ್ಟಿಗೆ'ಗಳನ್ನು ಬಳಸಿಕೊಂಡು, ಕಥೆಗೆ ಪ್ರಾದೇಶಿಕ ಸ್ವರೂಪವನ್ನು ಕೊಡಲಾಗಿದೆ.

ಈ ತುಳುಕಥೆಯನ್ನು ಹೋಲುವ ಮೂರು ಕನ್ನಡ ಜನಪದ ಕಥೆಗಳು ಸಿಗುತ್ತವೆ. [1,2,3].

## 12. ದರ್ಜಿಯ ಟೊಪ್ಪಿ

ಒಬ್ಬ ದರ್ಜಿಯು ಟೊಪ್ಪಿಗಳನ್ನು ಹೊಲಿದು ಮಾರಾಟ ಮಾಡಿ ಜೀವನ ಸಾಗಿಸುತ್ತಿದ್ದನು. ಒಮ್ಮೆ ಟೊಪ್ಪಿಯ ಗಂಟನ್ನು ಹೊತ್ತುಕೊಂಡು ಮಾರಲು ಹೊರಟವನು ದಾರಿಯಲ್ಲಿ ಒಂದು ಕೆರೆಯ ಬದಿಯಲ್ಲಿ ಬುತ್ತಿಯ ಊಟ ಮಾಡಿ, ಅಲ್ಲಿಯೇ ನಿದ್ರಿಸಿದನು. ಆಗ ಅಲ್ಲಿನ ಮರದ ಮೇಲಿದ್ದ ಮಂಗಗಳು ಆ ಟೊಪ್ಪಿಯ ಗಂಟನ್ನು ತೆಗೆದುಕೊಂಡು, ಮರವನ್ನು ಏರಿ, ಒಂದೊಂದು ಟೊಪ್ಪಿಯನ್ನು ಇಟ್ಟುಕೊಂಡವು. ಎಚ್ಚರಗೊಂಡ ಮೇಲೆ ದರ್ಜಿಯು ಯಾವ ಪ್ರಯತ್ನ ಮಾಡಿದರೂ ಮಂಗಗಳು ಟೊಪ್ಪಿಯನ್ನು ಕೊಡಲಿಲ್ಲ. ಕೊನೆಗೆ ಒಂದು ಉಪಾಯ ಮಾಡಿ, ಒಂದೊಂದು ಕಲ್ಲುಗಳನ್ನು ಮಂಗಗಳ ಕಡೆಗೆ ಎಸೆದನು. ಅದಕ್ಕೆ ಪ್ರತಿಯಾಗಿ ಮಂಗಗಳು ತಮ್ಮಲ್ಲಿದ್ದ ಟೊಪ್ಪಿಗಳನ್ನು ದರ್ಜಿಯ ಕಡೆಗೆ ಎಸೆದುವು. ದರ್ಜಿಯು ಅವುಗಳನ್ನೆಲ್ಲಾ ಸಂಗ್ರಹಿಸಿಕೊಂಡು, ಮಾರಲು ಹೋದನು.

ತುಳು ಜನಪದ ಕಥೆಯ ಸಂಕ್ಷಿಪ್ತ ಕನ್ನಡ ರೂಪಾಂತರವನ್ನು ಇಲ್ಲಿ ಕೊಡಲಾಗಿದೆ. ಇದು ಬಹಳ ಜನಪ್ರಿಯವಾಗಿ ಎಲ್ಲೆಡೆ ಲಭ್ಯವಾಗುವ ಒಂದು ಹಾಸ್ಯ ಕಥೆ. ಇಲ್ಲಿ ದರ್ಜಿಯ ಜಾಣತನವು ಪ್ರಧಾನವಾಗಿದೆ. B 786. Monkeys always copy men- ಎನ್ನುವ ಆಶಯವನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಈ ಕಥೆಯಲ್ಲಿ ಬೇರೆ ಬೇರೆ ಪಾಠಗಳು ಸಿಗುತ್ತವೆ. ಒಂದು ಪಾಠದ ಪ್ರಕಾರ, ಜಾಣನಾದ ವ್ಯಾಪಾರಿಯೊಬ್ಬನು ತನ್ನ ಟೊಪ್ಪಿಗಳನ್ನು ಅಪಹರಿಸಿದ ಮಂಗಗಳನ್ನು ಉಪಾಯದಿಂದ ಹಿಡಿದು, ಅವುಗಳನ್ನು ಮಾರಿ ಲಾಭ ಮಾಡುತ್ತಾನೆ.

ಮಂಗನ ಅನುಕರಣ ಪ್ರವೃತ್ತಿ ಈ ಕಥೆಯಲ್ಲಿ ಮುಖ್ಯವಾದುದು.

---

*1. ಹೆಚ್. ಜಿ. ಲಕ್ಕಪ್ಪಗೌಡ : (ಸಂ) 'ಚದುರ ಚೆನ್ನಯ್ಯ', 'ಜಾನಪದ ಕಥಾವಳಿ'

2. ಎಚ್. ಎಲ್. ನಾಗೇಗೌಡ : (ಸಂ) 'ದಡ್ಡ ಹುಡುಗ ಹೆಣ್ಣು ತಂದದ್ದು' (ಮಂಡ್ಯ ಜಿಲ್ಲೆಯ ಜನಪದ ಕಥೆ), "ಕರ್ನಾಟಕ ಜನಪದ ಕಥೆಗಳು".

3. ಎಚ್. ಎಲ್. ನಾಗೇಗೌಡ: (ಸಂ) 'ಮಗಳ ಗಂಡ ಅಳಿಮೈಯ' (ಚಿಕ್ಕಮಗಳೂರು ಜಿಲ್ಲೆಯ ಜನಪದ ಕಥೆ), "ಕರ್ನಾಟಕ ಜನಪದ ಕಥೆಗಳು".

## (13) ಹೆಡ್ಡ ಕುಮಾರ

ಅಜ್ಜಿ ಸಾಕಿದ ಮಗು ಕುಮಾರ. ಅವನು ಹೆಡ್ಡ. ಅಜ್ಜಿಯು ಕುಮಾರನಿಗೆ ಒಂದು ಹೆಣ್ಣು ನೋಡಿ ಮದುವೆ ಮಾಡಿಸುತ್ತಾಳೆ. ಒಂದು ಬಾರಿ ಹೆಂಡತಿ ಮನೆಗೆ ಹೋಗಲು ಕುಮಾರ ಹೊರಡುತ್ತಾನೆ. ಅಜ್ಜಿಯು ಅವನಲ್ಲಿ "ದೊಡ್ಡ ಮುಂಡಾಸು ಕಟ್ಟಿಕೊಳ್ಳಬೇಕು. ಕೆಳಗೆ ಕುಳಿತುಕೊಳ್ಳಬಾರದು. ಉಣ್ಣುವಾಗ, ತಿನ್ನುವಾಗ ಗಾಂಭೀರ್ಯ ಇಟ್ಟುಕೊಳ್ಳಬೇಕು" ಎಂದು ನೀತಿ ಮಾತು ಹೇಳಿದಳು. ಕುದುರೆ ಮೇಲೆ ಕುಳಿತು ಕೊಂಡು ಕುಮಾರ ಹೊರಟನು. ದಾರಿಯಲ್ಲಿ ಕುದುರೆ ಮೂತ್ರ ಹೊಯ್ಯುವುದನ್ನು ನೋಡಿ, ಈವರೆಗೆ ಅದನ್ನು ನೋಡಿಯೇ ಇಲ್ಲದ ಕುಮಾರನು 'ತನ್ನ ಕುದುರೆ ತೂತಾಗಿ ನೀರು ಸೋರುತ್ತಿದೆ. ಇದನ್ನು ಯಾರಿಗಾದರೂ ಕೊಟ್ಟುಬಿಡಬೇಕು' ಎಂದು ಯೋಚಿಸಿದನು. ಆಗ ಅವನಿಗೆ ಕೊಡಲಿ ಹಿಡಿದುಕೊಂಡಿದ್ದ ಒಬ್ಬ ಮನುಷ್ಯನು ಸಿಕ್ಕಿದನು. ಕುಮಾರನು ಅವನಿಗೆ ತನ್ನ ಕುದುರೆಯನ್ನು ಕೊಟ್ಟು, ತಾನು ಅವನ ಕೊಡಲಿಯನ್ನು ತೆಗೆದುಕೊಂಡನು. ಅದನ್ನು ತೆಗೆದುಕೊಂಡು ಮುಂದೆ ಹೋದಾಗ, ಬಿಸಿಲಿಗೆ ಆ ಕೊಡಲಿ ಚೆನ್ನಾಗಿ ಕಾದಿತ್ತು. ತನ್ನ ಕೊಡಲಿಗೆ ಜ್ವರ ಬಂದಿದೆಯೆಂದು ಭಾವಿಸಿದ ಕುಮಾರನು ದಾರಿಯಲ್ಲಿ ಒಬ್ಬನಿಗೆ ಅದನ್ನು ಕೊಟ್ಟು, ಅವನಿಂದ ಕಂಬಳಿಯನ್ನು ತೆಗೆದುಕೊಂಡನು. ಆ ಕಂಬಳಿಯ ದೊಡ್ಡ ಮುಂಡಾಸು ಕಟ್ಟಿ, ಅತ್ತೆ ಮನೆಯ ಎದುರು ಇದ್ದ ಒಂದು ಚಪ್ಪರದ ಮೇಲೆ ಕುಳಿತುಕೊಂಡನು. ಅವನ ಭಾವಮೈದುನರು ಅವನನ್ನು ಅಲ್ಲಿಂದ ಇಳಿಸಿ ಮನೆಗೆ ಕೊಂಡು ಹೋದರು. ಹೊಸ ಅಳಿಯನಿಗೆ ಅತ್ತೆ ಪಾಯಸ ಮಾಡಿದಳು. ಪಾಯಸವನ್ನು ಆವರೆಗೆ ನೋಡದ ಕುಮಾರನು ಅದು ರಾಗಿಯ ಗಂಜಿಯೆಂದು ಭಾವಿಸಿ "ಬೇಡ ಬೇಡ" ಎಂದನು. ಆಗ ಅವನ ಕೈ ಮೇಲೆ ಬಿದ್ದ ಒಂದು ಹನಿ ಪಾಯಸವನ್ನು ನೆಕ್ಕಿದಾಗ ಬಹಳ ರುಚಿ ಕಂಡಿತು. ಕೇಳಲು ನಾಚಿಕೆಯಾಗಿ ಹಾಗೆಯೇ ಮಲಗಿದನು. ರಾತ್ರಿಯ ಹೊತ್ತು ಆ ಪಾಯಸವನ್ನು ಮೈಮೇಲೆ ಹಾಕಿಕೊಂಡು ಮಲಗಿದನು. ಹಾಸಿಗೆಯ ಹತ್ತಿಯು ಇವನ ಮೈಮೇಲಿನ ಪಾಯಸಕ್ಕೆ ಅಂಟಿಕೊಂಡು, ಬೆಳಿಗ್ಗೆ ನೋಡುವಾಗ ವೇಷದಂತೆ ಕಾಣುತ್ತಿತ್ತು. ಮರುದಿನ ಊಟಕ್ಕೆ "ಕಣಿಲೆ" (ಎಳೆ ಬಿದಿರು) ಯ ಪಲ್ಯ ಮಾಡಿದರು. ಬಹಳ ರುಚಿ ಕಂಡ ಕುಮಾರನು, ತನ್ನ ಮನೆಗೆ ಬರುವಾಗ, ಅಲ್ಲಿ ಇದ್ದ ಬಿದಿರನ್ನು ಹೊತ್ತುಕೊಂಡು ತಂದನು. ಇವನನ್ನು ನೋಡಿದ ಅಜ್ಜಿಯು ಇವನ ಹೆಡ್ಡುತನಕ್ಕೆ ಮರುಗಿದಳು.

ತುಳು ಜನಪದ ಕಥೆಯ ಸಂಕ್ಷಿಪ್ತ ಕನ್ನಡ ರೂಪವನ್ನು ಇಲ್ಲಿ ಕೊಡಲಾಗಿದೆ. ಅಜ್ಜಿ ಸಾಕಿದ ಮಗು ಯಾವಾಗಲೂ ಹೆಡ್ಡನಾಗಿರುತ್ತಾನೆ ಎಂಬ ಜನಪ್ರಿಯ ಕಲ್ಪನೆಯ ಆಧಾರದ ಮೇಲೆ ಈ ಕಥೆ ರಚನೆಗೊಂಡಿದೆ. ಹೆಡ್ಡನ ಬೇರೆ ಬೇರೆ ಹೆಡ್ಡುತನದ ಕೆಲಸಗಳನ್ನು ಇಲ್ಲಿ ವರ್ಣಿಸಿ, ಹಾಸ್ಯ ಕಥೆಯನ್ನು ಸಿದ್ಧಮಾಡಲಾಗಿದೆ. ಅವನ ಮುಖ್ಯ ಹೆಡ್ಡು ವರ್ತನೆಗಳು :

1. ಕುದುರೆ ಮೂತ್ರ ಹೊಯ್ಯುವುದನ್ನು ನೋಡಿ, ಕುದುರೆಗೆ ತೂತಾಗಿದೆ ಎಂದು ಭಾವಿಸುವುದು. (J 1818.1.)

2. ಹೆಡ್ಡುತನದ ವ್ಯಾಪಾರಗಳು (Foolish bargains) (J 2080)

   (i) ಕುದುರೆಯನ್ನು ಮಾರಿ ಕೊಡಲಿ.
   (ii) ಕೊಡಲಿಯನ್ನು ಮಾರಿ ಕಂಬಳಿ.

3. ಬಿಸಿಲಿಗೆ ಬೆಚ್ಚಗಾದ ಕೊಡಲಿಯನ್ನು ಮುಟ್ಟಿ, ಅದಕ್ಕೆ ಜ್ವರ ಬಂದಿದೆಯೆಂದು ಭಾವಿಸುವುದು.

4. ಅತ್ತೆಯ ಮನೆಯಲ್ಲಿ ಮರ್ಯಾದಸ್ಥನ ನಟನೆ ಮಾಡಿ, ಪಾಯಸ ಕುಡಿದು, ಅವಾಂತರಕ್ಕೆ ಒಳಗಾಗುವುದು.

5. ಕಣಿಲೆಯ ಪಲ್ಯದ ರುಚಿ ಕಂಡು, ಅತ್ತೆಯ ಮನೆಯಿಂದ ಒಣಗಿದ ಬಿದಿರನ್ನು ಕೊಂಡು ಹೋಗು ವುದು. (J 1732. ignorance of certain foods)

## (14) ಅಂಜುಬುರುಕ ನೆಂಟ

ಒಂದು ಊರಿನಲ್ಲಿ ಗಂಡ ಹೆಂಡತಿ ಇದ್ದರು. ಗಂಡನ ಹೆಸರು 'ದೂಮಣ್ಣ' ಎಂದು ಹೆಂಡತಿಯ ಹೆಸರು 'ಪಾಯಸ' ಎಂದು. ಅವರು ಸ್ವಲ್ಪ ಗದ್ದೆ ವ್ಯವಸಾಯ ಮಾಡುತ್ತಿದ್ದರು. ಅವರಲ್ಲಿ 'ನೆಂಟ' ಮತ್ತು 'ದೊಣ್ಣೆ' ಎಂಬ ಹೆಸರಿನ ಎರಡು ಎತ್ತುಗಳು ಇದ್ದುವು. 'ನೋಡಿದೆ' (ತೂಯೆ) ಎಂಬ ಹೆಸರಿನ ಒಂದು ಬೆಕ್ಕು, 'ಹಿಡಿದು ಕೊಳ್ಳಿ' (ಪತೋನಿ) ಎಂಬ ಹೆಸರಿನ ಒಂದು ನಾಯಿಯೂ ಅವರಲ್ಲಿ ಇದ್ದುವು. ದೂಮಣ್ಣನು ಒಂದು ದಿನ ಮನೆಯ ಸಮೀಪದ ಹೊಲದಲ್ಲಿ ಉಳುತ್ತಿದ್ದನು, ಆಗ ಅವನ ಮನೆಗೆ ಒಬ್ಬ ನೆಂಟನು ಬಂದನು. ದೂಮಣ್ಣನು ಉಳುತ್ತಿದ್ದವನು, ಎತ್ತುಗಳನ್ನು ಸ್ವಲ್ಪ ನಿಲ್ಲಿಸಿ, ಬಂದ ನೆಂಟನಲ್ಲಿ ಯೋಗ ಕ್ಷೇಮ ವಿಚಾರಿಸಿ, ಅವರಲ್ಲಿ "ನೀನು ಮನೆಗೆ ಹೋಗು, ಅಲ್ಲಿ ಪಾಯಸ ಇದ್ದಾಳೆ" ಎಂದನು. ಪಾಯಸ ಇದ್ದಾಳೆ ಎಂದದ್ದು, ನೆಂಟನಿಗೆ 'ಪಾಯಸ ಇದೆ' ಎಂದಂತೆ ಕೇಳಿಸಿತು. ಅವನಿಗೆ ಚೆನ್ನಾಗಿ ಹಸಿವೆಯೂ ಆಗಿತ್ತು. ಬೇಗ ಬೇಗ ಮನೆಗೆ ಹೋಗಿ, ಹೊರಗಿನ ಜಗಲಿಯಲ್ಲಿ ಪಾಯಸದ ಊಟವನ್ನು ಕಾಯುತ್ತಾ ಕುಳಿತುಕೊಳ್ಳುತ್ತಾನೆ. ಮನೆಯ ಯಜಮಾನಿಗೆ ಒಳಗಿನ ಕೆಲಸಗಳಿಂದಾಗಿ ನೆಂಟನು ಬಂದ ಸಂಗತಿಯೇ ಗೊತ್ತಿಲ್ಲ. ಅಷ್ಟರಲ್ಲಿ ದೂಮಣ್ಣನು ಹೊಲವನ್ನು ಉತ್ತು ಎತ್ತುಗಳನ್ನು ಅಟ್ಟುತ್ತಾ ಬಂದ. ಹಟ್ಟಿಯ ಸಮೀಪ ಬಂದಾಗ, ದೊಣ್ಣೆ ಎನ್ನುವ ಎತ್ತು ಗುಡ್ಡಕ್ಕೆ ಓಡುತ್ತದೆ. ಆಗ ಅವನು ಹೆಂಡತಿಯನ್ನು ಕರೆದು "ದೊಣ್ಣೆಯನ್ನು ಒಮ್ಮೆ ಅಟ್ಟುತ್ತಾ ಬನ್ನಿರಿ. ನಾನು ನೆಂಟನನ್ನು ಕಟ್ಟಿ ಹಾಕುತ್ತೇನೆ" ಎಂದು ಹೇಳಿದ. ಇದು ನೆಂಟನಿಗೆ ಕೇಳಿಸಿತು. ಈಗ ಇವರು ನನ್ನನ್ನು ಕಟ್ಟಿಹಾಕಿ ದೊಣ್ಣೆಯಲ್ಲಿ ಪೆಟ್ಟುಹೊಡೆಯುತ್ತಾರೆ ಎಂದು ಭಾವಿಸಿ, ಓಡಿ ಹೋಗಿ ಬೈಹುಲ್ಲಿನ ರಾಶಿಯಲ್ಲಿ ಅಡಗಿ ಕುಳಿತುಕೊಂಡನು. ಈ ಕಡೆ ಇವರು ಗಂಡ ಹೆಂಡತಿ ಎತ್ತುಗಳನ್ನು ಕಟ್ಟಿಹಾಕಿ ಬರುವಾಗ, ಮನೆಯಲ್ಲಿ ದೂಮಣ್ಣನಿಗೆ ನೆಂಟ ಕಾಣು ವುದಿಲ್ಲ. ಅವನು ನೇರವಾಗಿ. ಬಂದು ಊಟಕ್ಕೆ ಕುಳಿತು, ಬೆಕ್ಕಿಗೆ ಅನ್ನ ಹಾಕುವುದಕ್ಕಾಗಿ ಅದನ್ನು "ನೋಡಿದೆ ನೋಡಿದೆ" (ತೂಯೇ, ತೂಯೇ) ಎಂದು ಕರೆದ. ಇದನ್ನು ಕೇಳಿ ಬೈಹುಲ್ಲಿನ ರಾಶಿಯಲ್ಲಿ ಅಡಗಿ ಕುಳಿತಿದ್ದ ನೆಂಟನಿಗೆ ಹೆದರಿಕೆ ಸುರುವಾಯಿತು. ಅವನು ಅಲ್ಲಿಂದ ಓಡಲು ಸುರುಮಾಡಿದ. ದೂಮಣ್ಣನು ನಾಯಿಗೆ ಅನ್ನ ಹಾಕಲು ಅದನ್ನು "ಹಿಡಿದುಕೊಳ್ಳಿ, ಹಿಡಿದುಕೊಳ್ಳಿ" (ಪತೋನಿ, ಪತೋನಿ) ಎಂದು ಕರೆದ. ಅದನ್ನು ಕೇಳಿದ ನೆಂಟನು ಮತ್ತೂ ಜೋರಾಗಿ ಓಡಿದ. ಹಾಗೆ ಓಡಿದ ನೆಂಟ ಮತ್ತೆ ಹಿಂದಕ್ಕೆ ಬಂದೇ ಇಲ್ಲ.

ಇದು ತುಳು ಜನಪದ ಕತೆಯೊಂದರ ಸಂಕ್ಷಿಪ್ತ ಕನ್ನಡ ರೂಪಾಂತರ. ಕನ್ನಡದಲ್ಲಿಯೂ ಜನಪ್ರಿಯ ವಾಗಿರುವ ಈ ಕತೆಯು ಜಗತ್ತಿನ ಜನಪದ ಕಥೆಗಳಲ್ಲಿಯೂ ಸಿಗುತ್ತದೆ.

ವರ್ಗ 1530. ಒಬ್ಬ ತನ್ನ ನಾಯಿಗಳಿಗೆ 'ಕುರುಬ' ಮತ್ತು 'ದೊಣ್ಣೆಯನ್ನು ಕೊಡು' ಎಂದು ಹೆಸ ರಿಡುವನು. ನಾಯಿಗಳಿಗೆ ತಿಂಡಿ ಹಾಕಿ ಕರೆಯುವಾಗ, ಕುರುಬ, ದೊಣ್ಣೆಯನ್ನು ಕೊಡು ಎಂದು ಕೂಗುವನು. ತನ್ನನು ಹೊಡೆಯಲು ಕುರುಬನನ್ನು ದೊಣ್ಣೆ ಕೇಳುತ್ತಿದ್ದಾನೆ ಎಂದು ಭಾವಿಸಿ, ಕಳ್ಳ ಓಡಿ ಹೋಗುವಿಕೆ. (ಆಶಯ : 2493).

ತುಳುವಿನ ಜನಪದ ಕಥೆಯಲ್ಲಿ ಬರುವ ಇಂತಹ ಹೆಸರುಗಳು :

1) ಪಾಯಸ = ಹೆಂಡತಿಯ ಹೆಸರು,

2) ತೂಯೆಂ (ನೋಡಿದೆ) — ಬೆಕ್ಕಿನ ಹೆಸರು.

3) ಪತೋನಿ (ಹಿಡಿದುಕೊಳ್ಳಿ) — ನಾಯಿಯ ಹೆಸರು.

4) 'ನೆಂಟ' ಮತ್ತು 'ದೊಣ್ಣೆ' — ಎತ್ತುಗಳ ಹೆಸರುಗಳು.

ಕನ್ನಡ ಜನಪದ ಕತೆಗಳಲ್ಲಿಯೂ ತುಳು ಕತೆಯನ್ನೇ ಹೋಲುವ ಇಂತಹ ಕತೆಗಳು ಸಿಗುತ್ತವೆ: [1,2]

## (15) ಹೆಡ್ಡ ದೂಮ

ಒಂದೂರಿನಲ್ಲಿ ದೂಮ ಎಂಬ ಹೆಸರಿನ ಒಬ್ಬ ಹೆಡ್ಡನಿದ್ದ. ಅವನಿಗೆ ಕೆಲಸ ಮಾಡಲು ತಿಳಿಯದು. ಅವನ ಹೆಂಡತಿ ದುಡಿದು ತಂದುದನ್ನು, ಕುಳಿತು ತಿನ್ನುತ್ತಿದ್ದ. ಒಮ್ಮೆ ಅವನ ಹೆಂಡತಿ ದೂಮನಲ್ಲಿ "ನೀವು ಬೇರೆ ಏನು ಕೆಲಸ ಮಾಡಲೂ ತಿಳಿಯದಿದ್ದರೆ, ಕಳ್ಳತನವನ್ನಾದರೂ ಮಾಡಿ. ಮನೆಯವರೆಲ್ಲ ತರಕಾರಿ ಕೊಯ್ಯಲು ಹೋದ ವೇಳೆ ನೋಡಿ, ಮನೆಗಳಿಗೆ ನುಗ್ಗಿ ಕಳ್ಳತನ ಮಾಡಿ ತಿನ್ನಿರಿ" ಎಂದಳು. ದೂಮನು ಅದೇ ರೀತಿ ಮಾಡುತ್ತಿದ್ದ. ಆದರೆ ಒಂದು ಬಾರಿ ತೆಂಗಿನಕಾಯಿ ಕಳ್ಳತನ ಮಾಡುತ್ತಿರುವಾಗ ಸಿಕ್ಕಿಬಿದ್ದ. ಅಲ್ಲಿಗೆ ಬಂದ ಅವನ ಹೆಂಡತಿ ಅವನನ್ನು ಗಟ್ಟಿಯಾಗಿ "ಚೀನೀಕಾಯಿ ಗಳೊ ಚೀನೀಕಾಯಿ ಗಳೊ" ಎಂದಳು. ದೂಮನು ಕಟ್ಟಿಹಾಕಿದಲ್ಲಿಂದಲೇ, "ತೆಂಗಿನಕಾಯಿ ಬಿಚ್ಚಂಡೀ, ತೆಂಗಿನಕಾಯಿ ಬಿಚ್ಚಂಡೀ" ಎಂದ. ಜನರು ಇವರ ತಮಾಷೆ ನೋಡಿ, ದೂಮನನ್ನು ಬಿಟ್ಟುಬಿಟ್ಟರು. ಇನ್ನೊಂದು ಬಾರಿ, ಊರಿನ ಜಾತ್ರೆಗೆ ದೂಮನನ್ನು ಅವನ ಹೆಂಡತಿ ಕಳುಹಿಸಿದಳು. ಅವನು ಅಲ್ಲಿನ ಗದ್ದಲಕ್ಕೆ ತಲೆ ತಿರುಗಿ ಒಂದು ಕಡೆ ನಿದ್ದೆಮಾಡಿಬಿಟ್ಟ. ಆಗ ತುಂಟ ಮಕ್ಕಳು ತೆರೆದಿದ್ದ ಅವನ ಬಾಯಿಯೊಳಗೆ ಕಡ್ಲೆ, ಮಿಟಾಯಿಗಳನ್ನು ಹಾಕಿದರು. ನಿದ್ರೆಯಲ್ಲಿಯೇ ಸಿಹಿಯಾಗಿ ಅದನ್ನು ಚಪ್ಪರಿಸಿದ. ಮರುದಿನ ಅವನ ಹೆಂಡತಿ 'ಹೇಗಿತ್ತು ಜಾತ್ರೆ' ಎಂದು ಕೇಳಿದಾಗ 'ಮೊದಲು ಸಾಧಾರಣ ಇತ್ತು. ನಡುರಾತ್ರಿಯಾಗುವಾಗ ಸಿಹಿ ಸಿಹಿಯಾಯಿತು' ಎಂದ. ಅವನ ಸಂಗತಿ ಗೊತ್ತಾದ ಹೆಂಡತಿ ಅವನ ಹೆಡ್ಡುತನಕ್ಕೆ ಮರುಗಿದಳು.

ಇದು ತುಳು ಜನಪದ ಕತೆಯ ಸಂಕ್ಷಿಪ್ತ ಕನ್ನಡ ರೂಪ. ಇಲ್ಲಿ ಹೆಡ್ಡ ಗಂಡನೊಬ್ಬನ ಹೆಡ್ಡುತನದ ಕೆಲಸಗಳನ್ನು ತಿಳಿಸಲಾಗಿದೆ. (J 1702. Stupid Husband.)

1. ಹೆಡ್ಡನು ಕಳ್ಳತನ ಮಾಡುವಾಗ ಸಿಕ್ಕಿ ಬೀಳುವುದು (J. 2461. 1.7.1. Numskull as thief).

2. ಜಾಣ ಹೆಂಡತಿಯು ಅವನನ್ನು ಬಿಡಿಸುವುದು (J. 1112. Clever wife).

3. ಹೆಡ್ಡನು ಜಾತ್ರೆಗೆ ಹೋಗಿ, ನಿದ್ದೆಮಾಡಿ, ಏನೂ ನೋಡದೆ ಬರುವುದು.

ವಿನೋದ ವೃತ್ತಾಂತ (Anecdote) ವರ್ಗದಲ್ಲಿ ಸಾಮಾನ್ಯವಾಗಿ ಇಂತಹ ಹೆಡ್ಡರ ಕಥೆಗಳು ಸಿಗುತ್ತವೆ.

---

1. ಡಾ. ಜೀ. ಶಂ. ಪರಮಶಿವಯ್ಯ : (ಸಂ) : 'ನೆಂಟನನ್ನು ಕಟ್ಟು', 'ಕನ್ನಡ ಜನಪದ ಕಥೆಗಳು'.

2. ರಾಗೌ (ಸಂ) : 'ನೆಂಟ', 'ಕರ್ನಾಟಕ ಜನಪದ ಕಥೆಗಳು'.

## 1875—1999 ಸುಳ್ಳು ಹೇಳುವಿಕೆಯ ಕಥೆಗಳು (Tales of Lying)

### (1) ಒಂದು ಭತ್ತಕ್ಕೆ ಒಂದು ಅಕ್ಕಿ

ಒಂದು ಊರಿನಲ್ಲಿ ಒಬ್ಬ ಅರಸು ಇದ್ದನು. ಅವನಿಗೆ ಒಬ್ಬ ಮಗ. ಅರಸನ ಮಗನಿಗೂ ಮಂತ್ರಿಯ ಮಗನಿಗೂ ಬಹಳ ಸ್ನೇಹಾಚಾರ. ಎಲ್ಲಿಗೆ ಹೋಗುವುದಾದರೂ ಎಲ್ಲಿಂದ ಬರುವುದಿದ್ದರೂ ಎಲ್ಲಿ ನೋಡಿದರೂ ಅವರು ಒಟ್ಟಿಗೇ ಇರುವುದು. ಒಬ್ಬನನ್ನು ಬಿಟ್ಟು ಇನ್ನೊಬ್ಬ ಇರುತ್ತಿರಲಿಲ್ಲ. ಒಂದು ದಿನ ಈ ಅರಸುಮಗ ಮತ್ತು ಮಂತ್ರಿಮಗ ಕುದುರೆಯಲ್ಲಿ ಕುಳಿತುಕೊಂಡು ಹೋಗುವಾಗ, ಇಬ್ಬರು ದಾಸಿಯರು ಇವರನ್ನು ನೋಡಿದರು. ಒಬ್ಬಳು ಹೇಳಿದಳು—"ಕೋಲು ಕಡಿದರೆ ಎರಡು ಆಗಬಹುದು, ನೀರು ಕಡಿದರೆ ಎರಡು ಆಗಲಾರದು ಎಂದು ಹೇಳಿದಂತೆ ಅರಸುಮಗನೂ ಮಂತ್ರಿಮಗನೂ ಇದ್ದಾರೆ. ಅವರ ನಡುವೆ ಜಗಳ ತರಲು ಸಾಧ್ಯವೇ ಇಲ್ಲ." ಆಗ ಇನ್ನೊಬ್ಬಳು "ಇಬ್ಬರ ನಡುವೆ ದ್ವೇಷ ಹುಟ್ಟಿಸುವುದೇನು ಮಹಾ" ಎನ್ನುತ್ತಾಳೆ. ಆಗ ಮೊದಲನೆಯವಳು "ಸಾಧ್ಯವಿಲ್ಲ" ಎನ್ನುತ್ತಾಳೆ. ಅದಕ್ಕೆ ಆವಳು "ಸಾಧ್ಯವುಂಟು" ಎನ್ನುತ್ತಾಳೆ. ಮಾತಿಗೆ ಮಾತು ಬೆಳೆಯುತ್ತದೆ. ಕಡೆಗೆ ಎರಡನೆಯ ದಾಸಿಯು "ಅರಸುಮಗನಿಗೂ ಮಂತ್ರಿಮಗನಿಗೂ ದ್ವೇಷ ಹುಟ್ಟಿಸುತ್ತೇನೆ" ಎಂದು ಪ್ರತಿಜ್ಞೆ ಮಾಡುತ್ತಾಳೆ. ಅವಳು ಹೋಗಿ ಮಂತ್ರಿಮಗನನ್ನು ಹತ್ತಿರ ಕರೆದು ಗುಟ್ಟಿನಲ್ಲಿ ಹೇಳುತ್ತಾಳೆ— "ಒಂದು ಭತ್ತಕ್ಕೆ ಒಂದು ಅಕ್ಕಿ" ಎಂದು. "ಇಷ್ಟೇನೋ" ಎಂದು ಮಂತ್ರಿ ಮಗನು ಅರಸುಮಗನ ಬಳಿಗೆ ಹೋಗುತ್ತಾನೆ. ಆಗ ಅರಸುಮಗನು ಮಂತ್ರಿಮಗನಲ್ಲಿ "ದಾಸಿಯು ನಿನ್ನಲ್ಲಿ ಏನು ಹೇಳಿದ್ದು ?" ಎಂದು ಕೇಳುತ್ತಾನೆ. ಆಗ ಮಂತ್ರಿ ಮಗನು "ಏನೂ ಇಲ್ಲ, ಒಂದು ಭತ್ತಕ್ಕೆ ಒಂದು ಅಕ್ಕಿ. ಅಷ್ಟೇ" ಎನ್ನುತ್ತಾನೆ. ಇದರಿಂದ ಅರಸುಮಗನಿಗೆ ಸಮಾಧಾನವಾಗುವುದಿಲ್ಲ—"ಅಷ್ಟೇ ಇರಲಾರದು; ಅಷ್ಟೇ ಆಗಿದ್ದರೆ ಗುಟ್ಟಿನಲ್ಲಿ ಹೇಳುತ್ತಾಳೆಯೇ ? ಬೇರೆ ಏನೋ ಇರಬೇಕು. ನೀನೇ ಹೇಳುವುದಿಲ್ಲ" ಎಂದು ಕೋಪದಲ್ಲಿ ಹೇಳುತ್ತಾನೆ.

ಅರಮನೆಗೆ ಬರುವಾಗ ಅರಸುಮಗ ಬೇರೆ, ಮಂತ್ರಿಮಗ ಬೇರೆ ಆಗುತ್ತಾರೆ. ಅರಸು ಮಗನು ಸಿಟ್ಟಿನಿಂದ ತಂದೆಯಲ್ಲಿ ಹೇಳುತ್ತಾನೆ—"ನಾಳೆ ಮುಂಜಾವಕ್ಕೆ ಮೊದಲು ಮಂತ್ರಿ ಮಗನನ್ನು ಕೊಲ್ಲಬೇಕು; ಇಲ್ಲದಿದ್ದರೆ ನಾನು ಜೀವ ತೆಗೆದುಕೊಂಡು ಸಾಯುತ್ತೇನೆ." ಅರಸನು ಕಂಗಾಲಾಗಿ, "ಏನು ವಿಷಯ ? ಯಾಕೆ ಹೀಗೆ ಕೋಪ ಮಾಡುತ್ತೀ ? ಅಂತಹದ್ದು ಏನು ಆಯಿತು ?" ಎಂದು ಕೇಳಿದಾಗ, ಮಗ ಹೇಳಿದ— "ನಮ್ಮ ಅರಮನೆಯ ದಾಸಿಯು ಮಂತ್ರಿಮಗನಲ್ಲಿ ಏನೋ ಗುಟ್ಟಿನಲ್ಲಿ ಹೇಳಿದಳು. ಆದರೆ ನಾನು ಎಷ್ಟು ಕೇಳಿದರೂ ಅವನು ಅದನ್ನು ತಿಳಿಸಲಿಲ್ಲ, ಅವನಿಗೆ ಅಹಂಕಾರ ಜಾಸ್ತಿಯಾಗಿದೆ. ಅವನನ್ನು ನಾಳೆ ಮುಂಜಾವದ ಮೊದಲು ಕೊಲ್ಲಬೇಕು, ಇಲ್ಲದಿದ್ದರೆ ನಾನು ಸಾಯುತ್ತೇನೆ."

ಅರಸನು ಈ ಸುದ್ದಿಯನ್ನು ಮಂತ್ರಿಯಲ್ಲಿ ಹೇಳಿ ವಿಚಾರ ಮಾಡುತ್ತಾನೆ. ಏನೂ ಮಾಡಲಾಗದೆ, ಮಂತ್ರಿಮಗನನ್ನು ಕೊಲ್ಲಲು ಆಜ್ಞೆ ಮಾಡುತ್ತಾನೆ. ಆದರೆ ಬುದ್ಧಿವಂತನಾದ ಮಂತ್ರಿಯು "ಇವತ್ತು ಕೊಲ್ಲಬೇಕು ಎಂದು ಹೇಳಿದವನು, ನಾಳೆ ಅವನ ಪ್ರಾಣವನ್ನು ತರಬೇಕು ಎಂದು ಹೇಳಬಹುದು. ಏಕೆಂದರೆ ಅರಸು ಮಗನು ಇನ್ನೂ ಸರಿಯಾಗಿ ಪ್ರಾಯಕ್ಕೆ ಬಂದಿಲ್ಲ. ಅವನ ಕೋಪಕ್ಕೆ ನಾನು ಸಮಾಧಾನ ಮಾಡುತ್ತೇನೆ" ಎಂದು ರಾಜನಲ್ಲಿ ಹೇಳಿದನು. ಮರುದಿನ ಬೆಳಿಗ್ಗೆ ಮಂತ್ರಿಯು ತನ್ನ ಮಗನನ್ನು ಯಾರೂ ನೋಡದ ಸ್ಥಳಕ್ಕೆ ಕಳುಹಿಸಿ, ಅವನನ್ನು ಕೊಂದೆ ಎಂದು ರಕ್ತದ ಖಡ್ಗವನ್ನು ತೋರಿಸಿ, ಸಮಾಧಾನ ಮಾಡುತ್ತಾನೆ.

ಅದೇ ದಿನ ಸಂಜೆ ಅರಸು ಮಗನು ತಿರುಗಾಡುತ್ತಾ ಒಂದು ಹೊಳೆಯ ಬದಿಯಲ್ಲಿ ಹೋಗಿ ಕುಳಿತು ಕೊಂಡಿದ್ದಾನೆ. ಅಷ್ಟರಲ್ಲಿ ಹೊಳೆಯ ಆಚೆ ಬದಿಯಲ್ಲಿ ಅಲ್ಲಿನ ರಾಜ್ಯದ ರಾಜನ ಮಗಳು ಇವನನ್ನು ನೋಡಿ, ಅವನ ಮೇಲೆ ಮನಸ್ಸಾಗಿ, ಒಂದು ಮಾವಿನ ಎಲೆಯಲ್ಲಿ ತಲೆಯ ಒಂದು ಕೂದಲನ್ನೂ ಉಗುರನ್ನೂ ಒಂದು ಕೆಂಪು ಹೂವನ್ನೂ ಕಟ್ಟಿ, ಈಚೆಯ ಬದಿಗೆ ಅರಸು ಮಗನಿಗೆ ಸಿಕ್ಕುವಂತೆ ಬಿಸಾಡಿ ಹೋದಳು. ಈ ಕಟ್ಟು ನೀರಿನಲ್ಲಿ ತೇಲುತ್ತಾ ಅರಸುಮಗನ ಬಳಿಗೆ ಬರುತ್ತದೆ. ನೋಡಿ ಅದನ್ನು ತೆಗೆದುಕೊಂಡು, ಅದರ ಒಳಗೆ ಇದ್ದ ತಲೆಕೂದಲನ್ನೂ ಉಗುರನ್ನೂ ಹೂವನ್ನೂ ನೋಡಿ, ಯಾರೋ ನನಗಾಗಿಯೇ ಕಳುಹಿಸಿದ್ದಾರೆ ಎಂದು ಆಲೋಚನೆ ಮಾಡುತ್ತಾನೆ. ಆದರೆ ಅದರ ಅರ್ಥ ಅವನಿಗೆ ಆಗುವುದಿಲ್ಲ. ಅವನಿಗೆ ತಲೆಯೇ ಹಾಳಾದಂತೆ ಆಗುತ್ತದೆ. ಆಷ್ಟಾಗುವಾಗ ಮಂತ್ರಿಮಗನನ್ನು ಜ್ಞಾಪಿಸಿಕೊಳ್ಳುತ್ತಾನೆ. "ಮಂತ್ರಿಮಗನು ಇರುತ್ತಿದ್ದರೆ, ಇದಕ್ಕೆ ಅರ್ಥ ಹೇಳುತ್ತಿದ್ದನು" ಎಂದು ಆಲೋಚನೆ ಮಾಡಿ, ಅರಮನೆಗೆ ಬಂದು ತಂದೆಯಲ್ಲಿ, "ನನಗೆ ಮಂತ್ರಿ ಮಗ ಬೇಕು. ಅವನನ್ನು ಬದುಕಿಸಿಕೊಡಿ" ಎಂದು ಹಠ ಹಿಡಿಯುತ್ತಾನೆ. "ಇಲ್ಲದಿದ್ದರೆ ನಾನೂ ಉಳಿಯುವುದಿಲ್ಲ" ಎಂದು ಹೇಳುತ್ತಾನೆ. ಅರಸನಿಗೆ ಮಂತ್ರಿ ಹೇಳಿದ ಮಾತು ನೆನಪಾಗುತ್ತದೆ. ಮಂತ್ರಿಯಲ್ಲಿ ಹೋಗಿ ಹೇಳಿ, ಮಂತ್ರಿಮಗನನ್ನು ಒಳಗೆ ಬಿಡುತ್ತಾನೆ. ಅರಸುಮಗನಿಗೆ ಸಮಾಧಾನವಾಗುತ್ತದೆ. ಆಮೇಲೆ ಹೊಳೆಯಲ್ಲಿ ಸಿಕ್ಕಿದ ಕಟ್ಟನ್ನು ಕೊಟ್ಟು, "ಇದರ ಅರ್ಥ ಏನಿರಬಹುದು ?" ಎಂದು ಕೇಳಿದಾಗ, ಮಂತ್ರಿ ಮಗನು ಆಲೋಚನೆ ಮಾಡಿ ಹೇಳುತ್ತಾನೆ: "ತಲೆ ದೇಶದಲ್ಲಿ ಉಗುರು ಎಂಬ ಊರಿನಲ್ಲಿ ಒಂದು ಮಾವಿನ ಮರದ ಹತ್ತಿರ ಇರುವ ಅರಮನೆಯಲ್ಲಿ ಕುಸುಮ ಎನ್ನುವ ಹೆಣ್ಣು ಇದ್ದಾಳೆ. ಅವಳಿಗೆ ನಿನ್ನ ಮೇಲೆ ಮನಸ್ಸಾಗಿದೆ." ಇಷ್ಟು ಹೇಳುವಾಗ ಅರಸು ಮಗನಿಗೆ ಬಹಳ ಆಶ್ಚರ್ಯವಾಗುತ್ತದೆ. ಮತ್ತೊಂದು ದಿನ ಆ ರಾಜಕುಮಾರಿ ಇದ್ದಲ್ಲಿಗೆ ಹುಡುಕಿಕೊಂಡು ಹೋಗುತ್ತಾರೆ. ಮಂತ್ರಿಮಗನು ಹೇಳಿದಂತೆಯೇ ಹೋದಾಗ, ಅವಳು ಸಿಕ್ಕುತ್ತಾಳೆ. ಮತ್ತೆ ಆ ರಾಜಕುಮಾರಿಗೂ ಅರಸುಮಗನಿಗೂ ಮದುವೆಯಾಗುತ್ತದೆ.

ಇಲ್ಲಿ ತುಳು ಜನಪದ ಕಥೆಯ ಸಂಪೂರ್ಣ ಕನ್ನಡ ಅನುವಾದವನ್ನು ಕೊಡಲಾಗಿದೆ. ಹಾಸ್ಯ ಕಥೆಗಳಲ್ಲಿನ ಒಂದು ವರ್ಗವಾದ ಸುಳ್ಳು ಹೇಳುವಿಕೆಯ ಕಥೆಗಳಿಗೆ ಇದು ಒಂದು ಉದಾಹರಣೆಯಾಗಿ ಸಿಗುತ್ತದೆ. ಕನ್ನಡದಲ್ಲಿಯೂ ಬೇರೆ ಬೇರೆ ಪ್ರದೇಶಗಳಲ್ಲಿ ಈ ಕಥೆ ದೊರೆಯುತ್ತದೆ.

ಈ ಕಥೆಯ ಮುಖ್ಯ ಆಶಯ :

K 2131.3. Woman destroys men's friendship by pretending to whisper to one.

ಇಲ್ಲಿ ದಾಸಿಯು "ಏನೂ ವಿಶೇಷವಿಲ್ಲ" ಎಂಬ ಅರ್ಥದ "ಒಂದು ಭತ್ತಕ್ಕೆ ಒಂದು ಅಕ್ಕಿ" ಎನ್ನುವ ಮಾತನ್ನು ಮಂತ್ರಿಮಗನಲ್ಲಿ ಗುಟ್ಟಿನಲ್ಲಿ ಹೇಳುತ್ತಾಳೆ. ರಾಜಕುಮಾರ ಮತ್ತು ಮಂತ್ರಿಕುಮಾರರ ನಡುವೆ ವೈಷಮ್ಯಕ್ಕೆ ಈ ಘಟನೆ ಕಾರಣವಾಗುತ್ತದೆ. ಆದರೆ ಜಾಣಮಂತ್ರಿಯ ಮೂಲಕ (J 1115.10.2.) ಮರೆ ಮಾಡಲ್ಪಟ್ಟ ಮಂತ್ರಿಮಗ, ರಾಜಕುಮಾರನಿಗೆ ಸಕಾಲದಲ್ಲಿ ಸಹಾಯಕ್ಕೆ ಬರುತ್ತಾನೆ.

ಈ ಕಥೆಯ ಎರಡನೆಯ ಭಾಗದಲ್ಲಿ ರಾಜಕುಮಾರನನ್ನು ಒಬ್ಬಳು ರಾಜಕುಮಾರಿ ಮೋಹಿಸುವುದು, ಅವಳು ವಸ್ತು ಸಂಕೇತಗಳ ಮೂಲಕ ತನ್ನ ಭಾವನೆಯನ್ನು ವ್ಯಕ್ತಪಡಿಸುವುದು, ಆ ಸಂಕೇತಗಳನ್ನು ವಿವರಿಸಲು ಮಂತ್ರಿಯ ಮಗನು ರಾಜಕುಮಾರನಿಗೆ ಸಹಾಯಕನಾಗುವುದು—ಇವು ಪ್ರಮುಖ ಘಟನೆಗಳು.

ವಸ್ತು ಸಂಕೇತಗಳ ಸ್ವರೂಪ ಭಿನ್ನವಾಗುತ್ತಾ ಹೋಗುವುದನ್ನು ಬೇರೆಬೇರೆ ಪಾಠಗಳಲ್ಲಿ ಕಾಣುತ್ತೇವೆ. ಇಲ್ಲಿನ ವಸ್ತುಸಂಕೇತ: ಮಾವಿನ ಎಲೆಯಲ್ಲಿ ತಲೆಕೂದಲು, ಉಗುರು, ಒಂದು ಕೆಂಪು ಹೂವು ಕಟ್ಟಿ ಕಳುಹಿಸುವುದು.

ಅದರ ವಿವರಣೆ : ತಲೆ ದೇಶದಲ್ಲಿ ಉಗುರು ಎಂಬ ಊರಿನಲ್ಲಿ ಒಂದು ಮಾವಿನ ಮರದ ಹತ್ತಿರ ಇರುವ ಅರಮನೆಯಲ್ಲಿ ಕುಸುಮ ಎಂಬ ಹೆಣ್ಣಿಗೆ ಆ ರಾಜಕುಮಾರನಲ್ಲಿ ಮನಸ್ಸಾಗಿದೆ. ಇದು 'Object Lesson' ನ ಮಾದರಿ.

ಈ ಕಥೆಯನ್ನು ಹೋಲುವ ಕನ್ನಡ ಜನಪದ ಕಥೆಗಳು ಅಧಿಕ ಸಂಖ್ಯೆಯಲ್ಲಿ ಪ್ರಾದೇಶಿಕವಾಗಿ ಬೇರೆ ಬೇರೆ ಸಂಕಲನಗಳಲ್ಲಿ ದೊರೆಯುತ್ತವೆ :

1. ಧವಳಶ್ರೀ : (ಸಂ) ; 'ಕೊಬ್ಬರಿ ಶೆಟ್ಟಿ ಮಗಳು', 'ಜಾನಪದ ಕಥಾಮೃತ', ಸಂಪುಟ 1.
2. ಎಚ್. ಜೆ. ಲಕ್ಕಪ್ಪಗೌಡ (ಸಂ) : "ಪದ್ಮಾವತಿ", 'ಜಾನಪದ ಕಥಾವಳಿ'
3. ಎಚ್. ಎಲ್. ನಾಗೇಗೌಡ (ಸಂ) : "ಕರ್ನಾಟಕದ ಜನಪದ ಕಥೆಗಳು :
    1) 'ಜೀವದ ಗೆಳೆಯರು' (ಕಲ್ಬುರ್ಗಿ ಜಿಲ್ಲೆ).
    2) 'ಶೆಟ್ಟಿ ಸೊಸೆ' (ಮಂಡ್ಯ ಜಿಲ್ಲೆ).



# ತುಳು ಜನಪದ ಕಥೆಗಳ ಸಂಕ್ಷಿಪ್ತ ಆಶಯ ಸೂಚಿ

## (A Short Motif Index of Tulu Folktales)

ಸುಮಾರು ಐವತ್ತು ತುಳು ಜನಪದ ಕಥೆಗಳನ್ನು ಅಧ್ಯಯನಮಾಡಿ, ಅವುಗಳಲ್ಲಿ ಕಂಡುಬರುವ ಆಶಯಗಳ (Motif) ಸೂಚಿ (Index) ಯನ್ನು ಸಿದ್ಧಪಡಿಸಲಾಗಿದೆ. ಇಲ್ಲಿ ಬಳಸಿರುವ ಆಶಯ ಸಂಖ್ಯೆಗಳು Stith Thompson ಅವರ Motif-Index of Folk Literature, 6 vols ; Indiana University Press, Bloomington & London, 1966–ಇದರಿಂದ ಆರಿಸಿಕೊಂಡವುಗಳು. Stith Thompson ಅವರ ಈ ಆಶಯಸೂಚಿಯಲ್ಲಿ ಒಟ್ಟು 23 ಗುಂಪುಗಳಿವೆ. ವಸ್ತುವಿನ ಸ್ವರೂಪದ ದೃಷ್ಟಿಯಿಂದ ಈ ವಿಭಾಗಗಳು ಕಾಣಿಸುತ್ತವೆ :

A. ಪೌರಾಣಿಕ ಆಶಯಗಳು (Mythological Motifs)

B. ಪ್ರಾಣಿಗಳು (Animals)

C. ನಿಷಿದ್ಧತೆ (Taboo)

D. ಮಂತ್ರವಿದ್ಯೆ (Magic)

E. ಸತ್ತವರು (The Dead)

F. ಅದ್ಭುತಗಳು (Marvels)

G. ರಾಕ್ಷಸರು (Ogres)

H. ಪರೀಕ್ಷೆಗಳು (Tests)

J. ಬುದ್ಧಿವಂತರು ಮತ್ತು ದಡ್ಡರು (The Wise and the Foolish)

K. ಮೋಸಗಳು (Deceptions)

L. ಅದೃಷ್ಟ ಬದಲಾಗುವುದು (Reversal of Fortune)

M. ಭವಿಷ್ಯವನ್ನು ಮೊದಲೇ ತಿಳಿಯುವುದು (Ordaining the Future)

N. ಆಕಸ್ಮಿಕ ಮತ್ತು ವಿಧಿ (Chance and Fate)

P. ಸಮಾಜ (Society)

Q. ಬಹುಮಾನಗಳು ಮತ್ತು ಶಿಕ್ಷೆಗಳು (Rewards and Punishments)

R. ಬಂಧಿಗಳು ಮತ್ತು ತಲೆತಪ್ಪಿಸಿಕೊಂಡವರು (Captives and Fugitives)

S. ಅಸಹಜವಾದ ಕ್ರೌರ್ಯ (Unnatural Cruelty)

T. ಕಾಮ (Sex)

U. ಜೀವನದ ಸ್ವರೂಪ (The Nature of Life)

V. ಧರ್ಮ (Religion)

W. ವ್ಯಕ್ತಿತ್ವದ ಲಕ್ಷಣಗಳು (Tracits of Character)

X. ಹಾಸ್ಯ (Humor)

Z. ಆಶಯಗಳ ಇತರ ಗುಂಪುಗಳು (Miscellaneous Groups of Motifs)

ತುಳು ಜನಪದ ಕಥೆಗಳಲ್ಲಿ ಮೇಲಿನ 23 ವಿಷಯಗಳಲ್ಲಿ ಹೆಚ್ಚಿನವುಗಳಿಗೆ ಸಂಬಂಧಿಸಿದ ಆಶಯಗಳು ಕಾಣಿಸುತ್ತವೆ. ಇಲ್ಲಿ ಅಧ್ಯಯನಕ್ಕೆ ಬಳಸಿಕೊಂಡ ಸುಮಾರು 50 ಕಥೆಗಳಲ್ಲಿ C. ನಿಷಿದ್ಧತೆ, U. ಜೀವನದ ಸ್ವರೂಪ, V. ಧರ್ಮ, W. ವ್ಯಕ್ತಿತ್ವದ ಸ್ವರೂಪ : ಈ ವಿಷಯಗಳಿಗೆ ಸಂಬಂಧಿಸಿದ ಆಶಯಗಳು ನೇರವಾಗಿ ಸಿಗುವುದಿಲ್ಲ. ಆದರೆ ಅಡ್ಡ ಉಲ್ಲೇಖ (Cross reference) ದ ಮೂಲಕ ಈ ವಿಷಯಗಳ ಆಶಯಗಳನ್ನು ಗುರುತಿಸಬಹುದು. X. ಹಾಸ್ಯ : ಈ ವಿಷಯದ ಆಶಯಗಳನ್ನು ಇಲ್ಲಿ ಕೊಟ್ಟಿಲ್ಲ. ಇಲ್ಲಿನ ಆಶಯಗಳು ಪ್ರಧಾನವಾಗಿ ಬೇರೆ ವಿಷಯಗಳ ಅಡಿಯಲ್ಲಿ ಬರುತ್ತವೆ.

ತುಳು ಜನಪದ ಕಥೆಗಳ ಈ ಆಶಯ ಸೂಚಿಯಲ್ಲಿ Stith Thompson ಅವರ Motif Index of Folk literature ನ ಮಾದರಿಯಲ್ಲಿಯೇ ಒಂದೊಂದು ವಿಷಯದ ಕೆಳಗೆ ಬರುವ ಆಶಯಗಳನ್ನು ಅನುಕ್ರಮವಾಗಿ ಕೊಡುತ್ತಾ ಹೋಗಿದೆ. ಪ್ರತಿಯೊಂದು ಆಶಯ ಯಾವ ಕಥೆಯಲ್ಲಿ ಬರುತ್ತದೆ ಎನ್ನುವುದನ್ನು ಸೂಚಿಸಲು, ಆ ಕಥೆಯ ಹೆಸರನ್ನು ಆವರಣದೊಳಗೆ ಕೊಡಲಾಗಿದೆ. ಬೇರೆ ಬೇರೆ ಹೆಸರುಗಳುಳ್ಳ ಈ ಜನಪದ ಕಥೆಗಳ ಪೂರ್ಣಪಾಠವನ್ನು ಅಥವಾ ಮುಖ್ಯ ಸಾರಾಂಶವನ್ನು ಈ ಅಧ್ಯಾಯದ ಆರಂಭದಲ್ಲಿ ಕೊಡಲಾಗಿದೆ. ಅಲ್ಲಿ ಈ ಆಶಯಗಳ ಸಂದರ್ಭವನ್ನು ತಿಳಿದುಕೊಳ್ಳಬಹುದು. ಒಂದೇ ಆಶಯವು ಬೇರೆ ಬೇರೆ ಕಥೆಗಳಲ್ಲಿ ಬಂದಿದ್ದಾಗ, ಆ ಎಲ್ಲ ಕಥೆಗಳ ಹೆಸರುಗಳನ್ನು ಆವರಣವಲ್ಲಿ ಕೊಟ್ಟಿದೆ. ಕೆಲವೊಂದು ಬಾರಿ ತುಳು ಜನಪದ ಕಥೆಯೊಂದರ ಆಶಯ ವಿವರಗಳಲ್ಲಿ Stith Thompson ರ ಆಶಯ ಸೂಚಿಯ ಆಶಯಕ್ಕಿಂತ ವ್ಯತ್ಯಾಸ ಪಡೆದಿದ್ದರೆ, ಅಂತಹ ವ್ಯತ್ಯಾಸ ಅಥವಾ ವೈಶಿಷ್ಟ್ಯವನ್ನು ಆಶಯದ ಕೆಳಗಡೆ ಟಿಪ್ಪಣಿ ರೂಪದಲ್ಲಿ ತಿಳಿಸಲಾಗಿದೆ. ಇಂತಹ ಸಂದರ್ಭಗಳಲ್ಲಿ ನಿರ್ದಿಷ್ಟ ಆಶಯವೊಂದರ ಉಪಭಾಗವಾಗಿ ಅವುಗಳನ್ನು ಆಶಯ ಸೂಚಿಯಲ್ಲಿ ಸೇರಿಸಿಕೊಳ್ಳಬಹುದಾದ ಸಾಧ್ಯತೆಗಳನ್ನು ಹೇಳಲಾಗಿದೆ. ಆದರೆ ಇಂತಹ ಹೊಸ ಆಶಯ ವಿಭಾಗಗಳಿಗೆ ಯಾವ ಹೊಸ ಸಂಖ್ಯೆಯನ್ನೂ ಇಲ್ಲಿ ಸೂಚಿಸಿಲ್ಲ. Stith Thompson ಅವರ 'ಆಶಯ ಸೂಚಿ'ಯಲ್ಲಿ ಇಂತಹ ಸೇರ್ಪಡೆಗಳಿಗೆ ಅವಕಾಶಗಳನ್ನು ಸಾಕಷ್ಟು ಕಲ್ಪಿಸಿದ್ದಾರೆ. ಆದರೆ ಈಗಾಗಲೇ ಜಗತ್ತಿನ ಬೇರೆ ಬೇರೆ ಪ್ರದೇಶಗಳ ಜನಪದ ಕಥೆಗಳ ವಿದ್ವಾಂಸರು ತಮ್ಮ ಕಥೆಗಳ ಆಧಾರದಿಂದ ಇದೇ ರೀತಿಯಲ್ಲಿ ಆಶಯಗಳನ್ನೋ ಆಶಯಗಳ ವಿಶಿಷ್ಟತೆಯನ್ನೋ ಸೂಚಿಸಿರಬಹುದಾದ್ದರಿಂದ ಮತ್ತು ಅಂತಹ ಸಂಶೋಧನೆಗಳ ಸಮಗ್ರ ವಿವರಣೆಗಳು ಲಭ್ಯವಾಗದೆ ನಾವು ಸೂಚಿಸುವ ಸಂಖ್ಯೆಗಳು ಅಥವಾ ಉಪಸಂಖ್ಯೆಗಳು ಗೊಂದಲವನ್ನುಂಟುಮಾಡುವ ಸಂಭವದಿಂದಾಗಿ, ಅಂತಹ ಯಾವುದೇ ಕೆಲಸವನ್ನು ಇಲ್ಲಿ ಮಾಡಿಲ್ಲ. ಆದರೆ ಮೂಲ ಸೂಚಿಯಿಂದ ಹೇಗೆ ಕೆಲವು ಆಶಯಗಳು ಅಥವಾ ಆಶಯಗಳ ಉಪವಿಭಾಗಗಳು ಬೇರೆಯಾಗುತ್ತವೆ ಎನ್ನುವುದನ್ನು ಮಾತ್ರ ಇಲ್ಲಿ ತೋರಿಸಿ ಕೊಡಲಾಗಿದೆ.

ತುಳು ಜನಪದ ಕಥೆಗಳ ಈ ಸಂಕ್ಷಿಪ್ತ ಆಶಯ ಸೂಚಿ (Short-motif index) ಯ ಸಿದ್ಧತೆಯಲ್ಲಿ ಮಾದರಿಗಾಗಿ ಇಟ್ಟುಕೊಂಡ ಕೆಲವು ಪ್ರಮುಖ ಕೃತಿಗಳ ಭಾಗಗಳು :

1. Stith Thompson : The Folktale, 1967. ಇದರಲ್ಲಿ 'Index of Motifs' ಎನ್ನುವ ಅಧ್ಯಾಯ (ಪುಟ 488 ರಿಂದ 500).

2. Praphulla Datta Goswami : Ballads and Tales of Assam, 1970. ಇದರಲ್ಲಿ Chapter 4 : A Short Motif-Index of Assamese Tales and Ballads. (ಪುಟ 174 ರಿಂದ 255).

3. Linda Degh : Folktales and Society, 1969. ಇದರಲ್ಲಿ 'Index of Motifs' ಎನ್ನುವ ಭಾಗ (ಪುಟ 421 ರಿಂದ 423).

### A. ಪೌರಾಣಿಕ ಆಶಯಗಳು (Mythological Motifs) :

ಈ ಅಧ್ಯಾಯದಲ್ಲಿ ಜಗತ್ತಿನ ಸೃಷ್ಟಿ ಮತ್ತು ಸ್ವರೂಪಕ್ಕೆ ಸಂಬಂಧಿಸಿದ ಆಶಯಗಳಿವೆ. ಸೃಷ್ಟಿ ಕರ್ತರು, ದೇವರುಗಳು, ಉಪದೇವತೆಗಳು ; ವಿಶ್ವದ ಆದರಲ್ಲೂ ಮುಖ್ಯವಾಗಿ ಭೂಮಿಯ ಸೃಷ್ಟಿ ಮತ್ತು ಸ್ವರೂಪ ; ಬದುಕಿನ ಆರಂಭ ; ಪ್ರಾಣಿ ಮತ್ತು ಸಸ್ಯ ಜಗತ್ತಿನ ಸೃಷ್ಟಿ ಮತ್ತು ಸ್ಥಾಪನೆ.

A 125. ಮನುಷ್ಯರೂಪದಲ್ಲಿ ದೇವರು (ಅಣ್ಣ_ತಂಗಿ).

A 1296. ಹೋಳು ಮಾಡುವುದರಿಂದ ಮನುಷ್ಯರ ಸಂಖ್ಯಾವೃದ್ಧಿ (ಹೆಣ್ಣು ಮತ್ತು ಹಾವು).

A 1710. ರೂಪ ಪರಿವರ್ತನೆಯ ಮೂಲಕ ಪ್ರಾಣಿಗಳ ಸೃಷ್ಟಿ (ಒಮ್ಮೆ ಇಳಿಯೇ ಜಂಬುನೇರಳೆಯೇ);

A 2110. ವಿಶಿಷ್ಟ ಜಾತಿಯ ಮೀನುಗಳ ಸೃಷ್ಟಿ (ಒಮ್ಮೆ ಇಳಿಯೇ ಜಂಬುನೇರಳೆಯೇ).

(ಇಲ್ಲಿ ತುಳುನಾಡಿನ ಎರಡು ವಿಶಿಷ್ಟ ಮೀನುಗಳಾದ 'ಮುಗುಡು ಮೀನು' ಮತ್ತು 'ಬಾಳೆ ಮೀನು' ಗಳ ಹುಟ್ಟನ್ನು ಹೇಳಲಾಗಿದೆ.)

### B. ಪ್ರಾಣಿಗಳು (Animals) :

ಈ ಅಧ್ಯಾಯದಲ್ಲಿ ಪ್ರಾಣಿಗಳಿಗೆ ಸಂಬಂಧಿಸಿದ ಆಶಯಗಳಿವೆ. ಪ್ರಾಣಿಗಳು ಕಾಣಿಸಿಕೊಳ್ಳುವ ಎಲ್ಲ ಕಥೆಗಳೂ ಇಲ್ಲಿ ಸ್ಥಾನ ಪಡೆಯುವುದಿಲ್ಲ. ಇಂತಹ ಕಥೆಗಳಲ್ಲಿ ಒಂದು ನಿರ್ದಿಷ್ಟವಾದ ಕ್ರಿಯೆ ಪ್ರಧಾನವಾಗಿರುತ್ತದೆಯೇ ಹೊರತು, ನಿರ್ದಿಷ್ಟವಾದ ಪಾತ್ರ ಮುಖ್ಯವಾಗಿರುವುದಿಲ್ಲ. B ಅಧ್ಯಾಯದಲ್ಲಿ ಕೆಲವು ವಿಶಿಷ್ಟತೆಗಳುಳ್ಳ ಪ್ರಾಣಿಗಳು ಮಾತ್ರ ಕಾಣಿಸಿಕೊಳ್ಳುತ್ತವೆ : 'ಡ್ರ್ಯಾಗನ್' (Dragon) ನಂತಹ ಪೌರಾಣಿಕ ಪ್ರಾಣಿಗಳು, ಸತ್ಯ ನುಡಿಯುವ ಹಕ್ಕಿಯಂತಹ ಮಾಂತ್ರಿಕ ಪ್ರಾಣಿಗಳು, ಮನುಷ್ಯ ಲಕ್ಷಣಗಳುಳ್ಳ ಪ್ರಾಣಿಗಳು, ಪ್ರಾಣಿ ರಾಜ್ಯಗಳು, ಮದುವೆಗಳು ಇತ್ಯಾದಿ. ಸಹಾಯಕ ಅಥವಾ ಕೃತಜ್ಞತೆ ಉಳ್ಳ ಪ್ರಾಣಿಗಳು, ಮನುಷ್ಯರ ಜೊತೆಗೆ ಪ್ರಾಣಿಗಳ ಮದುವೆ ಮತ್ತು ಪ್ರಾಣಿಗಳನ್ನು ಕುರಿತ ಇತರ ಕಾಲ್ಪನಿಕ ಭಾವನೆಗಳು ಕೂಡಾ ಈ ವಿಭಾಗದಲ್ಲಿಯೇ ಬರುತ್ತವೆ.

BO-B99. ಪೌರಾಣಿಕ ಪ್ರಾಣಿಗಳು :

B 15.1.2.6.1. 'ಏಳು ತಲೆಯ ಸರ್ಪ' (ದಿಕ್ಕಿಲ್ಲದ ಮಕ್ಕಳು ದಿಕ್ಕುಗಾಣದ ದೇಶಕ್ಕೆ);

16.2.2.1. ವಿರೋಧದ ಹುಲಿಯನ್ನು ಕೊಲ್ಲುವುದು, (ಹೆಡ್ಡ ತಿಮ್ಮನ ಮಂತ್ರಶಕ್ತಿ).

B 41.2. ಹಾರುವ ಕುದುರೆ. (ಕುದುರೆ ಮತ್ತು ಹುಡುಗ).

B 45. ವಾಯುಯಾನ ಮಾಡುವ ಆನೆ. (ಆಸೆಯ ಅಂತ್ಯ);

B 100-B 199 ಮಾಂತ್ರಿಕ ಪ್ರಾಣಿಗಳು:

B 133.1. ಅಪಾಯದ ಕುರಿತು ನಾಯಕನಿಗೆ ಕುದುರೆ ಎಚ್ಚರಿಕೆ ಕೊಡುವುದು. (ಕುದುರೆ ಮತ್ತು ಹುಡುಗ).

B 133.2. ಮೋಸವನ್ನು ಕುದುರೆಯು ಬಯಲು ಮಾಡುವುದು. (ಕುದುರೆ ಮತ್ತು ಹುಡುಗ).

B 135. ಸತ್ಯವನ್ನು ಹೇಳುವ ಬೆಕ್ಕು. (ಉಗ್ರಾಣಿ ಬೊಮ್ಮಯ).

(ಇಲ್ಲಿನ ಬೆಕ್ಕು ವಾಸ್ತವಿಕವಾಗಿ 'ನಿಜಹೇಳುವ ಬೆಕ್ಕು' ಅಲ್ಲ. ಆದರೆ ಕಥೆಯ ನಾಯಕನು ಆ ರೀತಿ ಜನರಿಗೆ ಹೇಳಿ ವಂಚಿಸುತ್ತಾನೆ).

B 153. ಬಚ್ಚಿಟ್ಟ ನಿಧಿಯನ್ನು ನಾಯಿ ತೋರಿಸಿಕೊಡುತ್ತದೆ. (ಅಜ್ಜ-ಮೊಮ್ಮಗ).

B 163.1. ನರಿಯಿಂದ ಬುದ್ಧಿವಾದ. (ನರಿಯ ಬುದ್ಧಿವಾದ).

B 184.1.6. ಮಾಂತ್ರಿಕ ಕುದುರೆಯಲ್ಲಿ ಕುಳಿತು ಹಾರುವುದು (ಕುದುರೆ ಮತ್ತು ಹುಡುಗ).

B 184.1.8. ಅಮರ ಕುದುರೆ (ಕುದುರೆ ಮತ್ತು ಹುಡುಗ).

B 200-B 299. ಮನುಷ್ಯನ ಲಕ್ಷಣಗಳಿರುವ ಪ್ರಾಣಿಗಳು:

B 211.1.3. ಮಾತನಾಡುವ ಕುದುರೆ (ಕುದುರೆ ಮತ್ತು ಹುಡುಗ).

B 274. ನ್ಯಾಯಾಧೀಶನಾಗಿ ಪ್ರಾಣಿ (ನರಿಯ ತೀರ್ಪು).

B 300-B 599. ಸ್ನೇಹಭಾವದ ಪ್ರಾಣಿಗಳು:

B 330. ಸಹಾಯಕ ಪ್ರಾಣಿಯನ್ನು ನಾಯಕನ ವೈರಿ ಕೊಲ್ಲುವುದು (ಬದಲಾದ ಮದುಮಗಳು).

(ಇಲ್ಲಿ 'ಗಿಳಿ'ಯು ಸಹಾಯಕ ಪ್ರಾಣಿ, ಅದನ್ನು ನಾಯಕಿಯ ವೈರಿಯಾದ ಕೆಲಸದ ಹೆಣ್ಣು ಕೊಲ್ಲುತ್ತಾಳೆ).

B 335.2. ಧಕ್ಕು ಕಾಯಿಲೆಗೆ ಔಷಧಿಯಾಗಿ ಸಹಾಯಕ ಪ್ರಾಣಿಯ ಜೀವವನ್ನು ಬಯಸುವುದು (ಕುದುರೆ ಮತ್ತು ಹುಡುಗ).

B 383. ಅಪಾಯದಲ್ಲಿರುವ ಪ್ರಾಣಿಯು ಸಹಾಯಕ್ಕಾಗಿ ಮನುಷ್ಯನನ್ನು ಕರೆಯುವುದು(ನರಿಯ ಬುದ್ಧಿವಾದ). (ಇಲ್ಲಿ ನರಿಯು ಅಪಾಯದಲ್ಲಿರುವ ಪ್ರಾಣಿ).

B 401. ಸಹಾಯಕ ಕುದುರೆ (ಕುದುರೆ ಮತ್ತು ಹುಡುಗ).
B 402. ಸಹಾಯಕ ಕತ್ತೆ (ಹೆಡ್ಡ ಕುಂಬಾರ).
B 411. ಸಹಾಯಕ ಹಸು (ಅಣ್ಣ-ತಂಗಿ).
B 411.1. ಸಹಾಯಕ ಮಂಗ (ಜಾಣ ಮಂಗ).
B 451.7. ಸಹಾಯಕ ಗುಬ್ಬಚ್ಚಿ (ವಜ್ರ ಕುಮಾರ).
B 455.1. ಸಹಾಯಕ ಜಟಾಯು ಪಕ್ಷಿ (ಅಣ್ಣ-ತಂಗಿ).
B 469.9. ಸಹಾಯಕ ಗಿಳಿ (ಬದಲಾದ ಮದುಮಗಳು).
B 491.1. ಸಹಾಯಕ ಸರ್ಪ (ವಜ್ರಕುಮಾರ ದಿಕ್ಕಿಲ್ಲದ ಮಗಳು ದಿಕ್ಕುಕಾಣದ ದೇಶಕ್ಕೆ).
(ವಜ್ರಕುಮಾರ ಕಥೆಯಲ್ಲಿ ಸಹಾಯಕ ಹಾವು ಸರ್ಪ ಅಲ್ಲ, ಅದು ಕೇರೆ ಹಾವು).
B 493.1. ಸಹಾಯಕ ಕಪ್ಪೆ.
B 521.1. ವಿಷಪ್ರಾಶನದ ವಿರುದ್ಧ ಪ್ರಾಣಿಗಳು ಎಚ್ಚರಿಕೆ ಕೊಡುವುದು (ಕುದುರೆ ಮತ್ತು ಹುಡುಗ).
B 535.0.1. ಮಕ್ಕಳನ್ನು ಹಸುವು ದಾದಿಯಂತೆ ಆರೈಕೆ ಮಾಡುವುದು (ಅಣ್ಣ-ತಂಗಿ).
B 535.0.14. ಮಕ್ಕಳನ್ನು ಸರ್ಪವು ದಾದಿಯಂತೆ ನೋಡಿಕೊಳ್ಳುವುದು (ದಿಕ್ಕಿಲ್ಲದ ಮಕ್ಕಳು ದಿಕ್ಕುಗಾಣದ ದೇಶಕ್ಕೆ).
B 571. ವಹಿಸಿದ ಕಾರ್ಯವನ್ನು ಪ್ರಾಣಿಗಳು ನಡೆಸುವುದು (ವಜ್ರಕುಮಾರ).
B 582.1.1. ಪ್ರಾಣಿಯು ತನ್ನ ಒಡೆಯನಿಗೆ ಪತ್ನಿಯನ್ನು ಗೆದ್ದುಕೊಡುವುದು (ಜಾಣ ಮಂಗ).
B 598. ಜಾರ ಹೆಂಡತಿಯ ಸಂಗಾತಿಯಾಗಿ ಪ್ರಾಣಿ (ಹೆಣ್ಣು ಮತ್ತು ಹಾವು).
(ಇಲ್ಲಿ ಸರ್ಪವು ಅಂತಹಸಂಗಾತಿ).
**B 600–B 699. ಮನುಷ್ಯ ಮತ್ತು ಪ್ರಾಣಿಯ ಮದುವೆ :**
B 613.1. ಪ್ರಿಯಕರ ಸರ್ಪ (ಹಣತೆ, ಹೆಣ್ಣು ಮತ್ತು ಹಾವು).
**B 700–B 799 ಪ್ರಾಣಿಗಳ ಇತರ ಬಯಲಿನ ಲಕ್ಷಣಗಳು :**
B 786. ಮಂಗಗಳು ಯಾವಾಗಲೂ ಮನುಷ್ಯರನ್ನು ಅನುಕರಿಸುತ್ತವೆ (ದರ್ಜಿಯ ಟೊಪ್ಪಿ).

## D ಮಂತ್ರವಿದ್ಯೆ (Magic)

ಮಂತ್ರವಿದ್ಯೆಯ ಅಧ್ಯಾಯವು ವಿಸ್ತಾರವಾದುದು. ಅದರ ವಿಭಾಗಗಳು : ರೂಪ ಪರಿವರ್ತನೆ ಮತ್ತು ಮಾಂತ್ರಿಕತೆಯಿಂದ ಬಿಡುಗಡೆ, ಮಾಂತ್ರಿಕ ವಸ್ತುಗಳು ಮತ್ತು ಅವುಗಳ ಬಳಕೆ, ಮಾಂತ್ರಿಕ ಶಕ್ತಿಗಳು ಮತ್ತು ಇತರ ತೋರ್ಪಡಿಕೆಗಳು.

DO-D 699. ರೂಪ ಪರಿವರ್ತನೆ :

D 42. ಮನುಷ್ಯ ರೂಪದಲ್ಲಿ ದೇವರು (ಅಣ್ಣ ತಂಗಿ).
D 170. ರೂಪ ಪರಿವರ್ತನೆ : ಮನುಷ್ಯನು ಮೀನಾಗಿ (ಒಮ್ಮೆ ಇಳಿಯೇ ಜಂಬುನೇರಳೆಯೇ).
D 194. ರೂಪ ಪರಿವರ್ತನೆ : ಮನುಷ್ಯನು ಮೊಸಳೆಯಾಗಿ (ದಿಕ್ಕಿಲ್ಲದ ಮಕ್ಕಳು ದಿಕ್ಕುಗಾಣದ ದೇಶಕ್ಕೆ)
D 231. ರೂಪ ಪರಿವರ್ತನೆ : ಮನುಷ್ಯನು ಕಲ್ಲಾಗಿ (ಅಣ್ಣ-ತಂಗಿ).
D 435.1 ರೂಪ ಪರಿವರ್ತನೆ : ಕಲ್ಲು ಮನುಷ್ಯನಾಗಿ (ಅಣ್ಣ-ತಂಗಿ).
D 437. ರೂಪ ಪರಿವರ್ತನೆ : ಪ್ರಾಣಿಯ ಅಥವಾ ಮನುಷ್ಯನ ಅಂಗವು ಮನುಷ್ಯನಾಗಿ (ಹುಲಿಯು ತಿಂದ ಹುಡುಗಿ).

(ಇಲ್ಲಿ ಮನುಷ್ಯನ ಅಂಗವು ಮನುಷ್ಯನಾಗಿ ಪರಿವರ್ತನೆಗೊಳ್ಳುತ್ತದೆ ; ಆದರೆ, ಹುಡುಗಿಯ ಕಿರುಬೆರಳು, ಹುಡುಗಿಯಾಗಿ ಪರಿವರ್ತನೆಗೊಳ್ಳುತ್ತದೆ).

D 620. ನಿಯತಕಾಲಿಕ ರೂಪ ಪರಿವರ್ತನೆ. ಒಬ್ಬ ಮನುಷ್ಯ ಅಥವಾ ಒಂದು ವಸ್ತುವು ನಿರ್ದಿಷ್ಟ ಕಾಲಾವಧಿಗಳಲ್ಲಿ ರೂಪ ಪರಿವರ್ತನೆಗೊಳ್ಳುವುದು (ಹೆಡ್ಡ ತಿಮ್ಮನ ಮಂತ್ರಶಕ್ತಿ).

D 630. ಇಚ್ಛಿಸಿದಾಗ ರೂಪ ಪರಿವರ್ತನೆ ಮತ್ತು ಮಾಂತ್ರಿಕತೆಯಿಂದ ಬಿಡುಗಡೆ (ಹೆಡ್ಡ ತಿಮ್ಮನ ಮಂತ್ರಶಕ್ತಿ).

D 642.3. ಪ್ರೇಮಿಯಿಂದ ತಪ್ಪಿಸಿಕೊಳ್ಳಲು ರೂಪ ಪರಿವರ್ತನೆಯಾಗುವುದು (ಒಮ್ಮೆ ಇಳಿಯೇ ಜಂಬುನೇರಳೆಯೇ).

D 642.6. ರಾಕ್ಷಸಿಯಿಂದ ತಪ್ಪಿಸಿಕೊಳ್ಳಲು ರೂಪ ಪರಿವರ್ತನೆಯಾಗುವುದು (ಹೆಡ್ಡ ತಿಮ್ಮನ ಮಂತ್ರಶಕ್ತಿ).

**D 700-D 799.** ಮಾಂತ್ರಿಕತೆಯಿಂದ ಬಿಡುಗಡೆಯಾಗಿ ಸ್ವಸ್ವರೂಪಕ್ಕೆ ಬರುವುದು :

D 705.1. ಕೋಟೆಯು ಕಣ್ಮರೆಯಾಗುವುದು (ಜಾಣ ಮಂಗ).

D 712.3. ಹೊಡೆತದಿಂದ ಕಣ್ಮರೆಯಾಗುವುದು (ಪ್ರಧಾನಿಯ ಮಗಳು).

D 721.3. ಚರ್ಮ ಅಥವಾ ಹೊದಿಕೆಯನ್ನು ನಾಶ ಮಾಡುವುದರಿಂದ ಸ್ವಸ್ವರೂಪಕ್ಕೆ ಬರುವುದು (ಕುದುರೆ ಮತ್ತು ಹುಡುಗ).

D 771.3 ಹುಡಿಯನ್ನು ಉಪಯೋಗಿಸಿ ಕಣ್ಮರೆಯಾಗುವುದು (ಪ್ರಧಾನಿಯ ಮಗಳು).

D 793.2. ಬೇರ್ಪಡಿಸಿದ ಚರ್ಮವನ್ನು ಸುಡುವುದರಿಂದ ಸ್ವಸ್ವರೂಪವು ಸ್ಥಿರವಾಗಿ ಉಳಿಯುವುದು (ಕುದುರೆ ಮತ್ತು ಹುಡುಗ).

**D 800-D 1699.** ಮಾಂತ್ರಿಕ ವಸ್ತುಗಳು :

D 811. ದೇವರಿಂದ ಮಾಂತ್ರಿಕ ವಸ್ತುವನ್ನು ಪಡೆಯುವುದು (ಅಣ್ಣ-ತಂಗಿ).

D 931. ಮಾಂತ್ರಿಕ ಕಲ್ಲು (ಅಣ್ಣ–ತಂಗಿ ; ಕುದುರೆ ಮತ್ತು ಹುಡುಗ).

D 950. ಮಾಂತ್ರಿಕ ಮರ (ಉಗುರಿನ ಮರ).

D 981. ಮಾಂತ್ರಿಕ ಹಣ್ಣು (ಅಣ್ಣ–ತಂಗಿ).

D 996 1. ಮಾಂತ್ರಿಕ ಬೆರಳು (ಹುಲಿಯು ತಿಂದ ಹುಡುಗಿ).

D 1025. ಪ್ರಾಣಿಯ ಮಾಂತ್ರಿಕ ಚರ್ಮ (ಕುದುರೆ ಮತ್ತು ಹುಡುಗ).
(ಈ ಕಥೆಯಲ್ಲಿ ಒಂಟೆಯ ಚರ್ಮ ಮಾಂತ್ರಿಕ ಗುಣವುಳ್ಳದ್ದು)

D 1132.1. ಮಾಂತ್ರಿಕ ಶಕ್ತಿಯಿಂದ ಅರಮನೆಯನ್ನು ನಿರ್ಮಿಸುವುದು (ಅಣ್ಣ–ತಂಗಿ ; ಕುದುರೆ ಮತ್ತು ಹುಡುಗ ; ಜಾಣ ಮಂಗ)

D 1155. ಮಾಂತ್ರಿಕ ಕಂಬಳಿ (ಅಣ್ಣ–ತಂಗಿ).

D 1171. ಮಾಂತ್ರಿಕ ಪಾತ್ರೆ (ಅಣ್ಣ–ತಂಗಿ).

D 1242.1. ಮಾಂತ್ರಿಕ ನೀರು (ಕುದುರೆ ಮತ್ತು ಹುಡುಗ).

D 1246. ಮಾಂತ್ರಿಕ ಹಂಡಿ (ಪ್ರಧಾನಿಯ ಮಗಳು).
D 1254.2. ಮಾಂತ್ರಿಕ ಕೋಲು (ಅಣ್ಣ-ತಂಗಿ).
D 1311.4 2. ಮಾತಾಡುವ ಮರವು ಭವಿಷ್ಯವನ್ನು ತಿಳಿಸುವುದು (ಪ್ರಧಾನಿಯ ಮಗಳು)
D 1337.2.5. ಮಾಂತ್ರಿಕ ಚರ್ಮವು ಮನುಷ್ಯನನ್ನು ಕುರೂಪಿಯಂತೆ ಕಾಣಿಸುವುದು. (ಕುದುರೆ ಮತ್ತು ಹುಡುಗ).
D 1413.0.1.1. ಮಾಂತ್ರಿಕ ನುಡಿಗಟ್ಟು ಮನುಷ್ಯರನ್ನು ಒಬ್ಬರಿಗೊಬ್ಬರು ಅಂಟಿಕೊಳ್ಳುವಂತೆ ಮಾಡುವುದು (ಹೆಡ್ಡ ತಿಮ್ಮನ ಮಂತ್ರಶಕ್ತಿ).
D 1413.7. ಮೂತ್ರ ಹೊಯ್ಯುವ ಪಾತ್ರೆಗೆ (Basin) ಮನುಷ್ಯನು ಅಂಟಿಕೊಳ್ಳುವುದು (ಹೆಡ್ಡ ತಿಮ್ಮನ ಮಂತ್ರಶಕ್ತಿ).
D 1441. ಮಾಂತ್ರಿಕ ವಸ್ತುವು ಪ್ರಾಣಿಗಳನ್ನು ಒಟ್ಟು ಸೇರಿಸುವುದು (ಕುದುರೆ ಮತ್ತು ಹುಡುಗ).
D 1472.1.34.1. ಮಾಂತ್ರಿಕ ಬೆರಳು ಆಹಾರವನ್ನು ಒದಗಿಸುವುದು (ಹುಲಿಯು ತಿಂದ ಹುಡುಗಿ).
D 1520.19. ಮಾಂತ್ರಿಕ ಕಂಬಳಿಯಲ್ಲಿ ಪ್ರಯಾಣ ಮಾಡುವುದು (ಅಣ್ಣ–ತಂಗಿ).
D 1601.10. ತಾನಾಗಿಯೇ ಅಡುಗೆ ಮಾಡುವ ಪಾತ್ರೆ (ಅಣ್ಣ–ತಂಗಿ).

**D 1700-D 2199.** ಮಾಂತ್ರಿಕ ಶಕ್ತಿಗಳು ಮತ್ತು ತೋರ್ಪಡಿಕೆಗಳು :

D 1722. ಸನ್ಯಾಸಿಯಿಂದ ಮಾಂತ್ರಿಕ ಶಕ್ತಿ ಸಿಗುವುದು (ಹೆಡ್ಡ ತಿಮ್ಮನ ಮಂತ್ರಶಕ್ತಿ).
D 1810.8.3. ಕನಸಿನಲ್ಲಿ ಎಚ್ಚರಿಕೆ ಸಿಗುವುದು (ದಿಕ್ಕಿಲ್ಲದ ಮಕ್ಕಳು ದಿಕ್ಕುಗಾಣದ ದೇಶಕ್ಕೆ).
D 1812.3.3. ಕನಸಿನಲ್ಲಿ ಭವಿಷ್ಯ ಗೊತ್ತಾಗುವುದು (ದಿಕ್ಕಿಲ್ಲದ ಮಕ್ಕಳು ದಿಕ್ಕುಗಾಣದ ದೇಶಕ್ಕೆ).
D 1851.5. ದೇವತೆಯಿಂದ ಅಮರತ್ವ ಅನುಗ್ರಹ (ಕುದುರೆ ಮತ್ತು ಹುಡುಗ).
D 2006. ಜ್ಞಾಪಕ ಶಕ್ತಿಯ ಮಾಂತ್ರಿಕ ಜಾಗೃತಿ (ಪ್ರಧಾನಿಯ ಮಗಳು).
D 2395. ಮಾಂತ್ರಿಕ ಅದೃಶ್ಯವಾಗುವಿಕೆ (ದಿಕ್ಕಿಲ್ಲದ ಮಕ್ಕಳು ದಿಕ್ಕುಗಾಣದ ದೇಶಕ್ಕೆ).

## E. ಸತ್ತವರು (The Dead)

E ವಿಭಾಗದಲ್ಲಿ ಸತ್ತವರಿಗೆ ಮತ್ತು ಆತ್ಮಕ್ಕೆ ಸಂಬಂಧಿಸಿದ ಆಶಯಗಳಿವೆ. ಸತ್ತವರಿಗೆ ಸಂಬಂಧಿಸಿದ ವಿಚಾರಗಳೆಂದರೆ : ಪುನರುಜ್ಜೀವನ (ಸತ್ತವರು ಮತ್ತೆ ಬದುಕುವುದು), ಪ್ರೇತಗಳು ಮತ್ತು ಪುನರ್ಜನ್ಮ.

E 21. ಗಾಯಗೊಳಿಸಿದ ಸಾಧನವನ್ನು ಕೀಳುವುದರ ಮೂಲಕ ಸತ್ತವರು ಮತ್ತೆ ಜೀವತಾಳುವುದು (ವಜ್ರಕುಮಾರ).

(ಇಲ್ಲಿ ಕಾಲಿನಲ್ಲಿ ನಟ್ಟ 'ಮೊಳೆ'ಯನ್ನು ಕೀಳುವುದರ ಮೂಲಕ ರಾಜಕುಮಾರ ಜೀವತಾಳುತ್ತಾನೆ).

E 715.1.3. ಗಿಳಿಯಲ್ಲಿ ಇರುವ ಪ್ರತ್ಯೇಕಿತವಾಗುವ ಆತ್ಮ (ಬದಲಾದ ಮದುಮಗಳು).

## F. ಅದ್ಭುತಗಳು (Marvels)

ಮಂತ್ರವಿದ್ಯೆ ಮತ್ತು ಸತ್ತವರ ಪುನರಾಗಮನವನ್ನು ಬಿಟ್ಟು ಉಳಿದ ಅನೇಕ ಅದ್ಭುತಗಳು ಇಲ್ಲಿ ಬರುತ್ತವೆ : ಬೇರೆ ಲೋಕಗಳಿಗೆ ಪ್ರಯಾಣಗಳು ; ಕಿನ್ನರರು; ದೆವ್ವಗಳು; ಪಿಶಾಚಿಗಳು ಮುಂತಾದ

ಅಸಾಮಾನ್ಯ ಜೀವಿಗಳು; ಸಮುದ್ರದಲ್ಲಿ ಕೋಟೆಯುಂತಹ ಆಶ್ಚರ್ಯಕರ ಸ್ಥಳಗಳು; ಅದ್ಭುತ ವ್ಯಕ್ತಿಗಳು ಮತ್ತು ಘಟನೆಗಳು.

**F 200-F 699.** ಅದ್ಭುತ ಜೀವಿಗಳು :

F 331.1. ಕಿನ್ನರ (ಕಿನ್ನರಿ)ರ ಜೊತೆಗೆ ನೃತ್ಯಮಾಡಲು ಸೇರಿ, ಮನುಷ್ಯನು ಅವರನ್ನು ಗೆಲ್ಲುವುದು (ಪ್ರಧಾನಿಯ ಮಗಳು).

(ಇಲ್ಲಿ ಅದ್ಭುತ ಜೀವಿಗಳು 'ಸಿರಿಗಳು'. ತುಳುನಾಡಿನಲ್ಲಿ ದೈವತ್ವವನ್ನು ಪಡೆದ ಸ್ತ್ರೀಯರನ್ನು 'ಸಿರಿಗಳು' ಎನ್ನುತ್ತಾರೆ).

F 399.4. ನರ್ತಿಸುವ ಅಥವಾ ತೊಂದರೆ ಕೊಡುವ ಕಿನ್ನರಿಯರು (ಪ್ರಧಾನಿಯ ಮಗಳು). (ಇಲ್ಲಿ 'ಸಿರಿಗಳು').

F 577. ಒಂದೇ ರೀತಿಯಾಗಿ ಕಾಣುವ ವ್ಯಕ್ತಿಗಳು (ದಿಕ್ಕಿಲ್ಲದ ಮಕ್ಕಳು ದಿಕ್ಕುಗಾಣದ ದೇಶಕ್ಕೆ).

**F 700-F 899.** ಅಸಾಮಾನ್ಯ ಸ್ಥಳಗಳು ಮತ್ತು ಸಾಮಗ್ರಿಗಳು :

F 766.3. ಏಳು ಬಾಗಿಲುಗಳಿರುವ ಅರಮನೆ (ಅಣ್ಣ–ತಂಗಿ).

F 900-F 1099. ಅಸಾಮಾನ್ಯ ಘಟನೆಗಳು.

F 979.23. ದುರಂತ ಸಂಗತಿಗಳು ಘಟಿಸುವಾಗ ಸಸ್ಯಗಳು ಬಾಡುವುದು (ಅಣ್ಣ–ತಂಗಿ; ಪ್ರಧಾನಿಯ ಮಗಳು).

## G. ರಾಕ್ಷಸರು (Ogres)

ರಾಕ್ಷಸರು, ಮಾಟಗಾತಿಯರಂತಹ ಭಯಾನಕ ಜೀವಿಗಳು G ವರ್ಗದಲ್ಲಿ ಬರುತ್ತಾರೆ. ಸಹಜವಾಗಿಯೇ E, F ಮತ್ತು G ವಿಭಾಗಗಳ ನಡುವೆ ಹತ್ತಿರದ ಸಂಬಂಧವಿದೆ.

G 10. ನರಭಕ್ಷಕ (ರಾಕ್ಷಸ ಮತ್ತು ಜಾಣ ಹುಡುಗ).

G 422. ಬಲಿ ಸಿಕ್ಕಿದ ಜೀವಿಯನ್ನು ರಾಕ್ಷಸನು ಬಂಧಿಸಿ ಇಡುವುದು (ರಾಕ್ಷಸ ಮತ್ತು ಜಾಣ ಹುಡುಗ).

G 463. ರಾಕ್ಷಸನು ಸಮರ್ಪಕವಾಗಿ ಊಹಿಸುವುದು ಮತ್ತು ರಾಜಕುಮಾರಿಯನ್ನು ಪಡೆಯುವುದು (ಉಗುರಿನ ಮರ).

G 500. ರಾಕ್ಷಸನನ್ನು ಸೋಲಿಸುವುದು (ರಾಕ್ಷಸ ಮತ್ತು ಜಾಣ ಹುಡುಗ).

G 510. ರಾಕ್ಷಸನನ್ನು ಕೊಲ್ಲುವುದು ಅಥವಾ ಸೆರೆ ಹಿಡಿಯುವುದು (ಅದೇ).

G 514.1. ರಾಕ್ಷಸನನ್ನು ಪೆಟ್ಟಿಗೆಯಲ್ಲಿ ಉಪಾಯದಿಂದ ಸೆರೆ ಬೀಳಿಸುವುದು (ಅದೇ).

G 519.1. ರಾಕ್ಷಸನ ಹೆಂಡತಿಯನ್ನು ಇತರ ತಂತ್ರಗಳಿಂದ ಕೊಲ್ಲುವುದು (ಅದೇ).

## H. ಪರೀಕ್ಷೆಗಳು (Tests)

H ವಿಭಾಗದಲ್ಲಿ : ಗುರುತಿನ ಪರೀಕ್ಷೆಗಳು; ಒಗಟುಗಳು ಮುಂತಾದ ಜಾಣತನದ ಪರೀಕ್ಷೆಗಳು; ವಹಿಸಿದ ಕಾರ್ಯಗಳು ಮತ್ತು ಅನ್ವೇಷಣೆಗಳು; ಕಾರ್ಯದ ಪರೀಕ್ಷೆಗಳು; ಇತರ ಪರೀಕ್ಷೆಗಳು ಬರುತ್ತವೆ.

HO-H 199. ಗುರುತಿನ ಪರೀಕ್ಷೆಗಳು :

H 38.2.1. ರಾಜಕುಮಾರಿಯನ್ನು ಮದುವೆಯಾದ ದರ್ಜಿ (Tailor) ಯು ವೃತ್ತಿಯನ್ನು ಕಡೆಗಣಿಸುವುದು [ಒಂದು ಪೆಟ್ಟಿಗೆ ಏಳು].

H 57.2. ಕಳೆದುಹೋದ ಬೆರಳಿನಿಂದ ಗುರುತು ಹಿಡಿಯುವುದು [ಕುದುರೆ ಮತ್ತು ಹುಡುಗ].

H 161.0.1. ಒಂದೇ ರೀತಿಯ ಸಂಗಡಿಗರ ನಡುವೆ ವ್ಯಕ್ತಿಯನ್ನು ಗುರುತಿಸುವುದು [ದಿಕ್ಕಿಲ್ಲದ ಮಕ್ಕಳು ದಿಕ್ಕುಗಾಣದ ದೇಶಕ್ಕೆ].

H 300-H 499. ಮದುವೆಯ ಪರೀಕ್ಷೆಗಳು :

H 310. ವಿವಾಹಾರ್ಥಿಯ ಪರೀಕ್ಷೆಗಳು : ವಿವಾಹಾರ್ಥಿಗೆ ಅವನ ವಧು ಅಥವಾ ಭಾವೀ ಮಾವನು ಅನೇಕ ಪರೀಕ್ಷೆಗಳನ್ನು ಒಡ್ಡುವುದು [ಉಗುರಿನ ಮರ].

H 332.1.6. ವಿವಾಹಾರ್ಥಿಯ ಪರೀಕ್ಷೆ : ವಧುವನ್ನು ಆಟದಲ್ಲಿ ಸೋಲಿಸುವುದು [ಪ್ರಧಾನಿಯ ಮಗಳು].

H 500-H 899. ಜಾಣತನದ ಪರೀಕ್ಷೆಗಳು :

H 511. ಸರಿಯಾಗಿ ಊಹಿಸುವವನಿಗೆ ರಾಜಕುಮಾರಿಯನ್ನು ಮದುವೆ ಮಾಡಿಕೊಡುವುದು [ಹೆಡ್ಡ ತಿಮ್ಮನ ಮಂತ್ರಶಕ್ತಿ].

H 522. ಪರೀಕ್ಷೆ : ಅಜ್ಞಾತ ಪ್ರಾಣಿ ಅಥವಾ ಸಸ್ಯದ ಹೆಸರನ್ನು ಊಹಿಸುವುದು [ಉಗುರಿನ ಮರ].
[ಇಲ್ಲಿ ಅಜ್ಞಾತ ಸಸ್ಯವೊಂದರ ಹೆಸರನ್ನು ಊಹಿಸುವ ಪರೀಕ್ಷೆ ಇದೆ].

H 541.1. ಸಾವಿನ ಪಣವೊಡ್ಡಿ ಒಗಟನ್ನು ಹೇಳುವುದು [ಹಣತೆ; ಹೆಣ್ಣು ಮತ್ತು ಹಾವು].

H 561.5. ರಾಜ ಮತ್ತು ಜಾಣ ಮಂತ್ರಿ : ರಾಜನು ಜಾಣನಾದ ಮಂತ್ರಿಗೆ ಒಗಟುಗಳನ್ನು ಮತ್ತು ಪ್ರಶ್ನೆಗಳನ್ನು ಹಾಕುವುದು [ಒಂದು ಮುಕ್ಕಾಲಿನ ಕಥೆ].

H 575. ಒಗಟಿಗೆ ಆಕಸ್ಮಿಕವಾಗಿ ಉತ್ತರವನ್ನು ಕಂಡು ಹಿಡಿಯುವುದು [ಹಣತೆ; ಹೆಣ್ಣು ಮತ್ತು ಹಾವು].

H 580. ಒಗಟು ರೂಪದ ಹೇಳಿಕೆಗಳು : ಬಾಹ್ಯ ನೋಟಕ್ಕೆ ಅರ್ಥಹೀನವೆಂದು ಕಾಣಿಸುವ ಉದ್ಗಾರಗಳು ಅಥವಾ ಕ್ರಿಯೆಗಳು ವ್ಯಾಖ್ಯಾನದ ಮೂಲಕ ಜಾಣತನದ್ದು ಎಂದು ಗೊತ್ತಾಗುವುದು [ಅನರ್ಥದ ಒಳತಿರುಳು].

H 582.2. ಒಗಟಿನ ಉತ್ತರವು ಜಾರತನವನ್ನು ಬಯಲು ಮಾಡುವುದು [ಹಣತೆ; ಒಗಟು ಮಾತು; ಹೆಣ್ಣು ಮತ್ತು ಹಾವು].

H 588. ತಂದೆಯ ಗೂಢಾರ್ಥದ ಮಾತುಗಳು : ವಾಚ್ಯಾರ್ಥವನ್ನೇ ಪರಿಗಣಿಸಿದಾಗ ಅನರ್ಥವನ್ನು ಉಂಟು ಮಾಡುತ್ತದೆ ; ಆದರೆ ಸರಿಯಾಗಿ ವ್ಯಾಖ್ಯಾನಿಸಿದಾಗ ಅಮೂಲ್ಯವಾದ ಮಾತು ಎಂದು ಗೊತ್ತಾಗುತ್ತದೆ [ಜಾಣ ಮಾತು].

H 805. ಕೊಲೆಯಾದ ಪ್ರೇಮಿಗೆ ಸಂಬಂಧಿಸಿದ ಒಗಟು [ಹಣತೆ].

H 900-H 1199. ಶೌರ್ಯದ ಪರೀಕ್ಷೆಗಳು : ವಹಿಸಿದ ಕಾರ್ಯಗಳು :

H 900. ಹೇರಿದ ಕೆಲಸಗಳು [ದಾಸಯ್ಯನ ಮಂಗಳು].

H 912. ಮಂತ್ರಿಗಳಾದ ಸಹೋದರರ ಸೂಚನೆಯಂತೆ ವಹಿಸಿಕೊಟ್ಟ ಕಾರ್ಯಗಳು [ರಾಕ್ಷಸ ಮಂತ್ರಿ ಜಾಣ ಹುಡುಗ].

H 934.2. ಅತ್ತಿಗೆಯರು ಕೆಲಸಗಳನ್ನು ಹೇರುವುದು [ವಜ್ರಕುಮಾರ].

H 934.4. ಅಣ್ಣಂದಿರು ಕೆಲಸವನ್ನು ಹೇರುವುದು [ರಾಕ್ಷಸ ಮತ್ತು ಜಾಣ ಹುಡುಗ].

H 861. ಜಾಣತನದಿಂದ ವಹಿಸಿದ ಕೆಲಸಗಳನ್ನು ಮಾಡುವುದು [ದಾಸಯ್ಯನ ಮಂಗಳು].

H 984. ಸನ್ಯಾಸಿಯ ಸಹಾಯದಿಂದ ವಹಿಸಿದ ಕಾರ್ಯಗಳನ್ನು ಮಾಡುವುದು [ಪ್ರಧಾನಿಯ ಮಂಗಳು].

H 987. ಮಾಂತ್ರಿಕ ವಸ್ತುವಿನ ಸಹಾಯದಿಂದ ವಹಿಸಿದ ಕಾರ್ಯಗಳನ್ನು ಮಾಡುವುದು [ಪ್ರಧಾನಿಯ ಮಂಗಳು].

H 1023.2.1.2. ವಹಿಸಿದ ಕಾರ್ಯ : ತೂತಾದ ಪಾತ್ರೆಯಲ್ಲಿ ನೀರು ತರುವುದು ; ಕಪ್ಪೆಗಳು ಪಾತ್ರೆಯ ತೂತಿನಲ್ಲಿ ಕುಳಿತುಕೊಳ್ಳುವುದು [ವಜ್ರಕುಮಾರ].

H 1023.11. ವಹಿಸಿದ ಕಾರ್ಯ : ಒಂದು ದೊಡ್ಡದಾದ ಇಡೀ ಕುಂಬಳಕಾಯಿಯನ್ನು ಸಪೂರ ಬಾಯಿವುಳ್ಳ ಪಾತ್ರೆಯಲ್ಲಿ ತುಂಬಿಸಿ ಇಡುವುದು [ದಾಸಯ್ಯನ ಮಂಗಳು].

H 1023.19. ವಹಿಸಿದ ಕಾರ್ಯ : ಕಟ್ಟಲು ಹಗ್ಗವಿಲ್ಲದೆ ಒಂದು ಹೊರೆ ಸೌದೆಯನ್ನು ತರುವುದು [ವಜ್ರಕುಮಾರ].

[ವಜ್ರಕುಮಾರ ಕಥೆಯಲ್ಲಿ ಮೇಲಿನದ್ದೇ ಆಶಯವಿಲ್ಲ. ಇಲ್ಲಿ ಕತ್ತಿ ಮತ್ತು ಹಗ್ಗವಿಲ್ಲದೆ ಸೊಪ್ಪು ತರುವ ಕೆಲಸ (Task) ಇದೆ.]

H 1023.20. ಹಗ್ಗವಿಲ್ಲದೆ ಬಾವಿಯಿಂದ ನೀರು ಸೇದಿ ತರುವುದು [ವಜ್ರಕುಮಾರ].

H 1023.25. ವಹಿಸಿದ ಕಾರ್ಯ : ಬಾವಿಯನ್ನು ರಾಜನಿದ್ದಲ್ಲಿಗೆ ತರುವುದು [ದಾಸಯ್ಯನ ಮಂಗಳು].

H 1023.25.1. ವಹಿಸಿದ ಕಾರ್ಯ : ಬಾವಿಯನ್ನು ರಾಜನಲ್ಲಿಗೆ ತರುವುದು; ಪ್ರತಿಕಾರ್ಯ: ರಾಜನ ಬಾವಿಯನ್ನು ತರಬೇಕಾಗಿರುವ ಬಾವಿಗೆ ಸಂಗಾತಿಯಾಗಿ ಕಳುಹಿಸಲು ಹೇಳುವುದು [ದಾಸಯ್ಯನ ಮಂಗಳು].

H 1046.2. ವಹಿಸಿದ ಕಾರ್ಯ : ಮುಳ್ಳು ಪೊದೆಯನ್ನು ಕತ್ತರಿಸದೆ ಆದರಿಂದ ಸೊಪ್ಪನ್ನು ತರುವುದು [ವಜ್ರಕುಮಾರ].

[ಈ ಕಥೆಯಲ್ಲಿ ಕತ್ತಿ ಮತ್ತು ಹಗ್ಗವಿಲ್ಲದೆ ಕಾಡಿನಿಂದ ಸೊಪ್ಪನ್ನು ತರುವ ಕಾರ್ಯದ ಆಶಯವಿದೆ].

H 1200–H 1399. ಶೌರ್ಯದ ಪರೀಕ್ಷೆಗಳು : ಅನ್ವೇಷಣೆಗಳು :

H 1211. ನಾಯಕನನ್ನು ತೊಲಗಿಸುವುದಕ್ಕಾಗಿ ಅನ್ವೇಷಣೆಗಳನ್ನು ವಹಿಸಿಕೊಡುವುದು [ಹೆಣ್ಣು ಮತ್ತು ಹಾವು].

H 1212. ಸುಳ್ಳು ಕಾಯಿಲೆಯ ಕಾರಣದಿಂದ ಅನ್ವೇಷಣೆಗೆ ಕಳುಹಿಸುವುದು [ಹೆಣ್ಣು ಮತ್ತು ಹಾವು].

H 1233.2.1. ಹೆಂಡತಿಯ ಸಹಾಯದಿಂದ ಅನ್ವೇಷಣೆಯನ್ನು ನೆರವೇರಿಸುವುದು [ಪ್ರಧಾನಿಯ ಮಗಳು].

H 1242. ಅನ್ವೇಷಣೆಯಲ್ಲಿ ಕಿರಿಯ ತಮ್ಮನೊಬ್ಬನೇ ಜಯಶಾಲಿಯಾಗುವುದು [ರಾಕ್ಷಸ ಮತ್ತು ಜಾಣ ಹುಡುಗ].

H 1400-1599. ಇತರ ಪರೀಕ್ಷೆಗಳು :

H 1515. ವಿಷಮಿಶ್ರಿತ ಆಹಾರದ ಪರೀಕ್ಷೆ. ವಿಷಮಿಶ್ರಿತ ಆಹಾರವನ್ನು ಉಣ್ಣಿಸಿ ನಾಯಕನನ್ನು ಕೊಲ್ಲುವ ಪ್ರಯತ್ನ [ಅಣ್ಣ–ತಂಗಿ; ಕುದುರೆ ಮತ್ತು ಹುಡುಗ].

H 1558. ಸ್ನೇಹದ ಪರೀಕ್ಷೆಗಳು [ಒಂದು ಭತ್ತಕ್ಕೆ ಒಂದು ಅಕ್ಕಿ].

J ಬುದ್ಧಿವಂತರು ಮತ್ತು ದಡ್ಡರು (The wise and the Foolish) :

J ಅಧ್ಯಾಯದಲ್ಲಿ ಬುದ್ಧಿವಂತಿಕೆ, ಜಾಣತನ ಮತ್ತು ಹೆಡ್ಡುತನ ಎಂಬ ಮೂರು ವಿಭಾಗಗಳಿವೆ. ಇವು ಮೂರೂ ಮನಸ್ಸಿನ ಸ್ವರೂಪಕ್ಕೆ ಸಂಬಂಧಿಸಿದವುಗಳು.

JO-J 199. ಬುದ್ಧಿವಂತಿಕೆಯನ್ನು ಪಡೆಯುವುದು.

J 17.1. ಹುಲಿ, ನರಿ ಮತ್ತು ಕರಡಿ ಇವು ಮನುಷ್ಯನಿಗೆ ಭಯಪಡುವುದು [ಉಪಾಯಕ್ಕೆ ಹೋಗಿ ಅಪಾಯ].

J 154. ಸಾಯುವ ವೇಳೆಗೆ ತಂದೆಯ ಜಾಣ ಮಾತು [ಜಾಣ ಮಾತು].

J 200-J 1099. ಬುದ್ಧಿವಂತಿಕೆಯ ಮತ್ತು ಹೆಡ್ಡುತನದ ನಡತೆ :

J 227. ಇತರ ಅನಿಷ್ಟಗಳ ಬದಲು ಮರಣವನ್ನು ಇಚ್ಛಿಸುವುದು [ಮುಂಜಗ ಮತ್ತು ಅವಳ ಮಾವ].

J 514. ಯಾವನೂ ಅತ್ಯಾಸೆ ಉಳ್ಳವನು ಆಗಿರಬಾರದು [ಆಸೆಯ ಅಂತ್ಯ; ನರಿಯ ಬುದ್ಧಿವಾದ].

J 1041.2. ಗಾಣಿಗ, ಗಾಣಿಗನ ಮಗ ಮತ್ತು ಕತ್ತೆ : ಪ್ರತಿಯೊಬ್ಬರನ್ನೂ ಇಷ್ಟಪಡಿಸಲು ಪ್ರಯತ್ನಿಸುವುದು [ಹೆಡ್ಡ ಕುಂಬಾರ].

[ಇಲ್ಲಿ 'ಗಾಣಿಗ'ನ ಬದಲು 'ಕುಂಬಾರ' ಕಾಣಿಸುತ್ತಾನೆ. ಕಥೆಯ ಕೊನೆಯಲ್ಲಿ, ತಂದೆ ಮತ್ತು ಮಗ ಕೂಡಿಕೊಂಡು ಕತ್ತೆಯನ್ನು ಹೊತ್ತುಕೊಂಡು ಹೋಗುವಾಗ, ಅದು ನದಿಗೆ ಹಾರಿ, ನದಿಯ ಪ್ರವಾಹದಲ್ಲಿ ಕಳೆದು ಹೋಗುತ್ತದೆ].

J 100– J 699. ಜಾಣತನ :

J 1111. ಜಾಣ ಹುಡುಗಿ (ಪ್ರಧಾನಿಯ ಮಗಳು ; ಅನರ್ಥದ ಒಳತಿರುಳು; ದಾನಯ್ಯನ ಮಗಳು).

J 1111.5. ಜಾಣಳಾದ ಮಂತ್ರಿ ಮಗಳು (ಪ್ರಧಾನಿಯ ಮಗಳು).

J 1112. ಜಾಣ ಹೆಂಡತಿ (ಪ್ರಧಾನಿಯ ಮಗಳು ; ಹೆಡ್ಡ ದೂಮ).

J 1115.4. ಜಾಣ ದರ್ಜಿ (ಒಂದು ಪೆಟ್ಟಿಗೆ ಹಳು).

J 1115.7.1. ಜಾಣ ವ್ಯಾಪಾರಿಯು ತನ್ನನ್ನು ದೋಚಿದ ಕಾರಣ ಲಾಭ ಪಡೆಯುತ್ತಾನೆ. ಮಂಗಗಳು ಅವನ ಮಾರಾಟದ ಟೊಪ್ಪಿಗಳನ್ನು ಕದಿಯುತ್ತವೆ. ಅವನು ಆ ಮಂಗಗಳನ್ನು ಹಿಡಿದು ಮಾರಾಟ ಮಾಡುತ್ತಾನೆ (ದರ್ಜಿಯ ಟೊಪ್ಪಿ).

('ದರ್ಜಿಯ ಟೊಪ್ಪಿ' ಕಥೆಯಲ್ಲಿ ಈ ಆಶಯದ ವಿವರಗಳಲ್ಲಿ ವ್ಯತ್ಯಾಸವಿದೆ. ಇಲ್ಲಿ ಒಬ್ಬ ದರ್ಜಿಯು ವ್ಯಾಪಾರಿಯಾಗಿರುತ್ತಾನೆ. ಅವನು ಒಂದು ಮರದ ಬುಡದಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿರುವಾಗ, ಅಲ್ಲಿಯೇ ಇದ್ದ ಮಂಗಗಳು ಅವನ ಮಾರಾಟದ ಟೊಪ್ಪಿಗಳನ್ನು ಕದಿಯುತ್ತವೆ. ಆ ದರ್ಜಿಯು ಮಂಗಗಳಿಗೆ ಕಲ್ಲುಗಳನ್ನು ಎಸೆಯುತ್ತಾನೆ. ಅವುಗಳು ಅದಕ್ಕೆ ಪ್ರತಿಯಾಗಿ ಅವನ ಕಡೆಗೆ ಆ ಟೊಪ್ಪಿಗಳನ್ನು ಎಸೆಯುತ್ತವೆ.)

J 1115.10.2. ಜಾಣ ಮಂತ್ರಿ (ಒಂದು ಭತ್ತಕ್ಕೆ ಒಂದು ಅಕ್ಕಿ ; ಒಂದು ಮುಕ್ಕಾಲಿನ ಕಥೆ).

J 1117.1. ತಂತ್ರಿಯಾಗಿ ನರಿ (ನರಿಯಣ್ಣನ ತುಂಪ್ಪ ; ನರಿಯ ಜಾಣತನ).

J 117.23. ಕೃತಘ್ನ ಪ್ರಾಣಿಯು ಬಂಧನಕ್ಕೆ ಹಿಂದಿರುಗುವುದು. ಒಬ್ಬ ಮನುಷ್ಯನು ಒಂದು ಸರ್ಪವನ್ನು (ಕರಡಿಯನ್ನು) ಬಂಧನದಿಂದ ಪಾರು ಮಾಡುತ್ತಾನೆ. ಆದರೆ ಅದು ಪ್ರತಿಯಾಗಿ ಅವನನ್ನೇ ಕೊಲ್ಲಲು ಬರುತ್ತದೆ. ಆಗ ನರಿಯು ನ್ಯಾಯಾಧೀಶನಾಗಿ, ಆ ಸರ್ಪವು ಇದ್ದ ಸೆರೆಗೆ ಅದನ್ನು ಮತ್ತೆ ಕಳುಹಿಸುವಂತೆ ಮಾಡುತ್ತದೆ (ನರಿಯ ತೀರ್ಪು).

('ನರಿಯ ತೀರ್ಪು' ಕಥೆಯಲ್ಲಿ ಕೃತಘ್ನವಾದ ಪ್ರಾಣಿಯು ಹುಲಿ.)

J 1500. ಜಾಣತನದ ಪ್ರಾಯೋಗಿಕ ಪ್ರತೀಕಾರ (ತಂದೆಯ ಸಾಲಕ್ಕೆ ತಿಮ್ಮನ ಕೋಲ).

J 1511.9. ಒಡೆಯನು ತನಗೆ ತಲೆಯ ಹಿಂಭಾಗದಲ್ಲಿಯೂ ಕಣ್ಣುಗಳಿವೆ ಎಂದು ಸೇವಕನಲ್ಲಿ ಹೇಳುತ್ತಾನೆ. ಸೇವಕನು ಅವನನ್ನು ವಂಚಿಸುತ್ತಾನೆ. ಅವನು ಒಡೆಯನ ಬೆನ್ನಿಗೆ ಆಹಾರವನ್ನು ತೋರಿಸುತ್ತಾನೆ ಮತ್ತು ಒಡಯನು ಏನೂ ಆಕ್ಷೇಪಣೆ ಮಾಡದ ಕಾರಣ, ಅದನ್ನು ತಿನ್ನುತ್ತಾನೆ. (ತಂದೆಯ ಸಾಲಕ್ಕೆ ತಿಮ್ಮನ ಕೋಲ).

J 1700-J 2799. ಹೆಡ್ಡರು :

J 1702. ಹೆಡ್ಡ ಗಂಡ (ಹೆಡ್ಡ ದೂಮ).

J 1706.1. ಹೆಡ್ಡು ಪ್ರಾಣಿಯಾಗಿ ಹುಲಿ (ಉಪಾಯಕ್ಕೆ ಹೋಗಿ ಅಪಾಯ).

J 1732. ಕೆಲವು ಆಹಾರಗಳ ಬಗ್ಗೆ ಅಜ್ಞಾನ (ಹೆಡ್ಡ ಕುಮಾರ).
(ಇಲ್ಲಿ 'ಪಾಯಸ' ಮತ್ತು 'ಕಣಿಲೆ ಪಲ್ಯ')

J 1758. ಹುಲಿಯನ್ನು ಯಾವುದೋ ಸಾಕುಪ್ರಾಣಿಯೆಂದು ತಪ್ಪು ತಿಳಿಯುವುದು (ಉಪಾಯಕ್ಕೆ ಹೋಗಿ ಅಪಾಯ).

J 1770. ವಸ್ತುಗಳನ್ನು ತಪ್ಪಾಗಿ ಗುರುತಿಸುವುದು (ಹೆಡ್ಡ ತಿಮ್ಮನ ಮಂತ್ರಶಕ್ತಿ).

J 1818. ಪ್ರಾಣಿಗಳ ಕ್ರಿಯೆಗಳನ್ನು ತಪ್ಪಾಗಿ ಭಾವಿಸುವುದು (ಹೆಡ್ಡ ಕುಮಾರ).

J 1818.1. ಹೋರಿಯು ಮೂತ್ರ ಹೊಯ್ಯುವುದನ್ನು ರಕ್ತ ಸೋರುವುದು ಎಂದು ಭಾವಿಸುವುದು (ಹೆಡ್ಡ ಕುಮಾರ).

(ಇಲ್ಲಿ ಕುದುರೆಯು ಮೂತ್ರ ಹೊಯ್ಯುವುದನ್ನು ಕುದುರೆಗೆ ತೂತಾಗಿ ನೀರು ಸೋರುವುದು ಎಂದು ಭಾವಿಸುವುದು).

J 1852. ಪ್ರಾಣಿಗಳಿಗೆ ವಸ್ತುಗಳನ್ನು ಮಾರಾಟ ಮಾಡುವುದು (ಅಜ್ಜ-ಮೊಮ್ಮಗ).

J 1852.1. ಹೆಡ್ಡನು ಹಕ್ಕಿಗೆ ದನವನ್ನು ಮಾರುತ್ತಾನೆ. ಅವನು ತನ್ನ ಹಣಕ್ಕಾಗಿ ಬರುವಾಗ, ಹಕ್ಕಿಯು ಅಲ್ಲಿಂದ ಹಾಗೆ ಒಂದು ಕಸದ ರಾಶಿಯ ಮೇಲೆ ಕುಳಿತುಕೊಳ್ಳುತ್ತದೆ. ಅಲ್ಲಿ ಆ ಹೆಡ್ಡನಿಗೆ ಒಂದು ನಿಧಿಯು ಸಿಗುತ್ತದೆ.

['ಅಜ್ಜ-ಮೊಮ್ಮಗ' ಕಥೆಯು ಆಶಯವೂ ಬಹುಮಟ್ಟಿಗೆ ಈ ಆಶಯವನ್ನೇ ಹೋಲುತ್ತದೆ. ಇಲ್ಲಿ ಹೆಡ್ಡ ಮೊಮ್ಮಗನು 'ಅಪ್ಪ' (ಅಕ್ಕಿಯ ಒಂದು ತಿಂಡಿ) ವನ್ನು ಒಂದು ನಾಯಿಗೆ ಮಾರುತ್ತಾನೆ. ಅವನು ಆ ನಾಯಿಯಲ್ಲಿ ಹಣ ಕೇಳಿದಾಗ, ಅದು ಅಲ್ಲಿಂದ ಓಡಿ ಹೋಗಿ, ಒಂದು ಕಡೆ ಮೂತ್ರ ಹೊಯ್ಯಲು ನೆಲವನ್ನು ಕೆರೆಯುತ್ತದೆ. ಆ ಹುಡುಗನು ಅಲ್ಲಿಯೇ ನೆಲವನ್ನು ಅಗೆದಾಗ, ಅಕಸ್ಮಾತ್ ಆಗಿ ಅಲ್ಲಿ ಹಣ ಸಿಗುತ್ತದೆ].

J 2080. ಹೆಡ್ಡುತನದ ವ್ಯಾಪಾರಗಳು (ಹೆಡ್ಡ ಕುಮಾರ).
(ಇಲ್ಲಿ ಹೆಡ್ಡನು ಕುದುರೆಯನ್ನು ಕೊಡಲಿಗೆ, ಕೊಡಲಿಯನ್ನು ಕಂಬಳಿಗೆ ವಿನಿಮಯ ಮಾಡಿಕೊಳ್ಳುತ್ತಾನೆ).

J 2133.5.2 ಹೆಡ್ಡನು ದೇವಲೋಕದ ಆನೆಯ ಬಾಲವನ್ನು ಹಿಡಿದುಕೊಂಡು ದೇವಲೋಕಕ್ಕೆ ಹೋಗುವಾಗ, ಸಂಜ್ಞೆಯನ್ನು ಮಾಡುವುದಕ್ಕಾಗಿ ಕೈಯ ಹಿಡಿತವನ್ನು ಸಡಿಲಿಸುತ್ತಾನೆ. ಅವನು ಮತ್ತು ಅವನನ್ನು ಹಿಡಿದುಕೊಂಡ ಉಳಿದವರು-ಎಲ್ಲರೂ ಕೆಳಗೆ ಬೀಳುತ್ತಾರೆ.

J 2450. ವಾಚ್ಯಾರ್ಥವನ್ನಷ್ಟೇ ಗ್ರಹಿಸುವ ಹೆಡ್ಡ [ಕೆಲಸದ ಹುಡುಗ ; ಜಾಣ ಮಾತು].

J 2460. ಪದಶಃ ವಿಧೇಯತೆ [ಜಾಣ ಮಾತು].
(ಪದಶಃ ಪಾಲನೆ).

J 2461.1 ಕೆಲಸಗಳ ಬಗೆಗಿನ ಸೂಚನೆಗಳನ್ನು ಪದಶಃ ಅನುಸರಿಸುವುದು. [ಕೆಲಸದ ಹುಡುಗ ; ತಂದೆಯ ಸಾಲಕ್ಕೆ ತಿಮ್ಮನ ಕೋಲ].

J 2461.1.71. ಕಳ್ಳನಾಗಿ ಹೆಡ್ಡ [ಹೆಡ್ಡ ದೂಮ].

J 2465.12. ಮರದ ಮೇಲೆ ಉಳುವುದು [ಕೆಲಸದ ಹುಡುಗ ; ತಂದೆಯ ಸಾಲಕ್ಕೆ ತಿಮ್ಮನ ಕೋಲ].

ಒಂದು ನಿರ್ದಿಷ್ಟ ಮರದ ಮೇಲ್ಗಡೆ ಇರುವ ಹೊಲದಲ್ಲಿ [ಗುಡ್ಡದ ಬದಿಯಲ್ಲಿ] ಉಳಲು ಹೇಳಿದಾಗ, ಹೆಡ್ಡರು ಎತ್ತುಗಳನ್ನು ಮರದ ಮೇಲಕ್ಕೆ ಎಳೆದುಕೊಂಡು ಹೋಗಲು ಪ್ರಯತ್ನಿಸುವುದು, ಎತ್ತುಗಳು ಸಾಯು ವುದು.

J 2493. ವಾರದ ಹೆಸರುಗಳನ್ನು ಪದಶಃ ವ್ಯಾಖ್ಯಾನಿಸುವುದು [ಅಂಜುಬುರುಕ ನೆಂಟ].

J 2511. ಮೌನದ ಪಂದ್ಯ. ಗಂಡ ಮತ್ತು ಹೆಂಡತಿಯರಲ್ಲಿ ಯಾರು ಮೊದಲು ಮಾತಾಡುವುದು ಎಂಬು ದರ ಬಗ್ಗೆ ಪಂದ್ಯ [ರೊಟ್ಟಿಯ ಜಗಳ].

J 2511.1. ಬೆಳಿಗ್ಗೆ ಯಾರು ಮೊದಲು ಮಾತಾಡುವುದು ಎನ್ನುವುದರ ಬಗ್ಗೆ ಪಂದ್ಯ [ಕೊನೆಗೆ ಮಾತಾಡಿದ ವರಿಗೆ ಬಹುಮಾನ]. ಅವರನ್ನು ಚಿತೆಯಲ್ಲಿಗೆ ಕೊಂಡು ಹೋದಾಗ ಅವರ ಮೌನದ ಪಂದ್ಯ ಮುರಿಯುತ್ತದೆ. [ರೊಟ್ಟಿಯ ಜಗಳ].

## K ಮೋಸಗಳು (Deceptions)

K ವಿಭಾಗದಲ್ಲಿ ಕ್ರಿಯೆಗೆ ಹೆಚ್ಚು ಪ್ರಾಧಾನ್ಯ ನೀಡಲಾಗಿದೆ. ಕಳ್ಳರ ಮತ್ತು ಠಕ್ಕರ ಕೆಲಸಗಳು, ಮೋಸದ ಬಂಧನಗಳು ಮತ್ತು ಪಲಾಯನಗಳು, ಲೈಂಗಿಕ ಮೋಹದ ಕೆಲಸಗಳು, ಜಾಣತನ, ವೇಷಪಲ್ಲಟ ಮತ್ತು ಭ್ರಮೆಗಳು ಈ ವಿಭಾಗದಲ್ಲಿ ಬರುತ್ತವೆ.

K 100-K 299. ಮೋಸದ ವ್ಯಾಪಾರಗಳು :

K 112.8. ಸುಳ್ಳು ಮಾಂತ್ರಿಕ ತಿಂಡಿಯ ಮರವನ್ನು ಮಾರುವುದು. [ಕೊಟ್ಟಿಗೆಯ ಮರ].

[ಇಲ್ಲಿ 'ಕೊಟ್ಟಿಗೆಯ ಮರ' ಎಂದು ಸುಳ್ಳು ಹೇಳಿ ಒಂದು ಮರವನ್ನು ಮಾರಾಟ ಮಾಡುವುದು. 'ಕೊಟ್ಟಿಗೆ' ಅಂದರೆ ಅಕ್ಕಿಯಿಂದ ಮಾಡುವ ಒಂದು ತಿಂಡಿ].

K 193. ಒಂದು ಅಸಾಧಾರಣ ಹೆಸರನ್ನು ಆಧರಿಸಿ, ಮೋಸದ ವ್ಯಾಪಾರ ಮಾಡುವುದು. (ಕೊಟ್ಟಿಗೆಯ ಮರ).

K 300-K 499. ಕಳ್ಳತನಗಳು ಮತ್ತು ವಂಚನೆಗಳು ;

K 359.2.2. ದ್ವಂದ್ವಾರ್ಥದ ಹೆಸರನ್ನು ಇಟ್ಟುಕೊಂಡು ಕಳ್ಳನು ಸಾಮಗ್ರಿಯ ಒಡೆಯನಿಗೆ ಮೋಸ ಮಾಡುವುದು (ಕೊಟ್ಟಿಗೆಯ ಮರ).

K 401. ಕಳ್ಳತನದ ಆರೋಪವನ್ನು ಬೆಪ್ಪನ ಮೇಲೆ ಹಾಕುವುದು (ಉಗ್ರಾಣಿ ಬೊಮ್ಮಯ).

K 500-K 699. ಮೋಸದಿಂದ ಪಲಾಯನ ಮಾಡುವುದು :

K 511. ಪತ್ರವು ಬದಲಾವಣೆಯಾಗುವುದು. ಮರಣ ದಂಡನೆಯ ಆಜ್ಞೆಯನ್ನು ಸುಳ್ಳು ಮಾಡುವುದು. ಒಬ್ಬ ಸಂದೇಶವಾಹಕನಲ್ಲಿ ಒಂದು ಪತ್ರವನ್ನು ಕೊಟ್ಟು, ಅದನ್ನು ಪಡೆಯುವವನು ಪತ್ರವನ್ನು ತಂದವನನ್ನು ಕೊಲ್ಲಬೇಕೆಂದು ಬರೆದಿರುತ್ತದೆ. ದಾರಿಯಲ್ಲಿ ಆ ಪತ್ರದ ವಾಕ್ಯಗಳನ್ನು ಬದಲಾವಣೆ ಮಾಡಿ, ಪತ್ರ ತಂದವನನ್ನು ಗೌರವಿಸುವಂತೆ ಮಾಡಲಾಗುತ್ತದೆ (ರಾಕ್ಷಸ ಮತ್ತು ಜಾಣ ಹುಡುಗ).

K 515. ಅಡಗಿ ಕುಳಿತು ತಪ್ಪಿಸಿಕೊಳ್ಳುವುದು (ರಾಕ್ಷಸ ಮತ್ತು ಜಾಣ ಹುಡುಗ).

K 521.4. ತಪ್ಪಿಸಿಕೊಳ್ಳುವುದಕ್ಕಾಗಿ ಬಟ್ಟೆಗಳನ್ನು ಬದಲಿಸುವುದು (ರಾಕ್ಷಸ ಮತ್ತು ಜಾಣ ಹುಡುಗ).

K 525. ಬದಲಿ ವಸ್ತುವನ್ನು ಬಳಸಿ ತಪ್ಪಿಸಿಕೊಳ್ಳುವುದು (ಅತ್ತೆ-ಸೊಸೆ).

K 526. ಸೆರೆ ಹಿಡಿಯುವವನ ಚೀಲದಲ್ಲಿ ಪ್ರಾಣಿಗಳು ಅಥವಾ ವಸ್ತುಗಳನ್ನು ತುಂಬಿಸಿ ಬಂಧಿಯು ತಪ್ಪಿಸಿಕೊಳ್ಳುವುದು (ಅತ್ತೆ-ಸೊಸೆ).

K 60 . 'ಯಾರೂ ಇಲ್ಲ' ದ್ವಂದ್ವಾರ್ಥದ ಹೆಸರನ್ನು ಇಟ್ಟುಕೊಂಡು ತಪ್ಪಿಸಿಕೊಳ್ಳುವುದು (ಕೊಟ್ಟಿಗೆಯ ಮರ).

(ಇಲ್ಲಿ 'ಪೊಕ್ಕದೆ' [ಸುಮ್ಮಗೆ] 'ಸುಳಿಗಾಳಿ' ಇವು ಅಂತಹ ಹೆಸರುಗಳು)

K 640. ಸಂಗಾತಿಯೊಬ್ಬನ ಸಹಾಯದಿಂದ ತಪ್ಪಿಸಿಕೊಳ್ಳುವುದು (ಒಂದು ಭತ್ತಕ್ಕೆ ಒಂದು ಅಕ್ಕಿ).

K 800-K 999. ಮರಣಾಂತಿಕವಾದ ಮೋಸ :

K 890. ಮೋಸ ಹೋದವನು ತನ್ನನ್ನೇ ಕೊಲ್ಲುವಂತೆ ತಂತ್ರ ಮಾಡುವುದು (ನರಿಯ ಜಾಣತನ).

K 891. ಮೋಸ ಹೋದವನು ಹಾರಿ ಸಾಯುವಂತೆ ತಂತ್ರ ಮಾಡುವುದು (ನರಿಯ ಜಾಣತನ).

K 940. ಸ್ವಂತ ಮಕ್ಕಳನ್ನೇ ಕೊಲ್ಲುವ ವಂಚನೆ (ರಾಕ್ಷಸ ಮತ್ತು ಜಾಣ ಹುಡುಗ).

K 961. ಯಾವುದಾದರೊಂದು ನಿರ್ದಿಷ್ಟ ಪ್ರಾಣಿಯ ಮಾಂಸವು ಮಾತ್ರ ಕಾಯಿಲೆಗೆ ಔಷಧವೆಂದು ಹೇಳುವುದು; ಪ್ರಾಣಿಯನ್ನು ಕೊಲ್ಲುವ ಸಂಚು (ಕುಂದುರೆ ಮತ್ತು ಹುಡುಗ).

(ಇಲ್ಲಿ ಮಲತಾಯಿಯು ಹೊಟ್ಟೆನೋವಿಗೆ ಮಲಮಗನ ಪ್ರೀತಿಯ ಕುದುರೆಯ ರಕ್ತವೇ ಔಷಧಿಯಾಗಿ ಬೇಕು ಎಂದು ಹೇಳುವುದು).

**K 1000-K 1199. ತನಗೇ ಅಪಾಯವಾಗುವ ರೀತಿಯ ವಂಚನೆ :**

K 1025.2. ಹುಲಿಯು ತನ್ನ ಕಣ್ಣುಗಳನ್ನೇ ತಿನ್ನುವಂತೆ ಮಾಡುವುದು (ನರಿಯ ಜಾಣತನ).

(ಇಲ್ಲಿ ಹಂದಿಯು ತನ್ನ ಕಣ್ಣುಗಳನ್ನು ತಾನೇ ತಿನ್ನುವಂತೆ ನರಿಯು ಪ್ರೇರೇಪಿಸುತ್ತದೆ).

K 1022.1.1. ನರಿಯು ಸತ್ತ ಆನೆಯ ದೇಹವನ್ನು ತಿನ್ನುತ್ತಿರುವಾಗ ಅದರ ಒಳಗಡೆಯೇ ಬಂಧಿಯಾಗುತ್ತದೆ (ನರಿಯ ಬಂದ್ಧಿವಾದ).

**K 1200-K 1299. ಅವಮಾನ ಮಾಡುವಂತಹ ವಂಚನೆ :**

K 1217. ಮೂತ್ರ ಹೊಯ್ಯುವ ಪಾತ್ರೆಯ ಕಥೆ. ಇನಿಯನು ಮಾಂತ್ರಿಕ ಪಾತ್ರೆಗೆ ಅಂಟಿಕೊಂಡು, ನಾಚಿಕೆಯ ಅವಸ್ಥೆಯಲ್ಲಿ ಇರುವುದು (ಹೆಡ್ಡ ತಿಮ್ಮನ ಮಂತ್ರಶಕ್ತಿ).

**K 1500-K 1599. ಜಾರತನಕ್ಕೆ ಸಂಬಂಧಿಸಿದ ವಂಚನೆಗಳು :**

K 1501. ಹಾದರಗಿತ್ತಿಯ ಗಂಡ. ಜಾರ ಹೆಂಡತಿಯಿಂದ ಆವಳ ಗಂಡನು ಮೋಸ ಹೋಗುವುದು (ಹಣತೆ ; ಹೆಣ್ಣು ಮತ್ತು ಹಾವು).

K 1510. ಜಾರೆಯು ತನ್ನ ಗಂಡನನ್ನು ಮೋಸಗೊಳಿಸುವುದು (ಪ್ರಮಾಣ).

K 1513. ಹೆಂಡತಿಯ ದ್ವಂದ್ವಾರ್ಥದ ಪ್ರಮಾಣ ಮಾತು. (ಪ್ರಮಾಣ).

K 1546.1. ಹೆಂಡತಿಯು ತನ್ನ ಮಿಂಡನಿಗೆ ಒಗಟುರೂಪದ ಹಾಡು ಹೇಳುವುದರ ಮೂಲಕ ಎಚ್ಚರಿಕೆ ಕೊಡುತ್ತಾಳೆ (ಒಗಟು ಮಾತು).

**K 1600-K 1669. ವಂಚಕನು ತನ್ನ ಬಲೆಗೆ ತಾನೇ ಬೀಳುವುದು :**

K 1611. ಸ್ಥಾನಪಲ್ಲಟಗೊಂಡ ಟೊಪ್ಪಿಗಳಿಂದಾಗಿ ರಾಕ್ಷಸನು ತನ್ನ ಮಕ್ಕಳನ್ನೇ ಕೊಲ್ಲುವುದು. ನಾಯಕ ಮತ್ತು ನಾಯಕಿ ಹಾಸಿಗೆಗಳಲ್ಲಿ ತಮ್ಮ ಸ್ಥಾನಗಳನ್ನು ರಾಕ್ಷಸನ ಮಕ್ಕಳ ಸ್ಥಾನಕ್ಕೆ ಬದಲಿಸಿಕೊಂಡು, ತಮ್ಮ ಟೊಪ್ಪಿಗಳನ್ನು ಆ ಮಕ್ಕಳ ತಲೆಯ ಮೇಲೆ ಇಡುತ್ತಾರೆ. ಈ ರೀತಿ ರಾಕ್ಷಸನನ್ನು ವಂಚಿಸುತ್ತಾರೆ (ರಾಕ್ಷಸ ಮತ್ತು ಜಾಣ ಹುಡುಗ).

(ಇಲ್ಲಿ ನಾಯಕ ಮತ್ತು ನಾಯಕಿಯ ಬದಲು, ಮೂವರು ಅಣ್ಣತಮ್ಮಂದಿರು ಇದ್ದಾರೆ).

**K 1800-K1899. ವೇಷಪಲ್ಲಟದಿಂದ ಅಥವಾ ಭ್ರಮೆಯಿಂದ ವಂಚನೆ :**

K 1811.0.1. ವೇಷ ಮರೆಸಿದ ದೇವರು ಮನುಷ್ಯರ ಇಚ್ಛೆಗಳನ್ನು ಈಡೇರಿಸುವುದು (ಅಣ್ಣ–ತಂಗಿ)

K 1837. ಗಂಡಸಿನ ವೇಷದಲ್ಲಿ ಹೆಣ್ಣು ಕಾಣಿಸುವುದು (ಪ್ರಧಾನಿಯ ಮಗಳು).

K 1851. ಬದಲಿಯಾದ ಪತ್ರ. ಒಂದು ಪತ್ರವು ಅದು ಸೇರಬೇಕಾದ ಕಡೆಗೆ ಮುಟ್ಟುವ ಮೊದಲೇ ದಾರಿಯಲ್ಲಿ ಬದಲಾವಣೆಗೊಳ್ಳುವುದು ಮತ್ತು ಆ ಮೂಲಕ ಅದರ ಉದ್ದೇಶ ಭಂಗವಾಗುವುದು (ರಾಕ್ಷಸ ಮತ್ತು ಜಾಣ ಹುಡುಗ).

K 1900-K 1999. ಸೋಗುತನ (ಠಕ್ಕು ; ವಂಚನೆ) (—ಇನ್ನೊಬ್ಬನಂತೆ ವೇಷ ಹಾಕುವುದು, ತೋರ್ಪಡಿಸಿಕೊಳ್ಳುವುದು) (Impostures) :

K 1911.1.1. ಮದುವೆಗೆ ಹೋಗುವ ದಾರಿಯಲ್ಲಿ "ಖೋಟಾ ಮದುಮಗಳು" ನಿಜವಾದ ಮದುಮಗಳ ಸ್ಥಾನವನ್ನು ವಹಿಸಿಕೊಳ್ಳುವುದು (ಬದಲಾದ ಮದುಮಗಳು).

K 1911.2.2. "ಖೋಟಾ ಮದುಮಗಳು" ನಿಜವಾದ ಮದುಮಗಳನ್ನು ನೀರಿಗೆ ನೂಕುವುದು (ಬದಲಾದ ಮದುಮಗಳು).

K 1917.3. ಕಾಸಿಲ್ಲದ ವಿವಾಹಾರ್ಥಿ : ಸಹಾಯಕ ಪ್ರಾಣಿಯು ಆತನನ್ನು ಶ್ರೀಮಂತ ಎಂದು ತಿಳಿಸುವುದು ಮತ್ತು ಆ ಮೂಲಕ ಅವನಿಗೆ ವಿವಾಹ ಮಾಡಿಸುವುದು (ಜಾಣ ಮಂಗ).

K 1931.4. ಸೋಗುತನದವರು ನಾಯಕನನ್ನು ಹೊಂಡಕ್ಕೆ ಎಸೆಯುವುದು (ಬದಲಾದ ಮದುಮಗಳು). (ಇಲ್ಲಿ ನಾಯಕಿಯನ್ನು ಹೊಂಡಕ್ಕೆ ಎಸೆಯುವುದು).

K 1950. ಠಕ್ಕು ಶೌರ್ಯ (ಹೆಡ್ಡ ತಿಮ್ಮನ ಮಂತ್ರಶಕ್ತಿ ; ಉಗ್ರಾಣಿ ಬೊಮ್ಮಯ).

K 1951. ಠಕ್ಕು ಯೋಧ (ಹೆಡ್ಡ ತಿಮ್ಮನ ಮಂತ್ರಶಕ್ತಿ).

K 1951.1. ನೊಣಗಳನ್ನು ಕೊಂದ ಬಡಾಯಿಕೋರ (ಒಂದು ಪೆಟ್ಟಿಗೆ ಏಳು ; ಹೆಡ್ಡ ತಿಮ್ಮನ ಮಂತ್ರಶಕ್ತಿ).

"ಒಂದು ಪೆಟ್ಟಿಗೆ ಏಳು." ಏಳು ನೊಣಗಳನ್ನು ಕೊಂದ ಒಬ್ಬ ದರ್ಜಿಯು "ಒಂದು ಪೆಟ್ಟಿಗೆ ಏಳು" ಎಂದು ಫಲಕ ಹಾಕಿಕೊಳ್ಳುತ್ತಾನೆ. ಅವನನ್ನು ಮಹಾಯೋಧ ಎಂದು ಭಾವಿಸಿ, ಗೌರವಿಸುತ್ತಾರೆ.

K 1951.3.2. ಠಕ್ಕು ಯೋಧನು ತನ್ನ ಬಡಾಯಿಯಿಂದ ಹುಲಿಯನ್ನು ಹೆದರಿಸುವುದು (ಹೆಡ್ಡ ತಿಮ್ಮನ ಮಂತ್ರಶಕ್ತಿ ; ಉಗ್ರಾಣಿ ಬೊಮ್ಮಯ).

K 1956. ಠಕ್ಕು ಬುದ್ಧಿವಂತ (ಸಕ್ಕೋಟು ಸಂಕ್ರಾಂತಿ ; ಉಗ್ರಾಣಿ ಬೊಮ್ಮಯ).

K 1956.1.1. ಠಕ್ಕು ಬುದ್ಧಿವಂತನು ಮಂತ್ರಶಕ್ತಿಯಿಂದ ಕಳುವಾದ ವಸ್ತುಗಳನ್ನು ಕಂಡು ಹುಡುಕಿದೆ ಎಂದು ಹೇಳುವುದು. ಅವನು ನಿಜವಾಗಿ ಕಳ್ಳರಲ್ಲಿಯೇ ಕಳವಿನ ವಸ್ತುಗಳನ್ನು ತೋರಿಸುವಂತೆ ಒತ್ತಾಯಿಸಿರುತ್ತಾನೆ (ಉಗ್ರಾಣಿ ಬೊಮ್ಮಯ).

K 1956.8. ಠಕ್ಕು ಬುದ್ಧಿವಂತನು ತನ್ನ ಮನೆಯನ್ನು ಉರಿಸಿ, ಅದರಲ್ಲಿ ತನ್ನ ಅದ್ಭುತ ಗ್ರಂಥಗಳು ಸುಟ್ಟು ಹೋದುವು ಎಂದು ನಟಿಸುವುದು ಮತ್ತು ಆ ಮೂಲಕ ಭವಿಷ್ಯ ಹೇಳುವ ಕೆಲಸಕ್ಕೆ ಮತ್ತೆ ಕರೆಯುವಂತೆ ಮಾಡುವುದು (ಸಕ್ರೋಟು ಸಂಕ್ರಾಂತಿ).

K 1964. ಠಕ್ಕು ಭವಿಷ್ಯವಾದಿ (ಸಕ್ರೋಟು ಸಂಕ್ರಾಂತಿ ; ಉಗ್ರಾಣಿ ಬೊಮ್ಮಯ).

K 2100-K 2199 ಸುಳ್ಳು ಅಪಾದನೆಗಳು :

K 2101. ಸುಳ್ಳು ಅಪಾದನೆಗೆ ಒಳಗಾದ ಮಂತ್ರಿಯು ತನ್ನ ಜಾಣತನದಿಂದ ಮತ್ತೆ ಸ್ಥಾನದಲ್ಲಿ ಸ್ಥಾಪಿತನಾಗುತ್ತಾನೆ (ಒಂದು ಭತ್ತಕ್ಕೆ ಒಂದು ಅಕ್ಕಿ).

(ಇಲ್ಲಿ ರಾಜಕುಮಾರನು ಮಂತ್ರಿಯ ಮಗನನ್ನು ತಪ್ಪು ತಿಳಿದು ಮರಣದಂಡನೆಗೆ ಆಜ್ಞಾಪಿಸುತ್ತಾನೆ. ಆದರೆ ಮಂತ್ರಿಯ ಮಗನು ಜಾಣತನದಿಂದ ಮರೆಯಾಗಿದ್ದು, ಸತ್ಯಸಂಗತಿ ಬಯಲಾದ ಮೇಲೆ ಕಾಣಿಸಿಕೊಳ್ಳುತ್ತಾನೆ).

K 2115. ಪ್ರಾಣಿಗೆ ಜನ್ಮಕೊಟ್ಟ ಮಿಥ್ಯಾಪವಾದ. ಒಬ್ಬಳು ಹೆಂಗಸು ಪ್ರಾಣಿಗಳಿಗೆ ಜನ್ಮ ಕೊಟ್ಟಳೆಂದು ಅವಳ ಮೇಲೆ ಅಪವಾದ ಹೊರಿಸುವುದು. ಅವಳು ಹೆತ್ತ ಮಕ್ಕಳನ್ನು ದೂರ ಕೊಂಡುಹೋಗಿ, ಬದಲಾಗಿ ಪ್ರಾಣಿಗಳನ್ನು ಇರಿಸುವುದು (ಅಣ್ಣ-ತಂಗಿ ; ಅವಳಿ ಮಕ್ಕಳು).

K 2131.3. ಹೆಂಗಸೊಬ್ಬಳು ಸ್ನೇಹಿತರಿಬ್ಬರಲ್ಲಿ ಒಬ್ಬನ ಕಿವಿಯಲ್ಲಿ ಪಿಸುಮಾತು ಹೇಳುವಂತೆ ಮಾಡಿ, ಅದರ ಮಿತ್ರುತ್ವವನ್ನು ಹಾಳು ಮಾಡುವುದು (ಒಂದು ಭತ್ತಕ್ಕೆ ಒಂದು ಅಕ್ಕಿ).

K 2200-K 2299. ದುಷ್ಟರು ಮತ್ತು ದ್ರೋಹಿಗಳು :

K 2211.0.1. ಕ್ರೂರಿಯಾದ ಅಣ್ಣಂದಿರು (ರಾಕ್ಷಸ ಮತ್ತು ಜಾಣ ಹುಡುಗ).

K 2212.2. ಕ್ರೂರಿಯಾದ ಅತ್ತಿಗೆ (ವಜ್ರಕುಮಾರ).

K 2222. ಕ್ರೂರಿಯಾದ ಸವತಿ (ಅಣ್ಣ-ತಂಗಿ ; ಅವಳಿ ಮಕ್ಕಳು).

K 2232. ಕ್ರೂರಿಯಾದ ಸೇವಕಿ (ಬದಲಾದ ಮದುಮಗಳು).

K 2300-K 2399 ಇತರ ವಂಚನೆಗಳು :

K 2310. ದ್ವಂದ್ವಾರ್ಥದ ಮಾತಿನ ಮೂಲಕ ವಂಚನೆ (ಪ್ರಮಾಣ).

L ಅದೃಷ್ಟ ಬದಲಾಗುವುದು (Reversal of Fortune) :

L 10. ಜಯಶಾಲಿಯಾದ ಕೊನೆಯ ಮಗ (ರಾಕ್ಷಸ ಮತ್ತು ಜಾಣ ಹುಡುಗ ; ತಂದೆಯ ಸಾಲಕ್ಕೆ ತಿಮ್ಮನ ಕೋಲ).

L 31. ಕಿರಿಯ ತಮ್ಮನು ಅಣ್ಣನಿಗೆ ಸಹಾಯ ಮಾಡುವುದು (ರಾಕ್ಷಸ ಮತ್ತು ಜಾಣ ಹುಡುಗ).

L 113.9. ದರ್ಜಿಯು ನಾಯಕನಾಗಿ (ಒಂದು ಪೆಟ್ಟಿಗೆ ಏಳು).

L 141. ಹೆಡ್ಡನು ಜಾಣನನ್ನು ಮೀರಿಸುವುದು (ಸಕ್ರೋಟು ಸಂಕ್ರಾಂತಿ).

L 161.1. ಬಡ ಹುಡುಗ ಮತ್ತು ಶ್ರೀಮಂತ ಹುಡುಗಿಯ ನಡುವಿನ ಮದುವೆ (ಜಾಣ ಮಂಗ).

L 162. ಸಾಮಾನ್ಯ ಹುಡುಗಿಯು ರಾಜಕುಮಾರನನ್ನು ಮದುವೆಯಾಗುವುದು (ಹುಲಿಯು ತಿಂದ ಹುಡುಗಿ).

L 200. ನಮ್ರತೆಯು ಪುರಸ್ಕಾರವನ್ನು ತರುವುದು (ಅದೃಷ್ಟದ ಪಾಠ).

L 400. ಸೊಕ್ಕು ಇಳಿಯುವುದು (ಸೊಕ್ಕು ಇಳಿಯಿತು).

## M ಭವಿಷ್ಯವನ್ನು ಮೊದಲೇ ತಿಳಿಯುವುದು (Ordaining the Future) :

M 105. ದ್ವಂದ್ವಾರ್ಥದ ಪ್ರಮಾಣ ಮಾತು (ಪ್ರಮಾಣ).

M 311.0.3.1. ಭವಿಷ್ಯ : ಮಕ್ಕಳಿಲ್ಲದವರಿಗೆ ಮಗು ಜನಿಸುವುದು (ಅಣ್ಣ-ತಂಗಿ).

## N ಆಕಸ್ಮಿಕ ಮತ್ತು ವಿಧಿ (Chance and Fate) :

N 170. ಅದೃಷ್ಟದ ಆಟ (ಅದೃಷ್ಟದ ಪಾಠ).

N 332. ಆಕಸ್ಮಿಕ ವಿಷಪ್ರಾಶನ (ಹೆಡ್ಡ ತಿಮ್ಮನ ಮಂತ್ರಶಕ್ತಿ).

N 332.6. ರಹಸ್ಯವಾಗಿ ವಿಷಪೂರಿತವಾದ ಆಹಾರವನ್ನು ತಿಂದು ಸಾಯುವುದು (ಹೆಡ್ಡ ತಿಮ್ಮನ ಮಂತ್ರ ಶಕ್ತಿ).

N 454. ಮಸ್ತುಗಳ ಸಂಭಾಷಣೆಯು ಕಿವಿಯ ಮೇಲೆ ಬೀಳುವುದು (ಹಣತೆ ; ಹೆಣ್ಣು ಮತ್ತು ಹಾವು).

N 454.2. ರಾಜನು ದೀಪಗಳ ಸಂಭಾಷಣೆಯನ್ನು ಆಲಿಸುವುದು (ಹಣತೆ ; ಹೆಣ್ಣು ಮತ್ತು ಹಾವು).

(ಈ ಎರಡು ಕಥೆಗಳಲ್ಲಿಯೂ ಸಾಯಬೇಕಾಗಿರುವವನ ತಂಗಿಯು ದೀಪಗಳ ಸಂಭಾಷಣೆಯನ್ನು ಆಲಿಸುತ್ತಾಳೆ).

N 475. ಗುಪ್ತನಾಮವನ್ನು ಹೊಂಚಿ ಕೇಳುವವನು ಆಲಿಸುವುದು (ಉಗುರಿನ ಮರ).

N 611.1.1. ಕೊಲೆಗಾರನ ಹೆಸರನ್ನು ಆಕಸ್ಮಿಕವಾಗಿ ಉಚ್ಚರಿಸುವುದು (ಆ ಹೆಸರು ಸಂಭಾಷಣೆಯ ಯಾವುದೋ ಸಾಮಾನ್ಯ ಶಬ್ದದಂತೆಯೇ ಇರುತ್ತದೆ (ಉಗ್ರಾಣಿ ಬೊಮ್ಮಯ).

N 741. ಗಂಡ ಮತ್ತು ಹೆಂಡತಿಯ ಅನಿರೀಕ್ಷಿತ ಸಮಾಗಮ (ಬದಲಾದ ಮದುಮಗಳು).

## P ಸಮಾಜ (Society) :

P 250.0.3. ಒಬ್ಬಳು ಸಹೋದರಿ ಮತ್ತು ಮೂವರು ಸಹೋದರರು (ಒಮ್ಮೆ ಇಳಿಯೋ ಜಂಬೂನೇರಳೆಯೋ).

P 251.4.4. ವೈದೃಶ್ಯ ಗುಣದ ಇಬ್ಬರು ಸಹೋದರರು (ಕೆಲಸದ ಹುಡುಗ).

P 2523. ಏಳು ಮಂದಿ ಸಹೋದರಿಯರು (ಕುದುರೆ ಮತ್ತು ಹುಡುಗ).

P 253.8. ಜಾಣ ಸಹೋದರಿಯು ಸಹೋದರನ ಜೀವ ಉಳಿಸುವುದು (ಹಣತೆ; ಹಾವು ಮತ್ತು ಹೆಣ್ಣು).

P 262.1. ಅತ್ತೆ–ಸೊಸೆಯರ ನಡುವಿನ ಕೆಟ್ಟ ಸಂಬಂಧ (ಅತ್ತೆ–ಸೊಸೆ).

P 282.3. ಮಲತಾಯಿಯು ಮಲಮಗನನ್ನು ಕಾಮಿಸುವುದು (ಕುದುರೆ ಮತ್ತು ಹುಡುಗ).

P 310. ಸ್ನೇಹ (ಒಂದು ಭತ್ತಕ್ಕೆ ಒಂದು ಅಕ್ಕಿ)

P 311.8. ರಾಜಕುಮಾರ ಮತ್ತು ಸಾಮಾನ್ಯ ಮನುಷ್ಯನ ನಡುವಿನ ಸ್ನೇಹ (ಒಂದು ಭತ್ತಕ್ಕೆ ಒಂದು ಅಕ್ಕಿ) (ಇಲ್ಲಿ ರಾಜಕುಮಾರ ಮತ್ತು ಮಂತ್ರಿಯ ಮಗ–ಇವರ ಸ್ನೇಹ).

## Q ಬಹುಮಾನಗಳು ಮತ್ತು ಶಿಕ್ಷೆಗಳು (Rewards and Punishments):

Q 241. ಜಾರತನಕ್ಕಾಗಿ ಶಿಕ್ಷಿಸುವುದು (ಹಣತೆ; ಹೆಣ್ಣು ಮತ್ತು ಹಾವು; ಉಗ್ರಾಣಿ ಬೊಮ್ಮಯ).

Q 261.2. ಕ್ರೂರಿಯಾದ ಹೆಂಡತಿಯನ್ನು ಶಿಕ್ಷಿಸುವುದು (ಹಣತೆ; ಹೆಣ್ಣು ಮತ್ತು ಹಾವು; ಮಂಜಗ ಮತ್ತು ಅವಳ ಮಾವ; ಅಣ್ಣ–ತಂಗಿ; ವಜ್ರಕುಮಾರ; ಹುಲಿಯು ತಿಂದ ಹುಡುಗಿ).

Q 262. ವಂಚಕರನ್ನು ಶಿಕ್ಷಿಸುವುದು (ಬದಲಾದ ಮದುಮಗಳು).

Q 292.2. ತಬ್ಬಲಿಗಳಿಗೆ ಆಶ್ರಯ ಕೊಡದಿರುವುದಕ್ಕಾಗಿ ಶಿಕ್ಷಿಸುವುದು (ಮಂಜಗ ಮತ್ತು ಅವಳ ಮಾವ).

Q 331. ಅಹಂಕಾರಕ್ಕಾಗಿ ಶಿಕ್ಷಿಸುವುದು (ಸೊಕ್ಕು ಇಳಿಯಿತು).

Q 411. ಮರಣದಂಡನೆ (ಉಗ್ರಾಣಿ ಬೊಮ್ಮಯ; ಹೆಣ್ಣು ಮತ್ತು ಹಾವು).

Q 412.4. ಕೌರ್ಯಕ್ಕೆ ಶಿಕ್ಷೆಯಾಗಿ ಮರಣದಂಡನೆ (ಅಣ್ಣ–ತಂಗಿ; ವಜ್ರಕುಮಾರ; ಹುಲಿಯು ತಿಂದ ಹುಡುಗಿ; ಮಂಜಗ ಮತ್ತು ಅವಳ ಮಾವ).

Q 482. ಶಿಕ್ಷೆ : ಘನವ್ಯಕ್ತಿಯು ಕೂಲಿ ಕೆಲಸವನ್ನು ಮಾಡಬೇಕು (ಪ್ರಧಾನಿಯ ಮಗಳು).

(ಇಲ್ಲಿ ರಾಜಕುಮಾರನು ಹೂವಿನ ತೋಟಕ್ಕೆ ನೀರು ಹೊಯ್ಯಬೇಕಾಗುತ್ತದೆ).

Q 482.1. ರಾಜಕುಮಾರಿಯು ಕೆಲಸದ ಹೆಣ್ಣಿನಂತೆ ಸೇವೆ ಮಾಡುತ್ತಾಳೆ (ಅವಳಿ ಮಕ್ಕಳು).

Q 488.2. ತಲೆ ಬೋಳಿಸುವ ಶಿಕ್ಷೆ (ಹಣತೆ).

Q 542. ಪ್ರಾಯಶ್ಚಿತ್ತ: ಎಲ್ಲ ಸಂಪಾದನೆಯನ್ನೂ ಬಡವರಿಗೆ ಕೊಡುವುದು (ದಿಕ್ಕಿಲ್ಲದ ಮಕ್ಕಳು ದಿಕ್ಕುಗಾಣದ ದೇಶಕ್ಕೆ).

R ಬಂಧಿಗಳು ಮತ್ತು ತಲೆ ತಪ್ಪಿಸಿಕೊಂಡವರು (Captives and Fugitivies) :

R 155.1. ಕಿರಿಯ ತಮ್ಮನು ಅಣ್ಣಂದಿರನ್ನು ಬಂಧನದಿಂದ ಪಾರು ಮಾಡುತ್ತಾನೆ (ರಾಕ್ಷಸ ಮತ್ತು ಜಾಣ ಹುಡುಗ).

R 311. ತಪ್ಪಿಸಿಕೊಳ್ಳಲು ಮರದ ಆಶ್ರಯವನ್ನು ಪಡೆಯುವುದು (ಒಮ್ಮೆ ಇಳಿಯೇ ಜಂಬುನೇರಳೆಯೇ).

S ಅಸಹಜವಾದ ಕಾರ್ಯ (Unnatural Cruelty) :

S 30. ಕ್ರೂರಿಯಾದ ಮಲ ಸಂಬಂಧಿ ಅಥವಾ ಸಾಕು ಸಂಬಂಧಿಗಳು (ಮಂಜಗ ಮತ್ತು ಅವಳ ಮಾವ).

(ಇಲ್ಲಿ ಕ್ರೂರಿಯಾದ ಸಾಕು ತಾಯಿ. ಇದಕ್ಕೆ ಪ್ರತ್ಯೇಕ ಆಶಯ ಸಂಖ್ಯೆ ಕೊಟ್ಟಿಲ್ಲ. ಕ್ರೂರಿಯಾದ ಸಾಕು ತಂದೆ–S 36).

S 31. ಕ್ರೂರಿಯಾದ ಮಲತಾಯಿ (ಕುದುರೆ ಮತ್ತು ಹುಡುಗ).

S 55. ಕ್ರೂರಿಯಾದ ಅತ್ತಿಗೆ (ವಜ್ರಕುಮಾರ; ಹುಲಿಯು ತಿಂದ ಹುಡುಗಿ).

S 141. ದೋಣಿಯಲ್ಲಿ ತೊರೆದು ಬಿಡುವುದು. ಒಂದು ವ್ಯಕ್ತಿಯನ್ನು–ಸಾಮಾನ್ಯವಾಗಿ, ಹೆಂಗಸನ್ನು ಅಥವಾ ಮಗುವನ್ನು–ದೋಣಿಯಲ್ಲಿ ಹಾಕಿ ತೇಲಿ ಬಿಡುವುದು. ದೋಣಿಯ ಬದಲು ಬುಟ್ಟಿ, ಪೆಟ್ಟಿಗೆ ಮುಂತಾದುವನ್ನು ಬಳಸುತ್ತಾರೆ (ಅವಳಿ ಮಕ್ಕಳು).

S 301. ಮಕ್ಕಳನ್ನು ತೊರೆದು ಬಿಡುವುದು (ಅವಳಿ ಮಕ್ಕಳು).

S 314. ಅವಳಿ ಮಕ್ಕಳನ್ನು ತೊರೆದು ಬಿಡುವುದು (ಅವಳಿ ಮಕ್ಕಳು).

S 322. ವಿರೋಧಿ ಸಂಬಂಧಿಗಳು ಮಕ್ಕಳನ್ನು ತೊರೆಯುವುದು (ಅವಳಿ ಮಕ್ಕಳು).

S 331. ಮಗುವನ್ನು ದೋಣಿಯಲ್ಲಿ ತೇಲಿ ಬಿಡುವುದು (ಅವಳಿ ಮಕ್ಕಳು).

T ಕಾಮ (Sex) :

T 51.3. ಗಂಡು ಹೆಣ್ಣುಗಳ ಚಿತ್ರಗಳ ಮೂಲಕ ಮದುವೆ ಜೋಡಿಯನ್ನು ನಿಶ್ಚಯಿಸುವುದು (ಬದಲಾದ ಮದುವೆಗಳು).

T 91.6.2. ರಾಜ ಅಥವಾ ರಾಜಕುಮಾರನು ಸಾಮಾನ್ಯ ಹೆಣ್ಣೊಬ್ಬಳನ್ನು ಪ್ರೇಮಿಸುವುದು (ಹುಲಿಯು ತಿಂದ ಹುಡುಗಿ).

T 91.6.3. ರಾಜಕುಮಾರನು ಪ್ರಧಾನಿಯ ಮಗಳನ್ನು ಪ್ರೇಮಿಸುವುದು (ಪ್ರಧಾನಿಯ ಮಗಳು).

T 121. ಅಸಮಾನವಾದ ಮದುವೆ (ಜಾಣ ಮಂಗ).

T 121.6. ಗಂಡಸೊಬ್ಬನು ತನ್ನ ಕೆಲಸದ ಹುಡುಗಿಯನ್ನು ಮದುವೆಯಾಗುವುದು (ಕುದುರೆ ಮತ್ತು ಹುಡುಗ).

T 121.8. ರಾಜನು ಸಾಮಾನ್ಯ ಹುಡುಗಿಯನ್ನು ಮದುವೆಯಾಗುವುದು (ವಜ್ರಕುಮಾರ).

T 257 2. ಸವತಿಯರ ಮತ್ಸರ (ಅಣ್ಣ–ತಂಗಿ; ಅವಳಿ ಮಕ್ಕಳು).

T 320. ಒಲ್ಲದ ಪ್ರೇಮಿಯಿಂದ ತಪ್ಪಿಸಿಕೊಳ್ಳುವುದು (ಒಮ್ಮೆ ಇಳಿಯೇ ಜಂಬುನೇರಳೆಯೇ.)

T 415.5. ಅಣ್ಣ ಮತ್ತು ತಂಗಿಯರ ನಡುವಿನ ಮದುವೆ (ಒಮ್ಮೆ ಇಳಿಯೇ ಜಂಬುನೇರಳೆಯೇ).

T 418. ಕಾಮಿಯಾದ ಮಲತಾಯಿ (ಕುದುರೆ ಮತ್ತು ಹುಡುಗ).

T 481. ಜಾರತನ (ಹಣತೆ; ಹೆಣ್ಣು ಮತ್ತು ಹಾವು).

T 511.1.3. ಮಾವಿನಹಣ್ಣನ್ನು ತಿಂದು ಗರ್ಭಧರಿಸುವುದು (ಅಣ್ಣ–ತಂಗಿ).

T 587. ಅವಳಿಗಳ ಜನನ (ಅವಳಿ ಮಕ್ಕಳು).

V ಧರ್ಮ (Religion) :

V. 12.4 9. ಕುದುರೆಯನ್ನು ಬಲಿ ಕೊಡುವುದು (ಕುದುರೆ ಮತ್ತು ಹುಡುಗ).

Z ಆಶಯುಗಳ ಇತರ ಗುಂಪುಗಳು (Miscellaneous Groups of Motifs):

Z 71.1. ಸೂತ್ರರೂಪದ ಅಂಕೆ : ಮೂರು (ಪ್ರಧಾನಿಯ ಮಗಳು).

Z 71.5.1. ಏಳು ಮಂದಿ ಸಹೋದರರು ಮತ್ತು ಒಬ್ಬಳು ಸಹೋದರಿ (ವಜ್ರಕುಮಾರ ; ಹುಲಿಯು ತಿಂದ ಹುಡುಗಿ).

(ಇಲ್ಲಿನ ಕಥೆಗಳಲ್ಲಿ ಏಳು ಮಂದಿ ಅಣ್ಣಂದಿರಿಗೆ ಒಬ್ಬಳು ತಂಗಿ ಇರುತ್ತಾಳೆ).

Z 71.5.2. ಏಳು ಸಮುದ್ರಗಳ ಆಚೆಗೆ ಪ್ರಯಾಣ (ಅಣ್ಣ-ತಂಗಿ; ಪ್ರಧಾನಿಯ ಮಗಳು).

Z 71.1.2. ಸೂತ್ರರೂಪದ ಸಂಖ್ಯೆ : ನಾಲ್ವತ್ತು (ಪ್ರಧಾನಿಯ ಮಗಳು).

Z 175.2. ಸಾಂಕೇತಿಕ ಸಂದೇಶಗಳ ಮೂಲಕ ಪ್ರೇಮಿಗಳು ಗೊತ್ತು ಮಾಡಿಕೊಳ್ಳುವುದು (ಒಂದು ಭತ್ತಕ್ಕೆ ಒಂದು ಅಕ್ಕಿ).

# ತುಳು ಗಾದೆಗಳು

(1) ಕಲಾ ಮೌಲ್ಯ : ಯಾವುದೇ ಭಾಷೆಯ ಗಾದೆಗಳ ಲಕ್ಷಣ ಸ್ವರೂಪವನ್ನು ಕುರಿತು ಪಾಶ್ಚಿಮಾತ್ಯ ವಿದ್ವಾಂಸರು ಸಾಕಷ್ಟು ವಿವರವಾಗಿ ಚರ್ಚಿಸಿದ್ದಾರೆ. ಅವುಗಳನ್ನು ಇಲ್ಲಿ ಪುನರಾವರ್ತಿಸು ವುದು ಅನಾವಶ್ಯಕ. ಗಾದೆಗಳಲ್ಲಿ ಸಂಕ್ಷಿಪ್ತತೆ, ವಿವೇಕ ಪೂರ್ಣತೆ, ತೀಕ್ಷ್ಣತೆ, ಸೂತ್ರಪ್ರಾಯತೆ, ಸಮತೂಕ, ಪ್ರಾಸ, ಅನುಪ್ರಾಸ, ಪುನರಾವರ್ತನೆ, ಉಪಮೆ, ರೂಪಕ, ಮುಂತಾದ ಅಲಂಕಾರಗಳು—ಈ ಲಕ್ಷಣಗಳು ಸಾಮಾನ್ಯವಾಗಿ ಕಾಣಿಸುತ್ತವೆ. ತುಳು ಗಾದೆಗಳಲ್ಲಿಯೂ ಈ ಸಾಮಾನ್ಯ ಲಕ್ಷಣಗಳನ್ನು ಕಾಣಬಹುದು.

1. ಸಂಕ್ಷಿಪ್ತತೆ : ಗಾದೆ ಎಂಬುದು ಸಂಕ್ಷಿಪ್ತವಾದ ವಾಕ್ಯ. ಸಾಮಾನ್ಯವಾಗಿ ಇದಕ್ಕೆ ಅಪವಾದಗಳು ಸಿಗುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಹೆಚ್ಚು ಬುದ್ಧಿವಂತಿಕೆಯ ಮಾತುಗಳು ಗಾದೆಯ ರೂಪವನ್ನು ತಾಳಿದಾಗ ಸ್ವಲ್ಪ ದೀರ್ಘವಾಗಿ ಇರುವುದು ಉಂಟು. ಇನ್ನು ಕೆಲವು ಬಾರಿ ಒಂದೇ ಗಾದೆಯಲ್ಲಿ ಎರಡು ಅಥವಾ ಮೂರು ಗಾದೆಗಳು ಒಟ್ಟುಸೇರುವುದು ಉಂಟು.

ಉದಾ : 1. ಏರಿ ತಿಂದ್‌ದ್ ಎರು ಮಾರ್ದ್‌ಗೆ
ಪರುಗೊಟ್ಟೆ ಬೆಲ್ಲ ತಿಂದ್‌ದ್ ಮುರು ಮಾರ್‌ದೆಗೆ
ಕೊರಂಟ್ ತಿಂದ್‌ದ್ ಕೊಡಂಗೆ ಮಾರ್‌ದೆಗೆ
[ಏರಿ ಮೀನನ್ನು ತಿಂದು ಹೋರಿಯನ್ನು ಮಾರಿದ್ದಾನಂತೆ.
ಬೆಲ್ಲ ತಿಂದು 'ಮುರು' ಆಭರಣ ಮಾರಿದ್ದಾನಂತೆ.
ಗೋಡಂಬಿ ತಿಂದು 'ಕೊಡಂಗೆ' ಆಭರಣವನ್ನು ಮಾರಿದ್ದಾನಂತೆ.]

ಇಲ್ಲಿ 3 ಗಾದೆಗಳು ಒಟ್ಟಿಗೆ ಕಾಣಿಸುತ್ತವೆ. ಇನ್ನು ಕೆಲವು ಬಾರಿ ಒಂದು ಜನಪದ ನುಡಿಗಟ್ಟನ್ನು ಗಾದೆ ಎಂದು ಭಾವಿಸುವುದು ಉಂಟು.

ಉದಾ : 1. ಕೊಂಡಜದ ಕಲ್ಲ್ ಉಡಾರ್ಗೆ ಆವೊಡು
ಗುಂಜ್ಜರ ಕೆದು ಪೇರ್ ಆವೊಡು
ಕಾರ್ಲದ ಬಾಕ್ಯಾರ್ ತಂಜಣ ಆವೊಡು
ಅಪ್ಪೆ ದುಗ್ಗಿ ಬಳಸೊಡು, ಮಂಗೆ ಮುಂಣಿ ಉಣೊಡು.
[ಕೊಂಡಜದ ಕಲ್ಲು ಊಟದ ಶಟ್ಟೆ ಆಗಬೇಕು.
ಗುಂಜ್ಜರ ಕೆರೆ ಹಾಲು ಆಗಬೇಕು.
ಕಾರ್ಕಳದ ಬಾಕಿ ಮಾರು ಗದ್ದೆ ತಂಗುಳನ್ನ ಆಗಬೇಕು.
ತಾಯಿ ಮಾಡಬೇಕು, ಮಗ ಮುಂಣಿ ಉಣ್ಣಬೇಕು.]

ಇದು ಅಗೋಳಿ ಮಂಜಣ ಕತೆಯ ಕೊನೆಯಲ್ಲಿ ಬರುವ ಒಂದು ನುಡಿಗಟ್ಟು. ಆದರೆ ಇದನ್ನು ಜನಪ್ರಿಯತೆಯ ಕಾರಣದಿಂದಾಗಿ ಗಾದೆ ಎಂದು ಭಾವಿಸಿದ್ದೂ ಉಂಟು. ಆದರೆ ಇದು ಲಕ್ಷಣಬದ್ಧವಾದ ಗಾದೆಯಾಗುವುದಿಲ್ಲ. ಅದೇ ರೀತಿ ಹಾಸ್ಯಮಯವಾದ ಸಂದರ್ಭಕ್ಕೆ ಸಂಬಂಧಿಸಿದ ಮಾತಂಕತೆಯ ಒಂದು ತುಣುಕನ್ನು ಗಾದೆ ಎಂದು ಕೆಲವು ಬಾರಿ ಭಾವಿಸಲಾಗಿದೆ.

2. ವಿವೇಕಪೂರ್ಣತೆ : ಗಾದೆಗಳಲ್ಲಿ ಜ್ಞಾನ, ಜೀವನಾನುಭವ ಸಾಮಾನ್ಯವಾಗಿ ಕಾಣಿಸಿಕೊಳ್ಳುತ್ತದೆ. ಆದರೆ ಅಲ್ಲಿ ವ್ಯಕ್ತವಾಗುವ ಎಲ್ಲ ವಿಚಾರಗಳೂ ಸತ್ಯವಾಗಿ ಇರಬೇಕಾಗಿಲ್ಲ. ತಮ್ಮ ಅನುಭವಕ್ಕೆ ಬಂದ, ತಮಗೆ ಸರಿಯೆಂದು ಕಂಡ ಯಾವನೋ ಒಬ್ಬನ ಅಭಿಪ್ರಾಯವು ಗಾದೆಯಾಗಿ ಪರಿವರ್ತಿತವಾಗಬಹುದು. ಆದ್ದರಿಂದಲೇ ಗಾದೆಗಳಲ್ಲಿ ಅನೇಕ ಬಾರಿ ಕಾಣುವ ಸತ್ಯ ಪಾರ್ಶ್ವಿಕವಾದುದು. ಇಲ್ಲಿ ಭಾಷಾಭಿವ್ಯಕ್ತಿ ಪ್ರಧಾನವಾಗುತ್ತದೆಯೇ ಹೊರತು ಭಾವಾಭಿವ್ಯಕ್ತಿ ಪ್ರಧಾನವಾದುದಲ್ಲ. ಜಾತಿ, ಕಸುಬುಗಳನ್ನು ವಿಡಂಬಿಸುವಾಗ, ಕೌಟುಂಬಿಕ ವ್ಯಕ್ತಿಗಳ ನಡುವಿನ ಸಂಬಂಧವನ್ನು ಹೇಳುವಾಗ, ಯಾವುದೇ ಪ್ರಾಣಿಯೊಂದರ ನಡತೆಯ ಬಗ್ಗೆ ಅಭಿಪ್ರಾಯವನ್ನು ಕೊಡುವಾಗ, ಇದೇ ರೀತಿಯ ಅನೇಕ ಸಂದರ್ಭಗಳಲ್ಲಿ ಯಾವುದೇ ಸತ್ಯಾಂಶವಿಲ್ಲದ ಗಾದೆಗಳು ಅನೇಕ ಹುಟ್ಟಿಕೊಂಡಿವೆ.

ಉದಾ : 1. ಅಪ್ಪೆನ ಮೂಂಕುತಿದ್ದಾಂಡಲ ಆಚಾರಿಯಗೆ ಕಂಡೊಡು.
[ತಾಯಿಯ ಮೂಗುತಿಯಿಂದಲಾದರೂ ಅಕ್ಕಸಾಲಿಗನಿಗೆ ಕದಿಯಬೇಕು.]

2. ಅಮಾಸೆಡ್ ಪುಟ್ಟುನ ಅಮ್ಮಗ್ ಹಾಳ್.
[ಅಮಾವಾಸ್ಯೆಯಂದು ಹುಟ್ಟಿದರೆ ತಂದೆಗೆ ಕೇಡು.]

3. ಏಡ್ ಪೋನ ನಾಡ್ ಹಾಳ್, ಕೊಂಕಣಿ ಪೋನ ಊರು ಹಾಳ್.
[ಆಡು ಹೋದ ನಾಡು ಹಾಳು, ಕೊಂಕಣಸ್ಥ ಹೋದ ಊರು ಹಾಳು.] ಇತ್ಯಾದಿ. ಆದರೆ ಸರ್ವಕಾಲಿಕ ಸತ್ಯ ಸಂಗತಿಗಳನ್ನು ಬಳಸಿಕೊಂಡಿರುವ ಗಾದೆಗಳು ಅಪಾರ ಸಂಖ್ಯೆಯಲ್ಲಿ ಇವೆ.

3. ಸೂತ್ರಪ್ರಾಯತೆ : ಗಾದೆಯು ಸಂಕ್ಷಿಪ್ತವಾದ ವಾಕ್ಯವಾಗಿರುವುದರಿಂದ ಸೂತ್ರಪ್ರಾಯತೆ ಅದರ ಅನಿವಾರ್ಯ ಲಕ್ಷಣ. ಒಂದೇ ಮಾತಿನಲ್ಲಿ ಸೂತ್ರಪ್ರಾಯವಾಗಿ ಅಚ್ಚುಕಟ್ಟಾಗಿ ಒಂದು ವಿಚಾರವನ್ನು ವ್ಯಕ್ತ ಮಾಡುವುದು ಇಲ್ಲಿ ಕಂಡು ಬರುತ್ತದೆ. ಒಂದು ಸಂಪೂರ್ಣವಾದ ವಾಕ್ಯದ ರೂಪದಲ್ಲಿ ಇಂತಹ ಗಾದೆಗಳು ಇರುತ್ತವೆ.

ಉದಾ : 1. ಅಕುಲಕುಲ್ನ ತರೆಕ್ಕ್ ಅಕುಲಕುಲ್ನ ಕೈ.
[ಅವರವರ ತಲೆಗೆ ಅವರವರ ಕೈ.]

2. ಅಗ್ಗೊದ ಮುಂದೆಗ್ ಗುಜ್ಜೆದ ಕಜ್ಪು.
[ಸಾಮಾನ್ಯ ಜನರಿಗೆ ಹಲಸಿನಕಾಯಿ ಪಲ್ಯ.]

3. ಅಜ್ಜಿ ಸಾಂಕ್‌ನ ಪುಳ್ಳಿ ಬೊಜ್ಜೊಗುಲ ಆವಂದ್.
[ಅಜ್ಜಿ ಸಾಕಿದ ಮಗು ಬೊಜ್ಜಕ್ಕೂ ಆಗದು.]

4. ಅನ್ಯಾಯೊದ ಹಣ ಫಲೊಕ್ಕು ತಿಕ್ಕಂದ್
[ಅನ್ಯಾಯದ ಹಣ ಫಲಕ್ಕೆ ಸಿಕ್ಕಲಾರದು.]

5. ಅಂದಾಯಿ ಪಾತೆರೊಗು ಸಂದಾಯೊ ಇದ್ದಿ.
(ಸತ್ಯವಾದ ಮಾತಿಗೆ ಪ್ರತಿಮಾತು ಇಲ್ಲ.)

4. ಸಮತೂಕ :- ಎಲ್ಲ ಗಾದೆಗಳ ಹಾಗೆಯೇ ತುಳು ಗಾದೆಗಳಲ್ಲಿ ಸಮತೂಕ ಎಂಬ ಗುಣ ಕಾಣಿಸುತ್ತದೆ. ಈ ಸಮತೂಕ ಎನ್ನುವ ಗುಣ ಎರಡು ರೀತಿಯಲ್ಲಿ ಇರಬಹುದು. 1. ಒಂದೇ ವಿಚಾರದ ಎರಡು ಭಾಗಗಳು ಒಂದು ಇನ್ನೊಂದಕ್ಕೆ ಹೆಚ್ಚು ನಿಕಟವಾಗಿ ಸಂಬಂಧಪಟ್ಟಿದ್ದಾಗ ಈ ಸಮತೂಕದ ಗುಣ ಕಾಣಿಸಬಹುದು. ಇಂತಹ ಗಾದೆಗಳಲ್ಲಿ ಸಮತೂಕವಾದ ಎರಡು ಭಾಗಗಳು ಇದ್ದರೂ, ಅವುಗಳನ್ನು ಪ್ರತ್ಯೇಕ ವಾದ ಗಾದೆಗಳು ಎಂದು ಪರಿಗಣಿಸಲು ಆಗುವುದಿಲ್ಲ. ಇಲ್ಲಿ ಎರಡು ಭಾಗಗಳ ನಡುವೆ ಬಿಡಿಸಲಾರದ ರಾಚನಿಕ ಸಂಬಂಧವಿದೆ.

ಉದಾ ; 1. ಅಪ್ಪೆ ತೂಪುನೆ ಬಂಜಿನ್, ಬುಡೆದಿ ತೂಪುನೆ ಕೈನ್.
(ತಾಯಿ ನೋಡುವುದು ಹೊಟ್ಟೆಯನ್ನು, ಹೆಂಡತಿ ನೋಡುವುದು ಕೈಯನ್ನು).

2. ಅರಿ ಪಾಡ್ನಗ ಉಪ್ಪಯೆ, ಅಡ್ಯೆ ಮಲ್ಪುನಗ ತಪ್ಪಯೆ.
(ಅಕ್ಕಿ ಹಾಕುವಾಗ ಇರಲಾರ, ತಿಂಡಿ ಮಾಡುವಾಗ ತಪ್ಪಲಾರ.)

3. ಅಮ್ಮೆ ಸಯ್ತ್ದ್ ಬುಕ್ಕೊ ಅಮ್ಮೆ ಇಲ್ಲಲ್ ಉಂತ್ಯೆರೆ ಆವಂದ್.
ಬರ್ಸೊ ಬುಡಿ ಬುಕ್ಕೊ ಮರತ್ತ ಅಡಿಟ್ ಉಂತ್ಯೆರೆ ಆವಂದ್.
(ತಂದೆ ಸತ್ತ ಮೇಲೆ ತಂದೆಯ ಮನೆಯಲ್ಲಿ ನಿಲ್ಲಬಾರದು, ಮಳೆ ಬಿಟ್ಟ ಮೇಲೆ ಮರದ ಬುಡದಲ್ಲಿ ನಿಲ್ಲಬಾರದು.)

4. ಆಚಾರಿ ಮರಕ್ಕ್ ಮಾರಿ, ಬೆತ್ತೊದ ಕೊಡಿ ಬೆರಿಕ್ಕ್ ಮಾರಿ.
(ಬಡಗಿ ಮರಕ್ಕೆ ಮಾರಿ, ಬೆತ್ತದ ತುದಿ ಬೆನ್ನಿಗೆ ಮಾರಿ.)

5. ಸಮೇರಿ ಮೀರ್ನ ಪೊಣ್ಣು, ಸಂಬಾರೊ ಮೀರ್ನ ಕಜಿಪ್ಪು.
(ಸಮರು ಮೀರಿದ ಹೆಣ್ಣು, ಸಂಬಾರ ಮೀರಿದ ಮೇಲೋಗರ.)

(2) ಸಮತೂಕವಾದ ಇನ್ನೂ ಕೆಲವು ಗಾದೆಗಳಲ್ಲಿ ಎರಡು ಬಿಡಿ ಬಿಡಿ ಗಾದೆಗಳು ಒಟ್ಟುಸೇರುವುದನ್ನು ಕಾಣಬಹುದು. ಇಂತಹ ಕಡೆಗಳಲ್ಲಿ ಒಂದು ಭಾಗವನ್ನು ಇನ್ನೊಂದರಿಂದ ಬೇರೆ ಮಾಡಿದರೂ ಗಾದೆಯ ಅರ್ಥಕ್ಕೆ ಏನೂ ಭಂಗವಾಗುವುದಿಲ್ಲ. ಎಷ್ಟೋ ಬಾರಿ ಎರಡು ಬಿಡಿ ಬಿಡಿ ಗಾದೆಗಳು ಜತೆ ಸೇರಿ ಒಂದೇ ಗಾದೆಯಾಗಿ ಇರುವುದೂ ಉಂಟು.

ಉದಾ : 1. ಆನೆಡ್ ಕುಳ್ಳ್ದಿನಾಯಡ ಸುಣ್ಣ ಕೇನಿಯೆರೆ ಆವಂದ್
ಮಲಾಯಡ ಕಡಕಟ್ಟ್ ಮಲ್ಪಿಯೆರೆ ಆವಂದ್.
(ಆನೆಯ ಮೇಲೆ ಕುಳಿತವನಲ್ಲಿ ಸುಣ್ಣ ಕೇಳಬಾರದು. ಶ್ರೀಮಂತನಲ್ಲಿ ಸಾಲದ ವ್ಯವಹಾರ ಮಾಡಬಾರದು.)

2. ಉಡಲ್‌ಡ್ ಪುಟ್ಪೊಡು ಬುದ್ಧಿ, ಕಡಲ್‌ಡ್ ಪುಟ್ಪೊಡು ಗಾಳಿ
ಮೈಯಿಂಟ್ ಪುಟ್ಪೊಡು ಬೆಗರ್, ನೆಲಟ್ ಪುಟ್ಪೊಡು ಒಸರ್.

(ಒಡಲಿನಲ್ಲಿ ಹುಟ್ಟಬೇಕು ಬುದ್ಧಿ, ಕಡಲಿನಲ್ಲಿ ಹುಟ್ಟಬೇಕು ಗಾಳಿ, ದೇಹದಲ್ಲಿ ಹುಟ್ಟಬೇಕು ಬೆವರು, ಭೂಮಿಯಲ್ಲಿ ಹುಟ್ಟಬೇಕು ಒರತೆ.)

3. ಕಡ ಕೊರುದ್ ಬಡವೆ ಕೆಟ್ಟೆ
ಪಾತೆರ ಕೊರುದು ಮಲ್ಲಾಯೆ ಕೆಟ್ಟೆ.
(ಸಾಲಕೊಟ್ಟು ಬಡವ ಕೆಟ್ಟ, ಮಾತು ಕೊಟ್ಟು ಶ್ರೀಮಂತ ಕೆಟ್ಟ.)

4. ಕಣ್ಣ್‌ದಾಂತಿನಾಯಗ್ ಕನ್ನಡಿ ದಾಯೆ ?
ಗಾಣದೆರುಕ್ಕು ಗೆಜ್ಜೆ ದಾಯೆ ?
(ಕಣ್ಣಿಲ್ಲದವನಿಗೆ ಕನ್ನಡಿ ಯಾಕೆ, ಗಾಣದ ಕೋಣಕ್ಕೆ ಗೆಜ್ಜೆ ಯಾಕೆ?)

5. ಕೋರಿಡ ಕೇಂಡ್‌ದ್ ಸಂಬಾರ ಅರೆಪ್ಪೊಡ ?
ಬೋರಿಡ ಕೇಂಡ್‌ದ್ ಪೆರಿಕೆ ಪೇರಾವೊಡೊ ?
(ಕೋಳಿಯಲ್ಲಿ ಕೇಳಿ ಮಸಾಲೆ ಅರೆಯಬೇಕೇ, ಹೋರಿಯಲ್ಲಿ ಕೇಳಿ ಹೇರು ಹೇರ ಬೇಕೇ?)

ಕೆಲವೊಂದು ಬಾರಿ ಮೂರು ಗಾದೆಗಳು ಒಟ್ಟು ಸೇರಿ ಒಂದೇ ಗಾದೆಯ ರೂಪವನ್ನು ತಾಳುವುದು ಉಂಟು. ಇಂತಹ ಸಂದರ್ಭಗಳಲ್ಲಿ ಈ ಮೂರು ಭಾಗಗಳು ಇಡೀ ರಚನೆಯ ಸಾಧಾರಣ ಮೂರನೆಯ ಒಂದು ಭಾಗದಷ್ಟು ಇರುತ್ತವೆ. ಇಲ್ಲಿಯೂ ಸಾಮಾನ್ಯವಾಗಿ ಒಂದೊಂದು ಭಾಗವು ಸ್ವತಂತ್ರವಾದ ಒಂದು ಗಾದೆ ಯಾಗಿರುತ್ತದೆ.

ಉದಾ : 1. ಕಳ್ವನ ಬೇಲೆ ಎಡ್ಡೆ, ತುಳುವನ ಬೋಲೆ ಎಡ್ಡೆ, ಪೊಳ್ಳನ ಪಚ್ಚಿಲೆಡ್ಡೆ.
(ಕಳ್ಳನ ಕೆಲಸ ಚೆನ್ನು, ತುಳುವ ಹಲಸಿನ ಬೀಜ ಚೆನ್ನು, ಪೊಳ್ಳು ಹಲಸಿನ ತೊಳೆ ಚೆನ್ನು.)

2. ಕುರುಡೆ ಬಯಕ್ಕುನಿ ಕಣ್ಣ್‌ಗ್, ಕೆಪ್ಪೆ ಬಯಕ್ಕುನಿ ಕೆಬಿಕ್ಕ್, ಮೋಂಟೆ ಬಯಕ್ಕುನಿ ಕಾರ್‌ಗ್.
(ಕುರುಡನು ಬಯಸುವುದು ಕಣ್ಣಿಗೆ, ಕಿವುಡನು ಬಯಸುವುದು ಕಿವಿಗೆ, ಹೆಳವ ಬಯಸುವುದು ಕಾಲಿಗೆ.)

3. ದಾಲ ದಾಂತಿನಾಯಗ್ ಬೂಟ್ ಹೆಚ್ಚ, ಒಂತೆ ಕಜಿಪ್ಪುಗು ಉಪ್ಪು ಹೆಚ್ಚ, ಪರ ಮರಕ್ಕ್ ಪುಳಿ ಹೆಚ್ಚ.

(ಏನೂ ಇಲ್ಲದವನಿಗೆ ಅಹಂಕಾರ ಹೆಚ್ಚು, ಸ್ವಲ್ಪ ಪಲ್ಯಕ್ಕೆ ಉಪ್ಪು ಹೆಚ್ಚು, ಹಳೆಯ ಮರಕ್ಕೆ ಹುಳಿ ಹೆಚ್ಚು.)

4. ಪೋವಡ್ ಪೋವಂದೆ ಉಪ್ಪಡ್, ಮೂಜಿ ಉಪ್ಪೊಡು—ಧೋತ್ರ, ತರೆತ್ರ, ಬೈರಾಸ್—
ಸಾಲಾವಡ್ ಮೂಲೊ ಆವಡ್ ರಡ್ಡ್ ಉಪ್ಪೊಡು — ಕೊಡೆ, ಮುಂಟ್ಟು.
ಬೋಡಾವಡ್ ಬೋಡ್ಚಾವಡ್ ಒಂಜಿ ಉಪ್ಪೊಡು — ಬುಡೆದಿ.
(ಹೋಗಲಿ ಹೋಗದಿರಲಿ ಇವು ಮೂರು ಬೇಕು — ಧೋತ್ರ, ತಲೆವಸ್ತ್ರ, ಬೈರಾಸ್.
ಸಾಲವಾಗಲಿ, ಮೂಲವಾಗಲಿ ಇವು ಎರಡು ಬೇಕು — ಕೊಡೆ, ಮೆಂಟ್ಟು.
ಬೇಕಾಗಲಿ, ಬೇಡದೆ ಇರಲಿ ಇದು ಒಂದು ಬೇಕು — ಹೆಂಡತಿ.)

5. ಪ್ರಾಸ, ಅನುಪ್ರಾಸ : ಪ್ರಾಸ ಅನುಪ್ರಾಸಗಳು ಸಾಮಾನ್ಯವಾಗಿ ಗಾದೆಗಳಲ್ಲಿ ಇರುತ್ತವೆ. ಪ್ರಾಸದ ರೀತಿಗಳು ಅನೇಕ ಇರಬಹುದು. ಸಮತೂಕವಾಗಿ ಉಳ್ಳ ಗಾದೆಯಾಗಿದ್ದರೆ ಪ್ರತೀ ಭಾಗದಲ್ಲಿ ಅಂತ್ಯ ಪ್ರಾಸ ಕಾಣಿಸುತ್ತದೆ.

ಉದಾ : 1. ಕುಳ್ಳ್‌ದ್ ಉಣಡ, ಜೆತ್ತ್‌ದ್ ನಿದೆರೆಡ.
(ಕುಳಿತು ಉಣ್ಣಬೇಡ, ಮಲಗಿ ನಿದ್ರಿಸಬೇಡ.)

2. ಪಾತೆರೊಡ್ ತಪ್ಪಡ, ಬಲಿತ್ತ್‌ದ್ ತಿಕ್ಕಡ.
(ಆಡಿ ತಪ್ಪಬೇಡ, ಓಡಿ ಸಿಕ್ಕಬೇಡ.)

3. ಪಿಜಿನ ಪೋಪುನೈಟ್ಟೆ ಕಟ್ಟುನೆ.
ಕುಂಬುಡೊ ಪೋಪುನೈಟ್ಟೆ ಬುಡ್ಪುನೆ.
(ಇರುವೆ ಹೋಗುವಲ್ಲಿ ಅಡ್ಡಗಟ್ಟುವುದು, ಕುಂಬಳಕಾಯಿ ಹೋಗುವಲ್ಲಿ ದಾರಿ ಬಿಡುವುದು.)

4. ಪಿದಯಿ ತೂನಗ ಕೋಟೆ, ಉಳಯಿ ತೂನಗ ಓಟೆ.
(ಹೊರಗೆ ನೋಡುವಾಗ ಕೋಟೆ, ಒಳಗೆ ನೋಡುವಾಗ ಟೊಳ್ಳು.)

5. ಉಂಡಿನಾಯುಗ್ ಬಡವು ಹೆಚ್ಚ, ಮೀಯಿನಾಯುಗ್ ಕುರೆ ಹೆಚ್ಚ.
(ತಿಂದವನಿಗೆ ಹಸಿವು ಜಾಸ್ತಿ, ಮಿಂದವನಿಗೆ ಕೊಳೆ ಜಾಸ್ತಿ.)

ಇನ್ನು ಕೆಲವೊಮ್ಮೆ ಒಳಪ್ರಾಸದ, ಅನುಪ್ರಾಸದ ರೀತಿಯಲ್ಲಿ ಗಾದೆಗಳಲ್ಲಿ ಪ್ರಾಸವು ಬರುತ್ತದೆ.

ಉದಾ : 1. ಕಂಚೋಲು ಇತ್ತ್‌ನ ಎಂಚಲ ಉಣೊಲಿ.
(ಹಾಗಲಕಾಯಿ ಇದ್ದರೆ ಹೇಗೂ ಊಟ ಮಾಡಬಹುದು.)

2. ಏರಿ ತಿಂದಿನಾಯೆ ಬೋರಿ ಮಾರುವೆ.
(ಏರಿ ತಿಂದವನು ಹೋರಿ ಮಾರಿಯಾನು.)

3. ಬಾರ್ ಬಲ್ಲಾಳ್‌ಗ್, ದೂರು ಕುಂಡಚ್ಚಿಗ್,
(ಭತ್ತ ಬಲ್ಲಾಳನಿಗೆ, ದೂರು ಅಳಿಲಿಗೆ.)

4. ಬಿರುವೆ ನೆರುವೆ ತತ್ತ್ಂಡ ಕೆರುವೆ.
(ಬಿಲ್ಲವ ಬಯಸ್ತಾನು, ತಪ್ಪಿದರೆ ಕೊಂದಾನು.)

5. ಬುಳ್ಪಿ ಬಾಲೆಗ್ ಪೇರ್, ತೆಲ್ಪಿ ಬಾಲೆಗ್ ನೀರ್.
(ಅಳುವ ಕೂಸಿಗೆ ಹಾಲು, ನಗುವ ಕೂಸಿಗೆ ನೀರು.)

ಪಡಿ : ಗಾದೆಯ ಆರಂಭದ ಅಕ್ಷರವು ಆ ಗಾದೆಯಲ್ಲಿ ಯಾವುದಾದರೊಂದು ಪದದ ಅಥವಾ ಪದಗಳ ಆರಂಭದಲ್ಲಿ ಬರುತ್ತದೆ. ಈ ಕ್ರಮವು ಛಂದಸ್ಸಿನ ಪಡಿಯನ್ನು ಹೋಲುತ್ತದೆ.

ಉದಾ : 1. ಕೊರಿ ಪೊಣ್ಣು ಕುಲೊಡ್ದ್ ಪಿದಯಿ.
(ಕೊಟ್ಟ ಹೆಣ್ಣು ಕುಲದಿಂದ ಹೊರಗೆ.)

2. ಕೊಂಕಣಿ ಎರ್ಮೆಗ್ ಕೊಡಂಟಿ ಮರ್ದ್.
(ಕೊಂಕಣಸ್ಥರ ಎಮ್ಮೆಗೆ ಬಡಿಗೆಯೇ ಔಷಧ.)

3. ಎಳ್ಪೊಡು ಬರ್ಪುನು ಏಳೆಡ್ ಬರಡ್,
(ಎಪ್ಪತ್ತರಲ್ಲಿ ಬರುವುದು ಏಳರಲ್ಲಿ ಬರಲಿ.)

4. ಮುಳ್ಳ್‌ಡು ದೆಪ್ಪುನೆನ್ ಮುಡುಟ್ಟು ದೆಪ್ಪಿಯೆರೆ ಮಲ್ಪೊನುನೆ.
(ಮುಳ್ಳಿನಿಂದ ತೆಗೆಯುವುದನ್ನು ಕೊಡಲಿಯಿಂದ ತೆಗೆಯುವಂತೆ ಮಾಡಿಕೊಳ್ಳುವುದು.)

5. ಮುಂಟ್ಬಾಳಿದಾಯಗ್ ಕೊರ್ಪುಜಿ, ಮುಂಡಾಸ್‌ದಾಯೆ ಬರ್ಪುಜಿ.
(ಮುಂಟ್ಬಾಳಿಯವನಿಗೆ ಕೊಡುವುದಿಲ್ಲ, ಮುಂಡಾಸಿನವನು ಬರುವುದಿಲ್ಲ.)

6. ಬಾಲೆದ ಅಪ್ಪೆ ಬೇಲೆತ ಕಂಡು.
(ಮಗುವಿನ ತಾಯಿ ಕೆಲಸ ಕಳ್ಳಿ.)

6. ಪುನಾರಾವರ್ತನೆ :— ಕೆಲವು ಗಾದೆಗಳಲ್ಲಿ ಎರಡು ಭಾಗಗಳಿದ್ದು ಅಂತಹ ಗಾದೆಗಳು ಸಮ ತೂಕದ ಲಕ್ಷಣವನ್ನು ಹೊಂದಿರುತ್ತವೆ. ಈ ಸಮತೂಕದ ಎರಡು ಭಾಗಗಳಲ್ಲಿ ಸಾಮಾನ್ಯವಾಗಿ ಸಮಾನವಾದ ಶಬ್ದಗಳು ಪುನರಾವರ್ತನೆಯಾಗುತ್ತವೆ. ಈ ತಂತ್ರವನ್ನು ತುಳು ಗಾದೆಗಳಲ್ಲಿ ಕಾಣಬಹುದು.

ಉದಾ : 1. ಒಂಜಿ ಪೊಣ್ಣ್ ಪೊಣ್ಣ್ ಅತ್ತ್, ಒಂಜಿ ಕಣ್ಣ್ ಕಣ್ಣ್ ಅತ್ತ್.
(ಒಂದು ಹೆಣ್ಣು ಹೆಣ್ಣಲ್ಲ, ಒಂದು ಕಣ್ಣು ಕಣ್ಣಲ್ಲ.)

2. ಒಲಿದಾಲೆಗಲ ಒಲಿದಾಲೆಗಲ ಇಷ್ಟೊ, ಒಲಿತ್ತಾಲೆಗಲ ಒಲಿತ್ತಾಲೆಗಲ ಇಷ್ಟೊ.
(ಶ್ರೀಮಂತರಿಗೂ ಶ್ರೀಮಂತರಿಗೂ ಸ್ನೇಹ, ಬಡವರಿಗೂ ಬಡವರಿಗೂ ಸ್ನೇಹ.)

3. ಕಂಡನಿ ಇಪ್ಪುನಗ ಬುದ್ಧಿ ಇದ್ದಿ, ಬುದ್ಧಿ ಬನ್ನಗ ಕಂಡನಿ ಇದ್ದಿ.
(ಗಂಡ ಇರುವಾಗ ಬುದ್ಧಿ ಇಲ್ಲ, ಬುದ್ಧಿ ಬರುವಾಗ ಗಂಡ ಇಲ್ಲ.)

4. ಜಾತಿಗ್ ಜಾತಿ ಪಗೆ, ನಾಯಿಂಗ್ ನಾಯಿ ಪಗೆ.
(ಜಾತಿಗೆ ಜಾತಿ ಹಗೆ, ನಾಯಿಗೆ ನಾಯಿ ಹಗೆ.)

7. **ಅಲಂಕಾರಗಳು :—**

1. **ಉಪಮೆ** :—ಉಪಮಾಲಂಕಾರವು ಎಲ್ಲ ಗಾದೆಗಳ ಹಾಗೆಯೇ ತುಳು ಗಾದೆಗಳಲ್ಲಿಯೂ ಅಧಿಕ ಸಂಖ್ಯೆಯಲ್ಲಿ ದೊರಕುತ್ತದೆ. ದೈನಂದಿನ ಮಾತುಕತೆಗಳಲ್ಲಿ ಹೋಲಿಕೆಗಳನ್ನು ಕೊಡುವಾಗ ಗಾದೆಯಷ್ಟು ಉಪಯುಕ್ತವಾದ, ಸಮರ್ಪಕವಾದ ಉಪಮೆಗಳು ಬೇರೆ ಸಿಗುವುದಿಲ್ಲ. ಪಾಜ್ಞರ ನುಡಿಯು ಉದ್ಧರಣ ವಾಕ್ಯದ ಹಾಗೆ ಗ್ರಂಥಗಳಲ್ಲಿ ಬಳಕೆಯಾಗುವ ರೀತಿಯಲ್ಲಿ ಹಳ್ಳಿಗರ ಸಂಭಾಷಣೆಗಳಲ್ಲಿ ಗಾದೆಗಳು ಪ್ರಯೋಗವಾಗುತ್ತವೆ. ಆಯಾಯ ಸಂದರ್ಭಕ್ಕೆ ಹೊಂದಿಕೆಯಾಗುವಂಥ ಉಪಮೆಗಳನ್ನು ಗಾದೆಗಳ ರೂಪದಲ್ಲಿ ಬಳಸುತ್ತಾರೆ.

ಉದಾ : 1. ಅಜ್ಜಿಡ ಪಿಸೆರ್ ಬತ್ತ್‌ದ್ ಗೋಡೆಗ್ ಗುದ್ದಿಲೆಕೊ.
(ಅಜ್ಜಿಯಲ್ಲಿ ಸಿಟ್ಟು ಬಂದರೆ ಗೋಡೆಗೆ ಗುದ್ದಿದಂತೆ.)

2. ಅಡಿಪೋಯಿನ ಅಡ್ಯರದಲೆಕೊ.
(ತಳಪಾಯವಿಲ್ಲದ ಅಡುಗೆ ಪಾತ್ರೆಯಂತೆ.)

3. ಇರ್ಲೆ ತೂಯಿ ಗೂವೆಲ್‌ಗ್ ಪಗೆಲ್ ಬೂರಿಲೆಕೊ.
(ರಾತ್ರಿ ಕಂಡ ಬಾವಿಗೆ ಹಗಲು ಬಿದ್ದಂತೆ.)

4. ಇಲ್ಲಗ್ ಉಡು ಪೊಗ್ಗಿಲೆಕೊ.
(ಮನೆಗೆ ಉಡು ಹೊಕ್ಕ ಹಾಗೆ.)

5. ಉಬಿಪ್ಪುನ ಪಡ್ಯೊದಲೆಕೊ.
(ಉಗುಳುವ ಪೀಕದಾನಿಯ ಹಾಗೆ.)

6. ಕುಂದುರೆಗ್ ಕುತ್ತೊ ತೋಜಿಲೆಕೊ.
(ಕುದುರೆಗೆ ರೋಗ ಕಾಣಿಸಿಕೊಂಡ ಹಾಗೆ.)

ಉಪಮಾಲಂಕಾರವುಳ್ಳ ಗಾದೆಗಳು ತುಳುವಿನಲ್ಲಿ ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತವೆ. 20 ಶೇಕಡ ದಷ್ಟು ತುಳು ಗಾದೆಗಳು ಉಪಮಾಲಂಕಾರದಲ್ಲಿ ಇರುವುದು ಗಮನಾರ್ಹ. ತುಳುನಾಡಿನ ಜನಪದ ಜೀವನದಲ್ಲಿ, ದೈನಂದಿನ ಮಾತುಕತೆಗಳಲ್ಲಿ ಮಾತಿಗೆ ಪೋಷಕವಾಗಿ ಉಪಮೆಯನ್ನು ವಿಶೇಷವಾಗಿ ಬಳಸುತ್ತಾರೆ ಎಂದು ಇದರಿಂದ ನಾವು ತೀರ್ಮಾನಿಸಬಹುದು.

2. **ರೂಪಕ** :— ಉಪಮಾಲಂಕಾರವನ್ನು ಬಿಟ್ಟು, ಸಂಪೂರ್ಣ ವಾಕ್ಯದ ರೂಪದಲ್ಲಿ ಇರುವ ಎಷ್ಟೋ ಗಾದೆಗಳು ರೂಪಕಾಲಂಕಾರವನ್ನು ಹೊಂದಿರುತ್ತವೆ. ಇಂತಹ ಗಾದೆಗಳಲ್ಲಿ

ವಾಚ್ಯಾರ್ಥ ಪ್ರಧಾನವಾಗಿರುವುದಿಲ್ಲ. ರೂಪಕದ ವಿವರಣೆಯು ರೂಪದಲ್ಲಿ ಗಾದೆಯು ವ್ಯಂಗ್ಯಾರ್ಥವನ್ನು ಕಂಡುಕೊಳ್ಳಬಹುದು. ತುಳು ಗಾದೆಗಳಲ್ಲಿ ಇಂತಹ ರೂಪಕಾರ್ಥವಾಗಿ ಉಳ್ಳ ಗಾದೆಗಳು ಅನೇಕ ಇವೆ. ಮನುಷ್ಯರ ಗುಣಗಳನ್ನು ವಿಡಂಬಿಸುವಾಗ, ನೀತಿಬೋಧೆ ಮಾಡುವಾಗ, ತಮ್ಮ ಅನುಭವವನ್ನು ಸಾರುವಾಗ, ಕಾವ್ಯದ ರೂಪದಲ್ಲಿ, ರೂಪಕದ ಆಕಾರ ದಲ್ಲಿ ಗಾದೆಗಳು ಹೊರಹೊಮ್ಮುತ್ತವೆ. ಇಂತಹ ಗಾದೆಗಳು ವಿವರಣೆ ಇಲ್ಲದೆ ಸಾಮಾನ್ಯ ವಾಗಿ ಅರ್ಥವಾಗುವುದಿಲ್ಲ.

ಉದಾ : 1. ಅಗ್ಗೊದ ಮಂದೆಗ್ ಗುಜ್ಜೆದ ಕಜ್ಪು.
(ಸಾಮಾನ್ಯ ಜನರಿಗೆ ಹಲಸಿನಕಾಯಿ ಪಲ್ಯ.)

ಇಲ್ಲಿ 'ಹಲಸಿನಕಾಯಿ ಪಲ್ಯ' ಎಂದರೆ 'ಬಹಳ ಸಾಮಾನ್ಯವಾದ ಪದಾರ್ಥ'. ಆದ್ದರಿಂದ ಯೋಗ್ಯತೆಗೆ ಅನುಸಾರವಾಗಿ ಸನ್ಮಾನ ಎಂಬ ಅರ್ಥ ಕಾಣಿಸುತ್ತದೆ.

2. ಅರಿ ಬಾರ್ ಇತ್ತಿನವುಳು ಎಲಿ ಪೆರ್ಗುಡೆಗ್ ಕಮ್ಮಿಯೋ ?
(ಅಕ್ಕಿ ಭತ್ತ ಇದ್ದಲ್ಲಿ ಇಲಿ ಹೆಗ್ಗಣಗಳಿಗೇನು ಕೊರತೆ?)

ಸಂಪತ್ತು ಇದ್ದಲ್ಲಿ ಸುಲಿಗೆಗಾರರೂ ಇರುತ್ತಾರೆ ಎಂಬ ಅರ್ಥ.

3. ಇಲ್ಲೆಡ್ದ್ ಮಲ್ಲ ಮೊಟ್ಟೆಕಲ್ಲು.
(ಮನೆಯಿಂದ ದೊಡ್ಡ ಮೆಟ್ಟಿಲು.)

ತನ್ನ ಸ್ಥಿತಿಗಿಂತ ಆಡಂಬರ ಮಾಡುವವರನ್ನು ವಿಡಂಬಿಸಲು ಈ ಗಾದೆಯನ್ನು ಬಳಸುತ್ತಾರೆ.

4. ಕುರಿಯೆಲ್ ಕುಂಬುಡೊಗ್ ಚಿಟ್ಟೆಲ್ ತಾರಾಯಿ.
(ಕೊಳೆತ ಕುಂಬಳಕಾಯಿಗೆ ಹಾಳಾದ ತೆಂಗಿನಕಾಯಿ.)

ಕೆಟ್ಟವರಿಗೆ ಕೆಟ್ಟವರದ್ದೇ ಸ್ನೇಹ ಎಂಬ ಅರ್ಥವನ್ನು ಈ ಗಾದೆ ಕೊಡುತ್ತದೆ.

5. ಮರತ್ತ ಪುರಿ ಮರನೇ ತಿನ್ಪುನೆ.
(ಮರದ ಹುಳು ಮರವನ್ನೇ ತಿನ್ನುವುದು.)
'ತನ್ನ ದುರ್ಗುಣ ತನಗೇ ವಿನಾಶಕಾರಿ' ಎಂಬ ಅರ್ಥದಲ್ಲಿ ಈ ಗಾದೆ ಉಪಯೋಗವಾಗುತ್ತದೆ.

ತುಳು ಗಾದೆಗಳ ಪ್ರಯೋಗ :—

ಸುಮಾರು 1600ರಷ್ಟು ಸಂಖ್ಯೆಯಲ್ಲಿ ಸಂಗ್ರಹವಾಗಿರುವ ತುಳು ಗಾದೆಗಳನ್ನು ನೋಡಿದಾಗ ಪ್ರಯೋಗದ ದೃಷ್ಟಿಯಿಂದ ಅವು ಎಲ್ಲವೂ ಒಂದೇ ರೀತಿಯಾಗಿ ಇಲ್ಲ. ತೀರಾ ಅನಕ್ಷರಸ್ಥರು ಬಳಸುವ ತುಳು ಗಾದೆಗಳಿಗೂ ಅಕ್ಷರಸ್ಥರು-ವಿದ್ಯಾವಂತರು ಬಳಸುವ ತುಳು ಗಾದೆಗಳಿಗೂ ಕೆಲವು ವ್ಯತ್ಯಾಸಗಳನ್ನು ಗುರುತಿಸಬಹುದು. ಈ ವ್ಯತ್ಯಾಸ ಭಾಷೆಯ ದೃಷ್ಟಿಯಿಂದ ಅಷ್ಟೇ ಅಲ್ಲ, ವಸ್ತುವಿನ ದೃಷ್ಟಿಯಿಂದಲೂ ಇದೆ. ಕನ್ನಡದಲ್ಲಿ ಕಾಣಿಸುವ ಕೆಲವು ಗಾದೆಗಳ ತುಳು ರೂಪವು ವಿದ್ಯಾವಂತರ ಪ್ರಯೋಗಗಳಲ್ಲಿ ಮಾತ್ರ ಕಾಣಿಸಿಕೊಳ್ಳುತ್ತದೆ. ಆದರೆ ಅನಕ್ಷರಸ್ಥರ ಪ್ರಯೋಗಗಳಲ್ಲಿ ಇವು ಇಲ್ಲವೇ ಇಲ್ಲ.

ಉದಾ : 1. ಅಲ್ಪಗ್ ಐಶ್ವರ್ಯೊ ಬತ್ತ್‌ನ ಅರ್ಧರಾತ್ರೆಡ್ ಕೊಡೆ ಪತ್ತಿಲೆಕೊ.
(ಅಲ್ಪನಿಗೆ ಐಶ್ವರ್ಯ ಬಂದರೆ ಅರ್ಧ ರಾತ್ರಿಯಲ್ಲಿ ಕೊಡೆ ಹಿಡಿದಂತೆ.)

2. ಏಡ್ ಪೋನ ನಾಡ್ ಹಾಳ್, ಕೊಂಕಣಿ ಪೋನ ಊರು ಹಾಳ್.
(ಆಡು ಹೋದ ನಾಡು ಹಾಳು, ಕೊಂಕಣಿ ಹೋದ ಊರು ಹಾಳು.)

3. ಜೈನಗ್ ನಂಟೆ ಇಜ್ಜಿ.
(ಜೈನನಿಗೆ ನಂಟ ಇಲ್ಲ.)

4. ತನ್ನಿಚ್ಚೆಗ್‌ಲ ಅಚ್‌ವಂಟ್ಟೆಗ್‌ಲ ಮರ್ದ್ ಇಜ್ಜಿ.
(ಹಟಕ್ಕೂ ಬೋಳು ತಲೆಗೂ ಔಷಧ ಇಲ್ಲ.)

ಸಾಮಾನ್ಯವಾಗಿ ಜಾತಿ-ಕಸುಬುಗಳನ್ನು ವಿಡಂಬಿಸುವ ತುಳು ಗಾದೆಗಳು ವಿದ್ಯಾವಂತರ ಪ್ರಯೋಗಗಳಲ್ಲಿ ಹೆಚ್ಚು ಕಾಣಿಸುತ್ತವೆ.

ಸಾಮಾನ್ಯವಾಗಿ ಅನಕ್ಷರಸ್ಥರ, ಹಳ್ಳಿಗರ ತುಳು ಗಾದೆಗಳ ಪ್ರಯೋಗದಲ್ಲಿ ನೈತಿಕ ಅಂಶ, ಸತ್ಯದ ಪ್ರತಿಪಾದನೆ-ಇವುಗಳಿಗಿಂತ ಹೆಚ್ಚಾಗಿ ಕಲ್ಪನೆ, ಜಾಣತನ, ಕಾವ್ಯಶೈಲಿ-ಇವು ಪ್ರಧಾನವಾಗಿ ಇರುತ್ತವೆ. ಘಟನೆಗಳಿಗೆ, ಸಂದರ್ಭಗಳಿಗೆ ಬಹಳ ಸೂಕ್ಷ್ಮವಾಗಿ ಪ್ರತಿಸ್ಪಂದಿಸುವ ಇವರ ಶಕ್ತಿ ಇಂತಹ ಗಾದೆಗಳ ನಿರ್ಮಾಣಕ್ಕೆ ಕಾರಣವಾಗುತ್ತದೆ. ಉಪಮೆ, ರೂಪಕ, ದೃಷ್ಟಾಂತ, ಪ್ರಾಸ, ಅನುಪ್ರಾಸ ಮುಂತಾದ ಕಾವ್ಯ ಗುಣಗಳು ಅವರ ದೈನಂದಿನ ಮಾತುಕತೆಗಳ ಒಂದು ಭಾಗವಾಗಿ, ಹೆಚ್ಚು ಸಾಂದ್ರವಾಗಿ, ಸಂಕ್ಷಿಪ್ತವಾಗಿ ಬಂದಾಗ ಅವು ಗಾದೆಗಳಾಗುತ್ತವೆ.

ಉದಾ : 1. ಅಳೆನ್ ಹಾಳ್ ಮಲ್ಪುಯೆರೆ ಕುಳಿ ಯಾರು.
(ಮಜ್ಜಿಗೆಯನ್ನು ಹಾಳು ಮಾಡಲು ಕೊರೆ (ಪ್ರೇತ) ಸಾಕು.)

ಒಂದು ಕ್ಲೇಶ ಉಂಟುಮಾಡಲು ಏನಾದರೂ ಸಣ್ಣ ಕಾರಣ ಸಾಕು, ಅಥವಾ ಕ್ಷುದ್ರ ಚಾಡಿಕೋರರು ಸಾಕು.

2. ಇರೆ ಪೊಲಿತ್ತ್‌ದ್ ಮುರೆ ನಕ್ಕುನೆ.
(ಎಲೆ ಮುರಿದು ಅದರ ರಸವನ್ನು ನೆಕ್ಕುವುದು.)

ನಿರ್ವಾಹವಿಲ್ಲದೆ ಒಂದು ಕೆಲಸ ಮಾಡುವುದು.

3. ದರ್ಸನೊ ಬನ್ನಗ ಕಡ್ತೊನ್ನು ಬತ್ತ್‌ಂಡ್.
(ಆವೇಶ ಬರುವಾಗ ಕಡಿದುಕೊಂಡದ್ದು ಬಂತು.)

4. ಮುಡೆಂಜಿ ಪೋಯಿನವುಳು ಅಲೆಂಜಿ ತಪ್ಪುಂದ್.
(ಮುಡಂಜಿ ಮೀನು ಹೋದಲ್ಲಿ ಕೆಸರು ನೀರು ತಪ್ಪದು.)

5. ನಾಯಿಡ ಪನ್ನಗ ನಾಯಿ ಬೀಲೊಡ ಪನ್ಪುನೆ.
(ನಾಯಿಯಲ್ಲಿ ಏನಾದರೂ ಕೆಲಸ ಹೇಳುವಾಗ ನಾಯಿ ಅದನ್ನು ತನ್ನ ಬಾಲದಲ್ಲಿ ಹೇಳುವುದು.)

ಗಾದೆಗಳ ಅಧ್ಯಯನದಲ್ಲಿ, ಸಾಂದರ್ಭಿಕ ಪರಿಸರದಲ್ಲಿ ಗಾದೆಗಳನ್ನು ಗಮನಿಸುವುದು ಮುಖ್ಯವಾದುದು. ಇಂಗ್ಲಿಷ್‌ನಲ್ಲಿ ಇಂತಹ ಸಾಂದರ್ಭಿಕ ಅಧ್ಯಯನಗಳು ನಡೆದಿವೆ. ಪ್ರತಿಯೊಂದು ಗಾದೆಗೂ ಅದರದ್ದೇ ಆದ ಸಂದರ್ಭ (Context) ಗಳಿವೆ. ಆ ಸಂದರ್ಭವನ್ನು ತಿಳಿದುಕೊಳ್ಳದೆ ಆ ಗಾದೆಗಳನ್ನು ಅರ್ಥ ಮಾಡಿಕೊಳ್ಳಲು ಆಗುವುದಿಲ್ಲ. ಅನೇಕ ಬಾರಿ ಗಾದೆಗಳಿಗೆ ಒಂದು ಘಟನೆಯ ಹಿನ್ನೆಲೆ ಇರುತ್ತದೆ. ಈ ರೀತಿ ಘಟನೆಯ ಹಿನ್ನೆಲೆಯುಳ್ಳ ಕೆಲವು ತುಳು ಗಾದೆಗಳಿಗೆ ವಿವರಣೆಯನ್ನು ಮುಂದಿನ ಅಧ್ಯಾಯದಲ್ಲಿ ಕೊಟ್ಟಿದೆ. ಇನ್ನು ಕೆಲವು ಗಾದೆಗಳಿಗೆ ಘಟನೆಯ ಹಿನ್ನೆಲೆ ಇಲ್ಲದಿದ್ದರೂ, ಅದರ ಸಂದರ್ಭದ ಹಿನ್ನೆಲೆಯನ್ನು ಕೊಡಬೇಕಾಗುತ್ತದೆ. ಏಕೆಂದರೆ ಒಂದು ಪ್ರಾದೇಶಿಕ ಸಂಸ್ಕೃತಿಯಲ್ಲಿ ಅಲ್ಲಿನ ಗಾದೆ ಹುಟ್ಟಿಕೊಂಡಿರುವುದರಿಂದ ಆ ಸಂಸ್ಕೃತಿಯ ಪರಿಚಯವಿಲ್ಲದೆ ಆ ಗಾದೆಗಳ ಸರಿಯಾದ ತಿಳುವಳಿಕೆ ಉಂಟಾಗುವುದಿಲ್ಲ.

ಉದಾ : 1. ಅಮ್ಮೆ ಸಯ್ತ್ಂದ್ ಬುಕ್ಕೊ ಅಮ್ಮ ಇಲ್ಲಲ್ ಉಂತ್ಯೆರೆ ಆವಂದ್, ಬರ್ಸೊ ಬುಡಿ ಬುಕ್ಕೊ ಮರತ್ತ ಅಡಿಟ್ಟ್ ಉಂತ್ಯೆರೆ ಅವಂದ್.

(ತಂದೆ ಸತ್ತಮೇಲೆ ತಂದೆಯ ಮನೆಯಲ್ಲಿ ನಿಲ್ಲಬಾರದು. ಮಳೆ ಬಿಟ್ಟ ಮೇಲೆ ಮರದ ಬುಡದಲ್ಲಿ ನಿಲ್ಲಬಾರದು.)

ಇದು ತುಳುನಾಡಿನ ಕೌಟುಂಬಿಕ ಪದ್ಧತಿಯಾದ 'ಅಳಿಯ ಸಂತಾನ ಕಟ್ಟ್'ಗೆ ಸಂಬಂಧಿಸಿದ ಗಾದೆ. ತಂದೆ ಸತ್ತ ಮೇಲೆ ಮಕ್ಕಳಿಗೆ ತಂದೆಯ ಮನೆಯ ಋಣ ತೀರಿ ಹೋಗುತ್ತದೆ. ಆಮೇಲೆ ಸೋದರಮಾವನ ಮನೆಯಲ್ಲಿಯೇ ಅವರು ಇರಬೇಕಾಗುತ್ತದೆ. ಮಳೆ ಬಿಟ್ಟ ಮೇಲೆ ಮರದ ಬುಡದಲ್ಲಿ ನಿಂತರೆ, ನೀರಿನ ಹನಿಗಳು ಮೈಮೇಲೆ ಬಿದ್ದು ಹೇಗೆ ತೊಂದರೆಯಾಗುತ್ತದೋ, ಹಾಗೆಯೇ ತಂದೆ ಸತ್ತ ಮೇಲೆ ತಂದೆ ಮನೆಯಲ್ಲಿ ನಿಂತರೆ ತಂದೆಯ ಇತರ ಬಂಧುಗಳಿಂದ ತೊಂದರೆಯನ್ನು ಅನುಭವಿಸಬೇಕಾಗುತ್ತದೆ.

2. ಅಡ್ ಬತ್ತ್ನ ಪೊಣ್ಣುಳು ಅಟ್ಟೊಗು ಬರ್ತಿಯೆರೆ ಬಲ್ಲಿ.
(ಗಂಡನ ಮನೆಗೆ ಬಂದ ಹೆಣ್ಣುಗಳು ಅಟ್ಟಕ್ಕೆ ಹತ್ತಬಾರದು.)

ಇದು ಅತ್ತೆಯರು ಸೊಸೆಯರ ಬಗ್ಗೆ ಹೇಳುವ ಮಾತು. "ಸೊಸೆಯು ಅತ್ತೆಯ ಮನೆಯಲ್ಲಿ ಅಧಿಕಾರ ತೋರಿಸಬಾರದು." ಅಳಿಯ ಕಟ್ಟಿಗೆ ಸಂಬಂಧಿಸಿದ ಕುಟುಂಬಗಳಲ್ಲಿ ಈ ಗಾದೆ ಬಳಕೆಯಲ್ಲಿದೆ.

3. ಉಗುರು ಸುತ್ತುದ ಮಿತ್ತ್ ಉಜ್ಜೇರ್‌ದ ಪೆಟ್ಟು.
(ಉಗುರು ಸುತ್ತಿನ ಮೇಲೆ ಒನಕೆಯ ಪೆಟ್ಟು.)

ಮೊದಲೇ ನೋವನ್ನು ಅನುಭವಿಸಿದ ವ್ಯಕ್ತಿಯು ಮತ್ತೆ ಮತ್ತೆ ಸಂಕಷ್ಟಗಳನ್ನು ಅನುಭವಿಸುವ ಸಂದರ್ಭಗಳಲ್ಲಿ ಈ ಗಾದೆಯನ್ನು ಪ್ರಯೋಗಿಸುತ್ತಾರೆ.

4. ಕೊರಿ ಎರುತ್ತ ಬೆರಿ ಪೂಜಡ.
(ಮಾರಾಟ ಮಾಡಿದ ಕೋಣದ ಬೆನ್ನು ಸವರಬೇಡ.)

'ಮುಂಚೆ ಹೋದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ' ಎನ್ನುವ ಅರ್ಥದಲ್ಲಿ, ಆ ಸಂದರ್ಭಗಳಲ್ಲಿ ಈ ಗಾದೆಯನ್ನು ಬಳಸುತ್ತಾರೆ.

5. ಸಯಿತ್ತಿ ಎರಂದ್ದ್ ಉಲುಂಗ್ ಬುಡಿಲೆಕೊ.
(ಸತ್ತ ಕೋಣದಿಂದ ಉಣ್ಣೆ ಬಿಟ್ಟು ಹೋದ ಹಾಗೆ.)

ಒಬ್ಬ ವ್ಯಕ್ತಿಯಿಂದ ಸಾಕಷ್ಟು ಪ್ರಯೋಜನವನ್ನು ಪಡೆದು, ಆ ವ್ಯಕ್ತಿಯು ಬಡಕಲಾದಾಗ ಅಥವಾ ತನ್ನೆಲ್ಲ ಸೊತ್ತನ್ನು ಕಳೆದುಕೊಂಡಾಗ, ಎಲ್ಲರೂ ಅವನಿಂದ ದೂರವಾಗುತ್ತಾರೆ. ಅಧಿಕಾರ ಹಾಗೂ ಹಣಕ್ಕೆ ಸಂಬಂಧಿಸಿದಂತೆ ಇದು ಹೆಚ್ಚಾಗಿ ಕಾಣಿಸುತ್ತದೆ. ಇಂತಹ ಸಂದರ್ಭಗಳಲ್ಲಿ ಈ ಗಾದೆ ಬಳಕೆಯಾಗುತ್ತದೆ.

**ಗಾದೆಗಳಲ್ಲಿ ಅಶ್ಲೀಲತೆ:**

ಜನಪದ ಸಾಹಿತ್ಯದಲ್ಲಿ ಅಶ್ಲೀಲತೆ ಎನ್ನುವುದು ನಾಗರಿಕ ಸಮಾಜದವರಿಗೆ ಕಾಣಿಸುವ ಹಾಗೆ, ಅವುಗಳ ಸೃಷ್ಟಿಕರ್ತರು, ಪ್ರಯೋಗ ಮಾಡುವವರು ಆದ ಜನಪದರಿಗೆ ಕಾಣಿಸುವುದಿಲ್ಲ. ಗಂಡು ಹೆಣ್ಣಿನ ದೇಹಗಳ ಗುಪ್ತಾಂಗಗಳು, ಮಲ ಮೂತ್ರ ವಿಸರ್ಜನೆಗಳಿಗೆ ಸಂಬಂಧಿಸಿದ ವಿಚಾರಗಳು ವಿದ್ಯಾವಂತರ ಪಾಲಿಗೆ ಅಶ್ಲೀಲ ವಾದುವು. ಆದರೆ ಹಳ್ಳಿಗರು ಇಂತಹ ಪದಗಳನ್ನು ಬಹಳ ಸಲೀಸಾಗಿ, ಸಂದರ್ಭೋಚಿತವಾಗಿ, ಶಕ್ತವಾಗಿ ತಮ್ಮ ಜನಪದ ಸಾಹಿತ್ಯದಲ್ಲಿ ಬಳಸುತ್ತಾರೆ.

ತುಳು ಗಾದೆಗಳಲ್ಲಿ 'ಅಶ್ಲೀಲ' ಎಂದು ಕಾಣಿಸಬಹುದಾದ ಗಾದೆಗಳು ಅನೇಕ ಸಿಗುತ್ತವೆ. ದೇಹದ ಗುಪ್ತಾಂಗಗಳು, ಮಲ ಮೂತ್ರ ವಿಸರ್ಜನೆಯ ವಿಚಾರಗಳು ಇಲ್ಲಿ ವಿಶೇಷವಾಗಿ ಬರುತ್ತವೆ. ಆದರೆ ಇಂತಹ ಗಾದೆಗಳಲ್ಲಿ ಬಹಳ ಮುಖ್ಯ ಸಂಗತಿ ಎಂದರೆ, ಇವುಗಳ ವಾಚ್ಯಾರ್ಥ ಕೇವಲ ನೆಪಮಾತ್ರಕ್ಕೆ ಇದ್ದು, ಅದರಿಂದ ಹೊರಡುವ ವ್ಯಂಗ್ಯಾರ್ಥವೇ ಇಲ್ಲಿ ಪ್ರಧಾನವಾಗಿರುತ್ತದೆ. ಇಂತಹ ಎಲ್ಲ ಗಾದೆಗಳಲ್ಲೂ ಗಾದೆ ಹೇಳುವ ಅರ್ಥ ದಲ್ಲಿ ಗಹನವಾದ ಅನುಭವ ವಿಚಾರ ಅಡಕವಾಗಿರುತ್ತದೆ. 'ಅಶ್ಲೀಲತೆ' ಎಂದು ಕರೆಯಲಾಗುವುದರ ಸ್ಪರ್ಶವೇ ಇರುವುದಿಲ್ಲ.

ಉದಾ : 1. ಅಮ್ಮೆ ಪೀತಿಂದ್'ನ, ಮಗೆ ಪೀಂಕನಾನಲ ಮೂಸುವೆ.
(ತಂದೆ ಹೇಲು ತಿಂದರೆ, ಮಗ ತಿಕವನ್ನಾದರೂ ಮೂಸಿಯಾನು.)
ತಂದೆಯ ಕೆಟ್ಟ ಗುಣದ ಸ್ವಲ್ಪಾಂಶವಾದರೂ ಮಗನಲ್ಲಿ ಇರುತ್ತದೆ.

2. ಎಣ್ಣೆದ ಲಾಭೊ ಕುಣ್ಣೆಡ್ ಪೋಂಡ್.
(ಎಣ್ಣೆಯ ಲಾಭ ತುಣ್ಣೆಯಲ್ಲಿ ಹೋಯಿತು.)

ಇದು ತುಳುವಿನಲ್ಲಿ ಸಾಮಾನ್ಯವಾಗಿ ಬಳಕೆಯಾಗುವ ಜನಪ್ರಿಯ ಗಾದೆ. ಇದರ ಹಿನ್ನೆಲೆ : "ಒಬ್ಬ ತಾನೇ ತೆಂಗಿನಕಾಯಿಗಳನ್ನು ಒಣಗಿಸಿ, ಲಾಭ ಮಾಡುವುದಕ್ಕಾಗಿ ಗಾಣಿಗನಲ್ಲಿಗೆ ಹೋದ. ಅಲ್ಲಿ ಗಾಣಿ ಗಿತ್ತಿಯನ್ನು ಕಂಡು ಮೋಹಿಸಿ, ಆಕೆಯೊಡನೆ ಕೂಡಿ, ಆಕೆಗೆ ಸ್ವಲ್ಪ ಹಣ ಕೊಟ್ಟನು. ಆತನು ಎಣ್ಣೆಯಲ್ಲಿ ಸಂಪಾದಿಸಿದ ಲಾಭದ ಹಣ ಈ ರೀತಿ ತುಣ್ಣೆಯಲ್ಲಿ (ಗಾಣಿಗಿತ್ತಿಯನ್ನು ಕೂಡುವ ಮೂಲಕ) ನಷ್ಟವಾಯಿತು."

ಒಂದು ಕಡೆಯಲ್ಲಿ ಆದ ಲಾಭ, ಇನ್ನೊಂದು ಕಡೆಯಲ್ಲಿ ನಷ್ಟವಾದಾಗ ಈ ಗಾದೆಯನ್ನು ಬಳಸುತ್ತಾರೆ,

3. ಕಂಬೊಳಿಡ್ ಪತ್ತಿ ಪೀತಲೆಕೊ.
(ಕಂಬಳಿಯಲ್ಲಿ ಹಿಡಿದ ಹೇಲಿನ ಹಾಗೆ.)

ಕುಂಬಳಿಯಲ್ಲಿ ಹೇಲು ಹಿಡಿದುಕೊಂಡರೆ, ಅದನ್ನು ಪಕ್ಕನೆ ತೆಗೆಯಲು ಆಗುವುದಿಲ್ಲ. ಹಾಗೆಯೇ ಯಾವನಾದರೂ ವ್ಯಕ್ತಿ ಜಿಗಣೆಯಂತೆ ತೊಂದರೆ ಕೊಡುತ್ತಿದ್ದರೆ ಮೇಲಿನ ಗಾದೆಯನ್ನು ಪ್ರಯೋಗಿಸುತ್ತಾರೆ.

4. ಕಾರೆಡ್ ಪೀ ಆಂಡ್ಂದ್ ಕೊಯಿಂದ್ ಅಡಕ್ಕಿಯೆರೆ ಆಪುಂಡೋ ?
(ಕಾಲಿನಲ್ಲಿ ಹೇಲು ಆಯಿತೆಂದು ಕತ್ತರಿಸಿ ಬಿಸಾಡಲು ಆಗುತ್ತದೆಯೇ ?)

ಏನಾದರೂ ಚಿಕ್ಕ ತಪ್ಪು ಮಾಡಿದ್ದಕ್ಕೆ, ಒಬ್ಬನನ್ನು ಕೊಲ್ಲುವವರೆಗೆ ಮುಂದುವರಿಯಬಾರದು, ಅಥವಾ ಅವನ ಸಂಪರ್ಕವನ್ನೇ ಬಿಡಬಾರದು. ಕಾಲಿನ ಹೇಲನ್ನು ತೊಳೆದು ಕಾಲನ್ನು ಶುಚಿ ಮಾಡುವಂತೆಯೇ ವ್ಯಕ್ತಿಯ ದುರ್ಗುಣಗಳನ್ನು ಸರಿಪಡಿಸಬೇಕು.

5. ಕುದ್ಕೆಗ್ ಕಾರ್ ಬಚ್ಚ್‌ನಗ ನಾಯಿಗ್ ಪೀ ಬತ್ತ್ಂಡ್.
(ನರಿಗೆ ಕಾಲು ಸೋತಾಗ ನಾಯಿಗೆ ಹೇಲು ಬಂತು.)

ಸದವಕಾಶ ಅನಿರೀಕ್ಷಿತವಾಗಿ ತಪ್ಪಿಹೋಗುವುದು.

6. ಕುರುಡಗ್ ಕೊಕ್ಕಿ ತೋಯಿಪ್ಪಲೆಕೊ.
(ಕುರುಡನಿಗೆ ತುಣ್ಣೆ ತೋರಿಸಿದ ಹಾಗೆ.)

ಕುರುಡನಿಗೆ ತುಣ್ಣೆ ತೋರಿಸಿದರೆ, ಅವನಿಗೇನೂ ಕಾಣಿಸುವುದಿಲ್ಲ. ಅಂದರೆ ನಿಷ್ಪ್ರಯೋಜಕ ಕೆಲಸ ಎಂಬ ಅರ್ಥ.

7. ಕೋಲುಡು ಕುಟ್ಟ್‌ದ್ ಪೀ ತಿನ್ಪಾಯಿಲೆಕೊ.
(ಕೋಲಿನಲ್ಲಿ ಕುಟ್ಟಿ ಹೇಲು ತಿನ್ನಿಸಿದಂತೆ.)

ಬಹಳ ಸಾಧುವಾದರೆ ಅವನನ್ನು ಬಹಳವಾಗಿ ಗೋಳು ಹೊಯ್ಯಿಸುತ್ತಾರೆ.

8. ಗಾಡಿ ಎರು ಪಡಿಕ್ಕೆ ಮಯ್ತಿಲೆಕೊ.
(ಗಾಡಿ ಎತ್ತು ಮೂತ್ರ ಹೊಯ್ದಂತೆ.)

ತಡೆ ಇಲ್ಲದೆ, ಅವ್ಯಾಹತವಾಗಿ ಒಂದು ಕೆಲಸ ಮಾಡುವುದು. ಸಾಮಾನ್ಯವಾಗಿ ಮಾತುಗಾರಿಕೆಗೆ ಈ ಗಾದೆಯನ್ನು ಉಪಮಿಸುತ್ತಾರೆ.

9. ಗೋಣನ ಪೊತ್ತೆಲ್‌ಗ್ ಕುದ್ಕೆ ಕಾತಿಲೆಕೊ.
(ಕೋಣನ ತರಡಿಗೆ ನರಿ ಕಾದಂತೆ.)

ಕೋಣ ಒಂದು ಸತ್ತರೆ, ನರಿಯೊಂದು ಅದರ ತರಡು ತಿನ್ನಲು ಕಾದಿರುತ್ತದೆ. ಆದರೆ ಅದಕ್ಕೆ ಮೊದಲು ಕಾಗೆಗಳು ಅದನ್ನು ತಿಂದಿರುತ್ತವೆ. ವ್ಯರ್ಥವಾಗಿ ಕಾದು ನಿರಾಶ ರಾಗುವುದಕ್ಕೆ ಈ ಗಾದೆಯನ್ನು ಉಪಯೋಗಿಸುತ್ತಾರೆ.

10. ನೀರ್‌ದ ಉಳಯಿ ಕಂಳ್ಳ್‌ದ್ ಉರ್ಚಿಲೆಕೊ.
(ನೀರಿನೊಳಗೆ ಕೂತು ಹೇತ ಹಾಗೆ.)

ಗುಪ್ತವಾಗಿ ಮಾಡಿದ ಕುಕಾರ್ಯ ಒಂದಲ್ಲ ಒಂದು ದಿನ ಬಯಲಾಗುತ್ತದೆ.

11. ಪುಕ್‌ನ ಪರ್ವತೊ ಮಲ್ಪುನೆ.
(ಶಾಟವನ್ನು ಪರ್ವತ ಮಾಡುವುದು.)

ಅಲ್ಪ ವಸ್ತುವಿಗೆ ಹೆಚ್ಚು ಮಹತ್ವ ಕೊಡುವುದು.

12. ಪೀಕ್ ಸಿಂಗಿ ದೀಡಿಲೆಕೊ.
(ಹೇಲಿಗೆ ವಿಷ ಇಟ್ಟ ಹಾಗೆ.)

ಅಂದರೆ, ಬಹಳ ಕ್ಷುಲ್ಲಕ ಕೆಲಸ ಮಾಡುವುದು. ಆದರೆ ಅದು ನಿಷ್ಪ್ರಯೋಜಕವಾಗುತ್ತದೆ.

13. ಪೀ ಬನ್ನಗ ಪಿತ್ತ್‌ಲ್ ನಾಡುನೆ.
(ಹೇಲು ಬರುವಾಗ ಹಿತ್ತಿಲು ಹುಡುಕುವುದು.)

ಹೇಲು ಬರುವಾಗ ಹೇಲುವ ಜಾಗವನ್ನು ಹುಡುಕುವುದು. ಪೂರ್ವಸಿದ್ಧತೆ ಇಲ್ಲದಿದ್ದರೆ, ಯಾವುದೇ ಕೆಲಸ ಹಾಳಾಗುತ್ತದೆ.

14. ಪುಣ ತುಂಬುನಾಯಗ್ ಪುಂಕ್ ದಿನ್ನೊನೋ ?
(ಹೆಣ ಹೊರುವವನಿಗೆ ಶಾಟ ಭಾರವಾಗುತ್ತದೆಯೋ ?)

ಹೆಚ್ಚು ಭಾರಗಳನ್ನು ಹೊರುವವನಿಗೆ, ಒಂದು ಚಿಕ್ಕ ವಸ್ತು ಅಧಿಕ ಭಾರವಾಗುವುದಿಲ್ಲ.

15. ಪೂಕಿಗ್ ಉಲ್ರು ದೀಡಿಲೆಕೊ.
(ಹೂಸುವಿಗೆ ಉರುಳು ಇಟ್ಟಹಾಗೆ.)

ಹೂಸು ಉರುಳಿಗೆ, ಬಂಧನಕ್ಕೆ ಸಿಗುವುದಿಲ್ಲ. ಅಂದರೆ ನಿಷ್ಪ್ರಯೋಜನ ಕೆಲಸ ಎಂಬ ಅರ್ಥ.

16. ಪೂಕಿ ಬುಡನಯ್ಕ್ ಪೀಂಕನ್ ದೆಕ್ಕುನೆ ಅತ್ತ್, ಉರ್ಚಿನಯ್ಕ್ ಪೀಂಕನ್ ದೆಕ್ಕುನೆ.
(ಹೂಸು ಬಿಟ್ಟಿದ್ದಕ್ಕೆ ತಿಕ ತೊಳೆಯುವುದಲ್ಲ, ಹೇತದ್ದಕ್ಕೆ ತಿಕ ತೊಳೆಯುವುದು.)
ಕ್ಷುದ್ರ ವಿಚಾರಗಳಿಗೆ ಗಮನ ಕೊಡುವುದಲ್ಲ, ಮಹತ್ಕಾರ್ಯಗಳಿಗೆ ಮಾತ್ರ ಗಮನ ಕೊಟ್ಟರೆ ಸಾಕು.

17. ಪೊತ್ತೆಲ್ ಬುಡ್‌ದ್ ಕೋಮಣೊ ಕಟ್ಟಿಲೆಕೊ.
(ತರಡನ್ನು ಬಿಟ್ಟು ಲಂಗೋಟಿ ಕಟ್ಟಿದ ಹಾಗೆ.)
ಮುಖ್ಯ ವಿಚಾರವನ್ನು ಬಿಟ್ಟು ಕಾರ್ಯ ಮಾಡುವುದು.





18. ಸೂಳೆನ ಇಲ್ಲ್ ಪೊತ್ತ್‌ನಗ ಸನ್ಯಾಸಿಗ್ ಕುಣ್ಣೆ ಲಕ್ಕೆಂಡ್‌ಗೆ.
(ಸೂಳೆಯು ಮನೆ ಉರಿಯುತ್ತಿದ್ದಾಗ ಸನ್ಯಾಸಿಗೆ ತುಣ್ಣೆ ಎದ್ದಿತಂತೆ.)

ಇದರ ಹಿನ್ನೆಲೆ ಹೀಗಿದೆ : ಸೂಳೆಯೊಬ್ಬಳ ಮನೆಗೆ ಬೆಂಕಿ ಬಿದ್ದಿತು. ಆಗ ಆಕೆ ಸೀರೆಯನ್ನು ಸೊಂಟದ ವರೆಗೆ ಮೇಲಕ್ಕೆತ್ತಿ ಕಟ್ಟಿ, ಮನೆಯಲ್ಲಿದ್ದ ವಸ್ತುಗಳನ್ನು ಹೊರಗೆ ಒಯ್ಯುತ್ತಿದ್ದಳು. ಈ ದೃಶ್ಯವನ್ನು ದೂರ ದಲ್ಲಿ ಕುಳಿತಿದ್ದ ಒಬ್ಬ ಸನ್ಯಾಸಿ ಕಂಡ. ಸೂಳೆಯನ್ನು ಆ ಭಂಗಿಯಲ್ಲಿ ನೋಡಿ, ಅವನಿಗೆ ಕಾಮೋದ್ರೇಕ ವಾಯಿತು.

ಯಾರಾದರೂ ಒಬ್ಬರು ಬಹಳ ಸಂಕಷ್ಟದಲ್ಲಿದ್ದಾಗ, ಇನ್ನೊಬ್ಬರು ಆ ಸಂದರ್ಭದ ಲಾಭ ಪಡೆದು ಸಂತೋಷ ಪಡುತ್ತಿದ್ದರೆ ಆಗ ಮೇಲಿನ ಗಾದೆಯನ್ನು ಬಳಸುತ್ತಾರೆ.

**ಗಾದೆಗಳ ಕಾರ್ಯಗಳು :**

ಅನೇಕ ದೇಶದ ಗಾದೆಗಳು ಸಮಾಜದಲ್ಲಿ ತಮ್ಮ ವಿಶಿಷ್ಟ ಕಾರ್ಯ (function) ಗಳಿಂದ ಪ್ರಸಿದ್ಧ ವಾಗಿವೆ. ವಿದ್ಯಾಭ್ಯಾಸ, ಸಾಮಾಜಿಕ ಹತೋಟಿ, ಸಾಮಾಜಿಕ ಅಧಿಕಾರ, ಸಾಮಾಜಿಕ ಮನಶ್ಶಾಸ್ತ್ರೀಯ ಕಾರ್ಯ, ಸಾಂಸ್ಕೃತಿಕ ಮುಂದುವರಿಕೆ, ನ್ಯಾಯಾಲಯಗಳಲ್ಲಿ ಬಳಕೆ–ಇಂತಹ ಅನೇಕ ಪ್ರಧಾನ ಕಾರ್ಯಗಳನ್ನು ಗಾದೆಗಳು ಮಾಡುತ್ತವೆ. ಆದರೆ ಸಂಪೂರ್ಣವಾಗಿ ಆಡುಭಾಷೆಯಾಗಿರುವ ತುಳುವಿನಲ್ಲಿ ಈಗ ಅಂತಹ ಯಾವುದೇ ಪ್ರಧಾನ ಕಾರ್ಯಗಳು ಗಾದೆಗಳಿಂದ ಆಗುತ್ತಿಲ್ಲ. ಸಾಂಸ್ಕೃತಿಕ ಮುಂದುವರಿಕೆಯ ದೃಷ್ಟಿಯಿಂದಲೂ ತುಳು ಗಾದೆಗಳು ಇಂದು ಕಾರ್ಯ ಮಾಡುವ ಸ್ಥಿತಿಯಲ್ಲಿ ಇಲ್ಲ. ಆದರೆ ಕೆಲವು ದಶಕಗಳ ಹಿಂದೆ ತುಳು ಗಾದೆ ಗಳಿಗೆ ಜನಪದ ಸಮಾಜಗಳಲ್ಲಿ ಗೌರವದ ಸ್ಥಾನ ಇತ್ತು ಎಂದು ಗೊತ್ತಾಗುತ್ತದೆ. ನೀತಿ, ಅನುಭವ, ತಿಳುವಳಿಕೆ–ಇವುಗಳನ್ನು ಇನ್ನೊಬ್ಬರಿಗೆ ತಿಳಿಸುವಾಗ ಅಥವಾ ತಮ್ಮ ನಡವಳಿಕೆಯನ್ನು ಸಮರ್ಥಿಸಿಕೊಳ್ಳುವಾಗ ಅಥವಾ ಇನ್ನೊಬ್ಬರ ವರ್ತನೆಯನ್ನು ವಿಡಂಬಿಸುವಾಗ ತುಳು ಗಾದೆಗಳ ಬಳಕೆ ಆಗುತ್ತಿತ್ತು. ಆದರೆ ಇಂದು ತುಳುಗಾದೆಗಳು ಕಡಿಮೆ ಪ್ರಮಾಣದಲ್ಲಾದರೂ ಹಳ್ಳಿಗಳಲ್ಲಿ ಕಾಣಸಿಕೊಳ್ಳುವುದು ಮಾತಿಗೆ ಪೋಷಕವಾಗಿ, ರಂಜಕ ವಾಗಿ ಮಾತ್ರ. ತೀರ ಅನಕ್ಷರಸ್ಥರು ಕೂಡಾ ಇಂದು ತುಳು ಗಾದೆಗಳು ಸಾರುವ ಮೌಲ್ಯಗಳನ್ನು ಹೆಚ್ಚು ಗಂಭೀರವಾಗಿ ತೆಗೆದುಕೊಳ್ಳುತ್ತಿಲ್ಲ. ತುಳು ನಾಟಕ, ತುಳು ಸಿನಿಮಾಗಳ ಸಂಭಾಷಣೆಗಳಲ್ಲಿ ತುಳು ಗಾದೆ ಗಳನ್ನು ಬಳಸುವ ಕ್ರಮ–ಪ್ರಧಾನವಾಗಿ, ಹಾಸ್ಯಕ್ಕಾಗಿ ಕಾಣಿಸುತ್ತಿದೆ.

2. **ತುಳು ಗಾದೆಗಳ ವರ್ಗೀಕರಣ :**

ವಾರನ್ ರಾಬರ್ಟ್ಸ್ ಎನ್ನುವ ವಿದ್ವಾಂಸನು ಗಾದೆಗಳನ್ನು ದಶಮಾಂಕ ಪದ್ಧತಿಯಲ್ಲಿ ವರ್ಗೀಕರಿಸಿದ್ದಾನೆ. ಆ ವರ್ಗೀಕರಣ ವಿಧಾನವನ್ನು ಸಂಪೂರ್ಣವಾಗಿ ತುಳು ಗಾದೆಗಳಿಗೆ ಅನ್ವಯಿಸಲು ಆಗುವುದಿಲ್ಲ. ಆದರೆ ಆ ಮಾದರಿಯನ್ನು ಅನುಸರಿಸಿಕೊಂಡು ವಿಷಯ ವಸ್ತುಗಳಿಗೆ ಅನುಸಾರವಾಗಿ ತುಳು ಗಾದೆಗಳನ್ನು ವರ್ಗೀಕರಿಸ ಬಹುದು. ವಸ್ತು ವಿಷಯಗಳ ಬಾಹುಳ್ಯ ಮತ್ತು ವೈವಿಧ್ಯಗಳ ಕಾರಣದಿಂದಾಗಿ ಇದು ಸಾಕಷ್ಟು ತೊಡಕಿನ ಕೆಲಸವಾಗಿದೆ. ಆದರೆ ತುಳು ಗಾದೆಗಳ ಅಧ್ಯಯನದ ದೃಷ್ಟಿಯಿಂದ ಕೆಲವು ಮಾರ್ಪಾಟುಗಳ ಮೂಲಕ ಈ ವರ್ಗೀಕರಣವನ್ನು ಮಾಡಲಾಗಿದೆ. ಈ ವರ್ಗೀಕರಣವನ್ನು ಮಾಡುವಾಗ ಒಟ್ಟು ಸುಮಾರು 1600 ತುಳು ಗಾದೆಗಳನ್ನು ಗಮನಿಸಲಾಗಿದೆ. ಅವುಗಳಲ್ಲಿ ಸುಮಾರು 700 ಪ್ರಕಟವಾಗಿರುವವುಗಳು—"ತುಳು ಗಾದೆಗಳು"; ಸಂ. ಬಿ.ಎ. ವಿವೇಕ ರೈ (ಪ್ರಕೃತ ಲೇಖಕ), ಪಲಚುವಿ ಪ್ರಕಾಶನ, ಮಂಗಳೂರು, 1971. ಉಳಿದ ಸುಮಾರು 900ರಷ್ಟು ತುಳು ಗಾದೆಗಳು ಈ ಲೇಖಕನ ಸಂಪಾದನೆಯ ಹಸ್ತಪ್ರತಿಯಲ್ಲಿವೆ.

1. ವೃತ್ತಿ, ಕಸುಬು, ಜಾತಿ :

1. ಬೇಸಾಯ :

1. ಬೇಸಾಯ (General)
2. ಬೇಸಾಯದ ವಿಧಗಳು
3. ಬೇಸಾಯದ ಸಾಮಗ್ರಿಗಳು

2. ಇತರ ಕಸುಬುಗಳು :

1. ಬೆಸ್ತ
2. ಗಾಣಿಗ
3. ಬೇಡರವ
4. ಅಕ್ಕಸಾಲಿಗ
5. ಕುಂಬಾರ
6. ಸಮಗಾರ
7. ಮಡಿವಾಳ
8. ಪೂಜಾರಿ
9. ಜೋಯಿಸ
10. ವೈದ್ಯ
11. ಕಮ್ಮಾರ
12. ಕಳ್ಳ
13. ಸೂಳೆ
14. ಇತರ ಕಸುಬುಗಳು

3. ಜಾತಿಗಳು :

1. ಬ್ರಾಹ್ಮಣ
2. ಕೊಂಕಣಸ್ಥ
3. ಬಂಟ
4. ಜೈನ
5. ಬಿಲ್ಲವ
6. ಬ್ಯಾರಿ
7. ಹೊಲೆಯ
8. ತುರುಕ
9. ಪರಂಗಿಯವ
10. ಇತರ ಜಾತಿಗಳು

2. ಸಸ್ಯಗಳು :

1. ಮರಗಳು–ಗಿಡಗಳು :

1. ತೆಂಗಿನ ಮರ
2. ತಾಳೆ ಮರ
3. ಬಾಳೆ
4. ಮಾವು
5. ಹಲಸು
6. ಕಬ್ಬು
7. ಅಂಬಟೆ
8. ಕಣಿಲೆ
9. ಬಿದಿರು
10. ಇತರ ಮರಗಿಡಗಳು

2. ತರಕಾರಿಗಳು – ಅಡುಗೆಯ ಸಸ್ಯಗಳು :

1. ಕುಂಬಳಕಾಯಿ
2. ಹಾಗಲಕಾಯಿ
3. ಕೆಸು
4. ಚಗಟೆ
5. ಇತರ

3. ಧಾನ್ಯಗಳು :

1. ಹುರುಳಿ
2. ಉದ್ದು
3. ಕಡ್ಲೆ
4. ಹೆಸರು
5. ಇತರ

3. ಪ್ರಾಣಿಗಳು, ಪಕ್ಷಿಗಳು, ಕೀಟಗಳು :

1. ಪ್ರಾಣಿಗಳು :

1. ಕಾಡುಪ್ರಾಣಿಗಳು :

1. ಆನೆ
2. ನರಿ
3. ಹುಲಿ
4. ಮುಸು
5. ಮಂಗ
6. ಅಳಿಲು
7. ಕರು
8. ಮೊಲ
9. ಕರಡಿ
10. ಇತರ ಕಾಡುಪ್ರಾಣಿಗಳು

2. ಸಾಕು ಪ್ರಾಣಿಗಳು :

1. ಬೆಕ್ಕು
2. ನಾಯಿ
3. ಕೋಣ
4. ಹೋರಿ
5. ದನ
6. ಎಮ್ಮೆ
7. ಹಂದಿ
8. ಇತರ ಪ್ರಾಣಿಗಳು

3. ಹಾವುಗಳು :

1. ಹಾವು (General)
2. ಕೇರೆ
3. ನಾಗರಹಾವು
4. ಇತರ ಹಾವುಗಳು

4. ಜಲಚರ ಪ್ರಾಣಿಗಳು :

1. ಮೀನು
2. ಆಮೆ
3. ಕಪ್ಪೆ
4. ಮೊಸಳೆ
5. ಇತರ ಜಲಚರ ಪ್ರಾಣಿಗಳು

5. ಇತರ ಪ್ರಾಣಿಗಳು :

1. ಇಲಿ
2. ಇತರ ಪ್ರಾಣಿಗಳು

2. ಪಕ್ಷಿಗಳು :

1. ಕೋಳಿ
2. ಕಾಡು ಕೋಳಿ
3. ಕಾಗೆ
4. ಕೊಕ್ಕರೆ
5. ಇತರ ಪಕ್ಷಿಗಳು

3. ಕೀಟಗಳು :

1. ಜಿರಳೆ
2. ತಗಣೆ
3. ನೊಣ
4. ಸೊಳ್ಳೆ
5. ಲಕ್ಷ್ಮೀ ಚೇಳು
6. ಉಣ್ಣೆ
7. ಎರೆಹುಳ
8. ಕಡುಂದುರು ಹುಳು
9. ಇತರ ಕೀಟಗಳು

4. ಅಡುಗೆ :

1. ಅಕ್ಕಿ :

1. ಅಕ್ಕಿ (General)
2. ಗಂಧ ಸಾಲ್ ಅಕ್ಕಿ
3. ಬೀಲ್ ಸಾಲ್ ಅಕ್ಕಿ
4. ಬೆಳ್ತಿಗೆ ಅಕ್ಕಿ
5. ಅವಲಕ್ಕಿ
6. ಗಂಜಿ, ತಿಳಿ
7. ತಂಗುಳನ್ನ
8. ಅಡ್ಯೆ

1. ಸೇವುಗೆ
2. ತೆಲ್ಲಾವ್
3. ದೋಸೆ
4. ರೊಟ್ಟಿ
5. ಅಪ್ಪ
6. ಕಡುಬು
7. ಮನ್ನಿ
8. ನುಚ್ಚಿ
9. ಕೊಟ್ಟಿಗೆ
10. ಮೂಡೆ
11. ಕೆಂಡವಡ್ಯೆ
12. ಹಲಸಿನ ಗಟ್ಟಿ
13. ಇತರ ಅಡ್ಯೆಗಳು

2. ಉಪ್ಪಿನಕಾಯಿ :

1. ಮಾವಿನ ಉಪ್ಪಿನಕಾಯಿ
2. ಲಿಂಬೆ ಉಪ್ಪಿನಕಾಯಿ

3. ಪಲ್ಯ

4. ಉಪ್ಪು

5. ಹಾಲು, ಹಾಲಿನ ಉತ್ಪನ್ನಗಳು:

1. ಹಾಲು (General)
2. ಮೊಸರು
3. ಮಜ್ಜಿಗೆ
4. ಬೆಣ್ಣೆ
5. ತುಪ್ಪ
6. ಇತರ

6. ಪಾಯಸ

7. ಒಲೆ

8. ಇತರ

5. ಸಾಮಗ್ರಿಗಳು – ಸಾಧನಗಳು :

1. ಅಡುಗೆಯ ಸಾಮಗ್ರಿಗಳು:

1. ಅಡ್ಕರ
2. ಬಿಸಲೆ
3. ಕಾವಲಿ
4. ಕೈವಸ್ತ್ರ
5. ಇತರ

2. ಗೃಹೋಪಯೋಗಿ ಸಾಮಗ್ರಿಗಳು :

1. ಕನ್ನಡಿ
2. ಗುಂಡಾಣ
3. ಗೆರಸೆ
4. ಮೆಂಟ್ಲು
5. ಹಂಡೆ
6. ಕುಡ್ತೆ
7. ಸೂಜಿ
8. ಪೀಕದಾನಿ
9. ಕಂಬಳಿ
10. ಇತರ ಸಾಮಗ್ರಿಗಳು

3. ವೃತ್ತಿಪ್ರಧಾನ ಸಾಮಗ್ರಿಗಳು :

1. ಕೊಡಲಿ
2. ಚೂರಿ
3. ಕತ್ತರಿ
4. ಮುಂಡಾಲೆ
5. ಪರ್ದತ್ತಿ
6. ಒನಕೆ
7. ಇತರ ಸಾಮಗ್ರಿಗಳು

4. ಸಂಚಾರ ಸಾಮಗ್ರಿಗಳು :

1. ಗಾಡಿ
2. ದೋಣಿ
3. ಹಡಗು
4. ಇತರ

5. ಇತರ ಸಾಮಗ್ರಿಗಳು.

6. ಕೌಟುಂಬಿಕ :

1. ಅಜ್ಜಿ
2. ಅಜ್ಜ
3. ಅಪ್ಪ
4. ಅಮ್ಮ
5. ಮಗ
6. ಮಗಳು
7. ಮಾವ
8. ಅತ್ತೆ
9. ಅಳಿಯ
10. ಸೊಸೆ
11. ಭಾವಮೈದುನ
12. ಗಂಡ, ಹೆಂಡತಿ
13. ಮಗು–ಮಕ್ಕಳು
14. ಇತರ

7. ನಿಸರ್ಗ :

1. ಮಳೆ
2. ಗಾಳಿ
3. ನೀರು
4. ಗುಡುಗು, ಮಿಂಚು
5. ಆಕಾಶ
6. ನಕ್ಷತ್ರ
7. ಇತರ

8. ಧಾರ್ಮಿಕ ಆಚರಣೆ, ಪದ್ಧತಿ, ನಂಬಿಕೆಗಳು :

1. ಭೂತಾರಾಧನೆ

2. ನಿಯತಕಾಲಿಕ ಆಚರಣೆಗಳು

   1. ಆಮೆ
   2. ಮದುವೆ
   3. ಸಾವು
   4. ಇತರ

3. ಕೆಲವು ನಂಬಿಕೆಗಳು.

4. ಇತರ ಆಚರಣೆ ಪದ್ಧತಿಗಳು.

9. ಮನೋರಂಜನೆ :

1. ಬಯಲಾಟ
2. ಕಂಬಳ
3. ಕೋಳಿ ಅಂಕ
4. ಬೇಟೆ
5. ಇತರ

10. ಆಭರಣಗಳು, ವೇಷಭೂಷಣಗಳು :

1. ಆಭರಣಗಳು

2. ವೇಷಭೂಷಣಗಳು

1. ಸೀರೆ
2. ರವಕೆ
3. ಮುಂಡಾಸು
4. ಮಂಟ್ವಾಳೆ
5. ಇತರ

11. ದೇಹದ ಅಂಗಗಳು :

1. ಶರೀರ (General)

2. ತಲೆ

1. ತಲೆ (General)
2. ತಲೆಗೂದಲು

3. ಕಣ್ಣು :

1. ಕಣ್ಣು (General)
2. ಕಣ್ಣು ರೆಪ್ಪೆ
3. ಹುಬ್ಬು

4. ಕಿವಿ

5. ಮೂಗು

6. ಬಾಯಿ

1. ಬಾಯಿ (General)
2. ನಾಲಿಗೆ
3. ಹಲ್ಲುಗಳು
4. ತುಟಿಗಳು

7. ಕೈ.

   1. ಕೈ (General)

   2. ಕೈ ಬೆರಳುಗಳು
      1. ಉಗುರುಗಳು

8. ಮೊಲೆ.

9. ಎದೆಗುಂಡಿಗೆ.

10. ಹೊಟ್ಟೆ.

11. ಮಡಿಲು.

12. ತೊಡೆ.

ಈ ಪದ್ಧತಿಯಂತೆ ತುಳು ಗಾದೆಗಳನ್ನು ವಸ್ತು ವಿಷಯಕ್ಕೆ ಅನುಗುಣವಾಗಿ ವರ್ಗೀಕರಿಸಿದರೆ ಅವುಗಳ ಅಧ್ಯಯನಕ್ಕೆ ಸುಲಭವಾಗುತ್ತವೆ. ಪ್ರತಿಯೊಂದು ಗಾದೆಗೂ ಇರುವ ಸಾಂಸ್ಕೃತಿಕ ಹಿನ್ನೆಲೆ ಈ ವರ್ಗೀಕರಣ ದಲ್ಲಿ ದೊರೆಯುತ್ತದೆ. ಉದಾ : ಈ ವರ್ಗೀಕರಣ ವಿಧಾನದಿಂದ ಕೆಲವು ತುಳು ಗಾದೆಗಳನ್ನು ವರ್ಗೀಕರಿಸಿ ನೋಡಬಹುದು.

1. "ಎಣೆಲ್ ಸೂಳೆ, ಸುಗ್ಗಿ ಮದಿಮಾಳ್, ಕೊಳಕೆ ಪೆದಮೆದಿ."
   (ಎಣೆಲು ಸೂಳೆ, ಸುಗ್ಗಿ ಮದುಮಗಳು, ಕೊಳಕೆ ಬಾಣಂತಿ.)—1.1.2

ಇಲ್ಲಿ ಮೊದಲನೆಯ 1 ಎನ್ನುವ ಅಂಕೆಯು 'ವೃತ್ತಿ, ಕಸುಬು, ಜಾತಿ' ಎನ್ನುವ ಪ್ರಧಾನ ವರ್ಗವನ್ನು ಸೂಚಿಸುತ್ತದೆ. ಎರಡನೆಯ 1 ಎಂಬ ಅಂಕೆಯು ಇದರಲ್ಲಿ 'ಬೇಸಾಯ' ಎನ್ನುವ ವೃತ್ತಿಯನ್ನು ಸೂಚಿಸುತ್ತದೆ. ಮೂರನೆಯ 2 ಎಂಬ ಅಂಕೆಯು 'ಬೇಸಾಯದ ವಿಧಗಳು' ಈ ಗಾದೆಯಲ್ಲಿ ಇದೆ ಎಂಬುದನ್ನು ಹೇಳುತ್ತದೆ.

2. "ಕಪ್ಪು ಬ್ರಾಣನ್ ನಂಬಡ, ಬೊಳ್ದು ದಿಕ್ಕನ್ ನಂಬಡ."
   (ಕಪ್ಪು ಬ್ರಾಹ್ಮಣನನ್ನು ನಂಬಬೇಡ, ಬಿಳಿಯ ಹೊಲೆಯನನ್ನು ನಂಬಬೇಡ.)

ಈ ಗಾದೆಯ ವರ್ಗೀಕರಣ 1.3.1 (Ref. 1.3.7.).

ಇಲ್ಲಿ ಮೊದಲನೆಯ 1 ಎಂಬ ಅಂಕೆಯು 'ವೃತ್ತಿ, ಕಸುಬು, ಜಾತಿ' ಎಂಬ ಪ್ರಧಾನ ವರ್ಗವನ್ನು ಸೂಚಿಸುತ್ತದೆ. ಎರಡನೆಯ 3 ಎಂಬ ಅಂಕೆಯು ಇದರಲ್ಲಿ 'ಜಾತಿಗಳು' ಎಂಬ ವರ್ಗವನ್ನು ಸೂಚಿಸು ತ್ತದೆ. ಮೂರನೆಯ 1 ಎಂಬ ಅಂಕೆಯು 'ಬ್ರಾಹ್ಮಣ' ಎಂಬ ಜಾತಿಯನ್ನು ಹೇಳುತ್ತದೆ. ಆದರೆ ಈ ಗಾದೆಯಲ್ಲಿ 'ಹೊಲೆಯ'ನ ವಿಚಾರವನ್ನೂ ಹೇಳಲಾಗಿದೆ. ಆದಕ್ಕಾಗಿ ವರ್ಗೀಕರಣದಲ್ಲಿ Ref. 1.3.7 ಎಂದು ಕೊಡಲಾಗಿದೆ. ಇಲ್ಲಿ ಕೊನೆಯ 7 ಎನ್ನುವ ಅಂಕೆಯು ಗಾದೆಗಳಲ್ಲಿ 'ಹೊಲೆಯ' ಎಂಬುದನ್ನು ಸೂಚಿಸುತ್ತದೆ.

3. "ಕಂಜೋಲು ಕೈಪೆಂದ್ ದೆಕ್ಕೈರೆ ಬಲ್ಲಿ, ಮಾಮಿ ನೆರೆಯಾಳ್‌ಂದ್ ಬಲಿಪೆರೆ ಬಲ್ಲಿ."
(ಹಾಗಲಕಾಯಿ ಕಹಿಯೆಂದು ಬಿಸಾಡಬಾರದು, ಅತ್ತೆ ಬಯ್ದಳೆಂದು ಓಡಿ ಹೋಗಬಾರದು.)

ಈ ಗಾದೆಯ ವರ್ಗೀಕರಣ--2.2.2 (Ref. 6.8.)

ಇಲ್ಲಿ ಮೊದಲನೆಯ 2 ಎಂಬ ಅಂಕೆಯು 'ಸಸ್ಯಗಳು' ಎಂಬ ಪ್ರಧಾನ ವರ್ಗವನ್ನು ಸೂಚಿಸುತ್ತದೆ. ಎರಡನೆಯ 2 ಎಂಬ ಅಂಕೆಯು 'ತರಕಾರಿಗಳು, ಅಡುಗೆಯ ಸಸ್ಯಗಳು' ಎಂಬ ಒಳ ವಿಭಾಗವನ್ನು ಸೂಚಿಸುತ್ತದೆ. ಮೂರನೆಯ 2 ಎಂಬ ಅಂಕೆಯು ಇದರಲ್ಲಿ 'ಹಾಗಲಕಾಯಿ' ಎಂಬ ತರಕಾರಿಯನ್ನು ಸೂಚಿಸುತ್ತದೆ. ಆದರೆ ಈ ಗಾದೆಯಲ್ಲಿ 'ಅತ್ತೆ'ಯ ಬಗ್ಗೆಯೂ ಪ್ರಸ್ತಾಪವಿದೆ. ಆದ್ದರಿಂದ Ref. 6.8 ಎಂದು ಕೊಡಲಾಗಿದೆ. ಇಲ್ಲಿ ಮೊದಲನೆಯ 6 ಎಂಬ ಅಂಕೆಯು 'ಕೌಟುಂಬಿಕ' ಎಂಬ ಪ್ರಧಾನ ವರ್ಗವನ್ನು ಸೂಚಿಸುತ್ತದೆ. ಎರಡನೆಯ 8 ಎಂಬ ಅಂಕೆಯು ಇದರಲ್ಲಿ 'ಅತ್ತೆ'ಯನ್ನು ನಿರ್ದೇಶಿಸುತ್ತದೆ.

4. "ನಾಯಿಡ ಕೇಂಡ್‌ದ್ ಬೋಂಟೆಗ್ ಪೋಪುನ್ನೋ ?"
(ನಾಯಿಯನ್ನು ಕೇಳಿ ಬೇಟೆಗೆ ಹೋಗುವುದೇ ?)

ಈ ಗಾದೆಯ ವರ್ಗೀಕರಣ 3.1.2.2. (Ref. 9.4)

ಇಲ್ಲಿ ಮೊದಲನೆಯ 3 ಎಂಬ ಅಂಕೆಯು 'ಪ್ರಾಣಿಗಳು, ಪಕ್ಷಿಗಳು, ಕೀಟಗಳು' ಎಂಬ ಪ್ರಧಾನ ವರ್ಗವನ್ನು ಸೂಚಿಸುತ್ತದೆ. ಎರಡನೆಯ 1 ಎಂಬ ಅಂಕೆಯು ಇದರಲ್ಲಿ 'ಪ್ರಾಣಿಗಳು' ಎಂಬ ಒಳವರ್ಗವನ್ನು ತಿಳಿಸುತ್ತದೆ. ಮೂರನೆಯ 2 ಎಂಬ ಅಂಕೆಯು ಪ್ರಾಣಿಗಳಲ್ಲಿ 'ಸಾಕು ಪ್ರಾಣಿಗಳು' ಎಂಬ ವಿಭಾಗವನ್ನು ತಿಳಿಸುತ್ತದೆ. ನಾಲ್ಕನೆಯ 2 ಎಂಬ ಅಂಕೆಯು ಸಾಕುಪ್ರಾಣಿಗಳಲ್ಲಿ 'ನಾಯಿ'ಯನ್ನು ನಿರ್ದೇಶಿಸುತ್ತದೆ. ಈ ಗಾದೆಯಲ್ಲಿ ಬೇಟೆಯ ಪ್ರಸ್ತಾವವಿದೆ. ಆದ್ದರಿಂದ Ref. 9.4. ಎಂದು ಕೊಡಲಾಗಿದೆ. ಇಲ್ಲಿ ಮೊದಲನೆಯ 9 ಎಂಬ ಅಂಕೆಯು 'ಮನೋರಂಜನೆ' ಎಂಬ ಪ್ರಧಾನ ವರ್ಗವನ್ನು ಸೂಚಿಸುತ್ತದೆ. ಎರಡನೆಯ 4 ಎಂಬ ಅಂಕೆಯು ಮನೋರಂಜನೆಗಳಲ್ಲಿ 'ಬೇಟೆಯನ್ನು' ನಿರ್ದೇಶಿಸುತ್ತದೆ.

5. "ಅಪ್ಪೊ ತಿಂದ್‌ನ ಯಾರಂದೋ ? ಗುರಿಲಾ ಲೆಕ್ಕ ಮಲ್ಪೊಡಾ ?"
(ಅಪ್ಪ ತಿಂದರೆ ಸಾಲದೇ ? ಕುಳಿ ಲೆಕ್ಕ ಮಾಡಬೇಕೇ ?)

ಈ ಗಾದೆಯ ವರ್ಗೀಕರಣ 4.1.8.5.

ಇಲ್ಲಿ ಮೊದಲನೆಯ 4 ಎಂಬ ಅಂಕೆಯು 'ಅಡುಗೆ' ಎಂಬ ಪ್ರಧಾನ ವರ್ಗವನ್ನು ಸೂಚಿಸುತ್ತದೆ. ಎರಡನೆಯ 1 ಎಂಬ ಅಂಕೆಯು 'ಅಕ್ಕಿ' ಎಂಬ ಪ್ರಕಾರವನ್ನು ಸೂಚಿಸುತ್ತದೆ. ಮೂರನೆಯ 8 ಎಂಬ ಅಂಕೆಯು ಅಕ್ಕಿಯಲ್ಲಿ 'ಅಡ್ಯೆ' ಎಂಬ ಉತ್ಪನ್ನ ರೂಪದ ಒಳವರ್ಗವನ್ನು ತಿಳಿಸುತ್ತದೆ. ನಾಲ್ಕನೆಯ 5 ಎಂಬ ಅಂಕೆಯು ಅಡ್ಯೆಯಲ್ಲಿ 'ಅಪ್ಪ' ಎನ್ನುವ ವಿಧವನ್ನು ನಿರ್ದೇಶಿಸುತ್ತದೆ.

6. "ಕಪ್ಪಲ್ ದಿಂಜಯೆರೆ ಪೋನಾಯೆ ಬತ್ತ್‌ದೆ. ಬಂಜಿ ದಿಂಜಯರೆ ಪೋನಾಯೆ ಬತ್ತ್‌ಜ್ಜೆ"
(ಹಡಗು ತುಂಬಿಸಲು ಹೋದವ ಬಂದಿದ್ದಾನೆ, ಹೊಟ್ಟೆ ತುಂಬಿಸಲು ಹೋದವ ಬಂದಿಲ್ಲ!)

ಈ ಗಾದೆಯ ವರ್ಗೀಕರಣ 5.4.3. (Ref. 11.10.)

ಇಲ್ಲಿ ಮೊದಲನೆಯ 5 ಎಂಬ ಅಂಕೆಯು "ಸಾಮಗ್ರಿಗಳು – ಸಾಧನಗಳು" ಎಂಬ ಪ್ರಧಾನ ವರ್ಗವನ್ನು ತಿಳಿಸುತ್ತದೆ. ಎರಡನೆಯ 4 ಎಂಬ ಅಂಕೆಯು ಇದರಲ್ಲಿ "ಸಂಚಾರ ಸಾಮಗ್ರಿಗಳು" ಎನ್ನುವ ಉಪವರ್ಗವನ್ನು ತಿಳಿಸುತ್ತದೆ. ಕೊನೆಯ 3 ಎಂಬ ಅಂಕೆಯು ಈ ಸಂಚಾರ ಸಾಮಗ್ರಿಗಳಲ್ಲಿ "ಹಡಗು" ಎಂಬುದನ್ನು ನಿರ್ದೇಶಿಸುತ್ತದೆ. ಈ ಗಾದೆಯಲ್ಲಿ "ಹೊಟ್ಟೆಯ" ಪ್ರಸ್ತಾವವು ಬರುತ್ತದೆ. ಆದ್ದರಿಂದ Ref. 11.10 ಇಲ್ಲಿ ಮೊದಲನೆಯ 11 ಎಂಬ ಅಂಕೆಯು "ದೇಹದ ಅಂಗಗಳು" ಎಂಬ ಪ್ರಧಾನ ಭಾಗವನ್ನು ಸೂಚಿಸುತ್ತದೆ. ಎರಡನೆಯ 10 ಎಂಬ ಅಂಕೆಯು ದೇಹದ ಅಂಗಗಳಲ್ಲಿ "ಹೊಟ್ಟೆ" ಎಂಬ ಅಂಗವನ್ನು ನಿರ್ದೇಶಿಸುತ್ತದೆ.

7. "ಅವುಸರದ ಬೂತೊಗು ಅರಿ ಅರಿ ಬಜಿಲ್."
(ಅವಸರದ ಭೂತಕ್ಕೆ ಅರ್ಧಂಬರ್ಧ ಅವಲಕ್ಕಿ.)

ಅದರ ವರ್ಗೀಕರಣ 8.1. (Ref. 4.1.5.)

ಇಲ್ಲಿ ಮೊದಲನೆಯ 8 ಎಂಬ ಅಂಕೆಯು "ಧಾರ್ಮಿಕ ಆಚರಣೆ, ಪದ್ಧತಿ, ನಂಬಿಕೆಗಳು" ಎಂಬ ಪ್ರಧಾನ ವರ್ಗವನ್ನು ಸೂಚಿಸುತ್ತದೆ. ಎರಡನೆಯ 1 ಎಂಬ ಅಂಕೆಯು ಇದರಲ್ಲಿ 'ಭೂತಾರಾಧನೆ' ಎಂಬ ಧಾರ್ಮಿಕ ಆಚರಣೆಯನ್ನು ತಿಳಿಸುತ್ತದೆ. ಈ ಗಾದೆಯಲ್ಲಿ "ಅವಲಕ್ಕಿ"ಯ ಪ್ರಸ್ತಾವ ಇದೆ. Ref. 4.1.5 ಇಲ್ಲಿ ಮೊದಲನೆಯ 4 ಎಂಬ ಅಂಕೆಯು "ಅಡುಗೆ" ಎಂಬ ಪ್ರಧಾನ ವರ್ಗವನ್ನು ಸೂಚಿಸುತ್ತದೆ. ಎರಡನೆಯ 1 ಎಂಬ ಅಂಕೆಯು "ಅಕ್ಕಿ" ಎಂಬ ಪ್ರಕಾರವನ್ನು ತಿಳಿಸುತ್ತದೆ. ಮೂರನೆಯ 5 ಎಂಬ ಅಂಕೆಯು ಅಕ್ಕಿಯ ಉತ್ಪನ್ನವಾದ "ಅವಲಕ್ಕಿ" ಎಂಬ ವಿಧವನ್ನು ನಿರ್ದೇಶಿಸುತ್ತದೆ.

8. "ಮುಟ್ಟಾಳೆದಾಯಗ್ ಕೊರ್ಪುಜಿ, ಮುಂಡಾಸ್‌ದಾಯೆ ಬರ್ಪುಜಿ."
(ಮುಟ್ಟಾಳೆಯವನಿಗೆ ಕೊಡುವುದಿಲ್ಲ, ಮುಂಡಾಸಿನವನು ಬರುವುದಿಲ್ಲ.)

ಇದರ ವರ್ಗೀಕರಣ 10.2.4. (Ref. 10.2.3.)

ಇಲ್ಲಿ ಮೊದಲನೆಯ 10 ಎಂಬುದು "ಆಭರಣಗಳು, ವೇಶ ಭೂಷಣಗಳು" ಎಂಬ ಪ್ರಧಾನ ವರ್ಗವನ್ನು ಸೂಚಿಸುತ್ತದೆ. ಎರಡನೆಯ 2 ಎಂಬ ಅಂಕೆಯು ಈ ಪ್ರಧಾನ ವರ್ಗದಲ್ಲಿ "ವೇಶ ಭೂಷಣಗಳು" ಎಂಬ ಒಳವರ್ಗವನ್ನು ತಿಳಿಸುತ್ತದೆ. ಕೊನೆಯ 4 ಎಂಬ ಅಂಕೆಯು "ಮುಟ್ಟಾಳೆ" ಎಂಬ ವಸ್ತುವನ್ನು ನಿರ್ದೇಶಿಸುತ್ತದೆ. ಈ ಗಾದೆಯಲ್ಲಿ ಮುಂಡಾಸಿನ ಪ್ರಸ್ತಾಪವೂ ಇದೆ. ಆದ್ದರಿಂದ Ref. 10.2.3. ಇಲ್ಲಿ ಮೊದಲನೇ 10 ಎಂಬುದು "ಆಭರಣಗಳು, ವೇಶ ಭೂಷಣಗಳು" ಎಂಬುದನ್ನು ಸೂಚಿಸುತ್ತದೆ. ಎರಡನೆಯ 2 ಎಂಬ ಅಂಕೆಯು "ವೇಶ ಭೂಷಣಗಳು" ಎಂಬ ಒಳವರ್ಗವನ್ನು ಸೂಚಿಸುತ್ತದೆ. ಕೊನೆಯ 3 ಎಂಬ ಅಂಕೆಯು "ಮುಂಡಾಸು" ಎಂಬ ವಸ್ತ್ರ ವಿಶೇಷವನ್ನು ನಿರ್ದೇಶಿಸುತ್ತದೆ.

ಇದೇ ರೀತಿ ಯಾವುದೇ ತುಳು ಗಾದೆಯನ್ನು ಈ ದಶಮಾಂಕ ಪದ್ಧತಿಗೆ ಅನುಸಾರವಾಗಿ ವರ್ಗೀಕರಿಸಬಹುದು. ಒಟ್ಟು 1600 ತುಳು ಗಾದೆಗಳನ್ನು ಗಮನಿಸಿಕೊಂಡು ಈ ವರ್ಗೀಕರಣವನ್ನು ಮಾಡಿದ್ದರೂ ಇನ್ನೂ ಸಿಗಬಹುದಾದ ಗಾದೆಗಳಿಗೆ ಈ ವಿಧಾನದಲ್ಲಿ ಸ್ಥಾನವನ್ನು ಕಲ್ಪಿಸಲಾಗಿದೆ.

ರಾಚನಿಕ ವರ್ಗೀಕರಣ :–

ರಚನೆಯ ದೃಷ್ಟಿಯಿಂದ ಇಂಗ್ಲಿಷ್ ಗಾದೆಗಳನ್ನು 8 ವಿಧಗಳನ್ನಾಗಿ ವರ್ಗೀಕರಿಸಲಾಗಿದೆ. ಈ ರಾಚನಿಕ ವರ್ಗೀಕರಣವು ತುಳು ಗಾದೆಗಳ ಮಟ್ಟಿಗಂತೂ ಅಷ್ಟೊಂದು ಸಮರ್ಪಕವಾಗಿ ಹೊಂದಿಕೊಳ್ಳುವುದಿಲ್ಲ. ದಶಮಾಂಕ ಪದ್ಧತಿಯಷ್ಟು ವ್ಯಾಪಕವಾಗಿ, ಸಮರ್ಪಕವಾಗಿ, ಸಂಸ್ಕೃತಿಯ ಅಧ್ಯಯನಕ್ಕೆ ಅನುಕೂಲವಾಗಿ ಈ ವಿಧಾನ ಇಲ್ಲ. ಆದರೂ ಆ ಮಾದರಿಯಲ್ಲಿ, ಅಂದರೆ ರಚನೆಯ ದೃಷ್ಟಿಯಿಂದ ತುಳು ಗಾದೆಗಳನ್ನು ಹೀಗೆ ವಿಂಗಡಿಸಬಹುದು :

1. ಸಂಪೂರ್ಣ ವಾಕ್ಯಗಳಿರುವ ಜನಪದ ಗಾದೆ :

ಉದಾ. : 1. "ಅಪ್ಪೆ ಗೆಲ್ಲ್ ಗೆಲ್ಲ್ ಪೋನಗ, ಮಗಳ್ ಇರೆ ಇರೆ ಪೋಪಳ್."
(ತಾಯಿ ಗೆಲ್ಲು ಗೆಲ್ಲಿಗೆ ಹೋಗುವಾಗ ಮಗಳು ಎಲೆ ಎಲೆಗೆ ಹೋಗುತ್ತಾಳೆ.)

2. "ಕಾರ್ಯೊ ಆವೊಡಾಂಡ ಕಕ್ಕೆದ ಕಾರ್‌ನಲ ಪತ್ತೊಡು."
(ಕಾರ್ಯ ಆಗಬೇಕಿದ್ದರೆ ಕಾಗೆಯ ಕಾಲನ್ನೂ ಹಿಡಿಯಬೇಕು.)

2. ಸಂಪೂರ್ಣ ವಾಕ್ಯದ ರೂಪದಲ್ಲಿರುವ, ಕಲಿತವರ ಗಾದೆ :

ಉದಾ. : 1. "ಅಲ್ಪಗ್ ಐಶ್ವರ್ಯೊ ಬತ್ತ್‌ದ್ ಅರ್ಧರಾತ್ರೆಡ್ ಕೊಡೆ ಪತ್ತ್‌ಬೆ."
(ಅಲ್ಪನಿಗೆ ಐಶ್ವರ್ಯ ಬಂದರೆ ಅರ್ಧರಾತ್ರಿಯಲ್ಲಿ ಕೊಡೆ ಹಿಡಿಯುತ್ತಾನೆ.)

2. "ಉಣ್ಪೆರೆ ತೆರಿನಾಯಗ್ ರೋಗ ಇದ್ದಿ, ಪಾತೆರಿಯೆರೆ ತೆರಿನಾಯಗ್ ಲಡಾಯಿ ಇದ್ದಿ."
(ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜಗಳವಿಲ್ಲ.)

3. ಪ್ರಾಸಬದ್ಧ ಗಾದೆ :

ಉದಾ. : 1. "ಬೇಲೆ ಕಂಡುಗು ಬಾಲೆದಡ್ಡ."
(ಕೆಲಸಕಳ್ಳಿಗೆ ಮಗುವಿನ ನೆಪ.)

2. "ಅರಿ ಪಾಡ್ನಗ ಇಪ್ಪಯೆ, ಅಡ್ಯೆ ಮಲ್ಪುನಗ ತಪ್ಪಯೆ."
(ಅಕ್ಕಿ ಹಾಕುವಾಗ ಇರಲಾರ, ತಿಂಡಿ ಮಾಡುವಾಗ ತಪ್ಪಲಾರ.)

4. ಕ್ರಿಯಾಪದವನ್ನು ಒಳಗೊಂಡ, ಆದರೆ ಸಂಪೂರ್ಣ ವಾಕ್ಯವಲ್ಲದ ಗಾದೆ :

ಉದಾ. : 1. "ಗ್ರಾಚೊರೊ ಬತ್ತ್ಂಡ ತುತ್ತ್‌ನ ಕುಂಟು ಪಗೆ."
(ಗ್ರಹಚಾರ ಬಂದರೆ ಉಟ್ಟ ಬಟ್ಟೆಯೇ ಹಗೆ.)

2. "ಎಕ್ಕ್‌ನಾತೆ ಕೈ ಪಾಡೊಡು."
(ಎಟುಕಿದಷ್ಟೇ ಕೈಚಾಚಬೇಕು.)

5. ಕ್ರಿಯಾಪದವಿಲ್ಲದ ಗಾದೆ :

ಉದಾ. : 1. "ಕುರುಂಡೆರೆಡ್ ಕೋಸುಗಣ್ಣಿ."
(ಕುರುಂಡರಲ್ಲಿ ಮೆಳ್ಳೆಗಣ್ಣ.)

2. "ಅಂಬಿಗ್ ಬಜಂಟ್ ಸಾಕ್ಷಿ"
(ಸೆಗಣಿಗೆ ಬೆರಣಿ ಸಾಕ್ಷಿ.)

6. ಹೋಲಿಕೆ ಮತ್ತು ಉಪಮೆಗಳಿಂದ ಕೂಡಿದ ಗಾದೆ :

ಉದಾ. : 1. "ಒಂತೆ ಕಜ್ಪುಗ್ ಉಪ್ಪು ಜಾಸ್ತಿ, ದಾಲ ದಾಂತಿನಾಯಗ್ ಗಾಡೊ ಜಾಸ್ತಿ."
(ಸ್ವಲ್ಪ ಪಲ್ಯಕ್ಕೆ ಉಪ್ಪು ಜಾಸ್ತಿ, ಏನೂ ಇಲ್ಲದವನಿಗೆ ಅಹಂಕಾರ ಜಾಸ್ತಿ.)

2. "ಒಟ್ಟೆ ಚಿಪ್ಪಿಡ್ ನೀರ್ ಕೊಂಡೋಯಿಲೆಕೊ."
(ತೂತುಳ್ಳ ಗೆರಟೆಯಲ್ಲಿ ನೀರು ಕೊಂಡುಹೋದ ಹಾಗೆ.)

7. ಉದ್ಧರಣ ವಾಕ್ಯವನ್ನು ಒಳಗೊಂಡ ಗಾದೆ :

ಉದಾ. : 1. "ಅಡ್ಪನ ಮಂಗಳೇ ?"—"ಎಪೊಂದುಲ್ಲೆ"
("ಮದುವೆಯಾಗುತ್ತೀಯಾ ಮಂಗಳೇ ?" "ಯಾವಾಗ ಎಂದು ಕಾಯುತ್ತಿದ್ದೇನೆ.")

2. "ಇಟ್ಟೆಲ್‌ಗ್ ಪೋಪಿ ಸಾದಿ ಒಳೆ ?" ಇಂದ್ ಕೇಂಡ್‌ನ, "ಏನ್ ಕಾಳಾನ್‌ಲ ಕೊರಯೆ, ಬೊಳ್ಳಾನ್‌ಲ ಕೊರಯೆ" ಇಂದ್ ಪಂಡಿಲೆಕೊ.

("ವಿಟ್ಲಕ್ಕೆ ಹೋಗುವ ದಾರಿ ಯಾವುದು ?" ಎಂದು ಕೇಳಿದರೆ, ನಾನು "ಕಾಳನನ್ನೂ ಕೊಡುವುದಿಲ್ಲ, ಬೊಳ್ಳನನ್ನೂ ಕೊಡುವುದಿಲ್ಲ" ಎಂದು ಹೇಳಿದಂತೆ.)

8. ಆಧುನಿಕ ವಿಚಾರವನ್ನೊಳಗೊಂಡ ಹಾಸ್ಯಾತ್ಮಕ ಗಾದೆ :

ಉದಾ. : 1. "ಪಾಡುನೆ ಪರ್ದತ್ತಿಗ್ ಪರು, ಪಾತೆರುನೆ ವಿವಾನೊ ಮಲ್ಪುನ ಸುದ್ದಿ."
(ಕೆಲಸವಾದರೋ ಹಲ್ಕತ್ತಿಯ ಹಲ್ಲನ್ನು ಸರಿಮಾಡುವುದು ; ಮಾತಾಡುವುದೋ–ವಿವಾಹ ಮಾಡುವ ಸುದ್ದಿ.)

2. "ಕಪ್ಪಲ್ ದಿಂಜಯೆರೆ ಪೋಯಿನಾಯೆ ಬತ್ತ್‌ದ್, ಬಂಜಿದಿಂಜಯೆರೆ ಪೋಯಿನಾಯೆ ಬತ್ತ್‌ಜ್ಜಿ."
(ಹಡಗು ತುಂಬಿಸಲು ಹೋದವನು ಬಂದಿದ್ದಾನೆ, ಹೊಟ್ಟೆ ತುಂಬಿಸಲು ಹೋದವನು ಬಂದಿಲ್ಲ.)

ಘಟನೆಯು ಹಿನ್ನೆಲೆಯುಳ್ಳ ಗಾದೆಗಳು :

(V– 'ತುಳು ಗಾದೆಗಳು' : ಸಂ.ಬಿ.ಎ. ವಿವೇಕ ರೈ, ಪಲಚಂವಿ ಪ್ರಕಾಶನ, ಮಂಗಳೂರು, 1971. (ಈ ಸಂಕಲನದ ಗಾದೆಗಳ ಸಂಖ್ಯೆಗಳನ್ನು ಮುಂದೆ ಕೊಡಲಾಗಿದೆ.)

1) V-5. ಅಜ್ಜಿ ಸಯ್ತ್‌ನಲ ಪುಜು ತಿಕ್ಕ್‌ನಲ ಸಮೋ ಸಮೋ.
(ಅಜ್ಜಿ ಸತ್ತದ್ದೂ ಪುಂಸ ಸಿಕ್ಕಿದ್ದೂ ಸರಿಯಾಯಿತು.)

ಒಂದೂರಿನಲ್ಲಿ ಒಬ್ಬಳು ಅಜ್ಜಿ ಇದ್ದಳು. ಆಕೆಗೆ ಪುಂಸುವಿನ ಮಾಂಸವೆಂದರೆ ಪಂಚಪ್ರಾಣ. ಒಂದು ದಿನ ಆಕೆ ತೀರಿಹೋದಳು. ಆಗಲೇ ಒಂದು ಪುಂಸುವೂ ಆ ಮನೆಯವರಿಗೆ ಸಿಕ್ಕಿತು. ಆದರೆ ಅದರ ಮಾಂಸವನ್ನು ಸವಿಯುವ ಭಾಗ್ಯ ಆ ಮುದುಕಿಯ ಪಾಲಿಗಿರಲಿಲ್ಲ.

2) V-125. ಎಂಕು ಪಣಂಬೂರ್‌ಗೆ ಪೋಯಿಲೆಕೊ.
(ಎಂಕು ಪಣಂಬೂರಿಗೆ ಹೋದ ಹಾಗೆ.)

ಒಂದು ಮನೆಯಲ್ಲಿ 'ಎಂಕು' ಎಂಬ ಕೆಲಸದವನಿದ್ದ. ಒಂದು ದಿನ ಆ ಮನೆಯ ಒಡೆಯನು ತನ್ನ ಪತ್ನಿಯಲ್ಲಿ 'ನಾಳೆ ಎಂಕುವನ್ನು ಪಣಂಬೂರಿಗೆ ಕಳುಹಿಸಬೇಕು' ಎಂದು ಹೇಳಿದ. ಈ ಮಾತನ್ನು ಕೇಳಿಸಿಕೊಂಡ ಎಂಕು ಮರುದಿನ ಮುಂಜಾನೆಯೆ ಹೊತ್ತಿಗೆ ಯಾರಿಗೂ ಹೇಳದೆ ಪಣಂಬೂರಿಗೆ ಹೋಗಿ ಹಾಗೆಯೇ ಹಿಂತಿರುಗಿದ. ಬಂದವನೇ ಒಡೆಯನಲ್ಲಿ 'ನಾನು ಪಣಂಬೂರಿಗೆ ಹೋಗಿ ಬಂದೆ' ಎಂದ. ಒಡೆಯನಿಗೆ ವಿಷಯ ಅರ್ಥವಾಯಿತು. ಅಂದಿನಿಂದ ನಿಷ್ಪ್ರಯೋಜಕವಾಗಿ ಒಂದು ಕಡೆ ಹೋಗಿ ಬರುವುದಕ್ಕೆ 'ಎಂಕು ಪಣಂಬೂರಿಗೆ ಹೋದ ಹಾಗೆ' ಎಂಬ ಗಾದೆ ಮಾತು ಬಳಕೆಯಾಯಿತು. 'ಜಿರಳೆ ಬೊಂಬಾಯಿಗೆ ಹೋದ ಹಾಗೆ' ಎಂಬ ಮಾತಿನಂತೆಯೇ ಈ ಗಾದೆ ಕೂಡಾ.

3) V-173. ಓಡಾರಿ ಕುಡು ಕೊರಿಲೆಕೊ.
(ಕುಂಬಾರ ಹುರುಳಿ ಕೊಟ್ಟ ಹಾಗೆ.)

ಒಬ್ಬ ಕುಂಬಾರ ಒಂದು ಕುದುರೆ ಕೊಂಡುಕೊಂಡ. ಅದಕ್ಕೆ ಚೆನ್ನಾಗಿ ಹುರುಳಿ ತಿನ್ನಿಸಿದರೆ ಅದು ಪುಷ್ಟಿಯಾಗಿ ಬೆಳೆಯುತ್ತದೆಂದು ಬಲ್ಲವರು ತಿಳಿಸಿದರು. ಆತ ಒಂದು ಗೋಣಿ ಹುರುಳಿ ತಂದು, ಒಮ್ಮೆಗೆ ಅದನ್ನು ಆ ಕುದುರೆಗೆ ತಿನ್ನಿಸಿದ. ಅದು ಅಜೀರ್ಣದಿಂದ ಸತ್ತುಹೋಯಿತು. 'ಒಳ್ಳೆಯ ಆಹಾರವೆಂದು ಯಾವುದನ್ನೂ ಮಿತಿಮೀರಿ ತಿನ್ನಬಾರದು' ಎಂಬ ಅರ್ಥವನ್ನು ಈ ಗಾದೆ ಧ್ವನಿಸುತ್ತದೆ.

4) V-224. ಕಿಲೇರಿ ತುಚ್ಚ್‌ದ್ ಮದಿಮ್ಮಾಳ್ ಸಯ್ತ್‌ಲೆಕೊ.
(ಲಕ್ಷ್ಮೀ ಚೇಳು ಕಡಿದು ಮದುಮಗಳು ಸತ್ತಂತೆ.)

ಮದುಮಗಳೊಬ್ಬಳು ಮದುವೆಗೆ ಕೆಲವು ದಿನ ಮುಂಚಿತವಾಗಿ ತೀರಿಹೋದಳು. ಅದರ ಕಾರಣವನ್ನು ಕೇಳಿದಾಗ, ಕೆಲವರು 'ಆಕೆ ಲಕ್ಷ್ಮೀ ಚೇಳು ಕಚ್ಚಿ ತೀರಿಹೋದಳು' ಎಂದು ಹೇಳಿದರು. ಆದರೆ ನಿಜವಾಗಿ ಆಕೆ ಆ ಮದುವೆಯಲ್ಲಿ ಇಚ್ಛೆಯಿಲ್ಲದೆ ಆತ್ಮಹತ್ಯೆ ಮಾಡಿಕೊಂಡಿದ್ದಳು. ಲಕ್ಷ್ಮೀ ಚೇಳು ಕಚ್ಚಿ ಸಾಯುವುದು ನಂಬುವ ಮಾತಲ್ಲ. ಸುಳ್ಳು ಹೇಳುವುದಾದರೂ ನಂಬುವಂತಹ ಸುಳ್ಳು ಹೇಳಬೇಕು.

5) V-413. ಪಂಡ್‌ಂಡೋ ಅಪ್ಪೆನ್ ಅಮ್ಮೆ ಕೆರ್ಪೆ.
ಪಂಡ್‌ಜೋ ಅಮ್ಮೆ ನಾಯಿದ ಮಾಸೊ ತಿನ್ಪೆ.

(ಹೇಳಿದರೆ ತಂದೆಯು ತಾಯಿಯನ್ನು ಕೊಲ್ಲುತ್ತಾನೆ. ಹೇಳದಿದ್ದರೆ ತಂದೆ ನಾಯಿಯ ಮಾಂಸ ತಿನ್ನುತ್ತಾನೆ.)

ತಂದೆ ಕೋಪಿಷ್ಠ, ಮಾಂಸ ಪ್ರಿಯ. ಆತ ಬೇಟೆಯಿಂದ ತಂದುಕೊಟ್ಟ ಮಾಂಸವನ್ನು ತಾಯಿ ಅಡುಗೆ ಮಾಡಿ ಇಡುತ್ತಾಳೆ. ಅದನ್ನು ನಾಯಿ ತಿಂದು ಮುಗಿಸುತ್ತದೆ. ಆಕೆ ಗಂಡನಿಗೆ ಹೆದರಿ ಆ ನಾಯಿಯನ್ನು ಕೊಂದು, ಮಾಂಸ ಮಾಡಿ, ಅಡುಗೆ ಮಾಡುತ್ತಾಳೆ. ಇದನ್ನು ಮಕ್ಕಳು ನೋಡಿದರು. ಆಗ ಅವರು ಈ ಗಾದೆಯ ಮಾತನ್ನು ಹೇಳುತ್ತಾರೆ. ಈ ಮಕ್ಕಳ ಧರ್ಮಸಂಕಟವನ್ನು ಈ ಗಾದೆ ಪ್ರತಿಧ್ವನಿಸುತ್ತದೆ.

6) V-600. ಮಡ್ಯೋಳನ್ ಮುದಲೆ ಪತ್ತಿಲೆಕೊ.
(ಮಡಿವಾಳನನ್ನು ಮೊಸಳೆ ಹಿಡಿದ ಹಾಗೆ.)

ಒಂದೂರಿನಲ್ಲಿ ಒಬ್ಬ ಅಗಸನಿದ್ದ. ಒಂದು ದಿನ ಆತ ಬಟ್ಟೆ ಒಗೆಯುತ್ತಿದ್ದಾಗ ತಮಾಷೆಗಾಗಿ ಸುಮ್ಮನೆ 'ಮೊಸಳೆ ಬಂತು' ಎಂದು ಕೂಗಿಕೊಂಡ. ಹತ್ತಿರವಿದ್ದವರೆಲ್ಲಾ ಆಯುಧಗಳ ಸಮೇತ ಓಡಿ ಬಂದರು. ಬಂದಾಗ ಅಲ್ಲಿ ಏನೂ ಇರಲಿಲ್ಲ. ಅವರು ಅಗಸನನ್ನು ಶಪಿಸುತ್ತಾ ಹಿಂದಿರುಗಿದರು. ಸ್ವಲ್ಪ ಹೊತ್ತಿನ ಬಳಿಕ ನಿಜವಾದ ಮೊಸಳೆಯೇ ಬಂದು ಅಗಸನ ಕಾಲನ್ನು ಹಿಡಿಯಿತು. ಆತ 'ಮೊಸಳೆ ಬಂತು' ಎಂದು ಕೂಗಿಕೊಂಡ. ಈತ ಹಿಂದಿನಂತೆಯೇ ತಮಾಷೆಗಾಗಿ ಕೂಗಿಕೊಳ್ಳುತ್ತಿದ್ದಾನೆ ಎಂದು ಭಾವಿಸಿ, ಯಾರೂ ಆತನ ಸಹಾಯಕ್ಕೆ ಹೋಗಲಿಲ್ಲ. ಅಗಸನನ್ನು ಮೊಸಳೆ ತಿಂದುಬಿಟ್ಟಿತು.

7) V-627. ಮಾಮಿಗ್ ಮರ್ಮಲ್ ಮಂಗೈಗ್ (ಮಾತೆಗ್) ಕೊನತ್ತಿಲೆಕೊ.
(ಸೊಸೆ ಅತ್ತೆಗೆ ಎರಡನೇ ಬಾರಿ ಬಡಿಸಲು ಬಂದ ಹಾಗೆ.)

ಮಿತವಾಗಿ ಅಕ್ಕಿಯನ್ನು ಉಪಯೋಗಿಸುವ ಮನೆಯಲ್ಲಿ ನಡೆದ ಘಟನೆ. ಅತ್ತೆ ಸೊಸೆಯರಿಬ್ಬರೇ ಮನೆಯಲ್ಲಿರುವ ಹೆಂಗಸರು. ಸೊಸೆ ಇಲ್ಲದ ಸಮಯ ನೋಡಿ ಅತ್ತೆಯು ಅನ್ನವನ್ನು ಕೊಂಡುಹೋಗಿ ಒಂದು ಕತ್ತಲೆಯ ಮೂಲೆಯಲ್ಲಿ ಉಣ್ಣುತ್ತಿರುತ್ತಾಳೆ. ಅದೇ ವೇಳೆ ಸೊಸೆಯು ಬಂದು ಅತ್ತೆ ಇಲ್ಲವೆಂದು ಗ್ರಹಿಸಿ, ಅನ್ನವನ್ನು ತೆಗೆದುಕೊಂಡು ಅತ್ತೆಯಿದ್ದ ಕತ್ತಲೆಯ ಮೂಲೆಗೆ ಬರುತ್ತಾಳೆ. ಅಲ್ಲಿ ಅತ್ತೆಯನ್ನು ಕಂಡಾಗ, ತನ್ನ ಕಾರ್ಯವನ್ನು ಸಮರ್ಥಿಸಿಕೊಳ್ಳುವುದಕ್ಕಾಗಿ ತಾನು ಅತ್ತೆಗೆ 'ಎರಡನೇ ಬಾರಿ ಬಡಿಸಲು ಅನ್ನವನ್ನು ತಂದಿದ್ದೇನೆ' ಎನ್ನುತ್ತಾಳೆ. ತಾನು ಕಳ್ಳತನ ಮಾಡಿದ್ದರೂ, ಕಳ್ಳತನವನ್ನು ಪತ್ತೆ ಹಚ್ಚಿದ ಸಮಯಸ್ಫೂರ್ತಿಯನ್ನು ಜಾಣ್ಮೆಯಿಂದ ಸಾಧಿಸುತ್ತಾಳೆ.

8) V-690. ಸೂಜಿಗ್ ದಂಡ್ ಪಾಡಿಲೆಕೊ.
(ಸೂಜಿಗೆ ದಂಡ ಹಾಕಿದ ಹಾಗೆ.)

ಒಂದು ಮನೆಯಲ್ಲಿದ್ದ ಇಬ್ಬರು ಹೆಂಗಸರು ಪ್ರತಿಯೊಂದು ಕೆಲಸವನ್ನೂ ಪಾಲು ಮಾಡಿ ಮುಗಿಸುತ್ತಿದ್ದರು. ಒಂದು ಸೂಜಿಯನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸಬೇಕಾಯಿತು. ಆಗ ಅವರು ಅದನ್ನು ಒಂದು ದೊಡ್ಡ ಕೋಲಿನ ಮಧ್ಯೆ ಕಟ್ಟಿ, ಎರಡು ತುದಿಗಳಿಂದ ಇಬ್ಬರು ಹಿಡಿದುಕೊಂಡು ಸಾಗಿದರು.

## 3. ತುಳು ಗಾದೆಗಳಲ್ಲಿ ವ್ಯಕ್ತವಾಗುವ ತುಳುನಾಡಿನ ಸಂಸ್ಕೃತಿ :

ಯಾವುದೇ ದೇಶದ ಯಾವುದೇ ಭಾಷೆಯ ಗಾದೆಗಳಂತೆಯೇ ತುಳು ಗಾದೆಗಳು ಸಾರ್ವತ್ರಿಕ ಸಂಗತಿಗಳನ್ನು ಹೇಳುವಂತೆಯೇ ಪ್ರಾದೇಶಿಕ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ. ತುಳುನಾಡಿನ ಸಸ್ಯಗಳು, ಅವುಗಳ ಉತ್ಪನ್ನಗಳು, ಪ್ರಾಣಿಗಳು, ಪಕ್ಷಿಗಳು, ಕೀಟಗಳು, ಜಾತಿ ಕಸುಬುಗಳು, ವೃತ್ತಿಕಾರರು, ಅಡುಗೆಯ ವಿಧಾನ, ಗೃಹೋಪಯೋಗಿ ವಸ್ತುಗಳು, ವೇಷ ಭೂಷಣಗಳು, ಆಭರಣಗಳು, ಸಂಚಾರ ಸಾಮಗ್ರಿಗಳು, ಸಂಪ್ರದಾಯ ನಂಬಿಕೆಗಳು, ಆಚರಣೆಗಳು, ಕೌಟುಂಬಿಕ ಸ್ವರೂಪ–ಈ ರೀತಿ ಹತ್ತು ಹಲವು ಸಂಸ್ಕೃತಿಯ ಮುಖಗಳ ಚಿತ್ರಣವನ್ನು ತುಳು ಗಾದೆಗಳಲ್ಲಿ ಕಾಣಬಹುದು. ಈ ಸಂಸ್ಕೃತಿಯ ಅನೇಕ ರೂಪಗಳು ಈ ಪ್ರದೇಶಕ್ಕೆ ವಿಶಿಷ್ಟವಾಗಿರುವುದನ್ನು ಗಮನಿಸಬಹುದು.

### ಕಸುಬುಗಳು :

ತುಳುನಾಡಿನಲ್ಲಿ ಅನೇಕ ಕಸುಬುಗಳನ್ನು ಅನುಸರಿಸುವ ವಿಭಿನ್ನ ಜಾತಿ ಪಂಗಡಗಳಿಗೆ ಸೇರಿದ ಜನಗಳನ್ನು ಕಾಣಬಹುದು. ಮೂಲತಃ ಕಸುಬುಗಳಿಗೂ, ಜಾತಿಗಳಿಗೂ ನೇರ ಸಂಬಂಧವಿದ್ದರೂ ಈಗ ಅಂತಹ ರೀತಿ ಸಡಿಲವಾಗಿದೆ. ಧಾರ್ಮಿಕ ಕಾರ್ಯಗಳಲ್ಲಿ ಬ್ರಾಹ್ಮಣರು, ಬೇಸಾಯದಲ್ಲಿ ಬಂಟರು ಮತ್ತು ಜೈನರು, ವ್ಯಾಪಾರದಲ್ಲಿ ಕೊಂಕಣಸ್ಥರು ಮತ್ತು ಬ್ಯಾರಿಗಳು, ಮೂರ್ತೆಕೆಲಸದಲ್ಲಿ ಬಿಲ್ಲವರು, ಚಿನ್ನದ ಕೆಲಸದ ಅಕ್ಕಸಾಲಿಗರು, ಕಬ್ಬಿಣದ ಕೆಲಸದ ಕಮ್ಮಾರರು, ಮರದ ಕೆಲಸದ ಬಡಗಿಗಳು, ಮೀನುಗಾರಿಕೆಯ ಮರಕಲರು—ಈ ರೀತಿ ಒಂದೊಂದು ಜಾತಿಗೆ ಒಂದೊಂದು ವಿಶಿಷ್ಟ ಕಸುಬು ಎಂದು ಸಾಂಪ್ರದಾಯಿಕವಾಗಿ ಆರೋಪಿಸಿರುವುದನ್ನು ತುಳು ಗಾದೆಗಳಲ್ಲಿಯೂ ಕಾಣಬಹುದು.

#### 1. ಬೇಸಾಯ :

ತುಳುನಾಡಿನ ಪ್ರಧಾನ ಕಸಬು ಬೇಸಾಯ, ಅಂದರೆ ಭತ್ತದ ಕೃಷಿ. ತುಳು ಗಾದೆಗಳಲ್ಲಿ ಇಲ್ಲಿನ ಕೃಷಿಕರ ವ್ಯವಸಾಯ, ವ್ಯವಹಾರ, ಸುಖ-ದುಃಖಗಳು ಎದ್ದು ತೋರುತ್ತವೆ. ಬೇಸಾಯಕ್ಕೆ ಸಂಬಂಧಿಸಿದ ಕೆಲವು ಗಾದೆಗಳು :

1. ಉಡಲ್‌ಡ್ ಪುಟ್ಯೊಡು ಬುದ್ಧಿ, ಬೆನ್ನಿಡ್ ಪುಟ್ಯೊಡು ಒರಕ್ಯೊ.
   (ಒಡಲಿನಲ್ಲಿ ಹುಟ್ಟಬೇಕು ಬುದ್ಧಿ, ಭೂಮಿಯಲ್ಲಿ ಹುಟ್ಟಬೇಕು ಒರತೆ.)

ಈ ಗಾದೆಯಲ್ಲಿ ಬೇಸಾಯದ ವಿಚಾರವನ್ನು ಪ್ರಾಸಂಗಿಕವಾಗಿ ಪ್ರಸ್ತಾವಿಸಲಾಗಿದೆ. ಭೂಮಿಯಲ್ಲಿ ಒರತೆಯ ನೀರು ಸಹಜವಾಗಿರಬೇಕು. ಹಾಗಿದ್ದರೆ ಮಾತ್ರ ಆ ನೀರು ಶಾಶ್ವತವಾಗಿರುತ್ತದೆ. ಅದನ್ನು ನಂಬಿಕೊಂಡು ಬೇಸಾಯ ಮಾಡಬಹುದು ಎನ್ನುವ ಅರ್ಥ ಕಾಣಿಸುತ್ತದೆ.

2. ಕೃಷಿಟ್ಟ್ ಸುರು ಕಷ್ಟೊ, ಸಂಸಾರ ನಡುಕಷ್ಟೊ, ವ್ಯಾಪಾರ ಕಡೆಕಷ್ಟೊ.
   (ಕೃಷಿಯಲ್ಲಿ ಪ್ರಾರಂಭದಲ್ಲಿ ಕಷ್ಟ, ಸಂಸಾರದಲ್ಲಿ ಮಧ್ಯದಲ್ಲಿ ಕಷ್ಟ, ವ್ಯಾಪಾರದಲ್ಲಿ ಕೊನೆಯಲ್ಲಿ ಕಷ್ಟ.)

ಕೃಷಿಯನ್ನು ಆರಂಭಿಸುವಾಗ ಅದಕ್ಕೆ ಬೇಕಾದ ಬೀಜ, ಗೊಬ್ಬರ, ಉಳುವುದು, ನೇಜಿ ನೆಡುವುದು ಇತ್ಯಾದಿ ಖರ್ಚಿನ ಸಂಗತಿಗಳೇ ಇರುತ್ತವೆ. ಅಂದರೆ ಅದು ಕೃಷಿಯಲ್ಲಿ ಕಷ್ಟದ ಸಮಯ. ಆದರೆ ಬೆಳೆ ಬಂದ

ಮೇಲೆ, ಅಂದರೆ ಕೃಷಿಯ ಕೊನೆಯಲ್ಲಿ ಅದರಿಂದ ಬರುವ ಉತ್ಪತ್ತಿಯಿಂದಾಗಿ ಸಂತೋಷವಿರುತ್ತದೆ.

3. ಸ್ವಾತಿಡ್ ಬಿತ್ತ್ ಬೂರುಂಡ ಶಾಶ್ವತೊ.
(ಸ್ವಾತಿಯಲ್ಲಿ ಬೀಜ ಹಾಕಿದರೆ ಖಂಡಿತವಾಗಿ ಮೊಳಕೆ ಬರುತ್ತದೆ.)

ಸ್ವಾತಿ ನಕ್ಷತ್ರದಲ್ಲಿ ಬೀಳುವ ಮಳೆ ಬೀಜ ಮೊಳಕೆ ಬರಲು ಬಹಳ ಅನುಕೂಲ. ಆದ್ದರಿಂದ ತುಳು ನಾಡಿನಲ್ಲಿ ಹೆಚ್ಚಾಗಿ ಸ್ವಾತಿ ನಕ್ಷತ್ರದಲ್ಲಿಯೇ ಬೀಜ ಹಾಕುತ್ತಾರೆ.

4. ಅಡಿನೀರ್‌ದ ಕೆಯಿ ಎಡ್ಡೆ, ಪೊಡಿ ನೇಜಿದ ಬೈ ಎಡ್ಡೆ.
(ಅಡಿ ನೀರಿನ ಪೈರು ಒಳ್ಳೆಯದು, ಹುಡಿ ನೇಜಿಯ ಬೈಹುಲ್ಲು ಒಳ್ಳೆಯದು.)

ಭತ್ತದ ಪೈರಿನ ಕೆಳಗೆ ಸಹಜವಾಗಿ ನೀರು ನಿಂತಿದ್ದರೆ ಇದರಿಂದ ಒಳ್ಳೆಯ ಫಸಲು ಬರುತ್ತದೆ. ಹರಿದು ಬಿಡುವ ನೀರಿಗಿಂತ ಈ ಅಡಿನೀರು ಪೈರಿಗೆ ಹೆಚ್ಚು ಒಳ್ಳೆಯದು. ನೀರು ಇಲ್ಲದೆ ಬರೇ ಮಣ್ಣಿನ ತೇವದಿಂದ ಬೆಳೆಯುವ ನೇಜ (ಭತ್ತದ ಸಸಿ) ಯನ್ನು 'ಪೊಡಿ ನೇಜಿ' ಎನ್ನುತ್ತಾರೆ. ಇದರಲ್ಲಿ ಭತ್ತದ ಫಸಲು ಸ್ವಲ್ಪ ಕಮ್ಮಿ. ಆದರೆ ಇದರ ಬೈಹುಲ್ಲು ಹೆಚ್ಚು ಗಟ್ಟಿಯಾಗಿ ಹಾಳಾಗದೆ ಉಳಿಯುತ್ತದೆ.

5. ಆಳೆನೀರ್‌ದಾಂತಿ ಒಣಸ್‌ಲ, ತಲೆನೀರ್‌ದಾಂತಿ ಬೊಟ್ಟುಲ ಒಂಜೇ.
(ಮಜ್ಜಿಗೆ ನೀರು ಇಲ್ಲದ ಊಟವು, ತಲೆನೀರು ಇಲ್ಲದ ಬೆಟ್ಟು ಗದ್ದೆಯೂ ಸಮಾನ.)

ಊಟಕ್ಕೆ ಹೇಗೆ ಮಜ್ಜಿಗೆ ನೀರು ರುಚಿಯನ್ನು, ಸ್ವಾದವನ್ನು ಕೊಡುತ್ತದೆಯೋ ಹಾಗೆಯೇ ಬೆಟ್ಟು ಗದ್ದೆಗೆ 'ತಲೆನೀರು' ಅಗತ್ಯ. 'ತಲೆನೀರು' ಅಂದರೆ ಎತ್ತರದಲ್ಲಿ ಇದ್ದು ಬೆಟ್ಟುಗದ್ದೆಯ ಕಡೆಗೆ ಕೆಳಗಡೆ ಹರಿದುಕೊಂಡು ಬರುವ ನೀರು. ಇಂತಹ ತಲೆನೀರಿನ ಸಹಾಯವಿದ್ದರೆ ಮಾತ್ರ ಬೆಟ್ಟುಗದ್ದೆಯಲ್ಲಿ ಒಂದು ಬೆಳೆಯನ್ನಾದರೂ ಸರಿಯಾಗಿ ಮಾಡಬಹುದು. ಇಲ್ಲದಿದ್ದರೆ ಮಳೆ ನೀರನ್ನೇ ಆಧರಿಸಿಕೊಂಡು ಅದು ಇಲ್ಲದಿರುವಾಗ ಪೈರು ಹಾಳಾಗಬಹುದು.

6. ಅರ್ದೆಡ ಅಡರ್‌ಡ್ ಗೀರ್‌ದ್ ಬಿತ್ತ್‌ಂಡಲಾ ಬುಳೆವುಗೆ, ಮೃಗಶಿರೊಡ್ ಮುರ್ಕದ್ ಅಜ್ಜೊಕುಲ ಬಿತ್ತ್‌ಂಡಲಾ ಬುಳೆ ಬರುಂಗೆ.
(ಆರ್ದ್ರೆಯಲ್ಲಿ ಕೋಲಿನಲ್ಲಿ ಗೀರಿ ಬೀಜ ಹಾಕಿದರೂ ಮೊಳಕೆ ಬಂದೀತು, ಮೃಗಶಿರದಲ್ಲಿ ಮುಳುಗಿ ಬೀಜಹಾಕಿದರೂ ಬೆಳೆ ಬಂದೀತು.)

ಆರ್ದ್ರೆ ಮತ್ತು ಮೃಗಶಿರ ನಕ್ಷತ್ರಗಳಲ್ಲಿ ಯಾವ ರೀತಿ ಬೀಜ ಹಾಕಿದರೂ ಆಗಿನ ಹವಾಮಾನದಿಂದಾಗಿ ಬೆಳೆ ಬರುತ್ತದೆ. ಈ ಕಾಲದಲ್ಲಿ ಬೀಜ ಹಾಕಲು ಹೆಚ್ಚು ಶ್ರಮ ಅಗತ್ಯವಿಲ್ಲ. ತುಳುನಾಡಿನ ಹವಾಮಾನ, ಮುಖ್ಯವಾಗಿ ಮಳೆ, ಇಲ್ಲಿನ ಬೇಸಾಯಕ್ಕೆ ಹೇಗೆ ಪೋಷಕ ಎಂಬುದನ್ನು ಇಲ್ಲಿ ಕಾಣಬಹುದು.

7. ಎಣೆಲ್ ಸೂಳೆ, ಸುಗ್ಗಿ ಮದಿಮ್ಮಾಳ್, ಕೊಳಕೆ ಪೆದ್‌ಮೆದಿ.
(ಎಣೆಲು ಬೆಳೆ ಸೂಳೆಯಂತೆ, ಸುಗ್ಗಿ ಬೆಳೆ ಮದುಮಗಳಂತೆ, ಕೊಳಕೆ ಬೆಳೆ ಬಾಣಂತಿಯಂತೆ.)

ತುಳುನಾಡಿನ ಭತ್ತದ ಬೇಸಾಯದ ಸ್ವರೂಪವನ್ನು ಈ ಗಾದೆ ಬಹಳ ಸುಂದರವಾಗಿ ತಿಳಿಸುತ್ತದೆ. ತುಳುನಾಡಿನ ಬೈಲು ಗದ್ದೆಗಳಲ್ಲಿ ಅಂದರೆ ನೀರಿನ ಆಸರೆ ಚೆನ್ನಾಗಿರುವ ಗದ್ದೆಗಳಲ್ಲಿ ಮೂರು ಬೆಳೆಗಳನ್ನು

ತೆಗೆಯುತ್ತಾರೆ. ಮೊದಲನೆಯದು ಮಳೆಗಾಲದಲ್ಲಿ ಮಾಡುವ ಬೆಳೆ. ಅದನ್ನು "ಎಣೆಲ್" ಎನ್ನುತ್ತಾರೆ. ಎರಡನೆಯದು ಮಳೆಗಾಲ ಸಂಪೂರ್ಣವಾಗಿ ಮುಗಿಯುತ್ತಲೇ ಮಾಡುವ ಬೆಳೆ. ಅದನ್ನು "ಸುಗ್ಗಿ" ಎನ್ನುತ್ತಾರೆ. ಅನಂತರ ಮಾಡುವ, ಹೆಚ್ಚು ನೀರಿನ ಸವಲತ್ತು ಬೇಕಾದ ಮೂರನೆಯ ಬೆಳೆಯನ್ನು "ಕೊಳಕೆ" ಎನ್ನುತ್ತಾರೆ. ಈ ಕೊಳಕೆ ಬೆಳೆಯು ಸಾಮಾನ್ಯವಾಗಿ ಬೇಸಿಗೆ ಕಾಲದಲ್ಲಿ ಆಗುತ್ತದೆ. ಈ ಮೂರು ಬೆಳೆಗಳನ್ನು ಮೂರು ರೀತಿಯ ಹೆಣ್ಣುಗಳಿಗೆ ಇಲ್ಲಿ ಹೋಲಿಸಲಾಗಿದೆ. ಈ ಹೋಲಿಕೆಗಳ ಅರ್ಥಪೂರ್ಣತೆ ಬೆಳೆಗಳ ಸ್ವರೂಪವನ್ನು ಧ್ವನಿಪೂರ್ಣವಾಗಿ ತಿಳಿಸುತ್ತದೆ. 'ಎಣೆಲ್' ಬೆಳೆಯು ಮಳೆಗಾಲದಲ್ಲಿ ಆಗುವುದರಿಂದ ಅದಕ್ಕೆ ನೀರಿನ ತೊಂದರೆಯೇನೂ ಇಲ್ಲ. ಅದು ಮೊದಲನೇ ಬೆಳೆಯೂ ಹೌದು. ಅದನ್ನು ಸೂಳೆಗೆ ಹೋಲಿಸಲಾಗಿದೆ. ಸೂಳೆ ಹೆಣ್ಣಿನ ಸ್ವಚ್ಛಂದ ಸ್ವಭಾವ, ಯಾರು ಬೇಕಾದರೂ ಅವಳನ್ನು ಸುಲಭವಾಗಿ ಪಡೆಯಬಹುದು. ಹಾಗೆಯೇ ಎಣೆಲ್ ಬೆಳೆಯನ್ನು ಯಾರು ಬೇಕಾದರೂ ಬೆಳೆಸಬಹುದು; ಹೆಚ್ಚು ಖರ್ಚು ಇಲ್ಲ, ಶ್ರಮವೂ ಇಲ್ಲ. ಎರಡನೆಯ ಬೆಳೆ 'ಸುಗ್ಗಿ'ಯು ಸ್ವಲ್ಪ ಮಳೆ ನೀರನ್ನು, ಉಳಿದ ಭಾಗ ಒರತೆಯ ನೀರನ್ನು ಆಧರಿಸಿರುವಂತಹದ್ದು. ಎಣೆಲಿಗಿಂತ ಸ್ವಲ್ಪ ಹೆಚ್ಚು ಪರಿಶ್ರಮದಿಂದ, ಬೇಸಾಯಗಾರನ ಸ್ವಸಾಮರ್ಥ್ಯದಿಂದ ಬೆಳೆಸಬಹುದಾದ ಬೆಳೆ ಸುಗ್ಗಿ. ಅದನ್ನು ಮದುಮಗಳಿಗೆ ಹೋಲಿಸಲಾಗಿದೆ. ಮದುಮಗಳು ಲಾವಣ್ಯ, ಗಾಂಭೀರ್ಯವುಳ್ಳ, ಆದರೆ ಮರ್ಯಾದೆಯ ಎಲ್ಲೆಯನ್ನು ಮೀರದ, ಯಾವನೋ ಒಬ್ಬ ವ್ಯಕ್ತಿಯನ್ನು ಮಾತ್ರ ಕೈ ಹಿಡಿಯುವ ಹೆಣ್ಣು. ಹಾಗೆಯೇ ಸುಗ್ಗಿ ಬೆಳೆಯು ತನ್ನ ಸಮೃದ್ಧಿಯ ಸೌಂದರ್ಯದಿಂದ ಅದನ್ನು ಪಡೆಯುವವನ ಯೋಗ್ಯತೆಯಿಂದ, ಜೊತೆಗೆ ತನ್ನ ಫಸಲಿನಿಂದ ಮನೆಗೆ ಹರ್ಷವನ್ನು ತರುವ ಬೆಳೆ. ಮೂರನೆಯ ಬೆಳೆ 'ಕೊಳಕೆ'ಯು ಮಳೆ ನೀರಿನ ಯಾವುದೇ ಸಹಾಯವಿಲ್ಲದೆ ಬೇಸಿಗೆ ಕಾಲದಲ್ಲಿ ಬೇಸಾಯಗಾರನ ಕಠಿಣ ಪರಿಶ್ರಮದಿಂದ ಆಗುವ ಬೆಳೆ. ಈ ಬೆಳೆಯನ್ನು ದಿನನಿತ್ಯ ಆರೈಕೆ ಮಾಡಬೇಕಾಗುತ್ತದೆ. ಆದ್ದರಿಂದಲೇ ಈ ಬೆಳೆಯನ್ನು ಬಾಣಂತಿಗೆ ಹೋಲಿಸಲಾಗಿದೆ. ಬಾಣಂತಿ ಹೇಗೆ ಕೂತು ತಿನ್ನುತ್ತಾಳೆಯೋ, ಆರಾಮವಾಗಿ ಆರೈಕೆ ಮಾಡಿಸಿಕೊಳ್ಳುತ್ತಾಳೆಯೋ, ತನ್ನ ಮಗುವಿನ ಕಾರಣದಿಂದ ಎಲ್ಲರಿಗೂ ಪ್ರೀತಿಯವಳಾಗಿರುತ್ತಾಳೆಯೋ, ಹಾಗೆಯೇ ಕೊಳಕೆ ಬೆಳೆಯೂ ಹೆಚ್ಚು ಮುತುವರ್ಜಿಯ ಉಸ್ತುವಾರಿಯಿಂದ, ಅದರ ಫಸಲಿನ ಬಗ್ಗೆ ಬೇಸಾಯಗಾರನಿಗೆ ಇರುವ ಅತೀವ ಮಮತೆಯಿಂದ ಸಾಕಷ್ಟು ನೀರು ಗೊಬ್ಬರಗಳನ್ನು ಅರಗಿಸಿಕೊಳ್ಳುತ್ತದೆ.

8. ಕಂಡೆಡ್ ಕಾಯಿಂಡ ಕೊಂಡೆಡ್‌ಲಾ ಮುಂಟ್ಬರಂದ್.
(ಗದ್ದೆಯಲ್ಲಿ ಕಾದರೆ ಕುಂಡ್ತೆಯಲ್ಲಿಯೂ ತುಂಬಲಾರದು.)

ಭತ್ತದ ಪೈರಿಗೆ ನೀರು ಧಾರಾಳ ಬೇಕು. ನೀರು ಕಡಿಮೆಯಾಗಿ ಭತ್ತದ ಸಸಿಯ ಗದ್ದೆ ಒಣಗಿದರೆ ಫಸಲು ಏನೂ ಸಿಗಲಾರದು. ಅದು ಎಷ್ಟು ಕಡಿಮೆಯಾಗಿರಬಹುದು ಎಂದರೆ ಒಂದು ಚಿಕ್ಕ ಅಳತೆಯ ಮಾನವಾದ ಕುಡ್ತೆಯಲ್ಲಿಯೂ ಪೂರ್ಣ ತುಂಬಲಾರದು.

9. ಕಾಡ್ ಬರಿತ್ತ ಕಂಡಲಾ, ತೋಡ್ ಬರಿತ್ತ ಇಲ್‌ಲಾ ಬೊಡ್ಚ.
(ಕಾಡಿನ ಬದಿಯ ಗದ್ದೆಯೂ, ತೋಡಿನ ಬದಿಯ ಮನೆಯೂ ಬೇಡ.)

ತುಳುನಾಡಿನ ಗದ್ದೆಗಳಿಗೆ ಹಿಂದೆ ಇದ್ದ ಅಪಾಯವನ್ನು ಈ ಗಾದೆಯಲ್ಲಿ ಗುರುತಿಸಬಹುದು. ಕಾಡಿನ ಬದಿಯಲ್ಲಿದ್ದ ಭತ್ತದ ಗದ್ದೆಗಳಿಗೆ ಕಾಡುಹಂದಿ, ಕಾಡುಕೋಣ, ಮೊಲ ಇತ್ಯಾದಿ ಕಾಡುಪ್ರಾಣಿಗಳು ಇಳಿದು ಪೈರನ್ನೆಲ್ಲಾ ನಾಶಮಾಡುವುದು ಹಿಂದೆ ಸಾಮಾನ್ಯ ಸಂಗತಿಯಾಗಿತ್ತು. ನೀರಿನ ತೋಡಿನ ಬದಿಯ ಮನೆ ಪ್ರವಾಹ ಬಂದಾಗ ಕೊಚ್ಚಿಹೋಗುವಂತೆ, ಕಾಡಿನ ಬದಿಯ ಗದ್ದೆ ಕಾಡುಪ್ರಾಣಿಗಳಿಂದ ಸಂಪೂರ್ಣ ನಾಶವಾಗಿ ಹೋಗುತ್ತಿದ್ದ ಚಿತ್ರವನ್ನು ಇಲ್ಲಿ ನೋಡಬಹುದು.

10. ಪಾಯಿಸೊಗು ಬೆಲ್ಲ ಪಾಡಿನಾತ್ ಎಡ್ಡೆ, ಕಂಡೊಗು ಗೊಬ್ಬರ ಪಾಡಿನಾತ್ ಎಡ್ಡೆ.
(ಪಾಯಸಕ್ಕೆ ಬೆಲ್ಲ ಹಾಕಿದಷ್ಟು ಒಳ್ಳೆಯದು, ಗದ್ದೆಗೆ ಗೊಬ್ಬರ ಹಾಕಿದಷ್ಟು ಒಳ್ಳೆಯದು.)

ಭತ್ತದ ಗದ್ದೆಗೆ ಗೊಬ್ಬರ (ಹಿಂದಿನ ಕ್ರಮದ ಪ್ರಕಾರ, ಹಟ್ಟಿಗೊಬ್ಬರ) ಬಹಳ ಅಗತ್ಯವಾದ ಆಹಾರ. ಅದು ಎಷ್ಟು ಹೆಚ್ಚು ಹಾಕಿತೋ ಬೆಳೆ ಅಷ್ಟು ಚೆನ್ನಾಗಿ ಬರುತ್ತದೆ ಎನ್ನುವುದು ಭತ್ತದ ಕೃಷಿಯ ಬಗ್ಗೆ ನಿಜವಾದ ಮಾತು. ಆದರೆ ಪಾಯಸಕ್ಕೆ ಬೆಲ್ಲ ಹಾಕಿದಷ್ಟು ಎನ್ನುವ ಮಾತು ಸಂಪೂರ್ಣ ಸರಿ ಅಲ್ಲ.

11. ಬಲೊ ಇತ್ತಿನಾಯಗ್ ಒಳಕ್ಕೆ, ನೀರ್ ಇತ್ತಿನಾಯಗ್ ಕೊಳಕ್ಕೆ.
(ಬಲ ಇದ್ದವನಿಗೆ ಬೆಳವಣಿಗೆ, ನೀರು ಇದ್ದವನಿಗೆ ಕೊಳಕೆ ಬೆಳೆ.)

ಭತ್ತದ ಕೃಷಿಯಲ್ಲಿ ಕೊಳಕೆ ಬೆಳೆಗೆ ನೀರು ಜಾಸ್ತಿಯಾದಷ್ಟು ಒಳ್ಳೆಯದು ಎಂಬ ಅನುಭವದ ಮಾತನ್ನು ಈ ಗಾದೆಯ ಮೂಲಕ ಹೇಳಲಾಗಿದೆ.

12. ಬಿತ್ತ್‌ನ ಸಮಯೊಡು ಬಿತ್ತಿಜಿಂಡ, ಕೊಯ್ಪು ಸಮಯ ಹಗುರೊ.
(ಬಿತ್ತುವ ಸಮಯದಲ್ಲಿ ಬಿತ್ತದಿದ್ದರೆ, ಕೊಯ್ಯುವ ಸಮಯ ಹಗುರ.)

ಭತ್ತದ ಬೆಳೆಯಲ್ಲಿ ಬೀಜ ಹಾಕಲು ನಿರ್ದಿಷ್ಟ ಸಮಯವಿರುತ್ತದೆ. ಕ್ಲಪ್ತಕಾಲದಲ್ಲೇ ಈ ಕೆಲಸ ಆಗಬೇಕು. ಹಾಗಿದ್ದರೆ ಮಾತ್ರ ಸರಿಯಾದ ಫಸಲು ಬರುತ್ತದೆ. ಒಂದು ವೇಳೆ, ಸರಿಯಾದ ಕಾಲದಲ್ಲಿ ಬೀಜ ಹಾಕದಿದ್ದರೆ ಒಳ್ಳೆಯ ಬೆಳೆಯನ್ನು ಪಡೆಯಲು ಸಾಧ್ಯವಿಲ್ಲ. ಆದ್ದರಿಂದ ಭತ್ತ, ಭತ್ತದ ಉತ್ಪತ್ತಿ ಬಹಳ ಕಡಿಮೆಯಾಗುತ್ತದೆ. ಅದನ್ನೇ ವಿಡಂಬನೆಯ ರೂಪದಲ್ಲಿ ಕೊಯ್ಯುವ ಕೆಲಸ ಹಗುರ ಎನ್ನಲಾಗಿದೆ. ಮಳೆಯನ್ನೇ ನಂಬಿ ಕೊಂಡು ಈ ಪ್ರದೇಶದ ರೈತರು ತಮ್ಮ ಬೇಸಾಯವನ್ನು ಕಾಲ ಕಾಲಕ್ಕೆ ಮಾಡಬೇಕಾಗುತ್ತದೆ ಎಂಬುದು ಈ ಗಾದೆಯಿಂದ ಗೊತ್ತಾಗುತ್ತದೆ.

13. ಸರಿಕ್ ಬರಂದಿ ಎರ್ಲೆಗ್ ಏಲಾಯಿ ನಾಯೇರ್ ಕಟ್ಯರಾವಂದ್.
ಕಂಜಿಲೆಗ್ ಪೊಡಿ ನಾಯೇರ್ ಕಟ್ಯರಾವಂದ್.
(ಪ್ರಾಯ ಬರದ ಕೋಣಗಳಿಗೆ ದೊಡ್ಡ ನೇಗಿಲು ಕಟ್ಟಬಾರದು, ಕರುಗಳಿಗೆ ಹುಡಿಗೆ ಕಟ್ಟುವ ನೇಗಿಲು ಕಟ್ಟಬಾರದು.)

ಕೋಣಗಳ ವಯಸ್ಸನ್ನು ನೋಡಿಕೊಂಡು ಅವುಗಳ ಶಕ್ತಿಯನ್ನು ನಿರ್ಧರಿಸಿಕೊಂಡು ಅವುಗಳಿಗೆ ಬೇರೆ ಬೇರೆ ಗಾತ್ರದ ನೇಗಿಲುಗಳನ್ನು ಕಟ್ಟುತ್ತಾರೆ. ಚಿಕ್ಕ ಕೋಣಗಳಿಗೆ ಅಂದರೆ ಎಲ್ಲಾ ಹಲ್ಲುಗಳು ಸರಿಯಾಗಿ ಬಾರದವುಗಳಿಗೆ ದೊಡ್ಡ ನೇಗಿಲನ್ನು ಕಟ್ಟುವುದಿಲ್ಲ. ನೀರಿಲ್ಲದೆ ಬರೇ ಹುಡಿಮಣ್ಣಿನಲ್ಲಿ ಉಳುವ ನೇಗಿಲಿಗೆ ಕರುಗಳನ್ನು ಕಟ್ಟಿದರೆ ಅವುಗಳಿಗೆ ನೇಗಿಲನ್ನು ಎಳೆಯುವ ಶಕ್ತಿ ಇರುವುದಿಲ್ಲ.

ತುಳುನಾಡಿನ ಬೇಸಾಯ ಪದ್ಧತಿಯಲ್ಲಿ ಇತ್ತೀಚಿನವರೆಗೂ ಗೇಣಿ ಪದ್ಧತಿ ಎಂಬ ವ್ಯವಸ್ಥೆ ಇತ್ತು. ಇತ್ತೀಚೆಗೆ ಕರ್ನಾಟಕ ಸರಕಾರದ ಭೂಸುಧಾರಣಾ ಕಾನೂನು ಬಂದ ಮೇಲೆ ಉಳುವವರೆಲ್ಲಾ ಹೊಲದ

ಒಡೆಯರಾಗಿದ್ದಾರೆ. ಈಗ ಧನಿ, ಒಕ್ಕಲು ಎನ್ನುವ ವರ್ಗಗಳು ಕಣ್ಮರೆಯಾಗಿವೆ. ಆದರೆ ಇದಕ್ಕಿಂತ ಮೊದಲು ಭೂಮಿಯ ಒಡೆಯನು 'ಧನಿ' ಎಂದೂ, ಅದನ್ನು ಅವನಿಂದ ಗೇಣಿಗೆ ಪಡೆದುಕೊಂಡು ಬೇಸಾಯ ಮಾಡು ವವನು 'ಒಕ್ಕಲು' ಎಂದೂ ಪರಿಗಣಿತರಾಗುತ್ತಿದ್ದರು. ಈ ಒಕ್ಕಲು ವರ್ಷವಿಡೀ ಹೊಲಗಳಲ್ಲಿ ಕೆಲಸ ಮಾಡಿ ದರೂ ಅನೇಕ ಪ್ರತಿಕೂಲ ಪರಿಸ್ಥಿತಿಯಿಂದಾಗಿ ಧನಿಯ ಗೇಣಿಯನ್ನು ಸಂಪೂರ್ಣವಾಗಿ ಸಂದಾಯ ಮಾಡಲು ಆಗುತ್ತಿರಲಿಲ್ಲ. ಅಂತಹ ಗೇಣಿದಾರ ಒಕ್ಕಲುಗಳ ಬಡತನದ ದಾರುಣ ಸ್ಥಿತಿಯನ್ನು ಎರಡು ಗಾದೆಗಳಲ್ಲಿ ಕಾಣ ಬಹುದು :

1. ಗೇಣಿ ಬೆನ್ಪುನಿ ಗೋಣಿ ಕಂಡ್ಪುನಿ.
(ಗೇಣಿ ಗೇಯುವುದು, ಗೋಣಿ ಕೊಡಹುವುದು.)

ಗೇಣಿಗಾಗಿ ಹೊಲವನ್ನು ವಹಿಸಿಕೊಂಡು ಎಷ್ಟು ಕಷ್ಟಪಟ್ಟು ದುಡಿದರೂ ಧನಿಯ ಗೇಣಿ ಯನ್ನು ಸಂದಾಯ ಮಾಡಿದ ಮೇಲೆ ಗೇಣಿದಾರನಿಗೆ ಉಳಿಯುವುದು ಖಾಲಿ ಗೋಣಿ ಮಾತ್ರ. ಅವನ ಪರಿಶ್ರಮಕ್ಕೆ ಯಾವ ಪ್ರತಿಫಲವೂ ಇಲ್ಲ.

2. ಊರು ಒರ್ಮೆಗೇಣಿ, ಬಿರ್ಮು ಪತ್ತಿಯೆ ಓಣಿ.
(ಊರೆಲ್ಲಾ ಗೇಣಿ, ಬಿರ್ಮು ಹಿಡಿದನು ಓಣಿ.)

ಬಿರ್ಮುವೆಂಬ ಒಬ್ಬ ಗೇಣಿದಾರನು ಊರಲ್ಲಿರುವ ಹೊಲಗಳನ್ನೆಲ್ಲಾ ಗೇಣಿಗೆ ಪಡೆದುಕೊಂಡ. ಆದರೆ ಧಣಿಗಳ ಗೇಣಿಯೆಲ್ಲವನ್ನು ಸಲ್ಲಿಸಿದ ಮೇಲೆ ಅವನು ಹೆದರಿಕೆಯಿಂದ ಹಾಗೂ ನಾಚಿಕೆ ಯಿಂದ ಯಾರಿಗೂ ಕಾಣದಂತೆ ಓಣಿಗಳಲ್ಲಿ ಅವಿತುಕೊಳ್ಳಬೇಕಾಗುತ್ತದೆ. ಬಡ ಗೇಣಿದಾರ ಬಿರ್ಮುವಿನ ಸ್ಥಿತಿಯನ್ನು ಚಿತ್ರಿಸುವುದರ ಮೂಲಕ ಈ ತುಳು ಗಾದೆ ಸಮಸ್ತ ಗೇಣಿದಾರರ ಬದುಕಿನ ಕರಾಳ ಚಿತ್ರವನ್ನು ತೋರಿಸುತ್ತದೆ.

ಬದುಕಿನ ಅನುಭವದ ಮಾತುಗಳಿಗೆ, ಲೋಕರೂಢಿಯ ವಿಚಾರಗಳಿಗೆ, ನೀತಿ ಮಾತುಗಳಿಗೆ ಬೇಸಾಯ ಪ್ರಪಂಚದಿಂದ ಹೋಲಿಕೆಗಳನ್ನು, ರೂಪಕಗಳನ್ನು ಬಳಸಿಕೊಂಡಿರುವ ಮಾತುಗಳು ಗಾದೆಯಲ್ಲಿ ಧಾರಾಳವಾಗಿ ಕಂಡುಬರುತ್ತದೆ.

1. ತಾರಿ ಕಂಡೊಗು ಮೂಜಿ ಬುಳೆ.
(ತಗ್ಗಿದ ಗದ್ದೆಗೆ ಮೂರು ಬೆಳೆ.)

ತಗ್ಗಿದ ಗದ್ದೆ ಅಂದರೆ ಹೆಚ್ಚು ನೀರಿರುವ ಗದ್ದೆ (ಬೈಲು ಗದ್ದೆ). ಇದರಲ್ಲಿ ಎಣೆಲ್, ಸುಗ್ಗಿ, ಕೊಳಕೆ ಎಂಬ ಮೂರು ಬೆಳೆಗಳನ್ನು ಈ ಪ್ರದೇಶದಲ್ಲಿ ತೆಗೆಯುತ್ತಾರೆ. ಆ ದೃಷ್ಟಿಯಿಂದ ಈ ಗಾದೆ ವಾಸ್ತವಿಕ ವಿಚಾರವನ್ನು ತಿಳಿಸುತ್ತದೆ. ಆದರೆ ಅದರ ಅರ್ಥ ಅಲ್ಲಿಗೇ ನಿಲ್ಲದೆ ಬದುಕಿನ ಸಂಗತಿಗಳ ಕಡೆಗೆ ಚಾಚುವುದನ್ನು ಗುರುತಿಸಬಹುದು. ತಗ್ಗಿ ನಡೆಯುವ ವ್ಯಕ್ತಿ, ಅಂದರೆ ವಿನಯವಂತನೂ ಹೆಚ್ಚು ಫಲವನ್ನು ಪಡೆಯುತ್ತಾನೆ ಎನ್ನುವ ಧ್ವನಿ ಇಲ್ಲಿ ಸ್ಪಷ್ಟ ವಾಗಿದೆ.

2. ಕುದ್ಕನ್ ನಂಬುದು ಕೊಳಕೆ ಬಿತ್ತಿಲೆಕೊ.
(ನರಿಯನ್ನು ನಂಬಿ ಕೊಳಕೆ ಬೆಳೆ ಬಿತ್ತಿದಂತೆ.)

ನರಿಯು ಮೋಸಗಾರ ಪ್ರಾಣಿ ಎನ್ನುವುದು ಜಾನಪದದಲ್ಲಿ ಪರಿಚಿತವಾದುದು. ಅದು ಕೊಳಕೆ ಬೆಳೆಯನ್ನು ಕಾಯುವುದರ ಬದಲು ಹಾಳು ಮಾಡುತ್ತದೆ. ಅದು ನಂಬಿಕೆಗೆ ಅರ್ಹವಾದ ಪ್ರಾಣಿಯಲ್ಲ. ಹಾಗೆಯೇ ನರಿಬುದ್ಧಿಯವರನ್ನು ನಂಬಿಕೊಂಡು ಯಾವುದೇ ಒಳ್ಳೆಯ ಕೆಲಸವನ್ನು ಮಾಡಲು ಸಾಧ್ಯವಿಲ್ಲ ಎಂಬ ಧ್ವನಿ ಈ ಗಾದೆಯಲ್ಲಿ ಇದೆ.

3. ಕಜೆ ಅರಿ ಬಿತ್ತ್‌ದ್ ಬೊಳಿ ಅರಿ ಕೊಯ್ಯೊಲಿಯೋ ?
(ಕಪ್ಪು ಅಕ್ಕಿಯನ್ನು ಬಿತ್ತಿ, ಬಿಳಿ ಅಕ್ಕಿಯನ್ನು ಕೊಯ್ಯಬಹುದೇ ?)

ಬೀಜದಂತೆ ಬೆಳೆ ಎನ್ನುವ ತತ್ವವನ್ನು ಇಲ್ಲಿ ಸಾರಲಾಗಿದೆ. ಕಪ್ಪು ಬೀಜದಿಂದ ಬಿಳಿಯ ಅಕ್ಕಿ ಸಿಗಲಾರದು. ಕೆಟ್ಟ ಕಾರ್ಯದಿಂದ ಒಳ್ಳೆಯ ಫಲ ದೊರೆಯಲಾರದು ಎಂಬ ಅರ್ಥ ಇಲ್ಲಿದೆ.

4. ಕೆಯಿತ್ತ ಕಟ್ಟ ತುಂದೊಂದು ಜಾಲ್ ನಾಡ್‌ವೆಗೆ.
(ಭತ್ತದ ತೆನೆಯ ಹೊರೆಯನ್ನು ಹೊತ್ತುಕೊಂಡು ಅಂಗಳ ಹುಡುಕಿದ್ದಾನಂತೆ.)

ಭತ್ತದ ತೆನೆಯ ಹೊರೆಯನ್ನು ಮೊದಲೇ ಸ್ವಚ್ಛಗೊಳಿಸಿದ ಅಂಗಳದಲ್ಲಿ ಹಾಕಿ ತೆನೆ ಬಡಿದು ಭತ್ತವನ್ನು ಸಂಗ್ರಹಿಸಬೇಕು. ಭತ್ತದ ಬೇಸಾಯಗಾರನಿಗೆ ಅಂಗಳವು ಅವನ ವೃತ್ತಿಯ ಒಂದು ಪ್ರಧಾನ ಅಂಗ. ಪೈರು ತೆನೆಯಾಗುತ್ತಾ ಇರುವಾಗಲೆಲ್ಲ ಅಂಗಳವನ್ನು ಸಜ್ಜುಗೊಳಿಸುವ ಕೆಲಸವನ್ನು ಅವನು ಮಾಡಬೇಕಾಗುತ್ತದೆ. ಆ ಸಿದ್ಧತೆ ಇಲ್ಲದವನು ಬೆಳೆಯನ್ನು ಹಾಳು ಮಾಡಿಕೊಳ್ಳುತ್ತಾನೆ. 'ಬಾಯಾರಿಕೆಯಾಗುವಾಗ ಬಾವಿ ತೋಡುವುದು' ಎನ್ನುವ ಗಾದೆಯ ಅರ್ಥವನ್ನೇ ಇಲ್ಲೂ ಕಾಣಬಹುದು.

5. ಪಂತೊಗು ಪನೆ ಪಾಡ್‌ದ್, ಕೊನತ್‌ದ್ ನೀರ್ ಚೇತಸಲೆಕೊ.
(ಸ್ಪರ್ಧೆಗಾಗಿ ಏತಹಾಕಿ ನೀರು ತಂದು ಮೊಗೆದ ಹಾಗೆ.)

ಈ ಗಾದೆಯ ಇನ್ನೊಂದು ಪಾಠಾಂತರ—

ಪಂತೊಗು ಪನೆ ಪಾಡ್‌ದ್ ಚೆಂಬುಡು ನೀರ್‌ದೆತ್ತ್‌ಲೆಕೊ.
(ಸ್ಪರ್ಧೆಗಾಗಿ ಏತಹಾಕಿ ಚೆಂಬಿನಲ್ಲಿ ನೀರು ತೆಗೆದ ಹಾಗೆ.)

ಈ ಎರಡು ಪಾಠಾಂತರಗಳಲ್ಲಿಯೂ ಬೇಸಾಯಗಾರರು ನೀರನ್ನು ಸೇದುವುದಕ್ಕಾಗಿ ಏತಗಳನ್ನು ಹಾಕುವ ವಿಚಾರ ಬರುತ್ತದೆ. ಆಳವಾದ ಹೊಂಡ, ಬಾವಿ, ಕೆರೆ ಮುಂತಾದುವುಗಳಿಂದ ಏತದ ಮೂಲಕ ನೀರನ್ನು ಮೇಲಕ್ಕೆತ್ತಿ ಬೇಸಾಯದ ಭೂಮಿಗೆ ಉಪಯೋಗಿಸುತ್ತಿದ್ದರು; ನೀರಿನ ಪಂಪುಗಳು ಬಂದ ಮೇಲೆ ಏತಗಳು ಕಣ್ಮರೆಯಾಗುತ್ತಾ ಬಂದಿವೆ. ನೀರು ಇಲ್ಲದಿದ್ದರೂ ಸ್ಪರ್ಧೆಗಾಗಿ ಏತಹಾಕುವ ಹಳ್ಳಿಗರ ಪ್ರವೃತ್ತಿಯನ್ನು ಈ ಗಾದೆ ವಿಡಂಬಿಸುತ್ತದೆ.

## II. ಜಾತಿ, ಕಸುಬುಗಳ ಬಗೆಗಿನ ಗಾದೆಗಳು :

### (1) ಬ್ರಾಹ್ಮಣ :

1. ಒಕ್ಕಿಲಾಯೆ ಮಲ್ತಿನವು ದಂಡೊಗು, ಬ್ರಾಣೆ ಮಲ್ತಿನವು ಪಿಂಡೊಗು, ಮನ್ಸೆ ಮಲ್ತಿನವು ಹೆಂಡೊಗು.
(ಸೆಟ್ಟಿ ಮಾಡಿದ್ದು ದಂಡಕ್ಕೆ, ಭಟ್ಟ ಮಾಡಿದ್ದು ಪಿಂಡಕ್ಕೆ, ಹೊಲೆಯ ಮಾಡಿದ್ದು ಹೆಂಡಕ್ಕೆ.)

2. ಬ್ಯಾರಿ ಸೋತ್‌ಂಡ ವಾಸನೆ, ಬ್ರಾಣೆ ಸೋತ್‌ಂಡ ಪರಿಮಳೊ.
(ಬ್ಯಾರಿ ಸೋತರೆ ವಾಸನೆ, ಬ್ರಾಹ್ಮಣ ಸೋತರೆ ಪರಿಮಳ.)

3. ಬ್ರಾಣನ ದುಂಬು ಇಪ್ಪೊಡ್ಚಿ, ಕುದುರೆದ ಪಿರವು ಇಪ್ಪೊಡ್ಚಿ.
(ಬ್ರಾಹ್ಮಣನ ಮುಂದಿರಬೇಡ, ಕುದುರೆಯ ಹಿಂದಿರಬೇಡ.)

4. ಬ್ರಾಣನ ಪೀಕ್ ನಾಯಿ ಕಾತಿಲೆಕೊ.
(ಬ್ರಾಹ್ಮಣನ ಹೇಲಿಗೆ ನಾಯಿ ಕಾದ ಹಾಗೆ.)

5. ಬ್ರಾಣನ ಬೇಲೆದಾಯೆ ಆಯೆರೆಬಲ್ಲಿ, ಚೆಲ್ಯನ ಎರು ಆಯೆರೆಬಲ್ಲಿ.
(ಬ್ರಾಹ್ಮಣನ ಕೆಲಸದವ ಆಗಬಾರದು, ಗಾಣಿಗನ ಎತ್ತು ಆಗಬಾರದು.)

6. ಬ್ರಾಣೆ ಒಂಜಿ ಒಣಸ್‌ಗ್ ಐನ್‌ಸುದೆ ಕಡತ್ತ್‌ದ್ ಪೋಯಿಲೆಕೊ.
(ಬ್ರಾಹ್ಮಣನು ಒಂದು ಊಟಕ್ಕಾಗಿ ಐದು ಹೊಳೆಗಳನ್ನು ದಾಟಿ ಹೋದಂತೆ.)

7. ಬ್ರಾಣೆ, ಬಂಟೆ, ಬಿರುವೆ ಸೇರಂದ್ ಕೂನಿ ಆವಂದ್.
(ಬ್ರಾಹ್ಮಣ. ಬಂಟ, ಬಿಲ್ಲವ ಒಟ್ಟು ಸೇರದೆ ಖೂನಿ ಆಗಲಾರದು.)

8. ಬ್ರಾಣೆ ಮೀನ್ ತಿಂದಿಲೆಕೊ.
(ಬ್ರಾಹ್ಮಣ ಮೀನು ತಿಂದ ಹಾಗೆ.)

9. ಕಪ್ಪು ಬ್ರಾಣನ್ ನಂಬಡ, ಬೊಳ್ದು ದಿಕ್ಕ್‌ನ್ ನಂಬಡ.
(ಕಪ್ಪು ಬ್ರಾಹ್ಮಣನನ್ನು ನಂಬಬೇಡ, ಬಿಳಿಯ ಹೊಲೆಯನನ್ನು ನಂಬಬೇಡ.)

10. ಮದಿಮ್ಮೆಗ್ ಪೋನಗ ಮುಂಡ ಬ್ರಾಣ್ತಿ ಎದುರು ತಿಕ್ಕಿಲೆಕೊ.
(ಮದುವೆಗೆ ಹೋಗುವಾಗ ವಿಧವೆ ಬ್ರಾಹ್ಮಣಿತಿ ಎದುರು ಸಿಕ್ಕಿದ ಹಾಗೆ )

11. ಮಾದಿಗನ ಇಲ್ಲೆಲ್ ಸೀಯನೊ ಮಲ್ತ್‌ಂಡ ಬ್ರಾಣಗ್ ದಾನೆ ?
(ಮಾದಿಗನ ಮನೆಯಲ್ಲಿ ಪಾಯಸ ಮಾಡಿದರೆ ಬ್ರಾಹ್ಮಣನಿಗೇನು ?)

12. ಆರ್‌ಲ ಎಡ್ಡೆ ಇಂಬೆರ್‌ಲ ಎಡ್ಡೆ ; ಉಪ್ಪುಕೊಟ್‌ದ್ ತೆಳಿ ಮಯಿಪ್ಪಿಯೆರೆ ಬಿರಣೆರೆ ದೆತ್ತಿ ಎಡ್ಡೆ.
(ಅವರೂ ಒಳ್ಳೆಯವರು, ಇವರೂ ಒಳ್ಳೆಯವರು, ಉಪ್ಪು ಹಾಕಿದ ತಿಳಿ ಎರೆಯಲು ಬ್ರಾಹ್ಮಣರ ಹೆಂಗಸು ಒಳ್ಳೆಯದು.)

13. ಉಣಂದಿ ಬ್ರಾಣನ್‌ಲ, ಉಂಡ್‌ನ ಒಕ್ಕಲಾಯನ್‌ಲ ಪಾತೆರ್ಪವೊಡ್ಚಿ.
(ಹಸಿದ ಹಾರುವನನ್ನೂ, ಉಂಡ ಒಕ್ಕಲಿಗನನ್ನೂ ಕೆಣಕಬೇಡ.)

14. ಒಂಜಿ ಕಂಬುಳ ತೂಂಡ ಬೆರಣೆ ಏಳ್ ದೇವಸ್ಥಾನೊ ಪೊಗ್ಗೊಡುಂಗೆ.
(ಒಂದು ಕಂಬಳ ನೋಡಿದರೆ ಬ್ರಾಹ್ಮಣನು ಏಳು ದೇವಸ್ಥಾನಗಳನ್ನು ಹೊಕ್ಕಬೇಕಂತೆ.)

15. ಕಳಿ ಪರ್ಪಿ ಮನ್ಸನ್ ನಂಬೊಲಿ, ಕಳು ಪನ್ಪಿ ಬ್ರಾಣನ್ ನಂಬೆರೆ ಬಲ್ಲಿ.
(ಕಳ್ಳು ಕುಡಿಯುವ ಹೊಲೆಯನನ್ನು ನಂಬಬಹುದು, ಸುಳ್ಳು ಹೇಳುವ ಬ್ರಾಹ್ಮಣನನ್ನು ನಂಬಬಾರದು.)

16. ಗಳಿಗೆ ತೂಪಿನವು ಬಟ್ಟೆರೆ ಕೆಲಸೊ, ಗುಳಿಗೆ ಕೊರ್ಪಿನವು ವೈದ್ಯೆರೆ ಕೆಲಸೊ.
(ಗಳಿಗೆ ನೋಡುವುದು ಬ್ರಾಹ್ಮಣರ ಕೆಲಸ, ಗುಳಿಗೆ ಕೊಡುವುದು ವೈದ್ಯರ ಕೆಲಸ.)

71. ದೇವೆರೆಡ್‌ದ್ ಬಿರಣಗ್ ಮಾನ, ಭೂತೊಡ್ದ್ ಪೂಜಾರಿಗ್ ಮಾನ.
(ದೇವರಿಂದ ಬ್ರಾಹ್ಮಣರಿಗೆ ಮರ್ಯಾದೆ, ಭೂತದಿಂದ ಪೂಜಾರಿಗೆ ಮರ್ಯಾದೆ.)

18. ನಾಯಿಗ್ ನಡಪ್ಪೆರೆ ತೆರಿಯಂದ್, ಬಿರಣಗ್ ಬಲಿಪ್ಪೆರೆ ತೆರಿಯಂದ್.
(ನಾಯಿಗೆ ನಡೆಯಲು ತಿಳಿಯದು, ಬ್ರಾಹ್ಮಣನಿಗೆ ಓಡಲು ತಿಳಿಯದು.)

19. ಬ್ರಾಣ ಪೊದು ಅತ್ತ್, ಮಣ್ಣ್ ಕರ ಅತ್ತ್.
(ಬ್ರಾಹ್ಮಣನ ನೆಂಟಸ್ಥಿಕೆ ಅಲ್ಲ, ಮಣ್ಣಿನ ಮಡಕೆ ಅಲ್ಲ.)

20. ಬ್ರಾಣೆ ಬೆನ್ನಿ ಬೆನಿಯೆರೆ ಆವಂದ್,
ಒಕ್ಕಲ್ಮೆ ಒಣಸ್ ಮಲ್ಪಾವೆರೆ ಆವಂದ್.
(ಬ್ರಾಹ್ಮಣನು ಬೇಸಾಯ ಮಾಡಬಾರದು,
ಬಂಟನು ಔತಣದ ಕೆಲಸ ಮಾಡಬಾರದು.)

21. ಮದ್ಯಾನ್ನಡ್ ಬೆರಣ ಬೆರಿಯೆ, ಬೈಯ್ಯಾಡ್ ಜೈನ ಬೆರಿಯೆ ನಡಪ್ಪೆರೆ ತೀರಂದ್.
(ಮಧ್ಯಾಹ್ನ ಬ್ರಾಹ್ಮಣನ ಹಿಂದೆ, ಸಂಜೆ ಜೈನನ ಹಿಂದೆ ನಡೆಯಲು ಸಾಧ್ಯವಿಲ್ಲ.)

ಬ್ರಾಹ್ಮಣರಿಗೆ ಸಂಬಂಧಿಸಿದ ಮೇಲಿನ ತುಳು ಗಾದೆಗಳನ್ನು ಗಮನಿಸಿದರೆ ಅನೇಕ ಗಾದೆಗಳು ವಿಡಂಬನೆಯ ಸ್ವರೂಪದಲ್ಲಿ ಕಾಣಿಸುತ್ತವೆ. ಜಾತಿಗಳಿಗೆ ಸಂಬಂಧಿಸಿದ ಹೆಚ್ಚಿನ ಗಾದೆಗಳು ವಿಡಂಬನೆಯನ್ನೇ ಪ್ರಧಾನವಾಗಿ ಉಳ್ಳವುಗಳಾಗಿರುವುದರಿಂದ ಆ ಕ್ರಮವನ್ನು ಇಲ್ಲಿಯೂ ಕಾಣಬಹುದು. ಇವೆಲ್ಲ ಪಾರ್ಶ್ವಿಕ ದೃಷ್ಟಿಯಿಂದ ಹುಟ್ಟಿದಂತಹ ಗಾದೆಗಳು. ಆದರೆ ಕೆಲವು ಗಾದೆಗಳಾದರೂ ಇಂತಹ ಜಾತಿಗಳ, ಕಸುಬುಗಳ

ಸ್ವರೂಪವನ್ನು ತಿಳಿಸುತ್ತವೆ. ಬ್ರಾಹ್ಮಣನ ಪ್ರಧಾನ ವೃತ್ತಿ ಪೂಜೆ ಮಾಡುವುದು ಮೊದಲಾದ ಧಾರ್ಮಿಕ ಕಾರ್ಯಗಳು ಎಂಬುದನ್ನು 20ನೆಯ ಗಾದೆ ತಿಳಿಸುತ್ತದೆ. ಬ್ರಾಹ್ಮಣನ ಭೋಜನಪ್ರಿಯತೆಯನ್ನು, ಕೆಲವೊಂದು ಬಾರಿ ಊಟದ ಬಗೆಗಿನ ಆಸೆಯನ್ನು 6, 11, 13 ಸಂಖ್ಯೆಯ ಗಾದೆಗಳು ತಿಳಿಸುತ್ತವೆ. ಬ್ರಾಹ್ಮಣ ತನ್ನ ಕೆಲಸದವರಿಂದ ಅತಿಯಾಗಿ ಕೆಲಸ ಮಾಡಿಸುತ್ತಾನೆ ಎನ್ನುವ ಒಂದು ಭಾವನೆಯನ್ನು ವಿಡಂಬನಾತ್ಮಕವಾಗಿ 3, 5 ಸಂಖ್ಯೆಯ ಗಾದೆಗಳ ಮೂಲಕ ಹೇಳಲಾಗಿದೆ. ಬ್ರಾಹ್ಮಣನು ಧಾರ್ಮಿಕ ಕಾರ್ಯಗಳಿಗೆ ಹೆಚ್ಚು ಖರ್ಚು ಮಾಡುತ್ತಾನೆ ಎನ್ನುವುದು 1ನೇ ಗಾದೆಯಲ್ಲಿ ವ್ಯಕ್ತವಾಗುತ್ತದೆ. ಬಹಳ ಬಡಪಾಯಿ ಬ್ರಾಹ್ಮಣರು ಬೇರೆ ಏನೂ ಜೀವನೋಪಾಯಕ್ಕೆ ಇಲ್ಲದಿದ್ದಾಗ ಅಡುಗೆ ಭಟ್ಟರಾಗುತ್ತಾರೆ ಎಂದು 2ನೇ ಗಾದೆಯ "ಬ್ರಾಣೆ ಸೋತ್ಂಡ ಪರಿವುಳೊ" (ಬ್ರಾಹ್ಮಣ ಸೋತರೆ ಪರಿವಾಳ) ಎಂಬ ಮಾತಿನ ಮೂಲಕ ಹೇಳಲಾಗಿದೆ. ಬ್ರಾಹ್ಮಣರ ಮೈ ಬಣ್ಣ ಸಾಮಾನ್ಯವಾಗಿ ಬಿಳಿ. ಅವರಲ್ಲಿ ಕಪ್ಪು ಬಣ್ಣದವರು ಬಹಳ ಅಪೂರ್ವ. ಅಪೂರ್ವ (Rare) ವಾದುದೆಲ್ಲವನ್ನೂ ಅಪಶಕುನ ಅಥವಾ ಅಪಾಯ ಎಂದು ಭಾವಿಸುವ ಪ್ರವೃತ್ತಿ ಜನಪದರದ್ದು. ಆದ್ದರಿಂದಲೇ 'ಕಪ್ಪು ಬ್ರಾಣನ್ ನಂಬಡ' ಎನ್ನುವ ಗಾದೆ ಹುಟ್ಟಿಕೊಂಡಿರಬೇಕು. ಬ್ರಾಹ್ಮಣನು ಸುಳ್ಳು ಹೇಳಬಾರದು. ಏಕೆಂದರೆ ಅವನು ಧಾರ್ಮಿಕ ಕಾರ್ಯದಲ್ಲಿ ವ್ಯವಹರಿಸುವವನು ಎಂಬ ನಂಬಿಕೆ 15ನೆಯ ಗಾದೆಯಲ್ಲಿದೆ. ತುಳುನಾಡಿನಲ್ಲಿ ಸಾಂಪ್ರದಾಯಿಕವಾಗಿ ಬೇಸಾಯವು ಬ್ರಾಹ್ಮಣರ ಕಸುಬು ಆಗಿರಲಿಲ್ಲ ಎನ್ನುವುದಕ್ಕೆ 20ನೆಯ ಗಾದೆ ಸಾಕ್ಷಿಯಾಗಿದೆ. ಮುಹೂರ್ತ ನೋಡುವ ಕೆಲಸವನ್ನು ಬ್ರಾಹ್ಮಣ ಮಾಡುತ್ತಾನೆ ಎನ್ನುವುದನ್ನು 16ನೆಯ ಗಾದೆಯಲ್ಲಿ ತಿಳಿದುಕೊಳ್ಳಬಹುದು. ವಿಧವೆ ಬ್ರಾಹ್ಮಣ ಹೆಂಗಸು ಅಪಶಕುನ ಎನ್ನುವ ನಂಬಿಕೆ 10ನೆಯ ಗಾದೆಯಲ್ಲಿದೆ.

(2) ಕೊಂಕಣಸ್ಥ :

1. ಕೊಂಕಣಿ ಎರ್ಮೆಗ್ ಕೊಡಂಟಿ ಮರ್ದ್.
(ಕೊಂಕಣಸ್ಥರ ಎಮ್ಮೆಗೆ ಬಡಿಗೆಯೇ ಔಷಧ.)

2. ಕೊಂಕಣಿ ಲಾಭೊ ಇದ್ಯಂದೆ ಬೊಳ್ಳೊಡ್ ಪೋವಯೆ.
(ಲಾಭ ಇಲ್ಲದೆ ಕೊಂಕಣಸ್ಥ ಪ್ರವಾಹದಲ್ಲಿ ಹೋಗಲಾರ.)

3. ಕಾಡ್ ಸೊರ್ಕಿನವುಳು ಏಡ್‌ನ್ ಬುಡೊಡು, ಊರು ಸೊರ್ಕಿನವುಳು ಕೊಂಕಣಿನ್ ಬುಡೊಡು.
(ಕಾಡು ಸೊಕ್ಕಿದಲ್ಲಿ ಆಡನ್ನು ಬಿಡಬೇಕು, ಊರು ಸೊಕ್ಕಿದಲ್ಲಿ ಕೊಂಕಣಸ್ಥನನ್ನು ಬಿಡಬೇಕು.)

ಕೊಂಕಣಸ್ಥನಿಗೆ ಸಂಬಂಧಿಸಿದ ಮೇಲಿನ ಮೂರು ಗಾದೆಗಳೂ ಸಂಪೂರ್ಣ ವಿಡಂಬನಾ ಸ್ವರೂಪದವು. ತುಳುನಾಡಿಗೆ ಹೊರಗಿನಿಂದ ಬಂದ ಈ ಸಮಾಜವನ್ನು, ವ್ಯಾಪಾರವೇ ಪ್ರಧಾನ ವೃತ್ತಿಯಾಗಿ ಉಳ್ಳ ಈ ಜಾತಿಯನ್ನು, ಸ್ಥಳೀಯ ಜನರು ಸಂಶಯದ ದೃಷ್ಟಿಯಿಂದಲೇ ನೋಡಿರಬೇಕು. ಕೊಂಕಣಿಯರು ವ್ಯಾಪಾರದಲ್ಲಿ ಲಾಭವನ್ನೇ ಪ್ರಧಾನವಾಗಿಟ್ಟುಕೊಳ್ಳುತ್ತಾರೆ ; ಅವರು ತಮ್ಮ ವೃತ್ತಿಯಿಂದ ಜನಗಳನ್ನು ಸುಲಿಗೆ ಮಾಡುತ್ತಾರೆ ಎನ್ನುವ ಅರ್ಥವು 2 ಮತ್ತು 3ನೆಯ ಗಾದೆಗಳಲ್ಲಿ ಇದೆ. ಅವರು ಸಾಕಿದ ಎಮ್ಮೆ ಹೆಚ್ಚು ಪೌಷ್ಟಿಕ ಆಹಾರ ಸೇವಿಸಿ ಕೊಬ್ಬಿ ಇರುವ ಕಾರಣ ಅದಕ್ಕೆ ದೊಣ್ಣೆಯ ಪೆಟ್ಟೇ ಆಗಬೇಕು ಎನ್ನುವ ಅಭಿಪ್ರಾಯ 1ನೇ ಗಾದೆಯಲ್ಲಿದೆ. ಎಮ್ಮೆಯನ್ನು ನೆಪವಾಗಿಟ್ಟುಕೊಂಡು ಕೊಂಕಣಿಯವರನ್ನು ಪರಿಹಾಸ್ಯಗೈಯುವ ರೀತಿಯನ್ನು ಇಲ್ಲಿ ಕಾಣಬಹುದು.

(3) ಬಂಟ :

1. ಬಂಟ ಅಬ್ಬರ, ಚೇವು ಗೊಬ್ಬರ.
(ಬಂಟನ ಅಬ್ಬರ, ಕೆಸುವಿನ ಗೊಬ್ಬರ.)

2. ಬಂಟೆರ್ ಪೋಯಿನವುಳು ಪೊಡಂಕ್ ತಪ್ಪದ್.
ಮಡೆಂಜಿ ಪೋಯಿನವುಳು ಕಳಂಕ್ ತಪ್ಪಂದ್.
(ಬಂಟರು ಹೋದಲ್ಲಿ ಜಗಳ ತಪ್ಪದು, ಮಡೆಂಜಿ ಮೀನು ಹೋದಲ್ಲಿ ಕೆಸರು ನೀರು ತಪ್ಪದು.)

3. ಉಣಂದಿ ಬ್ರಾಣನ್‌ಲ, ಉಂಡಿನ ಒಕ್ಕೆಲಾಯನ್‌ಲ ಪಾತೆರ್ಪಾವೊಡ್ಚಿ.
(ಹಸಿದ ಹಾರುವನನ್ನೂ, ಉಂಡ ಬಂಟನನ್ನೂ ಕೆಣಕಬೇಡ.)

4. ಒಕ್ಕೆಲಾಯೆ ಮಲ್ತಿನವು ದಂಡೊಗು, ಬ್ರಾಣೆ ಮಲ್ತಿನವು ಪಿಂಡೊಗು, ಮನ್ಸೆ ಮಲ್ತಿನವು ಹೆಂಡೊಗು.
(ಬಂಟ ಮಾಡಿದ್ದು ದಂಡಕ್ಕೆ, ಭಟ್ಟ ಮಾಡಿದ್ದು ಪಿಂಡಕ್ಕೆ, ಹೊಲೆಯ ಮಾಡಿದ್ದು ಹೆಂಡಕ್ಕೆ.)

5. ಒಕ್ಕೆಲ್ಮೆ ನಟ್ಪೊಡಾಂಡ, ಕೆಕ್ಕಿಲ್‌ಗ್ ನಾಯೆರ್ ಕಟ್ಪೊನೊಡುಗೆ.
(ಬಂಟ ಬೇಡಬೇಕಾದರೆ ಕೊರಳಿಗೆ ನೇಗಿಲು ಕಟ್ಟಬೇಕಂತೆ.)

6. ಬ್ರಾಣೆ ಬೆನ್ನಿ ಬೆನಿಯೆರೆ ಆವಂದ್
ಒಕ್ಕೆಲ್ಮೆ ಒಣಸ್ ಮಲ್ಪಾವೆರೆ ಆವಂದ್.
(ಬ್ರಾಹ್ಮಣ ಬೇಸಾಯದ ಕೆಲಸ ಮಾಡಬಾರದು, ಬಂಟ ಭೋಜನದ ಕೆಲಸ ಮಾಡಬಾರದು )

7. ಬೆನ್ನಿ ಒಕ್ಕೆಲಾಕ್‌ಲೆಗ್.
(ಕೃಷಿ ಎಂಬುದು ಒಕ್ಕಲಿಗರಿಗೆ, ಅಂದರೆ ಬಂಟರಿಗೆ.)

ಬಂಟ ಸಮಾಜದವರ ಸಾಂಪ್ರದಾಯಿಕ ಕಸುಬು ಬೇಸಾಯ ಎಂಬುದನ್ನು 5, 6 ಮತ್ತು 7ನೆಯ ಗಾದೆಗಳು ತಿಳಿಸುತ್ತವೆ. ಬಂಟರ ಅಹಂಭಾವವನ್ನು 1ನೆಯ ಮತ್ತು 3ನೆಯ ಗಾದೆಯಲ್ಲಿ ಟೀಕಿಸಲಾಗಿದೆ. ಬಂಟರ ಜಗಳದ ರೂಪವನ್ನು 2ನೆಯ ಗಾದೆಯೂ, ಸಂಪತ್ತೆಲ್ಲವನ್ನು, ವಾದ ವಿವಾದಗಳಿಗೆ ಸುರಿಯುವ ಪ್ರವೃತ್ತಿಯನ್ನು 4ನೆಯ ಗಾದೆಯೂ ವಿಡಂಬಿಸುತ್ತದೆ.

(4) ಜೈನ :

1. ಜೈನಗ್ ನಂಟೆ ಇಜ್ಜಿ.
(ಜೈನನಿಗೆ ನಂಟ ಇಲ್ಲ.)

2. ಮದ್ಯಾನೊಡು ಬೆರಣ ಬೆರಿಯೆ, ಬೈಯೊಡು ಜೈನ ಬೆರಿಯೆ ನಡಪ್ಪೆರೆ ತೀರಂದ್.
(ಮಧ್ಯಾಹ್ನ ಬ್ರಾಹ್ಮಣನ ಹಿಂದೆ, ಸಂಜೆ ಜೈನನ ಹಿಂದೆ ನಡೆಯಲು ಸಾಧ್ಯವಿಲ್ಲ.)

ಸಾಮಾನ್ಯವಾಗಿ ಬಂಟರ ಪ್ರವೃತ್ತಿಯವರೇ ಆದ ಜೈನರ ಬಗ್ಗೆ ಹೆಚ್ಚು ಗಾದೆಗಳು ಸಿಕ್ಕಿಲ್ಲ. ಜೈನರು ಸ್ನೇಹಪ್ರಿಯರಲ್ಲ ಎನ್ನುವ ಟೀಕೆಯನ್ನು ಮೊದಲನೇ ಗಾದೆ ಮಾಡಿದರೆ, 2ನೇ ಗಾದೆಯಲ್ಲಿ ಜೈನರ ಒಂದು ವಿಶಿಷ್ಟ ಪದ್ಧತಿಯನ್ನು ತಿಳಿಸಲಾಗಿದೆ. ಸಂಜೆಯ ಹೊತ್ತು ಜೈನರು ತಮ್ಮ ರಾತ್ರಿಯ ಊಟವನ್ನು ಮುಗಿಸುತ್ತಾರೆ. ಆ ಊಟವನ್ನು ಮುಗಿಸಲು ಬಹಳ ತ್ವರೆಯಿಂದ ಮನೆಗೆ ಹೋಗುತ್ತಾರೆ. ಆದ್ದರಿಂದ ಸಂಜೆಯ ವೇಳೆ ಜೈನನ ಹಿಂದೆ ನಡೆಯಲು ಸಾಧ್ಯವಿಲ್ಲ ಎನ್ನುವ ಗಾದೆ ಹುಟ್ಟಿಕೊಂಡಿರಬೇಕು.

(5) ಬಿಲ್ಲವ :

1. ಬಿರುವೆ ನೆರುವೆ, ತತ್ಂಡ ಕೆರುವೆ,
(ಬಿಲ್ಲವ ಬಯ್ದಾನು, ತಪ್ಪಿದರೆ ಕೊಂದಾನು.)

2. ಬಿರುವೆರೆಡ್ ಇರುವೆರ್.
(ಬಿಲ್ಲವರಲ್ಲಿ ಇಬ್ಬರು.)

3. ಒರಿ ಬಿರುವೆ ಇರುವೆರೆಗ್ ಸಮ.
(ಒಬ್ಬ ಬಿಲ್ಲವ ಎರಡು ಜನರಿಗೆ ಸಮ.)

4. ಕಡಲಾಯೆರ್‌ನಲ ಮಡಲಾಯೆರ್‌ನಲ ನುಪ್ಪು ನಿಜೊ ಅತ್ತ್.
(ಬೆಸ್ತರದ್ದೂ ಬಿಲ್ಲವರದ್ದೂ ಅನ್ನ ಶಾಶ್ವತವಾದುದಲ್ಲ. ಅಂದರೆ, ಕಷ್ಟಕರವಾದದ್ದು.)

5. ಬಿರುವೆರೆ ಜೋಕುಳೆಗ್ ಅಮುಸಾನಿ ಹೆಚ್ಚ, ನೀರ್ ಕಳಿಕ್ಕ್ ನುರೆ ಹೆಚ್ಚ.
(ಬಿಲ್ಲವರ ಮಕ್ಕಳಿಗೆ ತಂಟೆ ಜಾಸ್ತಿ, ನೀರು ಹೆಂಡಕ್ಕೆ ನೊರೆ ಜಾಸ್ತಿ.)

6. ತಿರುಪತಿಗ್ ಬಿರುವೆ ಪೋದ್ ಬೈದ್ಯೆ ಆದ್ ಬೈದೆಗೆ.
(ಬಿಲ್ಲವನು ತಿರುಪತಿಗೆ ಹೋಗಿ ವೈದ್ಯನಾಗಿ ಬಂದಿದ್ದಾನಂತೆ.)

ಬಿಲ್ಲವರ ಸಾಂಪ್ರದಾಯಿಕ ಕಸುಬು ತಾಳೆ ಮರದಲ್ಲಿ ಮುರ್ತೆ ಕೆಲಸ ಮಾಡುವುದು, ಕಳ್ಳು ತೆಗೆಯುವುದು. ಈ ವಿಚಾರ 4ನೇ ಗಾದೆಯಲ್ಲಿ ಕಾಣಿಸಿಕೊಂಡಿದೆ. ಬಿಲ್ಲವ ಮೂಲತಃ 'ಬಿಲ್ಲುಗಾರ' ಅಂದರೆ ಯೋಧ ಆಗಿದ್ದ ಎನ್ನುವ ಅಭಿಪ್ರಾಯವಿದೆ. ಆತನ ಬಲಶಾಲಿತ್ವವನ್ನು, ಪರಾಕ್ರಮವನ್ನು 2 ಮತ್ತು 3ನೆಯ ಗಾದೆಗಳಲ್ಲಿ ಧ್ವನಿಸಲಾಗಿದೆ. ಒಂದನೆಯ ಗಾದೆಯು ಇದರ ಜೊತೆಗೆ ಅವನ ಸಾಮರ್ಥ್ಯವನ್ನೂ ಶೀಘ್ರಕೋಪವನ್ನೂ ತಿಳಿಸುತ್ತದೆ. ಬಿಲ್ಲವರನ್ನು ಬೈದ್ಯ (ವೈದ್ಯ) ಎಂದು ಕರೆಯುತ್ತಾರೆ. ಅವರಲ್ಲಿ ಒಂದು ವರ್ಗ ವೈದ್ಯ ವೃತ್ತಿಯನ್ನು ಕೈಗೊಂಡ ಕಾರಣ ಈ ಹೆಸರು ಬಂದಿರಬೇಕು. ಇದಕ್ಕೆ ಕೋಟಿ ಚೆನ್ನಯ ಮುಂತಾದ ಪಾಡ್ದನಗಳಲ್ಲಿ ಆಧಾರವಿದೆ. ಇದನ್ನು 6ನೆಯ ಗಾದೆಯಲ್ಲಿ ಸೂಚಿಸಲಾಗಿದೆ.

(6) ಬೆಸ್ತ :

1. ಮರಕ್ಕಲೆರ್ ಮರಪ್ಪಯೆರ್.
(ಬೆಸ್ತರು ಮರೆಯಲಾರರು.)

2. ಕಡಲಾಯೆರ್‌ನಲ ಮಡಲಾಯೆರ್‌ನಲ ನುಪ್ಪು ನಿಜೊ ಅತ್ತ್.
(ಬೆಸ್ತರದ್ದೂ ಬಿಲ್ಲವರದ್ದೂ ಅನ್ನ ಶಾಶ್ವತವಾದುದಲ್ಲ. ಅಂದರೆ, ಕಷ್ಟಕರವಾದುದು.)

ತುಳುನಾಡಿನ ಬೆಸ್ತರನ್ನು ಮರಕಾಲರು ಎಂದು ಕರೆಯುತ್ತಾರೆ. ಮೀನುಗಾರಿಕೆ ಇವರ ಮುಖ್ಯ ಕಸುಬು. ಕಡಲಿನಲ್ಲಿ ಹೋಗಿ ಮೀನು ಹಿಡಿಯುವುದರಿಂದ ಇವರನ್ನು ಕಡಲಾಯರು ಎಂದು ಕರೆಯುತ್ತಾರೆ. ಇವರ ಬದುಕಿನ ಅಪಾಯವನ್ನು 2ನೇ ಗಾದೆಯಲ್ಲಿ ತಿಳಿಸಲಾಗಿದೆ. ಇವರು ಪ್ರಾಮಾಣಿಕರು, ನಂಬಿಕಸ್ಥರು ಎನ್ನುವ ಭಾವನೆಯನ್ನು ಒಂದನೇ ಗಾದೆಯಲ್ಲಿ ಹೇಳಲಾಗಿದೆ.

(7) ಜೇಡರವ :

1. ಚಾಲ್ಯೆ ಆಂಡಲ ತೂವಂದೆ ನೆಯ್ಯಯೆ.
(ಜೇಡರವನಾದರೂ ನೋಡದೆ ನೇಯಲಾರ.)

2. ಚಾಲ್ಯೆ ಬೇತೆ ಆದ್ ಹಾಳಾಯೆ, ಶೆಟ್ಟಿ ಬೇತೆ ಆವಂದೆ ಹಾಳಾಯೆ.
(ಜೇಡರವನು ಪ್ರತ್ಯೇಕ ಆಗಿ ಹಾಳಾದ, ಶೆಟ್ಟಿ ಪ್ರತ್ಯೇಕ ಆಗದೆ ಹಾಳಾದ.)

3. ಚೆಲ್ಯೆ ಮಲ್ತಿನ ತಪ್ಪುಗ್ ಚಾಲ್ಯನ ಮೂಂಕು ಕೊಯ್ಪುನೆ.
(ಗಾಣಿಗ ಮಾಡಿದ ತಪ್ಪಿಗೆ ಜೇಡರವನ ಮೂಗು ಕೊಯ್ಯುವುದು.)

ತುಳುನಾಡಿನಲ್ಲಿ ಕೈಮಗ್ಗಗಳ ಮೂಲಕ ಬಟ್ಟೆ ನೇಯುತ್ತಾ ಇದ್ದವರು ಚಾಲ್ಯರು (ಜೇಡರವರು) ಇವರ ಕಸುಬನ್ನು 1 ಮತ್ತು 2ನೆಯ ಗಾದೆಗಳಲ್ಲಿ ಸ್ಪಷ್ಟಪಡಿಸಲಾಗಿದೆ. ಇವರು ಅನೇಕರು ಒಟ್ಟು ಸೇರಿ ಈ ವೃತ್ತಿಯನ್ನು ಮಾಡಿದರೆ ಕೆಲಸಕ್ಕೆ ಅನುಕೂಲವಾಗುತ್ತದೆ. ಒಬ್ಬೊಬ್ಬನಿಂದಲೇ ಈ ನೇಯುವ ಕೆಲಸವನ್ನು ಮಾಡಲು ಆಗುವುದಿಲ್ಲ. ಈ ವಿಚಾರ ಎರಡನೆಯ ಗಾದೆಯಲ್ಲಿ ಕಾಣಿಸುತ್ತದೆ.

(8) ಗಾಣಿಗ :

1. ಚೆಲ್ಯನ ಇಲ್ಲಡ್ದ ಎರು ದೆತೊನಿಯೆರೆ ಬಲ್ಲಿ
(ಗಾಣಿಗನ ಮನೆಯ ಎತ್ತನ್ನು ಕೊಳ್ಳಬಾರದು.)

2. ಚೆಲ್ಯನ ಚೆಲ್ಯೆದಿ ಲಡಾಯಿದಲೆಕೊ.
(ಗಾಣಿಗ ಗಾಣಿಗಿತ್ತಿಯರ ಜಗಳದಂತೆ.)

ತುಳುನಾಡಿನಲ್ಲಿ ತೆಂಗಿನ ಬೆಳೆ ಒಂದು ಮುಖ್ಯ ಉತ್ಪನ್ನವಾಗಿರುವುದರಿಂದ ಅದರ ಕೊಬ್ಬರಿಯಿಂದ ಗಾಣಗಳ ಮೂಲಕ ಎಣ್ಣೆಯನ್ನು ತೆಗೆಸುತ್ತಿದ್ದರು. ಈ ರೀತಿ ಗಾಣಗಳ ಮೂಲಕ ಎಣ್ಣೆ ತೆಗೆಯುವವರನ್ನು ಚೆಲ್ಯ (ಗಾಣಿಗ) ಎನ್ನುತ್ತಿದ್ದರು. ಗಾಣಿಗನು ಗಾಣಕ್ಕೆ ಎತ್ತನ್ನು ಕಟ್ಟಿ ಗಾಣವನ್ನು ತಿರುಗಿಸಿ ಕಾಯಿಯಿಂದ ಎಣ್ಣೆಯನ್ನು ತೆಗೆಯುತ್ತಿದ್ದನು. ಇಂತಹ ಎತ್ತು ಉಳುವುದಕ್ಕೆ ಬರುವುದಿಲ್ಲ. ಏಕೆಂದರೆ ಗಾಣದ ಎತ್ತಿಗೆ ವೃತ್ತಾಕಾರವಾಗಿ ಸುತ್ತಿ ಗೊತ್ತೇ ಹೊರತು, ನೊಗ, ನೇಗಿಲು ಕಟ್ಟಿ ಹೊಲದಲ್ಲಿ ಉದ್ದಕ್ಕೆ ಉಳುವ ಕೆಲಸ ಗೊತ್ತಿರುವುದಿಲ್ಲ. ಆದ್ದರಿಂದ 1ನೆಯ ಗಾದೆ ಹುಟ್ಟಿಕೊಂಡಿದೆ.

ಗಾಣಿಗ ಗಾಣಿಗಿತ್ತಿಯರ ಜಗಳದಂತೆ ಎನ್ನುವ ಗಾದೆಯು ಗಾಣಿಗರ ವಂಚನೆಯ ಒಂದು ಸ್ವರೂಪವನ್ನು ಸ್ವಾರಸ್ಯಪೂರ್ಣವಾಗಿ ತಿಳಿಸುತ್ತದೆ. ತೋರಿಕೆಯ ನಾಟಕದ ಮೂಲಕ ಗಾಣಿಗನು ಎಣ್ಣೆ ಕದಿಯುವುದನ್ನು ಈ ಗಾದೆ ವಿಡಂಬಿಸುತ್ತದೆ. ಈ ಗಾದೆಯ ಹಿನ್ನೆಲೆಯ ಘಟನೆ ಈ ರೀತಿ ಇದೆ : ಗಾಣಿಗನು ಮರದ ಗಾಣದಲ್ಲಿ

ತೆಂಗಿನಕಾಯಿಯಿಂದ ಎಣ್ಣೆ ತೆಗೆಯುತ್ತಿರುತ್ತಾನೆ. ಗಾಣಿಗಿತ್ತಿ ಆ ಗಾಣವನ್ನು ದೂಡುತ್ತಿರುತ್ತಾಳೆ. ಕಾಯಿಯ ಯಜಮಾನ ಹತ್ತಿರದಲ್ಲೇ ಕುಳಿತಿರುವುದರಿಂದ ಗಾಣಿಗನಿಗೆ ಎಣ್ಣೆ ಕದಿಯಲು ಆಗುವುದಿಲ್ಲ. ಆತ ತನ್ನಲ್ಲಿರುವ ವಸ್ತ್ರದ ತುಂಡಿನಿಂದ ಗಾಣದೊಳಗಿರುವ ಎಣ್ಣೆ ಮಿಶ್ರಿತ ಕಾಯಿಯನ್ನು ಸರಿಪಡಿಸುತ್ತಿರು ತ್ತಾನೆ. ನಡುವೆ ಆತ ಗಾಣಿಗಿತ್ತಿಯ ಜೊತೆ ಕೃತಕ ಜಗಳವನ್ನು ಆರಂಭಿಸಿ, ಆಕೆಯನ್ನು ಬೆನ್ನಟ್ಟುತ್ತಾ ತನ್ನ ಮನೆಯೊಳಗೆ ಓಡುತ್ತಾನೆ. ಮನೆಯೊಳಗೆ ಬಂದು ತಾನು ತಂದಿದ್ದ ಎಣ್ಣೆ ಮಿಶ್ರಿತ ಬಟ್ಟೆಯನ್ನು ಹಿಂಡಿ, ಎಣ್ಣೆಯನ್ನು ಸಂಗ್ರಹಿಸುತ್ತಾನೆ. ಈ ರೀತಿ ಕೆಲವು ಬಾರಿ ಜಗಳವಾಡಿ, ಕಾಯಿಯ ಯಜಮಾನನಿಗೆ ತಿಳಿಯ ದಂತೆ ಎಣ್ಣೆ ಕದಿಯುತ್ತಾನೆ.

(9) **ಅಕ್ಕಸಾಲಿಗ :**

1. **ಆಚಾರಿ ಕೆಬಿಕುತ್ಯನೆ ಬೇನೆ ಇದ್ದಿ.**
   **(ಅಕ್ಕಸಾಲಿಗ ಕಿವಿ ಚುಚ್ಚಿದರೆ ನೋವಿಲ್ಲ.)**

2. **ಆಚಾರಿನ್ ತೂನಗ ಕಪ್ಪೆಲ ಮೂಂಕು ಕುತ್ತೊಡುಂದ್ ಪನ್ಪುಂಡ್.**
   **(ಅಕ್ಕಸಾಲಿಗನನ್ನು ನೋಡುವಾಗ ಕಪ್ಪೆ ಕೂಡಾ ಮೂಗು ಚುಚ್ಚಬೇಕು ಎಂದು ಹೇಳುತ್ತದೆ.)**

3. **ಅಪ್ಪೆನ ಮೂಂಕು ತಿಡ್ದಾನಲ ಆಚಾರಿಯಗ್ ಕಂಡೊಡು.**
   **(ತಾಯಿಯ ಮೂಗುತಿಯಿಂದಲಾದರೂ ಅಕ್ಕಸಾಲಿಗನಿಗೆ ಕದಿಯಬೇಕು.)**

4. **ಬಂಗಾರ್ದ ಬೇಲೆದಾಯಗ್, ಆಯನ ತಂಗಡಿನ ಇದ್ಯನ ಅಪ್ಪೆನ ಬಂಗಾರ್‌ಡ್ದ ಆಂಡಲ ದೆಪ್ಪಂದೆ ಬಲ್ಲಿ.**
   **(ಅಕ್ಕಸಾಲಿಗನಿಗೆ ತನ್ನ ತಂಗಿಯ ಅಥವಾ ತಾಯಿಯ ಬಂಗಾರದಿಂದಲಾದರೂ ಕದಿಯದಿರಲು ಸಾಧ್ಯವಿಲ್ಲ.)**

5. **ಬಂಗಾರ್ದ ಬೇಲೆದಾಯಗ್ ಸರೊಟ್ಟು ಇತ್ತಿನ ಬಂಗಾರ್‌ಗೊಂತು ಮಂಡ್ಯೋಳ್‌ಗ್ ಊರುಡು ಬಡವೆರ್ ಏರಂದ್ ಗೊತ್ತು.**
   **(ಅಕ್ಕಸಾಲಿಗನಿಗೆ ಆಭರಣದಲ್ಲಿರುವ ಬಂಗಾರ ಎಷ್ಟೆಂದು ಗೊತ್ತು, ಮಂಡಿವಾಳನಿಗೆ ಊರಲ್ಲಿ ರುವ ಬಡವರು ಯಾರೆಂದು ಗೊತ್ತು.)**

6. **ಅಪ್ಪೆ ಅಮ್ಮೆ ಕೆಬಿ ಕುತ್ತುಂಡ ಬೇನೆ ಆಪುಂಡು.**
   **ಆಚಾರಿ ಕೆಬಿ ಕುತ್ತುಂಡ ಬೇನೆ ಆಪುಜಿ.**
   **(ತಂದೆತಾಯಿ ಕಿವಿ ತೂತು ಮಾಡಿದರೆ ನೋವು ಆಗುತ್ತದೆ. ಅಕ್ಕಸಾಲಿಗ ಕಿವಿ ತೂತು ಮಾಡಿದರೆ ನೋವು ಆಗುವುದಿಲ್ಲ.)**

ತುಳುನಾಡಿನ ಮಂದಿ ಸಾಂಪ್ರದಾಯಿಕವಾಗಿ ಚಿನ್ನದ ವ್ಯಾಮೋಹ ಉಳ್ಳವರು. ಆದ್ದರಿಂದಲೇ ಇಲ್ಲಿಯ ಹಳ್ಳಿಹಳ್ಳಿಗಳಲ್ಲಿಯೂ ಅಕ್ಕಸಾಲಿಗರು ಕಾಣಿಸಿಕೊಳ್ಳುತ್ತಾರೆ. ಅಕ್ಕಸಾಲಿಗ ಎಂದ ಮೇಲೆ ಆವನು ಚಿನ್ನವನ್ನು ಹೇಗಾದರೂ ಮಾಡಿ ಕದಿಯುತ್ತಾನೆ ಎಂಬುದು ಜನಜನಿತ ನಂಬಿಕೆ. ಕನ್ನಡದ ಗಾದೆಗಳಲ್ಲಿಯೂ ಇದನ್ನು ಕಾಣಬಹುದು. ತನ್ನ ತಾಯಿಯ ಅಥವಾ ತಂಗಿಯ ಚಿನ್ನವಾದರೂ ಅಕ್ಕಸಾಲಿಗ ಕದಿಯದೇ ಬಿಡ ಲಾರ ಎನ್ನುವ ಅಭಿಪ್ರಾಯವು 3, 4ನೇ ಗಾದೆಗಳಲ್ಲಿ ವ್ಯಕ್ತವಾಗಿದೆ. ಚಿಕ್ಕ ಮಕ್ಕಳಿಗೆ ಕಿವಿಯಲ್ಲಿ ತೂತು

ಮಾಡುವುದು, ಆಮೇಲೆ ಕಿವಿಯ ಆಭರಣಗಳನ್ನು ಧರಿಸುವುದು ಪರಂಪರಾಗತವಾಗಿ ಬಂದ ಅಭಿಪ್ರಾಯ. ಈ ಕೆಲಸವನ್ನು ಅಕ್ಕಸಾಲಿಗನೇ ಮಾಡುತ್ತಾನೆ. ಮಾಡಬೇಕಾದವನೇ ಮಾಡಿದಾಗ ನಾವು ಅದಕ್ಕೆ ಆಕ್ಷೇಪಣೆ ಹೇಳುವುದಿಲ್ಲ ಎನ್ನುವ ಅಭಿಪ್ರಾಯ 1 ಮತ್ತು 6ನೇ ಗಾದೆಗಳಲ್ಲಿ ಇದೆ. ಅಕ್ಕಸಾಲಿಗನ ಕಸುಬಿನ ಆಕರ್ಷಣೆ ಆಭರಣ ಕಾರಣಕ್ಕಾಗಿ ಎಷ್ಟು ಮಟ್ಟಿಗೆ ಇದೆ ಎನ್ನುವಾಗ 'ಕಪ್ಪೆಯೂ ತನ್ನ ಮೂಗು ಚುಚ್ಚಬೇಕು' ಎನ್ನುವ ಗಾದೆ (2) ಅತಿಶಯೋಕ್ತಿಗೆ ಉದಾಹರಣೆಯಾಗುತ್ತದೆ. ಊರಿನ ಯಾರದೇ ಆಭರಣದ ಟೊಳ್ಳು-ಗಟ್ಟಿ ತನದ ಗುಟ್ಟು ಅಕ್ಕಸಾಲಿಗ ಬಲ್ಲ ಎನ್ನುವ ಸತ್ಯವನ್ನು 5ನೇ ಗಾದೆ ಹೇಳುತ್ತದೆ.

(10) ಬಡಗಿ :

1. ಬೇಲೆ ಇದ್ಯಂದಿ ಆಚಾರಿ ಬಾಲೆದ ಪೀಂಕ್‌ನೆ ಕೆತ್ತ್‌ದೆ.
(ಕೆಲಸವಿಲ್ಲದ ಬಡಗಿ, ಮಗುವಿನ ತಿಕ ಕೆತ್ತಿದ.)

2. ಆಚಾರಿ, ಪಿಚಾರಿ, ಮರಕ್ ಮಾರಿ, ಬೆತ್ತದ ಕೊಡಿ ಬೆರಿಕ್ ಮಾರಿ, ಪಟೇಲೆ, ಸೇನವೆರ್ ಊರುಗು ಮಾರಿ.
(ಬಡಗಿ ಮರಕ್ಕೆ ಮಾರಿ, ಬೆತ್ತದ ತುದಿ ಬೆನ್ನಿಗೆ ಮಾರಿ, ಪಟೇಲರು, ಶ್ಯಾನುಭೋಗರು ಊರಿಗೆ ಮಾರಿ.)

ಬಡಗಿಗೆ ಸಂಬಂಧಿಸಿದ ಮೊದಲನೆಯ ಗಾದೆ ಬಡಗಿಯ ಕೈ ಚಾಪಲ್ಯವನ್ನು ಹಾಸ್ಯಮಯವಾಗಿ ತಿಳಿಸುತ್ತದೆ. ಕನ್ನಡದಲ್ಲೂ ಇಂತಹ ಗಾದೆಗಳಿವೆ. 2ನೆಯ ಗಾದೆ ಬಡಗಿ ವೃತ್ತಿಯನ್ನು ಅಂದರೆ ಮರದ ಕೆಲಸವನ್ನು ಕುರಿತು ಹೇಳುತ್ತದೆ.

(11) ಕುಂಬಾರ :

1. ಆಯ ಇಂಬ್ಯ ನ್ಯಾಯೊ, ಓಡಾರಿ ಮಿತ್ತ್ ಗಾಯೊ.
(ಅವನ ಇವನ ನ್ಯಾಯ, ಕುಂಬಾರನ ಮೇಲೆ ಗಾಯ.)

2. ಈ ಒರಿ ಮಾ ಓಡಾರಿಯಾ ?
(ನೀನೊಬ್ಬ ಎಂತಹ ಕುಂಬಾರನೋ?)

3. ಓಡಾರಿಗ್ ವರ್ಸೊ, ದೊಣ್ಣೆಗ್ ನಿಮಿಷೊ.
(ಕುಂಬಾರನಿಗೆ ವರ್ಷ, ದೊಣ್ಣೆಗೆ ನಿಮಿಷ.)

4. ಓಡಾರಿಡ್ ಅಡಿಯೆರೆ ಕರ ಇದ್ದಿ.
(ಕುಂಬಾರನಲ್ಲಿ ಅಡುಗೆ ಮಾಡಲು ಮಡಕೆ ಇಲ್ಲ.)

5. ಓಡಾರಿ ಕುಡು ಕೊರಿಲೆಕೊ.
(ಕುಂಬಾರ ಹುರುಳಿ ಕೊಟ್ಟ ಹಾಗೆ.)

6. ಓಡಾರಿ ಆವೆ ದೀದ್ ಊರು ಬುಡೊಡುಗೆ.
(ಕುಂಬಾರನು ಮಡಕೆ ಮಾಡುವ ಆವೆಯನ್ನು ಇಟ್ಟು ಊರು ಬಿಡಬೇಕಂತೆ.)

ಹಳ್ಳಿಗಳಲ್ಲಿ ಮಡಕೆ ಮಾಡುವ ವೃತ್ತಿ ಒಂದು ಕಾಲಕ್ಕೆ ಬಹಳ ಪ್ರಸಿದ್ಧವಾಗಿತ್ತು. ಆಧುನಿಕ ಪಾತ್ರೆಗಳು ಬರುವವರೆಗೂ ಈ ನಾಡಿನ ಹಳ್ಳಿಗಳಲ್ಲಿ ಕುಂಬಾರರ ಮಡಕೆಗಳೇ ಮನೆಗಳಲ್ಲಿ ಉಪಯೋಗವಾಗುತ್ತಿದ್ದವು. ಈಗಲೂ ಕುಂಬಾರರ ಮಡಕೆಗಳು ಕಡಿಮೆ ಪ್ರಮಾಣದಲ್ಲಿ ಇದ್ದರೂ ಸಂಪೂರ್ಣವಾಗಿ ಮರೆಯಾಗಿಲ್ಲ. ತುಳು ಗಾದೆಗಳಲ್ಲಿ ಈ ಕುಂಬಾರನ ವ್ಯಕ್ತಿಚಿತ್ರಣವನ್ನು ಕೊಡುವಾಗ ಸಾಮಾನ್ಯವಾಗಿ ಬೆಪ್ಪ, ಹೆಡ್ಡ ಎನ್ನುವಂತೆ ಚಿತ್ರಿಸಲಾಗಿದೆ. 1, 2, 5– ಈ ಗಾದೆಗಳು ಕುಂಬಾರನ ಹೆಡ್ಡುತನವನ್ನು, ಮಂದಬುದ್ಧಿಯನ್ನು ಹೇಳುತ್ತವೆ. ಕುಂಬಾರ ಹುರುಳಿ ಕೊಟ್ಟ ಹಾಗೆ ಎಂಬ ಗಾದೆಗೆ ಒಂದು ಘಟನೆಯು ಹಿನ್ನೆಲೆ ಇದೆ : ಒಬ್ಬ ಕುಂಬಾರ ಒಂದು ಕುದುರೆ ಕೊಂಡುಕೊಂಡ. ಅದಕ್ಕೆ ಚೆನ್ನಾಗಿ ಹುರುಳಿ ತಿನ್ನಿಸಿದರೆ ಅದು ಪುಷ್ಟಿಯಾಗಿ ಬೆಳೆಯುತ್ತದೆಂದು ಬಲ್ಲವರು ತಿಳಿಸಿದರು. ಆತ ಒಂದು ಗೋಣಿ ಹುರುಳಿ ತಂದು, ಒಮ್ಮೆಗೆ ಅದನ್ನು ಆ ಕುದುರೆಗೆ ತಿನ್ನಿಸಿದ. ಅದು ಅಜೀರ್ಣದಿಂದ ಸತ್ತುಹೋಯಿತು. 'ಒಳ್ಳೆಯ ಆಹಾರವೆಂದು ಯಾವುದನ್ನೂ ಮಿತಿಮೀರಿ ತಿನ್ನಬಾರದು' ಎಂಬ ಅರ್ಥವನ್ನು ಈ ಗಾದೆ ಧ್ವನಿಸುತ್ತದೆ.

ಕುಂಬಾರನು ಮಡಕೆ ಮಾಡುವ ವೃತ್ತಿಯವನಾದರೂ ಅವನಲ್ಲಿ ಅಡುಗೆ ಮಾಡಲು ಮಡಕೆ ಇಲ್ಲ ಎನ್ನುವ 4ನೇ ಗಾದೆಯು ಅವನ ಬಡತನವನ್ನು ತಿಳಿಸುತ್ತದೆ. 6ನೇ ಗಾದೆಯು ಕುಂಬಾರ ವೃತ್ತಿಗೆ ಸಂಬಂಧಿಸಿದ ಒಂದು ನಂಬಿಕೆಯನ್ನು ಹೇಳುತ್ತದೆ. ಕುಂಬಾರನು ಒಂದು ವೇಳೆ ತನ್ನ ಊರನ್ನು ಬಿಟ್ಟು ಹೋಗಬೇಕಾಗಿ ಬಂದರೂ ಅವನು ತಾನು ಮಡಕೆ ಮಾಡುವ 'ಆವೆ' ಎಂಬ ಸಾಧನವನ್ನು ಕೊಂಡು ಹೋಗಬಾರದು ಎಂಬ ನಂಬಿಕೆ ಇಲ್ಲಿದೆ.

(12) **ಸಮಗಾರ :**

1. ಆಳೆನ ನಾಲಯಿ ಸಮಗಾರನ ರಂಪಿಗೆದಲೆಕೊ.
   (ಅವಳ ನಾಲಗೆ ಸಮಗಾರನ ಕತ್ತಿಯ ಹಾಗೆ.)

2. ದಿಂಜ ಸಮಗಾರೆರ್ ಕೂಡ್ದ್ ಚರ್ಮದ ಹದತೆಟ್ಟ್ಯೆರ್.
   (ತುಂಬಾ ಸಮಗಾರರು ಸೇರಿ ಚರ್ಮದ ಹದವನ್ನು ಕೆಡಿಸಿದರು.)

ಮೆಟ್ಟು ಹೊಲಿಯುವ ವೃತ್ತಿಯವ ಸಮಗಾರ : ಚರ್ಮವನ್ನು ಕತ್ತರಿಸುವ ಅವನ ಕತ್ತಿ ಬಹಳ ಹರಿತವಾದುದು. ಜೋರು ಮಾತಿನ ಹೆಂಗಸಿನ ನಾಲಗೆಯುನ್ನು ಸಮಗಾರನ ಹರಿತವಾದ ಕತ್ತಿಗೆ ಹೋಲಿಸುವಲ್ಲಿ ಇರುವ ವ್ಯಂಗ್ಯವನ್ನು 1ನೇ ಗಾದೆಯಲ್ಲಿ ಗಮನಿಸಬಹುದು. ಚರ್ಮವನ್ನು ಹದ ಮಾಡುವುದು ಸಮಗಾರನಿಗಷ್ಟೆ ಕರಗತವಾಗಿರುವ ಕಲೆ. ಅದರಲ್ಲಿಯೂ ಅನೇಕ ಸಮಗಾರರು ಒಟ್ಟು ಸೇರಿದರೆ ಪಾದರಕ್ಷೆಗೆ ಬೇಕಾದ ಚರ್ಮದ ಹದ ಹಾಳಾಗಿ ಹೋಗಬಹುದು. ಇದನ್ನು 2ನೇ ಗಾದೆ ಹೇಳುತ್ತದೆ. ಕನ್ನಡದಲ್ಲೂ ಇಂತಹ ಗಾದೆಗಳು ಇರುತ್ತವೆ.

(13) **ಮಡಿವಾಳ :**

1. ಮಡ್ಯೋಳನ ಪುಣ ಪಿದಯಿ ದೀನಗಗೊಂತು.
   (ಮಡಿವಾಳನ ಹೆಣ ಹೊರಗೆ ಇಡುವಾಗ ಅವನ ಸ್ಥಿತಿಗತಿ ಬಯಲಾಗುತ್ತದೆ.)

2. ನಿರ್ವಾಣ ಸಾಮಿ ಕೈತಲ್ ಮಡ್ಯೋಳಗ್ ಕೆಲಸ ದಾನೆ ?
   (ಬತ್ತಲೆಯಾಗಿ ಇರುವವನಲ್ಲಿ ಮಡಿವಾಳನಿಗೆ ಏನು ಕೆಲಸ ?)

3. ಮಂಡ್ಯೋಳಗ್ ಪೋನಗ ತರೆಟ್ಟ್, ಬನ್ನಗ ಕಿದ್‌ಕಲ್‌ಡ್.
(ಮಡಿವಾಳನಿಗೆ ಹೋಗುವಾಗ ತಲೆಯಲ್ಲಿ, ಬರುವಾಗ ಕಂಕುಳಲ್ಲಿ.)

4. ಮಂಡ್ಯೋಳನ ನಾಯಿಗ್ ತೆಲಿ ಕಡಮೆ,
ಓಡಾರಿ ಮೋಡಗ್ ಬೈ ಕಡಮೆ.
(ಮಡಿವಾಳನ ನಾಯಿಗೆ ತಿಳಿ ಕಡಿಮೆ, ಕುಂಬಾರನ ಜಾನುವಾರಿಗೆ ಬೈಹುಲ್ಲು ಕಡಿಮೆ.)

5. ಮುಕ್ರಿಡ್ದ್ ಕೋರಿ ಗಟ್ಟಿಗೆ
ಮಾಗಣೆ ಸೇನವೇರೆಡ್ದ್ ಮಂಡ್ಯೋಳೆ ಗಟ್ಟಿಗೆ,
(ಮುಸಲ್ಮಾನ ಗುರುವಿಗಿಂತ ಕೋಳಿ ಗಟ್ಟಿ, ಮಾಗಣೆ ಶ್ಯಾನುಭೋಗನಿಗಿಂತ ಮಡಿವಾಳ ಗಟ್ಟಿ.)

6. ಮಂಡ್ಯೋಳನ್ ಮುಂದಲೆ ಪತ್ತಿಲೆಕೊ.
(ಮಡಿವಾಳನನ್ನು ಮೊಸಳೆ ಹಿಡಿದ ಹಾಗೆ.)

ಬಟ್ಟೆಗಳನ್ನು ಮಡಿಮಾಡುವ ಕಸುಬಿನವ ಮಡಿವಾಳ. ಅವನ ಕಸುಬಿನ ಬೇರೆ ಬೇರೆ ಮುಖಗಳನ್ನು ತುಳು ಗಾದೆಗಳಲ್ಲಿ ಅಭಿವ್ಯಕ್ತಿಸಲಾಗಿದೆ. ಮಡಿವಾಳನು ಬಟ್ಟೆಯ ಮೂಟೆಯನ್ನು ತಲೆಯಲ್ಲಿ ಹೊತ್ತುಕೊಂಡು ಹೋಗುವುದು ; ಅದರ ಮಜೂರಿಯ ಹಣವನ್ನು ಜೋಪಾನವಾಗಿ ತರುವುದು 3ನೇ ಗಾದೆಯಲ್ಲಿ ಕಾಣಿಸುತ್ತದೆ. ಗಂಜಿಯ ತಿಳಿಯನ್ನು ಮಡಿವಾಳನು ಮಡಿಮಾಡುವ ಬಟ್ಟೆಗೆ ಹಾಕುವ ಕಾರಣ ಅವನ ನಾಯಿಗೆ ಸಿಕ್ಕುವ ತಿಳಿ ಬಹಳ ಕಡಿಮೆ ಎನ್ನುವ ಗಾದೆ 4ನೆಯದು. ಮಾಗಣೆಯ ಶ್ಯಾನುಭೋಗನಿಗೆ ಊರಿನ ವ್ಯವಹಾರಗಳು ಗೊತ್ತಿರುವುದಕ್ಕಿಂತ ಹೆಚ್ಚಾಗಿ ಆ ಜನರ ಬಂಡವಾಳ ಮಡಿವಾಳನಿಗೆ ಗೊತ್ತಿರುತ್ತದೆ ಎನ್ನುವುದನ್ನು 5ನೆಯ ಗಾದೆ ಹೇಳುತ್ತದೆ. ಏಕೆಂದರೆ ಬಟ್ಟೆಗಳೇ ಮನುಷ್ಯರ ಬಂಡವಾಳವನ್ನು ತಿಳಿಸುವ ಸಾಧನಗಳು ಎಂಬ ಅಭಿಪ್ರಾಯವಿದೆ. ಏನಿದ್ದರೂ ಮಡಿವಾಳನ ಸಂಪಾದನೆ ಅವನ ಜೀವನೋಪಾಯಕ್ಕೆ ಸಾಕಾಗದೆ ಬಡತನ ಅವನಿಗೆ ಸದಾ ಕಟ್ಟಿಟ್ಟ ಬುತ್ತಿ. ಆದರೆ ಈ ಒಳಗುಟ್ಟು ಗೊತ್ತಾಗುವುದು ಅವನ ಹೆಣವನ್ನು ಹೊರಗೆ ಇಟ್ಟಾಗಲೇ ಎನ್ನುವುದನ್ನು 1ನೆಯ ಗಾದೆಯು ತಿಳಿಸುತ್ತದೆ. ಮಡಿವಾಳನನ್ನು ಮೊಸಳೆ ಹಿಡಿದ ಹಾಗೆ ಎಂಬ 6ನೆಯ ಗಾದೆಯು ಒಂದು ಹಾಸ್ಯದ ಘಟನೆಯನ್ನು ಹಿನ್ನೆಲೆಯಾಗಿ ಉಳ್ಳ, ತಮಾಷೆಗೆ ಮಾಡುವ ಚೇಷ್ಟೆ ಪ್ರಾಣಕ್ಕೆ ಕುತ್ತು ತರುವ ಸಂಗತಿಯನ್ನು ಒಳಗೊಂಡಿದೆ. ಆ ಘಟನೆ ಹೀಗಿದೆ : ಒಂದೂರಿನಲ್ಲಿ ಒಬ್ಬ ಅಗಸನಿದ್ದ. ಒಂದು ದಿನ ಆತ ಬಟ್ಟೆ ಒಗೆಯುತ್ತಿದ್ದಾಗ ತಮಾಷೆಗಾಗಿ ಸುಮ್ಮನೆ 'ಮೊಸಳೆ ಬಂತು' ಎಂದು ಕೂಗಿಕೊಂಡ. ಹತ್ತಿರವಿದ್ದವರೆಲ್ಲಾ ಆಯುಧಗಳ ಸಮೇತ ಓಡಿ ಬಂದರು. ಬಂದಾಗ ಅಲ್ಲಿ ಏನೂ ಇರಲಿಲ್ಲ. ಅವರು ಅಗಸನನ್ನು ಶಪಿಸುತ್ತಾ ಹಿಂದಿರುಗಿದರು. ಸ್ವಲ್ಪ ಹೊತ್ತಿನ ಬಳಿಕ ನಿಜವಾದ ಮೊಸಳೆಯೇ ಬಂದು ಅಗಸನ ಕಾಲನ್ನು ಹಿಡಿಯಿತು. ಆಗ 'ಮೊಸಳೆ ಬಂತು' ಎಂದು ಕೂಗಿಕೊಂಡ. ಈತ ಹಿಂದಿನಂತೆಯೇ ತಮಾಷೆಗಾಗಿ ಕೂಗಿಕೊಳ್ಳುತ್ತಿದ್ದಾನೆ ಎಂದು ಭಾವಿಸಿ, ಯಾರೂ ಆತನ ಸಹಾಯಕ್ಕೆ ಹೋಗಲಿಲ್ಲ. ಅಗಸನನ್ನು ಮೊಸಳೆ ತಿಂದುಬಿಟ್ಟಿತು.

(14) ಪೂಜಾರಿ – ಜೋಯಿಸ – ವೈದ್ಯ :

1. ದೇವೆರೆಡ್‌ದ್ ಬಿರಣಗ್ ಮಾನ, ಭೂತೊಡ್ದ್ ಪೂಜಾರಿಗ್ ಮಾನ.
(ದೇವರಿಂದ ಬ್ರಾಹ್ಮಣನಿಗೆ ಮರ್ಯಾದೆ, ಭೂತದಿಂದ ಪೂಜಾರಿಗೆ ಮರ್ಯಾದೆ.)

2. ಆಯುಷ್ಯ ದಾಂತಿನಾಯೆಗ್ ಗುರಿಕಾರ್ಮೆ,
ನಾಚಿಕೆದಾಂತಿನಾಯೆಗ್ ಪೂಜಾರಿಮೆ.
[ಆಯುಷ್ಯವಿಲ್ಲದವನಿಗೆ ಗುರಿಕಾರತನ, ನಾಚಿಕೆ ಇಲ್ಲದವನಿಗೆ ಪೂಜಾರಿತನ.]

ಭೂತಾರಾಧನೆಯಲ್ಲಿ ಪೂಜೆಯ ಕೆಲಸವನ್ನು ಮಾಡುವವನನ್ನು ಪೂಜಾರಿ ಎನ್ನುತ್ತಾರೆ. ಬಿಲ್ಲವ ಜನಾಂಗದ ಒಂದು ವರ್ಗ ಈ ಕೆಲಸವನ್ನು ಮಾಡುತ್ತಿದ್ದುದರಿಂದ ಅವರಲ್ಲಿ ಪೂಜಾರಿ ಎನ್ನುವ ಒಂದು ಉಪ ವರ್ಗವಿದೆ. 2ನೇ ಗಾದೆಯಲ್ಲಿ 'ನಾಚಿಕೆಯಿಲ್ಲದವನಿಗೆ ಪೂಜಾರಿತನ' ಎನ್ನುವ ಮಾತು ಭೂತದ ಆರಾಧನೆಯಲ್ಲಿ ಪೂಜಾರಿಯು ಗುರಿಕಾರರ ಬೈಗುಳವನ್ನು ಕೇಳಬೇಕಾದ, ಭೂತದ ಜಬರದಸ್ತಿಗೆ ಮಣಿಯಬೇಕಾದ ಅಸಹಾಯ ಕತೆಯನ್ನು ತಿಳಿಸುತ್ತದೆ.

3. ಗಳಿಗೆ ತೂಪಿನವು ಬಟ್ಟೆರೆ ಕೆಲಸ, ಗುಳಿಗೆ ಕೊರ್ಪಿನವು ಬೈದ್ಯೆರೆ ಕೆಲಸ.
[ಗಳಿಗೆ ನೋಡುವುದು ಬ್ರಾಹ್ಮಣರ ಕೆಲಸ, ಗುಳಿಗೆ ಕೊಡುವುದು ವೈದ್ಯರ ಕೆಲಸ.]

4. ಜೋಯಿಸ್‌ನ ಮಗಳ್ ಮುಂಡೆ, ಬೈದ್ಯನ ಮಗಳ್ ಕುತ್ತೆಲ್ದಿ.
[ಜೋಯಿಸನ ಮಗಳು ವಿಧವೆ, ವೈದ್ಯನ ಮಗಳು ರೋಗಿ.]

ಹಳ್ಳಿಗಳಲ್ಲಿ ಜನಪದ ವೈದ್ಯರು ರೋಗಗಳಿಗೆ ಔಷಧ ಕೊಡುತ್ತಿದ್ದರು. ಅವರ ಔಷಧಗಳಲ್ಲಿ ಗುಳಿಗೆ [ಮಾತ್ರೆ] ಮುಖ್ಯ ವಿಧವಾಗಿತ್ತು. ಇದನ್ನು 3ನೆಯ ಗಾದೆಯಲ್ಲಿ ಕಾಣಬಹುದು. ಆದರೆ ವೈದ್ಯನ ಮಗಳೇ ರೋಗಿ, ಮುಹೂರ್ತ ನೋಡುವ ಜೋಯಿಸನ ಮಗಳೇ ವಿಧವೆ ಎಂಬ 4ನೆಯ ಗಾದೆಯು ಬದುಕಿನ ವಿರೋಧಾಭಾಸವನ್ನು ತಿಳಿಸುತ್ತದೆ. ಕನ್ನಡದಲ್ಲೂ ಇದೇ ರೀತಿಯ ಗಾದೆಗಳನ್ನು ನೋಡಬಹುದು.

ಕಮ್ಮಾರ, ಕರಣಿಕ ಮುಂತಾದ ವೃತ್ತಿಯವರಿಗೆ ಸಂಬಂಧಿಸಿದ ತುಳು ಗಾದೆಗಳು ಇವೆ.

15. ಬ್ಯಾರಿ :

1. ಬ್ಯಾರಿ ತಲೆಕ್ಕ್ ನೀರ್ ಮುಯ್ತಿಲೆಕೊ.
[ಬ್ಯಾರಿಯ ತಲೆಗೆ ನೀರು ಹೊಯ್ದ ಹಾಗೆ.]

2. ಬ್ಯಾರಿ ಸಾಂಕಿ ನಾಯಿ ಟೊಪ್ಪಿ ದೀಡ್‌ನಾಯನ ಒಟ್ಟ್‌ಗ್ ಪೋಪುಂಡು.
[ಬ್ಯಾರಿ ಸಾಕಿದ ನಾಯಿ ಟೊಪ್ಪಿ ಇಟ್ಟವನ ಜೊತೆಗೆ ಹೋಗುತ್ತದೆ.]

3. ಬ್ಯಾರಿ ಸೋತ್‌ಂಡ ವಾಸನೆ ; ಬ್ರಾಣೆ ಸೋತ್‌ಂಡ ಪರಿಮಳೊ.
[ಬ್ಯಾರಿ ಸೋತರೆ ವಾಸನೆ, ಬ್ರಾಹ್ಮಣ ಸೋತರೆ ಪರಿಮಳ.]

4. ಬ್ಯಾರಿ ಭೂತೊ ಕಟ್ಟಿಲೆಕೊ.
[ಬ್ಯಾರಿ ಭೂತ ಕಟ್ಟಿದ ಹಾಗೆ.]

5. ಲಾಭೊ ಇದ್ಯಂದೆ ಬ್ಯಾರಿ ಬೊಳ್ಳೊಗ್ ಪೋವಯೆ.
[ಲಾಭ ಇಲ್ಲದೆ ಬ್ಯಾರಿ ಪ್ರವಾಹದಲ್ಲಿ ಹೋಗಲಾರ.]

ತುಳುನಾಡಿನಲ್ಲಿ ಮುಸಲ್ಮಾನರು ತಮ್ಮ ವಿಭಿನ್ನ ಧರ್ಮ ಸಂಸ್ಕೃತಿಯ ಕಾರಣದಿಂದ ಇಲ್ಲಿನ ಸಮಾಜದಲ್ಲಿ ತಮ್ಮ ಪ್ರತ್ಯೇಕತೆಯನ್ನು ಉಳಿಸಿಕೊಂಡು ಬಂದಿದ್ದಾರೆ. ವ್ಯಾಪಾರ ಅವರ ಪ್ರಧಾನ ಕಸುಬು. ಬೇಹಾರಿ [ವ್ಯಾಪಾರಿ], ಬ್ಯಾರಿ ; ಸಾಮಾನ್ಯವಾಗಿ ತುಳುನಾಡಿನ ಎಲ್ಲಾ ಮುಸಲ್ಮಾನರನ್ನು 'ಬ್ಯಾರಿಗಳು' ಎಂದೇ ಕರೆಯುತ್ತಾರೆ. ಈ ಬ್ಯಾರಿಗಳು ಸಾಮಾನ್ಯವಾಗಿ ತಮ್ಮ ತಲೆಯನ್ನು ಸಂಪೂರ್ಣವಾಗಿ ಬೋಳಿಸಿಕೊಂಡಿರುತ್ತಾರೆ. ಇದು ಇತರ ಸಂಸ್ಕೃತಿಯವರಿಗೆ ತಮಾಷೆಯಾಗಿ ಕಾಣಿಸುತ್ತದೆ. ಆದ್ದರಿಂದಲೇ 'ಬ್ಯಾರಿಯ ತಲೆಗೆ ನೀರು ಹೊಯ್ದಂತೆ' ಎನ್ನುವ 1ನೇ ಗಾದೆ ಹುಟ್ಟಿಕೊಂಡಿರಬೇಕು. ಬ್ಯಾರಿಯ ಬೋಳು ತಲೆಗೆ ನೀರು ಹೊಯ್ದರೆ ತಲೆಯಲ್ಲಿ ಏನೂ ಉಳಿಯುವುದಿಲ್ಲ. ನೀರೆಲ್ಲವೂ ಕೆಳಕ್ಕೆ ಇಳಿಯುತ್ತದೆ. ಕೆಲವೊಂದು ಬಾರಿ ಈ ಬ್ಯಾರಿಗಳು ತಮ್ಮ ಬೋಳು ತಲೆಯ ಮೇಲೆ ತಮ್ಮದೇ ಸಂಸ್ಕೃತಿಯ ಉರುಟು ಟೊಪ್ಪಿಗಳನ್ನು ಇಟ್ಟುಕೊಳ್ಳುತ್ತಾರೆ. ಈ ಟೊಪ್ಪಿ ಧರಿಸಿದವರೆಲ್ಲಾ ಬ್ಯಾರಿಗಳೇ ಎನ್ನುವಷ್ಟು ಮಟ್ಟಿಗೆ ಅದಕ್ಕೂ ಅವರಿಗೂ ಸಂಬಂಧವಿದೆ. ಇದನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಎರಡನೇ ಗಾದೆ ನವುರಾಗಿ ಅವರನ್ನು ಹಾಸ್ಯ ಮಾಡುತ್ತದೆ. ಬ್ಯಾರಿಗಳ ಪ್ರಧಾನ ಕಸುಬು ವ್ಯಾಪಾರ. ಅವನು ತನ್ನ ಬದುಕಿನಲ್ಲಿ ಎಲ್ಲವನ್ನು ಕಳೆದುಕೊಂಡರೆ ಕೊನೆಗೆ ಒಣ ಮೀನಿನ ವ್ಯಾಪಾರವನ್ನು ಮಾಡುತ್ತಾನೆ. ಒಣ ಮೀನು ವ್ಯಾಪಾರ ಬಹಳ ಬಡವ ಬ್ಯಾರಿಗಳು ಮಾತ್ರ ಮಾಡುವುದು ಎನ್ನುವ ರೂಢಿ ಇದೆ. ಈ ಒಣ ಮೀನು ವಾಸನೆ ಬರುವ ಕಾರಣ 'ಬ್ಯಾರಿ ಸೋತರೆ ವಾಸನೆ' ಎನ್ನುವ 3ನೆಯ ಗಾದೆ ಜನಿಸಿದೆ. ಬ್ಯಾರಿ ಯಾವುದೇ ವ್ಯಾಪಾರ ಮಾಡಲಿ, ಲಾಭದ ಅಂಶ ಜಾಸ್ತಿಯಾಗಿ ಇಟ್ಟುಕೊಂಡಿರುತ್ತಾನೆ ಎನ್ನುವುದು ಸಾಮಾನ್ಯ ಜನರ ನಂಬಿಕೆ. ಆದ್ದರಿಂದ 5ನೆಯ ಗಾದೆ ಕಾಣಿಸುತ್ತದೆ. ಇದಕ್ಕೆ ಒಂದು ಹಿನ್ನೆಲೆ ಇದೆ. ತುಳುನಾಡಿನ ಹೊಳೆ ತೋಡುಗಳಲ್ಲಿ ಮಳೆಗಾಲದಲ್ಲಿ ನೀರು ಉಕ್ಕೇರಿ ಪ್ರವಾಹ ಬರುತ್ತದೆ. ಆಗ ಹೊಳೆಯ ಅಕ್ಕಪಕ್ಕದಲ್ಲಿದ್ದ ತೆಂಗಿನಮರದಿಂದ ತೆಂಗಿನಕಾಯಿಗಳು ಪ್ರವಾಹದ ನೀರಿಗೆ ಬೀಳುತ್ತವೆ. ಧರ್ಮಾರ್ಥವಾಗಿ ಸಿಕ್ಕುವ ಈ ತೆಂಗಿನಕಾಯಿಗಳ ಲಾಭದ ಆಸೆಯಿಂದ ಬ್ಯಾರಿಯು ಪ್ರಾಣದ ಆಸೆಯನ್ನು ತೊರೆದು ಪ್ರವಾಹದಲ್ಲಿ ಧುಮುಕುತ್ತಾನೆ. ಬ್ಯಾರಿಯ ಮುಸ್ಲಿಂ ಸಂಸ್ಕೃತಿಯು ಭೂತಕಟ್ಟುವ ಸಂಸ್ಕೃತಿಗಿಂತ ಬಹಳ ಭಿನ್ನ. ಅದರ ಆಚಾರ ವಿಚಾರಗಳು ಅವನಿಗೆ ಗೊತ್ತಿರುವುದಿಲ್ಲ. ಆದ್ದರಿಂದ ಆತ ಭೂತ ಕಟ್ಟಿದರೆ ಅದು ಹಾಸ್ಯಾಸ್ಪದವಾಗುತ್ತದೆ. ಇದನ್ನು 4ನೆಯ ಗಾದೆಯಲ್ಲಿ ವ್ಯಂಗ್ಯವಾಗಿ ಸೂಚಿಸಲಾಗಿದೆ. ತನಗೆ ಪರಿಚಿತವಲ್ಲದ ಕೆಲಸವನ್ನು ಯಾರಾದರೂ ಮಾಡಿ ನಗೆಪಾಟಲಿಗೆ ಗುರಿಯಾದರೆ ಈ ಗಾದೆಯನ್ನು ಬಳಸುತ್ತಾರೆ.

(16) **ಹೊಲೆಯ :**

1. ಒಕ್ಕೆಲಾಯೆ ಮಲ್ತಿನವು ದಂಡೊಗು, ಬ್ರಾಣೆ ಮಲ್ತಿನವು ಪಿಂಡೊಗು, ಮನ್ಸೆ ಮಲ್ತಿನವು ಹೆಂಡೊಗು.

   [ಬಂಟ ಮಾಡಿದ್ದು ದಂಡಕ್ಕೆ, ಭಟ್ಟ ಮಾಡಿದ್ದು ಪಿಂಡಕ್ಕೆ, ಹೊಲೆಯ ಮಾಡಿದ್ದು ಹೆಂಡಕ್ಕೆ.]

2. ಕಪ್ಪು ಬ್ರಾಣನ್ ನಂಬಡ, ಬೊಳ್ದು ದಿಕ್ಕನ್ ನಂಬಡ.

   [ಕಪ್ಪು ಬ್ರಾಹ್ಮಣನನ್ನು ನಂಬಬೇಡ, ಬಿಳಿಯ ಹೊಲೆಯನನ್ನು ನಂಬಬೇಡ.]

3. ಮನ್ಸಗ್ ಮುಟ್ಪಾಳೆದ ಪಸೆ ಆಜಿಬೆಟ್ಟಿಗೆ ನೆಂಪಿಜ್ಜಿ.

   [ಹೊಲೆಯನಿಗೆ ಮುಟ್ಟಾಳೆಯ ಪಸೆ, ಒಣಗಿದ ಕೂಡಲೆ ಜ್ಞಾಪಕ ಇರುವುದಿಲ್ಲ.]

4. ಕಳಿ ಪರ್ಪಿ ಮನ್ಸನ್ ನಂಬೊಲಿ, ಕಳು ಪನ್ಪಿ ಬ್ರಾಣನ್ ನಂಬೆರೆ ಬಲ್ಲಿ.
[ಕಳ್ಳು ಕುಡಿಯುವ ಹೊಲೆಯನನ್ನು ನಂಬಬಹುದು, ಸುಳ್ಳು ಹೇಳುವ ಬ್ರಾಹ್ಮಣನನ್ನು ನಂಬ ಬಾರದು.]

5. ಮಾದಿಗನ ಇಲ್ಲಲ್ ಸೀಯನೊ ಮಲ್ತೆಂಡ ಬ್ರಾಣಗ್ ದಾನೆ ?
[ಮಾದಿಗನ ಮನೆಯಲ್ಲಿ ಪಾಯಸ ಮಾಡಿದರೆ ಬ್ರಾಹ್ಮಣನಿಗೇನು ?]

6. ಮಾದಿಗನ ಇಲ್ಲಡ್ ಮದಿಮ್ಮೆ ಆಂಡ ದಾನೆ ? ಮುಂಜಿ ಆಂಡ ದಾನೆ ?
[ಮಾದಿಗನ ಮನೆಯಲ್ಲಿ ಮದುವೆ ಆದರೆ ಏನು ? ಮುಂಜಿ ಆದರೆ ಏನು ?]

ತುಳುನಾಡಿನ ಸಮಾಜದಲ್ಲಿ ಹೊಲೆಯರದ್ದು ಒಂದು ಮುಖ್ಯ ವರ್ಗ. ಇತರ ಕಡೆಗಳ ಹಾಗೆಯೇ ಇಲ್ಲಿಯೂ ಇಂದಿಗೂ ಅವರ ಸ್ಥಿತಿ ಹೆಚ್ಚು ಸುಧಾರಿಸಿಲ್ಲ. ಹೊಲಗಳಲ್ಲಿ ಮತ್ತು ಇತರ ಕಡೆಗಳಲ್ಲಿ ಕೂಲಿ ಕೆಲಸಮಾಡಿ ಜೀವನ ಸಾಗಿಸುವ ಹೊಲೆಯರು ತುಳುನಾಡಿನ ಪ್ರಾಚೀನ ಜನಾಂಗದಲ್ಲಿ ಒಂದು ಎಂದು ಭಾವಿಸ ಲಾಗಿದೆ. ಅವರಲ್ಲಿಯೂ ಮೇರ, ಮನ್ಸ, ಕೊರಗ, ಮಾದಿಗ ಇತ್ಯಾದಿ ಅನೇಕ ಒಳಪಂಗಡಗಳಿವೆ. ಅವರ ಸಂಪಾದನೆ ಎಲ್ಲಾ ಬಹುಪಾಲು ಹೆಂಡಕ್ಕೇ ಸಂದಾಯವಾಗುತ್ತದೆ. ಈ ವಾಸ್ತವಿಕ ಸಂಗತಿಯನ್ನು 1ನೆಯ ತುಳು ಗಾದೆ ತಿಳಿಸುತ್ತದೆ. ಅಪೂರ್ವವಾದ ಯಾವುದನ್ನೇ ಆಗಲಿ ಸಂಶಯದಿಂದ ನೋಡುವ, ಅಪಾಯ ಎಂದು ಪರಿಗಣಿಸುವ ಪ್ರವೃತ್ತಿಯನ್ನು 2ನೇ ಗಾದೆಯಲ್ಲಿ ಕಾಣಬಹುದು. ಸಾಮಾನ್ಯವಾಗಿ ಹೊಲೆಯರ ಬಣ್ಣ ಕಪ್ಪು. ಒಂದು ವೇಳೆ ಎಲ್ಲಿಯಾದರೂ ಬಿಳಿಯ ಹೊಲೆಯ ಕಾಣಿಸಿದರೂ ಈ ಅಪೂರ್ವತೆಯನ್ನೇ ಸಂಶಯ ದಿಂದ ನೋಡಿ ಅವನನ್ನು ನಂಬದೆ ಇರುವ ರೀತಿಯನ್ನು ಇಲ್ಲಿ ಗಮನಿಸಬಹುದು. ಹೊಲೆಯನಿಗೆ ಕೃತಜ್ಞತೆ ಕಡಿಮೆ ಎನ್ನುವ ಭಾವನೆಯನ್ನು 3ನೆಯ ಗಾದೆ ವಿಡಂಬಿಸುತ್ತದೆ. ಮಾದಿಗನ ಬಗ್ಗೆ ಇತರ ವರ್ಗದವರ ತಿರಸ್ಕಾರ ಭಾವನೆಯನ್ನು 5, 6ನೆಯ ಗಾದೆಗಳಲ್ಲಿ ಕಾಣಬಹುದು. ಅಸ್ಪೃಶ್ಯತೆ ಮತ್ತು ಜಾತಿ ಪದ್ಧತಿಗಳ ಬಿಗಿಯು ಇನ್ನೂ ಸಡಿಲವಾಗದೆ ಇರುವ ತುಳುನಾಡಿನ ಸಮಾಜದಲ್ಲಿ ಹೊಲೆಯರ ಬಗೆಗಿನ ಗಾದೆಗಳು ಈಗಲೂ ಬಹುಪಾಲು ಹಿಂದಿನಂತೆಯೇ ಪ್ರಯೋಗವಾಗುತ್ತಿವೆ.

## III. ಸಸ್ಯಗಳು – ಸಸ್ಯಗಳ ಉತ್ಪನ್ನಗಳು :

ತುಳುನಾಡಿನಲ್ಲಿ ಭತ್ತದ ಬೇಸಾಯವನ್ನು ಹೊರತುಪಡಿಸಿ ಇನ್ನು ಕೆಲವು ವಿಧದ ಸಸ್ಯಗಳನ್ನು ಬೆಳೆಸು ತ್ತಾರೆ. ಅನೇಕ ಗಿಡಮರಗಳು ಯಾವ ಶ್ರಮವೂ ಇಲ್ಲದೆ ತಮ್ಮಷ್ಟಕ್ಕೆ ಬೆಳೆಯುತ್ತವೆ. ಅವುಗಳ ಉತ್ಪನ್ನ ಗಳು ಇಲ್ಲಿನ ಜನರಿಗೆ ಅನೇಕ ರೀತಿಯಲ್ಲಿ ಉಪಯೋಗವಾಗುತ್ತವೆ. ಹಲಸು, ಬಾಳೆ, ಅಡಿಕೆ, ಅಂಬಟೆ, ಕಬ್ಬು, ತಾಳೆಮರ, ಹುರುಳಿ, ಹಾಗಲಕಾಯಿ, ಹೀರೆಕಾಯಿ, ಕುದನೆ, ಮಾವು, ಬದನೆ, ಕುಂಬಳಕಾಯಿ, ಮೆಣಸು, ಕೆಸು, ಮುಳ್ಳುಸೌತೆ, ತೆಂಗು, ಬಿದಿರು, ಚಗಟೆ, ಕಡ್ಲೆ, ಮಲ್ಲಿಗೆ, ತೊಂಡೆಕಾಯಿ, ಹುಲ್ಲು, ತಾವರೆ, ಉದ್ದು, ಹುಳಿ ಗೇರು, ಅಶ್ವತ್ಥ, ನುಗ್ಗೆ, ಹರಿವೆ, ಮುಳಿಹುಲ್ಲು ಮುಂತಾದ ಸಸ್ಯ ವೈವಿಧ್ಯಗಳು ತುಳು ಗಾದೆಗಳಲ್ಲಿ ಕಾಣಿಸಿ ಕೊಳ್ಳುತ್ತವೆ. ಕೆಲವು ಸಸ್ಯಗಳು ಗಾದೆಗಳಲ್ಲಿ ನೇರವಾಗಿ ತಮ್ಮ ಸ್ವರೂಪ ತೋರಿಸಿದರೆ, ಇನ್ನು ಕೆಲವು ಸಸ್ಯ ಗಳು ಉಪಮೆ, ರೂಪಕಗಳಾಗಿ ಬದುಕಿನ ಯಾವುದೇ ಸಂಗತಿಗಳನ್ನು ಸೂಚಿಸುತ್ತವೆ.

ಸಸ್ಯಗಳ ಚಿತ್ರಣವಿರುವ ಕೆಲವು ತುಳು ಗಾದೆಗಳನ್ನು ಇಲ್ಲಿ ಗಮನಿಸಬಹುದು. :

1. ಹುರುಳಿ :

1. ಕುದುರೆಡ್ದ್ ದುಂಬು ಕುಡು ದಾಯೆಗ್ ?
[ಕುದುರೆಗಿಂತ ಮೊದಲು ಹುರುಳಿ ಯಾಕೆ ?]

2. ಕುಡಂತ್ತ ಕಂಡೊಡೆ ಪೋನಗ ಕಿರುಬುಂಡು, ಕುಡು ತಿಂದ್ಂಡ ದಾನೆ ಆವು?
[ಹುರುಳಿಯ ಹೊಲದಲ್ಲಿ ಹೋಗುವಾಗ ತುರಿಸುತ್ತದೆ, ಹುರುಳಿ ತಿಂದರೆ ಏನಾಗಬಹುದು ?]

3. ಕುಡು ತಿಂದಿ ಆಸೆಗ್ ಮರಾಯಿ ನಕ್ಕುನೆ.
[ಹುರುಳಿ ತಿಂದ ಆಸೆಗೆ ಮೊರವನ್ನು ನೆಕ್ಕುವುದು.]

2. ಕುಂಬಳಕಾಯಿ :

1. ಕುಂಬುಡೊ ಕಳ್ವೆಂದ್ ಪನ್ನಗ
ಪುಗೆಲ್ ಮುಟ್ಟ್‌ದ್ ತೂಯಿಲೆಕೊ.
[ಕುಂಬಳಕಾಯಿ ಕಳ್ಳ ಎಂದರೆ, ಹೆಗಲು ಮುಟ್ಟಿ ನೋಡಿದಂತೆ.]

2. ಕುರಿಯೆಲ್ ಕುಂಬುಡೊಗ್ ಚೆಟ್ಟೆಲ್ ತಾರಾಯಿ.
[ಕೊಳೆತ ಕುಂಬಳಕಾಯಿಗೆ ಹಾಳಾದ ತೆಂಗಿನಕಾಯಿ.]

3. ಕುಂಬುಡೊ ಬಿತ್ತ್ ಪಾಡ್‌ನ ತೌತ್ತೆ ಆಪುಜಿ.
[ಕುಂಬಳಕಾಯಿಯ ಬೀಜ ಹಾಕಿದರೆ ಸೌತೆಕಾಯಿ ಬೆಳೆಯುವುದಿಲ್ಲ.]

3. ಹಾಗಲಕಾಯಿ :

1. ಕಂಚೋಲು ಇತ್ತ್‌ನ ಎಂಚಲ ಉಣೊಲಿ.
[ಹಾಗಲಕಾಯಿ ಇದ್ದರೆ ಹೇಗೂ ಊಟ ಮಾಡಬಹುದು.]

2. ಕಂಚೋಲು ಬಿತ್ತ್‌ಪಾಡ್ದ್ ದಾರಪೀರೆ ಕೊಯ್ಯೆರೆ ಆಪುಜಿ.
[ಹಾಗಲಕಾಯಿ ಬೀಜ ಹಾಕಿ ಹೀರೆಕಾಯಿ ಕೊಯ್ಯಲಿಕ್ಕಾಗುವುದಿಲ್ಲ.]

ಕೆಟ್ಟ ಕಾರ್ಯದಿಂದ ಒಳ್ಳೆಯ ಫಲ ಸಿಕ್ಕುವುದಿಲ್ಲವೆಂದು ಈ ಗಾದೆಯ ಅರ್ಥ.

3. ಕಂಚೋಲು ಕಯ್ಪೆಂದ್ ದಕ್ಕಿಯೆರೆ ಬಲ್ಲಿ.
ಮಾಮಿ ನೆರಿಯಲ್ಂದ್ ಬಲ್ಪಿಯೆರೆ ಬಲ್ಲಿ.
[ಹಾಗಲಕಾಯಿ ಕಹಿಯೆಂದು ಬಿಸಾಡಬಾರದು, ಅತ್ತೆ ಬಯ್ದಳೆಂದು ಓಡಿ ಹೋಗಬಾರದು.]

ಈ ಗಾದೆಗೆ ಇನ್ನೊಂದು ಪಾಠಾಂತರವು ಇದೆ :

ಕಂಚೋಲು ಕೈಪೆಂದ್ ದಕ್ಕಡ, ಕಂಡ್ಯನೆ ತೊರಿತ್ತೆಂದ್ ಪೋವಡ.
[ಹಾಗಲಕಾಯಿ ಕಹಿಯೆಂದು ಎಸೆಯಬೇಡ, ಗಂಡ ತುಳಿದನು ಎಂದು ಬಿಟ್ಟು ಹೋಗಬೇಡ.]

4. ಉರೆ ಕೊಡಿತ್ತಿನ ಕಂಜೋಲಂ ಎಡ್ಡೆ, ಹಾದರೊಗು ಪುಟ್ಟಿನ ಬಾಲೆ ಎಡ್ಡೆ.
(ತನ್ನಷ್ಟಕ್ಕೆ ಮೊಳಕೆ ಬಂದ ಹಾಗಲಕಾಯಿ ಒಳ್ಳೆಯದು, ಹಾದರಕ್ಕೆ ಹುಟ್ಟಿದ ಮಗು ಒಳ್ಳೆಯದು.)

4. ಉದ್ದು :

1. ಉರ್ದ್ ರೋಗೊಗತ್ತ್, ಇತ್ತಿ ಊರುಡು ಪಗೆ ಅತ್ತ್.
(ಉದ್ದು ರೋಗಕ್ಕಲ್ಲ, ಇದ್ದ ಊರಿನಲ್ಲಿ ಹಗೆ ಸಲ್ಲ.)

2. ಉರ್ದುಡು ಬೊಳ್ಳಂತಿನವು ಇದ್ದಿ, ಒಕ್ಕಲ್ಮೆಡ್ ಎಡ್ಡಂತಿನವು ಇದ್ದಿ.
(ಉದ್ದಿನಲ್ಲಿ ಬೆಳ್ಳಗಿನದ್ದು ಇಲ್ಲ, ಬಂಟರಲ್ಲಿ ಒಳ್ಳೆಯವರು ಇಲ್ಲ.)

5. ತಾಳೆಮರ-ತೆಂಗಿನಮರ-ಬಾಳೆ :

1. ತಾರಿಗ್ಲ ತಾರೆಗ್ಲ ಒಂಜೇ ತಳೆನೋ ?
(ತಾಳೆಮರಕ್ಕೂ, ತೆಂಗಿನ ಮರಕ್ಕೂ ಒಂದೇ ತಳಿಯೋ ?)

2. ತಾರಿದ ಮುಂದೆಲ್‌ಡ್ ಪೇರ್ ಪರಿಲೆಕೊ.
(ತಾಳೆ ಮರದ ಬುಡದಲ್ಲಿ ಹಾಲು ಕುಡಿದಂತೆ).

3. ಆಣ್ ತಾರದೆಲೆಕೊ, ಪೊಣ್ಣು ಬಾರೆದಲೆಕೊ.
(ಗಂಡು ತೆಂಗಿನಮರದಂತೆ, ಹೆಣ್ಣು ಬಾಳೆ ಗಿಡದಂತೆ.)

4. ತೀರ್‌ದತ್ತ್, ಬಣ್ಣಂಗಾಯಿದ ಆಸೆಗ್.
(ಸಾಧ್ಯವಿದ್ದು ಅಲ್ಲ, ಎಳೇ ತೆಂಗಿನಕಾಯಿ ಆಸೆಗೆ.)
ಜೀತದಾಳು ತನ್ನ ದೇಹ ನಿಶ್ಯಕ್ತವಾಗಿದ್ದರೂ ಕೂಲಿಗಾಗಿ ದುಡಿಯುತ್ತಾನೆ ಎಂಬುದು ಈ ಗಾದೆಯ ಅರ್ಥ.

5. ಬೊಂಡ ಪರಿಯೆರೆ ಆವು.
ತಾರಾಯಿ ಕಜಿಪ್ಪುಗು ಆವು
ಬನ್ನಂಗಾಯಿ ಒಯಿಕ್ ಆವು ?
(ಎಳನೀರು ಕುಡಿಯಲಿಕ್ಕೆ ಆದೀತು, ತೆಂಗಿನಕಾಯಿ ಪದಾರ್ಥಕ್ಕೆ ಆದೀತು, ಎಳೆಯ ತೆಂಗಿನ ಕಾಯಿ ಯಾವುದಕ್ಕೆ ಆಗಬಹುದು ?)

6. ನಾಯಿಗ್ ಚೆಪ್ಪುದ ತಾರಾಯಿ ತಿಕ್ಕಿಲೆಕೊ.
(ನಾಯಿಗೆ ಸಿಪ್ಪೆಯ ತೆಂಗಿನಕಾಯಿ ಸಿಕ್ಕಿದ ಹಾಗೆ.)

7. ಕಳಿ ಪರಿ ಮಂಗಲೆಕೊ.
(ಕಳ್ಳು ಕುಡಿದ ಮಂಗನಂತೆ.)

6. ಅಂಬಟೆ–ಮಾವು :

1. ಆಣ್ ಬಾಲೆಲ್ ಇದ್ಯಂದ್‌ನ ಅಪ್ಪೆ ಅಂಬಡೆದ ಮರಕ್ಕೆ ಅನ್ನದಳ್.
(ಗಂಡು ಮಕ್ಕಳಿಲ್ಲದ ತಾಯಿ ಅಂಬಟೆಯ ಮರವನ್ನು ನೋಡಿದಳು.)
ಶಕ್ತಿವಂತರ ಸಹಾಯವಿಲ್ಲದಿದ್ದರೆ, ನಿಶ್ಶಕ್ತರನ್ನು ಆಶ್ರಯಿಸುವುದು ಎಂದು ಈ ಗಾದೆಯ ಅರ್ಥ.

2. ಅಂಬಡೆದ ಮರಕ್ಕ್ ಅಮೆ ತಪ್ಪುನೇಂದ್ಲ್ ಇದ್ದಿ.
(ಅಂಬಟೆಯ ಮರಕ್ಕೆ ಪ್ರಸೂತಿ ಸೂತಕ ತಪ್ಪುವುದಿಲ್ಲ.)
ಅದರಲ್ಲಿ ಹೆಚ್ಚಾಗಿ ಹೂ ಕಾಯಿ ಆಗುತ್ತಿರುತ್ತದೆ ಅಥವಾ ಎಲೆ ಉದುರುತ್ತಿರುತ್ತದೆ ಎಂದು ಈ ಗಾದೆಯ ಅರ್ಥ.

3. ದೂರೊದ ಕುಕ್ಕುಡ್ದ್ ಮುಟ್ಟುದ ಅಂಬಟೆ ಎಡ್ಡೆ.
(ದೂರದ ಮಾವಿಗಿಂತ ಹತ್ತಿರದ ಅಂಬಟೆ ಒಳ್ಳೆಯದು.)
‘ದೂರದ ಬೆಟ್ಟ ನುಣ್ಣಗೆ’ ಎಂಬ ಮಾತಿನಂತೆ.

7. ಕೆಸು-ಚಗಟೆ :

1. ಕೋಡೆ ಬತ್ತಿನ ಬರ್ಸೊಗ್ ಇನಿ ಕೊಡಿತ್ತ್‌ನ ಚೇವು ತಜಂಕದಲೆಕೊ.
(ನಿನ್ನೆ ಬಂದ ಮಳೆಗೆ ಇಂದು ಮೊಳೆತ ಕೆಸು ಚಗಟೆಗಳ ಹಾಗೆ.)

2. ತಜಂಕ್ ಪೋದ್ ತೇವುಡ ದೂರು ಪಂಡಿ ಗಾದೆ.
(ಚಗಟೆ ಹೋಗಿ ಕೆಸುವಿನೊಡನೆ ದೂರು ಹೇಳಿದಂತೆ.)

3. ಬಡವೆ ಆದ್ ಪುಟ್ಟುಯೆರೆ ಆವಂದ್.
ತಜಂಕ್ ಆದ್ ಕೊಡಿಪ್ಪೆರೆ ಆವಂದ್.
(ಬಡವನಾಗಿ ಹುಟ್ಟಬಾರದು, ಚಗಟೆ ಆಗಿ ಮೊಳೆಯಬಾರದು.)
ಚಗಟೆಯನ್ನು ಎಲ್ಲರೂ ತುಳಿದು ಹಾಳು ಮಾಡುತ್ತಾರೆ.

4. ಚೇವುದ ಕಾರ್‌ಡ್ ಕಂಜಿ ಕಟ್ಟ್‌ದ್ ಬತ್ತಿಲೆಕೊ.
(ಕೆಸುವಿನ ಗಿಡದಲ್ಲಿ ಕರು ಕಟ್ಟಿ ಬಂದ ಹಾಗೆ.)
ಬಹಳ ಅವಸರದಲ್ಲಿ ಒಂದು ಕೆಲಸವನ್ನು ಮಾಡಲು ಬರುವುದಕ್ಕೆ ಈ ಗಾದೆಯನ್ನು ಬಳಸುತ್ತಾರೆ.

8. ಹಲಸು :

1. ತುಳುವ ಪೆಲಕ್ಕಯಿದ ಪಚ್ಚಿಲ್ ಎಡ್ಡೆ, ಬರಿಕ್ಕ ಪೆಲಕ್ಕಯಿದ ರೆಚ್ಚೆ ಎಡ್ಡೆ.
(ತುಳುವ ಹಲಸಿನ ಸೊಳೆ ಒಳ್ಳೆಯದು, ಬರಿಕ್ಕ ಹಲಸಿನ ರಚ್ಚೆ ಒಳ್ಳೆಯದು.)

2. ಆಟಿ ಪೆಲಕ್ಕಾಯಿ ನಂಜಿ ಮಗಾ, ಅಮ್ಮೆ ಬತ್ತೆನಾ ತೂಲ ಮಗಾ.
(ಆಷಾಢ ಮಾಸದಲ್ಲಿ ಹಲಸಿನ ಹಣ್ಣು ತಿಂದರೆ ಹೊಟ್ಟೆ ಹಳಸಿ ಭೇದಿಯಾದೀತು ಮಗೂ ; ಆಗೋ ; ನಿನ್ನ ತಂದೆ ಬಂದನೋ ನೋಡು ಮಗೂ.)

ತಾಯೊಬ್ಬಳು ಮಗುವಿಗೆ ಹಲಸಿನ ಹಣ್ಣು ಕೊಡುವ ಇಚ್ಛೆಯಿಲ್ಲದೇ ಮಗುವಿನ ಚಿತ್ತವನ್ನು ಬೇರೆ ಕಡೆಗೆ ಸೆಳೆಯುತ್ತ, ಆ ನಡುವೆ ಮಗುವಿಗೆ ಅರಿವಿಲ್ಲದಂತೆ ಹಲಸಿನ ಹಣ್ಣನ್ನು ತಾನೊಬ್ಬಳೇ ಮುಕ್ಕಿದಳೆನ್ನುವ ವಿನೋದಕ್ಕೆ ಈ ಗಾದೆ ಅನ್ವಯ;

3. ಆಳ್ ರೆಚ್ಚೆಡ್ದ್ ಬುಡಯಳ್, ಇಂಬಳ್ ಕೂಂಜಿಡ್ದ್ ಬುಡಯಳ್.
   (ಅವಳು ರೆಚ್ಚೆಯಿಂದ ಬಿಡಲಾರಳು, ಇವಳು 'ಕೂಂಜಿ'ಯಿಂದ ಬಿಡಲಾರಳು.)
   ವಾದ ವಿವಾದದಲ್ಲಿ ಇಬ್ಬರೂ ಸಮಾನರು, ಒಬ್ಬರನ್ನೊಬ್ಬರು ಬಿಟ್ಟುಕೊಡುವವರಲ್ಲ ಎಂಬ ಅರ್ಥ ಈ ಗಾದೆಯಲ್ಲಿದೆ.

4. ಕೊಂಬುಗ್ ರೆಚ್ಚೆ ಕಟ್ಟಿಲೆಕೊ.
   (ಕೋಡಿಗೆ ರಚ್ಚೆ ಕಟ್ಟಿದ ಹಾಗೆ.)

   'ಕನ್ನಡಿಯೊಳಗಿನ ಗಂಟು' ಎಂಬ ಮಾತಿನ ಅರ್ಥ ಈ ಗಾದೆಯಲ್ಲಿದೆ,

9. ಬಿದಿರು-ಕಣಿಲೆ :

1. ದಾಲ ಇದ್ಯಂದಿನಾಯಗ್ ಪೊತ್ತಿ ಇಲ್ಲ್‌ದ ಕರು.
   (ಏನೂ ಇಲ್ಲದವನಿಗೆ ಸುಟ್ಟ ಮನೆಯ ಬಿದಿರು.)

2. ಕಣಿಲೆಡ್ ಬಾವು ಬರಂದಿನ, ಬೆದುರ್‌ಡ್ ಬಾವು ಬರುವಾ ?
   (ಕಣಿಲೆಯಲ್ಲಿ ಬಾಗದೆ ಇದ್ದದ್ದು ಬಿದಿರಿನಲ್ಲಿ ಬಾಗೀತೇ ?)

10. ಕಡ್ಲೆ :

1. ಕಡ್ಲೆ ತಿಂದ್‌ದ್ ಕೈ ದೆಕ್ಕಿಲೆಕೊ.
   (ಕಡ್ಲೆ ತಿಂದು ಕೈ ತೊಳೆದಂತೆ.)

2. ಕಡಲೆ ಕಾಯಿನಗ ಎಣ್ಣೆ ಕರಂಟ್‌ದ್ ಪೋಂಡ್‌ಗೆ.
   (ಕಡಲೆ ಕಾಯುವಾಗ ಎಣ್ಣೆ ಕರಟಿಹೋಯಿತಂತೆ.)

3. ಕೂಳಿ ಗಟ್ಟಿ ಉಪ್ಪುನಗನೇ ಕಡಲೆ ಅಗಿಯೊಡು.
   (ಹಲ್ಲು ಗಟ್ಟಿ ಇರುವಾಗಲೇ ಕಡಲೆ ಜಗಿಯಬೇಕು.)

11. ಕಬ್ಬು :

1. ಕರುಂಬಿತ್ತಿಲ್‌ಗ್ ಆನೆ ಪೊಗ್ಗಿಲೆಕೊ.
   (ಕಬ್ಬಿನ ಹಿತ್ತಿಲಿಗೆ ಆನೆ ಹೊಕ್ಕ ಹಾಗೆ.)

2. ಕರುಂಬು ಚೀಪೆಂದ್ ಬೇರ್ ಮುಟ್ಟ ಅಗಿಯಡ.
   (ಕಬ್ಬು ಸಿಹಿಯೆಂದು ಬೇರಿನ ತನಕ ಜಗಿಯಬೇಡ.)

## IV. ಪ್ರಾಣಿಗಳು–ಪಕ್ಷಿಗಳು–ಕೀಟಗಳು :

ತುಳು ಗಾದೆಗಳಲ್ಲಿ ತುಳು ನಾಡಿನ ಪ್ರಾಣಿಗಳು, ಪಕ್ಷಿಗಳು ಹಾಗೂ ಕೀಟಗಳು ಸಾಕಷ್ಟು ಪ್ರಮಾಣದಲ್ಲಿ ಸ್ಥಾನ ಪಡೆದಿವೆ. ಈ ಜೀವಿಗಳು ಬಹುಪಾಲು ಇಂದು ನಮ್ಮ ಕಣ್ಣಿಗೆ ಕಾಣಸಿಗುವುದಿಲ್ಲ. ಆದರೆ ಒಂದು ಕಾಲದಲ್ಲಿ ತುಳುನಾಡಿನ ಜನಜೀವನದ ಒಂದು ಪ್ರಧಾನ ಭಾಗವಾಗಿ–ಸಹಾಯಕವಾಗಿ ಅಥವಾ ಉಪದ್ರವ ಕಾರಿಯಾಗಿ ಇದ್ದ ಪ್ರಾಣಿ, ಪಕ್ಷಿ, ಕೀಟಗಳನ್ನು ತುಳು ಗಾದೆಗಳಲ್ಲಿ ಗಮನಿಸಬಹುದು. ಆನೆ, ಮುಸು, ಮೊಲ, ಕುದುರೆ, ಹುಲಿ, ಆಡು, ಹೋರಿ, ಕಪ್ಪೆ, ನಾಯಿ, ನರಿ, ಜಿಂಕೆ, ಕೋಣ, ದನ, ಎಮ್ಮೆ, ಮಂಗ, ಏಡಿ, ಹಂದಿ, ಅಳಿಲು, ಬೆಕ್ಕು, ನಾಗರಹಾವು, ಆಮೆ, ಓತಿ, ಹಾವು, ಚೇಳು, ಕೆಂಪಿರುವೆ, ಜಿರಳೆ, ಕೋಳಿ, ಕಾಗೆ, ಲಕ್ಷ್ಮೀಚೇಳು, ಕಡುಂದುರು, ಹುಳು, ಕೋಗಿಲೆ, ತಗಣೆ, ಎರೆಹುಳ, ನೊಣ, ಮೊಸಳೆ, ಮಿಂಚುಹುಳ, ಮರುಳು ಹಕ್ಕಿ, ಉಣ್ಣೆ, ಗೆದ್ದಲು, ಕೊಕ್ಕರೆ ಮುಂತಾದ ಪ್ರಾಣಿ–ಪಕ್ಷಿ–ಕೀಟಗಳು ತುಳು ಗಾದೆಗಳನ್ನು ವ್ಯಾಪಿಸಿವೆ. ಈ ಪ್ರಾಣಿ–ಪಕ್ಷಿ–ಕೀಟಗಳ ಗುಣ ಸ್ವಭಾವಗಳ ನೇರ ವಿವರಣೆ ಕೆಲವು ಗಾದೆಗಳಲ್ಲಿ ಕಾಣಿಸಿಕೊಂಡರೆ ಇನ್ನು ಕೆಲವು ಗಾದೆಗಳಲ್ಲಿ ಇವುಗಳ ಗುಣ ಸ್ವಭಾವಗಳನ್ನು ಮನುಷ್ಯರಿಗೆ ಆರೋಪಿಸಿ ಪರೋಕ್ಷವಾಗಿ ನೀತಿಬೋಧೆ ಮಾಡುವ ಅಥವಾ ವಿಡಂಬಿಸುವ ತಂತ್ರವನ್ನು ಕಾಣಬಹುದು. ಉದಾಹರಣೆಗೆ ಕೆಲವು ಗಾದೆಗಳನ್ನು ಈ ದೃಷ್ಟಿಯಿಂದ ಇಲ್ಲಿ ಅವಲೋಕಿಸಬಹುದು :

### 1. ಆನೆ :

1. ಅಡಿ ತತ್ತ್‌ನ ಆನೆಲ ಮಗುರು.
(ಅಡಿ ತಪ್ಪಿದ ಆನೆ ಕೂಡಾ ಮಗುಚೀತು.)

2. ಆನೆಗ್ ದಾಯೆ ಗಂಟೆ ?
(ಆನೆಗೆ ಯಾಕೆ ಗಂಟೆ ?)

3. ಆನೆದ ದಿನ್ನೊ ಆನೆಗ್, ಪಿಜಿನ್‌ದ ದಿನ್ನೊ ಪಿಜಿನ್‌ಗ್.
(ಆನೆಯ ಭಾರ ಆನೆಗೆ, ಇರುವೆಯ ಭಾರ ಇರುವೆಗೆ.)

4. ಆನೆದ ಬಾಯಿಗ್ ಕೊರ್ನ ಕರುಂಬುದಲೆಕೊ.
(ಆನೆಯ ಬಾಯಿಗೆ ಕೊಟ್ಟ ಕಬ್ಬಿನ ಹಾಗೆ.)

5. ಆನೆ ಥರ್ಮೊಗು ತಿಕ್ಕ್‌ನಲ ದಾಯೆ ?
(ಆನೆ ಬಿಟ್ಟಿ ಸಿಕ್ಕಿದರೂ ಯಾಕೆ ?)

6. ಆನೆ ಲದ್ದಿ ಪಾಡ್‌ಂಡ್‌ಂದ್ ಮೇರ್‌ಲ ಲದ್ದಿ ಪಾಡಿಲೆಕೊ.
(ಆನೆ ಲದ್ದಿ ಹಾಕಿತೆಂದು ಮೊಲವೂ ಲದ್ದಿ ಹಾಕಿದಂತೆ.)

7. ಆನೆ ಸಿರ್ಕ್‌ನಲ ಕಡೆಂಚಲ್ಗ್ ಪೊಗ್ಗಂದ್.
(ಆನೆ ಎಷ್ಟು ಚಿರುಟಿದರೂ ಕಡೆಂಚಲಿನಲ್ಲಿ ಹೋಗಲಾರದು.)

8. ಆಟಿದ ದೊಂಬುಗು ಆನೆದ ಬೆರಿ ಲಕ್ಕು.
(ಆಷಾಢದ ಬಿಸಿಲಿಗೆ ಆನೆಯ ಬೆನ್ನೂ ಎದ್ದೀತು.)

9. ಅಬಿಡ್ ಆನೆಲಾ ನೀರ್ ಪರ್ಂಡುಗೆ.
(ಆಷಾಢದಲ್ಲಿ ಆನೆಯೂ ನೀರು ಕುಡಿಯಿತಂತೆ.)

10. ಆನೆ ಉಪ್ಪುನಗ ಸಾರೊ ವರಾನ್, ಸೈತ್ಂಡ ಸಾರೊಕ್ಕೊಂಜಿ.
(ಆನೆ ಜೀವಂತವಾಗಿ ಇರುವಾಗ ಸಾವಿರ ವರಹ, ಸತ್ತರೆ ಸಾವಿರದ ಒಂದು ವರಹ.)

11. ಆನೆನ್ ಕಟ್ಟುದ್ ಸಾಂಕೊಲಿ, ಪೊಣ್ಣುನ್ ಕಟ್ಟುದ್ ಸಾಂಕ್ಯೆರೆ ಬಲ್ಲಿ.
(ಆನೆಯನ್ನು ಕಟ್ಟಿ ಸಾಕಬಹುದು, ಹೆಣ್ಣನ್ನು ಕಟ್ಟಿ ಸಾಕಲು ಸಾಧ್ಯವಿಲ್ಲ)

12. ಆನೆದ ಅಡಿಕ್ಕ್ಯಾಂಡಲಾ ಬೂರೊಲಿ, ಪಿಜಿನ್‌ದ ಅಡಿಕ್ಕ್ ಬೂರ್ಯೆರೆ ಬಲ್ಲಿ.
(ಆನೆಯು ಕೆಳಗಾದರೂ ಬೀಳಬಹುದು, ಇರುವೆಯು ಕೆಳಗೆ ಬೀಳಲು ಸಾಧ್ಯವಿಲ್ಲ.)

2. ಕುದುರೆ :

1. ಎನ್ನ ಕುದುರೆಗ್ ಮೂಜೇ ಕಾರ್.
(ನನ್ನ ಕುದುರೆಗೆ ಮೂರೇ ಕಾಲು.)

2. ಕುದುರೆಡ್ದ್ ದುಂಬು ಕುಡು ದಾಯೆಗ್ ?
(ಕುದುರೆಗಿಂತ ಮೊದಲು ಹುರುಳಿ ಯಾಕೆ ?)

3. ಕುದುರೆಗ್ ಕುತ್ತೊ ತೋಜಿಲೆಕೊ.
(ಕುದುರೆಗೆ ರೋಗ ಕಾಣಿಸಿಕೊಂಡ ಹಾಗೆ.)
ಒಂದೊಂದು ಸಲ ಒಂದೊಂದು ಬುದ್ಧಿ. ಒಬ್ಬನ ನಡವಳಿಕೆ ಹೀಗೆಯೇ ಎಂದು ನಿರ್ದಿಷ್ಟವಾಗಿ ರೂಪಿಸಲು ಸಾಧ್ಯವಿಲ್ಲದಾಗ ಈ ಗಾದೆಯನ್ನು ಬಳಸುತ್ತಾರೆ.

4. ಕುದುರೆದ ಕಾರ್ ಪತ್ತ್ಂಡ ಕುದುರೆನೇ ಬುದ್ಧಿ ಕಲ್ಪಾವುಂಡು.
(ಕುದುರೆಯ ಕಾಲು ಹಿಡಿದರೆ, ಕುದುರೆಯೇ ಬುದ್ಧಿ ಕಲಿಸುತ್ತದೆ.)

3. ನಾಯಿ :

1. ಕೊರೆಪ್ಪುನ ನಾಯಿ ತುಚ್ಚುಂದ್, ತುಚ್ಚುನ ನಾಯಿ ಕೊರೆಪ್ಪುಂದ್.
(ಬೊಗಳುವ ನಾಯಿ ಕಚ್ಚುವುದಿಲ್ಲ, ಕಚ್ಚುವ ನಾಯಿ ಬೊಗಳುವುದಿಲ್ಲ)

2. ಜಾತಿಗ್ ಜಾತಿ ಪಗೆ, ನಾಯಿಗ್ ನಾಯಿ ಪಗೆ.
(ಜಾತಿಗೆ ಜಾತಿ ಹಗೆ, ನಾಯಿಗೆ ನಾಯಿ ಹಗೆ.)

3. ನಾಯಿ ಕೊರೆತ್ತ್ಂಡ ದೇಲೊ ಚಿಟ್ಟುಂಡೊ ?
(ನಾಯಿ ಬೊಗಳಿದರೆ ದೇವಲೋಕ ಹಾಳಾಗುತ್ತದೆಯೇ ?)

4. ನಾಯಿಗ್ ದಾಯೆ ಸಾರಂಗಾಯಿತ ಉಪ್ಪಡ್ ?
(ನಾಯಿಗೆ ಯಾಕೆ ನಿಂಬೆ ಉಪ್ಪಿನಕಾಯಿ ?)

"ಅಪಾತ್ರನಿಗೆ ಗೌರವ ಕೊಡುವುದು ಯಾಕೆ" ಎಂಬ ಅರ್ಥ.

5. ನಾಯಿಗ್ ನಸೆ ಕೊರ್ಂಡ ನೆಸಲ್ ನಕ್ಕುಂಡು.
(ನಾಯಿಗೆ ಸಲಿಗೆ ಕೊಟ್ಟರೆ ಹಣೆಯನ್ನು ನೆಕ್ಕುತ್ತದೆ.)

6. ನಾಯಿಗ್ ಬೇಲೆ ಇದ್ದಿ, ಉಂತ್ಯೆರೆ ಪೊರ್ತ್ ಇದ್ದಿ.
(ನಾಯಿಗೆ ಕೆಲಸವಿಲ್ಲ, ನಿಲ್ಲೋಕೆ ಹೊತ್ತು ಇಲ್ಲ.)

7. ನಾಯಿಡ್ ಕೇಂಡ್ದ್ ಬೋಂಟೆಗ್ ಪೋಪುನ್ಯೋ ?
(ನಾಯಿಯಲ್ಲಿ ಕೇಳಿ ಬೇಟೆಗೆ ಹೋಗುವುದೇ ?)

8. ನಾಯಿಡ ಪನ್ನಗ ನಾಯಿ ಬೀಲೊಡ ಪನ್ಪುನೆ.
(ನಾಯಿಯಲ್ಲಿ ಏನಾದರೂ ಕೆಲಸ ಹೇಳಿದಾಗ ನಾಯಿ ಅದನ್ನು ತನ್ನ ಬಾಲಕ್ಕೆ ಹೇಳುವುದು.)

9. ನಾಯಿದ ಕಂತ್ಲೊ ಬೊಣ್ಣೊಡ್ ಪೋಪುನೆ.
(ನಾಯಿ ಹುಣ್ಣಿಗೆ ಬೂದಿ ಮದ್ದು.)

10. ನಾಯಿದ ಬೀಲೊನ್ ಓಟೆಡ್ ಪಾಡಿಲೆಕೊ.
(ನಾಯಿಯ ಬಾಲವನ್ನು ನಳಿಗೆಯಲ್ಲಿ ಹಾಕಿದ ಹಾಗೆ.)

11. ನಾಯಿಗ್ ದಾಯಿತ್ತ್ ಗೊಂತು ಎಡ್ಡೆ ಪಡಿಕ್ಕೆ ?
(ನಾಯಿಗೇನು ಗೊತ್ತು ಒಳ್ಳೇದು ಕೆಟ್ಟದ್ದು ?)

12. ನಾಯಿನ್ ನೀರ್ಗ್ ನೂಕಿಲೆಕೊ.
(ನಾಯಿಯನ್ನು ನೀರಿಗೆ ದೂಡಿದ ಹಾಗೆ.)
"ಒತ್ತಾಯದಿಂದ ಒಂದು ಕೆಲಸ ಮಾಡಿಸುವುದು" ಎಂಬ ಅರ್ಥವನ್ನು ಈ ಗಾದೆ ಹೇಳುತ್ತದೆ.

13. ನಾಯಿ ತೆಲಿಕ್ಕ್ ಒಯಿಪುಂಡು, ಎರು ಬಯಿಕ್ಕ್ ಒಯಿಪುಂಡು.
(ನಾಯಿ ತಿಳಿಗೆ ಸೆಳೆಯುತ್ತದೆ, ಕೋಣ ಬೈಹುಲ್ಲಿಗೆ ಸೆಳೆಯುತ್ತದೆ.]

14. ನಾಯಿನ್ ಪಲ್ಲೆಂಕಿಡ್ ಕುಲ್ಯಾಂಡಲಾ ಆಯಿನ ಸೀಲ ಬುಡುವಾ ?
[ನಾಯಿಯನ್ನು ಪಲ್ಲಕ್ಕಿಯಲ್ಲಿ ಕುಳಿತುಕೊಳ್ಳಿಸಿದರೂ ಅದರ ಸ್ವಭಾವವನ್ನು ಬಿಡುತ್ತದೆಯೆ ?]

ನಾಯಿಯನ್ನು ಕುರಿತ ಮೇಲಿನ ಎಲ್ಲಾ ತುಳು ಗಾದೆಗಳಲ್ಲಿಯೂ ನಾಯಿಯ ಬಗ್ಗೆ ಒಂದು ವಿಧದ ಅನಾದರ, ತುಚ್ಛಭಾವ ವ್ಯಕ್ತವಾಗಿದೆ. ನಾಯಿಯ ಪ್ರಾಮಾಣಿಕತೆ, ನಂಬಿಕೆಯ ಗುಣ ಇವುಗಳನ್ನು ಈ ಗಾದೆಗಳಲ್ಲಿ ಎಲ್ಲಿಯೂ ಕಾಣುವುದಿಲ್ಲ. ಮಾನವನು ತನಗಾಗಿ ದುಡಿಯುವ ಒಂದು ಸಾಧುಪ್ರಾಣಿಯನ್ನು ಹೇಗೆ ಕಾಣುತ್ತಾನೆ ಎನ್ನುವುದಕ್ಕೆ ಈ ಗಾದೆಗಳು ಸಾಕ್ಷಿಯಾಗಿವೆ.

4. ನರಿ :

1. ಕುದ್ಕನ್ ನಂಬ್‌ದ್ ಕೊಳಕೆ ಬಿತ್ತಿಲೆಕೊ.
[ನರಿಯನ್ನು ನಂಬಿ ಕೊಳಕೆ ಬೆಳೆ ಬಿತ್ತಿದಂತೆ.]

ನರಿ ಬುದ್ಧಿಯವನನ್ನು ನಂಬಿ ಬೇಸಾಯ ಮಾಡಿದಂತೆ ಎನ್ನುವ ಅರ್ಥ.

2. ಕುದ್ಕಗ್ ಕಾರ್ ಬಚ್ಚನಗ ನಾಯಿಗ್ ಪೀ ಬತ್ತ್ಂಡ್.
[ನರಿಗೆ ಕಾಲು ಸೋತಾಗ ನಾಯಿಗೆ ಹೇಲು ಬಂತು.]

ಸದವಕಾಶ ಅನಿರೀಕ್ಷಿತವಾಗಿ ತಪ್ಪಿಹೋಗುವುದು ಎಂಬ ಅರ್ಥ.

3. ಕುದ್ಕೆ ಬೊಳ್ಳೊಗ್ ಪೋನಗ, ಊರೇ ಬೊಳ್ಳೊಗ್ ಪೋಪುಂಡುದ್ ಪಂಡಿಲೆಕೊ.
[ನರಿಯು ಪ್ರವಾಹದಲ್ಲಿ ಹೋಗುವಾಗ ಊರೇ ಪ್ರವಾಹದಲ್ಲಿ ಹೋಗುತ್ತದೆ ಎಂದು ಹೇಳಿದ ಹಾಗೆ.]

4. ಕುಂಟಿಗ್ ಎಣ್ಮ ಬುದ್ಧಿ, ಕುದ್ಕಗ್ ಸಾರೊ ಬುದ್ಧಿ.
[ಕುಂಟನಿಗೆ ಎಂಟು ಬುದ್ಧಿ, ನರಿಗೆ ಸಾವಿರ ಬುದ್ಧಿ.]

5. ತೆಕ್ಕರೆ ಕಾಪ್ಯೆರೆ ಕುದ್ಕನ್, ಮೀನ್ ಕಾಪ್ಯೆರೆ ಪುಚ್ಚೆನ್ ದೀಯಿಲೆಕೊ.
[ಮುಳ್ಳುಸೌತೆ ಕಾಯಲು ನರಿಯನ್ನು, ಮೀನು ಕಾಯಲು ಬೆಕ್ಕನ್ನು ನೇಮಿಸಿದಂತೆ.]

5. ಬೆಕ್ಕು :

1. ಮರತ್ತ ಪುಚ್ಚೆ ಆಂಡದಾನೆ, ಮಣ್ಣ್‌ದ ಪುಚ್ಚೆ ಆಂಡದಾನೆ, ಎಲಿ ಪತ್ತ್ಂಡ ಯಾವು.
[ಮರದ ಬೆಕ್ಕಾದರೇನು, ಮಣ್ಣಿನ ಬೆಕ್ಕಾದರೇನು, ಇಲಿ ಹಿಡಿದರೆ ಸಾಕು.]

ಯಾವ ಮನುಷ್ಯನಾದರೇನು, ಕೆಲಸಕ್ಕೆ ಬಂದರೆ ಸಾಕು ಎನ್ನುವ ಅರ್ಥ.

2. ಏರ್ ದೀತೆರಾ, ಏರ್ ಕೊರ್ತೆರಾ, ಕಣ್ಣ್ ಮುಚ್ಚಿದ್ ಪರ್ಪೆಂದ್ ಪುಚ್ಚೆ ಪೇರ್ ಪರ್ತೆಂಡ್‌ಗೆ.

[ಯಾರು ಕೊಟ್ಟಿದ್ದಾರೋ, ಯಾರು ಇಟ್ಟಿದ್ದಾರೋ, ಕಣ್ಣು ಮುಚ್ಚಿ ಕುಡಿಯುತ್ತೇನೆ ಎಂದು ಬೆಕ್ಕು ಹಾಲು ಕುಡಿಯಿತಂತೆ.]

3. ಕಾಲ್ ಪಣವುದ ಪುಚ್ಚೆಗ್ ಮುಕ್ಕಾಲ್ ಪಣವುದ ಪೇರ್.
[ಕಾಲು ಪಾವಲಿಯ ಬೆಕ್ಕಿಗೆ ಮುಕ್ಕಾಲು ಪಾವಲಿಯ ಹಾಲು.]

ಅಲ್ಪ ಬೆಲೆಯ ವಸ್ತುವಿಗೆ ಹೆಚ್ಚು ಖರ್ಚು ಮಾಡುವುದನ್ನು ಕುರಿತು ಈ ಗಾದೆ ವಿಡಂಬಿಸುತ್ತದೆ.

4. ಪುಚ್ಚೆದ ಕಣ್ಣ್ ಶುದ್ಧೋ, ನಾಯಿದ ಕೆಬಿ ಶುದ್ಧೋ.
[ಬೆಕ್ಕಿನ ಕಣ್ಣು ಶುದ್ಧ, ನಾಯಿಯ ಕಿವಿ ಶುದ್ಧ.]

5. ಪುಚ್ಚೆದಾಂತಿ ಕಳಟ್ಟ್ ಎಲಿ ಕರ್ನಲಾಗ ಪಾಡ್‌ಡ್‌ಂಡ್‌ಗೆ.
[ಬೆಕ್ಕಿಲ್ಲದ ಕಳದಲ್ಲಿ ಇಲಿ ಅಂತರಲಾಗ ಹಾಕಿದೆಯಂತೆ.]

6. ಪುಚ್ಚೆದಾತ್ ಸುಖೊ ಇಜ್ಜಿ, ಕೈಕಂಜಿದಾತ್ ದುಃಖೊ ಇಜ್ಜಿ.
[ಬೆಕ್ಕಿನಷ್ಟು ಸುಖ ಇಲ್ಲ, ದನಕರುಗಳಷ್ಟು ದುಃಖ ಇಲ್ಲ.]

ಮೇಲಿನ ಎಲ್ಲಾ ತುಳು ಗಾದೆಗಳಲ್ಲಿಯೂ ಬೆಕ್ಕಿನ ಸುಖಜೀವನವನ್ನು ವರ್ಣಿಸಲಾಗಿದೆ. ಇಲಿ, ಹಾಲು ಮುಂತಾದ ಆಹಾರಗಳ ಸೇವನೆ ಅನಾಯಾಸವಾಗಿ ಬೆಕ್ಕಿಗೆ ಸಿಗುತ್ತದೆ. ಬೆಕ್ಕಿನ ಕಣ್ಣು ಬಹಳ ಸೂಕ್ಷ್ಮವೆನ್ನುವ ಮಾತು ಗಮನಾರ್ಹವಾದುದು.

6. ಮುಸು :

1. ಅಜ್ಜಿ ಸಯ್ತ್‌ನಲ ಮುಜು ತಿಕ್ಕ್‌ನಲ ಸಮೋ ಸಮೋ.
[ಅಜ್ಜಿ ಸತ್ತದ್ದೂ ಮುಸು ಸಿಕ್ಕಿದ್ದೂ ಸರಿಯಾಯಿತು.]

ಒಂದೂರಿನಲ್ಲಿ ಒಬ್ಬಳು ಅಜ್ಜಿ ಇದ್ದಳು. ಆಕೆಗೆ ಮುಸುವಿನ ಮಾಂಸವೆಂದರೆ ಪಂಚಪ್ರಾಣ. ಒಂದು ದಿನ ಆಕೆ ತೀರಿಕೊಂಡಳು. ಆಗಲೇ ಬೇಟೆಯಲ್ಲಿ ಒಂದು ಮುಸುವು ಆ ಮನೆಯವರಿಗೆ ಸಿಕ್ಕಿತು. ಆದರೆ ಆದರ ಮಾಂಸವನ್ನು ಸವಿಯುವ ಭಾಗ್ಯ ಆ ಮುದುಕಿಯ ಪಾಲಿಗಿರಲಿಲ್ಲ.

2. ಆ ಕಾನೊಗ್ ಈ ಮುಜು.
[ಆ ಕಾಡಿಗೆ ಈ ಮುಸು.]

ಕೆಟ್ಟದ್ದಕ್ಕೆ ಕೆಟ್ಟದ್ದೇ ಜೊತೆ ಸೇರುವುದು ಎಂದು ಅರ್ಥ.

7. ಕಪ್ಪೆ :

1. ಕಪ್ಪೆನ್ ಕೆರ್ನ ಅಪ್ಪೆನ್ ಕೆರ್ನ ದೋಸೊ ಉಂಡು.
[ಕಪ್ಪೆಯನ್ನು ಕೊಂದರೆ ತಾಯಿಯನ್ನು ಕೊಂದ ದೋಷ ಉಂಟು.]

2. ಪಳ್ಳೊಡ್ ಕುಳ್ಳ್‌ದ್ ಪರಂಟ್ ಪತ್ತಿಯೆ.
[ಹಳ್ಳದಲ್ಲಿ ಕುಳಿತು ಚೊಂದ ಕಪ್ಪೆಯನ್ನು ಹಿಡಿದ.]

3. ಕಪ್ಪೆ ಸೊರ್ಕ್‌ನ ಪಳ್ಳೊಡ್ ಉಂತಂದ್.
ಪೊಣ್ಣು ಸೊರ್ಕ್‌ನ ಇಲ್ಲಲ್ ಉಂತಂದ್.
[ಕಪ್ಪೆ ಸೊಕ್ಕಿದರೆ ಹಳ್ಳದಲ್ಲಿ ನಿಲ್ಲದು, ಹೆಣ್ಣು ಸೊಕ್ಕಿದರೆ ಮನೆಯಲ್ಲಿ ನಿಲ್ಲದು.]

8. ಹುಲಿ–ಇಲಿ :

1. ಎಲಿ ಪೋಯಿನವುಲೆ ಪಿಲಿ ಪೋಂಡ್‌ಂದ್ ಪನ್ಪುನೆ.
[ಇಲಿ ಹೋದಲ್ಲಿ ಹುಲಿ ಹೋಯಿತೆಂದು ಹೇಳುವುದು.]

2. ಎಲಿ ಕೆರಿಯೆರೆ ಪಿಲಿ ಕೆರ್ಪಿ ಅಟ್ಟಣೆ ಬೋಡು ?
[ಇಲಿಯನ್ನು ಕೊಲ್ಲಲು ಹುಲಿಯನ್ನು ಕೊಲ್ಲುವಷ್ಟು ಸಿದ್ಧತೆ ಬೇಕೆ ?]

3. ಎಲಿ ತೆಲಿ ಪರಂದ್, ಪಿಲಿ ನೆಲ್ಲಿದ ಮರತ್ತ ಅಡಿಟ್ಟ್ ಜೆಪ್ಪಂದ್.
[ಇಲಿ ತಿಳಿ ಕುಡಿಯದು, ಹುಲಿ ನೆಲ್ಲಿ ಮರದ ಅಡಿಯಲ್ಲಿ ಮಲಗದು.]

4. ಎಲಿ ಕೆರಿನಾಯೆ ಪಿಲಿ ಕೆರುವೆ.
[ಇಲಿಯನ್ನು ಕೊಂದವನು ಹುಲಿಯನ್ನೂ ಕೊಂದಾನು.]

5. ಪಿಲಿತ್ತ ಬಂಜಿಡ್ ಎಲಿ ಪುಟ್ಟಿಲೆಕೊ.
[ಹುಲಿಯ ಹೊಟ್ಟೆಯಲ್ಲಿ ಇಲಿ ಹುಟ್ಟಿದ ಹಾಗೆ.]

6. ಪಿಲಿಕ್ಕ್ ಪೋಡಿತ್ತ್‌ದ್ ಸುಂದೆಕ್ಕ್ ಲಾಗಿಲೆಕೊ.
[ಹುಲಿಗೆ ಹೆದರಿ ಹೊಳೆಗೆ ಹಾರಿದಂತೆ.]

7. ಕಾಡ್‌ಡ್ ಪಿಲಿ ಕೊರೆಪ್ಪುನ ಕೇನ್ಡ್ ಊರುಡು ಒಕ್ಕಲ್ ದೆತ್ತೆರ್‌ಗೆ.
[ಕಾಡಿನಲ್ಲಿ ಹುಲಿ ಗರ್ಜಿಸುವುದನ್ನು ಕೇಳಿ ಊರಿನಲ್ಲಿ ಒಕ್ಕಲು ತೆಗೆದರಂತೆ.]

9. ಕೋಣ :

1. ಕೊರಿ ಎರುತ್ತ ಬೆರಿ ಪೂಜಡ.
[ಕೊಟ್ಟ ಕೋಣದ ಬೆನ್ನು ಸವರಬೇಡ.]

'ಮಿಂಚಿ ಹೋದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ' ಎಂಬ ಮಾತಿನಂತೆ.

2. ಆಡ್ಡ ಬೀಜಾವು ಎರುಲಾ, ಪೋಪೆ ಬರ್ಪೆ ಇನ್ಪಿ ಚಾಕ್ರಿದಾಯೆಲಾ ಉಪ್ಪೆರ್ ಆವಂದ್.
[ಅಡ್ಡ ದಿಡ್ಡಿ ಹೋಗುವ ಕೋಣವೂ, ಹೋಗುತ್ತೇನೆ ಬರುತ್ತೇನೆ ಎನ್ನುವ ಸೇವಕನೂ ಇರಬಾರದು.]

3. ಎರು ಕಂಜಿ ಪಾಡ್‌ಂಡ್, ಕೊಟ್ಯಡ್ ಕಟ್ಲೆ.
[ಕೋಣ ಕರು ಹಾಕಿತು, ಕೊಟ್ಟಿಗೆಯಲ್ಲಿ ಕಟ್ಟಿರಿ.]

ಸತ್ಯಸಂಗತಿ ತಿಳಿಯದೆ ಗಡಿಬಿಡಿಯಲ್ಲಿ ಕೆಲಸ ಮಾಡುವುದರ ಬಗ್ಗೆ ವಿಡಂಬನೆ.

4. ಎರುತ್ತ ಬೇನೆ ಕಕ್ಕೆಗ್ ದಾನೆ ತೆರಿಪುಂಡು ?
[ಕೋಣನ ನೋವು ಕಾಗೆಗೆ ಹೇಗೆ ತಿಳಿಯುತ್ತದೆ ?]

5. ಉಂತಿ ಎರು ಬಾಳು, ಪಾರುನ ಎರು ಬೂರು.]
[ನಿಂತ ಕೋಣ ಬಾಳೀತು, ಓಡಿದ ಕೋಣ ಬಿದ್ದೀತು.]

6. ಎರು ತಾಂಕಿನಾಯನ್ ಕೆರು, ಭೂತೊ ತಾಂಕಂದಿನಾಯನ್ ಕೆರು.
[ಕೋಣ ಸಾಕಿದವನನ್ನು ಕೊಂದೀತು, ಭೂತ ಸಾಕದವನನ್ನು ಕೊಂದೀತು.]

7. ಎರು ಮಾರ್‌ಂಡಲಾ ಗಂಜಿ ತತ್ತ್‌ಜಿ.
[ಕೋಣವನ್ನು ಮಾರಿದರೂ ಗಂಜಿ ಕುಡಿಯುವುದು ತಪ್ಪಲಿಲ್ಲ.]

8. ಎರು ಜಾತಿಗ್ ಬಡು ಜಾತಿ.
(ಕೋಣನಿಗೆ ದೊಣ್ಣೆಯ ಪೆಟ್ಟು.)

9. ಕರ ದರಿಂಡ ಮಾಮಿ ಉಲ್ಲೇರ್, ಎರು ಸೈತ್‌ಂಡ ತಮ್ಮಲೆ ಉಲ್ಲೇರ್.
(ಮಡಕೆ ಒಡೆದರೆ ಅತ್ತೆ ಇದ್ದಾರೆ, ಕೋಣ ಸತ್ತರೆ ಮಾವ ಇದ್ದಾರೆ.)

10. ಪರ ಎರುಕ್ಕ್ ಬರೆತ್ತ ಮಿತ್ತ್‌ದ ಪಜಿರ್ ದಾಯೆಗ್ ?
(ಮುದಿ ಕೋಣನಿಗೆ ದರೆಯ ಬದಿಯ ಹುಲ್ಲು ಯಾಕೆ ?)

ತುಳು ನಾಡಿನಲ್ಲಿ ಬೇಸಾಯದ ಕೆಲಸಕ್ಕೆ ಸಾಮಾನ್ಯವಾಗಿ ಕೋಣ ಮತ್ತು ಹೋರಿಗಳನ್ನು ಬಳಸುತ್ತಾರೆ. ಹೋರಿಗಳಿಗಿಂತಲೂ ಕೋಣಗಳು ಹೆಚ್ಚು ಶಕ್ತಿಶಾಲಿ ಪ್ರಾಣಿಗಳಾಗಿರುವುದರಿಂದ ಅವುಗಳು ಹೆಚ್ಚು ಪ್ರಾಧಾನ್ಯವನ್ನು ಪಡೆದಿವೆ. ಆದ್ದರಿಂದಲೇ ತುಳು ಗಾದೆಗಳಲ್ಲಿ ಕೋಣವನ್ನು ಕುರಿತು ಬೇರೆ ಬೇರೆ ಅಭಿಪ್ರಾಯಗಳು ವ್ಯಕ್ತವಾಗಿವೆ.

10. ಹೋರಿ–ದನ :

1. ಚೆಂಬು ಕೊನೊದ್ ಪೋನಗ ಬೋರಿ ಆಪೆ,
ನುಗೊ ಕೊನೊದ್ ಪೋನಗ ಪೆತ್ತ ಆಪೆ.

(ಚೆಂಬು ಕೊಂಡುಹೋಗುವಾಗ ಹೋರಿಯಾಗುತ್ತಾನೆ, ನೊಗ ಕೊಂಡುಹೋಗುವಾಗ ದನ ಆಗುತ್ತಾನೆ.)
'ಕೆಲಸಕ್ಕೆ ಸಿಗುವುದಿಲ್ಲ' ಎಂದು ಅರ್ಥ.

2. ಒರಿ ಪೆತ್ತಗ್ ಕಡ್ತೆಂಡಾ, ಬೊಕ್ಕೊರಿ ಕಂಜಿಗ್ ಕಡ್ಪುನಿಯಾ ?
(ಒಬ್ಬನು ದನಕ್ಕೆ ಕಡಿದರೆ, ಮತ್ತೊಬ್ಬ ಕರುವಿಗೆ ಕಡಿಯುವುದೋ ?)

3. ಬೋರಿ ಮುದ್ರೆ ಒತ್ತ್‌ಂಡ ಬಸವೆ.
(ಹೋರಿ ಮುದ್ರೆ ಒತ್ತಿದರೆ ಬಸವ.)

4. ಹಾಂಕಾರದ ಬೋರಿಗ್ ಮೂಂಕುಡು ಬಲ್ಲ್.
(ಅಹಂಕಾರದ ಹೋರಿಗೆ ಮೂಗಿನಲ್ಲಿ ಹಗ್ಗ.)

5. ಏರಿ ತಿಂದಿನಾಯೆ ಬೋರಿ ಮಾರುವೆ.
(ಏರಿ ಮೀನನ್ನು ತಿಂದವನು ಹೋರಿ ಮಾರಿಯಾನು.)

11. ಎಮ್ಮೆ :

1. ಎರ್ಮೆದ ಕಂಜಿಗ್ ಮೀಂದಿಯೆರೆ ಕಲ್ಪವೊಡೊ?
(ಎಮ್ಮೆಯ ಕರುವಿಗೆ ಈಜಲು ಕಲಿಸಬೇಕೆ ?)

2. ಎರ್ಮೆ ಪಳ್ಳಡ್ ಬೂರಿಲೆಕೊ.
(ಎಮ್ಮೆ ಹಳ್ಳದಲ್ಲಿ ಬಿದ್ದ ಹಾಗೆ.)
'ಅವ್ಯವಸ್ಥಿತ ಆಸೀನ' ಎಂಬ ಅರ್ಥ.

3. ದುಂಬು ಪೋಪಿನ ಎರ್ಮೆದ ಅಂಬಲೊ ತೂದ್ ಪಿರವುದ ಎರ್ಮೆ ತೆಲಿತ್ತಿಲೆಕೊ.
(ಮುಂದೆ ಹೋಗುವ ಎಮ್ಮೆಯ ಗುಂಪ್ಪಾಂಗವನ್ನು ನೋಡಿ ಹಿಂದಿನ ಎಮ್ಮೆ ನಕ್ಕ ಹಾಗೆ.)
'ತನ್ನ ಕೊರತೆಯನ್ನು ತಿಳಿದುಕೊಳ್ಳದೆ ಇನ್ನೊಬ್ಬರ ಕುಂದು-ಕೊರತೆಗಳನ್ನು ಗೇಲಿ ಮಾಡು ವುದು' ಎಂಬ ಅರ್ಥ.

4. ಆಳಿಕ್ಕ್ ಬತ್ತ್‌ನಾಯಗ್ ಎರ್ಮೆದ ಬಿಲೆ ದಾಯೆ ?
(ಮಜ್ಜಿಗೆಗೆ ಬಂದವನಿಗೆ ಎಮ್ಮೆಯ ಕ್ರಯ ಯಾಕೆ ?)

5. ಎರ್ಮೆಗ್ ಪಾಡಿ ಪುಂಡಿ ಓಡೆ ಪೋವು ?
(ಎಮ್ಮೆಗೆ ಹಾಕಿದ ಹಿಂಡಿ ಎಲ್ಲಿಗೆ ಹೋದೀತು ?)

6. ಎರ್ಮೆ ದೆತೊನ್ದ್ ಕಂಜಿ ಬೋಡ್ಚಿ ಪನ್ಪೆರಾ ?
(ಎಮ್ಮೆಯನ್ನು ತೆಗೆದುಕೊಂಡು, ಕರುವನ್ನು ಬೇಡ ಅನ್ನುತ್ತಾರೆಯೋ ?)

12. ಮಂಗ :

1. ಮಂಗನ ಕೈಟ್ ಮಾಣಿಕ್ಯೊ ಕೊರಿಲೆಕೊ.
(ಮಂಗನ ಕೈಯ್ಯಲ್ಲಿ ಮಾಣಿಕ್ಯ ಕೊಟ್ಟ ಹಾಗೆ.)

2. ಮಂಗಗ್ ಕಳಿ ಪರ್ಪಾಯಿಲೆಕೊ.
(ಮಂಗನಿಗೆ ಕಳ್ಳು ಕುಡಿಸಿದ ಹಾಗೆ.)

3. ಮಂಗೆ ಪನ್ಂಡ್‌ಗೆ "ಎಂಕ್ ಗಿದ್‌ಪೆರೆ ತೀರುಂಡು, ಕಟ್ಟೆರೆ ತೀರುಂಜ್ಜಿ."
(ಮಂಗ ಹೇಳಿತಂತೆ : ನನಗೆ ಬಿಡಿಸಲು ತಿಳಿಯುತ್ತದೆ, ಕಟ್ಟಲು ತಿಳಿಯುವುದಿಲ್ಲ.)

4. ಮಂಗೆ ಅಷ್ಟಮಿದ ಪಾಸ ಪತ್ತಿಲೆಕೊ.
(ಮಂಗ ಅಷ್ಟಮಿಯ ಉಪವಾಸ ವ್ರತ ಹಿಡಿದ ಹಾಗೆ.)

13. ಅಳಿಲು :

1. ಪೆಲಕ್ಕಾಯಿದ ಮೇಲ್‌ಡ್ ಕುಂಡಚ್ಚ ಕುಳ್ಳಿಲೆಕೊ.
(ಹಲಸಿನಹಣ್ಣಿನ ಮೇಲೆ ಅಳಿಲು ಕುಳಿತ ಹಾಗೆ.)
'ಕ್ಷುಲ್ಲಕ ಸಂಗತಿ' ಎನ್ನುವ ಅರ್ಥ.

2. ಬಾರ್ ಬಲ್ಲಾಳಗ್, ದೂರು ಕುಂಡಚ್ಚಗ್.
(ಭತ್ತ ಬಲ್ಲಾಳನಿಗೆ, ದೂರು ಅಳಿಲಿಗೆ.)

ಬಲ್ಲಾಳ ಅಥವಾ ಅಧಿಕಾರಿಯು ಭಂಡಾರದ ಭತ್ತವನ್ನು ನುಂಗಿಹಾಕುತ್ತಾನೆ. ವಿಚಾರಿಸಿದರೆ, "ಅಳಿಲು ತಿಂದಿತು" ಎನ್ನುತ್ತಾನೆ. "ದೊಡ್ಡವ ಮಾಡಿದ ಮೋಸಕ್ಕೆ ಸಾಮಾನ್ಯ ವ್ಯಕ್ತಿಯೊಬ್ಬನನ್ನು ಬಲಿಹಾಕುವುದು" ಎಂದು ಈ ಗಾದೆಯ ಅರ್ಥ.

14. ಹಾವು-ನಾಗರಹಾವು :

1. ಮಲ್ಲಾಯೆ ಮರಿ ನಲಿಪ್ಪಾನಗ, ಪಾಪೊದಾಯೆ ಕೇರಿ ನಲಿಪ್ಪಬೆ.
[ಶ್ರೀಮಂತ ನಾಗರಹಾವನ್ನು ಕುಣಿಸುವಾಗ, ಬಡವ ಕೇರೆ ಹಾವನ್ನು ಕುಣಿಸುತ್ತಾನೆ.]

2. ಮರಿ ಬುಡೊಡೊ, ಅರಿ ಕೊರ್ಪನೊ ?
[ನಾಗರಹಾವನ್ನು ಬಿಡಬೇಕೋ, ಅಕ್ಕಿ ಕೊಡುತ್ತೀಯಾ ?]

"ಹೆದರಿಸಿ ಹಣ ಸಂಪಾದಿಸುವುದು" ಎಂದು ಅರ್ಥ.

3. ಸಾರ್‌ದ್ ಸರ್ಪನ್‌ಲ ಕೆರೋಲಿ.
[ಸಾರಿ ಹೇಳಿ ನಾಗರಹಾವನ್ನಾದರೂ ಕೊಲ್ಲಬಹುದು.]

4. ಉದಲ್ ಪುಂಚ ಕಟ್ಟುನಿ, ಒಕ್ಕೆಲಾಪುನಿ ಮರಿ.
[ಗೆದ್ದಲು ಹುತ್ತವನ್ನು ಕಟ್ಟುವುದು, ಆದರೆ ವಾಸಮಾಡುವುದು ನಾಗರಹಾವು.]

"ಬಡವರು ಕಷ್ಟಪಟ್ಟು ದುಡಿದಿದ್ದರಲ್ಲಿ ಶ್ರೀಮಂತರು ಸುಖಪಡುತ್ತಾರೆ" ಎನ್ನುವುದನ್ನು ಈ ಗಾದೆ ಧ್ವನಿಸುತ್ತದೆ.

5. ಪೇರ್ ಕೊರಿ ಕಯಿಕ್ಕ್ ಮರಿ ಕೊಡತ್ತಿಲೆಕೊ.
[ಹಾಲು ಕೊಟ್ಟ ಕೈಗೆ ನಾಗರಹಾವು ಕಚ್ಚಿದಂತೆ.]

6. ಮರಿಕ್ಕ್ ಸೋತ್‌ದ್ ಪುಂಚೊಗು ಬುಡಿಲೆಕ್ಕ.
[ನಾಗರಹಾವಿಗೆ ಹೊಡೆದು, ಹುತ್ತಕ್ಕೆ ಬಿಟ್ಟ ಹಾಗೆ.]

ತುಳುನಾಡಿನಲ್ಲಿ ನಾಗಾರಾಧನೆ ಬಹಳ ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದು ಇಂದಿಗೂ ಆಚರಣೆಯಲ್ಲಿದೆ. ನಾಗನ ಕಲ್ಲಿಗೆ ಹಾಲೆರೆಯುವುದು, ನಾಗಮಂಡಲ ಸೇವೆ ಮುಂತಾದ ಪದ್ಧತಿಗಳನ್ನು ಇಲ್ಲಿ ಕಾಣಬಹುದು. ಈ ಸಂಸ್ಕೃತಿ ಸಹಜವಾಗಿ ತುಳು ಗಾದೆಗಳಲ್ಲಿ ಕಾಣಿಸಿಕೊಂಡಿದೆ.

7. ಉಚ್ಚು ಸಯ್ಯರೆ ಬಲ್ಲಿ, ಕೋಲು ಪೊಲಿಯೆರೆ ಬಲ್ಲಿ.
[ಹಾವು ಸಾಯಬಾರದು, ಕೋಲು ಮುರಿಯಬಾರದು.]

8. ನಡುಗುನಾಯನ ಮೇಲ್‌ಗ್ ಸೈತ್ತಿ ಉಚ್ಚು ಬೂರಿಲೆಕೊ.
[ನಡುಗುವವನ ಮೇಲೆ ಸತ್ತಹಾವು ಬಿದ್ದ ಹಾಗೆ.]

9. ಉಚ್ಚು ತುಂಚ್‌ದಾನಲ ಸಯ್ಯೊಲಿ, ಕೊಂಬಚ್ಚೇಳ್ ತುಂಚ್ಚ್‌ದ್ ಬದ್‌ಕ್ಕಿಯೆರೆ ಬಲ್ಲಿ.
[ಹಾವು ಕಚ್ಚಿಯಾದರೂ ಸಾಯಬಹುದು, ಚೇಳು ಕಡಿದು ಬದುಕಬಾರದು.]

15. ಮೀನು :

1. ಮಡೆಂಜಿ ಪೋಯಿನವುಳು ಅಲೆಂಜಿ ತಪ್ಪಂದ್.
[ಮಡೆಂಜಿ ಮೀನು ಹೋದಲ್ಲಿ ಕೆಸರು ನೀರು ತಪ್ಪದು.]

2. ಮುಗುಡುದ ತರೆಟ್ಟ್ ಪೀ ತಪ್ಪಂದ್.
[ಮುಗುಡು ಮೀನಿನ ತಲೆಯಲ್ಲಿ ಹೇಲು ತಪ್ಪದು.]

3. ಏರಿ ತಿಂದಿನಾಯೆ ಬೋರಿ ಮಾರುವೆ.
[ಏರಿ ಮೀನನ್ನು ತಿಂದವನು ಹೋರಿ ಮಾರಿಯಾನು.]

4. ಕೂರಿಡಿತ್ತಿ ಕೊಡ್ಯಾನ್‌ಗ್ ದಾನೆ ಗೊಂತು ?
[ಬಲೆಯಲ್ಲಿದ್ದ ಮೀನಿಗೆ ಹೊರಗಿನ ವಿಚಾರ ಏನು ಗೊತ್ತು ?]
"ಬಾವಿಯೊಳಗಿನ ಕಪ್ಪೆಯಂತೆ" ಎಂಬ ಮಾತಿನಂತೆ.

2. ತಂಗುಳನ್ನ :

1. ಇರ್ಲ್ದ್ ಉಣಂದಿನಾಯಂಡ ಮನದ್ದನಿ ತಂಞಣೊ ಕೇಂಡಿಲೆಕೊ.
(ರಾತ್ರಿ ಉಣ್ಣದವನಲ್ಲಿ ಮರುದಿನ ತಂಗುಳನ್ನ ಕೇಳಿದ ಹಾಗೆ.)

2. ಬಡವು ಆವಂದಿಲೆಕ್ಕೊ ಮರ್ದ್ ಕೊರ್ಪೆ,
ಇತ್ತಿ ತಂಞಣೊ ಎಂಕ್ ಪಾಡ್.
(ಹಸಿವೆ ಆಗದಂತೆ ಮದ್ದು ಕೊಡುತ್ತೇನೆ, ಇದ್ದ ತಂಗುಳನ್ನವನ್ನು ನನಗೆ ಹಾಕು.)

3. ಅಕ್ಕಿ – ಗಂಧಸಾಲೆ ಅಕ್ಕಿ – ಬೀರ್‌ಸಾಲೆ – ಬೆಳ್ತಿಗೆ ಅಕ್ಕಿ :

1. ಉಣ್ಪೆರೆ ಇದ್ಯಂದಿನಾಯೆ ಗಂಧಸಾಲೆ ಅರಿತ ಉಣ್ಪನೆ.
(ಉಣ್ಣಲು ಗತಿ ಇಲ್ಲದವನು ಗಂಧಸಾಲೆ ಅನ್ನವನ್ನು ಉಣ್ಣುವುದು.)

'ಬಡವರು ಆಡಂಬರ ಮಾಡುವುದು ಜಾಸ್ತಿ' ಎಂಬ ಅರ್ಥ.

2. ಉಣೆಯೆರೆ ದಾಂತಿನಾಯಗ್ ಬೀರ್‌ಸಾಲೆ ಅರಿ,
ತುತ್ಯೆರೆ ದಾಂತಿನಾಯಗ್ ಪಟ್ಟೆ ದೋತ್ರ.
(ಉಣ್ಣಲು ಇಲ್ಲದವನಿಗೆ ಬೀರ್‌ಸಾಲೆ ಅಕ್ಕಿ, ಉಡಲು ಇಲ್ಲದವನಿಗೆ ಪಟ್ಟೆಧೋತ್ರ.)

3. ಪರ್ಬೊ ಕರಿಯಂದೆ ಬೊಳಂತ್ಯೆ ಅರಿ ಎಡ್ಪಿಯೆರೆ ಬಲ್ಲಿ.
(ದೀಪಾವಳಿ ಹಬ್ಬ ಕಳೆಯದೆ, ಬೆಳ್ತಿಗೆ ಅಕ್ಕಿ ಕುಟ್ಟಬಾರದು.)

4. ನಟ್ಟುನಾಯೆ ಬೊಳಂತ್ಯೆ ಅರಿ ಬೋಡ್ಚಿಂದ್ ಪನ್ತಿಗೆ.
(ಭಿಕ್ಷುಕನು 'ಬೆಳ್ತಿಗೆ ಅಕ್ಕಿ ಬೇಡ' ಎಂದು ಹೇಳಿದ್ದಾನಂತೆ.)

ತುಳುನಾಡಿನಲ್ಲಿ ಜನರ ಪ್ರಧಾನ ಆಹಾರ 'ಅಕ್ಕಿ'. ಅದರಲ್ಲಿ 'ಕುಸುಬಲು' ಮತ್ತು 'ಬೆಳ್ತಿಗೆ' ಎಂದು ಎರಡು ವಿಧ. 'ಕುಸುಬಲು ಅಕ್ಕಿ'ಯನ್ನು ಪ್ರತಿದಿನದ ಊಟಕ್ಕೂ, 'ಬೆಳ್ತಿಗೆ ಅಕ್ಕಿ'ಯನ್ನು ಹಬ್ಬಗಳ ದಿನ ಮಾತ್ರ ಊಟಕ್ಕೂ ಉಪಯೋಗಿಸುತ್ತಾರೆ. ಇದಲ್ಲದೆ 'ಗಂಧಸಾಲೆ' ಮತ್ತು 'ಬೀರ್‌ಸಾಲೆ' ಎಂಬ ಪರಿಮಳಭರಿತವಾದ, ವಿಶೇಷ ಸಂದರ್ಭಗಳಲ್ಲಿ ಮಾತ್ರ ಅಡುಗೆಗೆ ಬಳಸುವ ಅಕ್ಕಿಯ ವಿಧಗಳು ಇವೆ.

ಅಕ್ಕಿಯನ್ನು ಬೈಹುಲ್ಲಿನ ಒಳಗೆ ಇಟ್ಟು ಅದನ್ನು ಬೈಹುಲ್ಲಿನಿಂದಲೇ ಮಾಡಿದ, ಹಗ್ಗದ ಮೂಲಕ ಕಟ್ಟಿ ಭದ್ರಪಡಿಸಿ ಇಟ್ಟ ರಚನೆಗೆ 'ಮುಡಿ' ಎನ್ನುತ್ತಾರೆ. ಇದರಲ್ಲಿ ಸಾಮಾನ್ಯವಾಗಿ 3 ಕಳಸೆ ಅಂದರೆ 42 ಸೇರುಗಳಷ್ಟು ಅಕ್ಕಿ ಇರುತ್ತದೆ. ತುಳುನಾಡಿನ ಹೊರಗಡೆ ಎಲ್ಲೂ ಕಾಣದ ಒಂದು ವೈಶಿಷ್ಟ್ಯಪೂರ್ಣ, ಅಕ್ಕಿಯ ಜೋಪಾನದ ವಿಧಾನ ಇದು.

ಈ ಮುಡಿಯನ್ನು ಕುರಿತ ತುಳುಗಾದೆಗಳನ್ನು ನೋಡಬಹುದು :

6. ಪೆರಡೆ ಕೆರೆತ್ತ್ಂಡ ಇಲ್ಲ್‌ಗ್ ಮಹಾಟೊ.
(ಹೇಂಟೆ ಕೂಗಿದರೆ ಮನೆಗೆ ಮಹಾಟ.)

'ಹೆಣ್ಣು ಮಿತಿಮೀರಿದರೆ ಮನೆಗೆ ಹಾಳು' ಎಂಬ ಅರ್ಥ.

17. ಕಾಗೆ :

1. ಕಾರ್ಯೊ ಆವೊಡಾಂಡ ಕಕ್ಕೆದ ಕಾರ್‌ನಲ ಪತ್ತೊಡು.
(ಕಾರ್ಯ ಆಗಬೇಕಿದ್ದರೆ ಕಾಗೆಯು ಕಾಲನ್ನೂ ಹಿಡಿಯಬೇಕು.)

2. ಕಕ್ಕೆ ಕೋಗಿಲೆನ್ ಕಪ್ಪುಂದ್ ಪನ್ತ್ಂಡ್.
(ಕಾಗೆಯು ಕೋಗಿಲೆಯನ್ನು 'ಕಪ್ಪು' ಎಂದು ಹೇಳಿತು.)

3. ಕಕ್ಕೆಡ್ದ್ ಉಸಾರ್ ಕಕ್ಕೆದ ಕುಂಞಿ.
(ಕಾಗೆಗಿಂತ ಅದರ ಮರಿ ಚುರುಕು.)

4. ಈಚಿಲ್‌ದ ಪರ್ಂದ್ ಆನಗ ಕಕ್ಕೆದ ಬಾಯಿಡ್ ಪುಡಿಯಾತ್ಂಡ್‌ಗೆ.
(ಈಚಲಿನ ಹಣ್ಣು ಆಗುವಾಗ ಕಾಗೆಯು ಬಾಯಿಯಲ್ಲಿ ಹುಣ್ಣಾಗಿದೆಯಂತೆ.)

5. ಎಂಕ್ ತೆರೆಯುಂದಿ ಗಾದೆ ಇಜ್ಜಿ, ಕಕ್ಕೆ ಕುಲ್ಲಂದಿ ಮರ ಇಜ್ಜಿ.
(ನನಗೆ ತಿಳಿಯದ ಗಾದೆ ಇಲ್ಲ, ಕಾಗೆ ಕುಳಿತುಕೊಳ್ಳದ ಮರ ಇಲ್ಲ.)

18. ಕಾಡುಕೋಳಿ :

1. ಕಾಟ್ ಕೋರಿಗ್ ಸಂಕ್ರಾಂತಿ ಆಂಡ ದಾನೆ ; ಸಿಂಗ್ದ್ ಆಂಡ ದಾನೆ ?
(ಕಾಡು ಕೋಳಿಗೆ ಸಂಕ್ರಮಣ ಆದರೆ ಏನು, ತಿಂಗಳಾದಿ ಆದರೆ ಏನು ?)

'ಕೀಳು ಜನರಿಗೆ ಶುಭ–ಅಶುಭ ದಿನಗಳ ಪರಿವೆ ಇಲ್ಲ' ಎಂಬ ಅರ್ಥ. ಕಾಡಿನಲ್ಲಿ ವಾಸಿಸುವ, ತನ್ನಷ್ಟಕ್ಕೆ ಇರುವ, ಕೋಳಿಯನ್ನು ಹೋಲುವ ಒಂದು ಪಕ್ಷಿ 'ಕಾಡುಕೋಳಿ'. ಅದು ಗುಡ್ಡದ ಬದಿಗಳಲ್ಲಿ ಊರಿನ ಕಡೆಗೆ ಬಂದಾಗ ಅದನ್ನು ಕೋವಿಯಿಂದ ಹೊಡೆದು ಕೊಲ್ಲುತ್ತಾರೆ.

19. ಆಮೆ :

1. ಏಮೆ ಪೊಯ್ಯೆಡ್ ತೆತ್ತಿದೀದ್, ಅಮ್ಮೆ ಬನ್ನಗ ಬಲಮಂಗಾ ಪಣ್ತ್ಂಡ್‌ಗೆ.
(ಆಮೆ ಹೊಯಿಗೆಯಲ್ಲಿ ಮೊಟ್ಟೆ ಇಟ್ಟು, ತಂದೆ ಬರುವಾಗ ಬಾ ಮಗನೇ ಎಂದು ಹೇಳಿದೆಯಂತೆ.)

ಈ ಗಾದೆಯಲ್ಲಿ ಆಮೆಗಳ ಮೊಟ್ಟೆ ಇಡುವ ಕ್ರಮ ಮತ್ತು ಅವುಗಳು ಒಡೆದು ಮರಿಗಳಾಗುವ ರೀತಿಯನ್ನು ಹೇಳಲಾಗಿದೆ.

20. ಜಿರಳೆ :

1. ಎಕ್ಕಲೆ ಇತ್ತಿನಲ್ಪ ಬುಂಕ್ಯೊಲ ಉಂಡು.
(ಒಂದು ಜಿರಳೆ ಇದ್ದಲ್ಲಿ ಮತ್ತೂ ಇದೆ.)

2. ಎಕ್ಕಲೆ ಬೊಂಬಾಯಿಗ್ ಪೋಯಿಲೆಕೊ.
(ಜಿರಳೆ ಬೊಂಬಾಯಿಗೆ ಹೋದ ಹಾಗೆ.)

'ಏನೊಂದು ಸಾಧನೆ ಇಲ್ಲದೆ ಒಂದು ಕಡೆಗೆ ಹೋಗಿಬರುವುದು' ಎಂದು ಅರ್ಥ.

3. ಎಕ್ಕಲೆ ಮೀಸೆ ಪೊಗ್ಗಯಿಲೆಕೊ.
(ಜಿರಳೆ ಮೀಸೆ ಹೊಗ್ಗಿಸಿದಂತೆ.)

'ಎಳೆ ಸಿಕ್ಕರೆ ಹಚ್ಚಡ ನಂಗುವವ' ಎಂಬ ಮಾತಿನಂತೆ ಈ ಗಾದೆ.

21. ಲಕ್ಷ್ಮೀಚೇಳು :

1. ಕಿಲೇರಿ ತುಚ್ಚ್‌ದ್ ಮದಿಮಲ್ಮಾಳ್ ಸಯಿತ್ತಿಲೆಕೊ.
(ಲಕ್ಷ್ಮೀಚೇಳು ಕಡಿದು ಮದುಮಗಳು ಸತ್ತಂತೆ.)

ಮದುಮಗಳೊಬ್ಬಳು ಮದುವೆಗೆ ಕೆಲವು ದಿನ ಮುಂಚಿತವಾಗಿ ತೀರಿಹೋದಳು. ಆದರ ಕಾರಣವನ್ನು ಕೇಳಿದಾಗ ಕೆಲವರು, 'ಆಕೆ ಲಕ್ಷ್ಮೀಚೇಳು ಕಚ್ಚಿ ತೀರಿಹೋದಳು' ಎಂದು ಹೇಳಿದರು. ಆದರೆ ನಿಜವಾಗಿ ಆಕೆ ಆ ಮದುವೆಯಲ್ಲಿ ಇಚ್ಛೆಯಿಲ್ಲದೆ ಆತ್ಮಹತ್ಯೆ ಮಾಡಿ ಕೊಂಡಿದ್ದಳು. ಲಕ್ಷ್ಮೀಚೇಳು ಕಚ್ಚಿ ಸಾಯುವುದು ನಂಬುವ ಮಾತಲ್ಲ ; ಸುಳ್ಳು ಹೇಳುವು ದಾದರೂ ನಂಬುವಂತಹ ಸುಳ್ಳು ಹೇಳಬೇಕು ಎಂಬ ಅರ್ಥ.

22. ಕಡುಂದುರು ಹುಳು :

1. ಕುಡೋಳ್‌ಗ್ ಕಲ್ಲ್ ಅಡಕ್ಕಿಲೆಕೊ.
(ಕಡುಂದುರು ಹುಳುವಿನ ಗೂಡಿಗೆ ಕಲ್ಲೆಸೆದ ಹಾಗೆ.)

23. ತಗಣೆ :

1. ತಗುಲೆ ಇತ್ತಿನವುಲು ಬಗಲೆ ತಪ್ಪಂದ್.
(ತಗಣೆ ಇದ್ದಲ್ಲಿ ಕಷ್ಟ ತಪ್ಪದ್ದು.)

24. ನೊಣ :

1. ಪರ್ತಿ ತೂಕುನಲ್ಪ ಕೆಲೆಂಜಿಗ್ ದ್ಯಾತ್ತ ಬೇಲೆ ?
(ಹತ್ತಿ ತೂಗುವಲ್ಲಿ ನೊಣಕ್ಕೇನು ಕೆಲಸ ?)

3. ಕಜಿಪ್ಪು ಆಂಡಲಾ ಪರಂಗು, ನ್ಯಾಯಂ ಪರಂಗಂದ್.
(ಪಲ್ಯವಾದರೂ ಹಾಳಾದೀತು, ನ್ಯಾಯ ಹಾಳಾಗಲಾರದು.)

4. ಆಗ್ಗೊದ ವಂಂದೆಗ್ ಗಂಜ್ಜೆದ ಕಜ್ಪು.
(ಸಾಮಾನ್ಯ ಜನರಿಗೆ ಹಲಸಿನಕಾಯಿ ಪಲ್ಯ.)
"ಯೋಗ್ಯತೆಗೆ ಅನುಸಾರವಾಗಿ ಸನ್ಮಾನ" ಎಂಬ ಅರ್ಥ.

7. ಮಜ್ಜಿಗೆ :

1. ಅಜ್ಜಿ ಇದ್ಯಂದ್‌ನ ಇಲ್ಲ್, ಅಳೆ ಇದ್ಯಂದ್‌ನ ಒಣಸ್‌ದಲೆಕೊ.
(ಅಜ್ಜಿ ಇಲ್ಲದ ಮನೆಯು ಮಜ್ಜಿಗೆ ಇಲ್ಲದ ಊಟದಂತೆ.)

2. ಅಳೆಕ್ಕ್ ಬತ್ತ್‌ನಾಯಗ್ ಎರ್ಮೆದ ಬಿಲೆ ದಾಯೆ ?
(ಮಜ್ಜಿಗೆಗೆ ಬಂದವನಿಗೆ ಎಮ್ಮೆಯ ಕ್ರಯ ಯಾಕೆ ?)

3. ಅಳೆನ್ ಹಾಳ್ ಮಲ್ಪಿಯೆರೆ ಕುಳೆ ಯಾರು.
(ಮಜ್ಜಿಗೆಯನ್ನು ಹಾಳು ಮಾಡಲು ಕುಲೆ (ಪ್ರೇತ) ಸಾಕು.)
'ಒಂದು ಕ್ಲೇಶ ಉಂಟುಮಾಡಲು ಏನಾದರೂ ಸಣ್ಣ ಕಾರಣ ಸಾಕು. ಅಥವಾ ಕ್ಷುದ್ರ ಚಾಡಿಕೋರರು ಸಾಕು' ಎಂಬ ಅರ್ಥ.

4. ಅಳೆ ನೀರ್‌ದಾಂತಿ ಒಣಸ್‌ಲಾ ತಲೆ ನೀರ್‌ದಾಂತಿ ಬೊಟ್ಟುಲಾ ಒಂಜೆ.
(ಮಜ್ಜಿಗೆ ನೀರು ಇಲ್ಲದ ಊಟವೂ ನೀರಿನ ಆಸರೆ ಇಲ್ಲದ ಬೆಟ್ಟು ಭೂಮಿಯೂ ಸಮಾನ.)
ಈ ಪ್ರದೇಶದ ಜನರ ಊಟದಲ್ಲಿ ಮಜ್ಜಿಗೆಯ ಮಹತ್ವವನ್ನು ಮೇಲಿನ ಗಾದೆಗಳು ಸಾರುತ್ತವೆ.

8. ಉಪ್ಪು :

1. ಉಪ್ಪುಡ್ದ್ ಮಿತ್ತ್ ರುಚಿ ಇದ್ದಿ, ಅಪ್ಪೆಡ್ದ್ ಮಿತ್ತ್ ಬಂಧು ಇದ್ದಿ.
(ಉಪ್ಪಿಗಿಂತ ರುಚಿ ಇಲ್ಲ, ತಾಯಿಗಿಂತ ಬಂಧು ಇಲ್ಲ.)

2. ಉಪ್ಪು ತಿಂದಿನಾಯೆ ನೀರ್ ಪರುವೆ.
(ಉಪ್ಪು ತಿಂದವನು ನೀರು ಕುಡಿದಾನು.)

3. ಅಪ್ಪೆ ಸೈತ್ತಿ ಬೊಕ್ಕ ತೆರಿಯು, ಉಪ್ಪು ಮುಗಿ ಬೊಕ್ಕ ತೆರಿಯು.
(ತಾಯಿ ಸತ್ತ ಮೇಲೆ ತಿಳಿಯುತ್ತದೆ, ಉಪ್ಪು ಮುಗಿದ ಮೇಲೆ ತಿಳಿಯುತ್ತದೆ.)

4. ಉಪ್ಪು ತಿಂದಿ ಬಾಯಿಡ್ ಚಪ್ಪೆಲಾ ತಿನೊಡು.
(ಉಪ್ಪು ತಿಂದ ಬಾಯಿಯಲ್ಲಿ ಚಪ್ಪೆಯನ್ನೂ ತಿನ್ನಬೇಕು.)

5. ನಕ್ರ್ ಪಾಡ್ದ್ ಏರಿ ಒಯ್ತ್ಲೆಕೊ.
(ಎರೆಹುಳವನ್ನು ಹಾಕಿ ಏರಿ ಮೀನನ್ನು ಎಳೆದ ಹಾಗೆ.)

'ಚಿಕ್ಕ ಆಸೆಯನ್ನು ತೋರಿಸಿ ಹೆಚ್ಚು ಲಾಭವನ್ನು ಪಡೆಯುವುದು' ಎಂಬ ಅರ್ಥ.

6. ಡೆಂಜಿ ಇತ್ತ್ನ ಭೂಮಿ ಹಾಳ್, ಮೆಂಗೆ ಇತ್ತ್ನ ಕಾಡ್ ಹಾಳ್.
(ಏಡಿ ಇದ್ದ ಭೂಮಿ ಹಾಳು, ಮಂಗ ಇದ್ದ ಕಾಡು ಹಾಳು.)

7. ಡೆಂಜಿದ ಕೊಂಬರ್ ಡೆಂಜಿದ ತಿಗಲೆಗ್.
(ಏಡಿಯ ಕಾಲನ್ನು ಅದರ ಎದೆಗೇ ಕುತ್ತುವುದು.)

8. ಡೆಂಜಿಲಾ ಪೋಂಡು, ಡೆಂಜಿಗ್ ಪಾಡಿ ಕಯಿಲಾ ಪೋಂಡು.
(ಏಡಿಯೂ ಹೋಯಿತು, ಏಡಿಗೆ ಹಾಕಿದ ಕೈಯೂ ಹೋಯಿತು.)

ಮೀನುಗಾರಿಕೆಯು ಇಲ್ಲಿನ ಒಂದು ಮುಖ್ಯ ಕಸುಬು ಆಗಿರುವುದರಿಂದ ವೈವಿಧ್ಯಭರಿತವಾದ ಮೀನುಗಳು ತುಳು ಗಾದೆಗಳಲ್ಲಿ ಸ್ಥಾನವನ್ನು ಪಡೆದಿವೆ. ಏರಿ, ಮಡೆಂಜಿ, ಮುಗುಡು, ಏಡಿ, ಕೊಡ್ಯಾನ್ ಮುಂತಾದ ಮೀನುಗಳಿಗೆ ಸಂಬಂಧಿಸಿದ ಗಾದೆಗಳು ಹೇರಳವಾಗಿವೆ.

## 16. ಕೋಳಿ :

ಈ ಪ್ರದೇಶದಲ್ಲಿ ಕೋಳಿಸಾಕಣೆ ಒಂದು ಜನಪ್ರಿಯ ಉಪಕಸುಬು. ಇಲ್ಲಿನ ಅನೇಕ ಸಮಾಜಗಳ ಜನರು ಕೋಳಿಯ ಮಾಂಸದ ಅಡುಗೆಯನ್ನು ತಮ್ಮ ವೈಶಿಷ್ಟ್ಯವನ್ನಾಗಿ ಇಟ್ಟುಕೊಂಡಿದ್ದಾರೆ. ಮನೋರಂಜನೆಗಾದಿ ಕೋಳಿಅಂಕದಂತಹ ವಿನೋದಗಳು ಇಂದಿಗೂ ತುಳುನಾಡಿನ ಹಳ್ಳಿಗಳಲ್ಲಿ ಜನರ ಜೀವನದ ಭಾಗವಾಗಿವೆ. ತುಳು ಗಾದೆಗಳಲ್ಲಿ ಕೋಳಿಯನ್ನು ಬಳಸಿಕೊಂಡಿರುವ ರೀತಿಯನ್ನು ನೋಡಬಹುದು.

1. ಕೋರಿಡ ಕೇಂಡ್ದ್ ಅರೆಪ್ಪು ಕಡೆಪ್ಪುನೆನ ?
(ಕೋಳಿಯಲ್ಲಿ ಕೇಳಿ ಮಸಾಲೆ ಅರೆಯುವುದೇ ?)

2. ಕೋರಿದ ಕಾರ್‌ಗ್ ಗೆಜ್ಜೆ ಕಟ್ಟ್ನ, ನೆಲ ಒಕ್ಕಂದೆ ಕುಳ್ಪುವೊ ?
(ಕೋಳಿಯ ಕಾಲಿಗೆ ಗೆಜ್ಜೆ ಕಟ್ಟಿದರೆ ತಿಪ್ಪೆ ಕೆರೆಯದೆ ಬಿಟ್ಟೀತೆ ?)

3. ಕೋರಿ ಇತ್ತ್ಂಡ ಕೊರೊಂಗು ಮೆಚ್ಚೋ ?
(ಕೋಳಿ ಪಲ್ಯ ಇದ್ದರೆ ಕೊಕ್ಕರೆ ಪಲ್ಯ ಹಿಡಿಸೀತೆ ?)

4. ಕೋರಿಡ ಕಾರ್ ಪೊಲಿಂಡ ದುಡ್ಡು ದುಗ್ಗಾಣಿ.
(ಕೋಳಿಯ ಕಾಲು ಮುರಿದರೆ ದುಡ್ಡು ದುಗ್ಗಾಣಿ.)

5. ಪೆರಡ್ ಒಕ್ಕುನೆ ಕಿನ್ನಿ ದಡಿಕ್ಕ್.
(ಹೇಂಟೆ ಕೆರೆದರೆ ಮರಿಗಳ ಕಡೆಗೆ.)

1. ಅಡಿ ತೂದು ಮುಂಡಿ ದೆರ್ಪೊಡು.
(ತಳವನ್ನು ನೋಡಿ ಮುಂಡಿಯನ್ನು ಎತ್ತಬೇಕು.)

2. ಬಾಲೆಳು ಬರೆಲಿಯೆರೆ ಆವಂದ್
ಮುಂಡಿ ಕೂಂತೆರೆ ಆವಂದ್.
(ಮಕ್ಕಳು ಹೊಟ್ಟೆಗಿಲ್ಲದೆ ಕಂಗೆಡಬಾರದು, ಮುಂಡಿ ಸುಕ್ಕುಗಟ್ಟಬಾರದು.)

4. ಅವಲಕ್ಕಿ :

ಅಕ್ಕಿಯನ್ನು ಕುಟ್ಟಿ ಮಾಡುವುದು 'ಅವಲಕ್ಕಿ'. ತುಳುನಾಡಿನ ಹಬ್ಬ–ಹರಿದಿನಗಳ ಸಂದರ್ಭದಲ್ಲಿ ಅವಲಕ್ಕಿಯನ್ನು ಪ್ರಧಾನ ನೈವೇದ್ಯದ ವಸ್ತುವಾಗಿ ಬಳಸುತ್ತಾರೆ. 'ಬೆಲ್ಲ ಹಾಕಿದ ಅವಲಕ್ಕಿ' ಈ ಪ್ರದೇಶದಲ್ಲಿ ಒಂದು ವಿಶಿಷ್ಟ ಆಹಾರ. ದೀಪಾವಳಿ ಹಬ್ಬದ ವೇಳೆಯಲ್ಲಂತೂ ಅವಲಕ್ಕಿಯೇ ಮುಖ್ಯವಾದುದು.

1. ಪರ್ಬೊ ಗದ್ದಲೊ, ಬಜಿಲ್ ಮುಕ್ಕೊಂಡ್.
(ದೀಪಾವಳಿ ಹಬ್ಬ ಗದ್ದಲ, ಅವಲಕ್ಕಿ ಮುಕ್ಕಿಕೊಂಡೆ.)

2. ಅಮುಸರದ ಭೂತೊಗು ಅರಿ ಅರಿ ಬಜಿಲ್.
(ಅವಸರದ ಭೂತಕ್ಕೆ ಅರ್ಧಂಬರ್ಧ ಅವಲಕ್ಕಿ.)

3. ಬಜಿಲ್ ಪುರಿಂಚೆರೆ ತೀರಂದಿನಾಯೆ ಪೇರ್ ಪುರಿಂಚೆದೆಗೆ.
(ಅವಲಕ್ಕಿ ಹಿಸುಕಲು ತಿಳಿಯದವನು, ಹಾಲನ್ನು ಹಿಸುಕಿದ್ದಾನಂತೆ.)

4. ಬಜಿಲ್‌ದಡಿತ್ತ ಕಲ್ಲ್ ತೆರಿಯುಂದ್,
ಮುಳಿತ್ತಡಿತ್ತ ಮುಳ್ಳು ತೆರಿಯುಂದ್.
(ಅವಲಕ್ಕಿಯ ಅಡಿಯಲ್ಲಿನ ಕಲ್ಲು ಕಾಣದು, ಮುಳಿಹುಲ್ಲಿನ ಅಡಿಯಲ್ಲಿನ ಮುಳ್ಳು ಕಾಣದು.)

5. ಅಡ್ಯೆ (ಅಕ್ಕಿ ತಿಂಡಿ) :

ಅಕ್ಕಿಯನ್ನು ಕಡೆದು ಅಂದರೆ ರುಬ್ಬುವ ಅಕ್ಕಿಯ ಹಿಟ್ಟಿನಿಂದ ತಯಾರಿಸುವ ತಿಂಡಿಗಳನ್ನು 'ಅಡ್ಯೆ' ಎಂದು ತುಳುವಿನಲ್ಲಿ ಕರೆಯುತ್ತಾರೆ. ತುಳುವರ ಅಡುಗೆಮನೆಯಲ್ಲಿ ಸಿದ್ಧವಾಗಿರುವ ಅಡ್ಯೆಗಳು ನಾನಾ ತರದವುಗಳು. ಅವುಗಳಲ್ಲಿ ಅನೇಕವು ಈ ಪ್ರದೇಶಕ್ಕೆ ಸೀಮಿತವಾದವು, ವಿಶಿಷ್ಟವಾದವು : ದೋಸೆ, ಪುಂಡಿ (ಕಡುಬು), ಕೊಟ್ಟಿಗೆ, ಸೇಮಗೆ, ರೊಟ್ಟಿ, ಚಾಪೆಯಂತೆ ಮಡಿಸಿದ ಅಡ್ಯೆ, ಹಲಸಿನ ಗಟ್ಟಿ, ಕೆಂಡದಡ್ಯೆ, ಮೂಡೆ, ತಲ್ಲಾವ್, ಮಡಿಸಿ ಇಟ್ಟ ಅಡ್ಯೆ, ಮನ್ನಿ, ನೊಚ್ಚಿ, ಅಪ್ಪ ಮುಂತಾದ ಅನೇಕ ಅಡ್ಯೆಗಳು ತುಳು ಜನಪದ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುತ್ತವೆ. ತುಳು ಗಾದೆಗಳಲ್ಲಿ ಕಾಣಿಸುವ ಕೆಲವು ಅಡ್ಯೆಗಳನ್ನು ಗಮನಿಸಬಹುದು :

1. ಅರಿ ಪಾಡ್ನಗ ಇಪ್ಪಯೆ, ಅಡ್ಯೆ ಮಲ್ಪುನಗ ತಪ್ಪಯೆ.
(ಅಕ್ಕಿ ಹಾಕುವಾಗ ಇರಲಾರ, 'ಅಡ್ಯೆ' ಮಾಡುವಾಗ ತಪ್ಪಲಾರ.)
'ಕೆಲಸಕ್ಕೆ ತಪ್ಪಿಸಿ, ತಿನ್ನುವಾಗ ಹಾಜರು' ಎನ್ನುವ ಅರ್ಥ.

2. ತಿನಿಯೆರೆ ಕೊರಿ ಅಡ್ಯೆ ಮೋನೆಗ್ ದರ್ತ್ಂಡ್.
(ತಿನ್ನಲು ಕೊಟ್ಟ 'ಅಡ್ಯೆ'ಯನ್ನು ಮುಖಕ್ಕೆ ತೆಗೆದು ಎಸೆದದ್ದು.)

3. ತೆಲಿ ನೀರ್ ಜಪ್ಪಂದಿನಾಯಗ್ ರೊಟ್ಟಿ ತಿನ್ಯೆರೆ ಕೊರಿಲೆಕೊ.
(ತಿಳಿ ನೀರು ಗಂಟಲಲ್ಲಿ ಇಳಿಯದವನಿಗೆ ರೊಟ್ಟಿ ತಿನ್ನಲು ಕೊಟ್ಟ ಹಾಗೆ.)

4. ಪರ್ಬೊ ಕರಿಯಂದೆ ರೊಟ್ಟಿ ಪತ್ತ್ಯರೆ ಆವಂದ್.
(ದೀಪಾವಳಿ ಹಬ್ಬ ಕಳೆಯದೆ ರೊಟ್ಟಿ ಮಾಡಬಾರದು.)

5. ಆಣ್ ಪೆದ್ಯನಾಳೆಗ್ ಅಂಬಡೆದ ರೀತಿ, ಪೊಣ್ಣು ಪೆದ್ಯನಾಳೆಗ್ ತೆಲ್ಲಾವ್‌ದ ರೀತಿ.
(ಗಂಡು ಹೆತ್ತವಳಿಗೆ ಅಂಬಟೆಯಂತೆ, ಹೆಣ್ಣು ಹೆತ್ತವಳಿಗೆ ತೆಲ್ಲಾವ್ (ತೆಳು ದೋಸೆ) ಯಂತೆ.)

6. ಅಪ್ಪೊ ತಿಂದ್ಂಡ ಯಾರಂದೊ ? ಗುರಿಲ ಲೆಕ್ಕೊ ಮಲ್ಪೊಡೊ ?
(ಅಪ್ಪ ತಿಂದರೆ ಸಾಲದೆ ? ಕುಳಿ ಲೆಕ್ಕ ಮಾಡಬೇಕೆ ?)

7. ಅಡ್ಯೆಡ್ ಮೇಲ್ ಕಡುಂಬು, ವಾದ್ಯೊಡ್ ಮೇಲ್ ದಿಡುಂಬು.
(ಅಡ್ಯೆಯಲ್ಲಿ ಶ್ರೇಷ್ಠವಾದುದು ಕಡುಬು, ವಾದ್ಯಗಳಲ್ಲಿ ಶ್ರೇಷ್ಠವಾದುದು ದಿಡುಂಬು.)

8. ನ್ಯಾಯ ತೆರಿಯಂದಿನಾಯಗ್ ನಿನ್ನಿ,
ಕೂಲಿ ದಾಂತಿನಾಯಗ್ ಮನ್ನಿ.
(ನ್ಯಾಯ ತಿಳಿಯದವನಿಗೆ ಒಣತರ್ಕ, ಹಲ್ಲು ಇಲ್ಲದವನಿಗೆ ಮನ್ನಿ.)

9. ನಿತ್ಯಲಾ ಬತ್ತ್‌ನಾಯೆ ನೊಚ್ಚಿಗ್ ಸಮ.
(ದಿನಾಲು ಬಂದವನು ನುಚ್ಚಿಗೆ ಸಮ.)

## 6. ಪಲ್ಯ :

ಪಲ್ಯ ಅಥವಾ ಪದಾರ್ಥಕ್ಕೆ ತುಳುವಿನಲ್ಲಿ 'ಕಜಿಪ್ಪು' ಎನ್ನುತ್ತಾರೆ. 'ಕಜಿಪ್ಪು'ವಿಗೆ ಬೇರೆ ಬೇರೆ ವಸ್ತುಗಳನ್ನು ಉಪಯೋಗಿಸುತ್ತಾರೆ.

1. ಒಂತೆ ಕಜ್ಪುಗ್ ಉಪ್ಪು ಜಾಸ್ತಿ, ದಾಲದಾಂತಿನಾಯಗ್ ಗಾಡೊ ಜಾಸ್ತಿ.
(ಸ್ವಲ್ಪ ಪಲ್ಯಕ್ಕೆ ಉಪ್ಪು ಹೆಚ್ಚು, ಏನೂ ಇಲ್ಲದವನಿಗೆ ಅಹಂಕಾರ ಹೆಚ್ಚು.)

2. ಸಮೇರಿ ಮೀರ್ನ ಪೊಣ್ಣು, ಸಂಬಾರೊ ಮೀರ್ನ ಕಜಿಪ್ಪು.
(ಸಮೇರು ಮೀರಿದ ಹೆಣ್ಣು, ಸಂಬಾರ ಮೀರಿದ ಮೇಲೋಗರ.)

25. ಸೊಳ್ಳೆ :

1. ಆನೆಗ್ ಉಮಿಲ್ ತುಂಚ್ಚಿಲೆಕೊ.
(ಆನೆಗೆ ಸೊಳ್ಳೆ ಕಡಿದಂತೆ.)

2. ಉಮಿಲ್ ತಿಂದ್‌ದ್ ಜಾತಿ ಚೆಟ್ಟುನೆ ದಾಯೆ ?
(ಸೊಳ್ಳೆ ತಿಂದು ಜಾತಿ ಕೆಡುವುದು ಯಾಕೆ ?)

3. ಉಮಿಲ್‌ದ ಮಾಸ ತಿಂದ್‌ದ್ ಜೈನಾದಿಗೆ ತೆಟ್ಟಿಲೆಕೊ.
(ಸೊಳ್ಳೆ ಮಾಂಸ ತಿಂದು ಜೈನ ಮತಭ್ರಷ್ಟನಾದಂತೆ.)

26. ಉಣ್ಣೆ (ಉಲುಂಗು) :

1. ಸಯಿತ್ತ್ ಎರುಡ್ದ್ ಉಲುಂಗ್ ಬುಡಿಲೆಕೊ.
(ಸತ್ತ ಎತ್ತಿನಿಂದ ಉಣ್ಣೆ ಬಿಟ್ಟ ಹಾಗೆ.)

27. ಎರೆಹುಳು :

1. ನಕ್ಕುರ್ ಪಾಡ್ದ್ ಏರಿ ಒಯ್ತಿಲೆಕೊ.
(ಎರೆಹುಳವನ್ನು ಹಾಕಿ 'ಏರಿ' ಮೀನನ್ನು ಎಳೆದ ಹಾಗೆ.)

2. ಮರಿ ಜೆಡೆ ದೆರ್ತ್‌ದಂಡ್‌ದ್ ನಕ್ಕುರುಲಾ ತರೆ ದೆರ್ತ್‌ದಂಡ್‌ಗೆ.
(ನಾಗರಹಾವು ಹೆಡೆ ಎತ್ತಿತು ಎಂದು ಎರೆಹುಳುವೂ ಹೆಡೆ ಎತ್ತಿತಂತೆ.)

## V. ಅಡುಗೆ :

'ಅಡುಗೆ' ಯಾವುದೇ ಸಂಸ್ಕೃತಿಯ ಅನಿವಾರ್ಯವಾದ ಒಂದು ಭಾಗ. ತುಳು ಗಾದೆಗಳಲ್ಲಿ ತುಳು ನಾಡಿನ ಅಡುಗೆಯ ಬೇರೆ ಬೇರೆ ವಿಧಗಳನ್ನು, ಮಾಡುವ ರೀತಿಗಳನ್ನು, ಅಡುಗೆಯ ಸಾಧನಗಳನ್ನು ಕಾಣಬಹುದು. ಇವುಗಳಲ್ಲಿ ಅನೇಕವು ಇಂದು ಕಾಣಿಸುವುದಿಲ್ಲ.

1. ಉಪ್ಪಿನಕಾಯಿ :

1. ಅಪ್ಪೆ ಇದ್ಯಂಡ್‌ನ ಮಗೆ, ಉಪ್ಪಡ್ ಇದ್ಯಂಡ್‌ನ ಒಣಸ್‌ದಲೆಕೊ.
(ತಾಯಿ ಇಲ್ಲದ ಮಗ, ಉಪ್ಪಿನಕಾಯಿ ಇಲ್ಲದ ಊಟದಂತೆ.)

2. ಉಣ್ಪೆರೆ ಇದ್ಯಂದಿ ಉಪ್ಪಡ್.
(ಊಟಕ್ಕಿಲ್ಲದ ಉಪ್ಪಿನಕಾಯಿ.)

3. ನಾಯಿಗ್ ದಾಯೆ ನಾರಂಗಾಯಿತ ಉಪ್ಪಡ್ ?
(ನಾಯಿಗೆ ಯಾಕೆ ನಿಂಬೆ ಉಪ್ಪಿನಕಾಯಿ ?)
'ಅಪಾತ್ರನಿಗೆ ಗೌರವ ಕೊಡುವುದು ಯಾಕೆ ?' ಎನ್ನುವ ಅರ್ಥದಲ್ಲಿ ಈ ಗಾದೆ.

5. ಉಪ್ಪು ಕಂಡೊನ್‌ನಾಯೆಂ ಉಪ್ಪು ಕರಯಿಲೆಕೊನೇ ಅಳಿದ್ ಪೋಪೆಗೇ.
(ಉಪ್ಪು ಕದ್ದವನು ಉಪ್ಪು ಕರಗಿದಂತೆಯೇ ಅಳಿದುಹೋಗುತ್ತಾನಂತೆ.)

9. ಗಂಜಿ–ತಿಳಿ :

1. ಆರ್‌ಲ ಎಡ್ಡೆ, ಇಂಬೆರ್‌ಲ ಎಡ್ಡೆ, ಉಪ್ಪು ಕೊಟ್ದ್ ತೆಳಿ ಮಯಿಂಪ್ಪಿಯೆರೆ ಬಿರಣೆರೆ ದೆತ್ತಿ ಎಡ್ಡೆ.
(ಅವರೂ ಒಳ್ಳೆಯವರು, ಇವರೂ ಒಳ್ಳೆಯವರು, ಉಪ್ಪು ಹಾಕಿದ ತಿಳಿ ಎರೆಯಲು ಬ್ರಾಹ್ಮಣರ ಹೆಂಗಸು ಒಳ್ಳೆಯದು.)

2. ಅಡಿತ್ತ ಕರಟ್ಟ್ ತೆಲಿ ಇಜ್ಜಿ, ಮಿತ್ತ್‌ದ ಕರಟ್ಟ್ ಉಣಪ್ಪು ಇಜ್ಜಿ.
(ಕೆಳಗಿನ ಮಡಕೆಯಲ್ಲಿ ತಿಳಿ ಇಲ್ಲ, ಮೇಲಿನ ಮಡಕೆಯಲ್ಲಿ ಅನ್ನ ಇಲ್ಲ.)

10. ಪಾಯಸ :

1. ಮಾದಿಗನ ಇಲ್ಲರ್ ಸೀಯನೊ ಮಲ್ತ್‌ಂಡ ಬ್ರಾಣಗ್ ದಾನೆ ?
(ಮಾದಿಗನ ಮನೆಯಲ್ಲಿ ಪಾಯಸ ಮಾಡಿದರೆ ಬ್ರಾಹ್ಮಣನಿಗೇನು ?)

2. ಪಾಯಸೊಗು ಬೆಲ್ಲ ಪಾಡಿನಾತ್ ಎಡ್ಡೆ,
ಕಂಡೊಗು ಗೊಬ್ಬರ ಪಾಡಿನಾತ್ ಎಡ್ಡೆ.
(ಪಾಯಸಕ್ಕೆ ಬೆಲ್ಲ ಹಾಕಿದಷ್ಟು ಒಳೆಯದು, ಗದ್ದೆಗೆ ಗೊಬ್ಬರ ಹಾಕಿದಷ್ಟು ಒಳ್ಳೆಯದು.)

11. ಮೊಸರು :

1. ಬುಡೆದಿಡ ಮನಸ್ ದಾಂತಿನಾಯೆ ಬೆಂಞಣೊಡ್ ಕಲ್ಲುಂಡ್‌ಂದ್ ಪನ್ಪೆ.
(ಹೆಂಡತಿಯಲ್ಲಿ ಮನಸ್ಸಿಲ್ಲದವನು ಮೊಸರಿನಲ್ಲಿ ಕಲ್ಲುಂಟು ಎಂದು ಹೇಳಿದ.)

2. ಕೊಜಪ್ಪು ತುಳಿತ್ತ್‌ಂಡ ನೆಯಿ ತಿಕ್ಕು, ನೀರ್ ತುಳಿತ್ತ್‌ಂಡ ದಾನೆ ತಿಕ್ಕು ?
(ಮೊಸರು ಕಡೆದರೆ ಬೆಣ್ಣೆ ಸಿಕ್ಕೀತು, ನೀರು ಕಡೆದರೆ ಏನು ಸಿಕ್ಕೀತು ?)

12. ಒಲೆ :

1. ಓಡ್‌ಡ್ದ್ ರಟ್ಟ್‌ದ್ ದಿಕ್ಕೆಲ್‌ಗ್ ಬೂರಿಲೆಕೊ.
(ಓಡಿನಿಂದ ಸಿಡಿದು ಒಲೆಗೆ ಬಿದ್ದ ಹಾಗೆ.)

2. ಕಂಡನಿ ಸೀರೆಗ್ ಪೋತೇಂದ್ ತೆತ್ತಿದಿ ಕುಂಟುನು ದಿಕ್ಕೆಲ್‌ಗ್ ಪಾಡ್‌ದ್ ಕುಳ್ಳಿಲೆಕೊ.
(ಗಂಡ ಸೀರೆ ತರಲು ಹೋಗಿದ್ದಾನೆ ಎಂದು ಉಟ್ಟ ಬಟ್ಟೆಯನ್ನು ಒಲೆಗೆ ಹಾಕಿ ಕುಳಿತ ಹಾಗೆ.)

## VI. ಸಾಮಗ್ರಿಗಳು - ಸಾಧನಗಳು :

ತುಳುನಾಡಿನ ಹಳ್ಳಿಗಳಲ್ಲಿ ಜನರು ಬಳಸುವ ಸಾಮಗ್ರಿಗಳು, ಸಾಧನಗಳು ಅಪಾರ. ಅಡುಗೆಮನೆಯ ಸಾಮಗ್ರಿಗಳು, ಇತರ ಗೃಹೋಪಯೋಗಿ ಸಾಮಗ್ರಿಗಳು, ಬೇಸಾಯದ ವಸ್ತುಗಳು, ಇತರ ವೃತ್ತಿಗಳ ಸಾಧನ ಗಳು : ಈ ರೀತಿ ಸಾಮಗ್ರಿಗಳ ಸಂಪತ್ತನ್ನು ಕಾಣಬಹುದು. ಅಡುಗೆಗೆ ಸಹಾಯಕವಾದ ಚೆಂಬು, ಪಾತ್ರೆ, ಕಾವಲಿ, ಹಂಡೆ, ಕೈವಸ್ತ್ರ, ಅಡ್ಯರ, ಮಡಕೆ, ಗೆರಸೆ, ಒಲೆ, ಬಿಸಲೆ ಮುಂತಾದುವುಗಳನ್ನೂ ಇತರ ಗೃಹೋಪ ಯೋಗಿ ವಸ್ತುಗಳಾದ ಕನ್ನಡಿ, ದೀಪ, ಒನಕೆ, ಪೀಕದಾನಿ, ಕಂಬಳಿ, ಚಾಪೆ, ಕೊಳವೆ, ಹಚ್ಚಡ, ಪೆಟ್ಟು, ಕೊಡೆ, ಚೂರಿ, ಕತ್ತರಿ, ಗುಡಾಣ, ಸುಣ್ಣ, ಕಡೆಂಚಿಲ್, ಗರಗಸ ಮುಂತಾದುವುಗಳನ್ನೂ ಬೇಸಾಯ ಮುಂತಾದ ಕಸುಬುಗಳಿಗೆ ಬೇಕಾದ ನೊಗ, ನೇಗಿಲು, ಬಲೆ, ಕೊಡಲಿ, ವಾದ್ಯ, ಶಂಖ ಇತ್ಯಾದಿ ಸಾಮಗ್ರಿಗಳನ್ನೂ ತುಳು ಗಾದೆಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಾಣಬಹುದು.

1 ಅಡ್ಯರ :

ಅಡಿ ಪೋಯಿನ ಅಡ್ಯರದಲೆಕೊ.
(ತಳಪಾಯವಿಲ್ಲದ ಅಡುಗೆಯ ಪಾತ್ರೆಯಂತೆ.)

2. ಬಿಸಲೆ (ಅಡುಗೆ ಮಾಡುವ ಮಣ್ಣಿನ ಪಾತ್ರೆ) – ಮಡಕೆ :

1. ಬಾಯಿ ಬಿಸಲೆ, ಕಹಿ ನೆಸಲೆ.
(ಬಾಯಿ ದೊಡ್ಡ ಮಣ್ಣಿನ ಪಾತ್ರೆ, ಕೈ ಚಿಕ್ಕ ಮಣ್ಣಿನ ಪಾತ್ರೆ.)

• ಅಡುಗೆ ಮಾಡಲು ಉಪಯೋಗಿಸುವ ಮಣ್ಣಿನ ಪಾತ್ರೆಗಳಲ್ಲಿ ದೊಡ್ಡದನ್ನು 'ಬಿಸಲೆ' ಎಂದೂ ಚಿಕ್ಕದನ್ನು 'ನೆಸಲೆ' ಎಂದೂ ಕರೆಯುತ್ತಾರೆ.

2. ಕರ ನರಿಂಡ ಕಕ್ಕೆಗ್ ಲಾಬೊ.
(ಅಡುಗೆಯ ಮಡಕೆ ಒಡೆದರೆ ಕಾಗೆಗೆ ಲಾಭ.)

3. ದಿಕ್ಕೆಲ್ದ ಕರ ಕಾಯಿಜಿಂಡ, ದಿಕ್ಕೆಲ್ದ ಮೇಲ್ದ ಕರ ಕಾಯುವೋ ?
(ಒಲೆಯಲ್ಲಿರುವ ಮಡಕೆ ಕಾಯದಿದ್ದರೆ, ಒಲೆಯ ಪಕ್ಕದಲ್ಲಿರುವ ಮಡಕೆ ಕಾದೀತೇ ?)

4. ಎಡ್ಡೆ ಕರನ್ ಒಟ್ಟೆ ಕರಟ್ಟ್ ತಾಂಟಯಿಲೆಕೊ.
(ಒಳ್ಳೆಯ ಮಡಕೆಯನ್ನು ತೂತು ಮಡಕೆಯೊಡನೆ ತಾಗಿಸಿದಂತೆ.)

3. ಕಾವಲಿ :

1. ಕಾವೊಲಿದ ಕಸ್ಟಲಾ ಬೋಡ್ಚಿ, ತೆಲ್ಲಾವುದ ಇಷ್ಟಲಾ ಬೋಡ್ಚಿ.
(ಕಾವಲಿಯ ಕಷ್ಟವೂ ಬೇಡ, ತೆಳುದೋಸೆಯ ಇಷ್ಟವೂ ಬೇಡ.)

4. ಕಡೆಂಚಿಲ್ :

"ಕಡೇಂಚಿಲ್" ಅಂದರೆ ತುಂಟ ಹಸುಗಳನ್ನು ಹಾಲು ಕರೆಯಲು ಸುಲಭವಾಗುವಂತೆ ಬಂಧಿಸಲು ಉಪಯೋಗಿಸುವ, ಎರಡು ಮರದ ಹಳಿಗಳಂತ ಕೂಡಿದ ಸಾಧನ. ಮಂಚದಕಾಲು ಮೊದಲಾದ ಮರದ ಕೆತ್ತನೆಯ ಕೆಲಸಗಳನ್ನು ಬಹಳ ನಾಜೂಕಾಗಿ ಉಪಯೋಗಿಸುವ ಸಾಧನಗಳನ್ನು "ಕಡೆಂಚಿಲ್" ಎನ್ನುತ್ತಾರೆ. ಅದಕ್ಕೆ ಸಂಬಂಧಿಸಿದ ಗಾದೆಗಳು ಈ ರೀತಿ ಇವೆ :

1. ಆನೆ ಸಿರ್ಕ್‌ನಲ ಕಡೆಂಚಿಲ್‌ಗ್ ಪೊಗ್ಗಂದ್.
(ಆನೆ ಎಷ್ಟು ಚಿರುಟಿದರೂ ಕಡೆಂಚಿಲಿನಲ್ಲಿ ಹೊಗ್ಗಲಾರದು.)

5. ಗೆರಸೆ (ತಡ್ಪೆ) :

1. ತಡ್ಪೆ ಬೊಟ್ಟ್‌ಡ್ ಎಲಿ ಬೆರಿಪತ್ತಿಲೆಕೊ.
(ಗೆರಸೆಯನ್ನು ಹೊಡೆದು ಇಲಿಯನ್ನು ಓಡಿಸುವುದು.)
"ಸುಲಭದಲ್ಲಿ ಒಬ್ಬರನ್ನು ಹೆದರಿಸುವುದು" ಎಂಬ ಅರ್ಥ.

2. ತನೆಕ್ ಪೊಗ್ಗರೆ ಇಡೆ ಇಜ್ಜಂಡಲಾ ಪೀಂಕಣೆಗ್ ತಡ್ಪೆ ಕಟ್ಯೊಂದೆಗೆ.
(ತನಗೆ ಒಳಹೋಗಲು ಎಡೆ ಇಲ್ಲದಿದ್ದರೂ ತನ್ನ ತಿಕಕ್ಕೆ ಗೆರಸೆ ಕಟ್ಟಿಕೊಂಡಿದಾ ನಂತೆ.)

6. ಒನಕೆ :

1. ಉಜ್ಜೇರ್ದ್ ನಾರ್ ದೆತ್ತಿಲೆಕೊ.
(ಒನಕೆಯಿಂದ ನಾರು ತೆಗೆದಂತೆ.)

2. ಉಜ್ಜೇರ್ ಅಂಚಿ ದೀಪ್‌ನ ಉಜ್ಜಡೆ ಸಂಬಳೊ ಕೊರೊಡು.
(ಒನಕೆಯನ್ನು ಆಚೆ ಇಟ್ಟರೆ ಒರಳೇ ಸಂಬಳ ಕೊಡಬೇಕು.)
"ಅಲ್ಪ ಕೆಲಸಕ್ಕೆ ಕಲ್ಪದಷ್ಟು ಸಂಬಳ" ಎನ್ನುವ ಅರ್ಥ.

3. ಉಗುರುಸುತ್ತುದ ಮಿತ್ತ್ ಉಜ್ಜೇರ್‌ದ ಪೆಟ್ಟ್.
(ಉಗುರುಸುತ್ತಿನ ಮೇಲೆ ಒನಕೆ ಪೆಟ್ಟು.)

4. ಗುರಿಟ್ಟ್ ಕುಳ್ಳುದ್ ಉಜ್ಜೆರ್‌ದ ಪೆಟ್ಟು ತಪ್ಪವೊಲಿಯ ?
(ಕುಳಿಯಲ್ಲಿ ಕುಳಿತು ಒನಕೆ ಪೆಟ್ಟು ತಪ್ಪಿಸಬಹುದೇ ?)

7. ಕೊಡಲಿ (ಮಡು) :

1. ಪುಗೆಲ್‌ಡ್ ಮಡು ದೀಡೊಂದು ಊರುಡಿಕ್ಕ ನಾಡಿಲೆಕೊ.
(ಹೆಗಲಿನಲ್ಲಿ ಕೊಡಲಿ ಇಟ್ಟುಕೊಂಡು ಊರಿಡೀ ಹುಡುಕಿದ ಹಾಗೆ.)

2. ಮುಳ್ಳುಡು ದೆಪ್ಪುನೈನ್ ಮಡುಟ್ಟ್ ದೆಪ್ಪಿಯೆರೆ ಮಲ್ತೊನುನೆ.
(ಮುಳ್ಳಿನಿಂದ ತೆಗೆಯುವುದನ್ನು ಕೊಡಲಿಯಿಂದ ತೆಗೆಯುವಂತೆ ಮಾಡಿಕೊಳ್ಳುವುದು.)

8. ಚೂರಿ-ಕತ್ತರಿ :

1. ಯಂಸಾತಿದಾಯಂಗ್ ಬೀಸತ್ತಿ ದಾಯೆ ?
(ಸಮಾಧಾನದವನಿಗೆ ಚೂರಿ ಯಾಕೆ ?)

2. ಕತ್ರೆರಿಲಾ ಬೀಸತ್ತಿಲಾ ನ್ಯಾಯೊ ಮಲ್ತಿಲೆಕೊ.
(ಕತ್ತಿರಿಯೂ ಚೂರಿಯೂ ಸೇರಿ ಜಗಳ ಮಾಡಿದ ಹಾಗೆ.)

9. ಪೀಕದಾನಿ :

1. ಉಬಿಪ್ಪುನ ಪಡ್ಯೊದಲೆಕೊ.
(ಉಗುಳುವ ಪೀಕದಾನಿಯ ಹಾಗೆ.)
'ಮುನ್ಸಿಪಾಲಿಟಿ ಡಬ್ಬಿಯ ಹಾಗೆ' ಎಂಬ ಮಾತಿನಂತೆ.

10. ಕೈವಸ್ತ್ರ (ಕೈಕುಂಟು) :

1. ಪೊತ್ತ್‌ನಗ ಕೈಕುಂಟು ಇತ್ತಿಲೆಕೊ.
(ಸುಡುವಾಗ ಕೈವಸ್ತ್ರ ಇದ್ದ ಹಾಗೆ.)
ಅಡುಗೆ ಮಾಡುವಾಗ ಕೈಗೆ ಬೆಂಕಿಯ ಬಿಸಿ ತಾಗದಂತೆ ಪಾತ್ರೆಗಳನ್ನು ಹಿಡಿದುಕೊಳ್ಳುವ ಬಟ್ಟೆಯ ತುಂಡನ್ನು 'ಕೈಕುಂಟು' (ಕೈವಸ್ತ್ರ) ಎನ್ನುತ್ತಾರೆ.

11. ಪರ್ದತ್ತಿ :

ಪಾಡುನೆ ಪರ್ದತ್ತಿಗ್ ಪರು, ಪಾತೆರುನೆ ವಿಮಾನೊ ಮಲ್ಪುನ ಸುದ್ದಿ.
(ಹಾಕುವುದು ಹಲ್ಕತ್ತಿಗೆ ಹಲ್ಲು, ಮಾತನಾಡುವುದು ವಿಮಾನ ಮಾಡುವ ಸುದ್ದಿ.)
'ಮಾಡುವುದು ಸಣ್ಣ ಕೆಲಸ, ಮಾತನಾಡುವುದು ದೊಡ್ಡ ವಿಚಾರ' ಎಂಬ ಅರ್ಥ.

ಭತ್ತದ ತೆನೆಯನ್ನು ಕೊಯ್ಯಲು ಉಪಯೋಗಿಸುವ ಚಿಕ್ಕ ಚಿಕ್ಕ ಹಲ್ಲುಗಳಿರುವ ಕತ್ತಿಯನ್ನು 'ಪರ್ದತ್ತಿ' ಎನ್ನುತ್ತಾರೆ.

12. ಮುಟ್ಟಾಳೆ :

ತುಳುನಾಡಿನಲ್ಲಿ ಕೆಲಸಗಾರರಿಗೆ ಅತ್ಯಂತ ಅವಶ್ಯಕವಾಗಿರುವುದು 'ಮುಟ್ಟಾಳೆ'. ಅಡಿಕೆ ಮರದ ಹಾಳೆಯಿಂದ ಮಾಡಿದ, ತಲೆಗೆ ಸರಿಯಾಗಿ ಹೊಂದಿಕೊಳ್ಳುವ ಒಂದು ವಿಧದ ಟೊಪ್ಪಿಗೆಯನ್ನು 'ಮುಟ್ಟಾಳೆ ಎನ್ನುತ್ತಾರೆ. ಮುಟ್ಟಾಳೆಯು ತುಳುನಾಡಿನ ಒಂದು ವೈಶಿಷ್ಟ್ಯದಂತೆ ಕಾಣಿಸುತ್ತದೆ.

1. ಮನ್ನಗ್ ಮಂಟ್ಪಾಲೆದ ಪಸೆ ಆಜಿಬೆಟ್ಟಗೆ ನೆಂಪಿಜ್ಜಿ.
(ಹೊಲೆಯನಿಗೆ ಮಂಟ್ಪಾಳೆಯ ಪಸೆ ಒಣಗಿದ ಕೂಡಲೆ ಜ್ಞಾಪಕ ಇರುವುದಿಲ್ಲ.)

2. ಮಟ್ಪಾಲೆದಾಯೆಗ್ ಕೊರ್ಪುಜಿ, ಮುಂಡಾಸ್‌ದಾಯೆ ಬರ್ಪುಜಿ.
(ಮಂಟ್ಪಾಳೆಯವನಿಗೆ ಕೊಡುವುದಿಲ್ಲ, ಮುಂಡಾಸಿನವನು ಬರುವುದಿಲ್ಲ.)

'ಮಗಳನ್ನು ಬಡವನಿಗೆ ಕೊಡುವುದಿಲ್ಲ, ಶ್ರೀಮಂತ ಬರುವುದಿಲ್ಲ' ಎಂಬ ಅರ್ಥ.

3. ಮಂಟ್ಪಾಳೆದಾಯೆ ಎಲ್ಯ ಆಂಡ್ ಮುಂಡಾಸ್‌ದಾಯೆ ಮಲ್ಲೆ ಆಂಡ್.
(ಮಂಟ್ಪಾಳೆಯವನು ಚಿಕ್ಕದಾಯಿತು, ಮುಂಡಾಸಿನವನು ದೊಡ್ಡದಾಯಿತು.)

13. ಗುಡಾಣ :

1. ಪಂಜಿ ತಾಡ್ನಾಯೆಗ್ ಗುರ್ಕೆ ತೂನಗ ಪೋಡಿಗೆ ಆಪುಂಡು.
(ಹಂದಿ ಹಾಯ್ದವನಿಗೆ ಗುಡಾಣ ನೋಡುವಾಗ ಹೆದರಿಕೆ ಆಗುತ್ತದೆ.)

2. ಬಾಯಿ ಸುಣ್ಣಜನೊ, ಬಂಜಿ ಬಾರಗೊಳಿ.
(ಬಾಯಿ ಸುಣ್ಣದ ಕರಡಿಗೆಯಂತೆ, ಹೊಟ್ಟೆ ಗುಡಾಣದಂತೆ.)

'ಇರುವುದು ಕಲ್ಪ, ಕೊಡುವುದು ಅಲ್ಪ' ಎಂಬ ಅರ್ಥ.

14. ಹಂಡೆ-ಕುಡ್ತೆ :

1. ಅಂಡೆಗ್‌ಲ ತಿಕ್ಕಯೆ, ಕೊಂಡೆಗ್‌ಲ ತಿಕ್ಕಯೆ.
(ಹಂಡೆಗೂ ಸಿಕ್ಕಲಾರ, ಕುಡ್ತೆಗೂ ಸಿಕ್ಕಲಾರ.)

2. ಅಂಡೆದ ಬಾಯಿ ಕಟ್ಯೊಲಿ, ದೊಂಡೆದ ಬಾಯಿ ಕಟ್ಯೆರೆ ಬಲ್ಲಿ.
(ಹಂಡೆಯ ಬಾಯಿಯನ್ನು ಕಟ್ಟಬಹುದು, ಮನುಷ್ಯರ ಗಂಟಲನ್ನು ಕಟ್ಟಲು ಸಾಧ್ಯವಿಲ್ಲ.)

3. ಕಂಡೆಡ್ ಕಾಯಿಂಡ ಕೊಂಡೆಗ್‌ಲ ಮುಟ್ಟ ಬರಂದ್.
(ಗದ್ದೆಯಲ್ಲಿ ಒಣಗಿದರೆ ಕುಡ್ತೆಯಲ್ಲಿಯೂ ತುಂಬಲಾರದು.)

15. ಕಂಬಳಿ :

1. ಕಂಬೊಳಿಡ್ ಪತ್ತಿ ಪೀತಲೆಕೊ.
(ಕಂಬಳಿಯಲ್ಲಿ ಹಿಡಿದ ಹೇಲಿನ ಹಾಗೆ.)

2. ಕರಡಿಗ್ ಪೋಡಿಯಂದಿನಾಯೆ ಕಂಬೊಳಿಗ್ ಪೋಡಿವೆನಾ ?
(ಕರಡಿಗೆ ಹೆದರದವನು ಕಂಬಳಿಗೆ ಹೆದರಿಯಾನೇ ?)

3. ಒಣಸ್‌ಗ್ ಆವಂದಿ ಉಪ್ಪಡ್, ಚಳಿಕ್ಕ್ ಆವಂದಿ ಕಂಬೊಳಿ ದಾಯೆಗ್ ?
(ಊಟಕ್ಕೆ ಆಗದ ಉಪ್ಪಿನಕಾಯಿ, ಚಳಿಗೆ ಆಗದ ಕಂಬಳಿ ಯಾಕೆ ?)

## VII. ಧಾರ್ಮಿಕ ಆಚರಣೆ, ಪದ್ಧತಿ, ನಂಬಿಕೆಗಳು :

ತುಳುನಾಡಿನ ಜನಜೀವನದ ಅನೇಕ ಧಾರ್ಮಿಕ ಆಚರಣೆಗಳು, ಪದ್ಧತಿಗಳು ಹಾಗೂ ನಂಬಿಕೆಗಳು ತುಳುನಾಡಿನ ಸಂಸ್ಕೃತಿಯ ಮುಖ್ಯವಾದ ಭಾಗವಾಗುತ್ತದೆ. ಸಹಜವಾಗಿ ಇವು ತುಳು ಗಾದೆಗಳಲ್ಲಿಯೂ ತಮ್ಮ ಅಭಿವ್ಯಕ್ತಿಯನ್ನು ಕಂಡುಕೊಂಡಿವೆ.

### 1. ಭೂತಾರಾಧನೆ :

ಭೂತಾರಾಧನೆ ತೌಳವ ಸಂಸ್ಕೃತಿಯಲ್ಲಿ ಪ್ರಧಾನವಾಗಿದೆ. ಇಂದಿಗೂ ಹಳ್ಳಿಯ ಜನಜೀವನದಲ್ಲಿ ಅವುಗಳಿಗಿರುವ ಮಹತ್ವವು ಸಂಪೂರ್ಣ ಕಡಿಮೆಯಾಗಿಲ್ಲ. ಭೂತಗಳ ಬಗ್ಗೆ ಇಲ್ಲಿನ ಜನರಿಗಿರುವ ಬೇರೆ ಬೇರೆ ದೃಷ್ಟಿಕೋನಗಳು ತುಳು ಗಾದೆಗಳಲ್ಲಿ ಕಾಣಿಸಿಕೊಂಡಿವೆ.

1. ಆಟಿ ಭೂತೊಗು ಮೂಜಿ ಕಣ್ಣ್‌ದ ಪರಕ್ಕೆ.
(ಆಷಾಢದ ಭೂತಕ್ಕೆ ತೆಂಗಿನಕಾಯಿಯ ಹರಕೆ.)
ಅಂದರೆ 'ಸಾಮಾನ್ಯ ಭೂತಕ್ಕೆ ಸಾಧಾರಣ ಸೇವೆ' ಎನ್ನುವ ಅರ್ಥ.

2. ಅವುಸರದ ಬೂತೊಗು ಅರಿ ಅರಿ ಬಜಿಲ್.
(ಅವಸರದ ಭೂತಕ್ಕೆ ಅರ್ಧಂಬರ್ಧ ಅವಲಕ್ಕಿ.)

3. ಅರಸನ ಅಂಕೆ ಇಜ್ಜಿ, ಭೂತೊದ ಕಾಟ ಇಜ್ಜಿ.
(ಅರಸನ ಅಂಕೆ ಇಲ್ಲ, ಭೂತದ ಕಾಟ ಇಲ್ಲ.)

4. ಆಜಿ ಭೂತೊಗು ಮೂಜಿ ಪಾಡ್ದನ.
(ಆರು ಭೂತಕ್ಕೆ ಮೂರು ಪಾಡ್ದನ.)

5. ಎರು ತಾಂಕಿನಾಯನ್ ಕೆರು, ಭೂತೊ ತಾಂಕಂದಿನಾಯನ್ ಕೆರು.
(ಕೋಣ ಸಾಕಿದವನನ್ನು ಕೊಂದೀತು, ಭೂತ ಸಾಕದವನನ್ನು ಕೊಂದೀತು.)

6. ಕರಿಯ ಭೂತೊಗು ಕಸಾಯ ನೀರ್.
(ಕಪ್ಪು ಭೂತಕ್ಕೆ ಕಷಾಯ ನೀರು.)
"ಕ್ಷುಲ್ಲಕ ಭೂತಕ್ಕೆ ನಿರ್ಲಕ್ಷ್ಯದ ಸೇವೆ" ಎಂಬ ಅರ್ಥ.

7. ಕಾಟಿ ಭೂತೊಗು ಕಾವೇರಿ ಸಂಕ್ರಾಂತಿ.
(ಸಾಮಾನ್ಯ ಭೂತಕ್ಕೆ ಕಾವೇರಿ ಸಂಕ್ರಮಣ.)
ಈ ಗಾದೆಯೂ ಹಿಂದಿನ ಗಾದೆಯ ಅರ್ಥವನ್ನೇ ಕೊಡುತ್ತದೆ,

8. ದೇವೆರೆಡ್ದ್ ಬಿರಣಗ್ ಮಾನೊ, ಭೂತೊಡ್ದ್ ಪೂಜಾರಿಗ್ ಮಾನೊ.
(ದೇವರಿಂದ ಬ್ರಾಹ್ಮಣನಿಗೆ ಮರ್ಯಾದೆ, ಭೂತದಿಂದ ಪೂಜಾರಿಗೆ ಮರ್ಯಾದೆ.)

9, ನಾರಾಯಿನ ದೇವರ್ ಬೋಂಟೆಗ್ ಬನ್ನಗ ಭೂತೊಲು ಕಾತೊಂದುಳ್ಳೊಗೆ.
(ನಾರಾಯಣ ದೇವರು ಬೇಟೆಗೆ ಹೋಗುವಾಗ ಭೂತಗಳು ಅವನ ಮನೆಯನ್ನು ಕಾಯುತ್ತಿ ವಂತೆ.)

"ಭೂತಗಳು ಶಿಷ್ಟ ದೇವರುಗಳ ಸೇವಕರು" ಎನ್ನುವ ಇಲ್ಲಿನ ಜನಗಳ ಸಾಮಾನ್ಯ ಭಾವನೆ ಯನ್ನು ಮೇಲಿನ ಗಾದೆಯಲ್ಲಿ ನೋಡಬಹುದು.

10. ಎಂಕೊಂಜಿ ಭೂತೊ ಉಂಡು ಲೆಕ್ಕೆಸಿರಿ,
ಎನ್ನ ಮಾತಲಾ ಆಯಿಕ್ಕೇ ಸರಿ.
(ನನಗೊಂದು ಭೂತವಿದೆ "ಲೆಕ್ಕೆಸಿರಿ", ನನ್ನದೆಲ್ಲವೂ ಅದಕ್ಕೇ ಸರಿ.)

"ಲೆಕ್ಕೆಸಿರಿ" (ರಕ್ತೇಶ್ವರಿ) ಎಂಬ ಭೂತದ ಬಗ್ಗೆ ಜನರಿಗಿರುವ ವಿಶೇಷವಾದ ಭಾವನೆಯನ್ನೂ ಅದರ ಸೇವೆಗಾಗಿ ಮಾಡಬೇಕಾದ ವಿಪರೀತ ಖರ್ಚನ್ನೂ ಮೇಲಿನ ಗಾದೆಯಲ್ಲಿ ತಿಳಿಸಲಾಗಿದೆ

11. ನರ ಭೂತೊಡ್ದ್ ಮಲ್ಲ ಭೂತೊ ಇಜ್ಜಿ.
(ನರ ಭೂತಕ್ಕಿಂತ ದೊಡ್ಡ ಭೂತವಿಲ್ಲ.)

ಜನಗಳು ಭೂತಗಳ ಬಗ್ಗೆ ಎಷ್ಟೇ ಭಯ-ಭಕ್ತಿಗಳನ್ನು ಇಟ್ಟುಕೊಂಡಿದ್ದರೂ ಅದಕ್ಕಿಂತಲೂ ಹೆಚ್ಚು ಹೆದರುವುದು ಮನುಷ್ಯರಿಗೆಯೇ ಎಂಬ ವಾಸ್ತವಿಕ ವಿಚಾರವನ್ನು ಧ್ವನಿಪೂರ್ಣವಾಗಿ ಮೇಲಿನ ಗಾದೆಯಲ್ಲಿ ಹೇಳಲಾಗಿದೆ.

12. ಕಟ್ಟಿದ್‌ನೆ ಕಲ್ಲುರ್ಟಿಗ್, ನುಡಿಗಟ್ಟ್ ಮಲ್‌ರಾಯನ.
(ಕಟ್ಟಿದ್ದು ಕಲ್ಲುರ್ಟಿ ಭೂತದ ವೇಷ, ನುಡಿಗಟ್ಟು ಹೇಳುವುದು ಮಲ್ಲರಾಯ ಭೂತದ್ದು.)

"ಸಣ್ಣ ಮನುಷ್ಯ ದೊಡ್ಡ ವಿಷಯ ಮಾತನಾಡುವುದು" ಎಂಬ ಅರ್ಥ. ಕಲ್ಲುರ್ಟಿ ಮತ್ತು ಮಲ್ಲರಾಯ ಎನ್ನುವವುಗಳು ಎರಡು ಭೂತಗಳು. ತೌಲನಿಕವಾಗಿ ಹೇಳುವುದಾದರೆ "ಕಲ್ಲುರ್ಟಿ" ಚಿಕ್ಕ ಭೂತ, "ಮಲ್ಲರಾಯ" ದೊಡ್ಡ ಭೂತ.

ಕೋಲ ಎನ್ನುವುದು ಭೂತದ ಉತ್ಸವದ ಒಂದು ವಿಧ. ಅದಕ್ಕೆ ಸಂಬಂಧಿಸಿದ ಒಂದು ಗಾದೆ ಹೀಗಿದೆ :

13. ಕಾಲೊಗು ತಕ್ಕ ಕೋಲೊ ಕಟ್ಟುನೆ.
(ಕಾಲಕ್ಕೆ ತಕ್ಕಂತೆ ಕೋಲ ಕಟ್ಟುವುದು.)
"ಸಂದರ್ಭಕ್ಕೆ ಸರಿಯಾಗಿ ನಡೆದುಕೊಳ್ಳುವುದು" ಎಂಬ ಅರ್ಥ,

14. ಆಂಡ ಮೂಳು ಉಪ್ಪೆ, ಆಯಿಜಿಂಡ ಬೆರ್ಮರೆಡೊಪ್ಪ ಉಪ್ಪೆ.
[ಆದರೆ ಇಲ್ಲಿ ಇದ್ದೇನು, ಇಲ್ಲದಿದ್ದರೆ ಬ್ರಹ್ಮರಲ್ಲಿಗೆ ಹೋದೇನು.]

**2. ಅಮೆ [ಪ್ರಸೂತಿ ಸೂತಕ] :**

1. ಅಂಬಡೆದ ಮರಕ್ಕ್ ಅಮೆ ತಪ್ಪುನೇಂದ್ ಇದ್ದಿ.
[ಅಂಬಟೆಯ ಮರಕ್ಕೆ ಪ್ರಸೂತಿ ಸೂತಕ ತಪ್ಪುವುದಿಲ್ಲ.]
ಅದರಲ್ಲಿ ಹೆಚ್ಚಾಗಿ ಹೂಕಾಯಿ ಆಗುತ್ತಿರುತ್ತದೆ ಅಥವಾ ಎಲೆ ಉದುರುತ್ತಿರುತ್ತದೆ.

ಮಗುವಿನ ಜನನವಾಗಿ ಕೆಲವು ದಿನಗಳ ಬಳಿಕ [ಸಾಮಾನ್ಯವಾಗಿ 11 ದಿನಗಳು] ಮಾಡುವ ಶುದ್ಧಿ ಕಾರ್ಯಕ್ಕೆ ಅಮೆ ಎನ್ನುತ್ತಾರೆ.

**3. ಹೋಮ :**

1. ನೀರ್ಡ್ ಹೋಮೊ ದೀಡಿಲೆಕೊ.
[ನೀರಿನಲ್ಲಿ ಹೋಮ ಇಟ್ಟಹಾಗೆ.]

**4. ಕೆಲವು ನಂಬಿಕೆಗಳು :**

1. ಅವಾಸೆಡ್ ಪುಟ್ಟ್ಂಡ ಅಮ್ಮಗ್ ಹಾಳ್.
[ಅಮಾವಾಸ್ಯೆಯಂದು ಹುಟ್ಟಿದರೆ ತಂದೆಗೆ ಕೇಡು.]

2. ಉಪ್ಪುದ ಸಾಲೊ ಇಪ್ಪೆರ್ನೆನೇ ಆವಂದ್.
[ಉಪ್ಪಿನ ಸಾಲ ಇರಲೇಬಾರದು.]

3. ತಿಗಲೆಡ್ ಕುಜಲ್ ಇದ್ಯಂದ್‌ನಾಯನ್ ನಂಬಿಯೆರೆ ಬಲ್ಲಿ.
[ಎದೆಯಲ್ಲಿ ಕೂದಲು ಇಲ್ಲದವನನ್ನು ನಂಬಬಾರದು.]

4. ದಿನೋಲ ಇಲ್ಲಲ್ ಅರಿ ಕಡೆಯೆರೆ ಬಲ್ಲಿ.
[ಪ್ರತಿದಿನವೂ ಮನೆಯಲ್ಲಿ ಅಕ್ಕಿ ಕಡೆಯಬಾರದು.]

5. ಪರ್ಬೊ ಕರಿಯಂದೆ ಬೊಳಂತ್ಯೆ ಎಡ್ಪಿಯೆರೆ ಬಲ್ಲಿ.
[ದೀಪಾವಳಿ ಹಬ್ಬ ಕಳೆಯದೆ ಬೆಳ್ತಿಗೆ ಅಕ್ಕಿ ಕುಟ್ಟಬಾರದು.]

## VIII. ಮನೋರಂಜನೆ :

**1. ಬಯಲಾಟ :**

ತುಳುನಾಡಿನ ಜನಪದ ಮನೋರಂಜನೆಗಳಲ್ಲಿ ಬಯಲಾಟಕ್ಕೆ ಪ್ರಥಮ ಸ್ಥಾನ. ಹಳ್ಳಿಗಳಲ್ಲಿ ಇಂದಿಗೂ ಬಯಲಾಟವೇ ಅವರ ಏಕೈಕ ಮನೋರಂಜನೆಯ ಸಾಧನ. ಬಯಲಾಟವನ್ನು ರೂಢಿಯಲ್ಲಿ "ಆಟ" ಎನ್ನುತ್ತಾರೆ. ಆಟಕ್ಕೆ ಸಂಬಂಧಿಸಿದ ಗಾದೆಗಳು :

1. ಆಟೊದಾಯೆಗ್ ದೀಟಿಗೆದಾಯುಡ ಕಣ್ಣ್.
[ಬಯಲಾಟದವನಿಗೆ ದೀವಟಿಗೆಯವನ ಮೇಲೆ ಕಣ್ಣು.]
ಎಲ್ಲರಿಗೂ ಬೇಕಾಗುವವನಾಗಿ, ಎಲ್ಲರಿಂದಲೂ ಒದೆ ತಿನ್ನುವವ.

2. ಕಂಬಳ :

"ಕಂಬಳ" ಈ ಪ್ರದೇಶದ ಬೇಸಾಯಗಾರರ ಸಮಾಜಗಳಲ್ಲಿ ಬಹಳ ಆಕರ್ಷಣೀಯವಾದ ಜನಪದ ಮನೋರಂಜನೆ. ಕಂಬಳಕ್ಕೆ ಸಂಬಂಧಪಟ್ಟ ಗಾದೆಗಳು ಈ ರೀತಿ ಇವೆ :

1. ಒಂಜಿ ಕಂಬುಲ ತೂಂಡ ಬೆರಣೆ ಏಳ್ ದೇವಸ್ಥಾನೊ ಪೊಗ್ಗೊಡುಗೆ.
[ಒಂದು ಕಂಬಳ ನೋಡಿದರೆ ಬ್ರಾಹ್ಮಣ ಏಳು ದೇವಸ್ಥಾನ ಸಂದರ್ಶಿಸಬೇಕಂತೆ.]

2. 'ಒನ್ನ'ದ ಕಾಲ ಅತ್ತ್, ವಂಡಾರದ ಕಂಬುಳ ಅತ್ತ್.
['ಒನ್ನ'ದ ಕಾಲ ಅಲ್ಲ, ವಂಡಾರದ ಕಂಬಳ ಅಲ್ಲ.]

3. ಕಂಬುಳಗ್ ಜತ್ತಿ ಎರುನ ಮಂಜೊಟಿ ಮಿತ್ತ್ಯಾವೊಡಾ ?
[ಕಂಬಳಕ್ಕೆ ಇಳಿದ ಕೋಣವನ್ನು ಮಂಜಟ್ಟಿಗೆ ಏರಿಸಬೇಕೆ ?]

3. ಬೇಟೆ :

ತುಳುನಾಡಿನ ಕಾಡುಗಳಲ್ಲಿ ಮೃಗಬೇಟೆಯಾಡುವುದು ಒಂದು ಮನೋರಂಜಕ ಹವ್ಯಾಸ.

1. ನಾಯಿಂಡ ಕೇಂಡ್‌ದ್ ಬೋಂಟೆಗ್ ಪೋಪುನ್ನೋ ?
[ನಾಯಿಯಲ್ಲಿ ಕೇಳಿ ಬೇಟೆಗೆ ಹೋಗುವುದೇ?]

2. ಬೋಂಟೆದಾಯಗ್ ಬೆಡಿ ಇದ್ಯಂಡ, ಬಡು ಆಂಡಲ ಬೋಡೆ.
[ಬೇಟೆಗಾರನಿಗೆ ಕೋವಿ ಇಲ್ಲದಿದ್ದರೆ, ಕೋಲು ಆದರೂ ಬೇಕಲ್ಲ.]

3. ನೀರ್ ಬೋಂಟೆ ನಿಜೊ, ಕಾಡ್ ಬೋಂಟೆ ಕಳು.
[ನೀರಿನ ಬೇಟೆ ನಿಜ, ಕಾಡಿನ ಬೇಟೆ ಸುಳ್ಳು.]

ನೀರಿನ ಬೇಟೆ–ಮೀನು ಹಿಡಿಯುವುದು. ಕಾಡಿನ ಬೇಟೆ–ಮೃಗಬೇಟೆ.

## IX. ಆಭರಣಗಳು, ವೇಷಭೂಷಣಗಳು :

1. ಏರೆ ಮುಗಳೆ ಪದ್ದೆಯಿ, ಎನ್ನ ಮಂಗಳೆ ಒಡ್ಡಾರೊ.
[ಯಾರ ಆಭರಣವೋ ಏನೋ, ನನ್ನ ಮಂಗಳು ಮಾತ್ರ ಮೆರೆಯಬೇಕು.]

"ಹೆರವರ ಭೂಷಣಗಳಿಂದ ಅಲಂಕೃತರಾಗಿ ಸ್ವಶಕ್ತಿಯಿಲ್ಲದೆ ಜಂಭ ಮಾಡುವವರ ಪಾಡನ್ನು, ಹಳಿಯುವ ರೀತಿಯನ್ನು ಈ ಗಾದೆ ತಿಳಿಸುತ್ತದೆ.

2. ಉಂಗಿಲೊ ಪಾಡ್ನ ಕೈಟ್ಟ್ ನೋತ್‌ನ ಬೇನೆ ಇದ್ದಿ.
(ಉಂಗುರ ಹಾಕಿದ ಕೈಯಲ್ಲಿ ಹೊಡೆದರೆ ನೋವು ಇಲ್ಲ.)

3. ಅಪ್ಪೆನ ಮೂಂಕುತಿಡ್ದಾನಲ ಆಚಾರಿಯಗ್ ಕಂಡೊಡು.
(ತಾಯಿಯು ಮೂಗುತಿಯಿಂದಲಾದರೂ ಅಕ್ಕಸಾಲಿಗನಿಗೆ ಕದಿಯಬೇಕು.)

4. ಪವನ್ ಬೂರ್‌ನ ಪೆಜೊಲಿ, ಪಾತೆರೊ ಬೂರ್‌ನ ಪೆಜಿಯೆರೆ ಬಲ್ಲಿ.
(ಮಾಣಿಕ್ಯ ಬಿದ್ದರೆ ಹೆಕ್ಕಬಹುದು; ಮಾತು ಬಿದ್ದರೆ ಹೆಕ್ಕಲಾಗದು.)

ಆಭರಣಗಳ ಉಲ್ಲೇಖವಿರುವ ಹೆಚ್ಚಿನ ಗಾದೆಗಳು ಜನಜೀವನಕ್ಕೆ ಸಂಬಂಧಿಸಿದ ವಿಚಾರಗಳಿಗೆ ಸಾಂಕೇತಿಕವಾಗಿ ಬರುವ ಸಂದರ್ಭಗಳೇ ಹೆಚ್ಚು.

## X. ಮುಂಡಾಸ್ ;

1. ತರೆ ಪೋಯಿ ಬೊಕ್ಕ ಮುಂಡಾಸ್‌ದ ಎತೆ ದಾಯೆ ?
(ತಲೆ ಹೋದ ಮೇಲೆ ಮುಂಡಾಸಿನ ಯೋಚನೆ ಯಾಕೆ ?)

2. ತರೆಡ್ದ್ ಮಲ್ಲ ಮುಂಡಾಸ್.
(ತಲೆಯಿಂದ ದೊಡ್ಡ ಮುಂಡಾಸು.)

## XI. ಸಂಚಾರ ಸಾಮಗ್ರಿಗಳು :

ತುಳುನಾಡಿಗೆ ದೀರ್ಘವಾದ ಪಶ್ಚಿಮ ಕರಾವಳಿಯೂ ಅನೇಕ ಹೊಳೆಗಳೂ ಇರುವುದರಿಂದ ಜಲಸಾರಿಗೆ ಇಲ್ಲಿನ ತೀರ ಅಗತ್ಯವಾದ ಅಂಶ. ಸಮುದ್ರದಲ್ಲಿ ಹಡಗನ್ನು (ಕಪ್ಪಲ್) ಮತ್ತು ಹೊಳೆಯಲ್ಲಿ ದೋಣಿಗಳನ್ನು ಉಪಯೋಗಿಸುತ್ತಾರೆ.

1. ಓಡೊಗ್ ಆಪುನ ಮರನ್ ಕೀಲೆಗ್ ಕಡ್ಪಿಯೆರೆ ಬಲ್ಲಿ.
(ದೋಣಿಗೆ ಆಗುವ ಮರವನ್ನು ಕೀಲಿಗೆ ಕಡಿಯಬಾರದು.)

2. ರಡ್ಡ್ ಓಡೊಡು ಕಾರ್ ದೀಡಿಲೆಕೊ.
(ಎರಡು ದೋಣಿಯಲ್ಲಿ ಕಾಲಿಟ್ಟ ಹಾಗೆ.)

3. ಕಪ್ಪಲ್ ದಿಂಜಯೆರೆ ಪೋನಾಯೆ ಬತ್ತ್‌ದೆ, ಬಂಜಿ ದಿಂಜಯೆರೆ ಪೋನಾಯೆ ಬತ್ತ್‌ಜ್ಜ.
(ಹಡಗು ತುಂಬಿಸಲು ಹೋದವನು ಬಂದಿದ್ದಾನೆ, ಹೊಟ್ಟೆ ತುಂಬಿಸಲು ಹೋದವನು ಬಂದಿಲ್ಲ.)

4. ಕೈಟ್ಟ್ ಕಾಸ್ ದಾಂತಿನಾಯೆ ಕಡಲ್‌ಡ್ ಕಪ್ಪಲ್ ಪಾಡಿಲೆಕೊ.
(ಕೈಯಲ್ಲಿ ಹಣ ಇಲ್ಲದವನು ಕಡಲಿನಲ್ಲಿ ಹಡಗನ್ನು ಹಾಕಿದಂತೆ.)

5. ಕಪ್ಪಲ್‌ಡ್ ಅರ್ಧ ಮಣ್ಣ್ ಪಾಡ್ದ್ ಅರ್ಧ ಸರಕ್ಕ್ ಎನ್ನ್‌ವು ಅಂತೆಗೆ.
(ಹಡಗಿನಲ್ಲಿ ಅರ್ಧ ಮಣಸನ್ನು ಹಾಕಿ, ಅರ್ಧ ಸಾಮಾನು ನನ್ನದು ಎಂದು ಹೇಳಿದ್ದಾನಂತೆ.)

6. ಹಡಗ್‌ಡ್ ಇತ್ತ್‌ನ ಬೆಡಗ್‌ಡ್ ಉಂಡು.
(ಹಡಗಿನಲ್ಲಿ ಇದ್ದದ್ದು ಬೆಡಗಿನಲ್ಲಿ ಉಂಟು )
ತನ್ನ ಅಧೀನದಲ್ಲಿ ಇಲ್ಲದ ಐಶ್ವರ್ಯವನ್ನು ನಂಬಿ, ಶ್ರೀಮಂತಿಕೆಯ ಪ್ರದರ್ಶನ ಮಾಡುವುದು ಎಂಬ ಅರ್ಥ.

ನೆಲಸಾರಿಗೆಯಲ್ಲಿ ಈ ಪ್ರದೇಶದಲ್ಲಿ ಸಾಮಾನ್ಯವಾಗಿ ಬಳಕೆಯಾಗುತ್ತಿದ್ದುದು ಎತ್ತಿನಗಾಡಿ ಮಾತ್ರ :

1. ಗಾಡಿ ಎರು ಪಡಿಕ್ಕ ಮಯ್ತ್ಲೆಕೊ.
(ಗಾಡಿ ಎತ್ತು ಮೂತ್ರ ಹೊಯ್ದ ಹಾಗೆ.)

## XII. ವಿಶಿಷ್ಟ ರಚನೆಗಳು :

### 1. ಚಪ್ಪರ :

ಇಲ್ಲಿನ ಜನಜೀವನದಲ್ಲಿ ಚಪ್ಪರದ ಪಾತ್ರ ಪ್ರಮುಖವಾದುದು. ಮದುವೆ, ಉತ್ತರಕ್ರಿಯೆ ಮುಂತಾದ ಸಂದರ್ಭಗಳಲ್ಲಿ, ಧಾರ್ಮಿಕ ಆಚರಣೆಗಳಲ್ಲಿ, ಭೂತಾರಾಧನೆಯಲ್ಲಿ ಮಾತ್ರವಲ್ಲದೆ ಬೇಸಿಗೆ ಕಾಲದಲ್ಲಿ ವಿಶ್ರಾಂತಿಗಾಗಿ ಮನೆಗಳ ಮುಂದುಗಡೆ ಚಪ್ಪರಗಳನ್ನು ಹಾಕುತ್ತಾರೆ. ಅಡಿಕೆ ಮರದ ಕಂಬಗಳು, ತೆಂಗಿನ ಸೋಗೆಯ ತಟ್ಟಿಗಳು ಮುಂತಾದುವುಗಳನ್ನು ಬಳಸಿ ಇಂತಹ ಚಪ್ಪರಗಳನ್ನು ನಿರ್ಮಿಸುತ್ತಾರೆ. ಬಸಳೆ, ತೊಂಡೆ, ಕಾಯಿ, ಹೀರೆಕಾಯಿ ಮುಂತಾದ ತರಕಾರಿಗಳ ಬೀಳಲುಗಳು ಹಬ್ಬುವುದಕ್ಕಾಗಿ ಸಾಮಾನ್ಯ ರೀತಿಯ ಚಪ್ಪರಗಳನ್ನು ಹಾಕುತ್ತಾರೆ. ಚಪ್ಪರಕ್ಕೆ ಸಂಬಂಧಿಸಿದ ಕೆಲವು ಗಾದೆಗಳನ್ನು ನೋಡಬಹುದು.

1. ಮದಿಮ್ಮೆದ ಕರ್ಚಿ ದೊಂಪೊಡು ಮುಗಿಂಡ್.
(ಮದುವೆಯ ಖರ್ಚು ಚಪ್ಪರ ನಿರ್ಮಾಣಕ್ಕೇ ಮುಗಿಯಿತು.)

2. ದೊಂಪೊಗು ದಿನ್ನೊ ಆಂಡಲ, ಬೂರೊಗು ದಿನ್ನೊ ಆತ್‌ಜ್ಜಿ.
(ಚಪ್ಪರಕ್ಕೆ ಭಾರವಾದರೂ ಬಳ್ಳಿಗೆ ಭಾರವಾಗುವುದಿಲ್ಲ.)

3. ತರೆಡ್ದ್ ಮಲ್ಲೆ ಚಪ್ಪರಕೊಂಬು ಆಂಡ್, ಕಜಿಪುಡ್ದ್ ಹೆಚ್ಚ್ ಉಪ್ಪು ಆಂಡ್.
(ತಲೆಗಿಂತ ದೊಡ್ಡ ಚಪ್ಪರಕೊಂಬು ಆಯಿತು, ಪಲ್ಯಕ್ಕಿಂತ ಹೆಚ್ಚು ಉಪ್ಪು ಆಯಿತು.)

## ತುಳು ಗಾದೆಗಳಿಗೆ ಸಮಾನಾರ್ಥಕವಾಗಿರುವ ಕನ್ನಡ ಗಾದೆಗಳು :

ತುಳು ಗಾದೆಗಳನ್ನು ಬಹಳವಾಗಿ ಹೋಲುವ ಕನ್ನಡ ಗಾದೆಗಳು ಪ್ರಕಟಿತ ಸಂಕಲನಗಳಲ್ಲಿ ದೊರೆಯುತ್ತವೆ. ಸುಮಾರು 150ರಷ್ಟು ತುಳು ಗಾದೆಗಳಿಗೆ ಇಂತಹ ಸಮಾನಾರ್ಥಕ ಕನ್ನಡ ಗಾದೆಗಳು ಸಿಗುತ್ತವೆ. ಇಂತಹ ಸಾದೃಶ್ಯಕ್ಕೆ ಸ್ವಲ್ಪಮಟ್ಟಿಗೆ ಸ್ವೀಕರಣ ಕಾರಣವಾಗಿರಬಹುದು. ಆದರೆ ಬಹುಮಟ್ಟಿಗೆ ಸಮಾನ ಪರಿಸರದ ಸ್ವತಂತ್ರ ಉಗಮದ ಸಿದ್ಧಾಂತ ಅನ್ವಯವಾಗುತ್ತದೆ. ನಿದರ್ಶನಕ್ಕಾಗಿ ಮೂರನ್ನು ಮಾತ್ರ ಕೊಟ್ಟು, ಪ್ರಬಂಧ ವಿಸ್ತಾರದ ಕಾರಣದಿಂದಾಗಿ ಉಳಿದುದನ್ನು ಕೈಬಿಡಲಾಗಿದೆ.

1. ಅಕುಲಕುಲ್ನ ತರೆಕ್ಕ್ ಅಕುಲಕುಲ್ನ ಕೈ.
(ಅವರವರ ತಲೆಗೆ ಅವರವರ ಕೈ.)

ಕನ್ನಡ : 1. ಅವರವರ ತಲೆಗೆ ಅವರವರದೇ ಕೈ. (R.155.)
2. ತನ್ನ ತಲೆಯಡಿಗೆ ತನ್ನ ಕೈ. (N. 238.)

2. ಅಪ್ಪೆನ ಮೂಂಕುತಿಡ್ದಾನಲ ಆಚಾರಿಯಗ್ ಕಂಡೊಡು.
(ತಾಯಿಯ ಮೂಗುತಿಯಿಂದಲಾದರೂ ಅಕ್ಕಸಾಲಿಗನಿಗೆ ಕದಿಯಬೇಕು.)

ಕನ್ನಡ : 1. ಅಕ್ಕನ ಚಿನ್ನವಾದರೂ ಅಕ್ಕಸಾಲೆ ತೊನೆಯದೆ ಬಿಡ. (N .1.)
2. ಅಕ್ಕನ ಬಂಗಾರವಾದರೂ ಅಕ್ಕಸಾಲೆ ಟೊಣೆಯದೆ ಬಿಡ, (K. 4.)

3. ಮಾಮಿ ನರಿತ್ತ್‌ನ ಕರಕ್ಕ್ ಬಿಲೆ ಇದ್ದಿ.
(ಅತ್ತೆ ಒಡೆದ ಮಡಕೆಗೆ ಬೆಲೆ ಇಲ್ಲ.)

ಕನ್ನಡ : 1. ಅತ್ತೆ ಒಡೆದ ಪಾತ್ರೆಗೆ ಬೆಲೆ ಇಲ್ಲ. (K.70.)
2. ಅತ್ತೆ ಒಡೆದರೆ ಹಳೆ ಮಡಕೆ,
ಸೊಸೆ ಒಡೆದರೆ ಹಸಿ ಮಡಕೆ. (R. 70.)
3. ಅತ್ತೆ ಒಡೆದ ಮಡಕೆಗೆ ಬೆಲೆ ಇಲ್ಲ. (N. 14.)
4. ಅತ್ತೆ ಒಡೆದದ್ದು ಹಳೆ ಮಡಕೆ,
ಸೊಸೆ ಒಡೆದದ್ದು ಹೊಸ ಮಡಕೆ. (S. 58.)

---

R—ರಾಗೌ : 'ನಮ್ಮ ಗಾದೆಗಳು'.
N—'ನಾಲ್‌ನುಡಿ-ನಾಣ್ನುಡಿ' (ಮದ್ರಾಸು ವಿಶ್ವವಿದ್ಯಾನಿಲಯ).
K—ರಾಗೌ : 'ಕಿಟ್ಟೆಲ್ ಕೋಶದ ಗಾದೆಗಳು'.
S—ಸಂಧಾಕಶ : 'ನಮ್ಮ ಸುತ್ತಿನ ಗಾದೆಗಳು'.

೫

# ತುಳು ಒಗಟುಗಳು

# ತುಳು ಒಗಟುಗಳು

## 1. ಎದುರುಕತೆ ಮತ್ತು ಮಂಡೆಕತೆ

ತುಳುವಿನಲ್ಲಿ ಒಗಟಿಗೆ 'ಎದುರುಕತೆ' ಮತ್ತು 'ಮಂಡೆಕತೆ' ಎಂಬ ಎರಡು ಹೆಸರುಗಳು ಬಳಕೆಯಲ್ಲಿವೆ ; 'ಒಗಟು' ಎಂಬ ಶಬ್ದವೇ ಪ್ರಯೋಗದಲ್ಲಿ ಇಲ್ಲ. ತುಳುನಾಡಿನಲ್ಲಿ ಕೃಷಿಕವರ್ಗದವರು ವಿರಾಮದ ವೇಳೆಯಲ್ಲಿ 'ಎದುರುಕತೆ'ಗಳ ಮೂಲಕ ಕಾಲವನ್ನು ಕಳೆಯುತ್ತಾರೆ ; ಮನೋರಂಜನೆಯನ್ನು ಪಡೆಯುತ್ತಾರೆ. ಇಂತಹ ಸಂದರ್ಭಗಳಲ್ಲಿ ಎರಡು ಪಂಗಡಗಳಿರುತ್ತವೆ. ಈ ಪಂಗಡಗಳಲ್ಲಿರುವ ಜನರ ಸಂಖ್ಯೆ ನಿರ್ದಿಷ್ಟವಾಗಿರುವುದಿಲ್ಲ. ಒಮ್ಮೊಮ್ಮೆ ಒಂದು ಪಂಗಡದಲ್ಲಿ ಒಬ್ಬೊಬ್ಬನೇ ಇರುವುದೂ ಉಂಟು. ಒಂದು ಪಂಗಡದವರು ('ಅ' ಎಂದಿರಲಿ) ಒಂದು 'ಎದುರುಕತೆ'ಯನ್ನು ಹೇಳುತ್ತಾರೆ. ಆಗ 'ಎದುರು' ಪಕ್ಷದವರು ('ಬ' ಎಂದಿರಲಿ) ಅದಕ್ಕೆ ಉತ್ತರ ಕೊಡಬೇಕು. ಆ ಬಳಿಕ ಈ ಎದುರು ಪಕ್ಷದವರು ('ಬ') ಒಂದು ಎದುರುಕತೆ ಹೇಳುತ್ತಾರೆ. ಆಗ 'ಅ' ಪಕ್ಷದವರು ಅದಕ್ಕೆ ಉತ್ತರ ಕೊಡಬೇಕು. ಈ ರೀತಿ 'ಎದುರು' (ಇದಿರು) ಬದುರಾಗಿ ಕುಳಿತುಕೊಂಡು, ಎರಡು ಗುಂಪು ಮಾಡಿ ಹೇಳುವ ಕಾರಣ ಇದಕ್ಕೆ 'ಎದುರುಕತೆ' ಎಂಬ ಹೆಸರು ಬಂದಿದೆ. ಒಂದು ವೇಳೆ 'ಎದುರು' ಪಕ್ಷದವರು ಉತ್ತರಿಸಲು ಅಸಮರ್ಥರಾದರೆ, ಅವರು 'ಮಂಡೆ' (ತಲೆ) ಹಾಕಬೇಕು. ಅಂದರೆ ತಲೆತಗ್ಗಿಸಬೇಕು. 'ಮಂಡೆ ಹಾಕುವುದು' ಶರಣಾಗತಿಯ ಲಕ್ಷಣ. ಈ ರೀತಿ ಸೋತ ಪಕ್ಷವು 'ಮಂಡೆ ಹಾಕಿದ' ಬಳಿಕ ತಾನು ಒಂದು ಎದುರುಕತೆಯನ್ನು ಹೇಳುತ್ತದೆ. ಹೀಗೆ ಸೋತವರು 'ಮಂಡೆ ಹಾಕುವ' ಕಾರಣ 'ಎದುರುಕತೆ'ಗೆ 'ಮಂಡೆಕತೆ' ಎನ್ನುವ ಹೆಸರೂ ರೂಢಿಯಲ್ಲಿದೆ.

ಇನ್ನು 'ಎದುರುಕತೆ' ಮತ್ತು 'ಮಂಡೆಕತೆ' ಶಬ್ದಗಳಲ್ಲಿನ 'ಕತೆ' ಎಂಬ ಶಬ್ದದ ವಿಚಾರ. ಇಲ್ಲಿ ಬಳಕೆಯಾಗಿರುವ 'ಕತೆ' ಎಂಬ ಶಬ್ದ ನಾವು ಇಂದು ಹೇಳುವ 'ಕತೆ' (story ; tale) ಎನ್ನುವ ಶಬ್ದದ ಅರ್ಥಕ್ಕಿಂತ ವ್ಯಾಪಕವಾದದ್ದು. ತುಳುವಿನಲ್ಲಿ 'ಕತೆ' ಎನ್ನುವ ಶಬ್ದವು 'ಸಮಯ ಕಳೆಯುವ ಸಾಧನ', 'ಸಂಗತಿ', 'ಘಟನೆ', 'ವಿಚಾರ' ಎನ್ನುವ ಅರ್ಥಗಳಲ್ಲಿ ಪ್ರಯೋಗವಾಗುತ್ತಿದೆ. ಆದ್ದರಿಂದ ತುಳುವಿನ 'ಎದುರುಕತೆ' ಎನ್ನುವ ಪದವು ಒಗಟಿನ ಒಂದು ಪ್ರಕಾರವಾದ 'ಒಗಟುಕತೆ'ಗೆ ಸಂಬಂಧಿಸಿದ್ದು ಆದಿರದೆ ಒಗಟಿನ ಸಾರ್ವತ್ರಿಕ ರೂಪವನ್ನು ಹೇಳುವಂಥದ್ದಾಗಿದೆ.

ಇತರ ದ್ರಾವಿಡ ಭಾಷೆಗಳಲ್ಲಿಯೂ 'ಕಥೆ' ಎಂಬ ಪದವನ್ನು ಉಳ್ಳ ಸಂಯುಕ್ತ ಪದಗಳು 'ಒಗಟು' ಎನ್ನುವ ಅರ್ಥದಲ್ಲಿ ಪ್ರಯೋಗವಾಗುತ್ತವೆ ;

ಕನ್ನಡ : ಒಡಗತೆ
ತಮಿಳು : ವಿಡಿಗದೈ
ತೆಲುಗು : ವಿಡಿಕಥಾ ಅಥವಾ ಪೊಡಪು ಕಥಲು
ಮಲೆಯಾಳಂ : ವಿಡಿಕದಾ.

**ತುಳು ಒಗಟುಗಳು ಬಳಕೆಯಾಗುವ ಸಂದರ್ಭ (Context) :**

1. ತುಳು ಒಗಟುಗಳನ್ನು ವರ್ಷದ ಯಾವುದೇ ಸಮಯದಲ್ಲಾದರೂ ಕೇಳಬಹುದು. ಅದಕ್ಕೆ ಕಾಲದ ನಿರ್ಬಂಧವಿಲ್ಲ. ಆದರೆ ಮಳೆಗಾಲದಲ್ಲಿ ಇವುಗಳ ಬಳಕೆ ಜಾಸ್ತಿ.

2. ತುಳು ಒಗಟುಗಳನ್ನು ಹೆಚ್ಚಾಗಿ ಸಂಜೆ ಅಥವಾ ರಾತ್ರಿಯ ವೇಳೆ ಕೇಳುತ್ತಾರೆ. ಅದನ್ನು ಒಂದು 'ಒಳಾಂಗಣ ಆಟ' (Indoor game) ಎನ್ನುವ ರೀತಿಯಲ್ಲಿ ಬಳಸುತ್ತಾರೆ. ಮನೆಯ ಹೊರಗಡೆ ಒಗಟು ಕೇಳಬಾರದು ಎನ್ನುವ ನಿರ್ಬಂಧವು ತುಳುವ ಸಂಸ್ಕೃತಿಯಲ್ಲಿ ಇಲ್ಲವಾದರೂ, ಆ ರೀತಿ ಕೇಳುವುದು ಕಾಣಿಸುವುದಿಲ್ಲ.

3. ಒಗಟುಗಳನ್ನು ಕೇಳುವ ಕ್ರಿಯೆಯಲ್ಲಿ ಹೆಚ್ಚಾಗಿ ಭಾಗವಹಿಸುವವರು ಮಕ್ಕಳು. ಕೆಲವೊಮ್ಮೆ ಮುದುಕರೂ ಭಾಗವಹಿಸುತ್ತಾರೆ.

4. ಒಗಟನ್ನು ಇಬ್ಬರು ವ್ಯಕ್ತಿಗಳ ನಡುವೆ ಅಥವಾ ಎರಡು ಗುಂಪುಗಳ ನಡುವೆ ಸ್ಪರ್ಧೆಯ ರೂಪದಲ್ಲಿ ಬಳಸುತ್ತಾರೆ. 'ಎದುರುಕತೆ' ಮತ್ತು 'ಮುಂಡೆಕತೆ' ಎನ್ನುವ ಪದಗಳು ತುಳು ಒಗಟಿಗೆ ಪ್ರಯೋಗವಾಗಿದೆ.

5. ತುಳು ಒಗಟುಗಳು ಪ್ರಧಾನವಾಗಿ, ಮನೋರಂಜನೆಯ ಉದ್ದೇಶಕ್ಕಾಗಿ ಮಾತ್ರ ಬಳಕೆಯಾಗುತ್ತವೆ. ಅವುಗಳಿಗೆ ಧಾರ್ಮಿಕವಾದ ಅಥವಾ ಆಚರಣೆಯ ಸಂದರ್ಭದ ಯಾವುದೇ ಸಂಬಂಧ ಇಲ್ಲ.

**ತುಳು ಒಗಟುಗಳ ಕಾರ್ಯಗಳು (Functions of Tulu Riddles);**

ಒಗಟುಗಳು ಗಾದೆಗಳಷ್ಟು ಹೆಚ್ಚಿನ ಪ್ರಮಾಣದಲ್ಲಿ ಒಂದು ಸಮಾಜದ, ಜನಜೀವನದ ಜೊತೆಗೆ ಸಂಬಂಧವನ್ನು ಪಡೆದಿಲ್ಲ. ಒಗಟುಗಳ ಬಳಕೆಯ ಸಂದರ್ಭ ಮತ್ತು ಉದ್ದೇಶ ಸೀಮಿತವಾದುದು. ಒಗಟುಗಳು ಗಾದೆಗಳಂತೆಯೇ ಒಂದು ಸಮಾಜದ, ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದ್ದರೂ, ಅವುಗಳ ಕಾರ್ಯಕ್ಕಿಂತ ಸೀಮಿತವಾದುದು ಮತ್ತು ನಿರ್ದಿಷ್ಟವಾದುದು. ಈ ಅಭಿಪ್ರಾಯ ತುಳು ಒಗಟುಗಳಿಗೂ ಸಮರ್ಪಕವಾಗಿ ಅನ್ವಯವಾಗುತ್ತದೆ. ತುಳು ಒಗಟುಗಳ ಮುಖ್ಯ ಕಾರ್ಯಗಳು ;

1. ತುಳು ಒಗಟುಗಳ ಮುಖ್ಯವಾದ ಕಾರ್ಯವೆಂದರೆ 'ಮನೋರಂಜನೆ'. ಅದೊಂದೇ ಕಾರ್ಯವೆಂದು ಸ್ಪಷ್ಟವಾಗಿ ತಿಳಿಯುವಷ್ಟರ ಮಟ್ಟಿಗೆ ಮನೋರಂಜನೆಯ ಉದ್ದೇಶಕ್ಕಾಗಿಯೇ ತುಳು ಒಗಟುಗಳು ಬಳಕೆಯಾಗುತ್ತವೆ.

2. ತುಳು ಒಗಟುಗಳು ವಿದ್ಯಾಭ್ಯಾಸದ ಉದ್ದೇಶಕ್ಕಾಗಿ ನೇರವಾಗಿ ಬಳಕೆಯಾಗುವುದಿಲ್ಲ. ಆದರೆ ಎಲ್ಲಾ ಒಗಟುಗಳಂತೆಯೇ ಇವು ಕೂಡಾ ಬೌದ್ಧಿಕ ಕೌಶಲವನ್ನು ಮತ್ತು ಜಾಣತನದ ತೀವ್ರತೆಯನ್ನು ಹೆಚ್ಚುಮಾಡುತ್ತವೆ. ಇದಕ್ಕಿಂತಲೂ ಹೆಚ್ಚಾಗಿ, ಸ್ಮರಣಶಕ್ತಿಯ ಪರೀಕ್ಷೆಗೆ ಸಾಮಗ್ರಿಗಳಾಗುತ್ತವೆ. ಏಕೆಂದರೆ ತುಳುವಿನ ಹೆಚ್ಚಿನ ಎಲ್ಲಾ ಒಗಟುಗಳೂ ಜನಪ್ರಿಯ ಒಗಟುಗಳಾಗಿದ್ದು, ಅವುಗಳ ಉತ್ತರಗಳು ಸಾರ್ವತ್ರಿಕವಾಗಿ ಪರಿಚಿತವಾಗಿರುತ್ತವೆ. ಆದ್ದರಿಂದ

ಈ ಒಗಟುಗಳ ಉತ್ತರಗಳಿಗಾಗಿ ಆಲೋಚನೆ ಮಾಡುವುದಕ್ಕಿಂತ, ಬಾಯಿ ಪಾಠದ ಉತ್ತರಗಳನ್ನು ಸ್ಮರಣೆಗೆ ತಂದುಕೊಳ್ಳುವುದು ಹೆಚ್ಚು ಅಗತ್ಯವಾಗುತ್ತದೆ.

3. ಕೆಲವು ಒಗಟುಗಳು ಬೋಧನಾತ್ಮಕವಾಗಿರುತ್ತವೆ. ಅವುಗಳ ಸಾಂಸ್ಕೃತಿಕ ಮೌಲ್ಯ ಇದಕ್ಕೆ ಪ್ರಮುಖ ಕಾರಣ. ಆದರೆ ಈ ಉದ್ದೇಶವು ಮನೋರಂಜನೆಯ ನಂತರ ಬರುವಂತಹದ್ದು.

**ತುಳು ಒಗಟುಗಳ ರಾಚನಿಕ ಸ್ವರೂಪ (The General Structure of the Tulu Riddles) :**

ಎಲ್ಲಾ ಒಗಟುಗಳ ರಚನೆಯಂತೆಯೇ ತುಳು ಒಗಟುಗಳಲ್ಲಿಯೂ "ಪ್ರಶ್ನೆಯ ಭಾಗ" ಮತ್ತು "ಉತ್ತರದ ಭಾಗ" ಎಂಬ ಎರಡು ಭಾಗಗಳಿರುತ್ತವೆ. "ಪ್ರಶ್ನೆಯ ಭಾಗ"ದಲ್ಲಿ ಒಂದು ಅಸ್ಪಷ್ಟವಾದ ಹೇಳಿಕೆ ಅಥವಾ ಒಂದು ಪ್ರಶ್ನೆ ಇರುತ್ತದೆ. "ಉತ್ತರದ ಭಾಗ"ದಲ್ಲಿ "ಪ್ರಶ್ನೆಯ ಭಾಗ"ದ ಉತ್ತರವು ಒಂದು ಪದ ಅಥವಾ ಕೆಲವು ಪದಗಳ ರೂಪದಲ್ಲಿ ಇದ್ದು, ಸ್ಪಷ್ಟವಾಗಿರುತ್ತದೆ.

**ಪ್ರಶ್ನೆಯ ಭಾಗ :**

**1. ಪ್ರಶ್ನೆಯ ರೂಪದ ಒಗಟು :**

"ಪ್ರಶ್ನೆಯ ಭಾಗ"ವು ಕೆಲವೊಮ್ಮೆ ಮಾತ್ರ ನೇರವಾಗಿ ಪ್ರಶ್ನೆಯ ರೂಪದಲ್ಲಿ ಇರುತ್ತದೆ. ಏನು, ಏನೆಂದು ಹೇಳಿರಿ, ಯಾರು, ಯಾವುದು, ಯಾರಿಗೆ, ಎಂಥದ್ದು, ಹೆಸರು ಏನು ಮುಂತಾದ ಪ್ರಶ್ನಾರ್ಥಕ ಪದಗಳು ಒಂದು ಹೇಳಿಕೆಯ ಕೊನೆಯಲ್ಲಿ ಬರುವುದನ್ನು ಕೆಲವು ತುಳು ಒಗಟುಗಳಲ್ಲಿ ಕಾಣಬಹುದು. ಆದರೆ ಈ ರೀತಿ ನೇರವಾಗಿ ಪ್ರಶ್ನಾರ್ಥಕ ಪದಗಳನ್ನು ಬಳಸುವ ಒಗಟುಗಳ ಸಂಖ್ಯೆ ತೀರಾ ಕಡಿಮೆ.

ಉದಾ : 1. "ಸಾರ ಬಗೆತ್ತ ಕಜಿಪ್ಪು ಇತ್ತ್‌ಂಡಲಾ ಒಂಜಿ ಬಗೆ ಇಜ್ಜಂಡ ಒಣಸ್ ಮಲ್ಪೆರೆ ಆಪುಜಿ. ಅವು ದಾದ ?"
(ಸಾವಿರ ಬಗೆಯ ಪಲ್ಯ ಇದ್ದರೂ ಒಂದು ಬಗೆ ಇಲ್ಲದಿದ್ದರೆ ಊಟ ಮಾಡಲಿಕ್ಕೆ ಆಗುವುದಿಲ್ಲ. ಅದು ಏನು ?)

[ಉತ್ತರ : ಉಪ್ಪು]

2. "ತೂಯರೆ ಚೆಂಡ್, ಕಟ್ಟೆರೆ ಮಲ್ಲ್, ದೆರ್ಪ್ಯರೆ ದಿನ್ನೊ, ಎಂಚಿನ ಪನ್‌ಲೆ."
(ನೋಡಲು ಚೆಂಡು, ಕಟ್ಟಲು ದೊಡ್ಡದು, ಎತ್ತಲು ಭಾರ, ಏನೆಂದು ಹೇಳಿರಿ.)

[ಅರಿತ್ತ ಮುಡಿ (ಅಕ್ಕಿ ಮುಡಿ)]

3. "ನೋಪಂದೆ ಬುಳ್ಪವನೆ ಏರ್ ?"
(ಹೊಡೆಯದೆ ಅಳುವಂತೆ ಮಾಡುವವರು ಯಾರು ?)

[ಪುಗೆ (ಹೊಗೆ)]

4. "ದೋಲು ಉಂಡು, ಪಾಡ್ದನ ಇದ್ದಿ. ಆಣಿ ಉಂಡು, ಗಗ್ಗರ ಇದ್ದಿ. ಈ ನಲ್ಕೆದ ಬೂತೊ ಓವು ?"
(ಡೋಲು ಉಂಟು, ಪಾಡ್ದನ ಇಲ್ಲ. ಆಣಿ ಉಂಟು, ಗಗ್ಗರ ಇಲ್ಲ. ಈ ಕುಣಿಯುವ ಭೂತ ಯಾವುದು ?)

[ಉತ್ತರ : ಮಯಿರ್ (ನವಿಲು)]

5. "ಏರೆಗ್‌ಲ ಬಗ್ಗಂದಿ ತರೆ ಒರಿಯೆಗ್ ಬಗ್ಗುಂಡು. ಅವು ಏರೆಗ್ ?"
(ಯಾರಿಗೂ ಬಾಗದ ತಲೆ ಒಬ್ಬನಿಗೆ ಬಾಗುತ್ತದೆ. ಅದು ಯಾರಿಗೆ ?)

[ಕೆಲೆಸಿಗ್ (ಕ್ಷೌರಿಕನಿಗೆ)]

6. "ಪುಟ್ಟಿ ಬೆಟ್ಟಿಗೆ ಪಟ್ಟುನವು ಎಂಚಿನ ?"
(ಹುಟ್ಟಿದ ಕೂಡಲೇ ಹಂಚುವುದು ಏನನ್ನು ?)

[ಬೆಲ್ಲೊ, ತಾರಾಯಿ (ಬೆಲ್ಲ, ತೆಂಗಿನಕಾಯಿ)]

7. "ಕಾಡ್‌ದ ಮಧ್ಯೊಡು ಒಂಜಿ ಸರಪೊಳಿ ಬೂದುಂಡು ; ಅಯಿತ್ತ ಪುದರ್ ದಾನೆ ?"
(ಕಾಡಿನ ಮಧ್ಯದಲ್ಲಿ ಒಂದು ಸರಪಳಿ ಬಿದ್ದಿದೆ. ಅದರ ಹೆಸರು ಏನು ?)

[ಇರುವೆಗಳ ಸಾಲು.]

**2. ಒಂದು ವಾಕ್ಯದ ಹೇಳಿಕೆ ರೂಪದ ಒಗಟು :**

ಪ್ರಶ್ನೆಯ ರೂಪದ ಒಗಟುಗಳನ್ನು ಬಿಟ್ಟರೆ, ಉಳಿದ ಒಗಟುಗಳ 'ಪ್ರಶ್ನೆಯ ಭಾಗ'ವು ಒಂದು ಅಸ್ಪಷ್ಟ ಹೇಳಿಕೆಯ ರೂಪದಲ್ಲಿ ಇರುತ್ತದೆ. ಇಂಥ ಹೇಳಿಕೆಯಲ್ಲಿ ಒಂದು ವಾಕ್ಯದ, ಎರಡು ವಾಕ್ಯದ, ನಾಲ್ಕು ವಾಕ್ಯದ ಮುಂತಾಗಿ ಬೇರೆ ಬೇರೆ ವ್ಯಾಪ್ತಿಯುಳ್ಳ ಪ್ರಕಾರಗಳು ಇರುತ್ತವೆ. ಒಂದು ವಾಕ್ಯವುಳ್ಳ ಹೇಳಿಕೆಯು 'ಸರಳ ವಾಕ್ಯದ ರೂಪ' (Simple Sentence type) ದ್ದು ಎನ್ನಿಸಿದರೆ, ಉಳಿದವುಗಳು 'ಯೌಗಿಕ ವಾಕ್ಯದ ರೂಪ' (Compound Sentence type) ದವು ಎಂದು ಪರಿಗಣಿತವಾಗುತ್ತವೆ.

ಒಂದು ವಾಕ್ಯವುಳ್ಳ ಅಂದರೆ 'ಸರಳ ವಾಕ್ಯ ರೂಪ'ದ ಪ್ರಶ್ನೆಯ ಭಾಗವನ್ನು ಇಲ್ಲಿ ಗಮನಿಸ ಬಹುದು.

ಉದಾ : 1. "ಅರ್ಧೊ ಕೊಂಡೆ ನೀರ್‌ಡ್ ಮೆಡೆಂಜಿ ನಲಿಪುಂಡು."
(ಅರ್ಧ ಕುಡ್ತೆ ನೀರಿನಲ್ಲಿ ಮಡೆಂಜಿ ಮೀನು ನಲಿಯುತ್ತದೆ.)

[ಬಾಯಿಡ್ ನಾಲಾಯಿ (ಬಾಯಿಯಲ್ಲಿ ನಾಲಗೆ.)]

2. "ಅಳ್ಳೆ ಗೆಲ್ಲ್‌ಡ್ ಮುಳ್ಳೆ ಪಕ್ಕಿ."
(ಬದಿಯ ಗೆಲ್ಲಿನಲ್ಲಿ ಬಾಲದ ಹಕ್ಕಿ.)

[ಮೂಂಕುಂತಿ (ಮೂಗುತಿ)]

3. "ತಂಚ್ಚಿನಕ್‌ಳೆಗ್ ತಂಚ್ಚುಬೆ."
(ಕಚ್ಚಿದವರಿಗೆ ಕಚ್ಚುತ್ತಾನೆ.)

[ಉತ್ತರ : ಮಂಣ್ಚಿ (ಮೆಣಸು)]

4. "ಪೊರ್ಲುದ ಅಕ್ಕ ಮುಳ್ಳುಡು ತಿಕ್ಕೊಂದಳ್."
(ಚೆಂದದ ಅಕ್ಕ ಮುಳ್ಳಿನಲ್ಲಿ ಸಿಕ್ಕಿಕೊಂಡಿದ್ದಾಳೆ.)

[ಕೇದಗೆ ಹೂ]

5. "ಸಾರೊಂತೊಂಜಿ ಜೋಕುಳೆಗ್ ಒಂಜೇ ಒಕ್ಕನೂಲ."
(ಸಾವಿರದ ಒಂದು ಮಕ್ಕಳಿಗೆ ಒಂದೇ ಸೊಂಟದ ನೂಲು.)

[ಮಲಾಯ್ಪು (ಹಿಡಿಸೂಡಿ)]

6. "ಬಂಜಿಡಿತ್ತಿ ಬಾಲೆ ಬಚ್ಚಿರೆ ತಿನ್ಪುಂಡು."
(ಹೊಟ್ಟೆಯಲ್ಲಿದ್ದ ಮಗು ವೀಳ್ಯದೆಲೆ ತಿನ್ನುತ್ತದೆ.)

[ಮನೊಲಿ (ತೊಂಡೆಕಾಯಿ)]

3. ಎರಡು ವಾಕ್ಯ (ಸಾಲು)ದ ಒಗಟು :

ಒಗಟುಗಳ 'ಪ್ರಶ್ನೆಯ ಭಾಗ'ದಲ್ಲಿ ಎರಡು ವಾಕ್ಯಗಳಿದ್ದಾಗ, ಅವುಗಳನ್ನು ಎರಡು ಸಾಲುಗಳ ರೂಪದಲ್ಲಿ ಬರೆದಾಗ, ದ್ವಿಪದಿಯ ಸ್ವರೂಪವನ್ನು ಕಾಣಬಹುದು. ಸಾಮಾನ್ಯವಾಗಿ ಈ ಎರಡು ಸಾಲುಗಳು ಸಮಾನವಾಗಿದ್ದು, ಒಗಟಿನ ಈ ಭಾಗದಲ್ಲಿ ಸಮತೂಕ ಗುಣ ಹೆಚ್ಚಾಗಿ ಗೋಚರವಾಗುತ್ತದೆ. ಅದಕ್ಕೆ ಅನುಗುಣವಾಗಿ ಪ್ರಾಸವನ್ನೂ ಪದಗಳ ಪುನರಾವರ್ತನೆಯನ್ನೂ ಅನೇಕ ಬಾರಿ ಗಮನಿಸಬಹುದು :

ಉದಾ : 1. "ಅಜ್ಜಿಗ್ ಮೂಜಿ ಕಣ್ಣು
ಅಜ್ಜಗ್ ಒಂಜೇ ಕಣ್ಣು."
(ಅಜ್ಜಿಗೆ ಮೂರು ಕಣ್ಣು
ಅಜ್ಜನಿಗೆ ಒಂದೇ ಕಣ್ಣು.)

[ತಾರಾಯಿ ; ಬಜ್ಜೆಯಿ (ತೆಂಗಿನಕಾಯಿ ; ಅಡಿಕೆ)]

ಇಲ್ಲಿ ಒಗಟಿನ 'ಪ್ರಶ್ನೆಯ ಭಾಗ' ದ್ವಿಪದಿಯ ರೂಪದಲ್ಲಿದೆ. ಆದಿ ಪ್ರಾಸ, ಅಂತ್ಯ ಪ್ರಾಸ ಮತ್ತು ಒಳಪ್ರಾಸ ಇದೆ. 'ಕಣ್ಣು' ಎನ್ನುವ ಶಬ್ದ ಪುನರಾವರ್ತನೆಗೊಂಡಿದೆ.

2. "ಅಮ್ಮೆರ್ ಉಜ್ಜೇರ್‌ದಲೆಕೊ
ಅಪ್ಪೆ ತಡ್ಪೆತಲೆಕೊ."
(ತಂದೆ ಒನಕೆಯ ಹಾಗೆ
ತಾಯಿ ಮೊರದ ಹಾಗೆ)

[ಮುಂಡಿದ ಕಂಡೆ ; ಮುಂಡಿದ ಇರೆ (ಮುಂಡಿ ಗಡ್ಡೆ ; ಮುಂಡಿ ಎಲೆ)]

3. "ಅಪ್ಪೆ ಇಲ್ಲಡೆ ಮಂಗಳ್ ಪೋವಳ್
ಮಗಳೆ ಇಲ್ಲಡೆ ಅಪ್ಪೆ ಪೋಪುಜಳ್."
(ತಾಯಿ ಮನೆಗೆ ಮಗಳು ಹೋಗುತ್ತಾಳೆ
ಮಗಳ ಮನೆಗೆ ತಾಯಿ ಹೋಗುವುದಿಲ್ಲ.)

[ಉತ್ತರ : ಸೇರು ; ಪಾವು]

4. "ಅಪ್ಪೆ ಪಾಡಿ ಪಜೆನ್ ಮಡಿಪ್ಯೆರೆ ತೀರುಜಿ
ಅಮ್ಮೆ ಪಾಡಿ ದುಡ್ಡುನು ಗೆಣಿಪ್ಯೆರೆ ಆಪುಜಿ."
(ತಾಯಿ ಹಾಕಿದ ಚಾಪೆಯನ್ನು ಮಡಿಸಲು ಆಗುವುದಿಲ್ಲ
ತಂದೆ ಹಾಕಿದ ಹಣವನ್ನು ಎಣಿಸಲು ಆಗುವುದಿಲ್ಲ.)

[ಆಕಾಶ ; ನಕ್ಷತ್ರ]

5. ಗಟ್ಟಡ್ದ್ ಒಂಜಿ ತುಂಡು ಬೆದರ್ ಕೊನತ್ತ್‌ದೆ
ಅವು ಇಲ್ಲ್ ಕಟ್ಟದ್ ಕಟ್ಟದ್ ಮುಗಿಪ್ಪುಜಿ."
(ಗಟ್ಟದಿಂದ ಒಂದು ತುಂಡು ಬಿದಿರು ತಂದಿದ್ದೇನೆ
ಅದು ಮನೆ ಕಟ್ಟಿ ಕಟ್ಟಿ ಮುಗಿಯುವುದಿಲ್ಲ.)

[ಸೂಜಿ]

4. ಮೂರು ವಾಕ್ಯ (ಸಾಲು)ದ ಒಗಟು :

ಒಗಟುಗಳ 'ಪ್ರಶ್ನೆಯ ಭಾಗ'ದಲ್ಲಿ ಮೂರು ವಾಕ್ಯಗಳಿದ್ದಾಗ, ಅವುಗಳನ್ನು ಮೂರು ಸಾಲುಗಳ ರೂಪದಲ್ಲಿ ಬರೆಯಬಹುದು. ಇಲ್ಲಿ ಮೊದಲು ಎರಡು ಸಾಲುಗಳು ಸುಮಾರು ಸಮಾನ ವ್ಯಾಪ್ತಿಯವು ಆಗಿದ್ದರೆ, ಕೊನೆಯ ಸಾಲು ಹಿಂದಿನ ಸಾಲುಗಳಿಗಿಂತ ಸ್ವಲ್ಪ ದೀರ್ಘವಾಗಿದ್ದು ಮುಕ್ತಾಯ ರೂಪದ್ದು ಆಗಿರುತ್ತದೆ. ಕೆಲವೊಂದು ಬಾರಿ ಮೊದಲ ಸಾಲು ದೀರ್ಘವಾಗಿದ್ದು, ನಂತರದ ಸಾಲುಗಳು ಸ್ವಲ್ಪ ಕಿರಿದಾಗಿದ್ದು ಸಮಾನ ವ್ಯಾಪ್ತಿಯವು ಆಗಿರುತ್ತದೆ.

ಉದಾ : 1. "ಅಡಿಕ್ಕ್ ಚಕ್ಕಣೊ
ಮೇಲ್‌ಗ್ ಚಕ್ಕಣೊ
ಚಕ್ಕಣೊ ದೇವೆರ್ ಬೋಂಟೆಗ್ ಪೋತೆರ್."
(ಅಡಿಗೆ ಚಿಕ್ಕ ಚಾಪೆ
ಮೇಲಿಗೆ ಚಿಕ್ಕ ಚಾಪೆ
ಚಿಕ್ಕ ಚಾಪೆಯ ದೇವರು ಬೇಟೆಗೆ ಹೋಗಿದ್ದಾರೆ.)

[ಐಮೆ (ಆಮೆ)]

2. "ಅಪ್ಪೆ ಕಾಳಿ
ಮಗಳ್ ಬೋಳಿ
ಮಗಳೆ ಮಗಳ್ ಚಿನ್ನಂತ ಗುಬ್ಬಿ."
(ತಾಯಿ ಕಪ್ಪು
ಮಗಳು ಬಿಳಿ
ಮಗಳ ಮಗಳು ಚಿನ್ನದ ಗುಬ್ಬಿ.)

[ಉತ್ತರ : ಚೊಳ್ಳಿ ತಪ್ಪು (ಚೊಳ್ಳಿ ಸೊಪ್ಪು)]

3. "ಅಣ್ಣೆಲ ತಮ್ಮೆಲ ಒಟ್ಟುಗು ಪೋಪುನೆ
ಅಣ್ಣೆ ತಪ್ಪಾವೊಂಡೆ
ತಮ್ಮೆ ತಿಕ್ಕೊಂಡೆ."
(ಅಣ್ಣನೂ ತಮ್ಮನೂ ಒಟ್ಟಿಗೆ ಹೋಗುವವರು
ಅಣ್ಣ ತಪ್ಪಿಸಿಕೊಂಡ
ತಮ್ಮ ಸಿಕ್ಕಿಬಿದ್ದ.)

[ಸೂಜಿ ; ನೂಲು]

4. "ಆಕಾಸೊಡು ರಾಪಿನ ಗಿಡಿ
ಐತ್ತ ಕಾರೆಗ್ ಬೊಳ್ಳಿದ ಕಡಗೊ
ಐನ್ ಮಲ್ತಿನಾಯೆ ಆಚಾರಿ ಮಗೆ."
(ಆಕಾಶದಲ್ಲಿ ಹಾರುವ ಗಿಡುಗ
ಅದರ ಕಾಲಿಗೆ ಬೆಳ್ಳಿಯ ಕಡಗ
ಅದನ್ನು ಮಾಡಿದವ ಬಡಗಿ ಹುಡುಗ.)

[ಉಜ್ಜೀರ್ (ಒನಕೆ)]

5. "ಪಾರ್ ಬತ್ತೆ
ಅಂಗಿ ದೆತ್ತೆ
ಗೂವೆಲ್‌ಗ್ ಲಾಯಿತ್ತೆ."
(ಓಡಿ ಬಂದೆ
ಅಂಗಿ ತೆಗೆದೆ
ಬಾವಿಗೆ ಹಾರಿದೆ.)

[ಬಾರೆದ ಪರ್ಂದ್ (ಬಾಳೆಹಣ್ಣು)]

5. ನಾಲ್ಕು ವಾಕ್ಯ (ಸಾಲು)ದ ಒಗಟು :

ಒಗಟುಗಳ 'ಪ್ರಶ್ನೆಯ ಭಾಗ'ದಲ್ಲಿ ನಾಲ್ಕು ವಾಕ್ಯಗಳಿದ್ದಾಗ, ಅವುಗಳನ್ನು ನಾಲ್ಕು ಸಾಲುಗಳ ರೂಪದಲ್ಲಿ ಬರೆಯಬಹುದು. ಕೆಲವೊಮ್ಮೆ ಈ ನಾಲ್ಕು ಸಾಲುಗಳು ಸಮಾನ ವ್ಯಾಪ್ತಿಯವು ಆಗಿದ್ದರೆ, ಇನ್ನು

ಕೆಲವು ಬಾರಿ ಮೊದಲ ಎರಡು ಸಾಲುಗಳು ಸಮಾನವಾಗಿದ್ದು, ಉಳಿದ ಎರಡು ಸಾಲುಗಳು ಹಿಂದಿನವುಗಳಿಗಿಂತ ಭಿನ್ನವಾಗಿ ಸಮಾನ ವ್ಯಾಪ್ತಿಯ ಇನ್ನೊಂದು ಗುಂಪು ಆಗುತ್ತದೆ.

ಉದಾ : 1. "ಆನ್ನೋರ ಕರಡಿಗೆ
ಮುನ್ನೂರ ಪದ್ದೇಯಿ
ಐನೊರೊ ಕೊರೊಡುಗೆ
ನಿಕುಳೊರೊ ಬರೊಡುಗೆ."
(ಅಗತ್ಯದ ಕರಡಿಗೆ
ಮುನ್ನೂರ ಆಭರಣ
ಆದನ್ನೊಮ್ಮೆ ಕೊಡಬೇಕಂತೆ
ನೀವೊಮ್ಮೆ ಬರಬೇಕಂತೆ.)

[ಉತ್ತರ : ಸೇಮಗೆ ಮಣೆ]

2. "ಅಣ್ಣೆಲ ಬೋಡು
ತಮ್ಮೆಲ ಬೋಡು
ಅಣ್ಣೆ ಬನ್ನಗ ತಮ್ಮೆ ಅಡ್ಂಗ್‌ಬೆ
ತಮ್ಮೆ ಬನ್ನಗ ಅಣ್ಣೆ ಅಡ್ಂಗ್‌ಬೆ."
(ಅಣ್ಣನೂ ಬೇಕು
ತಮ್ಮನೂ ಬೇಕು
ಅಣ್ಣ ಬರುವಾಗ ತಮ್ಮ ಅಡಗುತ್ತಾನೆ
ತಮ್ಮ ಬರುವಾಗ ಅಣ್ಣ ಅಡಗುತ್ತಾನೆ.)

[ಸೂರ್ಯ, ಚಂದ್ರ]

3. "ಒಂಜಿ ದೀಪೊ ತೆಕ್ಕ್ಂಡ
ಸಾರೊ ದೀಪೊ ಪೊತ್ತುಂಡು
ಒಂಜಿ ದೀಪೊ ಪೊತ್ತ್ಂಡ
ಸಾರೊ ದೀಪೊ ತೆಕ್ಕುಂಡು"
(ಒಂದು ದೀಪ ನಂಬಿದರೆ
ಸಾವಿರ ದೀಪ ಉರಿಯುತ್ತದೆ
ಒಂದು ದೀಪ ಉರಿದರೆ
ಸಾವಿರ ದೀಪ ನಂದುತ್ತದೆ.)

[ಸೂರ್ಯೆ, ನಕ್ಷೊತ್ರೊಳು (ಸೂರ್ಯ ನಕ್ಷತ್ರಗಳು)]

4. "ತೂಪುನಾಯೆ ತಿನ್ಪುಜೆ
ತಿನ್ಪುನಾಯೆ ತೂಪುಜೆ
ಕೇನುನಾಯೆ ಪನ್ಪುಜೆ
ಪನ್ಪುನಾಯೆ ಕೇನುಜೆ."
[ನೋಡುವವನು ತಿನ್ನುವುದಿಲ್ಲ
ತಿನ್ನುವವನು ನೋಡುವುದಿಲ್ಲ
ಕೇಳುವವನು ಹೇಳುವುದಿಲ್ಲ
ಹೇಳುವವನು ಕೇಳುವುದಿಲ್ಲ.]

[ಉತ್ತರ : ಕಣ್ಣ್, ಬಾಯಿ, ಕೆಬಿ, ಬಾಯಿ
(ಕಣ್ಣು, ಬಾಯಿ, ಕಿವಿ, ಬಾಯಿ)]

5. "ಗರ್ತ್ ಗರ್ತ್ ಮಣ್ಣ್ ತಿಕ್ಕೊಂಡ್
ಗರ್ತ್ ಗರ್ತ್ ಸೇಡಿ ತಿಕ್ಕೊಂಡ್
ಗರ್ತ್ ಗರ್ತ್ ಪಾದೆ ತಿಕ್ಕೊಂಡ್
ಗರ್ತ್ ಗರ್ತ್ ನೀರ್ ತಿಕ್ಕೊಂಡ್."
[ಅಗೆದು ಅಗೆದು ಮಣ್ಣು ಸಿಕ್ಕಿತು
ಅಗೆದು ಅಗೆದು ಜೇಡಿ ಸಿಕ್ಕಿತು
ಅಗೆದು ಅಗೆದು ಶಿಲೆ ಸಿಕ್ಕಿತು
ಅಗೆದು ಅಗೆದು ನೀರು ಸಿಕ್ಕಿತು.]

[ತಾರಾಯಿ (ತೆಂಗಿನಕಾಯಿ)]

6. ಐದು ಸಾಲಿನ ಒಗಟು :

ಒಗಟುಗಳ 'ಪ್ರಶ್ನೆಯ ಭಾಗ'ದಲ್ಲಿ ಐದು ಸಾಲಿನ ರೂಪವೂ ಅಪೂರ್ವವಾಗಿ ಕಾಣಿಸುತ್ತದೆ.

ಉದಾ ; 1. "ಆ ಊರುಡಿಜ್ಜಿ
ಈ ಊರುಡಿಜ್ಜಿ
ಚಿನ್ವಾರ ಕಟ್ಟೆಡ್ ಇಜ್ಜಿ
ಆ ಊರ ಅರಸು ಕೊರೊಡು
ಈ ಊರ ಅರಸು ತಿನೊಡು."
[ಆ ಊರಲ್ಲಿ ಇಲ್ಲ
ಈ ಊರಲ್ಲಿ ಇಲ್ಲ
ಚಿನಿವಾರ ಕಟ್ಟೆಯಲ್ಲಿ ಇಲ್ಲ
ಆ ಊರ ಅರಸು ಕೊಡಬೇಕು
ಈ ಊರ ಅರಸು ತಿನ್ನಬೇಕು.]

[ಆಲಿ ಪರ್ಂದ್ (ಆಲಿಕಲ್ಲು)]

2. "ಉದ್ದೊ ಉಂಡು, ಬಡು ಅತ್ತ್
ಬಡುವಂದೆಂಡಲ ನೋಪುನವತ್ತ್
ನೋತ್ಂಡಲ ಪೊಳ್ಳಿಪ್ಪುನವತ್ತ್
ಪೊಳಿಂಡಲ ಕೂಡುನವತ್ತ್
ಕೂಡ್ಂಡಲ ಫಲೊಕ್ಕಿತ್ತ್‌ನವತ್ತ್."
[ಉದ್ದ ಉಂಟು, ಬೆತ್ತವಲ್ಲ,
ಬೆತ್ತವಾದರೂ ಹೊಡೆಯುವುದಲ್ಲ,
ಹೊಡೆದರೂ ಮುರಿಯುವುದಲ್ಲ,
ಮುರಿದರೂ ಕೂಡುವುದಲ್ಲ,
ಕೂಡಿದರೂ ಫಲಕಾರಿಯಲ್ಲ.] (ಉತ್ತರ : ಬೆಡಿ [ಕೋವಿ])

7. ಆರು ಸಾಲಿನ ಒಗಟು :

ಒಗಟುಗಳ ಪ್ರಶ್ನೆಯ ಭಾಗದಲ್ಲಿ ಆರು ಸಾಲಿನ ರೂಪವೂ ಅಪೂರ್ವವಾಗಿ ಕಾಣಿಸುತ್ತದೆ.

ಉದಾ: 1. "ಇರುವೆರ್ ಬಿನ್ನೆರ್ ಬತ್ತೆರ್
ಬತ್ತಿನಕುಲು ಉಂತರೆನೇ ಕೇನಿಜೆರ್
ಅತಿಮೀರಿ ಉಂತಿಯೆರ್
ಉಂತಿನಕುಲು ಜೆಪ್ಪೆರೆನೇ ಕೇನಿಜೆರ್
ಅತಿಮೀರಿ ಜೆತ್ತೆರ್
ಜೆತ್ತಿದಿನಕುಲು ಲಕ್ಕಿಯೆರೆನೇ ಕೇನಿಜೆರ್."
[ಇಬ್ಬರು ನೆಂಟರು ಬಂದರು
ಬಂದವರು ತಂಗುವುದಕ್ಕೇ ಕೇಳಲಿಲ್ಲ.
ಅತಿಕ್ರಮಿಸಿ ತಂಗಿದರು,
ತಂಗಿದವರು ಮಲಗುವುದಕ್ಕೇ ಸಮ್ಮತಿಸಲಿಲ್ಲ.
ಅತಿಕ್ರಮಿಸಿ ಮಲಗಿದರು,
ಮಲಗಿದವರು ಏಳುವುದಕ್ಕೇ ನಿರಾಕರಿಸಿದರು.]
(ಮೊಲೆಯ ಬೆಳವಣಿಗೆಯ ಬೇರೆ ಬೇರೆ ಹಂತಗಳು)

2. "ಯಾನ್ ಒಂಜಿ ಗೂವೆಲ್ ದೆತ್ತೆ
ಸುರೂಟು ಮುರ
ಬುಕ್ಕೊ ಪೂ ಮಣ್ಣ್
ಬುಕ್ಕೊ ಕರ್ಗಲ್ಲ್
ಬುಕ್ಕೊ ಬೊಳ್ಳು ಕಲ್ಲ್
ಬುಕ್ಕೊ ನೀರ್ ತಿಕ್ಕಂಡ್."
(ನಾನು ಒಂದು ಬಾವಿ ತೋಡಿದೆ
ಮೊದಲು 'ಮುರ'ಕಲ್ಲು

ಬಳಿಕ ಹೂ ಹಣ್ಣು
ಬಳಿಕ ಕಗ್ಗಲ್ಲು
ಬಳಿಕ ಬೆಣಚುಕಲ್ಲು
ಬಳಿಕ ನೀರು ಸಿಕ್ಕಿತು.)

[ಉತ್ತರ : ತಾರಾಯಿ (ತೆಂಗಿನಕಾಯಿ)]

ಉತ್ತರದ ಭಾಗ :

1. ಒಂದು ಶಬ್ದದ ಉತ್ತರ :

ತುಳು ಒಗಟುಗಳ ಹೆಚ್ಚಿನ ಉತ್ತರಗಳೆಲ್ಲಾ ಒಂದೇ ಪದವುಳ್ಳವು ಆಗಿರುತ್ತವೆ. ಆ ಪದವು ನಾಮಪದವಾಗಿರುತ್ತದೆ.

ಉದಾ : 1. "ಆಂಚಿ ಇಂಚಿ ಪೋದ್ ಬತ್ತ್‌ದ್ ಕಂಟೆಲ್‌ಗ್ ಕೈಪಾಡುನೆ."
(ಆಚೆ ಈಚೆ ಹೋಗಿ ಬಂದು ಕುತ್ತಿಗೆಗೆ ಕೈ ಹಾಕುವುದು.)

[ಕೊಡಪಾನೊ (ಕೊಡ)]

2. "ಗುಂಡ್ಡೆಡ್ ಒರಿ ಕೊಡೆ ಪತ್ತೊಂದ್ ಉನ್‌ತ್‌ದೆ."
(ಗುಂಡ್ಡೆಯಲ್ಲಿ ಒಬ್ಬ ಕೊಡೆ ಹಿಡಿದುಕೊಂಡು ನಿಂತಿದ್ದಾನೆ.)

[ಆಲಂಬು (ಅಣಬೆ)]

3. "ಇರು ಇುರು ಪೆಟ್ಟಿಗೆಗ್ ಸಾರತ್ತೊಂಜಿ ಕಟ್ಟ್."
(ಇರು ಇುರು ಪೆಟ್ಟಿಗೆಗೆ ಸಾವಿರದ ಒಂದು ಕಟ್ಟು.)

[ಮೊಟ್ಟು (ಪಾದರಕ್ಷೆ)]

2. ಎರಡು ಶಬ್ದಗಳ ಉತ್ತರ :

ಎರಡು ಶಬ್ದಗಳ ಉತ್ತರದಲ್ಲಿ ಎರಡೂ ಶಬ್ದಗಳು ನಾಮಪದ ಆಗಿರುವುದು ಒಂದು ವರ್ಗ. ಒಗಟಿನ 'ಪ್ರಶ್ನೆಯ ಭಾಗ'ವು ಎರಡು ವಸ್ತುಗಳನ್ನು ವಿವರಿಸುತ್ತಿದ್ದರೆ, ಈ ರೀತಿಯ ಉತ್ತರ ಬರುತ್ತದೆ.

ಉದಾ : 1. "ಅಜ್ಜಿಗ್ ಮೂಜಿ ಕಣ್ಣ್, ಅಜ್ಜಗ್ ಒಂಜೇ ಕಣ್ಣ್."
(ಅಜ್ಜಿಗೆ ಮೂರು ಕಣ್ಣು, ಅಜ್ಜನಿಗೆ ಒಂದೇ ಕಣ್ಣು.)

[ತಾರಾಯಿ; ಬಜ್ಜೆಯಿ (ತೆಂಗಿನಕಾಯಿ, ಅಡಿಕೆ)]

2. "ಎಲ್ಯ ಇಪ್ಪುನಗ ಕೋಮಣೊ ಕಟ್ಟ್‌ದೆ, ಮಲ್ಲೆ ಆನಗ ಗಿಚ್ಚ್‌ದ್ ಅಡಕ್ಕ್‌ದೆ."
(ಚಿಕ್ಕವನಿದ್ದಾಗ ಲಂಗೋಟಿ ಕಟ್ಟಿದ್ದೇನೆ, ದೊಡ್ಡವನಾದಾಗ ತೆಗೆದು ಬಿಸಾಡಿದ್ದೇನೆ.)
[ಕಣಿಲೆ, ಬೆದೆರ್ (ಕಣಿಲೆ, ಬಿದಿರು)]

3. "ಸಂತ್ರ್ ಮಂತ್ರ್ ಉರಿಗೆಜ್ಜೆ, ನಡುಟ್ಟು ನಾಗಪ್ಪಣ್ಣೆ."
[ಸಂತ್ರು ಮಂತ್ರಲೂ ಉರಿಗೆಜ್ಜೆ, ನಡುವಿನಲ್ಲಿ ನಾಗಪಣ್ಣ.]
[ಉತ್ತರ : ಕೂಳಿಳ್, ನಾಲಾಯಿ (ಹಲ್ಲುಗಳು, ನಾಲಗೆ)]

3. ವಿಶೇಷಣ ಸಹಿತವಾದ ಒಂದು ನಾಮಪದ ರೂಪದ ಉತ್ತರ :

ಇಂತಹ ಉತ್ತರಗಳಲ್ಲಿ ವಸ್ತುವು ಒಂದು ನಾಮಪದವಾಗಿರುತ್ತದೆ. ಆ ವಸ್ತುವಿನ ಸ್ಥಾನವನ್ನು ಮೊದಲಿನ ಪದದಲ್ಲಿ ನಿರ್ದೇಶಿಸುತ್ತಾರೆ.

ಉದಾ : 1. "ಅಟ್ಟೊಡು ಒಂಜಿ ಮುಡಿ ಕಟ್ಟ್‌ದೆ, ಅವು ಉರ್ಪೆಲೋ ಬೊಂಳತ್ತೈನೋ ಗೊತ್ತಿದ್ದಿ."
[ಅಟ್ಟದಲ್ಲಿ ಒಂದು ಅಕ್ಕಿಮುಡಿ ಕಟ್ಟಿದ್ದೇನೆ, ಅದು ಕಂಚ್ಚಿಲೋ ಬೆಳ್ಳಿಗೆಯೋ ಎಂದು ಗೊತ್ತಿಲ್ಲ.]
[ಬಂಜಿಡ್ ಬಾಲೆ (ಹೊಟ್ಟೆಯಲ್ಲಿ ಮಗು)]

2. "ಅರ್ಧೊ ಕೊಂಡೆ ನೀರ್‌ಡ್ ಮಂಡೆಂಜಿ ನಲಿಪ್ಪುಂಡು."
[ಅರ್ಧ ಕಂಡ್ಗೆ ನೀರಿನಲ್ಲಿ ಮಂಡೆಂಜಿ ಮೀನು ನಲಿಯುತ್ತದೆ.]
[ಬಾಯಿಡ್ ನಾಲಾಯಿ (ಬಾಯಿಯಲ್ಲಿ ನಾಲಗೆ)]

3. "ಅಪ್ಪೆ ಮಗಳೆ ಕಾರ್‌ಬಾರ್‌ಡ್ ಬತ್ತ್‌ನಕ್ಲು ಮಾತ ಪೊಡಿ ಪೊಡಿ."
[ತಾಯಿ ಮಗಳ ಕಾರುಭಾರಿನಲ್ಲಿ ಬಂದವರೆಲ್ಲಾ ಪುಡಿ ಪುಡಿ.]
[ಕಡೆಪ್ಪಿಕಲ್ಲ್‌ಡ್ ಅರೆಪ್ಪು (ಕಡೆಯುವ ಕಲ್ಲಿನಲ್ಲಿ ಮಸಾಲೆ)]

4. ಕಿನ್ನಿ ಕಿನ್ನಿ ಜೋಕುಳೆಗ್ ಕಿನ್ನಿ ಕಿನ್ನಿ ಮುಂಟ್ಪಾಳೆ."
[ಚಿಕ್ಕ ಚಿಕ್ಕ ಮಕ್ಕಳಿಗೆ ಚಿಕ್ಕ ಚಿಕ್ಕ ಟೊಪ್ಪಿಗೆ.]
[ಬೆರೆಳೆಡ್ ಉಗುರು (ಬೆರಳಿನಲ್ಲಿ ಉಗುರು)]

4. ಒಂದು ನಾಮಪದ ಮತ್ತು ಒಂದು ಕ್ರಿಯಾಪದವನ್ನು ಒಳಗೊಂಡ ಉತ್ತರ :

ಇಂತಹ ಉತ್ತರಗಳಲ್ಲಿ ಮೊದಲನೆಯ ಪದ ನಾಮಪದವಾಗಿದ್ದು, ಎರಡನೆಯ ಪದವು ಕ್ರಿಯಾಪದವಾಗಿರುತ್ತದೆ. ಒಟ್ಟು ಉತ್ತರವು ಒಂದು ಕ್ರಿಯೆಯನ್ನು ಸೂಚಿಸುತ್ತದೆ.

ಉದಾ : 1. "ಇಲ್ಲ್‌ದ ಉಳಯಿ ಪಿಲಿ ಕೊರೆಪ್ಪುಂಡು."
[ಮನೆಯ ಒಳಗೆ ಹುಲಿ ಗರ್ಜಿಸುತ್ತದೆ.]
[ತಾರಾಯಿ ಪೆರೆಪ್ಪುನೆ (ತೆಂಗಿನಕಾಯಿ ಹೆರೆಯುವುದು)]

2. "ಎಂಕುಳೆ ಇಲ್ಲಲ್ ಬೊಳ್ಪಾನಗ ಪಿಲಿ ಕೊರೆಪ್ಪುಂಡು."
(ನಮ್ಮ ಮನೆಯಲ್ಲಿ ಬೆಳಗಾದಾಗ ಹುಲಿ ಗರ್ಜಿಸುತ್ತದೆ.)

[ಉತ್ತರ : ಅಳೆ ತುಳಿಪ್ಪುನೆ (ಮೊಸರು ಕಡೆಯುವುದು)]

3. ಕರ್ಬೊ ದೇವರೆ ಮಂಟಪೊಡು ಬೊಳ್ಳಿದೇವೆರ್ ನಲಿಪ್ಪುವೆರ್."
(ಕಬ್ಬಿಣ ದೇವರ ಮಂಟಪದಲ್ಲಿ ಬೆಳ್ಳಿದೇವರು ಕುಣಿಯುತ್ತಾರೆ.)

[ಪೊರಿ ಪೊದ್ಪುನೆ (ಅರಳು ಹುರಿಯುವುದು)]

4. "ಕೊರಗರಸು ದೋಲಿಡ್ ಪೋಪೆ."
[ಕೊರಗರಸ ದೋಲಿಯಲ್ಲಿ ಹೋಗುತ್ತಾನೆ.]

[ಗೊಬ್ಬರೊ ತುಂಬುನೆ (ಗೊಬ್ಬರ ಹೊರುವುದು)]

5, ಒಂದೇ ಕ್ರಿಯಾಪದವನ್ನು ಒಳಗೊಂಡ ಉತ್ತರ :

ಉದಾ : 1. "ಅಂಕುಡೊಂಕು ಸಂಕಪಾಲ, ಮೂಜಿತರೆ, ಪತ್ತ್ ಕಾರ್."
[ಅಂಕುಡೊಂಕು ಸಂಕಪಾಲ, ಮೂರು ತಲೆ, ಹತ್ತು ಕಾಲು.]

[ಅಡುಪ್ಪುನೆ (ಉಳುವುದು)]

2. "ಎನ್ನ ಒಂಜಿ ಅಜ್ಜಿ ಉಂಡು, ಅವು ಏಪೊಲ ಬೊಳ್ಪುಗು ಲಕ್ಕ್‌ದ್ ತರಟೆ ಬೊಳ್ಯೊಗು ಬುಡಪ್ಪುಂಡು."
[ನನ್ನ ಒಂದು ಅಜ್ಜಿ ಉಂಟು, ಅದು ಯಾವಾಗಲೂ ಬೆಳಗ್ಗೆ ಎದ್ದು ದೊಣ್ಣೆಯನ್ನು ನೀರಿನಲ್ಲಿ ಬಿಡುತ್ತದೆ.]

[ಉರ್ಚುನೆ (ಹೇಲುವುದು)]

6. ವಾಕ್ಯ ರೂಪದ ಉತ್ತರ :

ಒಗಟುಗಳ ಕೆಲವು ಉತ್ತರಗಳು ಒಂದು ವಾಕ್ಯದ ರೂಪದಲ್ಲಿ ಇರುತ್ತವೆ.

ಉದಾ : 1. "ಭೂಮಿಡ್ ಬೋಂಟೆ, ಆಕಾಸೊಡು ಅಜಕ್ಕಲೊ."
[ಭೂಮಿಯಲ್ಲಿ ಬೇಟೆ, ಆಕಾಶದಲ್ಲಿ ಪಾಲುಮಾಡುವುದು.]

[ಗಿಡಿ ಕೋರಿದ ಕಿನ್ನಿನ್ ಪತ್ತುನೆ (ಗಿಡುಗ ಕೋಳಿಮರಿಯನ್ನು ಹಿಡಿಯುವುದು)]

2. "ಐನ್ ಜನೊ ದೆರ್ಪರೆ, ಪತ್ತ್ ಜನೊ ಜಾಯೆರೆ."
[ಐದು ಜನ ಎತ್ತುವುದಕ್ಕೆ, ಹತ್ತು ಮಂದಿ ಇಳಿಸುವುದಕ್ಕೆ.]

[ಕೈಟ್ಟ್ ಮುಂಡುದ ಕೊಡಿನ್ ದೆರ್ತ್‌ದ್ ಪತ್ಯೊನುನೆ.
ಕೈಯಿಂದ ಪಂಚೆಯ ತುದಿಯನ್ನು ಎತ್ತಿಹಿಡಿದುಕೊಳ್ಳುವುದು)]

7. ಕಥೆ ಅಥವಾ ಘಟನೆಯ ರೂಪದ ವಿವರಣಾತ್ಮಕ ಉತ್ತರ :

ಕೆಲವು ಒಗಟುಗಳ ಉತ್ತರವು ಒಂದು ಕಥೆ ಅಥವಾ ಘಟನೆಯ ರೂಪದಲ್ಲಿ ವಿವರಣಾತ್ಮಕವಾಗಿರುತ್ತದೆ. ಸಾಮಾನ್ಯವಾಗಿ ಇವುಗಳನ್ನು 'ಒಗಟು ಕತೆ' ಎನ್ನುತ್ತಾರೆ. ಕೆಲವೊಮ್ಮೆ ಸ್ಪಷ್ಟವಾಗಿ 'ಕತೆ'ಯೊಂದು ಇಲ್ಲದಿದ್ದರೂ, ಉತ್ತರವು ಕೆಲವು ವಾಕ್ಯಗಳ ಮೂಲಕ ವಿವರಣಾತ್ಮಕವಾಗಿರುತ್ತದೆ.

[ಉದಾ : 'ಘಟನಾಪ್ರಧಾನ ಒಗಟುಗಳು' ಎನ್ನುವ ಅಧ್ಯಾಯದಲ್ಲಿ ಇಂತಹ ಒಗಟುಗಳನ್ನು ಕೊಡಲಾಗಿದೆ.]

8. ಇತರ ರೂಪದ ಉತ್ತರಗಳು :

ಮೂರು, ನಾಲ್ಕು ಅಥವಾ ಐದು ನಾಮಪದಗಳ ಉತ್ತರಗಳು ಇವೆ. ಒಗಟಿನ ಪ್ರಶ್ನೆಯ ಭಾಗದಲ್ಲಿನ ವಿವರಣೆಗಳಿಗೆ ಅನುಸಾರವಾಗಿ ಉತ್ತರದ ಭಾಗದಲ್ಲಿ ಈ ರೀತಿ ಮೂರು, ನಾಲ್ಕು ಅಥವಾ ಐದು ನಾಮಪದಗಳಿರುತ್ತವೆ. ಕೆಲವೊಮ್ಮೆ ಇಂತಹ ವಿವರಣೆ 'ಪ್ರಶ್ನೆಯ ಭಾಗ'ದಲ್ಲಿ ಕಾಣಿಸುವುದಿಲ್ಲ.

ಉದಾ : 1. ಅಪ್ಪೆಲ ಅಮ್ಮೆಲ ಕಪ್ಪು, ಬಾಲೆ ಬೊಳ್ಳೆನೊ.
(ತಾಯಿ ಮತ್ತು ತಂದೆ ಕಪ್ಪು, ಮಗು ಬಿಳಿ.)
[ಉತ್ತರ : ಕಾಪೊಲಿ, ಬಾವೊಡೆ, ದೊಸೆ (ಕಾವಲಿ, ಮುಚ್ಚಳ, ದೋಸೆ)[

2. "ತಟಪಟದ ಇರೆ, ಲಾಡಿ ಪೆತ್ತದ ನೆಯಿ, ಏಕನಾಯ್ಕನ ಬೇರ್, ಗೂರು ಗೂರ್ಮೆದ ಕೆತ್ತಿ."
(ತಟಪಟ ಎನ್ನುವ ಎಲೆ, ಲಾಡಿ ಹಸುವಿನ ತುಪ್ಪ, ಏಕನಾಯ್ಕನ ಬೇರು, ಗೂ ಎನ್ನುವ ಗೂಗೆಯ ಮೊಟ್ಟೆ.)

[ಬಚ್ಚಿರೆ, ಸುಣ್ಣೊ, ಪುಗೆರೆ, ಬಜ್ಜೆಯಿ (ವೀಳ್ಯೆದೆಲೆ, ಸುಣ್ಣ, ಹೊಗೆಸೊಪ್ಪು, ಅಡಿಕೆ)]

3. "ನಾಲ್ ಜನೊ ಗ್ರಾಸ್ತೆರೆಗ್ ಒರಿ ಪಟಿಂಗೆ."
(ನಾಲ್ಕು ಜನ ಸಭ್ಯರಿಗೆ ಒಬ್ಬ ಪಟಿಂಗ.)
[ಸುಣ್ಣೊ, ಬಚ್ಚಿರೆ, ಬಜ್ಜೆಯಿ, ಪುಗೆರೆ–ನಾಲ್ ಗ್ರಾಸ್ತೆರ್; ಪಡ್ಕೊ–ಪಟಿಂಗೆ.
(ಸುಣ್ಣ, ವೀಳ್ಯೆದೆಲೆ, ಅಡಿಕೆ, ಹೊಗೆಸೊಪ್ಪು–ನಾಲ್ಕು ಜನ ಸಭ್ಯರು, ಪೀಕದಾನಿ–ಪಟಿಂಗ)]

ತುಳು ಒಗಟುಗಳ ಭಾಷಿಕ ರಚನೆ : (Linguistic Stucture of Tulu Riddles) :

ತುಳು ಒಗಟುಗಳಲ್ಲಿ ಕೆಲವು ವಿಶಿಷ್ಟ ಶಬ್ದಗಳು ಅಥವಾ ವ್ಯಾಕರಣ ರೂಪಗಳು ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಅವುಗಳಲ್ಲಿ ಕೆಲವನ್ನು ವಿವೇಚಿಸಲಾಗಿದೆ.

'ಗಟ್ಟದಿಂದ ಇಂತಹ ವಸ್ತುವನ್ನು ತಂದಿದ್ದೇನೆ' ಎಂದು ಆರಂಭವಾಗುವ ಕೆಲವು ಒಗಟುಗಳು ಸಿಗುತ್ತವೆ. ಕನ್ನಡದ ಒಗಟುಗಳಲ್ಲಿ ಇಂತಹ ಪದಪ್ರಯೋಗ ಎಲ್ಲೂ ಸಿಗುವುದಿಲ್ಲ. ತುಳುನಾಡಿಗೆ ಘಟ್ಟದ

ಮೇಲಿನಿಂದ ಅನೇಕ ಸಾಮಗ್ರಿಗಳನ್ನು (ಜೀನಸು, ಧಾನ್ಯ, ಜಾನುವಾರು ಇತ್ಯಾದಿ) ತರಿಸುತ್ತಾ ಇದ್ದ ಸಂಗತಿ ತುಳುನಾಡಿನ ಇತಿಹಾಸದ ಶಾಸನಗಳಲ್ಲಿ ಸಿಗುತ್ತದೆ. ಆದ್ದರಿಂದ ತುಳು ಒಗಟುಗಳ ರಚನೆಯಲ್ಲಿಯೂ ಈ ಸಂಗತಿ ಕಾಣಿಸಿಕೊಂಡಿದೆ.

ಉದಾ : 1. "ಗಟ್ಟಡ್ದ್ ಒಂಜಿ ಎರು ಕೊನತ್ತ್‌ದೆ; ಅವು ನೀರು ತೂಯಿನವುಳು ಉಂತುಂಡು."
(ಗಟ್ಟದಿಂದ ಒಂದು ಜೊತೆ ಕೋಣಗಳನ್ನು ತಂದಿದ್ದೇನೆ; ಅದು ನೀರು ಕಂಡಲ್ಲಿ ನಿಲ್ಲುತ್ತದೆ.)
[ಉತ್ತರ : ಮೊಟ್ಟು (ಪಾದರಕ್ಷೆ)]

2. "ಗಟ್ಟಡ್ದ್ ಒಂಜಿ ತುಂಡು ಉಪ್ಪಡ್ ಕೊನತ್ತ್‌ದೆ; ಅವು ಪಟ್ಟ್‌ದ್ ಪಟ್ಟ್‌ದ್ ಮುಗಿಪ್ಪುಜಿ."
(ಗಟ್ಟದಿಂದ ಒಂದು ತುಂಡು ಉಪ್ಪಿನಕಾಯಿ ತಂದಿದ್ದೇನೆ ; ಅದು ಹಂಚಿ ಹಂಚಿ ಮುಗಿಯು ವುದಿಲ್ಲ.)
[ಸೂ (ಬೆಂಕಿ)]

3. "ಗಟ್ಟಡ್ದ್ ಒಂಜಿ ತುಂಡು ಬೆದ್‌ರ್ ಕೊನತ್ತ್‌ದೆ;ಅವು ಇಲ್ಲ್ ಕಟ್ಟ್‌ದ್ ಕಟ್ಟ್‌ದ್ ಮುಗಿಪ್ಪುಜಿ.
(ಗಟ್ಟದಿಂದ ಒಂದು ತುಂಡು ಬಿದಿರು ತಂದಿದ್ದೇನೆ; ಅದು ಮನೆ ಕಟ್ಟಿ ಕಟ್ಟಿ ಮುಗಿಯುವುದಿಲ್ಲ.)
[ಸೂಜಿ]

4. "ಗಟ್ಟಡ್ದ್ ಒಂಜಿ ಪಜೆ ಕೊನತ್ತ್‌ದೆ; ಆಯಿತ್ತ ಅಡಿ ಓವು ಮೇಲ್ ಓವೊಂದು ತೆರಿಪ್ಪುಜಿ."
(ಗಟ್ಟದಿಂದ ಒಂದು ಚಾಪೆ ತಂದಿದ್ದೇನೆ; ಅದರ ಅಡಿ ಯಾವುದು ಮೇಲು ಯಾವುದು ಎಂದು ತಿಳಿಯುವುದಿಲ್ಲ.)
[ಕುಂಟು (ವಸ್ತ್ರ)]

5. "ಗಟ್ಟಡ್ದ್ ಒಂಜಿ ಸೀರೆ ಕೊನತ್ತ್‌ದೆ; ಅವು ನೀರ್‌ಡ್ ಮುರ್ಕನಗ ಚಂಡಿ ಆಪುಜಿ."
(ಗಟ್ಟದಿಂದ ಒಂದು ಸೀರೆ ತಂದಿದ್ದೇನೆ; ಅದನ್ನು ನೀರಿನಲ್ಲಿ ಮುಳುಗಿಸಿದಾಗ ಒದ್ದೆಯಾಗು ವುದಿಲ್ಲ.)
[ಚೇವುದ ಇರೆ (ಕೆಸುವಿನ ಎಲೆ)]

6. "ಗಟ್ಟದ ಬದನೆಗ್ ತೊಟ್ಟು ಇದ್ದಿ."
(ಗಟ್ಟದ ಬದನೆಗೆ ತೊಟ್ಟು ಇಲ್ಲ.)
[ಕೆತ್ತಿ (ಕೋಳಿಮೊಟ್ಟೆ)]

'ಒಂಜಿ' (ಒಂದು) ಎಂಬ ಶಬ್ದದಿಂದ ಆರಂಭವಾಗುವ ತುಳು ಒಗಟುಗಳು ಅನೇಕ ಸಿಗುತ್ತವೆ. 'ಯಾವುದಾದರೊಂದು' ಎನ್ನುವ ಅರ್ಥದಲ್ಲಿ 'ಸಾಮಾನ್ಯ ಸ್ವರೂಪ' (General nature) ದಲ್ಲಿ ಈ 'ಒಂಜಿ' (ಒಂದು) ಎಂಬ ಪದವನ್ನು ಬಳಸುತ್ತಾರೆ. ಸುಮಾರು 25ರಷ್ಟು ತುಳು ಒಗಟುಗಳು 'ಒಂಜಿ' (ಒಂದು) ಎಂಬ ಪದದಿಂದ ಆರಂಭವಾಗುವವು ಸಿಕ್ಕಿವೆ.

ಉದಾ : 1. "ಒಂಜಿ ಅಜ್ಜಿ ಅವುಲೆ ಮೂಲೆ ತಾಂಟ್‌ದ್ ಮೂಲೆಡ್ ಪೋದ್ ಕುಳ್ಳ್‌ಬಳ್."
(ಒಂದು ಅಜ್ಜಿ ಅಲ್ಲಿ ಇಲ್ಲಿ ತಡಕಾಡಿ ಮೂಲೆಯಲ್ಲಿ ಹೋಗಿ ಕುಳಿತುಕೊಳ್ಳುತ್ತಾಳೆ.)
[ಮ್ಯಾಪುಸೂಡಿ (ಹಿಡಿಸೂಡಿ)]

2. "ಒಂಜಿ ಆನೆಗ್ ಒಂಜೇ ಮೇವು."
(ಒಂದು ಆನೆಗೆ ಒಂದೇ ಮೇವು.)

[ಉತ್ತರ : ಮಾಡು]

3. "ಒಂಜಿ ಕುಡೆಟ್ಟ್ ಒರ್ಲ ಮೊರಂಟೆ."
(ಒಂದು ಬಿಲದಲ್ಲಿ ಒಂದು ಬಳ್ಳ ಮೊರಂಟೆ ಮೀನುಗಳಿವೆ.)

[ಪೆಲಕ್ಕಾಯಿಡ್ ಪೆಲತ್ತರಿ (ಹಲಸಿನ ಹಣ್ಣಿನಲ್ಲಿ ಹಲಸಿನ ಬೀಜ)]

4. "ಒಂಜಿ ಪಳ್ಳಡ್ ಏಳ್ ಎರ್ಮೆಳ್."
(ಒಂದು ಹಳ್ಳದಲ್ಲಿ ಏಳು ಎಮ್ಮೆಗಳು.)

[ಅಪ್ಪೊದ ಕಾವೊಲಿ (ಅಪ್ಪದ ಕಾವಲಿ)]

5. "ಒಂಜಿ ಕುಪ್ಪಿಡ್ ರಡ್ಡ್ ಮರ್ದ್."
(ಒಂದು ಬಾಟ್ಲಿಯಲ್ಲಿ ಎರಡು ಬಗೆಯ ಔಷಧ.)

[ಕೆತ್ತಿ (ಮೊಟ್ಟೆ)]

'ರಡ್ಡ್' (ಎರಡು) ಎಂಬ ಶಬ್ದದಿಂದ ಆರಂಭವಾಗುವ ತುಳು ಒಗಟುಗಳು ಅನೇಕ ಸಿಗುತ್ತವೆ. ಸುಮಾರು 15 ರಷ್ಟು ಒಗಟುಗಳು ಈ ರೀತಿಯವು ಸಿಕ್ಕಿವೆ. ಆದರೆ 'ಮೂರು', 'ನಾಲ್ಕು' ಮುಂತಾದ ಸಂಖ್ಯಾವಾಚಕ ಪದಗಳಿಂದ ಆರಂಭವಾಗುವ ಒಗಟುಗಳ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿ ಇಲ್ಲ.

ಉದಾ : 1. "ರಡ್ಡ್ ಪುಂಡಿಡ್ ಪತ್ತೊಂದು ಏತ್ಂದ್ ಕೇಣ್ಬೆರ್."
(ಎರಡು ಮುಷ್ಟಿಗಳಲ್ಲಿ ಹಿಡಿದುಕೊಂಡು ಎಷ್ಟೆಂದು ಕೇಳುತ್ತಾರೆ.)

[ಚಳಿ]

2. "ರಡ್ಡ್ ಗೂವೆಲ್‌ಗ್ ಒಂಜೇ ಪಾಮುರ."
(ಎರಡು ಬಾವಿಗಳಿಗೆ ಒಂದೇ ಪಾಮುರ.)

[ಮೂಂಕು (ಮೂಗು)]

3. "ರಡ್ಡ್ ತೊಟ್ಟಿಲ್‌ಡ್ ಕುಳ್ಳಯೆರ್; ಒರಿಯನ್ ಕೊರ್ಯೆರ್, ಬುಕೊಕ್ಕರ್ಯನ್ ಕುಳ್ಳಯೆರ್."
(ಎರಡು ತೊಟ್ಟಿಲುಗಳಲ್ಲಿ ಕುಳ್ಳಿರಿಸಿದರು; ಒಬ್ಬನನ್ನು ಕೊಟ್ಟರು, ಇನ್ನೊಬ್ಬನನ್ನು ಕುಳ್ಳಿರಿಸಿದರು.)

[ತ್ರಾಸ್‌ಡ್ ಸಾಮಾನ್ ತೂಕನೆ (ತಕ್ಕಡಿಯಲ್ಲಿ ವಸ್ತುವನ್ನು ತೂಗುವುದು)]

**ಬಂಧುಗಳ ಉಲ್ಲೇಖ :**

ತುಳು ಒಗಟುಗಳಲ್ಲಿ ಅಜ್ಜಿ, ಅಜ್ಜ, ಅಪ್ಪ, ಅಮ್ಮ, ಅಣ್ಣ, ಅಕ್ಕ, ಮಗಳು, ಮಗ–ಇಂತಹ ಬಂಧುಗಳನ್ನು ಕುರಿತಂತೆ ಹೇಳಲಾಗಿದೆ. ಅವುಗಳಲ್ಲಿ ಒಂದು ವಸ್ತುವನ್ನು 'ಅಜ್ಜಿ'ಯೆಂದು ಭಾವಿಸಿರುವ ಒಗಟುಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆಯುತ್ತವೆ.

ಉದಾ : 1. "ಒಂಜಿ ಅಜ್ಜಿ ಏಪೊಲ ವರಾಟೆಗ್ ಕೈಪಾಡುಂಡು."
(ಒಂದು ಅಜ್ಜಿ ಯಾವಾಗಲೂ ಬಿಲಕ್ಕೆ ಕೈಹಾಕುತ್ತದೆ.)
[ಉತ್ತರ : ಬಚ್ಚಿರೆ ತಿನ್ಪುನೆ (ವೀಳ್ಯದೆಲೆ ತಿನ್ನುವುದು)]

2. "ಒಂಜಿ ಅಜ್ಜಿಗ್ ಗುಂದ್ದ್‌ಂಡ ಮೂಜಿ ಅಜ್ಜಿಳ್ ಪಿದಡ್‌ಬೆರ್."
(ಒಂದು ಅಜ್ಜಿಗೆ ಗುಂದ್ದಿದರೆ ಮೂರು ಅಜ್ಜಿಯರು ಹೊರಡುತ್ತಾರೆ.)
[ಆಲಂಬುಡೊದ ಕಾಯಿ (ಅವುಡಲ ಕಾಯಿ)]

3. "ಒಂಜಿ ಅಜ್ಜಿಗ್ ಮೂಜಿ ಒಟ್ಟೆ."
(ಒಂದು ಅಜ್ಜಿಗೆ ಮೂರು ತೂತು.)
[ರಾಗಿದ ಕಲ್ಲ್ (ರಾಗಿಯ ಕಲ್ಲು)]

4. "ಒಂಜಿ ಅಜ್ಜಿಗ್ ಮೈಯೊರ್ವೆ ಕಜ್ಜಿ."
(ಒಂದು ಅಜ್ಜಿಗೆ ಮೈಯಿಡೀ ಕಜ್ಜಿ.)
[ಕಂಚೋಲು (ಹಾಗಲಕಾಯಿ)]

5. "ಒಂಜಿ ಅಜ್ಜೆ ಕೋವಣೊ ದೆತ್ತ್‌ದ್ ಕುಳ್ಳ್‌ದ್‌ಂಡ್."
(ಒಂದು ಅಜ್ಜ ಲಂಗೋಟಿ ತೆಗೆದು ಕುಳಿತಿದ್ದಾನೆ.)
[ಬೀಜೊದ ಪರ್‌ಂದ್ (ಗೇರು ಹಣ್ಣು)]

6. "ಅಪ್ಪೆಗ್ ಒಂಜಿ ಒಟ್ಟೆ, ಮಗಳೆಗ್ ರಡ್ಡ್ ಒಟ್ಟೆ."
(ತಾಯಿಗೆ ಒಂದು ತೂತು, ಮಗಳಿಗೆ ಎರಡು ತೂತು.)
[ಬೀಸುವ ಕಲ್ಲ್ (ಬೀಸುವ ಕಲ್ಲು)]

7. "ಅಮ್ಮೆರ್ ಉಜ್ಜೆರ್‌ದಲೆಕೊ, ಅಪ್ಪೆ ತಡ್ಪೆತಲೆಕೊ."
(ತಂದೆ ಒನಕೆಯ ಹಾಗೆ, ತಾಯಿ ಮೊರದ ಹಾಗೇ.)

8. "ಅಮ್ಮೆ ಪುಟ್ಟುನೆಕ್ಕ್ ದುಂಬು ಮಗೆ ಪುಟ್ಟುದೆ."
(ತಂದೆ ಹುಟ್ಟುವುದಕ್ಕೆ ಮೊದಲೇ ಮಗ ಹುಟ್ಟುತ್ತಾನೆ.)
[ಸೂ ; ಪುಗೆ (ಬೆಂಕಿ ; ಹೊಗೆ)]

9. "ಅಕ್ಕ ಲಾಗ್ಯಳ್, ನುರೆ ಕಾರುಳ್, ಅಳೆನಾತೆಗೆ ಪರತೊಂದು ಪೋಯಳ್."
(ಅಕ್ಕ ಹಾರಿದಳು, ನೊರೆ ಕಾರಿದಳು, ಅವಳಷ್ಟಕ್ಕೇ ಹರಿದುಕೊಂಡು ಹೋದಳು.)
[ಜಲಪಾತ]

10. "ಮಂಗನ್ ಕಡ್ತ್‌ಂಡ್, ಅಪ್ಪೆನ್ ತಿಗ್ತ್‌ಂಡ್."
(ಮಗನನ್ನು ಕಡಿಯಿತು, ತಾಯಿಯನ್ನು ಸಿಗಿಯಿತು.)
[ಕೈಲ್ ಕಡ್ತ್‌ದ್ ಬಾರೆದ ಪಂಬೆ ಲಕ್ಕಪುನೆ (ಬಾಳೆಯಗೊನೆ ಕಡಿದು, ಬಾಳೆಗಿಡವನ್ನು ಸಿಗಿಯುವುದು)]

11. "ಮೆಂಗಿ ಮುರ್ಕುಬೆ, ಪಲೆ ಮೀಂದ್‌ಬೆ."
(ತಮ್ಮ ಮುಳುಗುತ್ತಾನೆ, ಅಣ್ಣ ಈಜುತ್ತಾನೆ.)
[ಉತ್ತರ : ಬೊಂಡೊಲ, ತಾರಾಯಿ (ಎಳನೀರು ಮತ್ತು ತೆಂಗಿನಕಾಯಿ)]

ವ್ಯಕ್ತಿನಾಮಗಳ ಬಳಕೆ :

ತುಳು ಒಗಟುಗಳಲ್ಲಿ ವ್ಯಕ್ತಿಗಳ ಹೆಸರುಗಳನ್ನು ವಸ್ತುಗಳಿಗೆ, ಪ್ರಾಣಿ, ಪಕ್ಷಿ, ಸಸ್ಯಗಳಿಗೆ ಮತ್ತು ಅಂತಹ ಇತರ ಸಂದರ್ಭಗಳಲ್ಲಿ ತಮಾಷೆಗಾಗಿ ಬಳಸುವ ರೀತಿಯನ್ನು ನೋಡಬಹುದು. ಇಲ್ಲಿ ಕಾಣಿಸುವ ಹೆಚ್ಚಿನ ವ್ಯಕ್ತಿನಾಮಗಳು ತುಳುವ ಸಂಸ್ಕೃತಿಯಲ್ಲಿ ಜನಪ್ರಿಯವಾಗಿರುವವುಗಳೇ ಆಗಿವೆ.

1. ವಸ್ತುಗಳಿಗೆ ಸಂಬಂಧಿಸಿದಂತೆ :

ಉದಾ : 1. "ಕರಿಯ ಕಾಂತಣ್ಣಗ್ ಬೊಳ್ದು ಮುಂಡಾಸ್."
(ಕಪ್ಪು ಕಾಂತಣ್ಣನಿಗೆ ಬಿಳಿಯ ಮುಂಡಾಸು.)
[ಕರಟ್ಟ್ ನುರೆ (ಕಪ್ಪು ಮಡಕೆಯಲ್ಲಿ ಅನ್ನದ ನೊರೆ)]

2. "ನುರೆ ಶಂಭಟ್ರ್ ಬಾನೊಡ್ದು ಜತ್ತೆರ್, ಅಂಗಡಿಗ್ ಪೋಯೆರ್."
(ನೂರೆ ಶಂಭಟ್ಟರು ಆಕಾಶದಿಂದ ಇಳಿದರು, ಅಂಗಡಿಗೆ ಹೋದರು.)
[ಕಳಿ (ಕಳ್ಳು)]

3. "ಬಡ್ಡ್ ಬದನೆ, ಉಣೆಂಗೆಲ್ ಸಾಂತಣ್ಣೆ, ಸರಪ್ಪೊಳಿ ಸಂಕಣ್ಣೆ."
(ಬಡ್ಡು ಬದನೆ, ಒಣಗಿದ ಸಾಂತಣ್ಣ, ಸರಪಳಿ ಸಂಕಣ್ಣ.)
[ಕೊಟ್ಟಿಗೆ, ರೊಟ್ಟಿ, ಸೇವಗೆ]

2. ಪ್ರಾಣಿ, ಪಕ್ಷಿ, ಸಸ್ಯಗಳಿಗೆ ಸಂಬಂಧಿಸಿದಂತೆ :

1. "ಕೋಲು ಕಾರ್ ಕುಂಞಾಳಿ ಬ್ಯಾರಿ, ನಾಲ್ಕ್ ಕಾರ್ ಞಂಗಾಳಿ ಬ್ಯಾರಿ."
(ಕೋಲು ಕಾಲಿನ ಕುಂಞಾಳಿ ಬ್ಯಾರಿ, ನಾಲ್ಕು ಕಾಲಿನ ಞಂಗಾಳಿ ಬ್ಯಾರಿ.)

2. "ಬೈತ್ರಡಿ ಶಂಕರೆ, ಕಲ್ಲ್‌ತ್ರೆಡಿ ಬಿರ್ಮಣ್ಣೆ, ಬಾಂತಿಲ್ ಬಸವೆ."
(ಬೈ ಹುಲ್ಲಿನಡಿಯ ಶಂಕರ, ಕಲ್ಲಿನಡಿಯ ಬಿರ್ಮಣ್ಣ, ಬಾಂತಿಲ್ ಬಸವ.)
[ಆಲಂಬು, ದೆಂಜಿ, ಮುದಲೆ (ಅಣಬೆ, ಏಡಿ, ಮೊಸಳೆ)]

3. "ಸಂಕಣ್ಣ ಭಾಗವತೆರೆ ಸಂಗೀತೊಗು ಮಂಜಣ್ಣ ಭಾಗವತೆರ್‌ನ ಶ್ರುತಿ."
(ಸಂಕಣ್ಣ ಭಾಗವತರ ಸಂಗೀತಕ್ಕೆ ಮಂಜಣ್ಣ ಭಾಗವತರ ಶ್ರುತಿ.)
[ಸಂಕೊದ ಸ್ವರೊಕ್ಕ್ ನಾಯಿದ ಬಾಂಗ್ (ಶಂಖದ ಧ್ವನಿಗೆ ನಾಯಿಯ ಧ್ವನಿ ಜೊತೆ ಸೇರುವುದು)]

## 2. ತುಳು ಒಗಟುಗಳಲ್ಲಿ ವ್ಯಕ್ತವಾಗುವ ತುಳುನಾಡಿನ ಸಂಸ್ಕೃತಿ :

ಯಾವುದೇ ದೇಶದ, ಯಾವುದೇ ಭಾಷೆಯ ಒಗಟುಗಳಂತೆಯೇ ತುಳು ಒಗಟುಗಳೂ ಸಾರ್ವತ್ರಿಕ ಸಂಗತಿಗಳನ್ನು ಹೇಳುವಂತೆಯೇ ಪ್ರಾದೇಶಿಕ ಸಂಸ್ಕೃತಿಯನ್ನೂ ಪ್ರತಿಬಿಂಬಿಸುತ್ತವೆ. ಈ ವಿಚಾರದಲ್ಲಿ ಜನಪದ ಸಾಹಿತ್ಯದ ಉಳಿದ ಪ್ರಕಾರಗಳಿಗಿಂತ ಒಗಟುಗಳು ಸ್ವಲ್ಪ ಭಿನ್ನವಾಗಿವೆ. ಗಾದೆಗಳಲ್ಲಿ ವ್ಯಕ್ತವಾಗುವ ಸಾಂಸ್ಕೃತಿಕ ಅಂಶ ಆ ವಾಕ್ಯದಲ್ಲಿಯೇ ನೇರವಾಗಿ ಕಾಣಿಸುತ್ತದೆ. ಆದರೆ ಒಗಟುಗಳಲ್ಲಿ ವ್ಯಕ್ತವಾಗುವ ಸಂಸ್ಕೃತಿಯು ಒಗಟಿನ ಪ್ರಶ್ನೆಯ ಭಾಗದಲ್ಲಿ ಇರಬಹುದು ಅಥವಾ ಅದರ ಉತ್ತರದ ಭಾಗದಲ್ಲಿ ಇರಬಹುದು. ಕೆಲವೊಮ್ಮೆ ಎರಡೂ ಕಡೆ ಕಾಣಿಸಬಹುದು. ಒಗಟಿನ ಉತ್ತರಗಳಲ್ಲಿ ಎರಡು ವಿಧ : (1) ವಸ್ತುರೂಪದವು, (2) ಕ್ರಿಯಾರೂಪದವು. ತುಳು ಒಗಟುಗಳಲ್ಲಿ ಉತ್ತರಗಳು ವಸ್ತುಗಳೇ ಆಗಿರುವುದು ಅಧಿಕವಾಗಿವೆ. ಈ ವಸ್ತುರೂಪದ ಉತ್ತರಗಳ ವಿಶ್ಲೇಷಣೆಯಿಂದ ತುಳುನಾಡಿನ ಸಂಸ್ಕೃತಿಯು ಇವುಗಳಲ್ಲಿ ಹೇಗೆ ಸ್ಥಾನ ಪಡೆದಿದೆ ಎಂಬುದನ್ನು ತಿಳಿಯಬಹುದು.

ಇಲ್ಲಿ 640 ತುಳು ಒಗಟುಗಳ ಉತ್ತರವನ್ನು ಆಧರಿಸಿ ವಸ್ತುವಿನ ರೂಪದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಒಟ್ಟು ತುಳು ಒಗಟುಗಳು 640.

ಇಲ್ಲಿ ಬಳಸಿಕೊಂಡ ಪ್ರಕಟಿತ ತುಳು ಒಗಟುಗಳ ಸಂಕಲನಗಳು—

1. ತುಳು ಒಗಟುಗಳು :– ಸಂಪಾದಕ : ಬಿ.ಎ. ವಿವೇಕ ರೈ, (ಪ್ರಕೃತ ಲೇಖಕ) ಪ್ರಕಾಶಕರು, ಕನ್ನಡ ಸಂಘ, ಮಂಗಳ ಗಂಗೋತ್ರಿ, ಮಂಗಳೂರು. ಪ್ರಥಮ ಮುದ್ರಣ–1971.

2. ತುಳು ಒಗಟುಗಳು :– ಸಂಪಾದಕ :– ಎಮ್. ನಾರಾಯಣ, ಮಂಗಳೂರು. ಪ್ರಕಾಶಕರು : ಪ್ರಭಾತ, ರಥಬೀದಿ, ಮಂಗಳೂರು. ಪ್ರಥಮ ಮುದ್ರಣ–1972.

**ಸಸ್ಯಗಳು : 640 ರಲ್ಲಿ 140 — 22 ಶೇಕಡ**

| | | ಒಗಟುಗಳ ಸಂಖ್ಯೆ | | | ಒಗಟುಗಳ ಸಂಖ್ಯೆ |
|---|---|---|---|---|---|
| 1. | ತೆಂಗು – ತೆಂಗಿನ ಉತ್ಪನ್ನಗಳು | .... 18 | 10. | ಅಣಬೆ | .... 4 |
| 2. | ತಾಳೆ | .... 16 | 11. | ಅಂಬಟೆ, ನುಗ್ಗೆ | .... 4 |
| 3. | ಬಾಳೆ | .... 13 | 12. | ಕೇದಗೆ ಹೂ | .... 3 |
| 4. | ವೀಳ್ಯದೆಲೆ–ಎಲೆ ಅಡಿಕೆ ತಿನ್ನುವುದು | .... 10 | 13. | ಹಾಗಲಕಾಯಿ | .... 3 |
| 5. | ಅಡಿಕೆ | .... 8 | 14. | ತೊಂಡೆಕಾಯಿ | .... 3 |
| 6. | ಹಲಸು | .... 6 | 15. | ನೇಜಿ–ಕೆಯಿ | .... 3 |
| 7. | ಕುಂಬಳಕಾಯಿ | .... 5 | 16. | ನೀರುಳ್ಳಿ | .... 2 |
| 8. | ಗೇರು | .... 4 | 17. | ಮಾವು | .... 2 |
| 9. | ಮೆಣಸು | .... 4 | 18. | ಶುಂಠಿ | .... 2 |
| | | | 19. | ಅನಾನಸು | .... 2 |

| | ಒಗಟುಗಳ ಸಂಖ್ಯೆ | | ಒಗಟುಗಳ ಸಂಖ್ಯೆ |
|---|---|---|---|
| 20. ಕಣಿಲೆ, ಬಿದಿರು | .... 2 | 32. ಲಿಂಬೆಹಣ್ಣು | .... 1 |
| 21. ಅರಸಿನ | .... 2 | 33. ಗೋಳಿ ಮರ | .... 1 |
| 22. ಹೊಗೆಸೊಪ್ಪು | .... 2 | 34. ಪಡುವಲಕಾಯಿ | .... 1 |
| 23. ಕೆಸು | .... 2 | 35. ಓಟೆ ಹುಳಿ | .... 1 |
| 24. ಪೇರಳೆ | .... 2 | 36. ಕಬ್ಬು | .... 1 |
| 25. ಕಲ್ಲಂಗಡಿಹಣ್ಣು | .... 1 | 37. ರಾಗಿ | .... 1 |
| 26. ಜೋಳ | .... 1 | 38. ರಂಜೆ ಹೂ | .... 1 |
| 27. ಅವುಡಲ | .... 1 | 39. ನಾಚಿಕೆ ಮುಳ್ಳು | .... 1 |
| 28. ಬೊಳ್ಳಿಸೊಪ್ಪು | .... 1 | 40. ಮುಡಿನಾಳಿ | .... 1 |
| 29. ಮುಂಡಿಗಡ್ಡೆ | .... 1 | 41. ಮುಳಿಹುಲ್ಲು | .... 1 |
| 30. ಕಾಸರಕನಕಾಯಿ | .... 1 | 42. ಅಕಿದೆ | .... 1 |
| 31 ನೆಲ್ಲಿಕಾಯಿ | .... 1 | | |

**ಪ್ರಾಣಿ–ಪಕ್ಷಿ–ಕೀಟಗಳು : 640 ರಲ್ಲಿ 70 – 11 ಶೇಕಡ**

| | ಒಗಟುಗಳ ಸಂಖ್ಯೆ | | ಒಗಟುಗಳ ಸಂಖ್ಯೆ |
|---|---|---|---|
| 1. ಕೋಳಿ, ಕೋಳಿ ಮೊಟ್ಟೆ | .... 16 | 14. ಮಂಗ | .... 2 |
| 2. ಮೀನು | .... 6 | 15. ಆಮೆ | .... 2 |
| 3. ನಾಯಿ | .... 5 | 16. ಕಾಗೆ | .... 2 |
| 4. ಕೆಂಪಿರುವೆ | .... 4 | 17. ಬಾವಲಿ | .... 1 |
| 5. ಹಾವು | .... 3 | 18. ನೊಣ | .... 1 |
| 6. ಏಡಿ | .... 3 | 19. ಎರೆಹುಳ | .... 1 |
| 7. ಕಪ್ಪೆ | .... 3 | 20. ಕುದುರೆ | .... 1 |
| 8. ಹೇನು | .... 3 | 21. ನವಿಲು | .... 1 |
| 9. ಆನೆ | .... 3 | 22. ಸೊಳ್ಳೆ | .... 1 |
| 10. ನರ್ತೆ (ನಳ್ಳಿ) | .... 2 | 23. ಬಾತುಕೋಳಿ | .... 1 |
| 11. ಎತ್ತು, ಕೋಣ, ದನ, ಎಮ್ಮೆ | .... 2 | 24. ದಿಡುಂಗ | .... 1 |
| 12. ಜೇಡ | .... 2 | 25. ಹಂದಿ | .... 1 |
| 13. ಜೇಳು | .... 2 | 26. ಇಲಿ | .... 1 |

**ಗೃಹೋಪಯೋಗಿ ವಸ್ತುಗಳು—ಅಡುಗೆಯ ಸಾಮಗ್ರಿಗಳು**

**ಒಟ್ಟು 290 ಸುಮಾರು 45 ಶೇಕಡ**

| | ಒಗಟುಗಳ ಸಂಖ್ಯೆ | | ಒಗಟುಗಳ ಸಂಖ್ಯೆ |
|---|---|---|---|
| 1. ಪಾದರಕ್ಷೆ | ....10 | 4. ಕೊಡಪಾನ, ಚೆಂಬು, ತಪಲೆ | .... 8 |
| 2. ದೀಪ | ....10 | 5. ಸೇಮುಗೆ ಮಣೆ, ಸೇಮುಗೆ ಅಡ್ಯೆ (ತಿಂಡಿ) | 7 |
| 3. ಕೊಳವಿ | .... 9 | 6. ಹಿಡಿಸೂಡಿ | .... 6 |

| | | ಒಗಟುಗಳ ಸಂಖ್ಯೆ |
|---|---|---|
| 7. | ಬೀಸುವ ಕಲ್ಲು | .... 5 |
| 8. | ದೋಣಿ | .... 5 |
| 9. | ಕೊಡೆ | .... 5 |
| 10. | ಸೂಜಿ, ನೂಲು | .... 5 |
| 11. | ಕೊಟ್ಟಿಗೆ ಅಡ್ಯೆ (ತಿಂಡಿ) | .... 4 |
| 12. | ಕಡೆಯುವ ಕಲ್ಲು | .... 3 |
| 13. | ಅಕ್ಕಿ | .... 3 |
| 14. | ಗಾಣ | .... 3 |
| 15. | ಅಗಳಿ | .... 3 |
| 16. | ಕಾವಲಿ, ಮುಚ್ಚಳ, ದೋಸೆ | .... 2 |
| 17. | ರಾಗಿಕಲ್ಲು | .... 2 |
| 18. | ಅಪ್ಪದ ಕಾವಲಿ | .... 2 |
| 19. | ಉಪ್ಪು | .... 2 |
| 20. | ಸೇರು, ಪಾವು | .... 2 |
| 21. | ನಸ್ಯ | .... 2 |
| 22. | ಅಂಗಿ | .... 2 |
| 23. | ಸೀರೆ | .... 2 |
| 24. | ಕೈವಸ್ತ್ರ | .... 2 |
| 25. | ಇಲಿಕತ್ತರಿ | .... 2 |
| 26. | ಬೀಗ | .... 2 |
| 27. | ಒಲೆ | .... 1 |
| 28. | ಕತ್ತರಿ | .... 1 |
| 29. | ಇಕ್ಕಳ | .... 1 |

| | | ಒಗಟುಗಳ ಸಂಖ್ಯೆ |
|---|---|---|
| 30. | ಚೂರಿ | .... 1 |
| 31. | ಒನಕೆ | .... 1 |
| 32. | ಕೂರಿ | .... 1 |
| 33. | ಕನ್ನಡಿ | .... 1 |
| 34. | ಮಾಡು | .... 1 |
| 35. | ಬಲೆ | .... 1 |
| 36. | ಆಣಿ | .... 1 |
| 37. | ಕಾಯಿಸಿದ ಮಡಕೆ | .... 1 |
| 38. | ನೀರಿನ ಏತ | .... 1 |
| 39. | ದೀವಟಿಗೆ | .... 1 |
| 40. | ಸಕ್ಕರೆ | .... 1 |
| 41. | ಕೊಡಲಿ | .... 1 |
| 42. | ಮಣ್ಣಿನ ಮಡಕೆ | .... 1 |
| 43. | ಬಳ್ಳ, ಕುಡಿತೆ | .... 1 |
| 44. | ಜಾಗಟೆ | |
| 45. | ಏಣಿ | .... 1 |
| 46. | ಡೋಲು | |
| 47. | ಕಾಪು | .... 1 |
| 48. | ಭತ್ತದ ತೆನೆ ಹೊಡೆಯುವ ಪಡಿಮಂಚ | 1 |
| 49. | ಹಾರೆ | .... 1 |
| 50. | ಹಡಗು | .... 1 |
| 51. | ಕಡಲು, ದೋಣಿ, ಬಲೆ, ಬೆಸ್ತರು | .... 1 |

ಮೇಲಿನ ಮೂರು ಪಟ್ಟಿಗಳಲ್ಲಿನ ತುಳು ಒಗಟುಗಳಲ್ಲಿ ತುಳುನಾಡಿನ ಸಂಸ್ಕೃತಿಯ ಭಾಗವಾಗಿ ಇಲ್ಲಿನ ಸಸ್ಯಗಳು, ಪ್ರಾಣಿ-ಪಕ್ಷಿ-ಕೀಟಗಳು ಮತ್ತು ಗೃಹೋಪಯೋಗಿ ವಸ್ತುಗಳು ಹಾಗೂ ಅಡುಗೆಯ ಸಾಮಗ್ರಿಗಳು ಹೇಗೆ ಕಾಣಿಸಿಕೊಳ್ಳುತ್ತವೆ ಎಂಬುದನ್ನು ಗಮನಿಸಬಹುದು. ಇಲ್ಲಿ ಕಾಣಿಸುವ ಹೆಚ್ಚಿನ ಸಸ್ಯಗಳು, ಪ್ರಾಣಿ ಪಕ್ಷಿ ಕೀಟಗಳು ಮತ್ತು ವಸ್ತುಗಳು–ಇವನ್ನು ಕನ್ನಡ ಒಗಟುಗಳಲ್ಲಿಯೂ ಕಾಣಬಹುದು. ಆದರೆ ಶೇಕಡಾ ಸಂಖ್ಯಾಪ್ರಮಾಣದಲ್ಲಿ ಹೆಚ್ಚು ಕಡಿಮೆಗಳಿರುವುದು ಗಮನಾರ್ಹ. ತುಳುನಾಡಿನ ಸಂಸ್ಕೃತಿ ಬಹುಮಟ್ಟಿಗೆ ಕನ್ನಡನಾಡಿನ ಸಂಸ್ಕೃತಿಯ ಒಂದು ಭಾಗವಾಗಿರುವುದರಿಂದ ಈ ಸಾಮ್ಯ ಹೆಚ್ಚು ಸಹಜವಾಗಿದೆ.

ಆದರೂ ತುಳು ಒಗಟುಗಳಲ್ಲಿ ಕಾಣಿಸುವ ಕೆಲವು ಸಸ್ಯಗಳು ಕನ್ನಡ ಒಗಟುಗಳಲ್ಲಿ ಕಾಣಿಸದೆ ಇರುವುದನ್ನು ಗಮನಿಸಬಹುದು. ಉದಾ :– ಓಡಲ, ಬೊಳ್ಳೆಸೊಪ್ಪು, ಮುಂಡಿಗಡ್ಡೆ, ಕಾಸರಕನಕಾಯಿ, ಗೋಳಿ ಮರ, ನಾಚಿಕೆಮುಳ್ಳು, ರೆಂಜೆ ಹೂ, ಮುಳಿಹುಲ್ಲು, ಮುಡಿನಾಳಿ, ಅಕಿರೆ ಮುಂತಾದುವು. ಈ ಸಸ್ಯಗಳಲ್ಲಿ ಕೆಲವು ಕನ್ನಡನಾಡಿನ ಇತರ ಕಡೆಗಳಲ್ಲಿ ಕಾಣಿಸಿಕೊಂಡರೂ ಕನ್ನಡ ಒಗಟುಗಳಿಗೆ ಅವು ವಸ್ತುವಾಗಿಲ್ಲ. ತುಳುನಾಡಿನ ಬೇರೆ ಬೇರೆ ಸಸ್ಯಗಳು ಇಲ್ಲಿನ ಜನರ ಬದುಕಿನಲ್ಲಿ ಹಾಸುಹೊಕ್ಕಾಗಿ ಬೆರೆತಿರುವುದರಿಂದ ಅವು ತುಳು ಒಗಟುಗಳಲ್ಲಿ ತಮ್ಮ ಪ್ರಾಮುಖ್ಯದ ಪ್ರಮಾಣದಲ್ಲಿ ಸ್ಥಾನ ಪಡೆದಿರುವುದನ್ನು ನೋಡಬಹುದು.

ತುಳು ಒಗಟುಗಳಲ್ಲಿ ಕಾಣಿಸುವ ಪ್ರಾಣಿ, ಪಕ್ಷಿ, ಕೀಟಗಳು ಕನ್ನಡ ಒಗಟುಗಳಲ್ಲಿ ಕಾಣಿಸುವ ಪ್ರಾಣಿ, ಪಕ್ಷಿ, ಕೀಟಗಳಿಂದ ವಿಶೇಷ ಭಿನ್ನವಾಗಿ ಇಲ್ಲ. ಆದರೆ ತುಳುನಾಡಿನ ಆಹಾರ ವ್ಯವಸ್ಥೆಯಲ್ಲಿ ಬಹಳ ಮುಖ್ಯ ಅಂಗಗಳಾಗಿರುವ ಕೋಳಿ ಮತ್ತು ಮೀನು ತುಳು ಒಗಟುಗಳಲ್ಲಿ ಕಾಣಿಸುವ ಪ್ರಾಣಿವರ್ಗದಲ್ಲಿ ಅಧಿಕ ಸಂಖ್ಯೆಯಲ್ಲಿ ಇವೆ. ಆಮೆ ಎಂಬ ಪ್ರಾಣಿ ಕನ್ನಡನಾಡಿನ ಬೇರೆ ಕಡೆಗಳಲ್ಲಿ ಇದ್ದರೂ ಕೂಡ ಕನ್ನಡ ಒಗಟುಗಳ ಈವರೆಗಿನ ಸಂಕಲನಗಳಲ್ಲಿ ಸ್ಥಾನ ಪಡೆದಿಲ್ಲ. ಆದರೆ ತುಳು ಒಗಟುಗಳಲ್ಲಿ ಆಮೆ ವಸ್ತುವಿನ ಸ್ಥಾನವನ್ನು ಪಡೆದಿರುವುದನ್ನು ಗಮನಿಸಬಹುದು.

ಗೃಹೋಪಯೋಗಿ ವಸ್ತುಗಳು ಮತ್ತು ಅಡುಗೆಯ ಸಾಮಾಗ್ರಿಗಳು ಯಾವುದೇ ಕುಟುಂಬದಲ್ಲಿ ಸರ್ವೇ ಸಾಮಾನ್ಯವಾಗಿ ಕಾಣಿಸುವಂತಹವುಗಳು. ಆದರೆ ಪ್ರದೇಶದಿಂದ ಪ್ರದೇಶಕ್ಕೆ ಸಂಸ್ಕೃತಿ ಭಿನ್ನವಾಗುತ್ತಾ ಹೋದಂತೆ ಈ ವಸ್ತುಗಳಲ್ಲಿಯೂ ಅನೇಕ ಬದಲಾವಣೆಗಳನ್ನು ಕಾಣಬಹುದು. ಅನೇಕ ವಸ್ತುಗಳು ಎಲ್ಲಾ ಕಡೆಗಳಲ್ಲಿಯೂ ಸಾಮಾನ್ಯವಾಗಿ ಕಾಣಿಸುವಂತಹವುಗಳಾದರೆ, ಇನ್ನು ಕೆಲವು ಆಯಾಯ ಪ್ರದೇಶಕ್ಕೇ ವಿಶಿಷ್ಟ ವಾಗಿರುತ್ತವೆ. ತುಳುನಾಡಿನ ಜನಜೀವನದಲ್ಲಿ ದೈನಂದಿನ ಬದುಕಿನಲ್ಲಿ ಬಳಸಲಾಗುವ ಅಡುಗೆಯ ಮತ್ತು ಇತರ ಮನೆವಾರ್ತೆಯ ವಸ್ತುಗಳ ಪಟ್ಟಿಯನ್ನು ಮೇಲೆ ಕೊಡಲಾಗಿದೆ. ಇಲ್ಲಿನ ಜನರು ಉಪಯೋಗಿಸುವ ವಸ್ತುಗಳ ವೈವಿಧ್ಯವನ್ನು ಇಲ್ಲಿ ಗಮನಿಸಬಹುದು. ಅಲ್ಲಿರುವ ಅನೇಕ ವಸ್ತುಗಳು ಕನ್ನಡನಾಡಿನ ಇತರ ಕಡೆಗಳಲ್ಲಿ ಸಿಗುವಂತಹವು. ಆದರೆ ಕೆಲವು ಅಡುಗೆಯ ವಸ್ತುಗಳು, ತಿಂಡಿಗಳು ಹಾಗೂ ಇತರ ವಸ್ತುಗಳು ಇಲ್ಲಿನ ಪ್ರಾದೇಶಿಕ ಸಂಸ್ಕೃತಿಗೆ ಮೀಸಲಾಗಿವೆ. ಉದಾ : 1. ಕೊಟ್ಟಿಗೆ ಅಡ್ಯೆ ಅಥವಾ ಮೂಡೆ. ಅಕ್ಕಿಯನ್ನು ಕಡೆದು ಅದರ ಹಿಟ್ಟಿನಿಂದ ಮಾಡುವ ಈ ತಿಂಡಿ ತುಳುನಾಡಿನ ಹಬ್ಬ ಹರಿದಿನಗಳ ಸಂದರ್ಭದ ಒಂದು ತಿಂಡಿ. ಬಾಳೆಎಲೆಯ ತುಂಡುಗಳಿಂದ ಎರಡು ಬದಿಗಳಲ್ಲಿ ಗೋಣಿಯಂತೆ ಹಗ್ಗದಲ್ಲಿ ಕಟ್ಟಿ ಒಂದು ಬದಿಯನ್ನು ಕಟ್ಟುವುದಕ್ಕೆ ಮೊದಲು ಅಕ್ಕಿ ಹಿಟ್ಟನ್ನು ಅದರೊಳಗೆ ಹೊಯ್ದು ಇಡ್ಲಿಯಂತೆ ಉಗಿಯಲ್ಲಿ ಬೇಯಿಸಿ ಮಾಡುವ ತಿಂಡಿ ಇದು. ಕೊಟ್ಟಿಗೆ ಅಡ್ಯೆಯನ್ನು ಉತ್ತರವನ್ನಾಗಿ ಉಳ್ಳ ತುಳು ಒಗಟುಗಳು ಈ ರೀತಿ ಇವೆ :

1. ಅಡ್ಡೊ ಜೆತ್ತೊಂದಿ ಬಡ್ಡೆ ಕೆಕ್ಕಿಲ್‌ಗ್ ಬಳ್ಳ್ ಪಾಡೊಂಡೆ.
   (ಅಡ್ಡ ಮಲಗಿರುವ ಬಡ್ಡ ಕುತ್ತಿಗೆಗೆ ಹಗ್ಗ ಹಾಕಿಕೊಂಡಿದ್ದಾನೆ.)

2. ಒಂಜಿ ಮುಂಗಗ್ ರಡ್ಡ್ ಬೀಲೊ.
   (ಒಂದು ಮುಂಗನಿಗೆ ಎರಡು ಬಾಲ.)

3. ಮಾಂತ ಗೋಣಿಗ್ ಒಂಜಿ ಬಾಯಿ ಕಟ್ಟ್‌ಂಡ, ಎಂಕ್ಲೆ ಗೋಣಿಗ್ ರಡ್ಡ್ ಬಾಯಿ ಕಟ್ಟೊಡು.
   (ಎಲ್ಲಾ ಗೋಣಿಗಳಿಗೆ ಒಂದು ಬಾಯಿ ಕಟ್ಟಿದರೆ, ನಮ್ಮ ಗೋಣಿಗೆ ಎರಡು ಬಾಯಿ ಕಟ್ಟಬೇಕು.)

2. ಅಪ್ಪದ ಕಾವಲಿ :

ಇದು ದೋಸೆಯ ಕಾವಲಿಯಂತೆ ಸಮತಲವಾಗಿರದೆ, ಕುಳಿಗಳಿಂದ ಕೂಡಿಕೊಂಡಿರುವ ಕಾವಲಿ. ಈ ಕುಳಿಗಳಲ್ಲಿ ಹಿಟ್ಟನ್ನು ಹೊಯ್ದು ಮಾಡುವ ತಿಂಡಿಗೆ 'ಅಪ್ಪ' ಎಂದು ಕರೆಯುತ್ತಾರೆ. ಈ 'ಅಪ್ಪ' ಎನ್ನುವ ತಿಂಡಿ ತುಳು ಗಾದೆಗಳಲ್ಲಿ ಮತ್ತು ತುಳು ಜಾನಪದ ಕತೆಗಳಲ್ಲಿ ಸ್ಥಾನವನ್ನು ಪಡೆದಿದೆ.

"ಅಪ್ಪೊ ತಿಂದ್‌ನಿ ಯಾರಂದೊ ? ಗುರಿ ಲೆಕ್ಕೊ ಮಲ್ಪೊಡೊ ?"
(ಅಪ್ಪ ತಿಂದರೆ ಸಾಲದೇ ? ಕುಳಿ ಲೆಕ್ಕ ಮಾಡಬೇಕೇ ?)
ಎಂಬುದು ಒಂದು ಪ್ರಸಿದ್ಧವಾದ ತುಳು ಗಾದೆ.

ಅಪ್ಪದ ಕಾವಲಿಯನ್ನು ಉತ್ತರವನ್ನಾಗಿ ಉಳ್ಳ ತುಳು ಒಗಟುಗಳು ಈ ರೀತಿ ಇವೆ :

1. "ಒಂಜಿ ಪಳ್ಳಡ್ ಏಳ್ ಎರ್ಮೆಲ್."
(ಒಂದು ಹಳ್ಳದಲ್ಲಿ ಏಳು ಎಮ್ಮೆಗಳು.)

3. ಕೂರಿ :

ಕೂರಿ ಅಂದರೆ ಮೀನು ಹಿಡಿಯಲು ಉಪಯೋಗಿಸುವ ಸಾಧನ. ಇದನ್ನು ತೆಂಗಿನ ಗರಿಗಳ ಕಡ್ಡಿಗಳಿಂದ ಮಾಡಿರುತ್ತಾರೆ. ಇದರೊಳಗೆ ಒಂದು ಬಾರಿ ಮೀನು ಪ್ರವೇಶಿಸಿದರೆ ಪುನಃ ಹೊರ ಬರಲು ಆಗುವುದಿಲ್ಲ. ತುಳುನಾಡಿನಲ್ಲಿ ಮೇಲಿನ ಗದ್ದೆಯ ನೀರು ಕೆಳಕ್ಕಿಳಿಯುವಲ್ಲಿ ಈ ಕೂರಿಗಳನ್ನು ಇಡುತ್ತಾರೆ. ನೀರು ಕೆಳಕ್ಕಿಳಿಯುವಾಗ ಅದರ ಜೊತೆಗೆ ಬರುವ ಮೀನುಗಳು ಕೂರಿಯಲ್ಲಿ ಸಿಕ್ಕಿ ಕೊಳ್ಳುತ್ತವೆ. ತುಳು ಗಾದೆಗಳಲ್ಲಿಯೂ ಈ ಕೂರಿಯು ಸ್ಥಾನ ಪಡೆದಿರುವುದನ್ನು ಕಾಣಬಹುದು.

ಉದಾ : "ಕೂರಿಡಿತ್ತಿ ಕೊಡ್ಯಾನ್‌ಗ್ ದಾನೆ ಗೊಂತು ?"
(ಬಲೆಯಲ್ಲಿದ್ದ ಮೀನಿಗೆ ಹೊರಗಿನ ವಿಚಾರ ಏನು ಗೊತ್ತು ?)

ಕೊರಿಯು ಉತ್ತರವಾಗಿವುಳ್ಳ ತುಳು ಒಗಟು ಹೀಗಿದೆ :

1. ಎದ್‌ರೆದ್‌ರ್ ಅಂಗಡಿ, ಬೆದ್‌ರಡಿ ಚಾವಡಿ, ಪೊಗ್ಗುನಕುಳು ಉಂಡು, ಬತ್ತ್‌ನಕುಳು ಇದ್ದಿ.
(ಎದುರೆದುರು ಅಂಗಡಿ, ಬಿದಿರಿನ ಅಡಿಯ ಚಾವಡಿ, ಹೊಕ್ಕುವರುಂಟು, ಹೊರ ಬಂದವರಿಲ್ಲ.)

4. ಭತ್ತದ ಪೈರು ಹೊಡೆಯುವ ಪಡಿಮಂಚ :

ತುಳುನಾಡಿನ ಪ್ರಧಾನ ಕಸುಬು ಬೇಸಾಯ. ಭತ್ತದ ತೆನೆಯಿಂದ ಭತ್ತವನ್ನು ಬೇರ್ಪಡಿಸುವುದಕ್ಕೆ ಉಪಯೋಗಿಸುವ ಸಾಧನಕ್ಕೆ ಪಡಿಮಂಚ ಎನ್ನುವರು. ನಾಲ್ಕು ಕಾಲುಗಳುಳ್ಳ ಈ ಮಂಚದ ಮೇಲ್ಭಾಗವನ್ನು ಒಂದೋ ಬೀಳಲುಗಳನ್ನು ಹೆಣೆದು ಎಡೆ ಎಡೆ ಬಿಟ್ಟು ರಚಿಸುತ್ತಾರೆ. ಅಥವಾ ಇತ್ತೀಚೆಗೆ ಮರದ ರೀಪುಗಳನ್ನು ಎಡೆ ಎಡೆ ಬಿಟ್ಟು ಜೋಡಿಸಿರುತ್ತಾರೆ. ಈ ಪಡಿಮಂಚವನ್ನು ಕುರಿತ ತುಳು ಒಗಟು ಹೀಗಿದೆ :

1. ನಾಲ್ ಕಾರ್, ನಕರೆ ಕೊಂಬು, ನೆತ್ತಿಗಾಕ್‌ಂಡ ನೆತ್ತ್‌ರ್ ಇಜ್ಜಿ.
(ನಾಲ್ಕು ಕಾಲು, ನಾಲ್ಕು ಕರೆಕೊಂಬುಗಳು, ನೆತ್ತಿಗೆ ಹೊಡೆದರೆ ನೆತ್ತರಿಲ್ಲ.)

5. ಕಡಲು, ದೋಣಿ, ಬಲೆ ಮತ್ತು ಬೆಸ್ತರು :

ತುಳುನಾಡಿಗೆ ವಿಸ್ತಾರವಾದ ಸಮುದ್ರ ಕರಾವಳಿ ಇರುವುದರಿಂದ ಮೀನುಗಾರಿಕೆ ಇಲ್ಲಿನ ಒಂದು ಪ್ರಮುಖ ಕಸುಬು. ತುಳು ಜನಪದ ಸಾಹಿತ್ಯದ ಬೇರೆ ಬೇರೆ ಅಂಗಗಳಲ್ಲಿ

ಈ ಸಾಂಸ್ಕೃತಿಕ ಅಂಶದ ಅಭಿವ್ಯಕ್ತಿಯನ್ನು ಕಾಣಬಹುದು. ಕಡಲು, ದೋಣಿ, ಬಲೆ — ಇವು ಮೀನುಗಾರಿಕೆಯ ಅವಿಭಾಜ್ಯ ಅಂಗಗಳು. ಅವುಗಳನ್ನು ಕುರಿತ ಒಂದು ತುಳು ಒಗಟು ಹೀಗಿದೆ :

1. ಕಾವೇರಿ ಕತ್ತುರಿ ಪನ್ಪಿ ಕಾಡ್, ಚೀವುರಿ ಚಿಪ್ಪುರಿ ಪನ್ಪಿ ಊರು, ಎಂಕ್ ತನ್ಕ್ ಪನ್ಪೆರ್ ನಾಲ್ವೆರ್.
(ಕಾವೇರಿ ಕತ್ತುರಿ ಅನ್ನುವ ಕಾಡು, ಚೀವುರಿ ಚಿಪ್ಪುರಿ ಅನ್ನುವ ಊರು, ನನಗೆ ನಿನಗೆ ಅನ್ನುವರು ನಾಲ್ವರು.)

**ತುಳುನಾಡಿನ ಸಂಸ್ಕೃತಿಯ ಕೆಲವು ಮುಖಗಳು :**

ತುಳು ಒಗಟುಗಳಲ್ಲಿ ಅಭಿವ್ಯಕ್ತವಾಗುವ ತುಳುನಾಡಿನ ಸಂಸ್ಕೃತಿಯ ಕೆಲವು ಪ್ರಮುಖ ಮುಖಗಳನ್ನು–ಸಸ್ಯಗಳು, ಪ್ರಾಣಿ, ಪಕ್ಷಿ, ಕೀಟಗಳು, ಗೃಹೋಪಯೋಗಿ ವಸ್ತುಗಳು ಮತ್ತು ಅಡುಗೆಯ ಸಾಮಗ್ರಿಗಳು–ಈಗಾಗಲೇ ಪ್ರತ್ಯಪ್ರತ್ಯೇಕವಾಗಿ ಪಟ್ಟಿ ಮಾಡಲಾಗಿದೆ. ಅವುಗಳಲ್ಲಿ ತುಳು ನಾಡಿಗೆ ವಿಶಿಷ್ಟವಾಗಿರುವವುಗಳನ್ನು ಸವಿವರವಾಗಿ ಚರ್ಚಿಸಲಾಗಿದೆ. ಕನ್ನಡ ನಾಡಿನ ಇತರ ಕಡೆಗಳಲ್ಲಿ ಕಾಣಿಸಿಕೊಂಡರೂ, ತುಳುನಾಡಿನ ಸಂಸ್ಕೃತಿ ತುಳು ಒಗಟುಗಳಲ್ಲಿ ವ್ಯಕ್ತವಾಗಿರುವ ರೀತಿಯನ್ನು ಕೆಲವು ಉದಾಹರಣೆಗಳ ಮೂಲಕ ನೋಡಬಹುದು.

**ಸಸ್ಯಗಳು :**

**ತೆಂಗು, ತೆಂಗಿನ ಉತ್ಪನ್ನಗಳು :**

1. ಅಜ್ಜಿಗ್ ಮೂಜಿ ಕಣ್ಣ್, ಅಜ್ಜಗ್ ಒಂಜೇ ಕಣ್ಣ್.
(ಅಜ್ಜಿಗೆ ಮೂರು ಕಣ್ಣು, ಅಜ್ಜನಿಗೆ ಒಂದೇ ಕಣ್ಣು.)
[ಉತ್ತರ : ತಾರಾಯಿ, ಬಜ್ಜೆಯಿ (ತೆಂಗಿನಕಾಯಿ, ಅಡಿಕೆ)]

2. ಆಕಾಸೊಡ್ ಇತ್ತೆ, ಪಾತಾಳೊಗು ಬೂರ್ಯೆ.
(ಆಕಾಶದಲ್ಲಿ ಇದ್ದೆ, ಪಾತಾಳಕ್ಕೆ ಬಿದ್ದೆ.)
[ತಾರಾಯಿ (ತೆಂಗಿನಕಾಯಿ)]

3. ಇಲ್ಲೆದ್ ಉಳಯಿ ಪಿಲಿ ಕೊರೆಪ್ಪುಂಡು.
(ಮನೆಯ ಒಳಗೆ ಹುಲಿ ಗರ್ಜಿಸುತ್ತದೆ.)
[ತಾರಾಯಿ ಪೆರೆಪ್ಪುನೆ (ತೆಂಗಿನಕಾಯಿ ಹೆರೆಯುವುದು)]

4. ತರೆಟ್ಟ್ ಕಡ್ಯ, ಕಡ್ಯ ನಿಲ್ಕೆ ನೀರ್.
(ತಲೆಯಲ್ಲಿ ಕೊಡಪಾನ, ಕೊಡಪಾನದಲ್ಲಿ ತುಂಬಾ ನೀರು.)
[ತಾರೆಡ್ ಬೊಂಡೊ (ತೆಂಗಿನಮರದಲ್ಲಿ ಎಳನೀರು)]

5. ಪೊಸ ಗೂವೆಲ್‌ಗರ್ತೆ–ಮಣ್ಣ್ ಮುಗಿಂಡ್, ಪಾದೆ ತಿಕ್ಕ್ಂಡ್ ; ಪಾದೆಗರ್ತೆ, ಸೇಡಿ ತಿಕ್ಕ್ಂಡ್ ; ಸೇಡಿನ್ ತೋಡಿ ಬುಕ್ಕೊ, ಸುದ್ದೊ ನೀರ್ ತಿಕ್ಕ್ಂಡ್.

(ಹೊಸ ಬಾವಿಯನ್ನು ಅಗೆದೆ–ಮಣ್ಣು ಮುಗಿಯಿತು, ಹಾಸು ಕಲ್ಲು ಸಿಕ್ಕಿತು ; ಹಾಸು ಕಲ್ಲನ್ನು ಒಡೆದೆ, ಸೇಡಿ ಮಣ್ಣು ಸಿಕ್ಕಿತು ; ಸೇಡಿ ಮಣ್ಣನ್ನು ತೋಡಿದ ಬಳಿಕ ಶುದ್ಧ ನೀರು ಸಿಕ್ಕಿತು.)

[ಉತ್ತರ : ತಾರಾಯಿ (ತೆಂಗಿನಕಾಯಿ)]

2. ತಾಳಿ ಮರ :

1. ಅಮ್ಮೆ ರಕ್ಕಸೆ, ಅಪ್ಪೆ ಪರಪರ, ಮಗಳ್ ಕಾಳಿಮುಂಡೆ.
(ತಂದೆ ರಕ್ಕಸ, ತಾಯಿ ಪರಪರ, ಮಗಳು ಕಾಳಿ ಮುಂಡೆ.)

[ತಾರಿ, ತಾರಿದ ಮಡಲ್, ಇರೊಳು (ತಾಳಿಮರ, ತಾಳೆಗರಿ, ತಾಳಿಬೊಂಡ)]

2. ಅಕಾಸೊಡ್ ಭೂಮಿ, ಬೆದ್‌ರಡಿ ಸಾದಿ, ಮಲ್ಪುನೆ ಜಾಣೆ, ತಿನ್ಪುನೆ ಲೋಕೊ.
(ಆಕಾಶದಲ್ಲಿ ಭೂಮಿ, ಬಿದಿರಿನ ದಾರಿ, ಮಾಡುವವನು ಜಾಣ, ತಿನ್ನುವುದು ಲೋಕ.)

[ತಾರಿಕಟ್ಟುನೆ–ಕಳಿ (ಮೂರ್ತೆಕೆಲಸ-ಕಳ್ಳು)]

3. ಬ್ರಾಣೆ ಕಂತ್‌ನಲ ಆಯನ ಮುಂಡಾಸ್ ಕಂತುಜಿ.
(ಬ್ರಾಹ್ಮಣ ಮುಳುಗಿದರೂ ಅವನ ಮುಂಡಾಸು ಮುಳುಗುವುದಿಲ್ಲ.)

[ಕಳಿತ್ತನುರೆ (ಕಳ್ಳಿನ ನೊರೆ)]

3. ಬಾಳೆ :

1. ಅಪ್ಪೆ ಚಲ್ಲೆರಿ ಪಿಲ್ಲೆರಿ, ಮಗೆ ದೈವಂತ ದೇವೆರ್.
(ತಾಯಿ 'ಚಲ್ಲೆರಿ ಪಿಲ್ಲೆರಿ', ಮಗ ದೇವರಂತಹವನು.)

[ಬಾರೆದ ಕೈಲ್ (ಬಾಳೆಗೊನೆ)]

2. ಕೊಂಬರ್ ಕೂಳಿದ ಮಗೆ ಪುಟ್ಟಂಡ ಅಪ್ಪೆಗ್ ಮರಣೊ.
(ಕೋರೆಹಲ್ಲಿನ ಮಗ ಹುಟ್ಟಿದರೆ ತಾಯಿಗೆ ಮರಣ.)

[ಬಾರೆದ ಕೈಲ್ (ಬಾಳೆಯ ಗೊನೆ)]

3. ಬಂಗಾರ್ ದಕ್ಕ್‌ಡ್ ಬೊಳ್ಳಿ ನಿಂಗ್‌ದೆ.
(ಬಂಗಾರವನ್ನು ಬಿಸಾಡಿ, ಬೆಳ್ಳಿಯನ್ನು ನುಂಗಿದ್ದೇನೆ.)

[ಬಾರೆದ ಪರೆಂದ್ (ಬಾಳೆಹಣ್ಣು)]

4. ಸಾರೊ ಗಿಳಿಕ್ಕ್ ಒಂಜೇ ಕೋಂಕಯಿ.
(ಸಾವಿರ ಗಿಳಿಗಳಿಗೆ ಒಂದೇ ಕೊಕ್ಕು.)

[ಬಾರೆಡ್ ಕೈಲ್‌ಡ್ ಪೂಂಬೆ (ಬಾಳೆಯಗೊನೆಯಲ್ಲಿ ಹೂಬೆ)]

4. ಅಡಕೆ :

1. ಅಮ್ಮೆ ಆಕಾಸೊಗು ಪೋತೆ, ಅಪ್ಪೆ ಪಾತಾಳೊಗು ಪೋತಳ್, ಮಗೆ ಅಂಗಡಿಗ್ ಪೋತೆ, ಮಗಳ್ ದೇವಸ್ಥಾನೊಗು (ಮದಿಮ್ಮೆಗ್) ಪೋತಳ್.
(ತಂದೆ ಆಕಾಶಕ್ಕೆ ಹೋಗಿದ್ದಾನೆ, ತಾಯಿ ಪಾತಾಳಕ್ಕೆ ಹೋಗಿದ್ದಾಳೆ, ಮಗ ಅಂಗಡಿಗೆ ಹೋಗಿದ್ದಾನೆ, ಮಗಳು ದೇವಸ್ಥಾನಕ್ಕೆ (ಮದುವೆಗೆ) ಹೋಗಿದ್ದಾಳೆ.)
[ಉತ್ತರ : ಕಂಗ್‌ದ ಕುಬೆ, ಬೇರ್, ಬಜ್ಜೆಯಿ, ಪಿಂಗಾರೊ
(ಅಡಕೆಮರದ ತುದಿ, ಬೇರು, ಅಡಕೆ, ಅಡಕೆ ಹೂವು)]

5. ವೀಳ್ಯದೆಲೆ :

1. ತಟಪಟದ ಇರೆ, ಲಾಡಿ ಪೆತ್ತದ್ ನೆಯಿ, ಏಕನಾಯ್ಕನ ಬೇರ್, ಗೂರು ಗೂರ್ಮೆದ ಕೆತ್ತಿ.
(ತಟಪಟ ಎನ್ನುವ ಎಲೆ, ಲಾಡಿ ಹಸುವಿನ ತುಪ್ಪ, ಏಕನಾಯ್ಕನ ಬೇರು, ಗೂ ಎನ್ನುವ ಗೂಗೆಯು ಮೊಟ್ಟೆ.)
[ಬಚ್ಚಿರೆ, ಸುಣ್ಣೊ, ಪುಗೆರೆ, ಬಜ್ಜೆಯಿ (ವೀಳ್ಯದೆಲೆ, ಸುಣ್ಣ, ಹೊಗೆಸೊಪ್ಪು, ಅಡಕೆ)]

6. ಹಲಸು :

1. ಅಡ್ಡೊ ಪೋಯಿ ಗೆಲ್ಲ್‌ಡ್ ಬೊಡ್ಡೆ ಕುಳ್ಳ್‌ದೆ.
(ಅಡ್ಡ ಹೋದ ಗೆಲ್ಲಿನಲ್ಲಿ ಬಡ್ಡ ಕುಳಿತಿದ್ದಾನೆ.)

2. ಸಯಿತ್ತಿ ಪುಣ ಪರಿಮಳೊ ಬರ್ಪುಂಡು.
(ಸತ್ತ ಹೆಣ ಪರಿಮಳ ಬರುತ್ತದೆ.)

7. ಕುಂಬಳಕಾಯಿ :

1. ಎನ್ನ ಒಂಜಿ ಅಜ್ಜಿ ಉಂಡು, ಐತ್ತ ಮೆಯಿ ನಿಲ್ಕೆ ಬೊನ್ಯೊ.
(ನನ್ನ ಒಂದು ಅಜ್ಜಿ ಉಂಟು, ಅದರ ಮೈತುಂಬಾ ಬೂದಿ.)

2. ಬೋರಿನ್ ಕಟ್ಟ್‌ದೆ, ಬಲ್ಲ್ ಮೇಪುಂಡು.
(ಎತ್ತನ್ನು ಕಟ್ಟಿ ಹಾಕಿದ್ದೇನೆ, ಹಗ್ಗ ಮೇಯುತ್ತದೆ.)
[ಕುಂಬಳಕಾಯಿ ಬಳ್ಳಿ]

8. ಗೇರು :

1. ಮಿತ್ತ್ ದೇವಸ್ಥಾನೊ, ತಿರ್ತ್ ಮಂಗುಳಿ.
(ಮೇಲೆ ದೇವಸ್ಥಾನ, ಕೆಳಗೆ ಕಳಸ)
(ಬೀಜೊದ ಪರಂದ್‌ಲ, ಬೀಜೊಲ (ಗೇರುಹಣ್ಣು ಮತ್ತು ಗೇರುಬೀಜ)]

9. ಮೆಣಸು :

1. ಎಲ್ಯ ಮರಟ್ಟ್ ಉದ್ದೊ ಸನ್ಯಾಸಿ.
(ಗಿಡ್ಡ ಮರದಲ್ಲಿ ಉದ್ದ ಸನ್ಯಾಸಿ.)

10. ಅಣಬೆ :

1. ಆಕಾಸೊಡು ಕಂಶಾಲೆ ಸ್ವರ ದೆಪ್ಪುವೆ, ಭೂಮಿಡ್ ಸೂಳೆ ನೆರಿ ಬಂಡುಪಳ್.
(ಆಕಾಶದಲ್ಲಿ ಕಂಶಾಲನು ಸ್ವರ ತೆಗೆಯುತ್ತಾನೆ, ಭೂಮಿಯಲ್ಲಿ ಸೂಳೆ ಮೈ ಅರಳಿಸುತ್ತಾಳೆ.)
[ಉತ್ತರ : ತೆಡಿಲ್ ; ಆಲಂಬು (ಸಿಡಿಲು; ಅಣಬೆ)]

2. ಗುಡ್ಡೆಡ್ ಒರಿ ಕೊಡೆ ಪತ್ತೊಂದು ಉಂತ್‌ದೆ.
(ಗುಡ್ಡೆಯಲ್ಲಿ ಒಬ್ಬ ಕೊಡೆ ಹಿಡಿದುಕೊಂಡು ನಿಂತಿದ್ದಾನೆ.)
[ಆಲಂಬು (ಅಣಬೆ)]

11. ಅಂಬಟೆ :

1. ಚೋಳಿ ತಿನ್ಪುನೆ, ಉಳಯಿದ ಆಡಕುನೆ.
(ಸಿಪ್ಪೆಯನ್ನು ತಿನ್ನುವುದು, ಒಳಗಿನದ್ದನ್ನು ಬಿಸಾಡುವುದು.)

12. ಹಾಗಲಕಾಯಿ :

1. ಎಂಕೊಂಜಿ ಅಜ್ಜಿ ಉಂಡು, ಐತ್ತ ಮೆಯಿಟ್ಟ್ ಮಾತ ಕಜ್ಜಿ.
(ನನಗೊಂದು ಅಜ್ಜಿ ಉಂಟು, ಅದರ ಮೈಯೆಲ್ಲಾ ಕಜ್ಜಿ.)

13. ತೊಂಡೆಕಾಯಿ :

ಒಂಜಿ ಬಾಲೆ ಬಂಜಿಡ್ ಬಚ್ಚಿರೆ ತಿನ್ಪುಂಡು.
(ಒಂದು ಮಗು ಹೊಟ್ಟೆಯಲ್ಲಿ ವೀಳ್ಯದೆಲೆ ತಿನ್ನುತ್ತದೆ.)

14. ನೀರುಳ್ಳಿ :

ಅಡ್ಡೊ ಕೊಯಿಂಡ ಚಕ್ರೊ, ನೀಟೊ ಕೊಯಿಂಡ ಶಂಖೊ.
(ಅಡ್ಡ ಕೊಯಿದರೆ ಚಕ್ರ, ನೀಟ ಕೋಯಿದರೆ ಶಂಖ.)

15. ಶುಂಠಿ :

1. ಆಯಿ ಊಯಿ ಮಣ್ಣ ಉಳಯಿ.
(ಹಾಯ್ ಹೂಯ್, ಮಣ್ಣಿನ ಒಳಗೆ.)

16. ಅನಾನಾಸು :

1. ದಯಿಂತ್ರ ಮಿತ್ತ್ ಪರ್ಂದ್, ಪರ್ಂದ್‌ದ ಮಿಂತ್ ದಯಿ.
(ಗಿಡದ ಮೇಲೆ ಹಣ್ಣು, ಹಣ್ಣಿನ ಮೇಲೆ ಗಿಡ.)

17. ಅರಸಿನ :

1. ಮಣ್ಣ್‌ದ ಉಳಯಿಂ ಬಂಗಾರ್ದ ಬೇರ್.
(ಮಣ್ಣಿನ ಒಳಗೆ ಬಂಗಾರದ ಬೇರು.)

18. ಕಣಿಲೆ-ಬಿದಿರು :

ಎಲ್ಯ ಇಪ್ಪುನಗ ಕೋಮಣೊ ಕಟ್ಟ್‌ದೆ ; ಮಲ್ಲ ಆನಗ ಗಿಜ್ಜ್‌ದ್ ಅಡಕ್ಕ್‌ದೆ.
(ಚಿಕ್ಕವನಿದ್ದಾಗ ಲಂಗೋಟಿ ಕಟ್ಟಿದೆ, ದೊಡ್ಡವನಾದಾಗ ತೆಗೆದು ಬಿಸಾಡಿದ್ದೇನೆ.)

19. ಕೆಸು :

ಗಟ್ಟಡ್ದ್ ಒಂಜಿ ಸೀರೆ ಕೊನತ್ತ್‌ದೆ ; ಅವು ನೀರ್‌ಡ್ ಮುರ್ಕನಗ ಚಂಡಿ ಆಪುಜಿ.
(ಗಟ್ಟದಿಂದ ಒಂದು ಸೀರೆ ತಂದಿದ್ದೇನೆ : ಅದನ್ನು ನೀರಿನಲ್ಲಿ ಮುಳುಗಿಸಿದಾಗ ಒದ್ದೆಯಾಗುವುದಿಲ್ಲ.)

[ಉತ್ತರ : ಚೇವುದ ಇರೆ (ಕೆಸುವಿನ ಎಲೆ)]

ಪ್ರಾಣಿ ಪಕ್ಷಿ ಕೀಟಗಳು :

1. ಕೋಳಿ, ಕೋಳಿಮೊಟ್ಟೆ :

1. ಜಾಲ ದೆಗ್ಗುಗು ಮಿಲೆ ಇದ್ದಿ.
ಗಟ್ಟದ ಬದನೆಗ್ ತೊಟ್ಟು ಇದ್ದಿ.
(ಅಂಗಳದ ಹೆಣ್ಣಿಗೆ ಮೊಲೆ ಇಲ್ಲ.
ಗಟ್ಟದ ಬದನೆಗೆ ತೊಟ್ಟು ಇಲ್ಲ.)

[ಪೆರಡೆ, ತೆತ್ತಿ (ಹೇಂಟೆ, ಕೋಳಿಮೊಟ್ಟೆ)]

2. ಮಾಂತೆರ್ಲ ಕೈತ್ತ ಕತ್ತಿಡ್ ಲಡಾಯಿ ಕೊರ್ಂಡ, ಎಂಕುಳೆ ಬಿರ್ಸೆಕಾರ್‌ದ ಕತ್ತಿಡ್ ಲಡಾಯಿ ಕೊರ್ಪೆ.
(ಎಲ್ಲರೂ ಕೈಯಲ್ಲಿರುವ ಕತ್ತಿಯಲ್ಲಿ ಜಗಳ ಮಾಡಿದರೆ, ನಮ್ಮ ಧೀರನು ಕಾಲಿನಲ್ಲಿರುವ ಕತ್ತಿಯಲ್ಲಿ ಜಗಳ ಮಾಡುತ್ತಾನೆ.)

[ಕಟ್ಟದ ಕೋರಿ (ಕಾಳಗದ ಕೋಳಿ)]

3. ಒಂಜಿ ಕುಪ್ಪಿಡ್ ರಡ್ಡ್ ಮರ್ದ್.
(ಒಂದು ಬಾಟ್ಲಿಯಲ್ಲಿ ಎರಡು ಬಗೆಯ ಮದ್ದು.)

[ಉತ್ತರ : ಕೆತ್ತಿ (ಮೊಟ್ಟೆ)]

4. ಕಂಚಿದ ಇಲ್ಲ್‌ಗ್ ಬಾಕಿಲ್ ಇದ್ದಿ.
(ಕಂಚಿನ ಮನೆಗೆ ಬಾಗಿಲು ಇಲ್ಲ.)

[ಕೆತ್ತಿ (ಮೊಟ್ಟೆ)]

5. ಬೊಳ್ಳಿದ ಬುರ್ಡೆಡ್ ಬಂಗಾರದ ಪೊಡಿ.
(ಬೆಳ್ಳಿಯ ಬುರುಡೆಯಲ್ಲಿ ಬಂಗಾರದ ನಶ್ಯ.)

[ಕೆತ್ತಿ (ಮೊಟ್ಟೆ)]

2. ಮೀನು :

1. ಓಳೆ ಪೋಂಡಲ ಪಜ್ಜೆ ತೆರಿಯಂದ್.
(ಎಲ್ಲೇ ಹೋದರೂ ಹೆಜ್ಜೆ ತಿಳಿಯದು.)

[ಮೀನು]

2. ಜನೊ ಕುಂಟ್ಟ ಆಂಡಲ ಮೀಸೆ ಗಟ್ಟಿ.
(ಜನ ಚಿಕ್ಕದಾದರೂ ಮೀಸೆ ದೊಡ್ಡದು.)

[ಎಟ್ಟಿ (ಸಿಗಡಿ ಮೀನು)]

3. ಬೈಲ್‌ಡ್ ಒರಿ ನಾಮೊ ಪಾಡ್ದ್ ಉಂತ್‌ದೆ.
(ಬೈಲಿನಲ್ಲಿ ಒಬ್ಬ ನಾಮಹಾಕಿ ನಿಂತಿದ್ದಾನೆ.)

[ಕೊಡ್ಯಾನ್ ತರು ('ಕೊಡ್ಯಾನ್' ಎಂಬ ಮೀನು)]

3. ಏಡಿ :

1. ದೇವೆರ್ ಉಳಯಿ, ಗಂದೊ ಪಿದಯಿ.
(ದೇವರು ಒಳಗೆ, ಗಂಧ ಹೊರಗೆ.)

4. ಆಮೆ :

1. ಅಡಿಕ್ಕ್ ಚಕ್ಕಣೊ, ಮೇಲ್‌ಗ್ ಚಕ್ಕಣೊ,
ಚಕ್ಕಣೊ ದೇವೆರ್ ಬೋಂಟೆಗ್ ಪೋತೆರ್.
(ಅಡಿಗೆ ಚಿಕ್ಕ ಚಾಪೆ, ಮೇಲಿಗೆ ಚಿಕ್ಕ ಚಾಪೆ, ಚಿಕ್ಕ ಚಾಪೆಯ ದೇವರು ಬೇಟೆಗೆ ಹೋಗಿದ್ದಾರೆ.)

5. ನರ್ತೆ :

1. ಕಬ್ಬೊರ್ದ ಇಲ್ಲ್‌ಗ್ ಬೊಳ್ಳಿದ ಬಾಕಿಲ್.
(ಕಬ್ಬಿಣದ ಮನೆಗೆ ಬೆಳ್ಳಿಯ ಬಾಗಿಲು.)

2. ಕಂಚಿದ ಇಲ್ಲ್, ಕಬ್ಬೊರ್ದ ಬಾಕಿಲ್, ತಾನ್ ನಡಪ್ಪುನೆ ನಾಲಗೆಡ್.
(ಕಂಚಿನ ಮನೆ, ಕಬ್ಬಿಣದ ಬಾಗಿಲು, ತಾನು ನಡೆಯುವುದು ನಾಲಗೆಯಲ್ಲಿ.)

6. ಕಪ್ಪೆ :

1. ಕುಳ್ಳ್ಯನ ಮುನಿತ್ತಲೆಕೊ, ಬಾಯಿ ಬುಡ್ನ ಪಿಲಿತ್ತಲೆಕೊ, ಲಾಯಿತ್ತ್ನ ಮಂಗದಲೆಕೊ.
(ಕುಳಿತರೆ ಮುನಿಯಂತೆ, ಬಾಯಿ ಬಿಟ್ಟರೆ ಹುಲಿಯಂತೆ, ಹಾರಿದರೆ ಮಂಗನಂತೆ.)

2. ಕೋಲುಕಾರ್ ಕುಂಞಾಳಿ ಬ್ಯಾರಿ, ನಾಲ್ ಕಾರ್ ಞಂಗಾಳಿ ಬ್ಯಾರಿ.
(ಕೋಲು ಕಾಲಿನ ಕುಂಞಾಳಿ ಬ್ಯಾರಿ, ನಾಲ್ಕು ಕಾಲಿನ ಞಂಗಾಳಿ ಬ್ಯಾರಿ.)

7. ಹೇನು :

1. ಕಲ್ಲ್ ಮುಳ್ಳು ಇದ್ಯಾಂದಿನ ಕಾಡ್ಡ್, ಎಲು ಮುಳ್ಳು ಇದ್ಯಾಂದಿ ಮೃಗೊ ಉಂಡು.
(ಕಲ್ಲು ಮುಳ್ಳು ಇಲ್ಲದ ಕಾಡಿನಲ್ಲಿ ಎಲುಬು ಮುಳ್ಳು ಇಲ್ಲದ ಮೃಗ ಉಂಟು.)
[ಉತ್ತರ : ತರೆಟ್ಟ್ ಪೇನ್ (ತಲೆಯಲ್ಲಿ ಹೇನು)]

2. ಚೀ ಮುಳ್ಳು ಬಲ್ಲೆಡ್ ಚಿಮ್ಮಿ ಕುದುರೆ.
(ಚೀ ಮುಳ್ಳಿನ ಪೊದರಿನಲ್ಲಿ ಚಿಮ್ಮುವ ಕುದುರೆ.)
[ಪೇನ್ (ಹೇನು)]

8. ಕೆಂಪಿರುವೆ (ಉರಿ) :

1. ಆಕಾಸೊ ಮುಟ್ಟ ಬೇಲಿ ಕಟ್ಟ್‌ದೆ. ಕೆಂಪು ಕಡಮ್ಮ ಲಾಗಿದ್ಂಡ್.
(ಆಕಾಶದವರೆಗೆ ಬೇಲಿ ಕಟ್ಟಿದ್ದೇನೆ. ಆದರೆ ಕೆಂಪು ಕಡವೆ ಹಾರಿಬಿಟ್ಟಿದೆ.)

9. ಜೇಡ :

1. ಅಡ್ಡೋ ನೀಟೊ ಬಲಿತ್ತೊಂಡೆ, ನಡು ಪತ್ತ್‌ದ್ ಕುಳ್ಳೊಂಡೆ.
(ಅಡ್ಡನೀಟ ಓಡಿದೆ, ಮಧ್ಯಕ್ಕೆ ಬಂದು ಕುಳಿತೆ.)

10. ಚೇಳು :

1. ಕತ್ತಲೆ ಕೋಣೆಡ್ ಮನಿಪಂದಿನಮ್ಮ ಕುದೊಂದಳ್, ಆಳೆನ ಮುಟ್ಟನಾತೆಗ್ ತೂಕೊರುವಳ್.
(ಕತ್ತಲೆ ಕೋಣೆಯಲ್ಲಿ ಮುದುಕಿಯೋರ್ವಳು ಕೂತಿದ್ದಾಳೆ, ಅವಳನ್ನು ಮುಟ್ಟಿದಾಕ್ಷಣ ಕೈಗೆ ಕೆಂಡ ಕೊಳ್ಳಿ ಈಯುತ್ತಾಳೆ.)

11. ಎತ್ತು :

1. ರಡ್ಡ್ ಜನೊ ಗರಿಪ್ಪುವೆರ್, ನಾಲ್ ಜನೊ ಎಡುಪ್ಪುವೆರ್, ರಡ್ಡ್ ಜನೊ ಪೊಡೆಪ್ಪುವೆರ್, ಒರಿ ಅಡಿಪ್ಪುವೆ.
(ಎರಡು ಜನ ಅಗೆಯುತ್ತಾರೆ, ನಾಲ್ಕು ಜನ ಕುಟ್ಟುತ್ತಾರೆ, ಎರಡು ಜನ ಗೇರುತ್ತಾರೆ, ಒಬ್ಬ ಗುಡಿಸುತ್ತಾನೆ.)
[ಬೋರಿ (ರಡ್ಡ್ ಕೊಂಬು, ನಾಲ್‌ಕಾರ್, ರಡ್ಡ್ ಕೆಬಿ, ಒಂಜಿ ಬೀಲೊ)
(ಎತ್ತು (ಎರಡು ಕೊಂಬು, ನಾಲ್ಕು ಕಾಲು, ಎರಡು ಕಿವಿ, ಒಂದು ಬಾಲ)]

## ಗೃಹೋಪಯೋಗಿ ವಸ್ತುಗಳು — ಅಡುಗೆಯ ಸಾಮಗ್ರಿಗಳು

1. ಪಾದರಕ್ಷೆ :

1. ಊರೂರು ಬಲಿಪ್ಪುನ ಕುದುರೆ, ನೀರ್ ತೂಯಿನವುಳು ಉಂತುನ ಕುದುರೆ.
(ಊರೂರು ಓಡುವ ಕುದುರೆ, ನೀರು ಕಂಡಲ್ಲಿ ನಿಲ್ಲುವ ಕುದುರೆ.)

2. ಎನಡ ರಡ್ಡ್ ಎರ್ಲ್ ಉಳ್ಳೊ. ಉಳಾಯಿದ ಮಾತ್‌ಗಾಪುಜಿ, ಮಾತ್‌ದ ಉಳಾಯಿಗಾಪುಜಿ.
(ನನ್ನಲ್ಲಿ ಎರಡು ಎತ್ತುಗಳಿವೆ. ಎಡದ್ದು ಬಲಕ್ಕೆ ಆಗುವುದಿಲ್ಲ, ಬಲದ್ದು ಎಡಕ್ಕೆ ಆಗುವುದಿಲ್ಲ.)

3. ಇರು ಇರು ಪೆಟ್ಟಿಗೆಗ್ ಸಾರೊತ್ತೊಂಜಿ ಕಟ್ಟ್.
(ಇರು ಇರು ಪೆಟ್ಟಿಗೆಗೆ ಸಾವಿರದ ಒಂದು ಕಟ್ಟು.)

2. ಎಣ್ಣೆ ದೀಪ :

1. ಅಂಗೈದಾತ್ ಅಗೆಲೆದೊ ಕಂಡೊ, ಬಿರೆಳ್‌ದಾತ್ ತೋರೊದ ಪುಣಿ, ಆಯಿತ್ತ ನಡುಟ್ಟ್ ಒಂಜಿ ಬಂಗಾರ್ದ ಕುರಳ್.
(ಅಂಗೈಯಷ್ಟು ಅಗಲದ ಗದ್ದೆ, ಬೆರಳಿನಷ್ಟು ತೋರದ ಹುಣಿ, ಅದರ ನಡುವೆ ಒಂದು ಬಂಗಾರದ ತೆನೆ.)

2. ತಿರ್ತ ಕಂಡೊಗು ನೀರ್ ಒಡ್ಡಂಡ ಮಿತ್ತ ಕಂಡೊ ಬುಳೆಪ್ಪುಂಡು.
(ಕೆಳಗಿನ ಗದ್ದೆಗೆ ನೀರು ಹಾಕಿದರೆ ಮೇಲಿನ ಗದ್ದೆ ಬೆಳೆಯುತ್ತದೆ.)

3. ಬಂಗಾರ್‌ದ ಸರ್ಪೆ ಬೀಲೊಡು ನೀರ್ ಪರ್ಪೆ.
(ಬಂಗಾರದ ಸರ್ಪ ಬಾಲದಲ್ಲಿ ನೀರು ಕುಡಿಯುತ್ತಾನೆ.)

3. ಕೋವಿ :

1. ಕಾನಡ್ಡ್ ಕಡಪ್ಪ ಕೈ ನೀರ್‌ದೆ.
(ಕಾಡಿನಿಂದ ಆ ಕಡೆಗೆ ಕೈ ಚಾಚಿದ್ದೇನೆ.)
[ಉತ್ತರ : ಬೆಡಿ ಪತ್ತುನೆ (ಕೋವಿ ಹಿಡಿಯುವುದು)

2. ಕುದುರೆದ ಅಡಿಟ್ಟ್ ಕಳುವೆ, ಕಳುವೆ ಪಂಡಿಲೆಕ್ಕೊ ಕುದುರೆ.
(ಕುದುರೆಯ ಅಡಿಯಲ್ಲಿ ಕಳ್ಳ, ಕಳ್ಳ ಹೇಳಿದಂತೆ ಕುದುರೆ.)
[ಬೆಡಿ (ಕೋವಿ)]

3. ತೂನಗ ಸೂಕೊದಲೆಕೊ, ದನಿ ಆನೆದೆಲೆಕೊ.
(ನೋಡುವಾಗ ದೊಣ್ಣೆಯಂತೆ, ಧ್ವನಿ ಆನೆಯಂತೆ.)
[ಬೆಡಿ (ಕೋವಿ)]

4. ಕೊಡಪಾನ :

1. ಅಂಚಿ ಇಂಚಿ ಪೋದ್ ಬತ್ತ್‌ದ್ ಕಂಟೆಲ್‌ಗ್ ಕೈಪಾಡುನೆ.
(ಆಚೆ ಈಚೆ ಹೋಗಿ ಬಂದು ಕುತ್ತಿಗೆಗೆ ಕೈಹಾಕುವುದು.)





2. ಬಾಲೆ ಬುಳ್ತೆಜಿಂಡಲ, ತಟ್ಯೊಣುನ ತಪ್ಪುಜಿ.
(ಮಗು ಅಳದಿದ್ದರೂ ಎತ್ತಿಕೊಳ್ಳುವುದು ತಪ್ಪುವುದಿಲ್ಲ.)

5. ಸೇಮುಗೆ ಮಣೆ, ಸೇಮುಗೆ ಅಡ್ಯೆ :

1. ಅನ್ನೋರ ಕರಡಿಗೆ, ಮುನ್ನೂರ ಪದ್ವೇಯಿ,
ಐನೊರೊ ಕೊರೊಡುಗೆ, ನಿಕುಲೊರೊ ಬರೊಡುಗೆ.
(ಅಗತ್ಯದ ಕರಡಿಗೆ, ಮುನ್ನೂರು ಆಭರಣ, ಅದನ್ನೊಮ್ಮೆ ಕೊಡಬೇಕಂತೆ, ನೀವೊಮ್ಮೆ ಬರಬೇಕಂತೆ.)

[ಉತ್ತರ : ಸೇಮುಗೆ ಮಣೆ]

2. ಉಣುಂಗೆಲ್ ಮರ ಪಿಂಗಾರೊ ಬುಡ್ಪುಂಡು.
(ಒಣಗಿದ ಮರ ಸಿಂಗಾರ ಹೂವನ್ನು ಬಿಡುತ್ತದೆ.)

[ಸೇಮುಯಿದ ಅಡ್ಯೆ (ಶ್ಯಾವಗೆ)]

3. ಒತ್ತಪ್ಪ ನಾಗೆರ್ ಒತ್ತೊನ್ನಗ, ಜತ್ತಪ್ಪ ನಾಗೆರ್ ಜತ್ತೊಂಡೆರ್, ತಪ್ಪೆನಾಗೆರ್ ಸೇರೊಂಡೆರ್.
(ಒತ್ತಪ್ಪ ನಾಯಕರು ಒತ್ತಿಕೊಳ್ಳುವಾಗ, ಇಳಿಯಪ್ಪ ನಾಯಕರು ಇಳಿದುಕೊಂಡರು, ಗೆರಸೆ ನಾಯಕರು ಸೇರಿಕೊಂಡರು.)

[ಸೇಮುಯಿದ ಅಡ್ಯೆ (ಶ್ಯಾವಗೆ)]

6. ಪಿಡಿಸೂಡಿ :

1. ಎಂಕೊಂಜಿ ಅಜ್ಜ ಉಂಡು, ಅವು ಮೂಲೆ ಮೂಲೆ ದೆಂಗುಂಡು.
(ನನಗೊಂದು ಅಜ್ಜ ಉಂಟು, ಅದು ಮೂಲೆ ಮೂಲೆಯಲ್ಲಿ ಅಡಗುತ್ತದೆ.)

2. ಸಾರತ್ತೊಂಜಿ ಜೋಕುಳೆಗ್ ಒಂಜೇ ಒಕ್ಕನೂಲು.
(ಸಾವಿರದ ಒಂದು ಮಕ್ಕಳಿಗೆ ಒಂದೇ ಸೊಂಟದ ನೂಲು.)

7. ಬೀಸುವ ಕಲ್ಲು :

1. ಅಪ್ಪೆಗ್ ಒಂಜಿ ಒಟ್ಟೆ, ಮಗಳೆಗ್ ರಡ್ಡ್ ಒಟ್ಟೆ.
(ತಾಯಿಗೆ ಒಂದು ತೂತು, ಮಗಳಿಗೆ ಎರಡು ತೂತು.)

2. ಅಜ್ಜಿಗ್ ತಲೆ ತಿರ್‌ಗ್ಂಡ ಉಳಯಿದ ಮಾತ ಪೊಡಿ ಪೊಡಿ.
(ಅಜ್ಜಿಗೆ ತಲೆ ತಿರುಗಿದರೆ ಒಳಗಿನದ್ದೆಲ್ಲಾ ಪುಡಿ ಪುಡಿ.)

3. ರಥ ಪೋವೊಂದೇ ಉಂಡು, ಪೂ ಬೂರೊಂದೇ ಉಂಡು.
(ರಥ ಹೋಗುತ್ತಾ ಉಂಟು, ಹೂ ಬೀಳುತ್ತಾ ಉಂಟು.)

8. ಸೂಜಿ, ನೂಲು :

1. ಅಣ್ಣೆಲ ತಮ್ಮೆಲ ಒಟ್ಟಿಗ್ ಪೋಪುನೆ. ಅಣ್ಣೆ ತಪ್ಪಾವೊಂಡೆ, ತಮ್ಮೆ ತಿಕ್ಕೊಂಡೆ.
(ಅಣ್ಣನೂ ತಮ್ಮನೂ ಒಟ್ಟಿಗೆ ಹೋಗುವುದು; ಅಣ್ಣ ತಪ್ಪಿಸಿಕೊಂಡ, ತಮ್ಮ ಸಿಕ್ಕಿಬಿಟ್ಟ.)
[ಉತ್ತರ : ಸೂಜಿ ; ನೂಲು]

2. ಒಂಜಿ ಆಣಗ್ ಈತುಂದ್ದೊ ಕೋವಣೊ.
(ಒಬ್ಬ ಹುಡುಗನಿಗೆ ಇಷ್ಟುದ್ದ ಲಂಗೋಟಿ.)
[ಸೂಜಿಡ್ ನೂಲು (ಸೂಜಿಯಲ್ಲಿ ನೂಲು)]

3. ಲಟ್‌ಫಟ್ ಲೇಡಿಗ್ ಒಂಜೇ ಕಣ್ಣ್.
(ಲಟ್‌ಫಟ್ ಲೇಡಿಗೆ ಒಂದೇ ಕಣ್ಣು.)
[ಸೂಜಿ]

(9) ಕೊಡೆ :

1. ಪತ್ತ್‌ನಗ ನೇರೊ ಬುದ್ಧಿ, ಉಂತ್‌ನಗ ಬಾವೊಲಿ ಬುದ್ಧಿ.
(ಹಿಡಿಯುವಾಗ ನೇರ ಬುದ್ಧಿ, ನಿಲ್ಲುವಾಗ ಬಾವಲಿ ಬುದ್ಧಿ.)

2. ಮೂಡಿ ಅಳುಬುನು ಮಡಿತ್ತೈದ್ ಕೊಂಡೋಪೆರ್.
(ಮೂಡಿದ ಅಣಬೆಯನ್ನು ಮಡಿಸಿಕೊಂಡು ಹೋಗುತ್ತಾರೆ.)

10. ಕಡೆಯುವ ಕಲ್ಲು :

1. ಅಪ್ಪೆ ಚಕ್ಕಪ್ಪ, ಮಗಳೆ ಕೊಕ್ಕಪ್ಪ.
(ತಾಯಿ ಚಕ್ಕಲ ಕುಳಿತಿದ್ದಾಳೆ, ಮಗಳು ಕೊಕ್ಕಲಗಾಲಿನಲ್ಲಿ ಕುಳಿತಿದ್ದಾಳೆ.)
[ಕಡೆಪ್ಪಿ ಕಲ್ಲ್ (ಕಡೆಯುವ ಕಲ್ಲು)]

2. ಅಪ್ಪೆ ಮಗಳೆ ಕಾರ್‌ಬಾರ್‌ಡ್ ಬತ್ತ್‌ನಕ್ಲ್ ಮಾತ ಪೊಡಿ ಪೊಡಿ.
(ತಾಯಿ ಮಗಳ ಕಾರುಭಾರಿನಲ್ಲಿ ಬಂದವರೆಲ್ಲಾ ಪುಡಿ ಪುಡಿ.)
[ಕಡೆಪ್ಪಿ ಕಲ್ಲ್‌ಡ್ ಅರೆಪ್ಪು (ಕಡೆಯುವ ಕಲ್ಲಿನಲ್ಲಿ ಮಸಾಲೆ)]

11. ಗಾಣ :

1. ತನ್ನ ಸುತ್ತ ತಿರುಗೊಣ್‌ಬೆ, ಉಂತ್‌ನಲ್ತೆ ಪಂದುಜಿ.
(ತನ್ನ ಸುತ್ತಲೂ ತಿರುಗುತ್ತಾನೆ, ನಿಂತಲ್ಲಿಂದ ಅಲ್ಲಾಡುವುದಿಲ್ಲ.)

12. ರಾಗಿ ಕಲ್ಲು :

1. ಕೆಂಪು ಪಾಡ್ದ್ ಬೊಳ್ದು ದೆತ್ತೆ.
(ಕೆಂಪು ಹಾಕಿ ಬಿಳಿ ತೆಗೆದೆ.)
[ರಾಗಿ ಬೀಸುನೆ (ರಾಗಿ ಬೀಸುವುದು)]

13. ಕಾವಲಿ, ಮುಚ್ಚಳ, ದೋಸೆ :

1. ಅಪ್ಪೆಲ ಅಮ್ಮೆಲ ಕಪ್ಪು, ಬಾಲೆ ಬೊಳ್ಳೆನೊ.
(ತಾಯಿ ತಂದೆ ಕಪ್ಪು, ಮಗು ಬಿಳಿ.)

14. ಸೇರು ಪಾವು :

1. ಪಲಿ ಇಲ್ಲಡೆ ಮೆಗ್ದಿ ಪೋಪಳ್, ಮೆಗ್ದಿ ಇಲ್ಲಡೆ ಪಲಿ ಪೋಪುಜಳ್.
(ಅಕ್ಕನ ಮನೆಗೆ ತಂಗಿ ಹೋಗುತ್ತಾಳೆ, ತಂಗಿ ಮನೆಗೆ ಅಕ್ಕ ಹೋಗುವುದಿಲ್ಲ.)

ತುಳು ಒಗಟುಗಳ ಉತ್ತರಗಳಲ್ಲಿ ಕ್ರಿಯಾರೂಪದವುಗಳನ್ನು ಗಮನಿಸಿಕೊಂಡು ಅಲ್ಲಿ ವ್ಯಕ್ತವಾಗುವ ತುಳುನಾಡಿನ ಸಂಸ್ಕೃತಿಯನ್ನು ಗುರುತಿಸಬಹುದು. ಇಲ್ಲಿ ಒಗಟಿನ ಉತ್ತರವು ಕ್ರಿಯಾರೂಪದಲ್ಲಿರುತ್ತದೆ (Riddles denoting a function).

1. ಹಾಲು ಕರೆಯುವುದು
2. ಮೊಸರು ಕಡೆಯುವುದು
3. ವೀಳ್ಯದೆಲೆ ತಿನ್ನುವುದು
4. ಮೂರ್ತೆ ಕೆಲಸ
5. ರಾಗಿ ಬೀಸುವುದು
6. ಬಟ್ಟೆ ಒಗೆಯುವುದು
7. ಒಗ್ಗರಣೆ ಹಾಕುವುದು
8. ಕಾಲಿಗೆ ಮುಳ್ಳು ನಾಟುವುದು
9. ತೆಂಗಿನಕಾಯಿ ಹೆರೆಯುವುದು
10. ಮಳೆ ಬರುವುದು
11. ಹೇಲುವುದು
12. ನೇಜಿ ನೆಡುವುದು, ತೆನೆ ಕೊಯ್ಯುವುದು
13. ಮಾಡಿಗೆ ಮುಳಿ ಹಾಕುವುದು
14. ಉಳುವುದು
15. ವೀಳ್ಯದೆಲೆ ಕೀಳುವುದು
16. ಕೋವಿ ಹಿಡಿಯುವುದು
17. ಅರಳು ಹುರಿಯುವುದು
18. ಗೊಬ್ಬರ ಹೊರುವುದು
19. ಮಿಂಚು ಹೊಳೆಯುವುದು
20. ಗುಡ್ಡಕ್ಕೆ ಬೆಂಕಿ ಹಿಡಿಯುವುದು
21. ಭಿಕ್ಷೆ ಬೇಡುವುದು
22. ತಪ್ಪುಂಗಾಯಿ ಹಾಕುವುದು
23. ಬಿದಿರು ಕಟ್ಟಹೋಗುವುದು
24. ನೀರಿನ ಹೊಂಡಕ್ಕೆ ಕಲ್ಲು ಹಾಕುವುದು
25. ಬಾಳೆಯ ಗೊನೆಯನ್ನು ಎಣಿಸುವುದು
26. ಗಡಿಯಾರಕ್ಕೆ ಕೀ ಕೊಡುವುದು
27. ತೆಂಗಿನಕಾಯಿ ಒಡೆಯುವುದು
28. ಅನ್ನ ಬಸಿಯುವುದು

29. ಜಾಗಟೆ ಹೊಡೆಯುವುದು
30. ಗಿಡಗ ಕೋಳಿಮರಿಯನ್ನು ಹಿಡಿಯುವುದು
31. ನಾಯಿ ತನ್ನ ಮೈಮೇಲಿನ ನೊಣವನ್ನು ಓಡಿಸುವುದು
32. ಬಾಳೆಯಗೊನೆ ಕಡಿದು, ಬಾಳೆಗಿಡವನ್ನು ಸಿಗಿಯುವುದು
33. ಎಳನೀರು ಕಡಿಯುವುದು
34. ತಕ್ಕಡಿಯಲ್ಲಿ ವಸ್ತುವನ್ನು ತೂಗುವುದು
35. ಬಾಲ್ದಿಯನ್ನು ಮೇಲಕ್ಕೆ ಎತ್ತುವುದು
36. ಕಸಬರಿಕೆಯಲ್ಲಿ ಕಸ ಗುಡಿಸುವುದು
37. ಗುಡುಗಿನ ಶಬ್ದಕ್ಕೆ ಅಣಬೆ ಮೊಳೆಯುವುದು
38. ಶಂಖದ ಧ್ವನಿಗೆ ನಾಯಿಯು ಧ್ವನಿ ಸೇರುವುದು
39. ನಾಯಿ ಬಾಲ ಅಲ್ಲಾಡಿಸುವುದು
40. ನಶ್ಯ ಸೇವಿಸುವುದು
41. ಅನ್ನ ಬೇಯುವುದು
42. ಪೇಟೆಯಿಂದ ತೆಂಗಿನಕಾಯಿ ತರುವುದು
43. ಮಲವಿಸರ್ಜನೆಗೆ ಹೋಗಿಬರುವುದು
44. ಕೈಯಿಂದ ಪಂಚೆಯ ತುದಿಯನ್ನು ಎತ್ತಿ ಹಿಡಿದುಕೊಳ್ಳುವುದು
45. ಮಸಾಲೆ ಕಡೆಯುವುದು
46. ತೆಂಗಿನ ಮರದಿಂದ ಕಾಯಿ ತೆಗೆದುಹಾಕುವುದು

ಒಗಟಿನ ಉತ್ತರವು ಕ್ರಿಯಾರೂಪದಲ್ಲಿ ಇರುವುದು–ಇಂತಹ ಒಗಟುಗಳಲ್ಲಿಯೂ ತುಳುನಾಡಿನ ಸಂಸ್ಕೃತಿಯ ಎಲ್ಲಾ ರೂಪಗಳನ್ನು ಕಾಣಬಹುದು. ತುಳುನಾಡಿನ ಹಳ್ಳಿಗಳಲ್ಲಿ ದೈನಂದಿನ ಜೀವನದಲ್ಲಿ ಮಾಡುವ ಕೆಲಸಗಳ ಪಟ್ಟಿಯನ್ನು ಇಲ್ಲಿ ಗಮನಿಸಬಹುದು. ಇಂತಹ ಕೆಲಸಗಳನ್ನು ಕುರಿತು ಒಗಟನ್ನು ನಿರ್ಮಾಣ ಮಾಡುವಾಗ ತಮ್ಮ ಕಲ್ಪನಾ ಸಾಮರ್ಥ್ಯದಿಂದ ಅವುಗಳಿಗೆ ರೂಪಕಗಳ ರೂಪವನ್ನು ಕೊಡಲಾಗಿದೆ.

### 3. ಒಗಟುಗಳ ವರ್ಗೀಕರಣ (Classification of Riddles) :

Archor Tylor ಎಂಬ ಜಾನಪದ ವಿದ್ವಾಂಸನು ಒಗಟುಗಳ ವರ್ಗೀಕರಣಕ್ಕೆ ದಶಮಾಂಕ ಪದ್ಧತಿ (Decimal system) ಎಂಬ ವಿಧಾನವನ್ನು ಅನುಸರಿಸಿದ್ದಾನೆ. ಜಗತ್ತಿನ ಒಗಟುಗಳಲ್ಲಿಯ ಸಾಮ್ಯತೆಗಳನ್ನು ಅಧ್ಯಯನ ಮಾಡಿ ಒಗಟುಗಳನ್ನು ಪ್ರಮುಖವಾದ 5 ವಿಭಾಗಗಳಾಗಿ ವಿಂಗಡಿಸಿದ್ದಾನೆ.

1. ಮನುಷ್ಯ ಮತ್ತು ಪ್ರಾಣಿಗಳನ್ನು ಬಿಟ್ಟು ಮಿಕ್ಕ ಜೀವಿಗಳೊಡನೆ ಹೋಲಿಕೆ
2. ಪ್ರಾಣಿಗಳೊಡನೆ ಹೋಲಿಕೆ
3. ಮನುಷ್ಯರೊಡನೆ ಹೋಲಿಕೆ
4. ಸಸ್ಯದೊಡನೆ ಹೋಲಿಕೆ
5. ವಸ್ತುವಿನೊಡನೆ ಹೋಲಿಕೆ.

ದಶಮಾಂಕ ಪದ್ಧತಿಯಿಂದ ನಡೆಸಿದ ಈ ವೈಜ್ಞಾನಿಕ ವರ್ಗೀಕರಣವು ಸಾಮಾನ್ಯವಾಗಿ ಜಾನಪದ ವಿದ್ವಾಂಸರಿಂದ ಮನ್ನಣೆಯನ್ನು ಪಡೆದಿದೆ. ಒಗಟುಗಳ ಹೋಲಿಕೆಗಳಲ್ಲಿ ಅವುಗಳ ವ್ಯತ್ಯಯಗಳನ್ನು ಗುರುತಿಸಲು ಈ ಪದ್ಧತಿ ಸಹಾಯಕವಾಗಿದೆ. ಈ ಪದ್ಧತಿಯ ಪ್ರಕಾರ ಯಾವುದೇ ಒಂದು ಒಗಟಿನಲ್ಲಿ ಕಾಣಿಸುವ ಪ್ರಾಣಿ, ಮನುಷ್ಯ, ಸಸ್ಯ, ಇತರ ಜೀವಿಗಳು, ವಸ್ತುಗಳು ವರ್ಗೀಕರಣದಲ್ಲಿ ಪ್ರಮುಖವಾಗುತ್ತವೆ. ಆದರೆ ಈ ಎಲ್ಲಾ ಹೋಲಿಕೆಗಳು ಒಗಟಿನ ಪ್ರಶ್ನೆಯ ಭಾಗಕ್ಕೆ ಮಾತ್ರ ಸೀಮಿತವಾಗಿವೆ. ಒಗಟಿನ ಪ್ರಶ್ನೆಯ ಭಾಗವು ಒಂದು ರೂಪಕ ಮಾತ್ರ. ಅದರ ನಿಜವಾದ ಅರ್ಥ ಅಂದರೆ ಒಗಟಿನ ವಸ್ತು ಅಥವಾ ವಿಷಯ ಇರುವುದು ಒಗಟಿನ ಉತ್ತರದಲ್ಲಿ. ಇಂತಹ ಉತ್ತರವನ್ನು ಪರಿಗಣಿಸದೆ ಬರೇ ಪ್ರಶ್ನೆಯ ಭಾಗಕ್ಕೆ ಮಾತ್ರ ಮಹತ್ವವನ್ನು ಕೊಡುವುದರ ಮೂಲಕ ಒಗಟಿನ ವಸ್ತು ಅಥವಾ ವಿಷಯವನ್ನು ಸಂಪೂರ್ಣ ಕಡೆಗಣಿಸಿದಂತಾಗುತ್ತದೆ. ಈ ದೃಷ್ಟಿಯಿಂದ Archor Tylorನ ದಶಮಾಂಕ ಪದ್ಧತಿಯನ್ನು ಕೆಲವು ಮಾರ್ಪಾಟುಗಳ ಮೂಲಕ ಉಪಯೋಗಿಸಬಹುದು. ಒಗಟುಗಳ ಉತ್ತರವನ್ನು ಅನುಸರಿಸಿ ದಶಮಾಂಕ ಪದ್ಧತಿಯ ರೀತಿಯ ವರ್ಗೀಕರಣವನ್ನು ಇಲ್ಲಿ ಸೂಚಿಸಲಾಗಿದೆ. ಒಗಟುಗಳ ಉತ್ತರಗಳಲ್ಲಿನ ವಸ್ತು ಅಥವಾ ವಿಷಯ ಇದನ್ನು ಗಮನಿಸಿಕೊಂಡು ಈ ವರ್ಗೀಕರಣವನ್ನು ಅನ್ವಯಿಸಲಾಗಿದೆ.

ತುಳು ಒಗಟುಗಳ ಉತ್ತರಗಳನ್ನು ಸ್ಥೂಲವಾಗಿ ಹೀಗೆ ವಿಂಗಡಿಸಬಹುದು :-

1. ದೇಹದ ಅಂಗಗಳು
2. ಪ್ರಾಣಿ, ಪಕ್ಷಿ, ಕೀಟಗಳು
3. ಸಸ್ಯಗಳು
4. ಗೃಹೋಪಯೋಗಿ ವಸ್ತುಗಳು – ಅಡುಗೆಯ ಸಾಮಗ್ರಿಗಳು
5. ನಿಸರ್ಗ (ಖಗೋಳ)

ಈ ಸ್ಥೂಲ ವಿಭಾಗಗಳ ಕೆಳಗೆ ಸೂಕ್ಷ್ಮವಾದ ವರ್ಗಗಳನ್ನು ಗುರುತಿಸಬಹುದು.

1. ದೇಹದ ಅಂಗಗಳು :
    1. ಶರೀರ (General)
    2. ತಲೆ
        1. ತಲೆ (General)
        2. ತಲೆ ಕೂದಲು
    3. ಕಣ್ಣು :
        1. ಕಣ್ಣು
        2. ಕಣ್ಣು ರೆಪ್ಪೆ
        3. ಹುಬ್ಬು
    4. ಕಿವಿ
    5. ಮೂಗು
    6. ಬಾಯಿ
        1. ಬಾಯಿ (General)
        2. ನಾಲಗೆ
        3. ಹಲ್ಲುಗಳು
        4. ತುಟಿಗಳು
    7. ಕೈ :
        1. ಕೈ (General)
        2. ಕೈ ಬೆರಳುಗಳು
            1. ಉಗುರುಗಳು
    8. ಮೊಲೆ
    9. ಎದೆ ಗುಂಡಿಗೆ
    10. ಹೊಟ್ಟೆ
    11. ಮಡಿಲು

ಈ ಪದ್ಧತಿಯಂತೆ ದೇಹದ ಅಂಗಗಳನ್ನು ಕುರಿತ ತುಳು ಒಗಟುಗಳನ್ನು ಹೀಗೆ ವರ್ಗೀಕರಿಸಬಹುದು :

ಸಂಕೇತಗಳು :— V — ತುಳು ಒಗಟುಗಳು — ಸಂ. ಬಿ. ಎ. ವಿವೇಕ ರೈ (ಪ್ರಕೃತ ಲೇಖಕ).
N — ತುಳು ಒಗಟುಗಳು—ಸಂ. ಎಮ್. ನಾರಾಯಣ.

ಒಗಟುಗಳ ಸಂಖ್ಯೆಗಳನ್ನು ಆಯಾಯಾ ಸಂಕಲನಗಳ ಸಂಕೇತಾಕ್ಷರಗಳ ಮುಂದೆ ಕೊಡಲಾಗಿದೆ.

| | | |
|---|---|---|
| V 197 | .... | 1.1 |
| V 185 | .... | 1.2.2 |
| V 204 | .... | 1.2.2 |
| V 262 | .... | 1.2.2 (Ref. 1.7.2) |
| V 438 | .... | 1.2.2 |
| V 469 | .... | 1.2.2 |
| V 44 | .... | 1.3.1 |
| V 45 | .... | 1.3.2 |
| V 136 | .... | 1.3.2 |
| V 252 | .... | 1.3.1 (Ref. 1.6, 1.4) |
| V 296 | .... | 1.3.1 (Ref. 1.4, 1.5, 1.6) |
| N 52 | .... | 1.3.3 |
| N 67 | .... | 1.3.1 (Ref. 1.5, 1.6) |
| V 252 | .... | 1.4 (Ref. 1.3, 1.6) |
| V 296 | .... | 1.4 (Ref. 1.3, 1.5, 1.6) |
| V 296 | .... | 1.5 (Ref. 1.3, 1 4, 1.6) |
| V 442 | .... | 1.5 |
| N 67 | .... | 1.5 (Ref. 1.3, 1.4) |
| V 252 | .... | 1.6.1 (Ref. 1.3, 1.4) |
| V 296 | .... | 1.6.1 (Ref. 1.3, 1.4, 1.5) |
| N 67 | .... | 1.6.1 (Ref. 1.3, 1.5) |
| V 17 | .... | 1.6.2 |
| V 196 | .... | 1.6.2 |
| V 214 | .... | 1.6.2 |
| V 299 | .... | 1.6.2 |
| V 400 | .... | 1.6.2 |
| V 402 | .... | 1.6.2 |

| | | |
|---|---|---|
| V 431 | .... | 1.6.2 (Ref 1.6.3) |
| V 474 | .... | 1.6.2 (Ref 1.6.3) |
| V 475 | .... | 1.6.2 (Ref 1.6.3) |
| V 46 | .... | 1.6.3 |
| V 47 | .... | 1.6.3 |
| V 157 | .... | 1.6.3 |
| V 431 | .... | 1.6.3 (Ref 1.6.2) |
| V 474 | .... | 1.6.3 (Ref 1.6.2) |
| V 475 | .... | 1.6.3 (Ref 1.6.2) |
| N 164 | .... | 1.6.4 |
| V 159 | .... | 1.7.2.1 |
| V 166 | .... | 1.7.2 |
| V 262 | .... | 1.7.2.1 (Ref 1.2.2) |
| V 312 | .... | 1.7.2.1 |
| V 362 | .... | 1.8 |
| V 395 | .... | 1.8 |
| N 19 | .... | 1.8 |
| N 58 | .... | 1.8 |
| N 187 | .... | 1.8 (Ref 1.2.1) |
| V 495 | .... | 1.9 |
| V 143 | .... | 1.10 |
| V 499 | .... | 1.11 |

ಉದಾ :- (1) V 197 : ಕಂಡೆ ಬೇರ್ ಮಿತ್ತ್, ಗೆಲ್ಲ್ ಮಾಂತ ತಿರ್ತ್.
(ಗಡ್ಡೆ ಬೇರು ಮೇಲೆ, ಗೆಲ್ಲು ಎಲ್ಲಾ ಕೆಳಗೆ)
(ಉತ್ತರ : ಶರೀರೊ [ಮನುಷ್ಯ ಶರೀರ])

ಈ ಒಗಟಿನ ವರ್ಗೀಕರಣ–1.1

ಇಲ್ಲಿ 1 ಎಂಬ ಅಂಕೆಯು "ದೇಹದ ಅಂಗಗಳು" ಎಂಬ ಪ್ರಧಾನ ವಿಭಾಗವನ್ನು ಸೂಚಿಸುತ್ತದೆ. ಎರಡನೆಯ 1 ಎಂಬ ಅಂಕೆಯು ದೇಹದ ಅಂಗಗಳಲ್ಲಿ ಶರೀರ (General) ಎಂಬ್ನ ವಿಭಾಗವನು ಸೂಚಿಸುತ್ತದೆ. ಆದ್ದರಿಂದ ಈ ಒಗಟಿನ ವರ್ಗೀಕರಣ—1.1.

(2) V 204 : ಗಾಳಿಡಿತ್ತ್ಂಡ ಸಾರೊ ಬಳ್ಳ್, ನೀರ್ಡಿತ್ತ್ಂಡ ಒಂಜೇ ಬಳ್ಳ್.
(ಗಾಳಿಯಲ್ಲಿದ್ದರೆ ಸಾವಿರ ಹಗ್ಗ, ನೀರಿನಲ್ಲಿದ್ದರೆ ಒಂದೇ ಹಗ್ಗ.)
(ತರೆಕ್ಯಾಜಲ್ [ತಲೆಕೂದಲು])

ಈ ಒಗಟಿನ ವರ್ಗೀಕರಣ 1.2.2.

ಇಲ್ಲಿ ಮೊದಲನೆಯ 1 ಎಂಬ ಅಂಕೆಯು "ದೇಹದ ಅಂಗಗಳು" ಎಂಬ ಪ್ರಧಾನ ವಿಭಾಗವನ್ನು ಸೂಚಿಸುತ್ತದೆ.

ಎರಡನೆಯ 2 ಎಂಬ ಅಂಕೆಯು ದೇಹದ ಅಂಗಗಳಲ್ಲಿ "ತಲೆ" ಎಂಬ ಭಾಗವನ್ನು ಸೂಚಿಸುತ್ತದೆ.

ಮೂರನೆಯ 2 ಎಂಬ ಅಂಕೆಯು ತಲೆಯಲ್ಲಿ 'ತಲೆ ಕೂದಲು' ಎಂಬ ಅಂಗವನ್ನು ಸೂಚಿಸುತ್ತದೆ. ಆದ್ದರಿಂದ ಇದರ ವರ್ಗೀಕರಣ 1.2.2.

(3) V 262 : ತೆಗರಂದಿ ಬಳ್ಳ್ ಬುಳೆಪ್ಪುಂಡು, ಉಣುಂಗಿಲ್ ಕೆತ್ತೆ ಬುಳೆಪ್ಪುಂಡು.
(ಚಿಗುರದ ಹಗ್ಗ ಬೆಳೆಯುತ್ತದೆ, ಒಣಗಿದ ಚಕ್ಕೆ ಬೆಳೆಯುತ್ತದೆ.)
(ಉತ್ತರ : ಕುಜಲ್, ಉಗುರು [ಕೂದಲು, ಉಗುರು])

ಈ ಒಗಟಿನ ವರ್ಗೀಕರಣ 1.7.2.1 (Ref : 1.2.2). ಇಲ್ಲಿ ಮೊದಲನೆಯ 1 ಎಂಬ ಅಂಕೆಯು 'ದೇಹದ ಅಂಗಗಳು' ಎಂಬ ಪ್ರಧಾನ ವಿಭಾಗವನ್ನು ಸೂಚಿಸುತ್ತದೆ. ಎರಡನೆಯ 7 ಎಂಬ ಅಂಕೆಯು ದೇಹದ ಅಂಗಗಳಲ್ಲಿ 'ಕೈ' ಎಂಬ ಭಾಗವನ್ನು ಸೂಚಿಸುತ್ತದೆ. ಮೂರನೆಯ 2 ಎಂಬ ಅಂಕೆಯು ಕೈಯಲ್ಲಿ 'ಕೈ ಬೆರಳು'ಗಳು ಎಂಬ ಉಪವಿಭಾಗವನ್ನು ಸೂಚಿಸುತ್ತದೆ. ನಾಲ್ಕನೆಯ 1 ಎಂಬ ಅಂಕೆಯು ಕೈ ಬೆರಳುಗಳಲ್ಲಿ 'ಉಗುರು'ಗಳು ಎಂಬ ಉಪ ವಿಭಾಗವನ್ನು ಸೂಚಿಸುತ್ತದೆ. ಆದ್ದರಿಂದ ಈ ಒಗಟಿನ ವರ್ಗೀಕರಣ 1.7.2.1. ಆದರೆ ಈ ಒಗಟಿನಲ್ಲಿ ಒಂದು ಭಾಗ ತಲೆಕೂದಲಿಗೆ ಸಂಬಂಧಪಟ್ಟಿದೆ. ಈಗಾಗಲೇ ನೋಡಿರುವಂತೆ ಈ ವರ್ಗೀಕರಣ ವಿಧಾನದಲ್ಲಿ ತಲೆಕೂದಲಿನ ಸ್ಥಾನ–1.2.2. ಆದ್ದರಿಂದ ಆವರಣದ ಒಳಗಡೆ ಈ ವಿಚಾರವನ್ನು ಸೂಚಿಸುವುದಕ್ಕಾಗಿ Ref. 1.2.2 ಎಂದು ಕೊಡಲಾಗಿದೆ. ಹಾಗೆಯೇ V 262 ಎಂಬ ಈ ಒಗಟು 1.2.2 ಎಂಬ ವರ್ಗೀಕರಣದಲ್ಲೂ ಕಾಣಿಸಿಕೊಳ್ಳುತ್ತದೆ. ಆದರೆ ಆವರಣದ ಒಳಗಡೆ Ref 1.7.2.1 ಎಂದು ಇರುತ್ತದೆ.

2. ಪ್ರಾಣಿ-ಪಕ್ಷಿ-ಕೀಟಗಳು :

1. ಪ್ರಾಣಿಗಳು :

1. ಮೀನು :
   1. ಮೀನು (General)
   2. ಸಿಗಡಿ
   3. ಕೊಡ್ಯಾನ್
   4. ನಂಗ್

2. ನಾಯಿ :
   1. ನಾಯಿ (General)
   2. ನಾಯಿ ಬಾಲ

3. ಹಾವು :
   1. ಹಾವು (General)
   2. ಒಳ್ಳೆ ಹಾವು
   3. ಕೇರೆ ಹಾವು

4. ಏಡಿ

5. ಕಪ್ಪೆ :
   1. ಕಪ್ಪೆ (General)
   2. ಗೋಂಕುರು ಕಪ್ಪೆ

6. ಆನೆ
7. ನರ್ತೆ
8. ಎತ್ತು
9. ಕೋಣ
10. ಮಂಗ

11. ಆಮೆ
12. ಎರೆಹುಳು
13. ಕುದುರೆ
14. ಹಂದಿ
15. ಇಲಿ

2. ಪಕ್ಷಿಗಳು :

1. ಕೋಳಿ

1. ಕೋಳಿ (General)
2. ಕೋಳಿ ಮಾಂಸ
3. ಕೋಳಿ ಗರಿ
4. ಹುಂಜ
5. ಹೇಂಟೆ
   1. ಕೋಳಿ ಮೊಟ್ಟೆ

2. ಕಾಗೆ
3. ಬಾವಲಿ
4. ನವಿಲು
5. ಬಾತುಕೋಳಿ
6. ಗಿಡುಗ

3. ಕೀಟಗಳು :

1. ಕೆಂಪಿರುವೆ

1. ಕೆಂಪಿರುವೆ (General)
2. ಕೆಂಪಿರುವೆಯ ಗೂಡು
3. ಇರುವೆಯ ಸಾಲು

2. ಹೇನು
3. ಚೇಳು
4. ಜೇಡ
5. ನೊಣ
6. ಸೊಳ್ಳೆ

ಈ ಪದ್ಧತಿಯಂತೆ ಪ್ರಾಣಿ-ಪಕ್ಷಿ-ಕೀಟಗಳನ್ನು ಕುರಿತ ತುಳು ಒಗಟುಗಳನ್ನು ಹೀಗೆ ವರ್ಗೀಕರಿಸ ಬಹುದು.

ಸಂಕೇತಗಳು : ಹಿಂದಿನಂತೆಯೇ.

ಒಗಟುಗಳ ಸಂಖ್ಯೆಗಳನ್ನು ಆಯಾಯಾ ಸಂಕಲನಗಳ ಸಂಕೇತಾಕ್ಷರಗಳ ಮುಂದೆ ಕೊಡಲಾಗಿದೆ :

| | | |
|---|---|---|
| V 120 | .... | 2.1.1.1 |
| V 223 | .... | 2.1.1.2 |
| V 343 | .... | 2.1.1 |
| N 149 | .... | 2.1.1.4 (Ref. 2.2.1.5) |
| V 191 | .... | 2.1.2.1 |
| V 368 | .... | 2.1.2.1 |
| V 478 | .... | 2.1.2.2 |
| N 163 | .... | 2.1.2.1 |
| V 255 | .... | 2.1.3.1 |
| V 278 | .... | 2.1.3.2 |
| V 324 | .... | 2.1.3.3 |
| V 269 | .... | 2.1.4 |
| V 271 | .... | 2.1.4 |
| N 84 | .... | 2.1.4 |
| N 163 | .... | 2.1.5.2 |
| V 178 | .... | 2.1.5.2 |
| N 183 | .... | 2.1.5.1 (Ref. 2.2.1.1) |
| V 227 | .... | 2.1.6 |
| V 353 | .... | 2.1.6 |
| V 372 | .... | 2.1.6 |
| V 149 | .... | 2.1.7 |
| V 156 | .... | 2.1.7 |
| V 225 | .... | 2.1.8 |
| V 443 | .... | 2.1.8 |
| V 267 | .... | 2.1.10 |
| V 341 | .... | 2.1.10 |
| V 4 | .... | 2.1.11 |

| | | |
|---|---|---|
| V 87 | .... | 2.1.11 |
| V 86 | .... | 2.1.12 |
| V 226 | .... | 2.1.13 |
| V 471 | .... | 2.1.14 |
| V 501 | .... | 2.1.15 |
| V 224 | .... | 2.2.1.5 |
| V 422 | .... | 2.2.1.4 |
| N 87 | .... | 2.2.1.3 (Ref. 2.2.1.2) |
| N 149 | .... | 2.2.1.5 (Ref. 2.2.1.5.1) |
| N 179 | .... | 2.2.1.2 |
| N 183 | .... | 2.2.1.1 (Ref. 2.1.5.1) |
| V 112 | .... | 2.2.1.5.1 |
| V 155 | .... | 2.2.1.5.1 |
| V 160 | .... | 2 2.1.5.1 |
| V 193 | .... | 2.2.1.5.1 |
| V 203 | .... | 2.2.1.5.1 |
| V 421 | .... | 2.2.2 |
| V 456 | .... | 2.2.2 |
| V 30 | .... | 2.2.3 |
| V 273 | .... | 2.2.4 |
| V 298 | .... | 2.2.5 |
| V 392 | .... | 2.2.6 |
| V 41 | .... | 2.3.1.1 |
| V 364 | .... | 2.3.1.2 |
| V 23 | .... | 2.3.1.3 |
| V 146 | .... | 2.3.2 |
| V 152 | .... | 2.3.2 |
| V 219 | .... | 2.3.2 |
| V 232 | .... | 2.3.3 |
| N 193 | .... | 2.3.3 |

| | | |
|---|---|---|
| V 28 | .... | 2.3.4 |
| V 49 | .... | 2.3.4 (Ref. 3.1.2 and 3.5.2) |
| V 54 | .... | 2.3.5 |
| V 289 | .... | 2.3.6 |

ಉದಾ : 1) V 223 :- ಜನೊ ಕುಂಟ್ಟ್ ಆಂಡಲ ಮೀಸೆ ಗಟ್ಟ್.
(ಜನ ಚಿಕ್ಕದಾದರೂ ಮೀಸೆ ದೊಡ್ಡದು.)

[ಉತ್ತರ : ಎಟ್ಟಿ (ಸಿಗಡಿ ಮೀನು)]

ಈ ಒಗಟಿನ ವರ್ಗೀಕರಣ 2.1.1.2.

ಇಲ್ಲಿ ಮೊದಲನೆಯ 2 ಎಂಬ ಅಂಕೆಯು "ಪ್ರಾಣಿ, ಪಕ್ಷಿಗಳು, ಕೀಟಗಳು" ಎಂಬ ಪ್ರಧಾನ ವಿಭಾಗವನ್ನು ಸೂಚಿಸುತ್ತದೆ. ಎರಡನೆಯ 1 ಎಂಬ ಅಂಕೆಯು ಈ ಪ್ರಧಾನ ವರ್ಗದಲ್ಲಿ "ಪ್ರಾಣಿಗಳು" ಎಂಬ ವರ್ಗವನ್ನು ಸೂಚಿಸುತ್ತದೆ. ಮೂರನೆಯ 1 ಎಂಬ ಅಂಕೆಯು ಈ ಪ್ರಾಣಿಗಳಲ್ಲಿ "ಮೀನು" ಎಂಬ ಉಪವರ್ಗವನ್ನು ಸೂಚಿಸುತ್ತದೆ. ಕೊನೆಯ 2 ಎಂಬ ಅಂಕೆಯು ಮೀನುಗಳಲ್ಲಿ "ಸಿಗಡಿ" ಎಂಬ ಜಾತಿಯನ್ನು ಸೂಚಿಸುತ್ತದೆ. ಆದ್ದರಿಂದ ಈ ಒಗಟಿನ ವರ್ಗೀಕರಣವು 2.1.1.2.

ಉದಾ : 2) V 112 :- ಒಂಜಿ ಕುಪ್ಪಿಡ್ ರಡ್ ಮರ್ದ್.
(ಒಂದು ಕುಪ್ಪಿಯಲ್ಲಿ ಎರಡು ಮದ್ದು.)

[ಕೆತ್ತಿ (ಮೊಟ್ಟೆ)]

ಈ ಒಗಟಿನ ವರ್ಗೀಕರಣ 2.2.1.5.1. ಇಲ್ಲಿ ಮೊದಲನೆಯ 2 ಎಂಬ ಅಂಕೆಯು "ಪ್ರಾಣಿಗಳು, ಪಕ್ಷಿಗಳು, ಕೀಟಗಳು" ಎಂಬ ಪ್ರಧಾನ ವರ್ಗವನ್ನು ಸೂಚಿಸುತ್ತದೆ. ಎರಡನೆಯ 2 ಎಂಬ ಅಂಕೆಯು ಈ ಪ್ರಧಾನ ವರ್ಗದಲ್ಲಿ "ಪಕ್ಷಿಗಳು" ಎಂಬ ವರ್ಗವನ್ನು ಸೂಚಿಸುತ್ತದೆ. ಮೂರನೆಯ 1 ಎಂಬ ಅಂಕೆಯು ಈ ಪಕ್ಷಿಗಳಲ್ಲಿ "ಕೋಳಿ" ಎಂಬ ವರ್ಗವನ್ನು ಸೂಚಿಸುತ್ತದೆ. ನಾಲ್ಕನೆಯ 5 ಎಂಬ ಅಂಕೆಯು ಕೋಳಿಗಳಲ್ಲಿ "ಹೇಂಟೆ" ಎಂಬ ಜಾತಿಯನ್ನು ಸೂಚಿಸುತ್ತದೆ. ಕೊನೆಯ 1 ಎಂಬ ಅಂಕೆಯು ಹೇಂಟೆಯ ಉತ್ಪನ್ನವಾದ 'ಕೋಳಿ ಮೊಟ್ಟೆ'ಯನ್ನು ಸೂಚಿಸುತ್ತದೆ. ಆದ್ದರಿಂದ ಈ ಒಗಟಿನ ವರ್ಗೀಕರಣವು 2.2.1.5.1.

3. ಸಸ್ಯಗಳು :

1. ತೆಂಗು, ತೆಂಗಿನ ಉತ್ಪನ್ನಗಳು :

1. ತೆಂಗು (General)
2. ತೆಂಗಿನಕಾಯಿ
3. ಎಳನೀರು

2. ತಾಳೆ

1. ತಾಳೆ (General)
2. ತಾಳೆಗರಿ
3. ತಾಳೆ ಬೊಂಡ (ಇರೊಳು)
4. ಕಳ್ಳು
5. ತಾಳೆಹಣ್ಣು
6. ಕಳ್ಳಿನ ಮಡಕೆ

3. ಬಾಳೆ

1. ಬಾಳೆ (General)
2. ಬಾಳೆಗೊನೆ
3. ಬಾಳೆಯಹಣ್ಣು
4. ಬಾಳೆ ಹೂಬೆ

4. ವೀಳ್ಯದೆಲೆ

1. ವೀಳ್ಯದೆಲೆ (General)

5. ಅಡಿಕೆ

1. ಅಡಿಕೆ ಮರ (General)
2. ಅಡಿಕೆ
3. ಅಡಿಕೆ ಹೂ (ಸಿಂಗಾರ ಹೂ)
4. ಅಡಿಕೆ ಬೇರು
5. ಅಡಿಕೆಮರದ ತುದಿ

6. ಹಲಸು

1. ಹಲಸಿನ ಹಣ್ಣು (General)
2. ಹಲಸಿನ ಬೀಜ

7. ಕುಂಬಳಕಾಯಿ

1. ಕುಂಬಳಕಾಯಿ (General)
2. ಕುಂಬಳಕಾಯಿ ಬಳ್ಳಿ

8. ಗೇರು

1. ಗೇರು ಹಣ್ಣು (General)
2. ಗೇರು ಬೀಜ

9. ಮೆಣಸು

1. ಮೆಣಸು (General)
2. ಗಾಂಧಾರಿ ಮೆಣಸು

10. ಅಣಬೆ

1. ಅಣಬೆ (General)

11. ಅಂಬಟೆ

1. ಅಂಬಟೆ (General)

12. ನುಗ್ಗೆ

1. ನುಗ್ಗೆ (General)

13. ಕೇದಗೆ ಹೂ

1. ಕೇದಗೆ ಹೂ (General)
2. ಕೇದಗೆ ಗರಿ

14. ಹಾಗಲಕಾಯಿ

1. ಹಾಗಲಕಾಯಿ (General)

15. ತೊಂಡೆಕಾಯಿ

1. ತೊಂಡೆಕಾಯಿ (General)
2. ತೊಂಡೆ ಹೂ

16. ನೇಜಿ, ಕೆಯಿ

1. ನೇಜಿ (General)
2. ಕೆಯಿ
3. ಕೆಯಿತ್ತ ಪೂ

17. ನೀರುಳ್ಳಿ

1. ನೀರುಳ್ಳಿ (General)

18. ಮಾವು

1. ಮಾವಿನ ಹಣ್ಣು (General)

19. ಶುಂಠಿ

1. ಶುಂಠಿ (General)

20. ಅನಾನಾಸು

1. ಅನಾನಾಸು (General)

21. ಕಣಿಲೆ, ಬಿದಿರು

1. ಕಣಿಲೆ
2. ಬಿದಿರು

22. ಅರಸಿನ

1. ಅರಸಿನ (General)

23. ಹೊಗೆಸೊಪ್ಪು

1. ಹೊಗೆಸೊಪ್ಪು

24. ಕೆಸು

1. ಕೆಸು (General)
2. ಕೆಸುವಿನ ಎಲೆ

25. ಪೇರಳೆ

1. ಪೇರಳೆ ಹಣ್ಣು

26. ಕಲ್ಲಂಗಡಿ ಹಣ್ಣು
27. ಜೋಳ
28. ಅವುಡಲ
29. ಬೊಳ್ಳೆಸೊಪ್ಪು

30. ಮುಂಡಿಗಡ್ಡೆ
31. ಕಾಸರಕನಕಾಯಿ
32. ನೆಲ್ಲಿಕಾಯಿ
33. ಲಿಂಬೆಹಣ್ಣು
34. ಗೋಳಿಮರ
35. ಓಟೆ ಹುಳಿ
36. ಕಬ್ಬು
37. ರಾಗಿ
38. ರೆಂಜೆ ಹೂ
39. ನಾಚಿಕೆ ಮುಳ್ಳು
40. ಮುಂಡಿವಾಳ
41. ಮುಳಿಹುಲ್ಲು
42. ಅಕಿರೆ
43. ಪಡುವಲಕಾಯಿ

ಈ ಪದ್ಧತಿಯಂತೆ ಸಸ್ಯಗಳನ್ನು ಕುರಿತ ತುಳು ಒಗಟುಗಳನ್ನು ಹೀಗೆ ವರ್ಗೀಕರಿಸಬಹುದು.

ಸಂಕೇತಗಳು : ಹಿಂದಿನಂತೆಯೇ.

ಒಗಟುಗಳ ಸಂಖ್ಯೆಗಳನ್ನು ಆಯಾಯಾ ಸಂಕಲನಗಳ ಸಂಕೇತಾಕ್ಷರಗಳ ಮುಂದೆ ಕೊಡಲಾಗಿದೆ.

| | | |
|---|---|---|
| V 1 | .... | 3.1.2 (Ref. 3.5.2.) |
| V 49 | .... | 3.1.2 (Ref. 3.5.2) |
| V 51 | .... | 3.1.2 |
| V 55 | .... | 3.1.2 |
| V 99 | .... | 3.1.2 |
| V 220 | .... | 3.1.2 |
| V 240 | .... | 3.1.3 |
| V 316 | .... | 3.1.2 |
| V 340 | .... | 3.1.2 |
| V 352 | .... | 3.1.2 |
| V 423 | .... | 3.1.3 |
| V 434 | .... | 3.1.3 (Ref. 3.1.2) |

| | | |
|---|---|---|
| V 439 | .... | 3.1.2 |
| N 24 | .... | 3.1.2 |
| N 98 | .... | 3.1.2 |
| N 118 | .... | 3.1.2 |
| N 141 | .... | 3.1.2 (Ref. 3.1.3) |
| N 190 | ... | 3.1.2 |
| V 16 | .... | 3.2.1 (Ref. 3.2.2, 3.2.3) |
| V 37 | .... | 3.2.3 |
| V 48 | .... | 3.2.4 |
| V 141 | .... | 3.2.3 |
| V 153 | .... | 3.2.4 |
| V 171 | .... | 3.2.5. (Ref. 3.2.4) |
| V 297 | .... | 3.2 4 |
| V 382 | .... | 3.2.4 |
| V 390 | .... | 3.2.4 |
| N 70 | .... | 3.2.2 |
| N 135 | ... | 3.2.5 |
| N 183 | .... | 3.2.4 |
| V 34 | .... | 3.3.2 |
| V 132 | .... | 3.3.3 |
| V 173 | .... | 3.3.2 |
| V 273 | .... | 3.3.2 |
| V 319 | .... | 3.3.3 |
| V 356 | .... | 3.3.3 |
| V 399 | .... | 3.3.3 |
| V 403 | .... | 3.3.3 |
| V 410 | .... | 3.3 1 (Ref. 3.3.2) |
| V 454 | .... | 3.3.4 (Ref. 3.3.2) |
| V 467 | .... | 3.3.4 |
| V 477 | .... | 3.3.1 |
| N 4 | .... | 3.3.1 |
| N 96 | .... | 3.4.1 |
| V 145 | .... | 3.4.1 |

| | | |
|---|---|---|
| V 234 | .... | 3.4.1 (Ref. 3.5.2) |
| V 283 | .... | 3.4.1 (Ref. 3.5.2) |
| V 284 | .... | 3.4.1 |
| V 346 | .... | 3.4.1 (Ref. 3.5.2) |
| N 10 | .... | 3.4.1 (Ref. 3.5.2) |
| N 26 | .... | 3.4.1 |
| N 100 | .... | 3.4.1 |
| V 1 | .... | 3.5.2 |
| V 13 | .... | 3.5.1 (Ref. 3.5 4, 3 5.2, 3.5.3) |
| V 49 | .... | 3.5.2 (Ref. 3.1.2, 2.3.4) |
| V 61 | .... | 3.5.2 |
| V 283 | .... | 3.5.2 (Ref. 3.4.1) |
| V 346 | .... | 3.5.2 (Ref. 3.4.1) |
| N 10 | .... | 3.5.2 (Ref. 3.4.1) |
| V 6 | .... | 3.6.1 |
| V 104 | .... | 3.6.1 (Ref. 3.6.2) |
| V 462 | .... | 3.6.1 |
| N 82 | .... | 3.6.1 |
| N 109 | .... | 3.6.1 |
| N 148 | .... | 3.6.1 |
| V 71 | .... | 3.7.1 |
| V 183 | .... | 3.7.1 |
| V 215 | .... | 3.7.1 |
| N 22 | .... | 3.7.2 |
| N 46 | .... | 3.7.1 |
| V 101 | .... | 3.8.1 |
| V 301 | .... | 3.8.1 |
| V 424 | .... | 3.8.1 (Ref. 3.8.2) |
| N 116 | .... | 3.8.1 |
| V 75 | .... | 3.9.1 |
| V 216 | .... | 3.9.2 |
| V 248 | .... | 3.9.1 |
| V 325 | .... | 3.9.1 |

| | | | |
|---|---|---|---|
| V 38 | .... | 3.10.1 | (Ref. 5.13) |
| V 205 | .... | 3.10.1 | |
| V 396 | .... | 3.10·1 | (Ref. 2.1·4) |
| V 453 | .... | 3.10.1 | (Ref. 5·13) |
| V 63 | .... | 3.11.1 | |
| V 226 | .... | 3,11.1 | |
| N 6 | .... | 3.11.1 | |
| V 63 | .... | 3.12.1 | |
| V 12 | .... | 3.12.1 | |
| V 50 | .... | 3·13.1 | |
| V 348 | .... | 3 13.1 | |
| N 156 | .... | 3·13.2 | |
| V 68 | .... | 3.14.1 | |
| V 100 | .... | 3.14.1 | |
| V 182 | .... | 3.14.1 | |
| V 109 | .... | 3.15.1 | |
| V 357 | .... | 3.15.1 | |
| V 481 | .... | 3.15.2 | (Ref. 3.15.1) |
| V 84 | .... | 3.16.1 | (Ref. 3.16.2) |
| V 107 | .... | 3.16.3 | |
| N 9 | .... | 3.16.2 | |
| V 5 | .... | 3,17.1 | |
| N 3 | .... | 3.17.1 | |
| V 52 | .... | 6.18.1 | |
| N 56 | .... | 3.18.1 | (Ref· 1·3.1, 1·7.9, 1.5) |
| V 43 | .... | 3.19.1 | |
| V 302 | .... | 3.19.1 | |
| V 270 | .... | 3.20·1 | |
| N 186 | .... | 3.20.1 | |
| V 76 | .... | 3.21.1 | (Ref. 3·21·2) |
| V 238 | .... | 3.21.2 | |
| V 53 | .... | 3 22·8 | |
| V 415 | .... | 3.22.1 | |

| | | |
|---|---|---|
| V 333 | .... | 3.23.1 |
| V 502 | .... | 3.23.1 |
| V 202 | .... | 3.24.2 |
| V 418 | .... | 3.24.2 |
| V 206 | .... | 3.25.1 |
| V 25 | .... | 3.26.1 |
| V 94 | .... | 3.27.1 |
| V 97 | .... | 3.28.1 |
| V 9 | .... | 3.29.1 |
| V 14 | .... | 3.30.1 |
| V 39 | .... | 3.31.1 |
| V 218 | .... | 3.32.1 |
| V 217 | .... | 3.33.1 |
| V 228 | .... | 3.34.1 |
| V 384 | .... | 3.35 1 |
| V 386 | .... | 3.36.1 |
| V 213 | .... | 3.37.1 |
| V 349 | .... | 3.38.1 |
| V 427 | .... | 3.39.1 |
| V 162 | .... | 3.40.1 |
| V 85 | .... | 3.41.1 |
| V 428 | .... | 3.42.1 |
| V 322 | .... | 3.43.1 |

ಉದಾ : 1) V 1 : ಅಜ್ಜಿಗ್ ಮೂಜಿ ಕಣ್ಣ್, ಅಜ್ಜಗ್ ಒಂಜೇ ಕಣ್ಣ್.
(ಅಜ್ಜಿಗೆ ಮೂರು ಕಣ್ಣು, ಅಜ್ಜನಿಗೆ ಒಂದೇ ಕಣ್ಣು.)

[ಉತ್ತರ : ತಾರಾಯಿ, ಬಜ್ಜೆಯಿ (ತೆಂಗಿನಕಾಯಿ, ಅಡಿಕೆ)]

ಈ ಒಗಟಿನ ವರ್ಗೀಕರಣ 3.1.2.

ಇಲ್ಲಿ ಮೊದಲನೆಯ 3 ಎಂಬ ಅಂಕೆಯು "ಸಸ್ಯಗಳು" ಎಂಬ ಪ್ರಧಾನ ವರ್ಗವನ್ನು ಸೂಚಿಸುತ್ತದೆ. ಎರಡನೆಯ 1 ಎಂಬ ಅಂಕೆಯು ಸಸ್ಯಗಳಲ್ಲಿ "ತೆಂಗು, ತೆಂಗಿನ ಉತ್ಪನ್ನಗಳು" ಎಂಬ ಉಪ ವರ್ಗವನ್ನು ಸೂಚಿಸುತ್ತದೆ. ಕೊನೆಯ 2 ಎಂಬ ಅಂಕೆಯು ತೆಂಗು ಮತ್ತು ತೆಂಗಿನ ಉತ್ಪನ್ನಗಳು ಎಂಬ ಉಪ ವರ್ಗದಲ್ಲಿ ತೆಂಗಿನ ಕಾಯಿ ಎಂಬ ವಿಭಾಗವನ್ನು ಸೂಚಿಸುತ್ತದೆ. ಆದ್ದರಿಂದ ಈ ಒಗಟಿನ ವರ್ಗೀಕರಣ 3.1.2. ಈ ಒಗಟಿನ ಉತ್ತರದಲ್ಲಿ ಅಡಿಕೆ ಎಂಬ ಉತ್ತರವು ಇದೆ. ಆದ್ದರಿಂದ Ref. 3.5.2 ಎಂದು ಕೊಡಲಾಗಿದೆ. ಇಲ್ಲಿ ಮೊದಲನೆಯ 3 ಎಂಬುದು "ಸಸ್ಯಗಳು" ಎಂಬ ಪ್ರಧಾನ ವರ್ಗವನ್ನು ಸೂಚಿಸುತ್ತದೆ. ಎರಡನೆಯ 5 ಎಂಬ ಅಂಕೆಯು ಅಡಿಕೆ ಎಂಬ ಉಪ ವರ್ಗವನ್ನು ಸೂಚಿಸುತ್ತದೆ. ಕೊನೆಯ 2 ಎಂಬ ಅಂಕೆಯು ಅಡಿಕೆ ಎಂಬ ವಿಭಾಗವನ್ನು ಸೂಚಿಸುತ್ತದೆ.

5. ನಿಸರ್ಗ (ಖಗೋಳ)

1. ಆಕಾಶ
2. ನಕ್ಷತ್ರ
3. ಸೂರ್ಯ
4. ಚಂದ್ರ
5. ಭೂಮಿ
6. ಮಿಂಚು
7. ಮಳೆ
8. ಹೊಳೆ
9. ಕಡಲು
10. ಕತ್ತಲು
11. ಬೆಳಿಗ್ಗೆ, ಮಧ್ಯಾಹ್ನ, ಸಂಜೆ
12. ಗಾಳಿ, ನೀರು, ಬೆಳಕು
13. ಸಿಡಿಲು

ಈ ಪದ್ಧತಿಯಂತೆ ನಿಸರ್ಗವನ್ನು ಕುರಿತ ತುಳು ಒಗಟುಗಳನ್ನು ಹೀಗೆ ವರ್ಗೀಕರಿಸಬಹುದು.

ಸಂಕೇತಗಳು : ಹಿಂದಿನಂತೆಯೇ.

| | | |
|---|---|---|
| V 11 | .... | 5.1 (Ref. 5.2) |
| V 189 | .... | 5.1 |
| V 500 | .... | 5·1 |

| | | |
|---|---|---|
| V 11 | .... | 5.2 (Ref. 5.1) |
| V 295 | .... | 5.2 |
| V 380 | .... | 5.2 |
| V 387 | .... | 5.2 |
| V 128 | .... | 5.2 (Ref. 5.3) |
| N 42 | .... | 5.2 (Ref. 5.4.) |
| N 57 | .... | 5.2 (Ref. 5.5) |
| V 128 | .... | 5.3 (Ref. 5.2) |
| V 20 | .... | 5.3 (Ref. 5.4) |
| V 499 | .... | 5.3 (Ref. 5.4) |
| V 20 | .... | 5.4 (Ref. 5.3) |
| V 449 | .... | 5.4 (Ref. 5.3) |
| N 42 | .... | 5.4 (Ref. 5.2) |
| V 144 | .... | 5.4 (Ref. 5.1) |
| V 280 | .... | 5.4 |
| V 294 | .... | 5.4 |
| V 482 | .... | 5.4 |
| V 485 | .... | 5 4 |
| N 86 | .... | 5.4 |
| N 57 | .... | 5.5 (Ref. 5.2) |
| V 195 | .... | 5.6 |
| V 56 | .... | 5.7 |
| V 57 | .... | 5.7 |
| N 53 | .... | 5.7 |
| N 65 | .... | 5.7 |
| N 65 | .... | 5.7 |
| V 190 | .... | 5.8 |
| V 369 | .... | 5.8 |
| V 373 | .... | 5.9 |
| N 20 | .... | 5.10 |
| V 105 | .... | 5.11 |
| N 9 | .... | 5.12 |

ಉದಾ : V 189 : ಕೊಡಿ ತೋಜುಂಡು, ಕಡೆ ತೋಜುಜಿ.
(ತುದಿ ಕಾಣುತ್ತದೆ, ಬುಡ ಕಾಣುವುದಿಲ್ಲ.)

[ಉತ್ತರ : ಬಾನೊ (ಆಕಾಶ)]

ಈ ಒಗಟಿನ ವರ್ಗೀಕರಣ 5.1.

ಇಲ್ಲಿ ಮೊದಲಿನ 5 ಎಂಬ ಅಂಕೆಯು 'ನಿಸರ್ಗ' ಎಂಬ ಪ್ರಧಾನ ವಿಭಾಗವನ್ನು ಸೂಚಿಸುತ್ತದೆ. ಎರಡನೆಯ 1 ಎಂಬ ಅಂಕೆಯು 'ನಿಸರ್ಗ' ಎಂಬ ಪ್ರಧಾನ ವಿಭಾಗದಲ್ಲಿ 'ಆಕಾಶ' ಎಂಬ ಉಪ ವರ್ಗವನ್ನು ಸೂಚಿಸುತ್ತದೆ. ಆದ್ದರಿಂದ ಈ ಒಗಟಿನ ವರ್ಗೀಕರಣ 5.1.

4. ಘಟನಾ ಪ್ರಧಾನ ಒಗಟುಗಳು (Riddles connected with incidents) :

ಎಲ್ಲಾ ಭಾಷೆಗಳಲ್ಲಿ ಇರುವಂತೆಯೇ ತುಳುವಿನಲ್ಲಿಯೂ ಘಟನಾ ಪ್ರಧಾನ ಒಗಟುಗಳಿವೆ. ಒಂದು ಒಗಟಿನ ಅರ್ಥ ಸ್ಪಷ್ಟವಾಗಬೇಕಾದರೆ ಅದಕ್ಕೆ ಹಿನ್ನೆಲೆಯಾಗಿ ಉಳ್ಳ ಘಟನೆಯೊಂದನ್ನು ವಿವರಿಸಬೇಕಾಗುತ್ತದೆ. ಸಾಮಾನ್ಯವಾಗಿ ಇಂತಹ ಒಗಟುಗಳಲ್ಲಿ ಜಾಣತನ, ಹಾಸ್ಯ, ಕೆಲವೊಮ್ಮೆ ಸ್ವಲ್ಪ ಅಶ್ಲೀಲತೆ ಕಾಣಿಸುತ್ತದೆ.

ಉದಾ. :

1) ಸುತ್ತು ಸುತ್ತು ಬರ್ಪ ಎಕಾಂತ್ರ, ಮಿತ್ತ್ ಒರಿ ಕುಳ್ಳುದೆ ನಿಕ್ಕಾತ್ರ, ಬತ್ತ್ಂಡ ಸೈಪ್ಪೆ ಎಕಾಂತ್ರ, ಉಂದ್ ದಾದ ?

(ಸುತ್ತು ಸುತ್ತು ಬರುತ್ತಿ ನನಗಾಗಿ, ಮೇಲೊಬ್ಬ ಕೂತಿದ್ದಾನೆ ನಿನಗಾಗಿ, ಬಂದರೆ ಸಾಯುತ್ತಿ ನನಗಾಗಿ; ಹೀಗೆಂದರೇನು ?)

ಉತ್ತರ : ತನ್ನ ಹೆಂಡತಿಗೆ ಮಿಂಡನೊಬ್ಬನಿದ್ದಾನೆ ಎಂದು ಗಂಡ ನೆರೆಯವರಿಂದ ಅರಿತು, ಆ ಮಿಂಡನನ್ನು ಒಂದು ದಿನ ಹಗಲಲ್ಲಿ ಅಟ್ಟದ ಮೇಲೆ ಕೂತು ಹೊಂಚು ಹಾಕಿದನು. ಗಂಡ ಅಟ್ಟದ ಮೇಲಿರು ವುದನ್ನು ಹೆಂಡತಿ ಕಂಡುಕೊಂಡಳು. ಚಾವಡಿಯ ಬಾಗಿಲ ಮುಂದೆ ಒಂದು ಬೀಸುವ ಕಲ್ಲು ಇಟ್ಟು ಅದಕ್ಕೆ ಅಕ್ಕಿ ಸುರಿಯುತ್ತ ಮನೆಯ ಅಕ್ಕ ಪಕ್ಕದಲ್ಲಿ ಸುಳಿದಾಡುತ್ತಿರುವ ತನ್ನ ಮಿಂಡನಿಗೆ ಎಚ್ಚರಿಸುವ ದೆಸೆಯಲ್ಲಿ ಹೀಗೆ ಹಾಡುತ್ತ ಬೀಸಿದಳು.

ಇದೇ ರೀತಿಯ ಒಗಟು ಕನ್ನಡದಲ್ಲಿ ಇದೆ. ನೋಡಿ : ಸೋಮಶೇಖರ ಇಮ್ರಾಪೂರ : ಕನ್ನಡ ಸಾವಿರದ ಒಗಟುಗಳು (ಪ್ರಸ್ತಾವನೆ ಪು. 44).

2. ಕಥಾರೂಪದ ಒಗಟು :

"ಕತೆ ಪೋದ್ ಎತೆ ಆಂಡ್
ಕೋಡೆ ಸಯಿತ್ತಿ ಮೃಗೊ ಇನಿ ಕಜಿಪ್ಪು ಆಂಡ್
ಮೃಗೊನ್ ಕೆರ್‌ನಾಯೆ ಸಯ್ತ್‌ದ್ ಆಜಿ ಮೂಜಿ ತಿಂಗೊಳು ಆಂಡ್."

(ಕತೆ ಹೋಗಿ ವ್ಯಥೆಯಾಯ್ತು
ನಿನ್ನೆ ಸತ್ತ ಮೃಗ ಇವತ್ತು ಪಲ್ಯವಾಯ್ತು
ಮೃಗವನ್ನು ಕೊಂದವ ಸತ್ತು ಆರು ಮೂರು ತಿಂಗಳಾಯ್ತು.)

ಈ ಒಗಟಿಗೆ ಕತೆಯೊಂದರ ಹಿನ್ನೆಲೆ ಇದೆ :— ಒಂದೂರಿನಲ್ಲಿ ಗಂಡ ಹೆಂಡತಿ ಸುಖವಾಗಿದ್ದರು. ಹೆಂಡತಿಗೆ ಮಿಂಡನೊಬ್ಬ ಗಂಟುಬಿದ್ದ. ತಮ್ಮ ಕಾಮಕೇಳಿಗೆ ಅಡ್ಡಿಯಾಗುವ ಗಂಡನನ್ನು ಹೆಂಡತಿ ಮತ್ತು ಮಿಂಡ ಸೇರಿ ಕೊಂದು, ಹೆಣವನ್ನು ಕಾಡಿನಲ್ಲಿ ಮರವೊಂದಕ್ಕೆ ನೇತುಹಾಕಿದರು. ಊರಿನವರೆಲ್ಲ ಇವರ ಬಗ್ಗೆ ಆಡಿಕೊಳ್ಳಲು ತೊಡಗಿದರು. ಸ್ವಲ್ಪ ಸಮಯ ಕಳೆದು ಮಿಂಡ ಕಾಡಿಗೆ ಬೇಟೆಗೆ ಹೋದ; ಮೊಲವೊಂದನ್ನು ಅಟ್ಟಿಸುತ್ತಾ ಹೋದ. ಆಗ ನೇತುಹಾಕಿದ್ದ ಗಂಡನ ಹೆಣ ಆ ಮೊಲದ ಮೇಲೆ ಬಿದ್ದು ಮೊಲ ಸತ್ತು ಹೋಯಿತು. ಸತ್ತ ಮೊಲವನ್ನು ಮಿಂಡ ಮನೆಗೆ ತಂದ. ಅವನ ಪ್ರೇಯಸಿ ಮರುದಿನ ಅದನ್ನು ಪಲ್ಯ ಮಾಡಿ ಬಡಿಸಿದಳು. ಆಗ ಮಿಂಡ ಮೇಲಿನ ಒಗಟನ್ನು ಹೇಳುತ್ತಾನೆ. "ನಮ್ಮ ಪ್ರೇಮದ ಕತೆ ವ್ಯಥೆಯನ್ನು ಉಂಟುಮಾಡಿತು. ನಿನ್ನೆ ಸತ್ತ ಮೃಗ (ಮೊಲ) ಇವತ್ತು ಪಲ್ಯವಾಯ್ತು. ಮೊಲವನ್ನು ಕೊಂದವನು (ಗಂಡ) ಸತ್ತು ಆರು ಮೂರು ತಿಂಗಳಾಯ್ತು (ಬಹಳ ದಿನಗಳಾಯಿತು)."

ಕನ್ನಡದಲ್ಲಿ ಇದನ್ನು ಹೋಲುವ ಒಂದು ಒಗಟು ಇದೆ.
(ನೋಡಿ : ಸುಧಾಕರ : ಜನಪದ ಬೆಡಗಿನ ವಚನಗಳು ; ಸಂ. 171.)

3) ಸಾದಿ ಪೋಪುನಾಯೆ ಒರಿ, ಬಂಟ್ವಾಳ ಪೇಂಟೆಗ್ ಪೋಪುನ ಸಾದಿ ಓವಂದ್ ಬಾರ್ ಎಡ್ಪುನ ಒಂಜಿ ಪೊಣ್ಣಡ ಇಂಚ ಕೇನ್‌ದೆ :

'ಮಿರೆ ಬರಂದೆ ತರೆ ನರತ್‌ನಾಳೇ, ಬಂಟ್ವಾಳ ಪೇಂಟೆಗ್ ಸಾದಿ ಒವು ?' ಆಯೆಕ್ ಆ ಪೊಣ್ಣು ಇಂಚ-ಪನ್ಪಳ್ : 'ಬೆರಿಟ್ಟ್ ಪೀಂಕನ್, ಬರಿಟ್ಟ್ ಕಾರ್ ಇತ್‌ನಾಯೆ, ಜ್ವರೊ ಬರಂದೆ ನರಕ್ಕುನಾಯೇ, ಚಳಿ ಆವಂದೆ ಸೂ ಕಾಯ್ಪುನಾಯೇ, ಸಯಿತ್ತ ಮರಟ್ಟ್ ಉಂತ್‌ದ್ ಪಜಿಮರ ಕಡ್ಪುನಾಯೆ ನಿಕ್ಕ್ ದುಂಬು ಪೋನಗ ಸಾದಿಡ್ ತಿಕ್ಕುವೆರ್. ಅಕುಳೆಡ ಪಂಡ್‌ದ್ ಪೋಯಂಡ ಈ ಬಂಟ್ವಾಳ ಪೇಂಟೆಗ್ ಪೋದು ಮುಟ್ಟ್‌ಬ."

(ಪ್ರಯಾಣಿಕನೊಬ್ಬನು ಬಂಟ್ವಾಳ ಪೇಟೆಗೆ ಎತ್ತಲಿಂದ ಹೋಗಬೇಕೆಂದು ಭತ್ತ ಕುಟ್ಟುತ್ತಿದ್ದ ಹುಡುಗಿ ಯೊಬ್ಬಳೊಡನೆ ವಿಚಾರಿಸಿದನು,

ಪ್ರಯಾಣಿಕ : ಮೊಲೆ ಬಾರದೆ ತಲೆ ನರೆದವಳೇ, ಬಂಟ್ವಾಳ ಪೇಟೆಗೆ ಹೋಗುವ ದಾರಿ ಯಾವುದು?

ಹುಡುಗಿ : ಬೆನ್ನಿನಲ್ಲಿ ಕುಂಡೆ, ಪಕ್ಕದಲ್ಲಿ ಕಾಲಿನವನು, ಜ್ವರ ಬಾರದೆ ನರಳುವವನು, ಚಳಿಯಾಗದೆ ಬೆಂಕಿ ಕಾಯಿಸುವವನು ಮತ್ತು ಸತ್ತ ಮರದಲ್ಲಿ ನಿಂತು ಹಸಿ ಮರವನ್ನು ಕಡಿಯುವವನು ನಿನಗೆ ಮುಂದೆ ಹೋಗುವಾಗ ದಾರಿಯಲ್ಲಿ ಸಿಗುವರು. ಅವರೊಡನೆ ವಿಚಾರಿಸಿ ಹೊರಟರೆ ನೀನು ಬಂಟ್ವಾಳ ಪೇಟೆಗೆ ತಲುಪುವಿ.)

ಉತ್ತರ ; ಹುಡುಗಿ ಭತ್ತ ಕುಟ್ಟಿದ ಅಕ್ಕಿಯನ್ನು ಕೇರುತ್ತಿದ್ದು ಉಮಿ ಅವಳ ತಲೆಗೆ ಹತ್ತಿಕೊಂಡು ತಲೆನರೆದವಳಂತೆ ಕಾಣುತ್ತಿದ್ದಳು. ಪ್ರಯಾಣಿಕನು ಕುದುರೆಯ ಮೇಲೆ ಕೂತು ಅವರ ಎರಡು ಪಕ್ಕಗಳಿಗೆ ಕಾಲು ಬಿಟ್ಟಿದ್ದನು. ವಸ್ತ್ರ ಒಗೆಯುವಾಗ ನರಳಿದಂತೆ ಹೂಂಕರಿಸುವ ಮಡಿವಾಳ, ಬೆಂಕಿ ಮುಂದೆ ಕೆಲಸ ಮಾಡುವ ಕಮ್ಮಾರ, ಏಣಿ ಮೇಲೆ ನಿಂತು ವೀಳ್ಯದೆಲೆ ಕೊಯ್ಯುವ ತೋಟಿಗ.

ಒಂದು ಜಾಣತನದ ಮಾತು, ವಿವರಣೆಯ ಮೂಲಕವಷ್ಟೇ, ಅರ್ಥವಾಗಬಹುದಾದದ್ದು ಕೂಡಾ ಒಗಟು ಆಗುತ್ತದೆ. ಇಲ್ಲಿ ಘಟನೆ ಸ್ಪಷ್ಟವಾಗಿ ಇರುವುದಿಲ್ಲ.

ಉದಾ. : 4)

ಮರ ಕಡಿಯುವ ಕಸುಬಿನವನ ಮನೆಗೆ ನೆಂಟನೊಬ್ಬನು ಬಂದ. ಆತ ಮನೆಯಲ್ಲಿ ಇಲ್ಲದ್ದನ್ನು ಕಂಡುಕೊಂಡು, ಮನೆಯೊಡತಿಯೊಡನೆ ವಿಚಾರಿಸಿದನು.

"ಯಜಮಾನೆ ಏಪೊ ಬರುವೆ ?" (ಯಜಮಾನ ಯಾವಾಗ ಬಂದಾನು ?)

ಒಡತಿಯ ಉತ್ತರ :

"ದೂರೊ ಇತ್ತ್ಂಡ ಬೇಗೊ ಬರುವೆ, ಮುಟ್ಟ ಇತ್ತ್ಂಡ ಕಡೆಸದ್ ಬರುವೆ."
(ದೂರವಿದ್ದರೆ ಬೇಗನೆ ಬರುವ, ಸಮೀಪವಿದ್ದರೆ ತಡವಾಗಿ ಬರುವ.)

ಉತ್ತರ : ಮರ ಕಡಿಯುತ್ತಿರುವ ತನ್ನ ಗಂಡನು ಮರಕ್ಕೆ ದೂರ ಗಡಿ ಹೊಡೆದು ಕಡಿದರೆ, ಮರ ಬೇಗ ತುಂಡಾದೀತು. ಆದ್ದರಿಂದ ಬೇಗನೆ ಕೆಲಸ ಮುಗಿಸಿಕೊಂಡು ಹಿಂದಿರುಗಿಯಾನು. ಸಮೀಪ ಚಿಕ್ಕ ಗಡಿ ಹೊಡೆದು ಕಡಿಯುತ್ತಿದ್ದರೆ, ಮರ ತಡವಾಗಿ ಮಂಗುಚಿಕೊಂಡೀತು.

ಉದಾ : 5)

"ಬಾಲೆ ಪೋದು ಬಬ್ಬರ್ಯೆ ಆತೆ." (ಬಾಲಕನು ಹೋಗಿ ಬಬ್ಬರ್ಯ ಭೂತವಾಗಿದ್ದಾನೆ.)

ಉತ್ತರ : ಮೀನು ಮಾರುವ ಬೆಸ್ತರ ಸ್ತ್ರೀಯೊಬ್ಬಳು ರಾತ್ರಿ ಒಂದು ಮನೆಯಲ್ಲಿ ತಂಗಿದಳು. ಮನೆಯ ಒಡತಿ ಆಕೆಯನ್ನು ಚಾವಡಿಯ ಮೂಲೆಯಲ್ಲಿ ಮಲಗಲು ಹೇಳಿದಳು. ಆ ಚಾವಡಿಯ ನಡುಮಂತರದಲ್ಲಿ ಮಲಗಿದ್ದ ಒಡತಿಯ ಮಗನನ್ನುದ್ದೇಶಿಸಿ ಒಡತಿಗೆ ಬೆಸ್ತರವಳು ಸಂಕ್ಷೋಭಪಟ್ಟು ನುಡಿದಳು : "ಗಂಡಸು ಇದ್ದಾರಲ್ಲಾ ?" ಒಡತಿ ಪ್ರತಿಷೇಧಿಸಿದಳು : "ಛೆ ! ಅದು 'ಬಾಲೆ'ಯಲ್ಲವೆ ? ನಡುರಾತ್ರಿ 'ಬಾಲೆ' ಎದ್ದು ಬೆಸ್ತರವಳೆಡೆಗೆ ಸರಿದನಂತೆ. ಬೆಳಿಗ್ಗೆ ಬೆಸ್ತರವಳು ಒಡತಿಗೆ ವ್ಯಂಗ್ಯವಾಗಿ ಹೀಗೆ ವ್ಯಕ್ತಪಡಿಸಿದಳು.

## 5. ತುಳು ಒಗಟುಗಳನ್ನು ಹೋಲುವ ಕನ್ನಡ ಒಗಟುಗಳು :–

ಜನಪದ ಸಾಹಿತ್ಯದ ಪ್ರಕಾರಗಳಲ್ಲಿ ಗಾದೆ ಮತ್ತು ಒಗಟುಗಳು ಸಾರ್ವತ್ರಿಕವಾಗಿ ಸಾಮಾನ್ಯ ಸ್ವರೂಪದವು. ಇವುಗಳಲ್ಲಿ ಸಮಾನ ಭಾವಗಳ ಅಭಿವ್ಯಕ್ತಿಯನ್ನು ಅನೇಕ ಬಾರಿ ಕಾಣಬಹುದು. ಸಮಾನ ಪರಿಸರಗಳಲ್ಲಿ ಹುಟ್ಟಿಕೊಳ್ಳುವುದರಿಂದ ಈ ರೀತಿಯ ಹೋಲಿಕೆ ಸಹಜ ಎಂದು ಹೇಳಬಹುದು. ಪ್ರಸರಣಕ್ಕಿಂತ ಸ್ವತಂತ್ರ ಉಗಮದ ಸಿದ್ಧಾಂತ ಇಲ್ಲಿ ಹೆಚ್ಚು ಅನ್ವಯವಾಗುತ್ತದೆ. ತುಳು ಒಗಟುಗಳನ್ನು ಕನ್ನಡ ಒಗಟುಗಳ ಜೊತೆಗೆ ಹೋಲಿಸುವಾಗ ಪ್ರಕಟಿತವಾದ ಕನ್ನಡ ಒಗಟುಗಳ ಸಂಕಲನಗಳನ್ನು ಇಲ್ಲಿ ಗಣನೆಗೆ ತೆಗೆದುಕೊಳ್ಳಲಾಗಿದೆ. ಆ ಕನ್ನಡ ಒಗಟುಗಳ ಸಂಕಲನಗಳು ಮತ್ತು ಅವುಗಳಿಗೆ ಕೊಟ್ಟ ಸಂಕೇತ ಅಂಕೆಗಳು ಈ ರೀತಿ ಇವೆ.

1. ಕನ್ನಡ ಒಗಟುಗಳು :– ಸಂ. ಜೀ. ಶಂ. ಪರಮಶಿವಯ್ಯ.
   ಪ್ರಕಾಶನ : ಸಾಹಿತ್ಯ ಸದನ, ಮೈಸೂರು. ಪ್ರಥಮ ಮುದ್ರಣ 1967.

II. ನಮ್ಮ ಒಗಟುಗಳು :- ಸಂ. ರಾಗೌ. ಪ್ರಕಾಶನ: ಉಷಾ ಸಾಹಿತ್ಯಮಾಲೆ, ಮೈಸೂರು. ಪ್ರಥಮ ಮುದ್ರಣ 1970.

III. ಜನಪದ ಬೆಡಗಿನ ವಚನಗಳು :- ಸಂ. ಸಂಧಾಕರ. ಪ್ರಕಾಶನ : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ಪ್ರಥಮ ಮುದ್ರಣ 1970.

IV. ಒಗಟುಗಳು :- ಸಂ. ಎಚ್. ಜೆ. ಲಕ್ಕಪ್ಪ ಗೌಡ. ಪ್ರಕಾಶನ : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ಪ್ರಥಮ ಮುದ್ರಣ 1973.

V. ಉತ್ತರ ಕರ್ನಾಟಕದ ಒಗಟುಗಳು ; ಸಂ. ಡಾ. ಎಮ್. ಎಸ್. ಲಠ್ಠೆ. ಪ್ರಕಾಶನ : ಸತೀಶ ಪ್ರಕಾಶನ, ಕಲಬುರ್ಗಿ. ಮೊದಲ ಮುದ್ರಣ 1974.

VI. ಕನ್ನಡ ಸಾವಿರದ ಒಗಟುಗಳು :—ಸಂ. ಸೋಮಶೇಖರ ಇಮ್ರಾಪೂರ. ಪ್ರಕಾಶನ : ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ. ಪ್ರಥಮ ಮುದ್ರಣ 1976.

ತುಳು ಒಗಟುಗಳಿಗೆ ಸಮಾನಾರ್ಥಕವಾಗಿರುವ ಕನ್ನಡ ಒಗಟುಗಳ ಕೆಲವು ಉದಾಹರಣೆಗಳು :

1) ತುಳು : ಅಪ್ಪೆ ಪಾಡಿ ಪಜೆನ್ ಮಡಿಪ್ಯೆರೆ ತೀರುಜಿ
ಅಮ್ಮೆ ಪಾಡಿ ದುಡ್ಡುನ್ ಗೆಣಿಪ್ಯೆರೆ ಆಪುಜಿ,
(ತಾಯಿ ಹಾಕಿದ ಚಾಪೆಯನ್ನು ಮಡಿಸಲು ಆಗುವುದಿಲ್ಲ.
ತಂದೆ ಹಾಕಿದ ಹಣವನ್ನು ಎಣಿಸಲು ಆಗುವುದಿಲ್ಲ.)

[ಉತ್ತರ : ಆಕಾಶ; ನಕ್ಷತ್ರ]

ಕನ್ನಡ : 1. ಅಮ್ಮನ ಹಾಸಿಗೆ ಸುತ್ತಕ್ಕಾಗೋದಿಲ್ಲ
ಅಪ್ಪನ ದುಡ್ಡು ಎಣಿಸಕ್ಕಾಗೋದಿಲ್ಲ. (I—12)

2. ಅಪ್ಪನ ದುಡ್ಡು ಎಣಿಸಕ್ಕಾಗಲ್ಲ
ಅಮ್ಮನ ಸೀರೆ ಮಡಿಸಕ್ಕಾಗಲ್ಲ. (III—38)

3. ಅಮ್ಮನ ಸೀರಿ ಮಡಚಾಕಾಗುವುದಿಲ್ಲ
ಅಪ್ಪನ ರೊಕ್ಕಾ ಎಣಿಸಾಕಾಗುವುದಿಲ್ಲ. (5 ನಿಸರ್ಗ—3)

4. ಅಪ್ಪನ ದುಡ್ಡು ಎಣಿಸೂದಲ್ಲ
ಅಮ್ಮ ಸೀರಿ ಮಡಿಸೂದಲ್ಲ. (6—103)

2) ತುಳು : ಅಮ್ಮೆ ಆಕಾಸೊಗು ಪೋತೆ, ಅಪ್ಪೆ ಪಾತಾಳೊಗು ಪೋತಳ್, ಮಗೆ ಅಂಗಡಿಗ್ ಪೋತೆ, ಮಗಳ್ 'ದೇವಸ್ಥಾನೊಗ್' (ಮದೆಮ್ಮೆಗ್) ಪೋತಳ್.

(ತಂದೆ ಆಕಾಶಕ್ಕೆ ಹೋಗಿದ್ದಾನೆ, ತಾಯಿ ಪಾತಾಳಕ್ಕೆ ಹೋಗಿದ್ದಾಳೆ, ಮಗ ಅಂಗಡಿಗೆ ಹೋಗಿದ್ದಾನೆ, ಮಗಳು 'ದೇವಸ್ಥಾನಕ್ಕೆ' (ಮದುವೆಗೆ) ಹೋಗಿದ್ದಾಳೆ.)

ಉತ್ತರ : ಕಂಗ್‌ದ ಕುಬೆ, ಬೇರ್, ಬಜ್ಜೆಯಿ, ಪಿಂಗಾರೊ (ಅಡಿಕೆಮರದ ತುದಿ, ಬೇರು, ಅಡಿಕೆ, ಹೂವು)

